# ಕನ್ನಡ ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆ

(ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯನ್ನು ಲಕ್ಷಿಸಿ)
ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ನಿಬಂಧ

**ಪಿಎಚ್.ಡಿ. ಅಧ್ಯಯನಕಾರ**
ರಾಮಲಿಂಗಪ್ಪ.ಟಿ.ಬೇಗೂರು

**ಮಾರ್ಗದರ್ಶಕರು**
ಡಾ.ಕೆ.ಸಿ.ಶಿವಾರೆಡ್ಡಿ




ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩೨೭೬
೨೦೦೮

# ಕನ್ನಡ ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆ

(ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯನ್ನು ಲಕ್ಷಿಸಿ)
ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ನಿಬಂಧ

**ಪಿಎಚ್.ಡಿ. ಅಧ್ಯಯನಕಾರ**
ರಾಮಲಿಂಗಪ್ಪ.ಟಿ.ಬೇಗೂರು
ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕ
ಮಹಾರಾಣಿ ಮಹಿಳಾ ಕಲಾ ಕಾಲೇಜು,
ಬೆಂಗಳೂರು-೫೬೦೦೦೧

**ಮಾರ್ಗದರ್ಶಕರು**
ಡಾ.ಕೆ.ಸಿ.ಶಿವಾರೆಡ್ಡಿ
ಮುಖ್ಯಸ್ಥರು
ಕುವೆಂಪು ಅಧ್ಯಯನ ಕೇಂದ್ರ,
ಕುಪ್ಪಳಿ-೫೭೭೧೨೬
ಕನ್ನಡ ವಿಶ್ವವಿದ್ಯಾಲಯ, ಹಂಪಿ






ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩೨೭೬
೨೦೦೮

## ದೃಢೀಕರಣ ಪತ್ರ

ರಾಮಲಿಂಗಪ್ಪ ಟಿ. ಬೇಗೂರು ಅವರು **"ಕನ್ನಡ ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆ" (ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯನ್ನು ಲಕ್ಷಿಸಿ)** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : 22–10–08
ಸ್ಥಳ : ಕುಪ್ಪಳಿ

**ಡಾ. ಕೆ.ಸಿ. ಶಿವಾರೆಡ್ಡಿ**
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳಿ, ತೀರ್ಥಹಳ್ಳಿ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

# ಪ್ರಮಾಣ ಪತ್ರ

**"ಕನ್ನಡ ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆ"** (**ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯನ್ನು ಲಕ್ಷಿಸಿ**) ಎಂಬ ಶೀರ್ಷಿಕೆಯ ಈ ನಿಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ. ಕೆ.ಸಿ. ಶಿವಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ರಾಮಲಿಂಗಪ್ಪ ಟಿ. ಬೇಗೂರು**
ಪಿಎಚ್.ಡಿ. ಅಧ್ಯಯನಕಾರ

# ಪರಿವಿಡಿ

## ಅಧ್ಯಾಯ–ಒಂದು

# ಕನ್ನಡ ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆಗೆ ಪ್ರವೇಶಿಕೆ

**ಪೀಠಿಕೆ**

ವಿಮರ್ಶಕರಿಂದ ಉತ್ಪಾದನೆಯಾಗುವ ಸಾಹಿತ್ಯ ಕೃತಿಗಳ ಪರಿಶೀಲನೆ–ಮೌಲ್ಯಮಾಪನ ರೂಪಿ ಬರವಣಿಗೆಯೇ ವಿಮರ್ಶೆ ಎಂಬ ಪರಿಕಲ್ಪನೆಯನ್ನು ಮಾತ್ರ ನಮ್ಮ ವಿಮರ್ಶೆಯ ಆಚರಣೆಯು ಬಿಂಬಿಸುವುದಿಲ್ಲ. ವಿಮರ್ಶೆ ಎಂದರೆ ಸಾಂಸ್ಕೃತಿಕ ಅನುಸಂಧಾನಗಳ ಬಹುಮುಖಿ ಆಚಾರ/ಶಿಸ್ತು ಎಂಬುದು ನಮ್ಮ ವಿಮರ್ಶೆಯ ಆಚರಣೆಯಲ್ಲಿ ವ್ಯಕ್ತವಾಗುವುದನ್ನು ಈ ಅಧ್ಯಯನವು ತೋರಲು ಯತ್ನಿಸಿದೆ. ನಮ್ಮಲ್ಲಿ ವಿಮರ್ಶೆಯು ಸಂಸ್ಕೃತಿಯಾಗಿ–ಸಾಂಸ್ಕೃತಿಕ ಆಚಾರವಾಗಿ ಚಾಲ್ತಿಯಲ್ಲಿದೆ; ಅದರಲ್ಲಿ ಬರವಣಿಗೆಯೂ ಒಂದು ಅಂಗ ಎಂದು ಈ ಅಧ್ಯಯನದಲ್ಲಿ ಭಾವಿಸಲಾಗಿದೆ. ಈ ಹಿನ್ನೆಲೆಯಲ್ಲಿಯೇ ನಮ್ಮ ವಿಮರ್ಶಾ ಸಂಸ್ಕೃತಿಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ತಿಳಿಯಲು ಇಲ್ಲಿ ಯತ್ನಿಸಲಾಗಿದೆ.

ವಿಮರ್ಶೆ ಎಂಬುದು ಒಂದು ಸಾಂಸ್ಕೃತಿಕ ಶಿಸ್ತು. ಇದೊಂದು ಸಾಹಿತ್ಯ ಪ್ರಕಾರ ಮಾತ್ರ ಅಲ್ಲ. ಹಲವು ಸಾಹಿತ್ಯ ಪ್ರಕಾರಗಳನ್ನು ಒಳಗೊಂಡಿರುವ ಒಂದು ಶಿಸ್ತು. ಕಾವ್ಯ, ನಾಟಕ, ಜೀವನ ಚರಿತ್ರೆ, ಒಡನಾಟ ಕಥನ, ನೃತ್ಯರೂಪಕ, ಪುನರ್ಕಥನ ಇತ್ಯಾದಿ ಹಲವು ಸಾಹಿತ್ಯ ಪ್ರಕಾರಗಳಲ್ಲಿ ಸಂಭವಿಸಿರುವ ಶಿಸ್ತು. ಹಾಗೆಯೇ ಹಲವು ತೆರನ ಸಾಂಸ್ಕೃತಿಕ ಅನುಸಂಧಾನಗಳನ್ನು ಒಳಗೊಂಡಿರುವ ಒಂದು ಆಚಾರ. ಟೀಕು, ಸರಳರೂಪ, ಹರಿಕಥೆ, ಗಮಕ, ನಿಘಂಟು, ಕೇಳಿಕೆ, ನಾಟಕೋತ್ಸವ, ವಿಚಾರಸಂಕಿರಣ, ಶತಮಾನೋತ್ಸವ, ಅಭಿನಂದನೆ, ಗಾಯನ–ವಾಚನ ಗೋಷ್ಠಿ, ಹುಟ್ಟುಹಬ್ಬದ ಆಚರಣೆ–ಪುಸ್ತಕ ಬಿಡುಗಡೆ ಇತ್ಯಾದಿ ಆಚಾರಗಳನ್ನು ಒಳಗೊಂಡಿರುವ ಒಂದು ಸಂಸ್ಥೆ; ಸಾಂಸ್ಕೃತಿಕ ಸಂಕಥನ. ಹೀಗೆ ವಿಮರ್ಶೆಯನ್ನು ಪ್ರತ್ಯೇಕ ಶಿಸ್ತಾಗಿ ಪ್ರತಿಪಾದಿಸಲು ಈ ಅಧ್ಯಯನದಲ್ಲಿ ಯತ್ನಿಸಲಾಗಿದೆ.

ಇದುವರೆಗೆ ನಮ್ಮಲ್ಲಿ ವಿಮರ್ಶೆಯ ಚರಿತ್ರೆಯು ರಚನೆಯಾಗಿಲ್ಲ. ಬಿಡಿಬಿಡಿಯಾದ ಆಧುನಿಕ ವಿಮರ್ಶಕರನ್ನು ಆಧರಿಸಿ ಲೇಖನ–ಅಧ್ಯಯನಗಳು ಸಂಭವಿಸಿವೆ. ಕೆಲವು ಪಂಥಗಳು, ಚಳುವಳಿಗಳ ಹಿನ್ನೆಲೆಯಲ್ಲಿ ಅಧ್ಯಯನಗಳು ನಡೆದಿವೆ. ಆದರೆ ವಿಮರ್ಶೆಯ ಚರಿತ್ರೆ ರಚನೆಯು ಇದುವರೆಗೆ ಆಗಿಲ್ಲ. ಸಾಹಿತ್ಯ ಚರಿತ್ರೆಗಳು ಹಲವಾರು ಸಾರಿ ಹಲವರಿಂದ ರಚಿಸಲ್ಪಟ್ಟಿವೆ. ಈ ಸಾಹಿತ್ಯ ಚರಿತ್ರೆಗಳಲ್ಲಿ ವಿಮರ್ಶೆಯೇ ಚರಿತ್ರೆ ರೂಪಿಯಾಗಿ ಅವತರಿಸಿದೆ ಕೂಡ. ಅಲ್ಲದೆ ರಚಿತವಾಗಿರುವ ಎಲ್ಲ ಚರಿತ್ರೆಗಳೂ ರೇಖಾತ್ಮಕ ಅವಲೋಕನ ಮಾರ್ಗದಲ್ಲೇ ರಚಿತವಾಗಿವೆ; ಇಲ್ಲವೆ ವರ್ಗೀಕರಣ ಮಾರ್ಗದಲ್ಲಿ ರಚಿತವಾಗಿವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ವಿಮರ್ಶೆಯ ಚರಿತ್ರೆ ರಚಿಸಬಹುದಾದ ಒಂದು ಭಿನ್ನ ವಿನ್ಯಾಸವನ್ನು ರೂಪಿಸಲು ಯತ್ನಿಸಲಾಗಿದೆ. ರೇಖಾತ್ಮಕ ಅವಲೋಕನ ಇಲ್ಲವೆ ವರ್ಗೀಕೃತ ಮಾದರಿಗಿಂತ ಭಿನ್ನವಾಗಿ ತತ್ವರೂಪಿ ಮತ್ತು ಆಚರಣೆ ರೂಪ ಹೀಗೆ ಎರಡು ಕವಲುಗಳಲ್ಲಿ ಇದನ್ನು ಗ್ರಹಿಸಲಾಗಿದೆ. ದೃಷ್ಟಿ, ರೂಪ, ಪಂಥ, ವಿಧಾನಗಳ ಹಿನ್ನೆಲೆಯಲ್ಲಿ; ವಿಮರ್ಶೆಯ

ಆಚರಣೆಯ ತಾತ್ವೀಕರಣ ಮತ್ತು ತತ್ವಗಳ ಕ್ರೋಡೀಕರಣ ಮಾರ್ಗದ ಮೂಲಕ ಚರಿತ್ರೆ ರಚಿಸಬಹುದಾದ ಒಂದು ಮಾದರಿ ಪ್ರಾತ್ಯಕ್ಷಿಕೆಯಾಗಿ ಈ ಅಧ್ಯಯನವನ್ನು ರೂಪಿಸಲು ಯತ್ನಿಸಲಾಗಿದೆ.

ಬರವಣಿಗೆಯ ರೂಪದ ವಿಮರ್ಶೆಯ ಜೊತೆಗೆ ಸಾಂಸ್ಕೃತಿಕ ಅನುಸಂಧಾನಗಳು ಮತ್ತು ಜನಬಳಕೆಯ ರೂಪಗಳನ್ನು ಇಲ್ಲಿ ವಿಮರ್ಶೆಯ ಕಕ್ಷೆಯಲ್ಲಿ ಅಧ್ಯಯನಕ್ಕೆ ಗುರಿಪಡಿಸಲಾಗಿದೆ. ನಮ್ಮ ವಿಮರ್ಶೆಯಲ್ಲಿ ನಿರ್ಧಿಷ್ಟವಾದ ಮಾರ್ಗಗಳು, ಪಂಥಗಳು ರೂಪಿತವಾಗಿವೆಯೇ ಎಂದು ಕಂಡುಕೊಳ್ಳಲು ಯತ್ನಿಸಲಾಗಿದೆ. ಇಲ್ಲಿರುವ ವಿಮರ್ಶಕರ ವಲಯಗಳು, ಕಾಲಘಟ್ಟಗಳು, ಸಂವೇದನೆಗಳು, ಸಾಂಸ್ಕೃತಿಕ ಪ್ರಸ್ತುತತೆಯ ಪ್ರಶ್ನೆಗಳನ್ನು ಪರಿಶೀಲಿಸಲು ಯತ್ನಿಸಲಾಗಿದೆ. ಇವುಗಳ ಒಳಗೆ ನಿಯಂತ್ರಕಗಳಾಗಿ ಕೆಲಸ ಮಾಡಿರಬಹುದಾದ ಜಾತಿ, ವರ್ಗ, ಲಿಂಗ ರಾಜಕಾರಣಗಳು, ಸಂಬಂಧಿಕತೆಯ ರಾಜಕಾರಣ, ಸಾಂದರ್ಭಿಕತೆಯ ರಾಜಕಾರಣ, ಆಯ್ಕೆ-ಅಲಕ್ಷ್ಯತೆಯ ರಾಜಕಾರಣ.. ಇತ್ಯಾದಿ ರಾಜಕಾರಣಗಳನ್ನು ಕಂಡುಕೊಳ್ಳಲು ಯತ್ನಿಸಲಾಗಿದೆ.

ವಿಮರ್ಶೆಯು ಶುರುವಾಗುವುದೇ ಆಧುನಿಕ ಸಂದರ್ಭದಲ್ಲಿ. ನಮ್ಮ ಪ್ರಾಚೀನರಲ್ಲಿ ವಿಮರ್ಶೆ ಇರಲಿಲ್ಲ. ಅಲ್ಲಿ ಕಾವ್ಯ ಮೀಮಾಂಸೆ ಇತ್ತು. ಕಾವ್ಯ ಮೀಮಾಂಸೆಯು ಕೇವಲ ಕಾವ್ಯ ತತ್ವವನ್ನು ಹೇಳುತ್ತದೆ. ಮತ್ತು ಸಂಸ್ಕೃತದಿಂದ ಕಡತಂದ ಕೆಲವು ತತ್ವ-ಪರಿಕಲ್ಪನೆಗಳ ಬಗೆಗೆ ಚರ್ಚಿಸುತ್ತದೆ ಎಂಬ ನಂಬಿಕೆಯೊಂದು ನಮ್ಮಲ್ಲಿದೆ. ಇದು ತಪ್ಪು ನಂಬಿಕೆ. ವಿಮರ್ಶೆಯ ಪರಿಕಲ್ಪನೆಯ ಬಗೆಗಿನ ತಮ್ಮದೇ ಗ್ರಹಿಕೆಗಳಿಂದ ಇಂತಹ ನಂಬಿಕೆಗಳು ಹುಟ್ಟಿವೆ. ವಿಮರ್ಶೆಯನ್ನು ಸಾಹಿತ್ಯದ ಅನುಸಂಧಾನ, ಸಾಂಸ್ಕೃತಿಕ ಸಂಕಥನ ಎಂದು ಭಾವಿಸಿದಾಗ ನಮ್ಮಲ್ಲು ವಿಮರ್ಶೆಯ ಸಮೃದ್ಧ ಪರಂಪರೆ ಇದೆ ಎಂಬುದು ಕಾಣುತ್ತದೆ. ಪ್ರಾಚೀನ ಸಾಹಿತ್ಯ ಸಂದರ್ಭವನ್ನೂ ಒಳಗೊಂಡಂತೆ ನಮ್ಮ ಒಟ್ಟಾರೆ ವಿಮರ್ಶಾ ಸಂಸ್ಕೃತಿಯನ್ನು ಶೋಧಿಸಲು ಇಲ್ಲಿ ಯತ್ನಿಸಲಾಗಿದೆ.

ಸಾಹಿತ್ಯ ರಚನೆಯ ತತ್ವ, ಸಾಹಿತ್ಯ ಪರಿಶೀಲನೆಯ ತತ್ವ, ಸಾಹಿತ್ಯದ ಆಸ್ವಾದನೆಯ ತತ್ವ ಮತ್ತು ಪರಿಣಾಮ ಮೀಮಾಂಸೆಗಳೆಲ್ಲವೂ ಕಾವ್ಯಮೀಮಾಂಸೆಯಲ್ಲಿ ಪ್ರಕಟಗೊಂಡಿವೆ. ಆದರೆ ವಿಮರ್ಶೆಯಲ್ಲಿ ಹಾಗಲ್ಲ. ಅದು ಸಾಹಿತ್ಯ ಪರಿಶೀಲನೆಯನ್ನು ಮಾತ್ರ ತನ್ನ ಉದ್ದೇಶವಾಗಿ ಇರಿಸಿಕೊಂಡಿದೆ. ಇದು ಇಂಗ್ಲಿಶಿನ ಕ್ರಿಟಿಸಿಸಮ್ಮಿಗೆ ಪ್ರತಿಯಾಗಿ ಕನ್ನಡದಲ್ಲಿ ಬಳಕೆಯಾಗುತ್ತಿದೆ ಎಂಬ ನಂಬಿಕೆ ಕೂಡ ನಮ್ಮಲ್ಲಿ ಚಾಲ್ತಿಯಲ್ಲಿದೆ. ಇದೂ ತಪ್ಪಾದ ನಂಬಿಕೆಯೆ. ಕಾವ್ಯಮೀಮಾಂಸೆಯ ಎಲ್ಲ ಕೆಲಸಗಳನ್ನೂ ವಿಮರ್ಶೆಯು ಮಾಡುತ್ತಿದೆ. ಸಾಹಿತ್ಯವನ್ನು ಆಧರಿಸಿದ ಸಂಸ್ಕೃತಿಯ ಅನುಸಂಧಾನದ ಒಂದು ಶಿಸ್ತಾಗಿ ಬೆಳೆಯುತ್ತಿದೆ. ಇಂಗ್ಲಿಶಿನ ಕ್ರಿಟಿಸಿಸಮ್ಮಿಗೆ ಮಾತ್ರವಲ್ಲ ಕಾವ್ಯಮೀಮಾಂಸೆಗೂ ಕೂಡ ಪರ್ಯಾಯವಾಗಿ ಬಳಕೆಯಾಗುತ್ತಿದೆ. ಇದು ಬರಿ ಸಾಹಿತ್ಯಮೀಮಾಂಸೆ ಅಷ್ಟೇ ಅಲ್ಲ. ಸಂಸ್ಕೃತಿ ಮೀಮಾಂಸೆಯಾಗಿ ಬೆಳೆಯುತ್ತಿದೆ ಕೂಡ. ಈ ಹಿನ್ನೆಲೆಯಲ್ಲಿ ಇಲ್ಲಿ ವಿಮರ್ಶೆಯನ್ನು ಸಾಂಸ್ಕೃತಿಕ ದೃಷ್ಟಿಯಿಂದ ನೋಡಲು ಯತ್ನಿಸಲಾಗುತ್ತಿದೆ. ಹಾಗೆಯೆ ವಿಮರ್ಶೆಯ ಪರಿಕಲ್ಪನೆಗೆ ಸಾಂಸ್ಕೃತಿಕ ಆಯಾಮವನ್ನು ನೀಡಲೂ ಯತ್ನಿಸಲಾಗುತ್ತಿದೆ. ವಿಮರ್ಶೆಯೆಂಬ ಶಿಸ್ತು ಈಗಾಗಲೇ ಸಿದ್ಧಗೊಂಡ ಒಂದು ಶಿಸ್ತಾಗಿ ನಮ್ಮಲ್ಲಿ ಬೆಳೆದಿಲ್ಲ. ಇದಿನ್ನೂ ಆಗುವ ಪ್ರಕ್ರಿಯೆಯಲ್ಲಿದೆ ಎಂದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ವಿಮರ್ಶೆ ಮತ್ತು ಮೀಮಾಂಸೆಗಳು ಅವಳಿ ವೈರುಧ್ಯಗಳಲ್ಲ; ವಿಮರ್ಶೆಯಲ್ಲಿ ಮೀಮಾಂಸೆಯು ಬೆರೆತು ಜೀರ್ಣಗೊಂಡಿದೆ ಎಂಬ ನಂಬಿಕೆಯಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

**ಏನು ಅಧ್ಯಯನದ ಉದ್ದೇಶವಲ್ಲ?**

ವಿಮರ್ಶೆಯ ವಿಕಾಸವನ್ನು ಚಾರಿತ್ರಿಕವಾಗಿ ಗುರ್ತಿಸಿಕೊಳ್ಳುವುದು ಇಲ್ಲಿನ ಉದ್ದೇಶವಲ್ಲ. ಕನ್ನಡ ವಿಮರ್ಶಾ ಸಂಸ್ಕೃತಿಯ ವಿನ್ಯಾಸ ಮತ್ತು ತಾತ್ವಿಕತೆಯನ್ನು ಶೋಧಿಸಿಕೊಳ್ಳುವುದು ಇಲ್ಲಿನ ಉದ್ದೇಶವಾಗಿದೆ.

ಇದಕ್ಕಾಗಿ ವಿಮರ್ಶಾ ಸಂಸ್ಕೃತಿಯ ಆಚರಣೆಯನ್ನು (ಪ್ರಾಕ್ಟೀಸನ್ನು) ತಾತ್ವೀಕರಿಸುವ ವಿಧಾನವನ್ನು ಬಳಸಲಾಗುತ್ತಿದೆ. ಆಚರಣೆಯ ತಾತ್ವೀಕರಣ ಎಂಬ ಈ ವಿಧಾನವನ್ನು ರೂಪಿಸುವುದು ಈ ಅಧ್ಯಯನದ ಒಂದು ಉದ್ದೇಶವೂ ಆಗಿದೆ. ಹಾಗಾಗಿ ಇಲ್ಲಿ ವಿಮರ್ಶೆಯ ವಿಮರ್ಶೆಯು ಸಂಭವಿಸುವ ಸಾಧ್ಯತೆ ಇದೆ. ಆದರೆ ವಿಮರ್ಶೆಯನ್ನು ಕುರಿತ ವಿಮರ್ಶೆಯನ್ನು ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಲ್ಲ. ವಿಮರ್ಶೆಯು ಹೇಗೆ ಸಂಭವಿಸಿದೆ ಎಂದು ನೋಡುವ ಮೂಲಕ ಅದರ ಸ್ವರೂಪ–ವಿನ್ಯಾಸ–ತಾತ್ವಿಕತೆಗಳನ್ನು ಅರಿತುಕೊಳ್ಳುವ, ಪರಿಕಲ್ಪಿಸುವ ಉದ್ದೇಶ ಇಲ್ಲಿದೆಯೇ ವಿನಾಃ ವಿಮರ್ಶೆಯು ಹೇಗಿರಬೇಕಿತ್ತು ಎಂದು ಉಪದೇಶಿಸುವುದು ಇಲ್ಲಿನ ಉದ್ದೇಶವಲ್ಲ. ಇಲ್ಲಿ ವಿಮರ್ಶೆಯ ಆಚರಣೆಯನ್ನೇ ತಾತ್ವೀಕರಿಸುವ ಉದ್ದೇಶವನ್ನು ಇರಿಸಿಕೊಂಡಿರುವುದರಿಂದ ಇದು ಇಲ್ಲಿನ ವಿಧಾನವೂ ಹೌದು. ಉದ್ದೇಶವೂ ಹೌದು. ಕನ್ನಡ ವಿಮರ್ಶೆಯನ್ನು ಸಂಸ್ಕೃತದೊಂದಿಗೆ ಆಗಲೀ, ಇಂಗ್ಲಿಶಿನೊಂದಿಗೆ ಆಗಲೀ ತೌಲನಿಕವಾಗಿ ಹೋಲಿಸಿ ನೋಡುವುದು ಇಲ್ಲಿನ ಉದ್ದೇಶವಲ್ಲ. ಕನ್ನಡದಲ್ಲಿ ಏನೇನು ಸಂಭವಿಸಿದೆಯೋ ಅದೆಲ್ಲವೂ ಕನ್ನಡದ್ದೇ ಆಗಿದೆ ಎಂದು ಇಲ್ಲಿ ಭಾವಿಸಲಾಗಿದೆ. ಹಾಗಾಗಿ ವಿಮರ್ಶೆಯ ಮೇಲಾಗಿರುವ ಅನ್ಯ ಪ್ರೇರಣೆ–ಪ್ರಭಾವಗಳ ಅಧ್ಯಯನವನ್ನೂ ಇಲ್ಲಿ ಕೈಗೊಂಡಿಲ್ಲ.

**ಅಧ್ಯಯನದ ವ್ಯಾಪ್ತಿ ಮತ್ತು ಅಥವಾ ಮಿತಿ**

ಈ ಅಧ್ಯಯನಕ್ಕಿರುವ ವ್ಯಾಪ್ತಿಯೇ ಈ ಅಧ್ಯಯನದ ಮಿತಿಯೂ ಆಗಿದೆ. ವಿಮರ್ಶೆಯ ಪ್ರಾಗ್ರೂಪಗಳನ್ನು ಕಟ್ಟಿಕೊಳ್ಳುವಾಗ ಕಾವ್ಯ–ಶಾಸ್ತ್ರ ಗ್ರಂಥಗಳನ್ನು ಅವಲೋಕಿಸಿರುವಷ್ಟು ಮಟ್ಟಿಗೆ ಇಲ್ಲಿ ಗಮಕ, ತಾಳಮದ್ದಲೆ, ಕೇಳಿಕೆ, ದಂತಕತೆ, ಪ್ರಕ್ಷಿಪ್ತಾದಿಗಳನ್ನು ಅವಲೋಕಿಸಲು ಸಾಧ್ಯವಾಗಿಲ್ಲ. ವಿಮರ್ಶೆಯ ಪ್ರಾಗ್ರೂಪಗಳನ್ನು ಕಟ್ಟಿಕೊಳ್ಳುವಾಗ ಕಾವ್ಯ–ಶಾಸ್ತ್ರ ಗ್ರಂಥಗಳನ್ನು ಅವಲೊಕಿಸಿರುವಷ್ಟು ಮಟ್ಟಿಗೆ ಗಮಕ, ತಾಳಮದ್ದಳೆ, ಕೇಳಿಕೆ, ದಂತಕತೆ, ಪ್ರಕ್ಷಿಪ್ತಗಳನ್ನು ಅವಲೋಕಿಸಲು ಇಲ್ಲಿ ಸಾಧ್ಯವಾಗಿಲ್ಲ. ಆಧುನಿಕ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಗುರ್ತಿಸಿಕೊಳ್ಳುವಾಗ ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯನ್ನು ಒಂದು ಅಂಗಾಂಶದ ಅಧ್ಯಯನವನ್ನಾಗಿ ಅವಲೋಕಿಸುತ್ತಿರುವುದರಿಂದ ಇದು ಅಂಗಾಂಶದ ಅಧ್ಯಯನ ಮಾತ್ರ ಆಗುತ್ತದೆಯೇ ವಿನಾ ಇಡೀ ಅಂಗದ ಅಧ್ಯಯನ ಆಗಲಾರದು. ಅಲ್ಲದೆ ಆಧುನಿಕ ವಿಮರ್ಶೆ ಎಂಬುದೇ ಒಂದು ಸಾವಿರಕ್ಕೂ ಹೆಚ್ಚು ವರ್ಷಗಳ ಕನ್ನಡ ವಿಮರ್ಶಾ ಸಂಸ್ಕೃತಿಯ ಒಂದು ಭಾಗ ಮಾತ್ರ. ಇದಕ್ಕೆ ಹೆಚ್ಚೆಂದರೆ ಒಂದು ನೂರು ವರ್ಷಗಳ ಕಾಲವ್ಯಾಪ್ತಿ ಇದೆ ಅಷ್ಟೆ. ಇದರ ಒಂದು ಚಿಕ್ಕ ಭಾಗ ಕುವೆಂಪು ಕುರಿತ ವಿಮರ್ಶೆ. ಹೀಗಾಗಿ ಇದೊಂದು ಕೇಸ್ ಸ್ಟಡಿ ರೀತಿ ಅಷ್ಟೆ. ಕಿರು ಅಧ್ಯಯನಗಳು ಯಾವಾಗಲೂ ಜಿಡಿ ಫಲಿತಗಳನ್ನು ಇಡಿಗೆ ಅನ್ವಯಿಸುವ ಅಪಾಯವನ್ನು ಹೊತ್ತೇ ಸಾಗುತ್ತಿರುತ್ತವೆ. ಇಂಥ ಎಚ್ಚರವನ್ನು ಈ ಅಧ್ಯಯನದಲ್ಲಿ ಇರಿಸಿಕೊಳ್ಳಲಾಗಿದೆ. ಕುವೆಂಪು ಕುರಿತ ಅಧ್ಯಯನ ಮಾತ್ರದಿಂದ ನಮ್ಮ ಇಡಿ ವಿಮರ್ಶಾ ಸಂಸ್ಕೃತಿಯ ವಿನ್ಯಾಸಗಳನ್ನು ಕಟ್ಟಿಕೊಳ್ಳಲು ಆಗುವುದಿಲ್ಲ. ಆದರೂ ಕೆಲವು ಲಕ್ಷಣ–ವಿನ್ಯಾಸಗಳನ್ನಂತು ಗುರ್ತಿಸಿಕೊಳ್ಳಲು ಇದರಿಂದ ಸಾಧ್ಯವಾಗಬಹುದು.

ಕುವೆಂಪು ಸಾಹಿತ್ಯ ಕುರಿತ ಪ್ರಕಟಿತ ವಿಮರ್ಶೆಯ ಒಟ್ಟು ಮೊತ್ತವನ್ನು ಸಮಗ್ರವಾಗಿ ಗಮನಿಸಲು ಇಲ್ಲಿ ಸಾಧ್ಯವಾಗುವುದಿಲ್ಲ. ಏನನ್ನೂ ಬಿಡದೆ ಎಲ್ಲವನ್ನು ಒಟ್ಟು ಸಮಗ್ರವಾಗಿ ಗಮನಿಸುತ್ತೇವೆ ಎಂಬುದೇ ಒಂದು ಭ್ರಮೆ. ಸಮಗ್ರ ಎಂಬ ಪರಿಕಲ್ಪನೆಯೇ ಒಂದು ಮಿತ್ತು. ಆದರೆ ಇಲ್ಲಿ ತೀರಾ ಅಪೂರ್ಣ ಅನ್ನಿಸದ ಹಾಗೆ ಬಹುಪಾಲು ಪ್ರಕಟಿತ ವಿಮರ್ಶೆಯನ್ನು ಅಧ್ಯಯನಕ್ಕೆ ಒಳಪಡಿಸಲು ಯತ್ನಿಸಲಾಗುವುದು. ಹೀಗಾಗಿ ಈ ಅಧ್ಯಯನಕ್ಕಿರುವ ವ್ಯಾಪ್ತಿಯೇ ಇದರ ಮಿತಿಯೂ ಆಗಿದೆ.

**ಅಧ್ಯಯನದ ಉಪಯುಕ್ತತೆ**

ಜ್ಞಾನ ಶಿಸ್ತೊಂದರ ತಾತ್ವಿಕತೆಯನ್ನು ರೂಪಿಸಿಕೊಳ್ಳುವುದು ಅಧ್ಯಯನದ ನೆಲೆಯಿಂದ ಉಪಯುಕ್ತವಾದುದು ಎಂದು ಇಲ್ಲಿ ಭಾವಿಸಲಾಗಿದೆ. ಅಧ್ಯಯನಗಳಿಗೆ ಉಪಯುಕ್ತವಾಗುವ ಅಧ್ಯಯನವಿದು. ಶೈಕ್ಷಣಿಕ ಅಗತ್ಯಗಳನ್ನು

ಇದು ಪೂರೈಸಬಲ್ಲದು ಎಂಬುದು ಇದರ ಉಪಯುಕ್ತತೆಯ ಇನ್ನೊಂದು ಮುಖ. ಸಾಹಿತ್ಯದ ವಿದ್ಯಾರ್ಥಿಗಳಿಗೆ ಇದರಿಂದ ಅಲ್ಪ ಸ್ವಲ್ಪ ಅನುಕೂಲ ಆಗಬಹುದು. ಇದಕ್ಕೆ ಮೂರನೆ ಮುಖವೂ ಇದೆ. ಸಾಹಿತ್ಯವಿಮರ್ಶೆ ಆತ್ಯಂತಿಕವಾಗಿ ಸಮಾಜದ ವಿಮರ್ಶೆಯೇ ಆದ್ದರಿಂದ ಇದು ನಮ್ಮ ನಡೆನುಡಿಯ ಪುನರ್‌ದರ್ಶನಕ್ಕೆ ಸಹಕಾರಿಯಾಗಬಲ್ಲುದು.

ಇದು ನಾವು ನಮ್ಮ ಸಮಾಜವನ್ನು ನೋಡುವ ಬಗೆಗಳನ್ನು ತಿಳಿಯಲು; ನೋಡಬೇಕಾದ ಬಗೆಗಳನ್ನು ಅರಿಯಲು; ಸಮಾಜವು ಆಗುತ್ತ ಬಂದ-ಆಗುತ್ತಿರುವ ಬಗೆಗಳನ್ನು ಅರಿಯಲು ಉಪಯೋಗ ಆದೀತು ಎಂದು ಭಾವಿಸಲಾಗಿದೆ. ಚರಿತ್ರೆ ಮತ್ತು ವರ್ತಮಾನಗಳ ಮುಖಾಮುಖಿಯೇ ಸಮಾಜವನ್ನು ಮುನ್ನಡೆಸುವ ದೀವಿಗೆಯಾಗಬಲ್ಲದು; ಚರಿತ್ರೆಯ ಚಿಕಿತ್ಸಕ ವಿವೇಕವೆ ವಿಮರ್ಶಾ ಸಂಸ್ಕೃತಿ (ಸಂಸ್ಕೃತಿ ವಿಮರ್ಶೆ) ಆಗಿ ನಮ್ಮನ್ನು ಮುನ್ನಡೆಸಬಲ್ಲದು; ಆದ್ದರಿಂದ ಪ್ರಸ್ತುತ ಅಧ್ಯಯನವು ಕೇವಲ ಅಕಾಡೆಮಿಕ್ಕಾಗದೆ ಸಾಮಾಜಿಕ ಉಪಯುಕ್ತತೆಯನ್ನೂ ಇದು ತನ್ನ ಒಡಲಲ್ಲಿ ಹೊತ್ತಿದೆ ಎಂಬುದು ಈ ಅಧ್ಯಯನಕಾರನ ನಮ್ರ ನಂಬುಗೆಯಾಗಿದೆ.

ಹಾಗೆ ನೋಡಿದರೆ ಓದುಗ ಸ್ಪಂದನ ಸಿಧ್ಧಾಂತವಾಗಲೀ, ಧ್ವನಿಸಿದ್ಧಾಂತವಾಗಲೀ ನಮ್ಮ ಪ್ರಾಚೀನ ಕವಿಗಳಲ್ಲಿ ಇತ್ತು ಎಂದು ಸಾಬೀತು ಮಾಡುವುದು ಕಷ್ಟವೇನೂ ಅಲ್ಲ. ಆದರೆ ಅದು ನಮಗೆ ಬೇಕೇ? ಸಂಸ್ಕೃತದಲ್ಲಿರುವುದು, ಇಂಗ್ಲಿಶಿನಲ್ಲಿರುವುದು, ಜಗತ್ತಿನ ಎಲ್ಲೆಡೆ ಇರುವುದೆಲ್ಲ ನಮ್ಮಲ್ಲು ಇತ್ತು ಎಂದು ಸಮರ್ಥಿಸಿ ಹೇಳುವುದೇ ಕೀಳರಿಮೆಯ ಪ್ರತೀಕ. ಪುಷ್ಪಕ ವಿಮಾನ ಮಾಡಿದ ನಮ್ಮವರಿಗೆ ಆ ಕಾಲಕ್ಕೇ ವಿಮಾನ ತಂತ್ರಜ್ಞಾನ ತಿಳಿದಿತ್ತು ಎಂದು ಹೇಳುವುದಕ್ಕು ಈ ಮೀಮಾಂಸೆಯ ಅನ್ವಯೀಕರಣಕ್ಕು ಅಂತಹ ವ್ಯತ್ಯಾಸವೇನೂ ಇಲ್ಲ. ಹಾಗಾಗಿ ವಿಮರ್ಶೆಯ ಕಟ್ಟಾಣಿಕೆಯಲ್ಲಿ ಸಂಸ್ಕೃತ-ಇಂಗ್ಲಿಶಿನ ಮಾದರಿಗಳನ್ನು ಅನ್ವಯಿಸುವ ಅಥವಾ ಅಂತಹ ಮಾದರಿಗಳಿಗೆ ಅನ್ವಯವಾಗುವ ವಿಚಾರಗಳನ್ನು ನಮ್ಮಲ್ಲಿ ಹುಡುಕುವ ಯತ್ನವನ್ನು ಇಲ್ಲಿ ಮಾಡಿಲ್ಲ. ಇರುವುದನ್ನು ಕಟ್ಟಿಕೊಳ್ಳುವುದೇ ಹೆಚ್ಚು ಸೂಕ್ತವಾದುದು ಎಂದು ಇಲ್ಲಿ ಭಾವಿಸಲಾಗಿದೆ. ಹಾಗಾಗಿ ಆಚರಣೆಯನ್ನು ತಾತ್ವೀಕರಿಸಲು ಈ ಅಧ್ಯಯನದಲ್ಲಿ ಯತ್ನಿಸಲಾಗಿದೆ

**ಅಧ್ಯಯನದ ವಿಧಾನಗಳು-ವಿಧಾನಗಳ ಅಧ್ಯಯನ**

ಪ್ರಸ್ತುತ ಅಧ್ಯಯನದ ವಿಧಾನವು ವಿಧಾನಗಳ ಅಧ್ಯಯನವೇ ಆಗಿದೆ. ನಮ್ಮ ವಿಮರ್ಶಾ ಸಂಸ್ಕೃತಿಯಲ್ಲಿ ಯಾವ ಯಾವ ವಿಧಾನಗಳನ್ನು ಬಳಸಲಾಗಿದೆ? ಯಾವ ಯಾವ ದೃಷ್ಟಿಗಳು, ಮೆತೆಡ್ಡುಗಳು, ಅಪ್ರೋಚುಗಳು ಪ್ರಯೋಗವಾಗಿವೆ? ಯಾವ ಯಾವ ರೂಪಗಳು ಮಾರ್ಗಗಳಿವೆ? ಎಂದು ತಿಳಿಯುವ ಮತ್ತು ಆ ಮೂಲಕ ಅದರ ವಿನ್ಯಾಸ ಮತ್ತು ತಾತ್ವಿಕತೆಯನ್ನು ಅರಿಯುವ ಯತ್ನ ಮಾಡಲಾಗಿದೆ.

1. ವಿಮರ್ಶೆಯ ಪ್ರಾಗ್ರೂಪಗಳು ಮತ್ತು ದೃಷ್ಟಿಗಳು. 2. ಆಧುನಿಕ ವಿಮರ್ಶೆಯ ಸಂಭವ. (ಸಂಭವಕಾಲೀನ ವಿಮರ್ಶೆ) 3. ಆಧುನಿಕ ವಿಮರ್ಶೆ. (ಕುವೆಂಪು ಕುರಿತ ವಿಮರ್ಶೆಯನ್ನು ಲಕ್ಷಿಸಿ) ಹೀಗೆ ಪ್ರಸ್ತುತ ಅಧ್ಯಯನವನ್ನು ಮೂರು ಹಂತಗಳಲ್ಲಿ ಕೈಗೊಳ್ಳಲಾಗಿದೆ. ಈ ಮೂರೂ ಹಂತಗಳಲ್ಲಿ 1. ತತ್ವಗಳ ಕ್ರೋಢೀಕರಣ ಮತ್ತು ಆಚರಣೆಯ ತಾತ್ವೀಕರಣದ ಮೂಲಕ ವಿಮರ್ಶೆಯ ಪ್ರಾಗ್ರೂಪಗಳು, ದೃಷ್ಟಿಗಳು, ವಿಧಾನಗಳನ್ನು ಕಂಡುಕೊಳ್ಳುವ ಯತ್ನ, 2. ಸಂಭವಕಾಲೀನ ವಿಮರ್ಶೆಯ ಹಿಂದಿನ ತಾತ್ವಿಕ ಗ್ರಹಿಕೆಗಳ ಹುಡುಕಾಟ ಮತ್ತು 3. ಆಚರಣೆಯಿಂದ ತತ್ವದೆಡೆಗೆ ಚಲಿಸುವ ಯತ್ನಗಳನ್ನು ಮಾಡಲಾಗಿದೆ.

1. ತತ್ವಗಳ ಕ್ರೋಢೀಕರಣ ಮತ್ತು ಆಚರಣೆಗಳ ತಾತ್ವೀಕರಣ ಹಾಗೂ 2. ಆಚರಣೆಯಿಂದ ತತ್ವದೆಡೆಗೆ ಚಲನೆ ಎಂದರೇನು? ವಿಮರ್ಶೆಯ ಸ್ವರೂಪ, ವಿಧಾನ, ತಾತ್ವಿಕತೆಗಳ ಬಗೆಗೆ ನಮ್ಮ ಕಾವ್ಯ, ಶಾಸ್ತ್ರಗಳಲ್ಲಿ; ವಿಮರ್ಶೆಯಲ್ಲಿ ಹೇಳಿರುವ ತತ್ವಗಳನ್ನು ಕ್ರೋಢೀಕರಿಸಿಕೊಳ್ಳುವುದೇ ತತ್ವಗಳ ಕ್ರೋಢೀಕರಣ. ಕಾವ್ಯಗಳ ಮೂಲಕ

ಆಚರಣೆಯಲ್ಲಿ ಪ್ರಕಟವಾಗುವ ತತ್ವಗಳು, ವಿಮರ್ಶೆಯನ್ನು ಮಾಡುವಾಗ ವಿಮರ್ಶೆಯಲ್ಲಿ ಆಚರಣೆಯಾಗಿರುವ ತತ್ವಗಳು, ಸಾಹಿತ್ಯದ ಅನುಸಂಧಾನಗಳಾದ ಟೀಕು, ತಾಳಮದ್ದಲೆ, ಗಮಕ, ಕೇಳಿಕೆ, ಕಾವ್ಯಸಾರಗಳು, ಶೂನ್ಯಸಂಪಾದನೆಗಳು.. ಇತ್ಯಾದಿಗಳ ಮೂಲಕ ಪ್ರಕಟವಾಗುವ ತಾತ್ವಿಕತೆಗಳನ್ನು ತಾತ್ವೀಕರಿಸಿಕೊಳ್ಳುವುದೇ ಆಚರಣೆಗಳ ತಾತ್ವೀಕರಣ.

ಆಧುನಿಕ ಸಂದರ್ಭದಲ್ಲಿ ಕುವೆಂಪು ಸಾಹಿತ್ಯ ಕುರಿತು ಬಂದಿರುವ ವಿಮರ್ಶೆಯನ್ನು ಅಧ್ಯಯನಕ್ಕೆ ಗುರಿಪಡಿಸಿ; ವಿಮರ್ಶೆಯ ಆಚರಣೆಯಲ್ಲಿ ಅಂದರೆ ಪ್ರಾಕ್ಟೀಸಿನಲ್ಲಿ ಬಳಕೆಯಾಗಿರುವ ಮತ್ತು ಪ್ರಕಟವಾಗಿರುವ ತತ್ವ–ವಿಧಾನಗಳನ್ನು ತಾತ್ವೀಕರಿಸುತ್ತ; ಪರಿಕಲ್ಪಿಸುತ್ತ; ಆ ಮೂಲಕ ಅದರ ವಿನ್ಯಾಸ ಮತ್ತು ತಾತ್ವಿಕತೆಯನ್ನು ಗುರ್ತಿಸಿಕೊಳ್ಳುವುದೇ ಆಚರಣೆಯಿಂದ ತತ್ವದೆಡೆಗೆ ಚಲಿಸುವ ಯತ್ನ. ಹೀಗಾಗಿ ಪ್ರಸ್ತುತ ಅಧ್ಯಯನದ ವಿಧಾನವು 1. ವಿಧಾನಗಳ ಅಧ್ಯಯನವೂ 2. ವಿಧಾನವೊಂದರ/ಗಳ ರೂಪಣೆ ಮತ್ತು ಪ್ರಯೋಗವೂ ಆಗಿದೆ.

ಆಚರಣೆಯ ತಾತ್ವೀಕರಣವನ್ನು ಒಂದು ಅಧ್ಯಯನ ವಿಧಾನವನ್ನಾಗಿ ರೂಪಿಸುವಾಗ ಇಲ್ಲಿ ಇನ್ನೆರಡು ಒಳ ವಿಧಾನಗಳನ್ನು ಬಳಸಲಾಗಿದೆ. ಅವೆಂದರೆ 1. ವರ್ಗೀಕರಣ–ನಾಮಕರಣ ವಿಧಾನ, 2. ಪರಿಕಲ್ಪನೀಕರಣ ವಿಧಾನ. ತತ್ವಗಳ ಕ್ರೋಡೀಕರಣ ಮತ್ತು ಆಚರಣೆಯ ತಾತ್ವೀಕರಣ ಎನ್ನುವುದೇ ಒಂದು ವರ್ಗೀಕೃತ ಅಧ್ಯಯನ ವಿಧಾನ. ಅಲ್ಲದೆ ವಿಮರ್ಶೆಯ ಪ್ರಾಗ್ರೂಪಗಳು, ಆಧುನಿಕ ವಿಮರ್ಶೆಯ ಸಂಭವ, ಆಧುನಿಕ ವಿಮರ್ಶೆ ಎಂಬ ಮೂರು ಹಂತಗಳಲ್ಲಿ ನಮ್ಮ ವಿಮರ್ಶಾ ಪರಂಪರೆಯನ್ನು ಅಧ್ಯಯನ ಮಾಡಲು ತೊಡಗಿರುವುದೇ ವರ್ಗೀಕರಣ ವಿಧಾನದ ಬಳಕೆಯಾಗಿದೆ. ಅಲ್ಲದೆ ಆಧುನಿಕ ವಿಮರ್ಶೆಯ ಅಂಗಾಂಶದ ಅಧ್ಯಯನವಾಗಿ ಕುವೆಂಪು ಕುರಿತ ವಿಮರ್ಶೆಯನ್ನು ಇಲ್ಲಿ ಅಧ್ಯಯನ ಮಾಡುವಾಗ ಆಚರಣೆಯನ್ನು ಗಮನಿಸಿಯೇ ಅದನ್ನು ವಿಮರ್ಶೆಯ ದೃಷ್ಟಿಗಳು–ರೂಪಗಳು–ಪಂಥಗಳು ಎಂದು ವಿಂಗಡಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಕುವೆಂಪು ಬಗೆಗೆ ಬಂದಿರುವ ವಿವಿಮರ್ಶೆಯನ್ನು ಇಲ್ಲಿ ನವೋದಯ, ನವ್ಯ, ಬಂಡಾಯ ಇತ್ಯಾದಿಯಾಗಿ ಸಾಹಿತ್ಯ ಪಂಥಗಳ ಹಿನ್ನೆಲೆಯಲ್ಲಿ ವರ್ಗೀಕರಿಸಿಲ್ಲ. ಬದಲಿಗೆ ಮೌನ ವಲಯ, ಆಪ್ತ ವಲಯ, ಅಲಿಪ್ತ ವಲಯ, ನವ್ಯ ವಲಯ ಎಂಬುದಾಗಿ ವರ್ಗೀಕರಿಸಿ ಚರ್ಚಿಸಲಾಗಿದೆ. ಹಾಗಾಗಿ ಇಲ್ಲೂ ಕೂಡ ವರ್ಗೀಕರಣ ಮತ್ತು ನಾಮಕರಣ ವಿಧಾನವನ್ನು ಬಳಸಲಾಗಿದೆ.

ಅಲ್ಲದೆ ವಿಮರ್ಶೆಯ ಸ್ವರೂಪ, ಕಾರ್ಯ, ದೃಷ್ಟಿ, ವಿಧಾನ, ವಿನ್ಯಾಸ–ತತ್ವಾದಿಗಳನ್ನು ನವೀನ ರೀತಿಯಲ್ಲಿ ಪರಿಕಲ್ಪಿಸಿ ಹೇಳುವ ಪರಿಕಲ್ಪನೀಕರಣ ವಿಧಾನವನ್ನು ಇಲ್ಲಿ ಬಳಸಲಾಗಿದೆ. ವಿಮರ್ಶೆಯ ವಿಧಾನ–ದೃಷ್ಟಿಗಳನ್ನು ಆಚರಣೆಯ ಮೂಲಕ ತಾತ್ವೀಕರಿಸುವಾಗ ಅಪಸಾಂದರ್ಭೀಕರಣ ವಿಧಾನ, ರೂಪಕ, ದೃಷ್ಟಾಂತ ಮಾರ್ಗ, ಲಕ್ಷಣ ವ್ಯಾಖ್ಯಾನ ವಿಧಾನ, ಅನ್ವಯೀಕರಣ ಪ್ರವೃತ್ತಿ ಇತ್ಯಾದಿಯಾಗಿ (ಪರಿಕಲ್ಪನೀಕರಣ ವಿಧಾನದ ಮೂಲಕ) ಪರಿಕಲ್ಪಿಸಿ ಹೇಳುವ ವಿಧಾನವನ್ನು ಇಲ್ಲಿ ಬಳಸಲಾಗಿದೆ. ಈ ನೆಲೆಯಲ್ಲಿ ಇಲ್ಲಿ ವರ್ಗೀಕರಣ ವಿಧಾನ ಮತ್ತು ಪರಿಕಲ್ಪನೀಕರಣ ವಿಧಾನಗಳನ್ನು ಆಚರಣೆಯ ತಾತ್ವೀಕರಣದ ಒಳವಿಧಾನಗಳಾಗಿ ಬಳಸಲಾಗಿದೆ.

ಲೇಖಕ ಕೇಂದ್ರಿತವಾಗಿ ಅಧ್ಯಯನವನ್ನು ನಡೆಸುವುದು ನಮ್ಮಲ್ಲಿನ ಒಂದು ಸಾಮಾನ್ಯ ಪರಿಪಾಟ. ಆಧುನಿಕ ಸಂದರ್ಭದಲ್ಲಿ ವಿಮರ್ಶಕರನ್ನು ಕೇಂದ್ರವಾಗಿ ಇಟ್ಟುಕೊಂಡು ವಿಮರ್ಶೆಯ ಸ್ವರೂಪವನ್ನು ಚರ್ಚಿಸಿರುವ ಬಿಡಿ ಯತ್ನಗಳು ಸಾಕಷ್ಟಿವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಆಚಾರದಲ್ಲಿನ ವಿಮರ್ಶೆಯನ್ನೇ ಕೇಂದ್ರವಾಗಿ ಇಟ್ಟುಕೊಂಡು ಅಧ್ಯಯನ ನಡೆಸಲಾಗಿದೆ. ವಿಮರ್ಶಕರ ತಾತ್ವಿಕತೆಗಳಿಗಿಂತ ವಿಮರ್ಶಾ ಸಂಸ್ಕೃತಿಯ ಸ್ವರೂಪ, ವಿಧಾನ, ತಾತ್ವಿಕತೆಗಳನ್ನು ಗುರ್ತಿಸಿಕೊಳ್ಳಲು ಇಲ್ಲಿ ಯತ್ನಿಸಲಾಗಿದೆ. ಆಚರಣೆಯನ್ನೇ ತಾತ್ವೀಕರಿಸಿ–

ಪರಿಕಲ್ಪಿಸಿರುವುದರಿಂದ ಈ ಅಧ್ಯಯನದ ಅನುಬಂಧದಲ್ಲಿ ಕುವೆಂಪು ಕುರಿತು ಈವರೆಗೆ ಬಂದಿರುವ ವಿಮರ್ಶಾ ಕೃತಿಗಳ ಮತ್ತು ಲೇಖನಗಳ ಆಕಾರಾದಿಯನ್ನು ನೀಡಲಾಗಿದೆ. ಈ ಅನುಬಂಧದಲ್ಲಿ ಒಟ್ಟು 2807 ಲೇಖನಗಳು ಮತ್ತು ಕೃತಿಗಳಿವೆ. ಅಜಮಾಸು ಒಂದು ಲಕ್ಷ ಪುಟಗಳಿಗೂ ಹೆಚ್ಚು ವಿಮರ್ಶೆ ಕುವೆಂಪು ಮೇಲೆ ಈವರೆಗೆ ಬಂದಿದೆ! ಇಲ್ಲಿನ ಆಕಾರಾದಿಯನ್ನು ಒಮ್ಮೆ ಸುಮ್ಮನೆ ಅವಲೋಕಿಸಿದರೂ ಸಾಕು ಕುವೆಂಪು ಕುರಿತು ಬಂದಿರುವ ವಿಮರ್ಶೆಯ ಅಜಮಾಸು ಸ್ವರೂಪ–ವಿನ್ಯಾಸ–ತಾತ್ವಿಕತೆಗಳ ವಾಸನೆ ಸಿಕ್ಕುತ್ತದೆ.

ಈ ಅಧ್ಯಯನವು ಒಂದು ರೀತಿಯಲ್ಲಿ ಅದಿರನ್ನು ಹೊರತೆಗೆಯುವ ಯತ್ನ. ನಿರ್ಧಿಷ್ಟ ಆಕೃತಿಗಳನ್ನು ಕಟ್ಟಿಕೊಡುವ ಕೆಲಸ ಅಲ್ಲ. ಅಂದರೆ ಪರಿಕಲ್ಪನೀಕರಣ, ತಾತ್ವೀಕರಣಗಳು ಸಿದ್ಧಾಂತಗಳಾಗಿ ಇಲ್ಲಿ ಬೆಳೆಯಬೇಕಾಗಿದೆ. ಸೈದ್ಧಾಂತೀಕರಣ ಇನ್ನೂ ಆಗಬೇಕಿದೆ. ಈ ಎರಡನೇ ಹಂತಕ್ಕೆ ಪ್ರಸ್ತುತ ಅಧ್ಯಯನವು ಸಾಮಗ್ರಿಯಾಗಬಲ್ಲುದು; ಮತ್ತು ತೀನಂಶ್ರೀ ಆದಿಯಾಗಿ ಇದುವರೆಗಿನ ಮೀಮಾಂಸಾ ಕಟ್ಟಾಣಿಕೆಗಳಲ್ಲಿ ಇರಬಹುದಾದ ಗ್ಯಾಪುಗಳನ್ನು ತುಂಬುವ ತೋರುಬೆರಳು ಆಗಬಲ್ಲುದು ಎಂಬುದು ಈ ಅಧ್ಯಯನದ ಹಿಂದಿನ ನಂಬುಗೆಯಾಗಿದೆ.

ಅಧ್ಯಾಯ-ಎರಡು

# ವಿಮರ್ಶೆಯ ಪ್ರಾಗ್ರೂಪಗಳು, ದೃಷ್ಟಿಗಳು ವಿಧಾನಗಳು
## ತತ್ವಗಳ ಕ್ರೋಡೀಕರಣ ಮತ್ತು ಅಚರಣೆಯ ತಾತ್ವೀಕರಣ

ಕಡುಕಂಪನ್ನು ಹಿಡಿಯಲು ಬರುವುದೇ? ಸುಳಿಯುವ ತಂಗಾಳಿಯನ್ನು ಹಿಡಿದಿಡಲು ಬರುವುದೇ? ಬಾಯಾರಿಕೆಗೆ ಬೆಳದಿಂಗಳನ್ನು ಕುಡಿಯಲು ಬರುವುದೇ? ಶಕ್ತಿಯುಂಟೆಂದು ತರುಣಿಯೊಡನ ಸಂಭೋಗ ಸೌಖ್ಯವನ್ನು ನುಡಿದು ವರ್ಣಿಸಲು ಬರುವುದೇ? ಬಾರದು. ಹೀಗೆಯೆ ಕಾವ್ಯದ ಆಸ್ವಾದನೆಯು ಕೂಡ.

-ನೇಮಿಚಂದ್ರ, ಅ.ನೇ.ಪು. 1-31

ರತಿಲಾಲಸ ರಮಣಿಯ ಸಮರತಿಯನ್ನು ನಪುಂಸಕರಾದವರು ತಿಳಿಯಲು ಸಾಧ್ಯವೇ? ಸಾಧ್ಯವಿಲ್ಲ. ದುಂಬಿಯು ಬೇರೆ ಬೇರೆ ಪುಷ್ಪಗಳ ನರುಗಂಪಿನ ವಿಶೇಷತೆಗಳನ್ನು ಅರಿಯುವಂತೆ ಬುಧರಾದವರು ನಾನಾ ರೀತಿಯ ಕಾವ್ಯಗಳ ಹೊಸ ಹೊಸ ಪ್ರಕಾರದ ಭಾವ ಭೇದಗಳನ್ನು ಅರಿಯಬಲ್ಲರು.

-ಷಡಕ್ಷರಿ, ರಾ.ವಿ. 1-26, 27

## ವಿಮರ್ಶೆಯ ಪ್ರಾಗ್ರೂಪಗಳು, ದೃಷ್ಟಿಗಳು, ವಿಧಾನಗಳು

ನಮ್ಮ ಪ್ರಾಚೀನರಲ್ಲಿ ಅಲಂಕಾಶಾಸ್ತ್ರ, ವ್ಯಾಕರಣ, ನಿಘಂಟು, ಛಂದಸ್ಸು, ಮೊದಲಾದ ಶಿಸ್ತುಗಳು ಸಾಕಷ್ಟು ಚರ್ಚೆಗೆ ಗುರಿಯಾಗಿವೆ. ಅಲ್ಲಿ ನಾವು ವಿಮರ್ಶೆಯನ್ನು ಕಾಣಲಾಗುವುದಿಲ್ಲ ಎಂಬ ಅಭಿಪ್ರಾಯವು ಇಂದು ಚಾಲ್ತಿಯಲ್ಲಿದೆ. ಆದರೆ ಇದು ಸರಿಯಲ್ಲ. ಇದೊಂದು ಮಿಥ್ಯಾಕಲ್ಪನೆ. ವಿಮರ್ಶೆಯು ಮೀಮಾಂಸೆ, ವ್ಯಾಕರಣ, ನಿಘಂಟು, ಛಂದಸ್ಸು, ಭಾಷಾವಿವೇಚನೆಗಳಲ್ಲಿಯೂ ಇದೆ. ಹಾಗೆಯೇ ನಮ್ಮ ಪ್ರಾಚೀನ ಕಾವ್ಯಗಳಲ್ಲಿಯೂ ಇದೆ. ಅಲ್ಲಿ ವಿಮರ್ಶೆಯು ಇವತ್ತು ಇರುವ ರೂಪದಲ್ಲಿ ಇಲ್ಲ ಅಷ್ಟೆ. ಅದು ಕಾವ್ಯರೂಪದಲ್ಲಿ ಹಲವು ಮಾದರಿಗಳಲ್ಲಿ ಪ್ರಕಟವಾಗಿದೆ. ಛಂದಸ್ಸುಗಳಲ್ಲಿ ಅಡಗಿಹೋಗಿದೆ. ಅದನ್ನು ನಾವು ಕಂಡುಕೊಳ್ಳಬೇಕಾಗಿದೆ.

ನಮ್ಮ ಪರಂಪರೆಯಲ್ಲಿ ರಚಿತವಾಗಿರುವ ಕಾವ್ಯಗಳ ಸ್ವರೂಪ, ವಿನ್ಯಾಸಗಳನ್ನು ವಾಖ್ಯಾನಿಸುತ್ತ ಅವುಗಳ ಮೂಲಕ ವ್ಯಕ್ತವಾಗುತ್ತಿರುವ ಆಚರಣೆಯಲ್ಲಿನ ವಿಮರ್ಶೆಯೊಂದನ್ನು/ಮೀಮಾಂಸೆಗಳನ್ನು ಕಟ್ಟಿಕೊಳ್ಳಲು ಸಾಧ್ಯವಿದೆ. ಇಷ್ಟೇ ಅಲ್ಲದೆ ನಮ್ಮವರು ಸಾಹಿತ್ಯ ಕೃತಿಗಳನ್ನು ಮುಂಚಿನಿಂದಲು ಹೇಗೆಲ್ಲ ಅನುಸಂಧಾನ ಮಾಡುತ್ತ ಬಂದಿದ್ದಾರೆ, ಕೃತಿಗಳೊಂದಿಗೆ ಹೇಗೆಲ್ಲ ಒಡನಾಟ ಮಾಡುತ್ತ ಬಂದಿದ್ದಾರೆ, ಸಾಹಿತ್ಯ ಲೋಕವನ್ನು ಬದುಕಿನಲ್ಲಿ ಹೇಗೆಲ್ಲ ಬಳಸುತ್ತ ಬಂದಿದ್ದಾರೆ ಎಂಬುವನ್ನು ಪರಿಶೀಲಿಸಿದರೆ: ಇಂಥ ಪರಿಶೀಲನೆಯ ಮೂಲಕ ವ್ಯಕ್ತವಾಗುವ ವಿಮರ್ಶೆ/ಮೀಮಾಂಸೆಗಳನ್ನು ಪ್ರತ್ಯೇಕವಾಗಿ ಕಟ್ಟಿಕೊಳ್ಳಲು ಸಾಧ್ಯವಿದೆ. ಇಂಥ ಮೇಲಿನ ಎರಡೂ ರೀತಿಯ ಕಟ್ಟುವಿಕೆಗಳನ್ನೇ ಇಲ್ಲಿ ಆಚರಣೆಯ ತಾತ್ವೀಕರಣ ಎಂದು ಕರೆಯಲಾಗಿದೆ. ಕಾವ್ಯಗಳಲ್ಲಿ ಮತ್ತು ಶಾಸ್ತ್ರಗಳಲ್ಲಿ ಮೀಮಾಂಸೆಯ ಕುರಿತು ಸಿದ್ಧಾಂತ, ಪ್ರಸ್ಥಾನಗಳ ರೂಪದಲ್ಲಿ ಮತ್ತು ಅಲ್ಲಲ್ಲಿ ಚದುರಿದಂತೆ ಹಲವು ವಿಚಾರಗಳು ಹೇಳಲ್ಪಟ್ಟಿವೆ. ಇವುಗಳನ್ನೆಲ್ಲ ಒಟ್ಟಾರೆ ಕ್ರೋಡೀಕರಿಸಿಕೊಳ್ಳುವ ಅಗತ್ಯವೂ ಇದೆ. ಇದನ್ನೇ ಇಲ್ಲಿ ತತ್ವಗಳ ಕ್ರೋಡೀಕರಣ ಎನ್ನಲಾಗಿದೆ. ಭಾರತೀಯ ಕಾವ್ಯ ಮೀಮಾಂಸೆ, ಪಾಶ್ಚಿಮಾತ್ಯ ಕಾವ್ಯಮೀಮಾಂಸೆ, ತೌಲನಿಕ ಕಾವ್ಯಮೀಮಾಂಸೆ ಇತ್ಯಾದಿ ನೆಲೆಗಳಲ್ಲಿ ನಮ್ಮಲ್ಲಿ ತತ್ವಗಳ ಕ್ರೋಡೀಕರಣ-ವ್ಯಾಖ್ಯಾನ ನಡೆದಿದ್ದರೂ ಅವೆಲ್ಲವು ಕನ್ನಡದ ತತ್ವಗಳನ್ನು ಗಂಭೀರವಾಗಿ ಕ್ರೋಡೀಕರಿಸಿಲ್ಲ ಮತ್ತು ವ್ಯಾಖ್ಯಾನಿಸಿಲ್ಲ. ಕನ್ನಡ ಮತ್ತು ಅನ್ಯದ ತರತಮ ತೌಲನಿಕ ಶ್ರೇಣೀಕರಣವೇ ಇಲ್ಲೆಲ್ಲ ನಡೆದಿದೆ.

ಹಾಗೆ ಕ್ರೋಡೀಕರಣ ಮತ್ತು ವ್ಯಾಖ್ಯಾನದ ಸಾಧ್ಯತೆಗಳು ಯಾವತ್ತೂ ಮುಗಿದು ಹೋಗುವುದಿಲ್ಲ ಕೂಡ. ಇವತ್ತು ವಿಮರ್ಶೆ ಮತ್ತು ಮೀಮಾಂಸೆಗಳ ನಮ್ಮ ಬೇರುಗಳನ್ನು; ಅವುಗಳ ಚಿಗುರು, ಹೂವು, ಹಣ್ಣು, ಕಾಯಿಗಳನ್ನು ನಮ್ಮ ತತ್ವ ಮತ್ತು ಆಚರಣೆಗಳ ಮೂಲಕವೆ ಕಟ್ಟಿಕೊಳ್ಳಬೇಕಾಗಿದೆ. ಅಂದರೆ ವಿಮರ್ಶೆಯ ಪ್ರಾಗ್ರೂಪಗಳು ಎಂದು ಯೋಚಿಸುವಾಗ ಮೇಲಿನಂತೆ ಎರಡು ರೀತಿಯಲ್ಲಿ ಇದನ್ನು ಕಂಡುಕೊಳ್ಳಲು ಸಾಧ್ಯವಿದೆ. 1. ತತ್ವಗಳ ಕ್ರೋಡೀಕರಣ ಮತ್ತು 2. ಆಚರಣೆಗಳ ತಾತ್ವೀಕರಣ.

ಪ್ರಸ್ಥಾನರೂಪಿಯಾಗಿ, ಸಿದ್ಧಾಂತರೂಪಿಯಾಗಿ ಮಂಡಿತವಾಗಿರುವ ಸಾಹಿತ್ಯ ಮೀಮಾಂಸೆ (ಕಾವ್ಯಶಾಸ್ತ್ರ, ಲಕ್ಷಣಶಾಸ್ತ್ರ) ವಿಚಾರಗಳನ್ನು ಮಾತ್ರ ಕ್ರೋಡೀಕರಿಸಿಕೊಂಡರೆ ನಮ್ಮ ವಿಮರ್ಶೆಯ ಪ್ರಾಗ್ರೂಪದ ಒಂದು ಮಗ್ಗುಲನ್ನು ಮಾತ್ರ ತಿಳಿದಂತೆ ಆಗುತ್ತದೆ. ಆಚರಣೆಯಲ್ಲಿ ಪ್ರಕಟಗೊಂಡಿರುವ ತತ್ವವನ್ನು ಶೋಧಿಸಿಕೊಂಡರೆ ಇದರ ಇನ್ನೊಂದು ಮಗ್ಗುಲನ್ನೂ ತಿಳಿಯಲು ಸಾಧ್ಯವಾಗುತ್ತದೆ. ಆಚರಣೆಯಲ್ಲಿ ಪ್ರಕಟಗೊಂಡಿರುವ ತತ್ವ ಎಂದರೆ ಏನು? ಕಾವ್ಯ-ಶಾಸ್ತ್ರಗಳನ್ನು ಹೇಗೆ ರಚಿಸಬೇಕು-ಹೇಗೆ ಓದಬೇಕು-ಹೇಗೆ ಬಳಸಬೇಕು ಎಂದು ತತ್ವ ರೂಪದಲ್ಲಿ ಹೇಳಿರುವುದಕ್ಕಿಂತ ಹೇಗೆಲ್ಲ ರಚಿಸಲಾಗಿದೆ, ಓದಲಾಗಿದೆ, ಬಳಸಲಾಗಿದೆ ಎಂಬುದನ್ನು ಅವಲೋಕಿಸಿದಾಗ ಅದರಿಂದ ವ್ಯಕ್ತವಾಗುವ ತತ್ವಗಳೇ ಆಚರಣೆಯಲ್ಲಿ

ಪ್ರಕಟಗೊಂಡಿರುವ ತತ್ವಗಳು. ಆಚರಣೆಯಲ್ಲಿ ಅಳವಡಿಸಿಕೊಳ್ಳಲಾಗಿರುವ, ಅನುಸರಿಸಲಾಗಿರುವ ತತ್ವಗಳನ್ನು ತಾತ್ವೀಕರಿಸಿಕೊಂಡರೆ: ಆ ಮೂಲಕವೂ ನಮ್ಮ ಮೀಮಾಂಸೆ ಅಥವಾ ವಿಮರ್ಶೆಯ ಸ್ವರೂಪವನ್ನು ಗ್ರಹಿಸಿಕೊಳ್ಳಬಹುದಾಗಿದೆ.

ಇಲ್ಲಿ ಇಂಥ ಕಾವ್ಯಮೀಮಾಂಸೆಯ/ಗಳ ಒಂದು ಸ್ಥೂಲ ಚಿತ್ರವನ್ನಷ್ಟೆ ಕಂಡುಕೊಳ್ಳಲು ಯತ್ನಿಸಲಾಗುವುದು. ಈ ಯತ್ನವು ಆಚರಣೆಯ ತಾತ್ವೀಕರಣ ಮತ್ತು ತತ್ವಗಳ ಕ್ರೋಡೀಕರಣ ಎಂಬ ಎರಡು ನೆಲೆಯಲ್ಲಿ ನಡೆದರೂ ಈ ಎರಡು ನೆಲೆಗಳನ್ನು ಪ್ರತ್ಯೇಕ ಗಾಳಿಯಾಡದ ಕಂಪಾರ್ಟ್‌ಮೆಂಟುಗಳಂತೆ ಇರಿಸದೆ ಸಂದರ್ಭಕ್ಕೆ ಅನುಸಾರವಾಗಿ ಪರಸ್ಪರ ಒಟ್ಟಿಗೆಯೂ, ಪ್ರತ್ಯೇಕವಾಗಿಯೂ ವಿವರಿಸಿಕೊಳ್ಳಲು ಯತ್ನಿಸಲಾಗುವುದು. ಸ್ಥೂಲವಾಗಿ ತತ್ವಗಳ ಕ್ರೋಡೀಕರಣ ಮತ್ತು ಆಚರಣೆಯ ತಾತ್ವೀಕರಣ ಎಂಬ ಎರಡು ನೆಲೆಗಳನ್ನು ಈ ಕೆಳಕಂಡಂತೆ ವಿಸ್ತರಿಸಿಕೊಳ್ಳಬಹುದು.

**1. ತತ್ವಗಳ ಕ್ರೋಡೀಕರಣ**

1. ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳಲ್ಲಿನ ತತ್ವ ರೂಪಿ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆ. (ಕಾವ್ಯಗಳ ಪೀಠಿಕೆಗಳಲ್ಲಿ ಹೇಳಿರುವ ಕಾವ್ಯತತ್ವ, ಪೂರ್ವಕವಿ ಸ್ಮರಣೆ, ಸತ್ಕವಿ ಪ್ರಶಂಸೆ-ಕುಕವಿ ನಿಂದೆ, ಫಲಶೃತಿ, ಕವಿ-ಸಹೃದಯ-ಓದು ತತ್ವ, ಇತ್ಯಾದಿ ಮತ್ತು ಶಾಸ್ತ್ರಗಳ ಗುಣ ದೋಷ ಮೀಮಾಂಸೆ, ಲಕ್ಷಣ-ಲಕ್ಷ್ಯವಿಚಾರ, ಮಾರ್ಗದರ್ಶನ, ಇತ್ಯಾದಿ ಪ್ರಾಗ್ರೂಪಗಳ ಮೂಲಕ)

**2. ಆಚರಣೆಯ ತಾತ್ವೀಕರಣ**

ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳ ಒಡಲಲ್ಲಿ ಆಚರಣೆಯ ಮೂಲಕ ಪ್ರಕಟವಾಗಿರುವ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆ. (ಕಥನೀಕರಣ-ಮರುಕಥನೀಕರಣ, ರೂಪಾಂತರ, ನಾಮಕರಣ ವಿನ್ಯಾಸ, ವರ್ಗೀಕರಣ ವಿನ್ಯಾಸ ಇತ್ಯಾದಿ ವಿನ್ಯಾಸಗಳ ಮೂಲಕ) ಮತ್ತು ಸಂಗ್ರಹ ಗ್ರಂಥಗಳಲ್ಲಿ ಪ್ರಕಟವಾಗಿರುವ ತಾತ್ವಿಕತೆ. (ಕಾವ್ಯಸಾರಗಳು, ಶೂನ್ಯಸಂಪಾದನೆಗಳು, ಶತಸ್ಥಲಗಳು, ಇತ್ಯಾದಿ ಪ್ರಾಗ್ರೂಪಗಳ ಮೂಲಕ) ಹಾಗೂ ಇತರ ಅನುಸಂಧಾನಗಳಲ್ಲಿ ಪ್ರಕಟವಾಗಿರುವ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆ. (ಟೀಕುಗಳು, ಪ್ರಕ್ಷಿಪ್ತಗಳು, ದಂತಕತೆಗಳು, ಗಮಕ, ಪಾರಾಯಣ, ಕೇಳಿಕೆ, ತಾಳಮದ್ದಲೆ, ಹರಿಕತೆ, ಇತ್ಯಾದಿ ಪ್ರಾಗ್ರೂಪಗಳ ಮೂಲಕ)

## 1. ತತ್ವಗಳ ಕ್ರೋಡೀಕರಣ

ವಚನ, ಕೀರ್ತನ, ಸ್ವರವಚನ, ತ್ರಿವಿಧಿ, ರಗಳೆ, ತಾರಾವಳಿ ಇಂತಹ ಕೆಲವು ರೂಪಗಳನ್ನು ಹೊರತು ಪಡಿಸಿ ಮಿಕ್ಕಂತೆ ಇರುವ ನಮ್ಮ ಹಳೆ ಕಥನ ಕಾವ್ಯಗಳನ್ನು ನೋಡಿದರೆ ಅವುಗಳಲ್ಲೆಲ್ಲ ಪೀಠಿಕಾ ಸಂಧಿ ಸಾಮಾನ್ಯವಾಗಿ ಇದ್ದೇ ಇದೆ. ಪೀಠಿಕೆ-ಪೀಠಿಕಾ ಸಂಧಿಯನ್ನು ಬರೆಯುವುದು ಒಂದು ಕಡ್ಡಾಯ ಸಂಪ್ರದಾಯವೆಂಬಂತೆ ನಮ್ಮ ಕವಿಗಳನೇಕರು ಪಾಲಿಸುತ್ತ ಬಂದಿದ್ದಾರೆ. ತಮ್ಮ ಕೃತಿಗಳಿಗೆ ಬೇರೆಯವರಿಂದ ಪೀಠಿಕೆ-ಮುನ್ನುಡಿ ಬೆನ್ನುಡಿ ಬರೆಸುವ ಸಂಪ್ರದಾಯ ಈಗಿನವರಲ್ಲಿ ಇದೆ. ಆದರೆ ಹಳೆಜನ ತಮ್ಮ ಕಾವ್ಯಗಳಿಗೆ ತಾವೇ ಪೀಠಿಕೆಗಳನ್ನು ಬರೆದಿದ್ದಾರೆ. ಈ ಪೀಠಿಕೆಗಳಲ್ಲಿ ಕವಿ ತನ್ನ ಕಾವ್ಯ ರಚನೆಯ ಬಗ್ಗೆ, ವಯಕ್ತಿಕ ವಿಚಾರಗಳ ಬಗ್ಗೆ, ತನ್ನ ಕಾವ್ಯದ ಅಗ್ಗಳಿಕೆ, ಓದುವ ವಿಧಾನಗಳ ಬಗ್ಗೆ ಹೇಳಿಕೊಂಡಿರುವುದುಂಟು. ಹಾಗೇ ಈ ಪೀಠಿಕೆಗಳಲ್ಲಿ ಅಲ್ಲಲ್ಲಿ ಸಂಪ್ರದಾಯವೋ ಎಂಬಂತೆ ಪೂರ್ವಕವಿ ಸ್ಮರಣೆ, ಸತ್ಕವಿಪ್ರಶಂಸೆ-ಕುಕವಿನಿಂದೆ, ಕಾವ್ಯಸ್ವರೂಪ, ಫಲಶೃತಿ, ಕಾವ್ಯತತ್ವ, ಕವಿ-ಸಹೃದಯ ಮೀಮಾಂಸೆ ಇತ್ಯಾದಿಗಳನ್ನು ಹೇಳಿದ್ದಾರೆ. ಈ ಎಲ್ಲವೂ ಕಾವ್ಯಗಳಲ್ಲೆ, ಕಾವ್ಯರೂಪದಲ್ಲೆ ಪ್ರಕಟವಾಗಿರುವ ವಿಮರ್ಶಾರೂಪಗಳೆ ಆಗಿವೆ. ಕವಿಗಳು ಇವುಗಳನ್ನು ವಿಮರ್ಶೆಗಳೆಂದು ಕರೆದುಕೊಂಡಿಲ್ಲ. ಆದರೂ ನಮ್ಮ ಪ್ರಾಚೀನರಲ್ಲಿ ವಿಮರ್ಶೆಯು ಪ್ರಕಟಗೊಂಡಿರುವ ರೂಪಗಳಲ್ಲಿ ಇಂಥವು ಕೆಲವು. ಇಂಥವುಗಳನ್ನು ಕ್ರೋಡೀಕರಿಸುವ ಮತ್ತು ಪರಿಕಲ್ಪಿಸುವ ಯತ್ನವನ್ನು ಮುಂದೆ ಮಾಡಲಾಗಿದೆ.

**1.1 ತಿದ್ದುವ ಕವಿ ಮತ್ತು ಪರೀಕ್ಷಿಸುವ ವಿಮರ್ಶಕ**

ಕಾವ್ಯವನ್ನು ಅದು ಪ್ರಕಾಶಗೊಂಡ ನಂತರ ಪರೀಕ್ಷಿಸುವ ಪರಿಪಾಟ ಯಾವತ್ತೂ ಇತ್ತು. ಆದರೆ ಅದು ಓದುಗರಿಗೆ ಪ್ರಕಾಶಗೊಳ್ಳುವುದಕ್ಕೆ ಮುಂಚೆ ಅದನ್ನು ಬಲ್ಲವರಿಂದ ಓದಿಸಿ-ತಿದ್ದಿಸಿ ಪ್ರಕಟಿಸುವ ಸಂಪ್ರದಾಯವನ್ನು ನಮ್ಮವರು ಪಾಲಿಸುತ್ತ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಕಾವ್ಯವನ್ನು ತಿದ್ದುವ ಮತ್ತು ಪರೀಕ್ಷಿಸುವ ಎರಡು ಭಿನ್ನ ರೀತಿಯ ವ್ಯಕ್ತಿತ್ವಗಳ ವಿಮರ್ಶಕರ ಬಗ್ಗೆ ನಮ್ಮ ಕವಿಗಳು ಹೇಳಿದ್ದಾರೆ. ಎನ್ನ

ಪರೀಕ್ಷಿಪಂಗೆಂಟೆರ್ದೆಯೇ, ಎನ್ನುವ ರನ್ನ ತನ್ನ ಸಾಹಸಭೀಮ ವಿಜಯವನ್ನು ತಿದ್ದಿಸಿಕೊಂಡಿದ್ದಾನೆ. 'ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆ ಪೇಳ್ದೆ' ಎಂದು ಹೇಳಿಕೊಂಡಿದ್ದಾನೆ. ಅಂದರೆ ತಿದ್ದುವವನೇ ಬೇರೆ, ಪರೀಕ್ಷಿಸುವವನೇ ಬೇರೆ. ಮಧುರಕವಿ ಹೇಳುವ ಮಾತು ನೋಡಿ;

ತಿರ್ದಿದೊಡಂ ಸಮಂತೊಸೆದು ತಿರ್ದಿದೊಡಂ ನಯದಿಂದೆ ನೇರ್ಪುವ
ಟ್ಟಿರ್ದ ಮದೀಯ ಸತ್ಕೃತಿಯ ಬಿಂಕದ ಕೊಂಕಿನ ಮಾತನೋತು ಕೈ
ಸಾರ್ದನುಭಾವದೊಳ್ ಸರಸರಾದ ಕವೀಶ್ವರರೆಯ್ದೆ ನೇಹದಿಂ
ತಿರ್ದುಗೆ ತಿರ್ದುವಂತೆ ಸುರ[ತಾಂ]ತದ ಕಾಂತೆಯ ನುಣ್ಗುರುಳ್ಗಳಂ (ಧ.ಪು. 1–43)

ಅಂದರೆ ಕಾವ್ಯಗಳನ್ನು ತಿದ್ದುವವರು ಯಾವಾಗಲೂ ಕವಿಗಳೇ ಆಗಿರುತ್ತಿದ್ದರು, ಅಥವಾ ಕವಿಸಮಾನ ಸಂವೇದನೆಯುಳ್ಳ ವಿದ್ಯಾವಂತ ಸಹೃದಯರೇ ಆಗಿರುತ್ತಿದ್ದರು. ಪರೀಕ್ಷಿಸುವವರು ಸಾಮಾನ್ಯವಾಗಿ ಪಂಡಿತರಾಗಿರುತ್ತಿದ್ದರು ಎಂಬುದು ಇದರಿಂದ ತಿಳಿಯುತ್ತದೆ. ಕೃತಿ ಪರೀಕ್ಷಿಸುವವನನ್ನು ಮತ್ತು ತಿದ್ದುವವನನ್ನು ಇಬ್ಬರನ್ನು ಎರಡು ಭಿನ್ನ ವ್ಯಕ್ತಿತ್ವದ ವಿಮರ್ಶಕರೆಂದು ನಾವು ತಿಳಿಯಬೇಕಾಗಿದೆ. ತಿದ್ದುವವನಲ್ಲಿ ಕಾಂತಾಸಂಹಿತೆ ಕೆಲಸ ಮಾಡಿದರೆ, ಪರೀಕ್ಷಿಸುವವನಲ್ಲಿ ನಿರ್ದಾಕ್ಷಿಣ್ಯ ವಿಮರ್ಶಾ ಸಂಹಿತೆ ಕೆಲಸ ಮಾಡುವುದನ್ನು ಕಾಣಬಹುದು. ಮಧುರ ಈ ಕಾವ್ಯ ತಿದ್ದುವ ಬಗೆಯನ್ನು ಉಪಮಿಸಿರುವ ಕ್ರಮ ಮಾತ್ರ ತುಂಬಾ ರಮ್ಯವಾಗಿದೆ. ಸುರತಾಂತದಲ್ಲಿ ಕಾಂತೆಯ ನುಣುಪಾದ ಕೂದಲನ್ನು ತಿದ್ದುವಂತೆ ಕಾವ್ಯವನ್ನು ತಿದ್ದಬೇಕಂತೆ!

ಕಥೆ ಗಣಭೃತ್ಪ್ರಣೀತಮಿತಿಹಾಸ, ಸಮುದ್ಭವ ಮಾನತೇಂದ್ರನೀ
ಕೃತಿಗಧಿನಾಯಕಂ, ನೆಗಳ್ದ ವೀರಜಿನಂ, ಮನವೊಲ್ದು ಪೇಳ್ದನ
ನ್ವಿತಮತಿ ನಾಗವರ್ಮಕವಿ, ಶೋಧಿಸಿದರ್ ಸಲೆ ವಾದಿರಾಜ ಪಂ
ಡಿತರೆನೆ, ಮೆಚ್ಚದಿಪ್ಪ ಖಳನುಂ ದೊರೆಕೊಳ್ಗುಮೆ ಕೇಳ್ದೊಡಿಂತಿದಂ (ವೀ.ವ.ಪು. 12–21)

ಹೀಗೆ ತನ್ನ ವೀರವರ್ಧಮಾನ ಪುರಾಣವನ್ನು ವಾದಿರಾಜಪಂಡಿತರು ಶೋಧಿಸಿಕೊಟ್ಟರು ಎಂದು ನಾಗವರ್ಮ ಹೇಳಿಕೊಂಡಿದ್ದಾನೆ. ಮೆಚ್ಚದಿರುವ ಖಳರೂ ಕೂಡ ಈ ವಿಚಾರ ಕೇಳಿದರೆ ಒಪ್ಪಿಕೊಳ್ಳಬೇಕು ಎಂದು ಈತ ಹೇಳುವುದು ನೋಡಿದರೆ ಪಂಡಿತರು ಕಾವ್ಯವನ್ನು ಪರೀಕ್ಷಿಸಿ–ಶೋಧಿಸಿ ಓಕೆ ಮಾಡಿದ ಮೇಲೆ ಮಿಕ್ಕ ಯಾರ ತಕರಾರೂ ಇರುತ್ತಿರಲಿಲ್ಲ ಎಂದು ತಿಳಿಯುತ್ತದೆ. ಕಾವ್ಯಾವಲೋಕನದಲ್ಲಿಯೂ ಪಂಡಿತ, ವಾದಿ, ವಾದಿರಾಜನನ್ನು ನಾಗವರ್ಮ ಸ್ತುತಿಸುವುದನ್ನು ನೋಡಿದರೆ ಈತ ಆ ಕಾಲದಲ್ಲಿದ್ದ ದೊಡ್ಡ ವಿದ್ವಾಂಸ–ವಿಮರ್ಶಕ ಆಗಿದ್ದಿರಬಹುದು. ಪಾಂಡಿತ್ಯ ಮತ್ತು ವಿಮರ್ಶೆಗಳೆರಡೂ ಒಟ್ಟಿಗೆ ಇದ್ದದ್ದು ಇಂಥ ವಾದಿರಾಜರಿಂದ ತಿಳಿಯುತ್ತದೆ.

ಕಾಣನ್ ಏಗೆಯ್ದುಂ ತನ್ನ ದೋಷಮಂ
ಕಾಣದಂತೆ ಎಂದುಂ ಕಣ್ಗಳ್ ತನ್ನ ಕಾಡಿಗೆಯಂ
ಪೂಣಿಗನ್ ಆದುದರಿಂ ಪೆರರಿಂ
ಜಾಣರಿಂ ಓದಿಸಿ ಪೇಳ್ವುದು ಕಬ್ಬಮಂ (ಕ.ರಾ.ಮಾ. )

(ಎಂದಿಗೂ ಕಣ್ಣುಗಳು ತಮ್ಮ ಕಾಡಿಗೆಯನ್ನು ಹೇಗೆ ಕಾಣಲಾರವೋ ಹಾಗೆ ಕವಿಯು ತಾನು ರಚಿಸಿದ ತನ್ನ ಕಾವ್ಯದ ದೋಷಗಳನ್ನು ಕಾಣಲಾರ. ಆದ್ದರಿಂದ ಆತನು ತಾನು ಬಲ್ಲ ಇತರ 'ಜಾಣ'ರಿಂದ ಎಂದರೆ ಕಾವ್ಯ ಲಕ್ಷಣ ಬಲ್ಲವರಿಂದ ಓದಿಸಿ ತಪ್ಪುಗಳನ್ನು ತಿದ್ದಿಕೊಂಡು ಕಾವ್ಯವನ್ನು ರಚಿಸಬೇಕು). ಎಂದು ಶ್ರೀವಿಜಯನು ತನ್ನ ಕವಿರಾಜಮಾರ್ಗದಲ್ಲಿ ಮಾರ್ಗದರ್ಶನ ಮಾಡುತ್ತಾನೆ. ಕವಿಗಳು ತಮ್ಮ ಕಾವ್ಯಗಳನ್ನು ಓದುಗ ವಲಯಕ್ಕೆ ಬಿಡುವ ಮೊದಲು ಅದರ ಪರಿಷ್ಕರಣೆ–ತಿದ್ದುವಿಕೆ ಎಲ್ಲ ನಡೆಸುತ್ತಿದ್ದರು ಅಥವಾ ಹಾಗೆ ನಡೆಯಬೇಕು ಎಂಬ ನಂಬಿಕೆ ಚಾಲ್ತಿಯಲ್ಲಿದ್ದಂತೆ ಇದರಿಂದ ತೋರುತ್ತದೆ. 'ಹೊಸದೆಂಬಂತೆ ಹೇಳುವ, ತಿದ್ದುವ ಅರಿವು ನನ್ನಲ್ಲೂ ಇದೆ. ಆದರೂ ರಸಿಕರಿಂದ ಚೆನ್ನಾಗಿ ತಿದ್ದಿಸದಿದ್ದರೆ ನನ್ನ ಮನಸ್ಸಿಗೆ ಸಮಾಧಾನವಾಗದು. ಏನೇ ಆದರೂ ತಿದ್ದಿಸುವುದೇ ಸರಿಯಾದುದು. ಚೆನ್ನಾಗಿ ಉಜ್ಜಿ ಬೆಳಗಿದರೆ ಕನ್ನಡಿಯೂ, ಪುಟಕ್ಕಿಟ್ಟರೆ ಚಿನ್ನವೂ ಹೊಳಪಾಗುವುದಿಲ್ಲವೇ? ಅದೇ ರೀತಿ ತಿದ್ದಿಸಿದರೆ ಈ ಕೃತಿಯು ಲೋಕಕ್ಕೆ ಚಮತ್ಕಾರವನ್ನೇ ಉಂಟುಮಾಡುವುದು.' (ಜ.ವಿ.1–15) ಎಂಬ ರುದ್ರಭಟ್ಟನ ಮಾತುಗಳಿಂದ ಇಂತಹ ಸಂಪ್ರದಾಯ ಚಾಲ್ತಿಯಲ್ಲಿ ಇದ್ದುದು ತಿಳಿದುಬರುತ್ತದೆ. ಇದಕ್ಕು ವಿಮರ್ಶೆಗು ಏನು ಸಂಬಂಧ? ಸೂಕ್ಷ್ಮವಾದ ಪರಿಶೀಲನೆ, ಪರೀಕ್ಷೆ ರೂಪದ ವಿಮರ್ಶೆಯ ನಂತರವೇ ಕಾವ್ಯವು ಉತ್ಪನ್ನವಾಗಿ ಹೊರಬೀಳುತ್ತಿತ್ತು ಎಂಬುದು ಇದರಿಂದ

ತಿಳಿಯುತ್ತದೆ. ಇದೊಂದು ಆದಿ ಪ್ರಾಚೀನ, ನಿತ್ಯನೂತನ ವಿಮರ್ಶೆಯ ರೂಪವೇ ಆದರೂ, ಕಾವ್ಯಗಳು ಇಂಥ ಪರಿಶೀಲನೆಯ ಫಲಿತಗಳೇ ಆದರೂ ಇವುಗಳು ದಾಖಲಾಗುವುದಿಲ್ಲ ಎಂಬುದು ಗಮನೀಯ.

ಇಂದಿಗೂ ಕೂಡ ಕವಿತೆ, ಕತೆ, ಕಾದಂಬರಿ ಅಥವಾ ಇನ್ನಾವುದೇ ಕೃತಿ ರಚಿಸುವ ಲೇಖಕರು ತಮ್ಮ ಹಸ್ತಪ್ರತಿಗಳನ್ನು ಪ್ರಕಟಿಸುವ ಮುನ್ನ ಯಾರಿಗಾದರೂ (ವಿಮರ್ಶಕರು, ಕವಿಗಳು, ಶಿಕ್ಷಕರು, ಖ್ಯಾತನಾಮರು ಇತ್ಯಾದಿಗಳಿಗೆ) ಕೊಟ್ಟು ಓದಿಸಿ ಸಲಹೆ, ಸೂಚನೆಗಳನ್ನು ಕೇಳಿ ಅಳವಡಿಸಿಕೊಂಡು ಆನಂತರ ಪ್ರಕಟಿಸುವ ಪರಿಪಾಠವುಂಟು. ಹಸ್ತಪ್ರತಿಗಳನ್ನು ಓದಿ ಸೂಚಿಸುವಾಗ ಮಾಡುವ ವಿಮರ್ಶೆಗೂ ಮತ್ತು ವಿಮರ್ಶಕ ವಿಮರ್ಶೆಗಾಗಿಯೇ ಮಾಡುವ ವಿಮರ್ಶೆಗೂ ಅಂತರ ಇರುವುದನ್ನು ನಾವು ಈಗಲೂ ಗುರ್ತಿಸಬಹುದು. ತಿದ್ದುಪಡಿ ವಿಮರ್ಶೆಯು ಕೃತಿ ರಚನೆಯೊಳಗೆ ಅಳವಡಿಸಲ್ಪಟ್ಟರೂ ಅದು ವಿಮರ್ಶೆಯಾಗಿ ದಾಖಲಾಗುವುದು ನಮ್ಮಲ್ಲಿ ಎಂದಿಗೂ ಇಲ್ಲ. ಇಡೀ ನಮ್ಮ ಕಾವ್ಯ ಪರಂಪರೆಯಲ್ಲಿ ಕಾವ್ಯದ ತಿದ್ದುವಿಕೆ ರೂಪದ ವಿಮರ್ಶೆಯು ಅಂತರ್ಗತವಾಗಿ–ಅಳವಡಿಸಿಕೊಳ್ಳಲ್ಪಟ್ಟು–ಬೆರೆತು ಹೋಗಿದೆ. ಇದರ ತಾತ್ವೀಕರಣವಂತೂ ಅಸಾಧ್ಯ–ಅಸಂಭವ.

ಮುನ್ನುಡಿ, ಬೆನ್ನುಡಿಗಳಲ್ಲಿ ಖಾಸಗಿ ಪತ್ರಗಳಲ್ಲಿ ಇಂಥ ತಿದ್ದುವಿಕೆಯ ಕೆಲವು ಅಂಶಗಳು ಇಂದು ಕಾಣಿಸಿಕೊಂಡಿವೆ. ಆಶೀರ್ವಾದ, ಹಿತವಚನ, ಹಾರೈಕೆ, ಸಲಹೆ, ಸೂಚನೆ, ಬೆನ್ನು ತಟ್ಟುವಿಕೆ, ಪ್ರಮಾಣಪತ್ರ, ಪಶಸ್ತಿ ಪತ್ರ ನೀಡುವಿಕೆ ಇತ್ಯಾದಿ ರೂಪಗಳಲ್ಲಿ ಇಂತಹ ವಿಮರ್ಶೆ ಆಧುನಿಕ ಸಂದರ್ಭದಲ್ಲಿ ಅಲ್ಪ ಸ್ವಲ್ಪ ಕಾಣಿಸಿಕೊಂಡಿದೆ.

### 1.1.1. ತಿದ್ದುವುದು, ತಿದ್ದಿಕೊಂಡು ಓದುವುದು

ಕವಿಯು ಎಷ್ಟೇ ಪ್ರತಿಭಾವಂತನೂ ಬುದ್ಧಿವಂತನೂ ಆಗಿರಲಿ; ಆತ ತನ್ನ ಕಾವ್ಯವನ್ನು ಇತರರಿಗೆ ಕೊಟ್ಟು ಅವರಿಂದ ತಪ್ಪುಗಳನ್ನು ತಿದ್ದಿಸಿದರೆ ಅಥವಾ ಅರಿತು ತಿದ್ದಿಕೊಂಡರೆ ಅದರಿಂದ ಕಾವ್ಯಕ್ಕೆ ಇನ್ನಷ್ಟು ಶೋಭೆ ಬರುತ್ತದೆ. ಈ ಮಾತನ್ನು ಶ್ರೀವಿಜಯನೇ ಮೊದಲಿಗೆ ಹೇಳಿದ್ದಾನೆ. 'ತುಪ್ಪ ಏರಿದ ದರ್ಪಣದಲ್ಲಿ ಪ್ರತಿಬಿಂಬವು ಹೇಗೆ ತಾನೆ ಪ್ರಜ್ವಲಿಸುತ್ತದೆ?' ಅದನ್ನು ತಿಕ್ಕಿ ತೊಳೆದಷ್ಟೂ ಅದು ಹೊಳಪಾಗಿ ಬಿಂಬಿಸಬಲ್ಲುದಲ್ಲವೇ? ಇಂತಹ ಒಂದು ಸತ್ಸಂಪ್ರದಾಯವನ್ನು ನಿಯಮದಂತೆ ನಮ್ಮವರೇನೋ ಪಾಲಿಸುತ್ತ ಬಂದಿದ್ದಾರೆ. ಆದರೆ ಕಾವ್ಯ ಬರೆದು ಪ್ರಕಟಪಡಿಸಿದ ನಂತರವೂ ಅದರಲ್ಲಿ ತಪ್ಪುಗಳು ಉಳಿದುಕೊಂಡಿರಬಹುದು. ಆಗ ಏನು ಮಾಡಬೇಕು. ಸಹೃದಯರು, ಪ್ರತಿಕಾರರು, ಜನರು ಅವುಗಳನ್ನು ಸರಿಪಡಿಸಬೇಕು. ಸರಿಪಡಿಸಿಕೊಂಡು ಓದಬೇಕು.

ಸುಜನರು ಮತ್ತು ಸಹೃದಯರನ್ನು, ಪಂಡಿತರು ಮತ್ತು ಸೂಕ್ತಿಕಾರರನ್ನು ನಮ್ಮ ಕವಿಗಳು ಕೆಲವೊಮ್ಮೆ ನೀವು ನಮ್ಮ ತಪ್ಪುಗಳನ್ನು ಮನ್ನಿಸಿ ತಿದ್ದಿಕೊಂಡು ಓದಿಕೊಳ್ಳಿ ಎಂದೂ; ನಮ್ಮ ಕಾವ್ಯಗಳಲ್ಲಿ ತಪ್ಪುಗಳಿದ್ದರೆ ಅವುಗಳನ್ನು ತಿದ್ದಿ ಓದಿ ಹೇಳಿ ಎಂದೂ; ತಪ್ಪುಗಳನ್ನು ತಿದ್ದಿ ಕಾವ್ಯಗಳನ್ನು ಸರಿಪಡಿಸಿ, ಪ್ರತಿಮಾಡಿ ಮುಂದಿನ ತಲೆಮಾರುಗಳಿಗೆ ಸಾಗಿಸಿ ಎಂದೂ; ಕವಿಯಾದವನು ಮರೆಹು ಆಲಸ್ಯಗಳಿಂದ ಕೆಲವೊಮ್ಮೆ ತಪ್ಪು ಮಾಡುವುದು ಸಾಮಾನ್ಯ. ಅದನ್ನೆ ದೊಡ್ಡದು ಮಾಡದೆ ಕಾವ್ಯವನ್ನು ಪ್ರೀತಿಯಿಂದ ಸ್ವೀಕರಿಸಿ ಎಂದೂ ವಿನಯದಿಂದ ಪ್ರಾರ್ಥಿಸಿಕೊಂಡಿದ್ದಾರೆ. 'ದಡ್ಡರು ಇದನ್ನು ಓದಿ ಸುಮ್ಮನೆ ಇರದೆ ಬರೆದು ಅಲ್ಲಲ್ಲಿ ಕಾಕು ಮಾಡಿದರೆ ನನಗೇನೂ ಗೊತ್ತಿಲ್ಲ. ಅರಿಯದವರು ಈ ಕೃತಿಯನ್ನು ಓದಿ ಬರೆದು ಸಂಗತಿಯನ್ನು ಕೆಡಿಸಿದರೆ ನಾನರಿಯೆ..' (ರಾ.ಚಾ. 11–111, 112) ಹೀಗೆ ಕವಿಯ ಕಾಲಾನಂತರ ಅನ್ಯರು ಕಾವ್ಯವನ್ನು ತಿದ್ದಿ ಕೆಡಿಸುವ ಬಗೆಗೂ ನಮ್ಮವರು ಎಚ್ಚರದಿಂದ ಇರಿ ಎಂದು ಹೇಳಿದ್ದಾರೆ.

ಹರಿಹರ 'ಶಿವಭಕ್ತರೆನ್ನ ಕಾವ್ಯವನತಿಸಮ್ಮದಂ ಬೆರೆಸಿ ಪೊರ್ದುಗೆ ತಿರ್ದುಗೆ ತಾಳ್ದಿದಳ್ಕರಿಂ' (ಗಿ.ಕ. 1–7) ಎಂದು ವಿನಂತಿಸಿಕೊಳ್ಳುತ್ತಾನೆ. ರಾಘವಾಂಕನಾದರೋ ಇನ್ನೂ ವಿನಯದಿಂದ 'ನಾನು ನಿಮ್ಮ ಮಗು, ನಿಮ್ಮ ಮನೆ ಹುಡುಗ. ಹಾಗಾಗಿ ನನ್ನ ಆಗು ಹೋಗುಗಳೆಲ್ಲವೂ ನಿಮ್ಮದೇ ಅಲ್ಲವೇ? ಹೀಗಿರುವಾಗ ಎಲ್ಲಾ ಶಿವಾರ್ಚಕರೂ ರಸದಲ್ಲಿ, ಅರ್ಥದಲ್ಲಿ, ಭಾವದಲ್ಲಿ, ಅಲಂಕಾರದಲ್ಲಿ, ಹೊಸರೀತಿ, ಬಂಧ, ಲಕ್ಷಣ, ಪದಪ್ರಯೋಗಗಳಲ್ಲಿ, ಒಟ್ಟಾರೆ ಕಾವ್ಯದಲ್ಲಿ ತಪ್ಪಿದ್ದರೆ ಇದರೊಳಗೆ ಪರರು(?)ಕೈ ಇಕ್ಕದಂತೆ ಸರಿಪಡಿಸುವುದು, ತಿದ್ದುವುದು, ಕೊಂಡಾಡಿ ಲಾಲಿಸಿ ಕೇಳುವುದು.' (ಹ.ಕಾ. 1–20 ಮತ್ತು ಸೋ.ಚಾ. 1–12) ಎನ್ನುತ್ತಾನೆ. ಹರಿಶ್ಚಂದ್ರಕಾವ್ಯ ಮತ್ತು ಸೋಮನಾಥ ಚಾರಿತ್ರಗಳೆರಡರಲ್ಲೂ ಈ ಮಾತನ್ನು ಆಡುವ ರಾಘವಾಂಕ ಒಟ್ಟಾರೆ ಕಾವ್ಯದಲ್ಲಿ ಎಲ್ಲಿಯೇ ಆಗಲಿ ಹೇಗೆಯೇ ಆಗಲಿ ತಪ್ಪುಗಳಿದ್ದರೆ ತಿದ್ದಿ, ಸರಿಪಡಿಸಿ ಎಂದು ಕೇಳಿಕೊಳ್ಳುತ್ತಾನೆ. ಜೊತೆಗೆ ನಾನು ನಿಮ್ಮ ಮನೆಯ ಮಗ ಎಂಬ ಸಂಬಂಧ ಬೇರೆ ಕಟ್ಟಿಕೊಳ್ಳುತ್ತಾನೆ. ರಾಘವಾಂಕನ ಈ

ಮಾತಿನಲ್ಲಿ ನಮ್ಮವರು ಮತ್ತು ಅನ್ಯರು ಎಂಬ ವಾಸನೆ ಬೇರೆ ಇದೆ. ಶಿವಾರ್ಚಕರಲ್ಲದೆ ಅನ್ಯರು ಇವನ ಕಾವ್ಯವನ್ನು ತಿದ್ದಕೂಡದು. ಅಂತಹ ಓದುಗರ ಬಗೆಗೆ ರಾಘವಾಂಕನಿಗೆ ತನ್ನದೇ ನಿರ್ಬಂಧಗಳಿವೆ.

ರಾಘವಪಂಡಿತನಂತೆ ಕುಮಾರವ್ಯಾಸ ನಮ್ಮವರು, ಪರರು ಎಂಬ ಪರಿಭಾಷೆ ಬಳಸುವುದಿಲ್ಲ. 'ದೊಡ್ಡವರಾದವರು ಕೃತಿಯನ್ನು ಕೇಳಿ, ಪರಿಶೀಲಿಸಿ ಸುಕವಿಯ ಮತಿಗೆ ಮಂಗಳವನ್ನು ನೀಡಿ. ಈ ಕೃತಿಯನ್ನು ಮಥಿಸಿ, ತಿದ್ದಿ. ಮೆರೆಸಿ. ಒಳ್ಳೆಯದನ್ನೆ ಬಯಸಿರಿ. ಈ ವೀರನಾರಾಯಣನ ಕಿಂಕರನಾದ ಕುಮಾರವ್ಯಾಸನಿಗೆ ಗುಣಗಳಿಂದ ಖ್ಯಾತರಾಗಿರುವವರೂ, ಭಾವಕರೂ, ಶ್ರೇಷ್ಠ ಪಂಡಿತರೂ, ಸುಜನರೂ, ಸೂಕ್ತಿಕಾರರೂ ಆಗಿರುವವರು ಮತಿಯನ್ನು ನೀಡಿರಿ' (ಗ.ಭಾ. 1-16) ಎಂದಿದ್ದಾನೆ. ಇಲ್ಲಿ ಕುಮಾರವ್ಯಾಸ ದೊಡ್ಡವರಾದವರು, ಗುಣಗಳಿಂದ ಖ್ಯಾತರಾದವರು ಭಾವಕರು, ಶ್ರೇಷ್ಠ ಪಂಡಿತರೂ, ಸುಜನರೂ, ಸೂಕ್ತಿಕಾರರೂ ಈ ಎಲ್ಲವೂ ಆಗಿರುವ ಅಥವಾ ಇವುಗಳಲ್ಲಿ ಯಾವುದಾದರೂ ಒಂದು ಗುಣವುಳ್ಳವರು ನನ್ನ ಕಾವ್ಯವನ್ನು ತಿದ್ದಿ, ಸರಿಪಡಿಸಿ, ಮೆರೆಸಿ ನನಗೂ ಇಷ್ಟು ತಿಳುವಳಿಕೆ ನೀಡಿ ಎಂದು ವಿನಯದಿಂದ ಕೇಳಿಕೊಂಡಿದ್ದಾನೆ. ಇಷ್ಟು ಹೇಳಿದ ಮಾತ್ರಕ್ಕೆ ಸ್ವ ಮತ್ತು ಅನ್ಯ ಪರಿಭಾಷೆಯ ನಂಬಿಕೆಯಿಂದ ಕುಮಾರವ್ಯಾಸ ದೂರವಿದ್ದಾನೆ ಎಂದೇನೂ ಅರ್ಥವಲ್ಲ. ಇವನ ಕಾವ್ಯದಲ್ಲಿ ಈ ಭಾವ ಇದ್ದೇ ಇದೆ.

ನಮ್ಮ ಬಹುಪಾಲು ಕವಿಗಳು ಕಾವ್ಯವನ್ನು ತಿದ್ದಿಸುವ ಬಗ್ಗೆ ಹೇಳಿದರೆ ಪೊನ್ನನು ತನ್ನ ಕವಿ ವ್ಯಕ್ತಿತ್ವದ ಬಗ್ಗೆ ಹೇಳುವಾಗ ತನ್ನನ್ನು ಅಸಹಾಯ ಕವಿ ಎಂದು ಕರೆದುಕೊಳ್ಳುತ್ತಾನೆ. (ನೋಡಿ; ಶಾಂ.ಪು 12-75) ಇಲ್ಲಿ ಪೊನ್ನ ಇನ್ನೊಬ್ಬರಿಂದ ನಾನು ನನ್ನ ಕಾವ್ಯವನ್ನು ಶೋಧಿಸಿಲ್ಲ ಎಂದು ಹೇಳುತ್ತಾನೆ. ರಾಜರುಗಳಲ್ಲಿ ಯಾರ ಸಹಾಯವನ್ನೂ ಪಡೆಯದವನು ಅಸಹಾಯ ಶೂರನಾದರೆ ಯಾರ ಸಹಾಯವನ್ನೂ ಪಡೆಯದವನು ಅಸಹಾಯ ಕವಿ. ಪೊನ್ನನು ಅಸಹಾಯ ಕವಿ ಹೌದೋ ಅಲ್ಲವೋ ಆದರೆ ಸ್ವಲ್ಪ ಜಂಬ ಕೊಚ್ಚಿಕೊಳ್ಳುವ ಕವಿ ಎಂಬುದು ಮಾತ್ರ ನಿಜ.

ಒಟ್ಟಾರೆ ನಮ್ಮ ಬಹುಪಾಲು ಕವಿಗಳು ಮತ್ತು ಶಾಸ್ತ್ರಕಾರರು ನಮ್ಮ ಕಾವ್ಯಗಳಲ್ಲಿ ತಪ್ಪುಗಳು, ದೋಷಗಳು ಇರಬಹುದು ಎಂದು ಒಪ್ಪಿಕೊಳ್ಳುತ್ತಾರೆ. ನಮ್ಮ ಕಾವ್ಯವು ಸರ್ವಲಕ್ಷಣ ಸಂಪನ್ನ ದೋಷರಹಿತ ಕಾವ್ಯವೆಂದು ವಾದ ಹೂಡುವುದಿಲ್ಲ. ನಮ್ಮ ಕಾವ್ಯಗಳನ್ನು ತಿದ್ದಿ, ಸರಿಪಡಿಸಿ, ಮೆರೆಸಿ ಎಂದೆಲ್ಲ ಇವರು ಕೇಳುತ್ತಿರುವುದರ ಹಿಂದೆ ಪಠ್ಯದ ಖಾಸಗಿ ಒಡೆತನದಿಂದ ಬಿಡುಗಡೆ ಹೊಂದುವ ತತ್ವವೊಂದು ಅಡಗಿದೆ. ಕಾವ್ಯವು ಬರೆಯುವ ತನಕ ಅದು ಕವಿಯ ಉತ್ಪನ್ನ. ಬರೆಯುವಾಗಲೂ ಅದು ಕೆಲವರಿಗೆ ದೈವಾಯತ ಕ್ರಿಯೆ. ಬರೆದಾದ ಮೇಲೆ ಅದು ಜನರ ಎದುರಿಗೆ ಬಂದ ಮೇಲೆ ಜನರ ಒಡೆತನಕ್ಕೆ ಸೇರಿ ಹೋದಂತೆಯೇ ಲೆಕ್ಕ. ಜನರು-ಸುಜನರು ಇನ್ನು ಅದನ್ನು ತಿದ್ದಬಹುದು-ಸರಿಪಡಿಸಬಹುದು-ಮೆರೆಸಬಹುದು. ಛಂದಸ್ಸು, ಅಲಂಕಾರ, ಸಂಧಿ, ಸಮಾಸ, ಶಿಥಿಲದ್ವಿತ್ವ, ಪ್ರಾಸ, ಯತಿ, ಗಣ ಇತ್ಯಾದಿ ನೆಲೆಯ ದೋಷಗಳನ್ನು ಮಾತ್ರವೇ ತಿದ್ದುವ-ಸರಿಪಡಿಸುವ ವಿಚಾರ ಇದು. ಇಡೀ ಕಾವ್ಯವನ್ನೇ ತಿದ್ದುವ ವಿಚಾರ ಇದಲ್ಲ. ಆದರೆ ನಮ್ಮ ಕೆಲ ಓದುಗರು ಇಂತಹ ಮಾತುಗಳನ್ನೆ ಪರವಾನಿಗಿಯಾಗಿ ಭಾವಿಸಿದಂತೆ ಕಾಣುತ್ತದೆ. ಹೀಗೆ ತಿಳಿದು ಕಾವ್ಯಗಳಿಗೆ ಪದ್ಯ ಪ್ರಸಂಗಗಳನ್ನೆ ಸೇರಿಸಿರುವವರೂ ಇದ್ದಾರೆ. ಇನ್ನೊಬ್ಬರ ಹೆಸರು, ಅಂಕಿತ, ಧಾಟಿಗಳಲ್ಲಿ ತಾವೇ ಪ್ರತ್ಯೇಕ ಕಾವ್ಯಗಳನ್ನು ರಚಿಸಿರುವವರೂ ಇದ್ದಾರೆ. (ನೋಡಿ; ಪ್ರಕ್ಷಿಪ್ತಗಳು)

### 1.2. ಕಾವ್ಯ ನಿರ್ವಚನ-ಕಾವ್ಯತತ್ವ

ಕಾವ್ಯವನ್ನು ಹೇಗೆ ಬರೆಯಬೇಕು? ಕಾವ್ಯವನ್ನು ಯಾತಕ್ಕಾಗಿ ಬರೆಯಬೇಕು ? ಎಂಥ ಕಾವ್ಯವನ್ನು ಬರೆಯಬೇಕು? ಕಾವ್ಯ ಎಂದರೆ ಏನು? ಇಂಥ ಪ್ರಶ್ನೆಗಳನ್ನು ನಮ್ಮ ಕವಿಗಳು ತಮಗೆ ತಾವೆ ಹಾಕಿಕೊಂಡು ಉತ್ತರಿಸಿದ್ದಾರೇನೋ ಎಂಬಂತೆ ಹಲವು ಪದ್ಯಗಳಲ್ಲಿ ಚರ್ಚೆ ನಡೆಸಿದ್ದಾರೆ. ಇಂಥ ಚರ್ಚೆಗಳ ಮೂಲಕ ಉತ್ತಮ ಕಾವ್ಯವೆಂದರೆ ಏನು? ಎಂಬ ತಮ್ಮದೇ ತತ್ವಗಳನ್ನು ಮಂಡಿಸಿದ್ದಾರೆ. ನಮ್ಮ ಲಾಕ್ಷಣಿಕರು ಕಾವ್ಯ ಎಂದರೆ ಏನು? ಎಂಬ ಪ್ರಶ್ನೆಯನ್ನು ಚರ್ಚಿಸುತ್ತ ಕಾವ್ಯನಿರ್ವಚನಕ್ಕೆ ಯತ್ನಿಸಿದ್ದರೆ ನಮ್ಮ ಕವಿಗಳು ಈ ಮೇಲಿನ ಕೆಲವು ಪ್ರಶ್ನೆಗಳನ್ನು ಎತ್ತಿಕೊಂಡು-ಕಾವ್ಯ ಸ್ವರೂಪ, ಕಾವ್ಯ ಕಾರಣ, ಕಾವ್ಯ ಪರಿಣಾಮಗಳನ್ನೆಲ್ಲ ಚರ್ಚಿಸಿದ್ದಾರೆ.

'ಮೃದು ಮಧುರ ವಚನ ರಚನೆಯನ್ನು, ಉದಾತ್ತವಾದ ಅರ್ಥಪ್ರತೀತಿಯನ್ನೂ' ಉಂಟುಮಾಡುವುದು ಕಾವ್ಯ. 'ಕಾವ್ಯವು ನಿತ್ಯವೂ ಹೊಸತೆಂಬಂತೆ ರಚಿತವಾಗಬೇಕು. ಕವಿತ್ವವೆಂಬುದು ಸಾಗರದಂತೆ ಅತಿ

ಗಂಭೀರವಾದದ್ದು' ಎಂದು ಪಂಪ ಹೇಳುತ್ತಾನೆ. ಹಾಗೆಯೇ 'ಕಥನದಲ್ಲಿ ವರ್ಣನೆಯು ಒಡಂಬಡುವಂತೆ' 'ದೇಸಿಯಲ್ಲಿ ಹೊಕ್ಕು ಮಾರ್ಗದಲ್ಲಿ ಪರಿಣಮಿಸುವಂತೆ' ಕಾವ್ಯವನ್ನು ರಚಿಸಬೇಕು ಎಂದು ಹೇಳುತ್ತಾನೆ. ಕಾವ್ಯವನ್ನು ನಮ್ಮ ಅನೇಕ ಕವಿಗಳು ಹೊಸ ದೇಸಿಯನ್ನು ಬಳಸಿ ನಿತ್ಯ ಹೊಸದೆಂಬಂತೆ ಹೇಳಬೇಕು ಎಂದು ಹೇಳಿದ್ದಾರೆ. ಹಳಬರು ಬರೆದುದನ್ನೇ ಮತ್ತೆ ಮರುಕಥನ ಮಾಡುವ ನಮ್ಮ ಕವಿಗಳಿಗೆ ಸ್ವಂತಿಕೆಯ ಪ್ರಶ್ನೆ ಸಾಕಷ್ಟು ಕಾಡಿದೆ. ಹಾಗಾಗಿ ನಮ್ಮ ಬಹುಪಾಲು ಕವಿಗಳು 'ಹೊಸ ದೇಸಿ'ಯ ಬಗ್ಗೆ ಮಾತನಾಡುತ್ತಾರೆ. ಕಾವ್ಯದ ಹೊಸತನದ ಬಗ್ಗೆ ಮಾತನಾಡುತ್ತಾರೆ. ವಸ್ತುವನ್ನು ತನ್ನದೇ ಭಾಷೆ-ಶೈಲಿ-ಕಾವ್ಯಧರ್ಮಗಳಲ್ಲಿ ಹೊಸದಾಗಿ ಹೇಳುವುದರಲ್ಲೆ ಸ್ವಂತಿಕೆ ಇರುತ್ತದೆ ಎಂಬುದು ನಮ್ಮ ಕವಿಗಳ ಅಭಿಪ್ರಾಯ.

ಪಂಪನು ಸಾಗರಕ್ಕೆ ಕಾವ್ಯವನ್ನು ಹೋಲಿಸಿದಂತೆ ನಮ್ಮ ಕವಿಗಳು ಕಾವ್ಯಗಳನ್ನು ಕಲ್ಪವೃಕ್ಷ, ಕಾಮಧೇನು, ಆಕಾಶ, ಅರಣ್ಯ, ಪರುಷಮಣಿ, ಅಮೃತ, ನದಿ, ಬೆಳಕು, ಆತ್ಮಸಂತಾನ, ಇತ್ಯಾದಿಗಳಿಗೆಲ್ಲ ಹೋಲಿಸಿದ್ದಾರೆ. ಹಾಗೆ ಬೇರೆ ಬೇರೆ ಸಂಗತಿಗಳಿಗೆ ಹೋಲಿಸುವ ಮೂಲಕ ಕಾವ್ಯವೆಂದರೆ ಅದು ಅಸಾಧಾರಣವಾದದ್ದು; ಅಸಾಮಾನ್ಯವಾದದ್ದು, ಲೋಕದ ಶ್ರೇಷ್ಠ ವಸ್ತುಗಳಲ್ಲಿ ಇದೂ ಒಂದು ಎಂಬ ತತ್ವವನ್ನು ಪ್ರತಿಪಾದಿಸಿದ್ದಾರೆ. ಪ್ರಕೃತಿಯ ಸಂಗತಿಗಳಿಗೆ ಕಾವ್ಯದ ಗುಣಗಳನ್ನು ಹೋಲಿಸುತ್ತ ಕಾವ್ಯದಿಂದ ಉಂಟಾಗಬಹುದಾದ ಲೌಕಿಕ-ಅಲೌಕಿಕ, ಮಾನಸಿಕ-ದೈಹಿಕ-ಆತ್ಮ ಸಂಬಂಧಿ ಸೌಖ್ಯಗಳನ್ನು ವರ್ಣಿಸಿದ್ದಾರೆ. ಕಾವ್ಯವನ್ನು ಹೆಣ್ಣಿಗೆ, ದೇವತೆಗೆ, ಪಣ್ಯವನಿತೆಗೆ, ಕನ್ಯಾಮಣಿಗೆ ಹೋಲಿಸುತ್ತ ಅದೊಂದು ಆನಂದ ಸಾಧನ-ಭೋಗಸಾದನ-ಆಕರ್ಷಕ ವಿರೋಧಲಿಂಗ ಎಂಬಂತೆಲ್ಲ ಪ್ರತಿಪಾದಿಸಿದ್ದಾರೆ.

ಕಾವ್ಯವು ಸಹಜವೂ, ಅಲಂಕಾರಬದ್ಧವೂ, ವ್ಯಾಕರಣಬದ್ಧವೂ, ಛಂದೋಬದ್ಧವೂ, ಧ್ವನಿಪೂರ್ಣವೂ, ಮಧುರವೂ, ಸೂಕ್ತಿಗರ್ಭಿತವೂ, ಪದಾರ್ಥಪೂರ್ಣವೂ, ಕೋಮಲವೂ, ರಸಪೂರ್ಣವೂ, ಚತುರವೂ, ಗುಣಪೂರ್ಣವೂ, ದೋಷರಹಿತವೂ, ಸರ್ವಾಂಗಸುಂದರವೂ, ಆನಂದದಾಯಕವೂ, ಮನೋಹರವೂ, ಹೀಗೆ ಏನೆಲ್ಲವೂ ಆಗಿರಬೇಕು ಎಂದು ಲಕ್ಷಣಗಳ ಬಹುದೊಡ್ಡ ಯಾದಿಯನ್ನೇ ಸೃಷ್ಟಿಸಿದ್ದಾರೆ. ಕಾವ್ಯವು ಒಟ್ಟಾರೆ ಸುಲಕ್ಷಣವಾಗಿರಬೇಕು.

'ಈಗಾಗಲೇ ಅನೇಕ ಜನ ಶ್ರೇಷ್ಠ ಕವಿಗಳು ಬರೆದ ಕಾವ್ಯಗಳೇ ಈ ಲೋಕದ ತುಂಬ ತುಂಬಿರುವಾಗ, ಅವುಗಳನ್ನು ನೋಡಿ ತೃಪ್ತಿ ಪಡದೆ ಮತ್ತೆ ಯಾಕೆ ಈ ಕವಿಗಳು ಹೊಸ ಕಾವ್ಯಗಳನ್ನು ಬರೆಯುತ್ತಾರೋ? ಈ ರೀತಿ ಮಾತನಾಡುವ ಮಾತ್ಸರ್ಯಪರರಿಗೆ ಪುತ್ರಸಂಪತ್ತು ನನಗೇಕೆ ಬೇರೆಯವರ ಮಕ್ಕಳನ್ನೆ ನೋಡಿ ತೃಪ್ತಿ ಪಟ್ಟರೆ ಆಗುವುದಿಲ್ಲವೇ? ಎಂದೇ ಹೇಳಬೇಕಾಗುತ್ತದೆ' (ರಾ.ವಿ. 1-35) ಎಂಬ ಷಡಕ್ಷರಿಯ ಮಾತನ್ನು ನಮ್ಮ ಬಹುಪಾಲು ಎಲ್ಲ ಕವಿಗಳೂ ನಂಬಿ ಆಚರಣೆಗೆ ತಂದಿರುವಂತೆ ಕಾಣುತ್ತದೆ. ಲೋಕದಲ್ಲಿ ಎಷ್ಟೇ ಕಾವ್ಯಗಳು ಇರಲಿ, ಎಂಥೆಂಥ ಕಾವ್ಯಗಳೇ ಇರಲಿ ತಾವೂ ಕಾವ್ಯಗಳನ್ನು ರಚಿಸುತ್ತ ಬಂದಿದ್ದಾರೆ. ಶ್ರೇಷ್ಠವಾದ ಕಾವ್ಯವನ್ನು ಕಟ್ಟಬೇಕು. ಅಂದವಾದ ಕಾವ್ಯವನ್ನು ಕಟ್ಟಬೇಕು ಎಂಬ ಆಕಾಂಕ್ಷೆ ಎಲ್ಲ ಕವಿಗಳಲ್ಲೂ ಇದೆ. ನಮ್ಮ ಕವಿಗಳು ಯಾರೂ ಅಲ್ಪ ತೃಪ್ತರಲ್ಲ. ಲೋಕದಲ್ಲಿ, ಶಾಶ್ವತವಾಗಿ, ಅಜರಾಮರವಾಗಿ ರವಿ ಶಶಿ ಧರೆಗಳಿರುವವರೆಗೆ ಉಳಿಯುವ ಕಾವ್ಯ ಕಟ್ಟಬೇಕು ಎಂಬುದೆ ನಮ್ಮವರೆಲ್ಲರ ಆಕಾಂಕ್ಷೆ ಮತ್ತು ತತ್ವ. 'ಕೋಮಲ ಗುಣವು ಹೊಂದಿ ಬಂದಂತೆ ಕೂಡಿರಲು, ಆಯ್ದು ಜೋಡಿಸಿದ ಪದಗಳು ಹೂವಿನಂತೆ ಇರಲು, ಬಣ್ಣವು ಬೆಡಗೆನಿಸಲು, ಸ್ವರವು ಹೊಸತಾಗಲು, ನುಣ್ಪು ಒಡಂಬಟ್ಟಿರಲು, ಬಂಧವು ಹೊಂದಿಕೊಂಡಿರಲು, ಚತುರತೆಗಳು ಚೆನ್ನಾಗಿ ವೃದ್ಧಿಸಲು ಬಾಸಿಂಗವನ್ನು ಕಟ್ಟುವಂತೆ ಕಾವ್ಯವನ್ನು ಕವಿಯು ಶ್ರೇಷ್ಠವಾಗಿ ಕಟ್ಟಬೇಕು'. (ಲೀಲಾ.ಪ್ರ. 1-62) ಕವಿಯು ಕಾವ್ಯವನ್ನು ಹೇಗೆ ಬರೆಯಬೇಕೆಂದರೆ ಸರ್ವಲಕ್ಷಣಸುಂದರವಾಗಿ, ಶ್ರೇಷ್ಠವಾಗಿ ಬರೆಯಬೇಕು. ಸರ್ವಲಕ್ಷಣ ಸುಂದರವಾಗಿ ಇರುವುದೇ ಶ್ರೇಷ್ಠವಾದ ಕಾವ್ಯ. ಯಾವ ಒಂದು ಲಕ್ಷಣವೂ ಹೆಚ್ಚಾಗಲಿ, ಕಡಿಮೆಯಾಗಲಿ ಆಗಬಾರದು. ಎಲ್ಲವೂ ಎಷ್ಟೆಷ್ಟು ಚೆಂದ ಇರಬೇಕೋ ಅಷ್ಟಷ್ಟೆ ಇರಬೇಕು. ಕವಿತೆಯನ್ನು ಕಟ್ಟಿದರೆ ಅದು ಕೃತಕವಾಗಿ ಕಾಣಬಾರದು. ಸಹಜವಾಗಿ ಇರಬೇಕು. ಶಾಸ್ತ್ರದ ಬಲ ಎಷ್ಟೇ ಇದ್ದರೂ, ರಸ, ಅಲಂಕಾರಾದಿ ಲಕ್ಷಣಗಳ ಪ್ರಮಾಣ ಏನೇ ಇದ್ದರೂ ಕಾವ್ಯದಲ್ಲಿ ಸಹಜತೆ ಇರಲೇ ಬೇಕು. 'ಮಳೆಯೇ ಇಲ್ಲದೆ ಬರಿ ಹೊಯ್ಯುವ ನೀರಿನಿಂದ ಭೂಮಿಯು ಬೆಳಗಲು ಸಾಧ್ಯವೇ? ಶಾಸ್ತ್ರದ ಬಲದಿಂದ ಕಷ್ಟಪಟ್ಟು ಹೇಳಿದ ಸಹಜತೆ ಇಲ್ಲದವನ ಕಾವ್ಯವು ಕೋಮಲವಾಗಲು ಸಾಧ್ಯವೇ? ಉಪ್ಪೇ ಇಲ್ಲದ ಊಟಕ್ಕೆ ಒಕ್ಕಳ ತುಪ್ಪ ಸುರಿದು ತಿಂದರೆ ತಾನೆ ಅದೇನು ಊಟವೆ? ಸ್ವಲ್ಪವಾದರೂ ಸಹಜತೆ ಇಲ್ಲದವನ ಕವಿತೆಯು ರುಚಿಪಡೆದು ಸ್ವಾದಿಷ್ಟವಾಗಲು ಸಾಧ್ಯವೇ?' (ಧರ್ಮಾ. 1. 46 ಮತ್ತು 50) ಮಳೆಯ ನೀರಿಗೂ ನಾವೇ ಕಯ್ಯಿಂದ ಹೊಯ್ಯುವ ನೀರಿಗೂ ಬಹಳ ವ್ಯತ್ಯಾಸವಿದೆ. ಶಾಸ್ತ್ರದ

ಬಲದಿಂದ ಕಟ್ಟಲ್ಪಟ್ಟ ಕಾವ್ಯಕ್ಕೂ, ಸಹಜವಾಗಿ ಹುಟ್ಟಿದ ಕಾವ್ಯಕ್ಕೂ ಬಹಳ ವ್ಯತ್ಯಾಸವಿದೆ. ತುಪ್ಪ ಮತ್ತು ಉಪ್ಪುಗಳು ಎರಡೂ ಹದವಾಗಿ ಬೆರೆತರೇನೆ ಊಟ ಸ್ವಾದಿಷ್ಟವಾಗಿ ಇರುವುದು. ಹಾಗಾಗಿ ಕಾವ್ಯ ಕೂಡ ಕೊಂಚ ಕಟ್ಟಾಣಿಕೆಯ ಪ್ರತಿಭೆ ಮತ್ತು ಕೊಂಚ ಸಹಜ ಪ್ರತಿಭೆಗಳು ಬೆರೆತು ಸಂಭವಿಸಿದ ಉತ್ಪನ್ನ. 'ಸಹಜ ಸಂಭವಿ ಕಾವ್ಯ' ಮತ್ತು 'ರಚಿತ ಕಾವ್ಯ' ಎಂಬ ಎರಡು ತರತಮ ಪ್ರಭೇದಗಳನ್ನು ನಮ್ಮವರು ಮಾಡುವುದಿಲ್ಲವಾದರೂ ಸಹಜವಾಗಿ ಕಾವ್ಯ ಕಟ್ಟುವ ಪ್ರತಿಭೆ ಮತ್ತು ಕಾವ್ಯ ಕಟ್ಟಲೇಬೇಕೆಂದು ಉದ್ದೇಶಿಸಿ ಕಷ್ಟಪಟ್ಟು ಕೃತಕವಾಗಿ ಕಾವ್ಯ ಕಟ್ಟುವ ಕೆಲಸ ಇವುಗಳ ನಡುವೆ ಸಹಜ ಪ್ರತಿಭೆಯಿಂದ ಕಟ್ಟಿದ ಕಾವ್ಯ ಶ್ರೇಷ್ಠ ಎಂದು ನಮ್ಮವರು ನಂಬುತ್ತಾರೆ. ಇದು ಶ್ರೇಷ್ಠತೆಯ ತತ್ವವಲ್ಲದೆ ಬೇರೆ ಅಲ್ಲ.

'ಒರೆ ಹಚ್ಚಿದಾಗ ಚಿನ್ನದಂತೆ ಹೊಳೆಯದಿದ್ದರೆ, ಹಿಂಡಿದಾಗ ಚಿಲ್ಲೆಂದು ಕಬ್ಬಿನ ಜಲ್ಲೆಯಂತೆ ರಸವು ಚಿಮ್ಮದಿದ್ದರೆ, ಸರಮಾಡಿ ಕೊರಳಿಗೆ ಹಾಕಿಕೊಂಡಾಗ ಮಣಿಹಾರದಂತೆ ಕಾಂತಿಯು ಹೊಮ್ಮದಿದ್ದರೆ ಆ ಕಾವ್ಯವು ಧರಣಿಯಲ್ಲಿ ರಸಜ್ಞರಿಗೆ ಮನೋಜ್ಞ ಆಗಬಲ್ಲುದೆ?' (ರಾ.ಪ. 1-51) 'ಕಬ್ಬಿಗರು ಓದುಗಬ್ಬವನ್ನು ಹಾಡುಗಬ್ಬವನ್ನು ರಚಿಸುವುದಾದರೆ ಕಬ್ಬಿನಂತೆ ರಚಿಸಬೇಕೇ ವಿನಾ ಬಿದಿರಿನಂತೆ ಅಲ್ಲ.' (ಭ.ವೈ. 1-6) ಚಿನ್ನಕ್ಕೆ, ಮಣಿಹಾರಕ್ಕೆ, ಕಬ್ಬಿನ ಜಲ್ಲೆಗೆ ಕಾವ್ಯವನ್ನು ಹೋಲಿಸುವ ನಮ್ಮ ಕವಿಗಳು ಸಹಜ ಸಂಭವಿ ಕಾವ್ಯದ ಜೊತೆಗೆ ಕುಸುರಿ ಕೆಲಸದಿಂದ, ಪರಿಶ್ರಮದಿಂದ ಉತ್ತಮವಾದ ಕಾವ್ಯವನ್ನು ಕಟ್ಟುವ ಕವಿಶ್ರಮಕ್ಕು ಕೂಡ ಪ್ರಾಶಸ್ತ್ಯ ಕೊಡುತ್ತಾರೆ. ಕಾವ್ಯವು ಮನೋಜ್ಞವಾಗಿರಬೇಕು, ಶ್ರೇಷ್ಠವಾಗಿರಬೇಕು ಎಂಬುದರಲ್ಲಿ ಯಾರಲ್ಲಿಯೂ ಭಿನ್ನಾಭಿಪ್ರಾಯವಿಲ್ಲ. ಆದರೆ ನಮ್ಮವರ ಈ ಶ್ರೇಷ್ಠತೆಯ ತತ್ವ ಮಂಡನೆಯ ವಿಧಾನಗಳು ಭಿನ್ನ ಅಷ್ಟೆ. ಪಾಂಡಿತ್ಯ, ಪರಿಶ್ರಮ, ವ್ಯುತ್ಪತ್ತಿ, ಪ್ರತಿಭೆ ಇವೆಲ್ಲವುಗಳ ಸಮ್ಮೇಳನದಿಂದ ನಮ್ಮ ಪ್ರಾಚೀನರು ಶಾಸ್ತ್ರಬದ್ಧ-ಛಂದೋಬದ್ಧವಾಗಿ ಕಾವ್ಯವನ್ನು ರಚನೆ ಮಾಡುತ್ತಿದ್ದುದರಿಂದ ನಮ್ಮ ಜನಪದರ ಸಹಜ ಸಂಭವಿ-ಆಶುಕಲ್ಪನಾ ಕಾವ್ಯಕ್ಕಿಂತ ಭಿನ್ನವಾದ ಕಟ್ಟಾಣಿಕೆಯ ಕಾವ್ಯ ತತ್ವವನ್ನು ಪ್ರತಿಪಾದಿಸಿದ್ದಾರೆ. ಹಾಗೆ ನೋಡಿದರೆ ನಮ್ಮ ಪ್ರಾಚೀನರ ಸ್ವಕಾವ್ಯ ಸ್ವರೂಪ ನಿರ್ವಚನ, ಪೂರ್ವಕವಿ ಸ್ಮರಣೆ, ಕವಿ-ಸಹೃದಯ ಮೀಮಾಂಸೆ, ಓದು-ವಿಮರ್ಶೆ-ಪರೀಕ್ಷೆಗಳ ಚಿಂತನೆ ಹೀಗೆ ಕಾವ್ಯಕ್ಕೆ ಸಂಬಂಧಿಸಿದ ಎಲ್ಲ ರೀತಿಯ ಚಿಂತನೆಗಳಲ್ಲೂ ಕಾವ್ಯತತ್ವವೇ ಪರೋಕ್ಷವಾಗಿ ಬಿಂಬಿತವಾಗಿದೆ. ತಮ್ಮ ಕಾವ್ಯಗಳ ಪೀಠಿಕಾ ಸಂಧಿಯಲ್ಲಿ ಈ ಎಲ್ಲಾ ವಿಚಾರಗಳನ್ನು ಕಾವ್ಯ ರೂಪಿಯಾಗಿಯೇ ಚಿಂತಿಸುವುದನ್ನು ಒಂದು ಸಂಪ್ರದಾಯವೆಂಬಂತೆ ನಮ್ಮ ಎಲ್ಲ ಕವಿಗಳು ಪಾಲಿಸುತ್ತ ಬಂದಿದ್ದಾರೆ. ಕಾವ್ಯ ಲಕ್ಷಣಗಳ ಬಗೆಗೆ, ಅಷ್ಟಾದಶವರ್ಣನೆಗಳ ಬಗೆಗೆ ಏನೇ ಹೇಳಲಿ ಈ ಪೀಠಿಕಾ ಸಂಧಿಗಳ ಕಾವ್ಯತತ್ವ-ಕಾವ್ಯ ಸಮರ್ಥನೆಯ ವಿಚಾರ ಮಂಡನೆಯು ನಮ್ಮ ಎಲ್ಲಾ ಪ್ರಾಚೀನ ಮಹಾಕಾವ್ಯಗಳ ಒಂದು ಅಗತ್ಯ ಲಕ್ಷಣವಾಗಿದೆ.

### 1.2.1. ನೈತಿಕ ಬದ್ಧತೆ ಮತ್ತು ಕವಿ ಕಾವ್ಯತತ್ವ

ಪಂಪನು ಧರ್ಮ ಮತ್ತು ಕಾವ್ಯ ಧರ್ಮಗಳನ್ನು ಒಟ್ಟಿಗೆ ಕಾವ್ಯದಲ್ಲಿ ಕಾಣಿಸಬಲ್ಲವನು ಒಳ್ಳೆಯ ಕವಿ ಎಂದು ಹೇಳಿದರೆ, ಬಸವಣ್ಣನು ನಡೆ ಮತ್ತು ನುಡಿಗಳು ಒಂದಾಗಿದ್ದಾಗಲೆ ಆತ ಒಳ್ಳೆಯ ಕವಿಯಾಗಲು ಸಾಧ್ಯ ಎನ್ನುತ್ತಾನೆ. ಶ್ರೀವಿಜಯ ಕೂಡ ಇದೇ ಮಾರ್ಗದಲ್ಲಿ ಕವಿ ನಿರ್ವಚನ ಮಾಡುತ್ತ ನೀತಿ ಮತ್ತು ಕವಿತಾ ನೀತಿಗಳೆರಡನ್ನು ಬಲ್ಲವರು ಕೆಲವೇ ಜನರು. ಅವರೇ ಕವಿವೃಷಭರು ಎನ್ನುತ್ತಾನೆ. ಯಾವುದು ಪಾಪ, ಯಾವುದು ಪುಣ್ಯ, ಯಾವುದು ಹಿತ, ಯಾವುದು ಅಹಿತ ಎಂದು ತಿಳಿಸಬಲ್ಲ ಕಾವ್ಯವೆ ನಿಜವಾದ ಕಾವ್ಯ. ಅಂತಹ ಕವಿತ್ವ ರಚನೆ ಮಾಡಬಲ್ಲಾತನೆ ನಿಜವಾದ ಕವಿ ಎಂದು ಶ್ರೀವಿಜಯ ಹೇಳುತ್ತಾನೆ. (ಕ.ರಾ.ಮಾ. 1-12,18) ನಮ್ಮವರಲ್ಲಿ ನೈತಿಕತೆಯ ಪ್ರಜ್ಞೆ ಮತ್ತು ಕಾವ್ಯರಚನೆಗಳ ನಡುವೆ ಒಂದು ಅನ್ಯೋನ್ಯವಾದ ಸಂಬಂಧವಿದೆ. ನೈತಿಕ ಬದ್ಧತೆ ಇಲ್ಲದವನು ಒಳ್ಳೆಯ ಕವಿಯಲ್ಲ. ನೀತಿ ಅನೀತಿಗಳ, ಪಾಪ ಪುಣ್ಯಗಳ ವ್ಯತ್ಯಾಸವನ್ನು ತಿಳಿಸದ ಕಾವ್ಯ ಒಳ್ಳೆಯ ಕಾವ್ಯ ಅಲ್ಲ. ಎಂಬುದು ನಮ್ಮವರ ಕಾವ್ಯತಾತ್ವಿಕತೆ. ನೈತಿಕ ಎಚ್ಚರದಿಂದ ಕಾವ್ಯ ಬರೆಯುವ ಜೊತೆಗೆ ನೀತಿಮಾರ್ಗವನ್ನು ಹೇಳುವ ಕಾವ್ಯ ರಚಿಸಬೇಕು. ಅಲ್ಲದೆ ಕವಿಯಾದವನು ನುಡಿದಂತೆ ನಡೆಯಬೇಕು. ಕಾವ್ಯದಲ್ಲಿ ಬರಿ ಬದನೆಕಾಯಿ ಹೇಳಿದರೆ ಆಗದು. ಬರೆದಂತೆ ಬಾಳಬೇಕು. ಇಂತಹ ತಾತ್ವಿಕತೆಯನ್ನು ಬೆನ್ನಿಗೆ ಕಟ್ಟಿಕೊಂಡಿರುವುದರಿಂದ; ನೈತಿಕತೆ ಮತ್ತು ಅನೈತಿಕತೆ, ಪಾಪ ಮತ್ತು ಪುಣ್ಯ, ಒಳಿತು ಮತ್ತು ಕೆಡುಕು, ಸನ್ನಡತೆ ಮತ್ತು ದುರ್ನಡತೆ ಇವುಗಳ ಭೇದಗಳನ್ನು ಕಟ್ಟಿಕೊಡುವ ಕಥನ ಜಿಜ್ಞಾಸೆಯೇ ನಮ್ಮ ಕಾವ್ಯಗಳ ಮುಖ್ಯ ಕಾಳಜಿಯಾಗಿದೆ. ಇದೇ ಹಿನ್ನೆಲೆಯ ತಾತ್ವಿಕ ಭೂಮಿಕೆಯನ್ನೂ ನಮ್ಮವರು ಹೊಂದಿದ್ದಾರೆ. ಈ ವಿಚಾರದಲ್ಲಿ ನಮ್ಮವರಲ್ಲಿ ತತ್ವಕ್ಕೂ ಮತ್ತು ಆಚರಣೆಗೂ ಅನ್ಯೋನ್ಯವಾದ ಸಾಮ್ಯ ಕಾಣುತ್ತದೆ. (ಇನ್ನಷ್ಟು ವಿವರಗಳಿಗೆ ನೋಡಿ: ಕವಿ ಸಹೃದಯ ಮೀಮಾಂಸೆ)

### 1.2.2. ಸರಸ್ವತಿ ಸ್ತುತಿ–ರೂಪಕ ಮಾರ್ಗದ ಕಾವ್ಯತತ್ವ

ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆಗಳಲ್ಲಿ ಈ ಸರಸ್ವತಿ ರೂಪದ ಕಾವ್ಯ ಕಲ್ಪನೆಯೂ ಒಂದು ಎಂದು ಈಗಾಗಲೇ ವಿದ್ವಾಂಸರು ಗುರ್ತಿಸಿದ್ದಾರೆ.[1] ಪೂರ್ವಕವಿ ಸ್ಮರಣೆಯಂತೆಯೇ ನಮ್ಮಲ್ಲಿ ದೇವ–ದೇವತೆಗಳನ್ನು ಸ್ತುತಿಸುವುದು–ಪ್ರಾರ್ಥಿಸುವುದು ಕವಿಗಳಲ್ಲಿ ಒಂದು ಸಂಪ್ರದಾಯವೆಂಬಂತೆ ನಡೆದುಕೊಂಡು ಬಂದಿದೆ. ಪ್ರತಿಯೊಂದಕ್ಕು ದೈವತ್ವವನ್ನು ಆರೋಪಿಸುವುದು ಮತ್ತು ಪ್ರತಿಯೊಂದಕ್ಕು ಒಬ್ಬೊಬ್ಬ/ಳು ಅಧಿದೈವವನ್ನು ಲಗತ್ತಿಸುವುದು ನಮ್ಮಲ್ಲಿನ ಒಂದು ಆದಿಮ ಆಚರಣೆ. ಗಾಳಿಗೆ, ಮಣ್ಣಿಗೆ, ನದಿಗೆ, ಸಮುದ್ರಕ್ಕೆ, ಆಕಾಶಕ್ಕೆ, ಔಷಧಿಗಳಿಗೆ, ಮಳೆಗೆ, ಬೆಂಕಿಗೆ ಹೀಗೆ ಲೋಕದ ಪ್ರತಿಯೊಂದಕ್ಕೂ ನಮ್ಮವರು ಒಂದೊಂದು ಅಧಿದೈವವನ್ನು ಕಲ್ಪಿಸಿದ್ದಾರೆ. ಇದರಂತೆ ವಿದ್ಯೆಯ ಅಧಿದೇವತೆಯಾಗಿ ಸರಸ್ವತಿ ಮತ್ತು ಗಣೇಶರನ್ನು ಕಲ್ಪಿಸಿದ್ದಾರೆ. ಕನ್ನಡ ಸಾಹಿತ್ಯ ಪ್ರೌಢತೆಗೆ ಬರುವ ಹೊತ್ತಿಗೆ ಈ ದೇವತೆಗಳು ವೈದಿಕ ದೇವತೆಗಳೆಂದು ಸ್ವೀಕೃತವಾಗಿದ್ದರು. ಹಾಗಾಗಿ ನಮ್ಮ ಜೈನ, ವೀರಶೈವ ಕವಿಗಳಲ್ಲಿ ಸರಸ್ವತಿಯನ್ನು ಅಷ್ಟಾಗಿ ಗಂಭೀರವಾಗಿ ಸ್ತುತಿಸಿ–ಆವಾಹಿಸಿಕೊಂಡಂತೆ ಕಾಣುವುದಿಲ್ಲ.[2]

ಆದಿಪುರಾಣದಲ್ಲಿ 'ಪರಮಜಿನೇಂದ್ರ ವಾಣಿಯೆ ಸರಸ್ವತಿ' ಎಂದು ಜಿನೇಂದ್ರವಾಣಿಯನ್ನು ಸರಸ್ವತಿ ಎಂದ ಪಂಪ ತನ್ನ ಭಾರತದಲ್ಲಿ 'ವಾಙ್ಮಯಂ ಅನಿತರ್ಕಂ ಅಂಬಿಕೆ ಸರಸ್ವತಿ' ಎಂದು ಹೇಳಿದ್ದಾನೆ. ರನ್ನ ನಾನು 'ವಾಗ್ದೇವಿಯ ಭಂಡಾರದ ಮುದ್ರೆ'ಯನ್ನು ಒಡೆದಿದ್ದೇನೆ ಎಂದು ಹೇಳಿದ್ದಾನೆ. ಸರಸ್ವತಿ ರೂಪದ ಸ್ತ್ರೀ ತತ್ವದ ಮೂಲಕ ತನ್ನದೇ ಕಾವ್ಯತತ್ವವನ್ನು ನಾಗಚಂದ್ರ ಮಂಡಿಸಿದ್ದಾನೆ. 'ವಚಶ್ರೀ ನರ್ತಕಿ ನೃತ್ಯವೇದಿಕೆ' ಮತ್ತು 'ವಿದ್ಯಾನಟಿ ನಾಟಕ' ಎಂಬ ಅವನ ಎರಡು ರೂಪಕಗಳೆ ಇದಕ್ಕೆ ಸಾಕ್ಷಿ. ವಾಕ್‌ಲಕ್ಷ್ಮಿಯು ನರ್ತನ ಮಾಡುವ ನೃತ್ಯವೇದಿಕೆಯೆ ಕಾವ್ಯ. ಹಾಗೇ ವಿದ್ಯೆ ಎಂಬ ನಟಿ ನಟಿಸುವ ನಾಟಕವೆ ಕಾವ್ಯ. ನೃತ್ಯ ಮತ್ತು ನಾಟಕಗಳನ್ನು ರೂಪಕಗಳಿಗೆ ಬಳಸಿ ಕಾವ್ಯತತ್ವವನ್ನು ಸ್ತ್ರೀ ರೂಪಕದ ಮೂಲಕ ನಾಗಚಂದ್ರ ಇಲ್ಲಿ ಮಂಡಿಸಿದ್ದಾನೆ.

ಸರಸ್ವತಿ ರೂಪದ ಸ್ತ್ರೀ ತತ್ವದ ಮೂಲಕ ಕಾವ್ಯತತ್ವ ಮಂಡಿಸಲು ತೊಡಗಿದ ನಮ್ಮ ಕವಿಗಳು ಅವಳನ್ನು ಅಬಲೆಯೆಂದೂ, ನರ್ತಕಿ, ನಟಿಯೆಂದೂ ಹಲವಾರು ರೀತಿಗಳಲ್ಲಿ ಉಪಮೆ–ರೂಪಕಗಳಲ್ಲಿ ಅಲಂಕರಿಸಿದ್ದಾರೆ. ಇವೆಲ್ಲ ಅಲಂಕಾರ ಮಾರ್ಗದ ಕಾವ್ಯತತ್ವಗಳು. ನಾಗವರ್ಮ ತನ್ನ ಕಾವ್ಯಾವಲೋಕನದಲ್ಲಿ ಕಾವ್ಯಪ್ರತಿಭೆಯ ಪ್ರತೀಕವಾದ ಈಕೆಯನ್ನು ವಾಕ್‌ಸತಿ ಎಂದರೆ, ಪಂಪ ಈಕೆಯನ್ನು ವಾಕ್‌ವಧು ಎಂದೂ, ಅಂಬಿಕೆ(ತಾಯಿ) ಎಂದೂ ಕರೆಯುತ್ತಾನೆ. ಧರ್ಮಾಮೃತದಲ್ಲಿ ನಯಸೇನ ವಾಕ್‌ಸುಂದರಿ ಎಂದರೆ ನಾಗಚಂದ್ರ ಈಕೆಯನ್ನು ತನ್ನ ಮಲ್ಲಿನಾಥಪುರಾಣದಲ್ಲಿ ವಾಗ್ದೇವತೆ ಎನ್ನುತ್ತಾನೆ. ನೇಮಿಚಂದ್ರ ತನ್ನ ಲೀಲಾವತಿಯಲ್ಲಿ ಸಿರಿವೋಲ್ ಸರಸ್ವತಿ, ಸರಸ್ವತಿಯೆಂಬ ತುಂಬಿ, ಕಾಮಸಂಜೀನಿ ಎಂದು ಕರೆದರೆ, ಜನ್ನ ಈಕೆಯನ್ನು ಅನಂತನಾಥಪುರಾಣದಲ್ಲಿ ಜಿನೇಂದ್ರ ವಾಗ್ವನಿತೆ ಎಂದಿದ್ದಾನೆ. ಕೇಶೀರಾಜನಾದರೋ ಈಕೆಯನ್ನು ತನ್ನ ಶಬ್ದಮಣಿದರ್ಪಣದಲ್ಲಿ ಇಳಾವಂದ್ಯೆ ಎಂದರೆ, ಜಯನೃಪ ಕಾವ್ಯದಲ್ಲಿ 3ನೆ ಮಂಗರಸನು ಇವಳನ್ನು ತರುಣೀಮಣಿ ಎಂದು ಕರೆದಿದ್ದಾನೆ.[3] ಹೀಗೆ ಸರಸ್ವತಿಯ ರೂಪದಲ್ಲಿ ಮಂಡಿತವಾಗಿರುವ ಕಾವ್ಯತತ್ವದಲ್ಲಿ ರೂಪಕ, ಉಪಮೆಗಳೇ ಪ್ರಧಾನವಾಗಿವೆ. ಕಾವ್ಯಸ್ವರೂಪವು ಮಂಡನೆಯಾಗುವುದು ಕಾವ್ಯರೂಪದಲ್ಲಿಯೆ ಆಗಿರುವುದರಿಂದ ನಮ್ಮ ಕವಿಗಳ ಬಹುಪಾಲು ಕಾವ್ಯತತ್ವ ಮಂಡನೆಯು ಅಲಂಕಾರಿಕವೂ ಆಗಿದೆ. ರೂಪಕ–ಉಪಮಾ ಮಾರ್ಗಗಳಲ್ಲೆ ನಮ್ಮವರು ಸಾಕಷ್ಟು ಬಾರಿ ಕಾವ್ಯ ತತ್ವ ಮಂಡಿಸಿದ್ದಾರೆ. ರೂಪಕ ಮಾರ್ಗದ ಕಾವ್ಯತತ್ವ ಎಂದು ಇದನ್ನು ಕರೆಯಬಹುದು.

### 1.2.3. ಕಾವ್ಯಕನ್ನಿಕೆಯ ಕಲ್ಪನೆ

ಒಂದು ಕೈಯಲ್ಲಿ ವೀಣೆ ಇನ್ನೊಂದು ಕಯ್ಯಲ್ಲಿ ಪುಸ್ತಕಗಳನ್ನು ಹಿಡಿದು ಗಂಭೀರ ಮುದ್ರೆಯಲ್ಲಿರುವ ಸರಸ್ವತಿಯ ಕಲ್ಪನೆಯೇ ಸಾಹಿತ್ಯ ಮತ್ತು ಸಂಗೀತಗಳನ್ನು ದೇವತೆಯ ಆಕೃತಿಯಲ್ಲಿ ಕಲ್ಪಿಸಿಕೊಂಡಿರುವ ಕಲ್ಪನೆ. ಆಕೆ ದೇವತೆಯಾಗಲಿ ಮಾನವಳಾಗಲಿ ಹೆಣ್ಣು ಎಂದ ಮೇಲೆ ಅವಳನ್ನು ಹೆಂಡತಿಯಂತೆ, ಸುಂದರಿಯಂತೆ, ಕನ್ನಿಕೆಯಂತೆ, ಮಗಳಂತೆ ಕಾಣುವ ಗಂಡು ದೃಷ್ಟಿಗೇನೂ ಕೊರತೆ ಇಲ್ಲ. ಹೀಗಾಗಿ ಸರಸ್ವತಿಯ ಕಾವ್ಯ ಕಲ್ಪನೆಯಲ್ಲಿ ದೇವತಾರೂಪಿ ಕಾವ್ಯ ಸ್ತ್ರೀಯನ್ನು ಪ್ರಾರ್ಥಿಸಿಕೊಳ್ಳುವ–ಬೇಡಿಕೊಳ್ಳುವ ಮಾತುಗಳಿದ್ದರೂ ಅವೆಲ್ಲವುಗಳ ಹಿಂದೆ ಪುರುಷ ಪ್ರಧಾನ ದೃಷ್ಟಿಕೋನವೇ ಇದೆ.

ವಿಶೇಷವೆಂದರೆ ಶ್ರೀವಿಜಯ ಒಬ್ಬನೇ ಕಾವ್ಯವನ್ನು ಪುರುಷರೂಪದಲ್ಲಿ ಕಲ್ಪಿಸಿಕೊಂಡಿರುವವನು. 'ಪರಮಾಲಂಕಾರಮುಂ ಶರೀರಮುಂ ಎಂದಿಂತು ಎರಡಕ್ಕುಂ ಭೇದಂ, ಬಹುಪರಿಕರಮಾ ಕಾವ್ಯವಸ್ತು ಪುರುಷರಿಂಗೆಂದುಂ'(ಕ.ರಾ.ಮಾ. 1-23) ಎಂದು ಕಾವ್ಯವನ್ನು ಪುರುಷನಿಗೆ ಸಮೀಕರಿಸಿದ್ದಾನೆ. ಆದರೆ ಇವನೇ ಮುಂದೆ ಕೃತಿವಧು, ಕೃತಿನಾರಿ ಎಂಬ ಕಲ್ಪನೆಗಳನ್ನು ಕೊಟ್ಟಿದ್ದಾನೆ. ಇವನನ್ನು ಅನುಸರಿಸಿದಂತೆ ನಾಗವರ್ಮ ಕಾವ್ಯಕೃತಿಯನ್ನು ಕೃತಿಸತಿ ಎಂದು ಕರೆದಿದ್ದಾನೆ. ಕಾವ್ಯವನ್ನು ತನ್ನ ಮಗಳಂತೆ ಭಾವಿಸಿರುವವನು ರಾಘವಾಂಕ. 'ರಸಜೀವ ಭಾವವೊಡಲರ್ಥವವಯವ.. .. ಧನ್ಯನೋ' ಇಲ್ಲಿ ರಾಘವಾಂಕ ತನ್ನ ಸುತೆಯಾದ ಕಾವ್ಯ ಕನ್ನಿಕೆಯನ್ನು ಇಷ್ಟದೈವ ಹಂಪೆಯ ವಿರೂಪಾಕ್ಷನಿಗೆ ಕೊಟ್ಟಿದ್ದಾನೆ. ಆತ 'ಪಂಪಾಂಬಿಕೆಯರಸ'ನಾದರೂ, ಈಗಾಗಲೇ ಪಂಪಾಂಬಿಕೆಯ ಗಂಡನಾಗಿದ್ದರೂ ವಿರೂಪಾಕ್ಷನಿಗೇ ತನ್ನ ಕನ್ನಿಕೆಯನ್ನು ಕೊಡುತ್ತಾನೆ.[4]

### 1.3. ಸ್ವಕಾವ್ಯ ಸ್ವರೂಪ ನಿರ್ವಚನ

ನಮ್ಮ ಹಳಗನ್ನಡ ಕಾವ್ಯಗಳಿಗೆ ಅವುಗಳ ಮೊದಲ ವಿಮರ್ಶಕರು ಆಯಾ ಕೃತಿಗಳನ್ನು ರಚಿಸಿದ ಕವಿಗಳೇ ಆಗಿದ್ದಾರೆ. ತಮ್ಮ ಕೃತಿಗಳ ಸ್ವರೂಪವನ್ನು ಕೆಲವೇ ಮಾತುಗಳಲ್ಲಿ ಸಂಕ್ಷಿಪ್ತವಾಗಿ ಬಹುಪಾಲು ಎಲ್ಲ ಕವಿಗಳೂ ನಿರ್ವಚಿಸಲು ಯತ್ನಿಸಿದ್ದಾರೆ. ಅಲ್ಲದೆ ತಮ್ಮ ಕಾವ್ಯವನ್ನು ತಾವು ಯಾಕೆ ಬರೆದೆವು, ಹೇಗೆ ಬರೆದಿದ್ದೇವೆ, ಈ ಕೃತಿಯ ಒಟ್ಟಾರೆ ಸ್ವರೂಪ ಎಂಥದ್ದು, ಇದನ್ನು ಹೇಗೆ ಹೇಗೆ ಓದಬಹುದು, ಇಲ್ಲಿ ಏನೇನು ತಿಳಿಯಬಹುದು, ಇದನ್ನು ಓದುವುದರಿಂದ ಯಾರ್ಯಾರಿಗೆ ಏನೇನು ಫಲ-ಪ್ರಯೋಜನ ಹೀಗೆ ಹಲವು ರೀತಿಯಲ್ಲಿ ತಮ್ಮ ಕಾವ್ಯಸ್ವರೂಪ ನಿರ್ವಚನವನ್ನು ನಮ್ಮ ಕವಿಗಳು ಮಾಡಿದ್ದಾರೆ. ಇದನ್ನು ಸ್ವಕಾವ್ಯ ಸ್ವರೂಪ ನಿರ್ವಚನ ಎನ್ನಬಹುದು. ಈ ನಿರ್ವಚನವು ನಮ್ಮ ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ರೂಪವಾಗಿದೆ.

ಸ್ವಕಾವ್ಯ ಸ್ವರೂಪ ನಿರ್ವಚನವು ಏಕಕಾಲಕ್ಕೆ ತನ್ನ ಕಾವ್ಯದ ಸ್ವರೂಪವು ಏನೆಂದು ವಿವರಿಸುವ ಕೆಲಸವನ್ನು ಹಾಗೆಯೇ ಒಂದು ಒಳ್ಳೆಯ ಕಾವ್ಯವೆಂದರೆ ಹೇಗಿರಬೇಕು ಎಂಬ ತನ್ನದೇ ಕಾವ್ಯತತ್ತ್ವ ಮಂಡನೆಯ ಕೆಲಸವನ್ನು ಮಾಡುತ್ತಿರುತ್ತದೆ. ಕಾವ್ಯ ವಿಮರ್ಶೆಯ ಮಾನದಂಡಗಳು ಯಾವುವು ಆಗಿರಬೇಕು, ಕಾವ್ಯ ನಿಕಷದ ವಿಧಾನಗಳು ಯಾವುವು ಆಗಿರಬೇಕು ಎಂಬ ಬಗ್ಗೆ ತಮ್ಮದೇ ನಿಲುವುಗಳನ್ನು ಈ ಸ್ವಕಾವ್ಯ ಸ್ವರೂಪ ನಿರ್ವಚನದ ಮಾತುಗಳು ಮಂಡಿಸುತ್ತವೆ. ಅಲ್ಲದೆ ಸ್ವಕಾವ್ಯ ಸ್ವರೂಪವನ್ನು ನಿರ್ವಚಿಸುವಾಗ ಕವಿಗಳ ಆತ್ಮ ಸ್ತುತಿಯ ಮಾತುಗಳೂ, ತಮ್ಮ ಕಾವ್ಯದ ಅಗ್ಗಳಿಕೆಯನ್ನು ಸ್ವಾಭಿಮಾನದಿಂದ ಹೇಳಿಕೊಳ್ಳುವ ಮಾತುಗಳೂ ಬರುತ್ತವೆ. ವಿನಯದ ಮಾತುಗಳೂ, ಅಹಂಕಾರದಿಂದ ತಮ್ಮನ್ನೆ ಕೊಚ್ಚಿಕೊಳ್ಳುವ ಮಾತುಗಳೂ ಬರುತ್ತವೆ. ಈ ಪ್ರವೃತ್ತಿಯು ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ಚಹರೆಯೂ ಆಗಿದೆ.

> ಪುದಿದ ಜಸಂ, ಪೊದಳ್ದ ಚಳಂ, ಒಂದಿದ ಅಳಂಕೃತಿ, ಕೈತ ದೇಸಿ ಯೆಂಬುದನ್ ಎನೆ,
> ವಸ್ತು ವಿದ್ಯೆ ಎನೆ, ಕಬ್ಬಮೆ ಮುನ್ನಂ ಅವಂತೆ ಇವಲ್ಲದೆ ಅಲ್ಲದೆ ಪೆರವಿಲ್ಲಕಬ್ಬಂ ಎನೆ,
> ಮುನ್ನಿನ ಕಬ್ಬಮನೆಲ್ಲಮನ್ ಇಕ್ಕಿ ಮೆಟ್ಟಿದುವು ಸಮಸ್ತ ಭಾರತಮುಂ ನೆಗಳ್ದ ಆದಿಪುರಾಣಮುಂ (ವಿ.ವಿ. 14-59)

ಪಂಪನು ವಿಕ್ರಮಾರ್ಜುನ ವಿಜಯದಲ್ಲಿ ತನ್ನ ಎರಡೂ ಕಾವ್ಯಗಳನ್ನು ನಿರ್ವಚಿಸುತ್ತ, ಅವುಗಳಲ್ಲಿ ಇರುವ ಗುಣಲಕ್ಷಣಗಳನ್ನು ಹೇಳುತ್ತ ನನ್ನ ಎರಡೂ ಕಾವ್ಯಗಳು ಈ ಮೊದಲಿನ ಎಲ್ಲ ಕಾವ್ಯಗಳನ್ನು ಮೀರಿ ಬೆಳೆದವು ಎಂದು ಹೇಳುತ್ತಾನೆ. ಇಂಥ ಮಾತುಗಳು ಸ್ವಕಾವ್ಯ ಸ್ವರೂಪವನ್ನು, ಹಾಗೇ ತಾವು ನಂಬಿದ ಕಾವ್ಯಕಲ್ಪನೆ (ಕಾವ್ಯದ ತಮ್ಮದೇ ಪರಿಕಲ್ಪನೆ) ಯನ್ನು ಬಿಂಬಿಸುತ್ತವೆ. ನಿಜಗುಣ ಶಿವಯೋಗಿ ತನ್ನ ಶಿವತತ್ತ್ವ ಚಿಂತಾಮಣಿಯನ್ನು 'ಮಹಾಕವಿತಾ ಪ್ರಬಂಧ' ಎಂದು ಕರೆದುಕೊಂಡಿದ್ದಾನೆ. 'ಸ್ಮೃತಿ, ಪುರಾಣ, ಇತಿಹಾಸ, ಪುರಾತನೋಕ್ತಿಗಳ ಅನುಸಾರದಿಂದ ಅನುಭವಿಗಳು ಅಹುದೆನಿಪಂತೆ, ಸ್ವಕಪೋಲಕಲ್ಪಿತಮಲ್ಲದ ಸಾರತರಮಾದ ಸತ್ಯಾರ್ಥಂಗಳನೆ ಸಂಗ್ರಹಿಸಿ... ಬೆಳುಗನ್ನಡಮಾದ ವಚನರಚನೆಗಳಿಂ ವಿವೇಕ ಚಿಂತಾಮಣಿಯೆಂಬ ಪ್ರಕರಣಮಂ ಪೇಳ್ವೆನ್'[5] ಎಂದು ತನ್ನ ಕಾವ್ಯಶಾಸ್ತ್ರವನ್ನು ವಚನ ರಚನೆಯ ಪ್ರಕರಣ ಎಂದೂ ಕರೆದುಕೊಂಡಿದ್ದಾನೆ.

'ಹುಲ್ಲಿನ ಎಸಳು, ವಸಂತದ ವೈಭವ, ಬೆಳದಿಂಗಳ ತಂಬೆಳಕು, ಮಲ್ಲಿಗೆಯ ಮೊಗ್ಗು, ಚಿಗುರಿ ಬೆಳೆದ ಮಾವು, ಸುಳಿದಾಡುವ ತೆಂಕಣ ಗಾಳಿ, ವೀಣೆಯ ನುಣ್ದನಿ, ನಲ್ಲೆಯ ಲಲ್ಲೆಮಾತು, ಕೋಗಿಲೆಯ ಕುಕಿಲು, ದುಂಬಿಯ ಗಾನ ಎನ್ನುವ ಹಾಗೆ ನಾಗಚಂದ್ರನ ಸತ್ಕೃತಿಯು ಬಲ್ಲವರನ್ನು ಮನ ಸೆಳೆಯುತ್ತಿದೆ ಎಂದು ಅನುರಾಗದಿಂದ ಭವ್ಯ ಜನಗಳು ಹೊಗಳುತ್ತಿರಲು; ಈ ಅಲಂಕಾರಿಕ ಕಥೆಯನ್ನು ನಿರ್ಮಿಸಿ ಈ

ಪರಿಯಲ್ಲಿ ಕವಿತಾರಸವನ್ನು ಪ್ರಕಟಪಡಿಸಿದ ಕವಿಗಳು ಈ ಮೊದಲು ಯಾರೂ ಇಲ್ಲ ಎಂದು ಮಹಾಕವೀಶ್ವರರೆಲ್ಲ ಒಬ್ಬೊಬ್ಬರೂ ಹೇಳಲು, ನಾನು ಇದನ್ನು ಬರೆಯಲು ತೊಡಗಿದೆನಲ್ಲದೆ ಈ ಮಲ್ಲಿಜಿನೇಂದ್ರ ಮಹಾಪುರಾಣವನ್ನು ಹೇಳುವುದು ನನ್ನಿಂದ ಸುಲಭವೇ?' (ಮ. ಪು. 1-44 ಮತ್ತು 45) ಎಂದು ನಾಗಚಂದ್ರ ಹೇಳುತ್ತಾನೆ. 'ಈ ಪರಿಯಲ್ಲಿ ಕವಿತಾರಸವನ್ನು ಪ್ರಕಟಪಡಿಸಿದ ಕವಿಗಳು ಈ ಮೊದಲು ಯಾರೂ ಇಲ್ಲ' ಎಂಬ ಮಾತು ಪಂಪನ 'ಮುನ್ನಿನ ಕಬ್ಬಮನೆಲ್ಲಮನಿಕ್ಕಿ ಮೆಟ್ಟಿದುವು' ಎಂಬ ಮಾತಿನ ಪಡಿನುಡಿಯಂತೆಯೇ ಇದೆ. ಇಲ್ಲಿ ಆತ್ಮಸ್ತುತಿ ಮತ್ತು ವಿನಯಗಳೆರಡೂ ಪ್ರಕಟವಾಗಿವೆ. ಈ ಮಾತುಗಳಲ್ಲಿ ಇಬ್ಬರಲ್ಲೂ ಪೂರ್ವ ಕಾವ್ಯ ವಿಮರ್ಶೆಯೂ ಪ್ರಕಟವಾಗಿದೆ.

ತನ್ನ ಕವಿತ್ವ ಮತ್ತು ಕಾವ್ಯದ ಬಗ್ಗೆ ತಾನೇ ಕವಿ ಹೇಳಿಕೊಂಡರೆ ಆ ವಿಮರ್ಶೆಯು ಹೇಗಿರುತ್ತದೆ ಎಂಬುದಕ್ಕೆ ಮೇಲಿನ ನಾಗಚಂದ್ರನ ಮಾತುಗಳು ಮಾದರಿಗಳಾಗಿವೆ. ಕವಿಯು ಒಟ್ಟಾರೆ ಕಾವ್ಯ ವ್ಯಾಪಾರದ ಬಗ್ಗೆ ಹೇಳುವುದಕ್ಕು ತನ್ನ ಕವಿತೆಯ ಬಗ್ಗೆ ತಾನೇ ಹೇಳಿಕೊಳ್ಳುವುದಕ್ಕು ಸಾಕಷ್ಟು ವ್ಯತ್ಯಾಸ ಇರುತ್ತದೆ. ನಮ್ಮ ಕವಿಗಳ ಸ್ವಕಾವ್ಯ ಸ್ವರೂಪ ಮಂಡನೆಯ ಬಹುತೇಕ ಮಾತುಗಳು ಅವರೇ ಹೇಳಿದ್ದರೂ ಯಾರೋ ಬೇರೆಯವರು ಅವರ ಕಾವ್ಯದ ಬಗ್ಗೆ ಮಾಡಿದ ವಿಮರ್ಶೆಗಳಂತೆಯೇ ಇವೆ.

### 1.3.1. ಸ್ವಕಾವ್ಯದ ಅಗ್ಗಳಿಕೆ

ನಮ್ಮಲ್ಲಿ ಸ್ವಕಾವ್ಯ ಸ್ವರೂಪವನ್ನು ಮಂಡಿಸುವಾಗ ಆತ್ಮವಿಮರ್ಶೆಗಿಂತಲೂ ಅಗ್ಗಳಿಕೆಯೇ ಹೆಚ್ಚಾಗಿ ವ್ಯಕ್ತವಾಗಿದೆ. ಕೆಲವು ಕಡೆಯಂತೂ ಅದು ಅಗ್ಗಳಿಕೆಯನ್ನೂ ಮೀರಿ ಕೊಚ್ಚಿಕೊಳ್ಳುವ ಮಾತೂ ಆಗಿ ಕಾಣುತ್ತದೆ. ಅಭಿಮಾನವು ಆತ್ಮಸ್ತುತಿಯಂತೆ-ಅಹಂಕಾರದಂತೆ ಕೂಡ ಪ್ರಕಟವಾಗಿದೆ. ಇದನ್ನೆಲ್ಲ ಅಪ್ರಸ್ತುತ ಎಂದು ತೆಗೆದು ಹಾಕುವಂತಿಲ್ಲ. ನಮ್ಮ ಪ್ರಾಚೀನ ವಿಮರ್ಶೆಯಲ್ಲಿ ಇದೂ ಒಂದು ಭಾಗ.

> ರಸಮಂ ಭಾವಮುಮಂ ಕಾ/ಳಸಮಂ ಕುಣಿಕೆಯುಮನರೆದು ಕವಿಮಾರ್ಗದೊಳಂ
> ಪೊಸ ದೇಸೆಯ ನುಡಿಗಳೊಳಂ/ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗ.ಯು. 1-39)

ಇಲ್ಲಿ ರನ್ನ ತನ್ನನ್ನು ತಾನು ಚತುರ್ಮುಖ ಬ್ರಹ್ಮ ಎಂದು ಕರೆದುಕೊಂಡಿದ್ದಾನೆ. ಇಷ್ಟೇ ಅಲ್ಲ. ಈತ ತನ್ನನ್ನು ತಾನು 'ಸರಸ್ವತಿಯ ಭಂಡಾರ ಬೀಗ ಮುದ್ರೆಯನ್ನು ಒಡೆದವನು' ಎಂದೂ ಬಣ್ಣಿಸಿಕೊಂಡಿದ್ದಾನೆ. ತಮ್ಮನ್ನು ತಾವು ಬಣ್ಣಿಸಿಕೊಳ್ಳುವಲ್ಲಿ, ತಮ್ಮ ಕಾವ್ಯದ ಅಗ್ಗಳಿಕೆಯನ್ನು ತಾವೇ ಬಣ್ಣಿಸುವಲ್ಲಿ ಯಾರಿಗೆ ಯಾರೂ ಕಡಿಮೆಯಲ್ಲ. ಒಬ್ಬರಿಗಿಂತ ಇನ್ನೊಬ್ಬರು ಮಿಗಿಲು.

'ಸುರತರುವಿನಂತೆ, ಸುಜನರ ಸಿರಿಯಂತೆ, ಕಮಲದಂತೆ, ಅಮೃತದಂತೆ, ಚಂದ್ರನ ಕಿರಣದಂತೆ ಹಂಪೆಯ ಹರಿಹರನ ಈ ಕಾವ್ಯವು ನೂತನವೂ ಅಖಿಲಜನ ಸೇವ್ಯವೂ ಆದುದು' (ಗಿ.ಕ. 1-17). ಇಲ್ಲಿ ಹರಿಹರ ಬೆಳದಿಂಗಳು, ಅಮೃತ, ಕಲ್ಪವೃಕ್ಷ ಇತ್ಯಾದಿಗಳಿಗೆ ತನ್ನ ಕಾವ್ಯವನ್ನು ಉಪಮಿಸಿಕೊಂಡಿದ್ದಾನೆ. ಆಂಡಯ್ಯನಾದರೋ 'ಎಳೆಗಿಳಿವಿಂಡಿನಂತೆ, ಮಿಳಿರ್ದಾಡುವ ತುಂಬಿಯ ಸಮೂಹದಂತೆ, ಕೆಂದಳಿರ್ಗಳ ತೊಂಗಲಂತೆ, ನಡೆನೋಡುವ ಪೆಂಡಿರ ನೋಟದಂತೆ, ಪೂಗಳ ಪೊಸಗಂಪಿನೊಳ್ ಪೊರೆದು ತೀಡುವ ತಂಬೆಲರಂತೆ, ತೋರ್ಪ ತಿಂಗಳ ಸಿರಿಯಂತೆ...' (ಕ.ಕಾ. 1-14) ಎಂದು ಬಣ್ಣಿಸಿಕೊಂಡಿದ್ದಾನೆ. ಕಾವ್ಯವನ್ನು ಪೆಂಡಿರ ನೋಟಕ್ಕೆ ಹೋಲಿಸಿರುವ ಈತ ಹರಿಹರನಂತೆ ಪ್ರಕೃತಿಯ ಬೇರೆ ಬೇರೆ ಅಂಗಗಳೊಂದಿಗೆ ತನ್ನ ಕಾವ್ಯವನ್ನು ಹೋಲಿಸುತ್ತ ಹಾಗೆ ಹೀಗೆ ಎಂದು ಕೊಚ್ಚಿಕೊಂಡಿದ್ದಾನೆ. ಪ್ರಕೃತಿಯ ಸೊಬಗು ಎಂಥವನನ್ನೂ ಸೆಳೆಯುವಂಥದ್ದು. ಆ ಸೊಬಗು ಕಾವ್ಯಗಳಿಗೆ ಇರಬೇಕು ಎಂದು ಹೇಳುವ ಮೂಲಕ ಇವರೆಲ್ಲ ಸಹಜತೆಯು ಉತ್ತಮ ಕಾವ್ಯದ ಒಂದು ಲಕ್ಷಣ ಎಂದೇ ಹೇಳುತ್ತಿದ್ದಾರೆ. ಪ್ರಕೃತಿಯ ಅಂದ ಸ್ವಕಾವ್ಯದ ಅಗ್ಗಳಿಕೆಯನ್ನು ಹೇಳಲು ಇವರಿಗೆ ಉಪಮೆಗೆ ಒದಗಿದೆ.

ಲಕ್ಷ್ಮೀಶ ಇವರಿಗಿಂತ ಭಿನ್ನವಾಗಿ ತನ್ನ ಕಾವ್ಯದ ಅಗ್ಗಳಿಕೆಯನ್ನು ಹೇಳಿಕೊಂಡಿದ್ದಾನೆ. 'ಪುಣ್ಯಮಿದು ಕೃಷ್ಣಚರಿತಾಮೃತವು, ಸುಕವೀಂದ್ರ ಗಣ್ಯಮಿದು, ಶೃಂಗಾರ ಕುಸುಮ ತರು ತುರುಗಿದಾ ಅರಣ್ಯಮಿದು, ನವರಸ ಪ್ರೌಢಿಮೆ ಲಾಲಿತ್ಯ ನಾನಾ ವಿಚಿತ್ರಾರ್ಥಗಳ ಅಗಣಿತ ಗಣಿಯಿದು, ಶಾರದೆಯ ಸಮ್ಮೋಹನಾಂಗ ಲಾವಣ್ಯವಿದು, ಭಾವುಕರ ಕಿವಿಗೆ ತೊಡುಗೆ ಎಂಬಂತೆ ಒದಗಿದ ರತ್ನವಿದು. (ಜೈ.ಭಾ. 38-46) ಎಂದು ಹೇಳಿಕೊಂಡಿದ್ದಾನೆ. ಇಲ್ಲೆಲ್ಲ ಉತ್ತಮ ಕಾವ್ಯವೆಂದರೆ ಹೇಗಿರಬೇಕು? ಆ ಕಾವ್ಯದಲ್ಲಿ ಏನೇನು ಇರಬೇಕು? ಎಂಬ ತತ್ವಗಳು ಮಂಡಿತವಾಗಿವೆ. ಅವು ಮಂಡಿತವಾಗಿರುವುದು ಮಾತ್ರ ಆತ್ಮಸ್ತುತಿಯ ಸ್ವರೂಪದಲ್ಲಿ.

ಹರಿಹರ, ಆಂಡಯ್ಯ ಮತ್ತು ಲಕ್ಷ್ಮೀಶ ಈ ಮೂವರೂ ಕೂಡ 'ಅಖಿಲಜನಸೇವ್ಯ', 'ಸೋಲಿಸದೆ ಕಬ್ಬವಮ್ ಅದಾರನಾದೊಡಂ' 'ಭೂತಳದಲ್ಲಿ ವಿರಾಜಿಸುವುದು, ಇಂಥ ಮಾತುಗಳನ್ನು ಬಳಸುತ್ತ ಸರ್ವರಿಗೂ ಕಾವ್ಯವು ಸಲ್ಲುವಂತಿರಬೇಕು ಎಂಬ ತತ್ವವನ್ನು ಮಂಡಿಸುತ್ತಿದ್ದಾರೆ. ಈ ಮೂವರಿಗಿಂತಲು ಭಿನ್ನವಾಗಿ ನಂಜುಂಡಕವಿಯು 'ಪ್ರೀತಿ ಬಂದರೆ ಕೊರಡೂ ಕೂಡ ಕೊನರುವುದಿಲ್ಲವೇ? ಕವಿ ಕುಲ ಜಾತಿಗೀತಿಯನೀಕ್ಷಿಸುವುದೇ?' (ಕು.ರಾ.ಸಾಂ. 1–96) ಎಂದು ಪ್ರಶ್ನೆ ಕೇಳುತ್ತಾನೆ. ವಿಶೇಷವೆಂದರೆ ಈ ನಂಜುಂಡಕವಿಯೇ ಹಿಂದೂ ಮತ್ತು ಮುಸ್ಲಿಮರ ನಡುವಿನ ಯುದ್ಧವನ್ನು ವರ್ಣಿಸುವಾಗ ರಾಮನಾಥ ಚರಿತೆಯಲ್ಲಿ ಧರ್ಮಾತೀತನಂತೆ ಏನೂ ಕಾಣುವುದಿಲ್ಲ.

'ಇನಿಯಳ ಸ್ಪರ್ಶದಂತೆ, ಹೊಸ ಮಾವಿನ ಹೂವಿನ ಗೊಂಚಲಂತೆ, ಗಂಧರಸದ ಲೇಪನದಂತೆ, ಮೊಗ್ಗರಳಿದ ಮಲ್ಲಿಗೆಯಂತೆ, ಪೂರ್ಣಚಂದ್ರನ ಸಿರಿಯಂತೆ, ಬಂದು ಸೋಂಕುವ ತೆಂಕಣ ತಂಗಾಳಿಯಂತೆ ರುದ್ರಭಟ್ಟನ ಕವಿತಾರಸವು ಸಜ್ಜನರ ಮನವನ್ನು ಸೂರೆಗೊಳ್ಳುವುದು' (ಜ.ವಿ. 1–16). 'ನುಡಿ, ಲಕ್ಷಣಾರ್ಥ, ರಸ, ಭಾವ, ತಿಳಿದ ಉಗ್ಗಡದ ಕವಿಗಳ ಕಾವ್ಯದ ಎದುರಿನಲ್ಲಿ ನನ್ನ ಜಡಮತಿಯಿಂದ ಈಶ್ವರನನ್ನು ಬಣ್ಣಿಸುತ್ತಿದ್ದೇನೆ ಎಂದು ನನ್ನನ್ನು ನೋಡಿ ನಗಬೇಡ. ಯಾಕೆ ಗೊತ್ತಾ? ಕೈಯ ಮೇಲೆ ಕೈಯನಿಟ್ಟು ಭಾಷೆ ಕೊಟ್ಟು ಹೇಳುತ್ತೇನೆ ಕೇಳು; ಬಡವರ ಮನೆಯ ಸೊಡರು ಕಂದುವುದೇ? ಗಿಡ್ಡ ಹಸುವು ಕರೆದ ಹಾಲು ಕಹಿಯಾಗುವುದೇ? ನನ್ನ ಕೃತಿ ಅಡವಿಯಲ್ಲೂ ಕೂಡ ಸಲ್ಲುತ್ತದೆ. ಇದನ್ನು ನಂಬು ಸಂಶಯವೇಕೆ?' (ಹ.ಕಾ. 1–21) ಇಲ್ಲಿ ರುದ್ರಭಟ್ಟ ಮತ್ತು ಹರಿಹರ ಈ ಇಬ್ಬರ ಮಾತುಗಳಲ್ಲಿ ತಮ್ಮ ಕಾವ್ಯದ ಯಶಸ್ಸಿನ ಬಗೆಗೆ ಅದಮ್ಯವಾದ ಆತ್ಮವಿಶ್ವಾಸ ಪ್ರಕಟವಾಗಿದೆ. ತಮ್ಮ ಕಾವ್ಯದ ಅಗ್ಗಳಿಕೆಯನ್ನು ಕಾವ್ಯರೂಪದಲ್ಲಿಯೇ ಹೇಳುವಾಗ ಉಪಮೆ ರೂಪಕಾದಿ ಮಾರ್ಗಗಳ ಮೂಲಕ ಕಾವ್ಯಾತ್ಮಕ ಭಾಷೆಯಿಂದ ನಮ್ಮ ಕವಿಗಳು ಕಾವ್ಯಸ್ವರೂಪ ತತ್ವವನ್ನು ಮಂಡಿಸಿದ್ದಾರೆ. ಹಾಗಾಗಿ ಸ್ವಕಾವ್ಯದ ಸ್ವರೂಪವೇ ಆಗಿರಲಿ, ಇನ್ನಾವುದೇ ವಿಚಾರ ಆಗಿರಲಿ, ಎಲ್ಲ ತತ್ವಗಳ ಮಂಡನೆಯಲ್ಲೂ ನಮ್ಮವರು ಕವಿಗಳೂ ವಿಮರ್ಶಕರೂ ಆಗಿದ್ದಾರೆ. ಹಾಗಾಗಿ ಇವರನ್ನು 'ಕವಿವಿಮರ್ಶಕರು' ಎಂದು ಕರೆಯಲು ಅಡ್ಡಿಯಿಲ್ಲ.

> ವ್ಯಾಸ ವಚನಾಮೃತ ವಾರ್ಧಿಯನ್ ಈಸುವೆನ್ ಕವಿವ್ಯಾಸನೆನ್ ಎಂಬ ಗರ್ವಮೆನಗಿಲ್ಲ'
> ಎಂದು ಪಂಪ ಹೇಳಿದರೆ, ಶಾಂತಿನಾಥನು ತನ್ನ ಸುಕುಮಾರ ಚರಿತದಲ್ಲಿ
> ಅಮಳಕೃತಿ ತಾಯೆತ್ತ ಭ್ರಮು/ಸಮಾ ಅಲ್ಪ ಮತಿಯೆತ್ತ ಪೇಳ್ದೆ ನಾಮ್ ಗಡಂ ಏಂ ಚಿ
> ತ್ರಮೋ ಬಹುಲ ಬಹಲ ಗಗನ/ಪ್ರಮಾಣಮಂ ತಳದೊಳಳೆದು ಕಂಡರುಮ್ ಒಳರೇ? (ಸು.ಚ. 1–58)

ನಮ್ಮಲ್ಲಿ ಹಲವಾರು ಜನ ಕಾವ್ಯವನ್ನು ಸಾಗರಕ್ಕೆ ಹೋಲಿಸಿದ್ದಾರೆ. ಆದರೆ ಶಾಂತಿನಾಥ ಕಾವ್ಯವನ್ನು ಇಲ್ಲಿ ಆಕಾಶಕ್ಕೆ ಹೋಲಿಸಿದ್ದಾನೆ. ಬಹುಳ ಬಹಳ ಗಗನಪ್ರಮಾಣವನ್ನು ತಳದಿಂದ ಅಳೆಯುವ ಕ್ರಿಯಾರೂಪಕದ ಮೂಲಕ ಕಾವ್ಯರಚನೆಯ ಅಗ್ಗಳಿಕೆಯನ್ನು ಅಹಂಕಾರ ನಿರಸನದ ನೆಲೆಯಲ್ಲಿ ಬಣ್ಣಿಸಿದ್ದಾನೆ. ಕಾವ್ಯವೆಂದರೆ ಅದು ಕೈಗೆ ನಿಲುಕದ ಅಗಾಧ, ಅನೂಹ್ಯ, ಅಪ್ರಮಾಣು ಎಂಬ ಕಲ್ಪನೆ ಶಾಂತಿನಾಥನಲ್ಲಿದೆ. ಆಕಾಶವನ್ನು ತಳದಿಂದ ಅಳೆಯುವ ಕ್ರಿಯಾರೂಪಕವೇ ಕಾವ್ಯ ಕಟ್ಟಾಣಿಕೆಯ ಕುರಿತ ತತ್ವ ಮಂಡನೆಯೂ ಆಗಿದೆ. ಶಾಂತಿ ಪುರಾಣದಲ್ಲಿ ಕಮಲಭವನು 'ನನ್ನ ಕಾವ್ಯವು ಅಪರಿಮಿತವಾದ ಅರ್ಥ, ಭಾವ, ರಸಗಳ ಧಾರೆಯನ್ನು ಕರೆಯುವ ಕವಿತಾ ಕಾಮಧೇನು' (ಶಾಂ.ಪು. 1–58) ಎಂದು ಹೇಳಿಕೊಂಡಿದ್ದಾನೆ. ಹರಿಹರ ತನ್ನ ಕಾವ್ಯವು 'ಸುರತರುವಿನಂತೆ' ಇದೆ ಎಂದು ಆಕಾಶ, ಸಾಗರ, ಕಾಮಧೇನು, ಕಲ್ಪವೃಕ್ಷಗಳೇ ಅಲ್ಲದೆ ಬೆಳಂದಿಗಳು, ತಂಗಾಳಿ, ಗಿಳಿಮಾತು, ನದಿ, ಅರಣ್ಯ ಹೀಗೆ ಹಲವು ರೀತಿಗಳಲ್ಲಿ ಉಪಮಿಸಿದ್ದಾನೆ. ಹೀಗೆ ಸ್ವಕಾವ್ಯ ಸ್ವರೂಪ ನಿರ್ವಚನದಲ್ಲಿ ನಮ್ಮ ಕವಿಗಳು ತಮ್ಮ ಕಾವ್ಯಗಳನ್ನು ಉಪಮಿಸಿ ಬಣ್ಣಿಸುವ ಮೂಲಕವೇ ಕಾವ್ಯಸ್ವರೂಪದ ತತ್ವಗಳನ್ನೂ ಮಂಡಿಸಿದ್ದಾರೆ.

### 1.3.2. ಸಮನ್ವಯ ತತ್ವ

ಕಾವ್ಯವನ್ನು ನಾನು ಹೇಗೆ ಬರೆಯುತ್ತಿದ್ದೇನೆ ಎಂಬುದನ್ನು ರತ್ನಾಕರ ಹೀಗೆ ಹೇಳಿಕೊಂಡಿದ್ದಾನೆ; 'ಆಗಮವು, ಆಧ್ಯಾತ್ಮವು ಅಳವಟ್ಟು; ಶೃಂಗಾರ, ತ್ಯಾಗ, ಭೋಗದ ಮೋಡಿ ಮೆರೆಯೆ; ಭೋಗಿ ಯೋಗಿಗಳ ಎದೆ ಜುಮ್ಮು ಜುಮ್ಮನೆ ನೇಮದಾಗಿ ಸೊಲ್ಲಿಸುವೆನಾಲಿಸಿರೋ' (ಭ.ವೈ.1–9) ಸ್ವಕಾವ್ಯ ಸ್ವರೂಪ ವಿವರವೇ ಹೇಗೆ ಕಾವ್ಯಸ್ವರೂಪ ನಿರ್ವಚನವೂ, ಕಾವ್ಯಕಲ್ಪನೆಯ ಮಾತೂ ಆಗುತ್ತದೆ ಎಂಬುದಕ್ಕೆ ಈ ಮಾತೂ ಒಂದು ಉದಾಹರಣೆ. ಭೋಗಿ ಯೋಗಿಗಳೆಲ್ಲರ ಎದೆ ಜುಮುಗುಡುವಂತೆ ಕಾವ್ಯವು ಇರಬೇಕು. ಕೇವಲ ಆಧ್ಯಾತ್ಮಿಕ ವಿಚಾರ ಅಥವಾ ಕೇವಲ ಶೃಂಗಾರ ವಿಚಾರ ಮಾತ್ರ ಹೇಳಿದರೆ ಸಾಲದು. ಬದುಕು ಇವೆರಡನ್ನು ಒಳಗೊಂಡಿರುವುದರಿಂದ ಕಾವ್ಯವು ಇವೆರಡನ್ನು ಒಳಗೊಳ್ಳಬೇಕು. ಆಗ ಮಾತ್ರ ಅದು ಉತ್ತಮ ಕಾವ್ಯ ಆಗಲಿಕ್ಕೆ ಸಾಧ್ಯ ಎಂಬ ಕಾವ್ಯಕಲ್ಪನೆ ಇಲ್ಲಿದೆ.

ಯೋಗ ಭೋಗಗಳ ಸಮನ್ವಯವನ್ನು ಈತ ಪ್ರತಿಪಾದಿಸಿದರೆ ದೇಸಿ ಮಾರ್ಗಗಳ ಸಮನ್ವಯವನ್ನು ರನ್ನ ಪ್ರತಿಪಾದಿಸಿದ್ದಾನೆ. 'ನೆಗಳ್ದ ರಸಂ ಮನಂಗೊಳಿಸೆ, ಮಾರ್ಗಮೊಡಂಬಡೆ, ದೇಸಿ ಕಬ್ಬಮಂ ಬಗೆಗೊಳಲ್ ಇಂತು ಪೇಳ್ದುದು' (ಗ.ಯು.1–36) ಮಾರ್ಗವು ದೇಸಿಯ ಜೊತೆ ಒಡಂಬಟ್ಟು ಮನಮೋಹಿಸುವಂತೆ ರಸವು ಒಳಗೊಂಡಿರುವ ಕಾವ್ಯ ನನ್ನದು ಎಂದು ರನ್ನ ಇಲ್ಲಿ ಹೇಳುತ್ತಲೇ ಇಂತಹದ್ದು ಒಂದು ಕಾವ್ಯ ಆಗುತ್ತದೆ ಎಂದು ಹೇಳುತ್ತಿದ್ದಾನೆ.

ಸ್ವಕಾವ್ಯ ಸ್ವರೂಪವನ್ನು ಹೇಳುವಾಗ ನಮ್ಮ ಕವಿಗಳು ಮಾರ್ಗ ದೇಸಿ, ಕನ್ನಡ–ಸಂಸ್ಕೃತ, ವಸ್ತುಕ–ವರ್ಣಕ, ಆಗಮಿಕ–ಲೌಕಿಕ, ಧರ್ಮ ಮತ್ತು ಕಾವ್ಯಧರ್ಮ, ಪುರಾತನ (ಪುರಾಣ)–ನೂತನ, ಇತಿಹಾಸ–ಪುರಾಣ, ಚರಿತೆ–ಪುರಾಣ, ಲೀಲೆ–ಚಾರಿತ್ರ್ಯ–ಪುರಾಣ–ವಿಲಾಸ, ಭಕ್ತಿ–ರಕ್ತಿ, ಭೋಗ–ಯೋಗ....ಹೀಗೆ ಅನೇಕ ಭಿನ್ನ ಮತ್ತು ಅವಳಿ ವಿಚಾರಗಳನ್ನು ಸಮನ್ವಯಗೊಳಿಸಿ ತಮ್ಮ ಕಾವ್ಯಗಳನ್ನು ರಚಿಸಿದ್ದೇವೆಂದು ಹೇಳಿಕೊಂಡಿದ್ದಾರೆ. ಆ ಮೂಲಕ ತಮ್ಮದೇ ಕಾವ್ಯಕಲ್ಪನೆಯ ಸಮನ್ವಯ ತತ್ವವೊಂದನ್ನು ಮಂಡಿಸಿದ್ದಾರೆ.

'ಆದಿಪುರಾಣದೊಳ್ ಅರಿವುದು ಕಾವ್ಯಧರ್ಮಮುಮಂ ಧರ್ಮಮುಮಂ' (ಆ. ಪು. 1–38) 'ಪೆಸರ್ಗೊಂಡು ಇಂದ್ರ ನರೇಂದ್ರ.. ತಚ್ಚರಿತಮಂ ಕಾವ್ಯಂಗಳೊಳ್ ಕೂಡೆ ಬಣ್ಣಿಸಿ' ಹೇಳಿದ್ದೇನೆ (ಆ. ಪು. 1–38); 'ವರ್ಣಕಂ ಕತೆಯೊಳ್ ಒಡಂಬಡಂ ಪಡೆಯೆ ಪೇಳ್ವೊಡೆ ಪಂಪನೆ ಪೇಳ್ಗುಂ' (ವಿ. ವಿ. 14–60) ಹೀಗೆ ಹಲವು ಕಡೆ ಹಲವು ರೀತಿಯಲ್ಲಿ ತನ್ನದು ಸಮನ್ವಯ ಕಾವ್ಯ ಪದ್ಧತಿ ಎಂಬುದನ್ನು ಪಂಪ ಸ್ಪಷ್ಟಪಡಿಸಿದ್ದಾನೆ. ಧರ್ಮವನ್ನು ಪ್ರಚಾರ ಮಾಡುವ ಸಾಧನವನ್ನಾಗಿ ಮತ್ತು ಧಾರ್ಮಿಕ ಆಚರಣೆಗಳಿಗೆ ಪರಿಕರಗಳನ್ನಾಗಿ ಕಾವ್ಯವನ್ನು ಬಳಸಿಕೊಂಡಿರುವುದು ನಮ್ಮಲ್ಲಿ ಸಾಮಾನ್ಯವಾಗಿ ನಡೆದುಕೊಂಡು ಬಂದಿದೆ. ಪಂಪ ತನ್ನ ಕಾವ್ಯದಲ್ಲಿ ಧರ್ಮ ಮತ್ತು ಕಾವ್ಯಧರ್ಮ ಎರಡನ್ನು ಹೇಳಿದ್ದೇನೆ ಎಂದು ಹೇಳಿ ಹಾಕಿಕೊಟ್ಟ ಮಾರ್ಗ ಇಡೀ ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಬಹುಪಾಲು ಎಲ್ಲ ಕವಿಗಳಿಂದ ಆಚರಣೆಗೆ ಗುರಿಯಾಗಿದೆ. ವಚನಕಾರರಲ್ಲಿ ಅದು ಭಕ್ತಿಯಾಗಿ ಹೊರಳಿಕೊಂಡಿತಾದರೂ ಕಾಲಾನಂತರದಲ್ಲಿ ಅದು ಕೂಡ. ಧರ್ಮವೇ ಆಗಿ ಪರಿವರ್ತಿತವಾಗಿದೆ.[6]

ಪಂಪ ಆದಿಪುರಾಣ ಪೀಠಿಕೆಯಲ್ಲಿ ಒಂದು ಕಡೆ ಆದಿಪುರಾಣವನ್ನು 'ಆದಿದೇವ ಚರಿತಂ' ಎಂದು ಹೇಳಿದರೆ ಇನ್ನೊಂದು ಕಡೆ 'ಆದಿಪುರಾಣ ವಸ್ತು ಕೃತಿ' ಎಂದೂ ಹೇಳಿದ್ದಾನೆ. ಅಂದರೆ ಇವನ ಆದಿಪುರಾಣ ಚರಿತೆಯೂ ಹೌದು ಪುರಾಣವೂ ಹೌದು. ಈತ ಆದಿದೇವನ ಚರಿತದಲ್ಲಿ 'ಬೆಡಂಗಪ್ಪ ಮಾರ್ಗ ದೇಸೆ'ಗಳೆರಡನ್ನೂ ಒಟ್ಟಿಗೇ ಸಮನ್ವಯ ಮಾಡಿದ್ದೇನೆ ಎಂದೂ ಹೇಳಿದ್ದಾನೆ. ಬೆಡಗು ಎಂಬುದಕ್ಕೆ ನಮ್ಮಲ್ಲಿ ಒಳಪಂಗಡ–ಭೇದ ಎಂಬ ಅರ್ಥವೂ ಇದೆ. ದೇಸಿ ಮತ್ತು ಮಾರ್ಗ ಎಂಬವು ಕಾವ್ಯ ಬರವಣಿಗೆಯ ಎರಡು ಭೇದಗಳಾಗಿರಬಹುದು. ಆ ಎರಡನ್ನೂ ಇಲ್ಲಿ ಒಟ್ಟಿಗೆ ಈತ ಸಮನ್ವಯಗೊಳಿಸಿದ್ದಾನೆ. ದೇಸಿ–ಮಾರ್ಗಗಳ ಸಮನ್ವಯ ದಾರಿಯನ್ನು ಮೊದಲು ಹಾಕಿಕೊಟ್ಟವನು ಶ್ರೀವಿಜಯ;

> ನುಡಿಗಳ್ ಒಡಂಬಡಲ್ ಬಗೆದವೋಲ್ ಬಗೆಯಂ ಮಿಗಲೀಯದೊಂದೆ ನಾ
> ಳ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
> ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ
> ಗುಡಿವಿಡುವಂತೆ ನೀಳ್ದು ನಿಲೆ ಪೇಳ್ವುದು ನೀತಿನಿರಂತರ ಕ್ರಮಮಂ (ಕ.ರಾ.ಮಾ. 1–149)

ಇಲ್ಲಿ ಭಾಷಾ ಶೈಲಿಯ ದೃಷ್ಟಿಯಿಂದ ದೇಸಿ ಮಾರ್ಗಗಳ ಸ್ವರೂಪವನ್ನೆ ವಿವರಿಸಿದೆ. ದೇಸಿಯಾದ ಕನ್ನಡ ಮಾತಿನಲ್ಲಿ ನಾಣ್ನುಡಿಯ ಬೆಡಗು ಕೂಡಿಕೊಂಡಿರಬೇಕು. ಸಂಸ್ಕೃತ ಶಬ್ದಗಳು ಕರ್ಕಶವಾದ ಶಬ್ದಗಳಲ್ಲಿ ತೊಡರಿಕೊಳ್ಳದೆ ಹವಣಾಗಿ ಪ್ರಯೋಗವಾಗಿರಬೇಕು. ಹೀಗಿದ್ದರೆ ಕಾವ್ಯ ಬಳ್ಳಿಯಂತೆ ಸಹಜವಾಗಿ ದಾಂಗುಡಿಯಿಡುತ್ತ ಶೋಭಿಸುತ್ತದೆ. ಸಂಸ್ಕೃತದ ಪ್ರಾಬಲ್ಯ ಇರಕೂಡದು ಎಂಬ ಎಚ್ಚರಿಕೆಯೂ ಇಲ್ಲಿ ಅಡಕವಾಗಿದೆ. ಕವಿರಾಜಮಾರ್ಗ ಮುಂದಿಟ್ಟ ಮಾರ್ಗ ದೇಸಿಗಳ ಸಮನ್ವಯದ ಆದರ್ಶವನ್ನು (ಬಹುಶಃ ಮನಸ್ಸಿನಲ್ಲಿ ಇಟ್ಟುಕೊಂಡು) ಪಂಪ ವಿಕ್ರಮಾರ್ಜುನ ವಿಜಯದಲ್ಲಿ ಇದನ್ನೇ ಇನ್ನಷ್ಟು ಸ್ಪಷ್ಟವಾಗಿ, ಸುಂದರವಾಗಿ ವರ್ಣಿಸಿದ್ದಾನೆ.

> ಬಗೆ ಪೊಸತಪ್ಪುದಾಗೆ, ಮೃದು ಬಂಧದೊಳ್ ಒಂದುವುದು ಒಂದಿ, ದೇಸಿಯೊಳ್ ಪುಗುವುದು ಪೊಕ್ಕು, ಮಾರ್ಗದೊಳ್ ತಳ್ವುದು ತಳ್ತೊಡೆ ಕಾವ್ಯಬಂಧಮ್ ಒಪ್ಪುಗುಂ....(ವಿ.ವಿ. 1–8)

ನಮ್ಮ ಲಾಕ್ಷಣಿಕರಿಗೆ ಕಾವ್ಯದ ಬಗೆಗೆ ಏನೇ ಕಲ್ಪನೆಗಳಿರಲಿ ಪಂಪ, ರನ್ನ, ಹರಿಹರ, ರಾಘವ, ಲಕ್ಷ್ಮೀಶ, ಕುಮಾರವ್ಯಾಸಾದಿಗಳಿಗೆ ಕಾವ್ಯದ ಬಗೆಗೆ ಅವರದ್ದೆ ಆದ ಪರಿಕಲ್ಪನೆಗಳು ಇದ್ದವು. ಅಂತಹ ಪರಿಕಲ್ಪನೆಗಳನ್ನು ಸಾಕಾರಗೊಳಿಸಲು, ಲಾಕ್ಷಣೀಕರಿಸಲು ನಮ್ಮವರು ಯತ್ನಿಸಿದ್ದಾರೆ. ಹಾಗಾಗಿ ಅವರ ಕಾವ್ಯಗಳು ಲಕ್ಷ್ಯಗಳೂ ಲಕ್ಷಣಗಳೂ ಆಗಿವೆ. (ನೋಡಿ: ಲಕ್ಷಣ ಲಕ್ಷ್ಯ ತತ್ವ)

ವಸ್ತುಕ ವರ್ಣಕದ ಬಗ್ಗೆ ಪಂಪ ತತ್ವದ ನೆಲೆಯಲ್ಲಿ ಏನಾದರೂ ಹೇಳಲಿ, ಆದರೆ ಆಚರಣೆಯ ನೆಲೆಯಲ್ಲಿ ತನ್ನ ವರ್ತಮಾನದ ವಾಸ್ತವ(ಇತಿಹಾಸ)ವನ್ನೇ ವರ್ಣಕ ಎಂದು ಬಳಸಿದ್ದಾನೆ. "ಮಹಾಭಾರತದ ಕತೆ ಪಂಪನ ಕಾವ್ಯದ ವಸ್ತು ಅಥವಾ ವಸ್ತುಕವಾದರೆ ವರ್ಣಕ ಪಂಪನಿಗೆ ಸೇರಿದ್ದಾಗಿರಬೇಕು. ಅರ್ಜುನ ದ್ವಾರಕೆಗೆ ಬಂದಾಗ ಅವನು ಕಾಣುವ ಸೂಳೆಗೇರಿಯ ಚಿತ್ರ, ಪ್ರತಿ ದಿನದ ಯುದ್ಧ ಮುಗಿದ ಮೇಲೆ ಸಂಜೆಯ ಹೊತ್ತು ಗಾಯಗೊಂಡ ಯೋಧರ ಚಿತ್ರ, ಅರ್ಜುನನ ಪಟ್ಟಬಂಧ ಮಹೋತ್ಸವದ ಚಿತ್ರ ಇವೆಲ್ಲ ಪಂಪನ ಕೊಡುಗೆಯಾಗಿರಬೇಕು. ಆದರೆ ಈ ಚಿತ್ರಗಳು ಕತೆಯಲ್ಲಿ 'ಒಡಂಬಡಂ' ಪಡೆಯಬೇಕು. ಈ ಒಡಂಬಡಿಕೆ ಕಾವ್ಯ ಎಂಬುವುದನ್ನು ಪಂಪ ಬಲ್ಲ. ವಸ್ತು ಹಳೆಯದು. ಚಿತ್ರಗಳು ಹೊಸವು. ವರ್ಣನೆ ಹೊಸದು. ವರ್ಣನೆ ಕೇವಲ ವರ್ಣನೆಯಾಗಿರುವುದಿಲ್ಲ. ಅದರಲ್ಲಿ ಹೊಸ ಕಾಲದ ಹೊಸ ಮೌಲ್ಯಗಳು ಸೇರಿರುತ್ತವೆ. ಅರ್ಜುನನ ಪಟ್ಟಾಭಿಷೇಕಕ್ಕೆ ಗಂಗೆ, ಯಮುನೆ, ನರ್ಮದೆ, ಗೋದಾವರಿಗಳ ನೀರಿನೊಂದಿಗೆ 'ವರದಾ ಪುಣ್ಯಾಂಬು' ಸೇರುವಂತೆ ಪಂಪನ ವರ್ಣಕ ಮಹಾಭಾರತದ ವಸ್ತುವಿನಲ್ಲಿ ಒಡಂಬಡುತ್ತದೆ." ಅಲ್ಲದೆ ಪಂಪನಿಗೆ ಆತನ ಕಾವ್ಯ ಅಥವಾ ಮಹಾಭಾರತದ ಕತೆ 'ಶ್ರೌತಮಿದು ತನಗೆ ಗಂಗಾಶ್ರೋತದವೊಲ್..' ಶ್ರೌತ ಅಂದರೆ ವೇದ ಅಥವಾ ಕಿವಿಯಿಂದ ಕೇಳಿದ್ದು. ಗಂಗಾನದಿಯಂತೆ ಪವಿತ್ರ ಮತ್ತು ನಿರಂತರ ಚಲನಶೀಲವಾದುದು.

'ರಾಜದ್ರಾಜಕಮೆನಿಸಿದ/ಸಾಜದ ಪುಲಿಗೆರೆಯ ತಿರುಳ ಕನ್ನಡದೊಳ್ ನಿ/ರ್ವ್ಯಾಜದೆಸಕದೊಳೆ ಪುದಿದೊಂ/ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೆ' (ವಿ.ವಿ. 14–58) ಈ ಪದ್ಯದಲ್ಲಿ ಪಂಪ ರಾಜದ್ರಾಜಕ, ಸಾಜದ–ನಿರ್ವ್ಯಾಜದ ಓಜೆ ಇಂಥ ಪದಗಳನ್ನು ಪ್ರಾಸಕ್ಕಾಗಿ ಬಳಸಿದ್ದರೂ ತನ್ನ ಕವಿತೆಯ ಲಕ್ಷಣ ಹೇಳುವಾಗ ತನ್ನದು ಪುಲಿಗೆರೆಯ ತಿರುಳ್ಗನ್ನಡದಲ್ಲಿ ಬರೆದ ಓಜೆಯ–ಇನಿದಾದ ಕವಿತೆ ಎಂದು ಹೇಳಿದ್ದಾನೆ. ಆಯಾಯಾ ಪ್ರದೇಶಕ್ಕೆ ವಿಶಿಷ್ಟವಾದ ಭಾಷೆಯನ್ನು–ತಿರುಳ ಕನ್ನಡವನ್ನು–ನಮ್ಮ ಕವಿಗಳೆಲ್ಲರೂ ಬಳಸಿದ್ದಾರೆಯೇ? ಎಂಬುದು ಒಂದು ಗಂಭೀರ ಪ್ರಶ್ನೆ. 'ವಾಸುಗಿಯುಂ ಬೇಸರುಗುಂ ದೇಸೆ ಬೆರೆವೇರೆಯಪ್ಪುದರಿಂ' ಎಂದು ಶ್ರೀವಿಜಯನು ಹೇಳುತ್ತಾನಾದರೂ ನಮ್ಮ ಕವಿಗಳ ದೇಸಿ ಭಾಷೆಯ ಬಳಕೆ ಭಿನ್ನತೆಯನ್ನೇನೂ ಪ್ರಕಟಿಸುವುದಿಲ್ಲ. ಪಂಪ, ರನ್ನ, ಪೊನ್ನಾದಿಗಳ ಭಾಷೆಗಳಲ್ಲಿ ಅಂಥ ವ್ಯತ್ಯಾಸವೇನೂ ಇಲ್ಲ. ಈ ವ್ಯತ್ಯಾಸ ಒಡೆದು ಕಾಣುವುದು ವಚನ, ರಗಳೆಗಳಿಗೆ ಬಂದಾಗಲೇ. ವಚನಕಾರರ ಕಾವ್ಯತತ್ತ್ವವೆ ಬೇರೆ, ಮಹಾಕವಿಗಳ ಕಾವ್ಯತತ್ತ್ವವೆ ಬೇರೆ. ಇವರ ಮೀಮಾಂಸೆಗೂ ಅವರ ಮೀಮಾಂಸೆಗೂ ಬಹಳ ವ್ಯತ್ಯಾಸವಿದೆ. 'ನುಡಿದರೆ ಸ್ಫಟಿಕದ ಶಲಾಕೆಯಂತೆ ಇರಬೇಕು', ನುಡಿದ ನುಡಿಯ ಒಳಗಾಗಿ ನಡೆಯಬೇಕು ಎಂಬ ತತ್ವವನ್ನು ಮಹಾಕವಿಗಳಲ್ಲಿ ಯಾರು ಯಾರು ಅನುಸರಿಸಿದ್ದಾರೆ? (ಇದರ ಜೊತೆಗೆ ನೋಡಿ: ಅಮರ್ಸೆ ಮತ್ತು ಕಾಳಸೆಯ ತತ್ವ)

ನಮ್ಮ ಕವಿಗಳು ಚರಿತ್ರೆ ಮತ್ತು ವರ್ತಮಾನ; ಪುರಾಣ ಮತ್ತು ಚರಿತ್ರೆಗಳನ್ನು ಒಟ್ಟಿಗೆ ಬೆಸೆದು (ಸಮೀಕರಿಸಿ) ಕಾವ್ಯ ಬರೆಯುವಾಗ: ಕಾವ್ಯ ನಾಯಕರೊಂದಿಗೆ ತಮ್ಮ ಆಶ್ರಯದಾತರನ್ನು ಸಮೀಕರಿಸಿ

ಬರೆಯುವ ಸಂಪ್ರದಾಯವನ್ನು ಅನುಸರಿಸಿದ್ದಾರೆ. ಇಂತಹ ಸಮನ್ವಯ ವಿಚಾರದಲ್ಲಿ ನಮ್ಮ ಶಾಸ್ತ್ರಕಾರರೂ ತಮ್ಮದೇ ಹಾದಿ ತುಳಿದಿದ್ದಾರೆ. ತನ್ನ ದೊರೆ ಚಿಕ್ಕದೇವರಾಜನನ್ನು ತನ್ನ ಅಲಂಕಾರ ಕಾವ್ಯಕ್ಕೆ ಸಮೀಕರಿಸಿ ತಿರುಮಲಾರ್ಯನು ಅಪ್ರತಿಮವೀರ ಚರಿತೆಯನ್ನು ಬರೆದರೆ, ಅಳಿಯ ಲಿಂಗರಾಜನು ತನ್ನ ನರಪತಿ ಚರಿತೆಯಲ್ಲಿ ಮುಮ್ಮಡಿ ಕೃಷ್ಣರಾಜರನ್ನು ಸಮೀಕರಿಸಿ ಬರೆದಿದ್ದಾನೆ. ಉದಯಾದಿತ್ಯನು ಸ್ವತಃ ರಾಜನಾದುದರಿಂದ ಯಾರನ್ನೊ ಬೇರೆಯವರನ್ನು ಸಮೀಕರಿಸಿ ಬರೆಯದೇ ತನ್ನನ್ನೆ ತಾನು ಸಮೀಕರಿಸಿಕೊಂಡು ಬರೆದಿದ್ದಾನೆ. ಹಾಗಾಗಿ ಇವನ ಕಾವ್ಯಾಲಂಕಾರವನ್ನು ಆತ್ಮಸಮೀಕರಣ ಕಾವ್ಯ ಎನ್ನಬಹುದು.[8]

### 1.3.3. ಕಥನ, ಆತ್ಮಾಭಿಮಾನ ಮತ್ತು ಫಲಾಪೇಕ್ಷೆ

ಯಾವುದೇ ಒಬ್ಬ ಕವಿ ಕಾವ್ಯ ರಚಿಸುವಾಗ ಕನಿಷ್ಠ ಮಟ್ಟದ ಆತ್ಮಾಭಿಮಾನ ಇರಲೇಬೇಕು ಎಂಬ ಭಾವ ಬಹುಪಾಲು ಎಲ್ಲ ಕವಿಗಳಲ್ಲೂ ಇದೆ. ಹಾಗೆಯೇ ಹೇಗೆ ಬರೆಯಬೇಕು ಮತ್ತು ಏನನ್ನು ಕಾವ್ಯವನ್ನಾಗಿ ಬರೆಯಬೇಕು ಎಂಬ ಬಗೆಗೂ ಕವಿಗಳಿಗೆ ಅವರದ್ದೇ ಕಲ್ಪನೆಗಳಿವೆ. ಈ ಏನನ್ನು ಬರೆಯಬೇಕು ಎಂಬುದನ್ನು ಭಕ್ತಿ, ಧರ್ಮ, ಪ್ರಭುತ್ವಗಳು ನಿಯಂತ್ರಿಸಿರುವಂತೆಯೂ, ಹೇಗೆ ಬರೆಯಬೇಕು ಎಂಬುದನ್ನು ಕವಿ ಪ್ರತಿಭೆ, ಓದುಗವರ್ಗ, ಲಾಕ್ಷಣಿಕ–ಪಂಡಿತರು, ವಾದಿ, ವಾಗ್ಮಿ, ಗಮಕಿಗಳು ನಿಯಂತ್ರಿಸಿರುವಂತೆಯೂ ಕಾಣುತ್ತದೆ.

ಪಂಪ, ಪೊನ್ನ, ರನ್ನ ಇವರುಗಳ ಲೌಕಿಕ ಕಾವ್ಯ ಸಂಪ್ರದಾಯವನ್ನು ಮೊದಲಿಗೆ ವಿರೋಧಿಸಿದವನು ನಾಗಚಂದ್ರ. ಈತ ಬಹು ಕಟುವಾಗಿ ರಾಜಾಶ್ರಯ ಮತ್ತು ಕವಿ ವ್ಯಕ್ತಿತ್ವಗಳ ಸಂಬಂಧವನ್ನು ವಿಮರ್ಶಿಸುತ್ತಾನೆ. ಬಯ್ಯುತ್ತಾನೆ ಎಂದರೂ ಸರಿಯೆ. ಈ ಬೈಗುಳದ ಹಿಂದೆ ಧಾರ್ಮಿಕ ಭಾವನೆ ಮುಖ್ಯವಾಗಿ ಕೆಲಸ ಮಾಡಿದೆ. 'ಅನವಧಿ ಬೋಧ ಸಾಧನ ಎನ್ನಿಸಿದ ಜಿನೇಂದ್ರ ಮಹಾನುಭಾವ ವರ್ಣನೆಯೊಳಗೆ ಶಕ್ತಿಯನ್ನೂ, ಸಾಮರ್ಥ್ಯವನ್ನೂ ಮರೆದು, ಶಾಶ್ವತ ಲಕ್ಷ್ಮಿಗೆ ಅದನ್ನು ಮಾರದೆ ವಿವೇಕಹೀನರಾದ ಕೆಲವು ಕವಿಗಳು ವರ್ಣನ ರತಿಯಿಂದ ಅರ್ಥ(ಹಣ)ದ ಮೋಹಕ್ಕೆ ಬಲಿಯಾಗಿ ತನ್ನ ಪವಿತ್ರವಾದ ಕೃತಿ ಶಕ್ತಿಯನ್ನು ಯಾರ್ಯಾರಿಗೋ ಮಾರಿಕೊಳ್ಳುತ್ತಾರೆ. (ಮ.ಪು. 1–82) 'ಕತೆ ಎಂದರೆ ಏನು? ಜಿನಚರಿತವನ್ನು ಹೇಳುವ ಕತೆಯೇ ಕತೆ. ಕವಿ ಎಂದರೆ ಯಾರು? ಜಿನಕತೆಯನ್ನು ಹೇಳಿದವನೇ ನಿಜವಾದ ಕವಿ. ರಾಜ, ವಿಟ, ಚೋರರ ಕತೆಯೂ ಕತೆಯೇ? ಇವುಗಳನ್ನು ಹೇಳುವವನೂ ಒಬ್ಬ ಮಹಾಕವಿಯೇ?..' (ಮ.ಪು. 1–50) ಯಾವುದನ್ನು ಕಥಿಸಬೇಕು ಮತ್ತು ಯಾವುದನ್ನು ಕಥಿಸಬಾರದು ಎಂಬ ಬಗ್ಗೆ ತನ್ನದೇ ನೀತಿ ನಿಯಮವನ್ನು ರೂಪಿಸುವ ಕುರಿತು ನಾಗಚಂದ್ರ ಇಲ್ಲಿ ಮಾತಾಡಿದ್ದಾನೆ. ಆಗಮಿಕ ಮತ್ತು ಲೌಕಿಕ ಕಾವ್ಯಗಳೆರಡನ್ನೂ ಬರೆದ ಪಂಪ, ಪೊನ್ನ, ರನ್ನರನ್ನು ಇಲ್ಲಿ ನಾಗಚಂದ್ರ ಪ್ರಸ್ತಾಪಿಸದೆ ಇದ್ದರೂ ಅವರ ಕಾವ್ಯ ಪದ್ಧತಿಯ ಕುರಿತಾಗಿಯೇ ಈ ಮಾತುಗಳನ್ನು ಹೇಳಿದ್ದಾನೆ. ಅಭವ್ಯ (ಜೈನೇತರ) ಕಥನಗಳನ್ನು ರಾಜ, ವಿಟ, ಚೋರರ ಕಥೆ ಎಂದು ಕರೆದಿದ್ದಾನೆ. ಆ ಮೂಲಕ ಧರ್ಮ ಮತ್ತು ಕಾವ್ಯಧರ್ಮಗಳ ನಡುವಿನ ಸಂಬಂಧವನ್ನು ನಾಗಚಂದ್ರ ಬೇರೆ ರೀತಿಯಲ್ಲಿಯೇ ಪ್ರತಿಪಾದಿಸಿದ್ದಾನೆ. ನಾಗಚಂದ್ರ ಸ್ವತಃ ಅಭವ್ಯ ಕತೆಗಳನ್ನು ಬರೆದಿಲ್ಲ ಎಂಬುದಿಲ್ಲಿ ಗಮನಾರ್ಹ.

ರಾಜರ ಆಶ್ರಯದಲ್ಲಿ ಇದ್ದುಕೊಂಡು ಕಾವ್ಯ ರಚಿಸಿ ಅವುಗಳನ್ನು ರಾಜರೇ ಬರೆದರೇನೋ ಎಂಬಂತೆ ಬರೆಯುವ ಪರಿಪಾಠದ ಬಗೆಗೂ ತನ್ನದೇ ಕಟುವಾದ ವಿಮರ್ಶೆಯನ್ನು ನಾಗಚಂದ್ರ ದಾಖಲಿಸುತ್ತಾನೆ. 'ಸುಕವಿ ಪಂಪನ ಆದಿಪುರಾಣವೂ ಪೊನ್ನನ ಶಾಂತಿಪುರಾಣವೂ ರನ್ನನ ಕೃತಿರತ್ನವೆನಿಸಿದ ಅಜಿತಪುರಾಣವೂ ನನ್ನ ಕೃತಿಗೆ ಸೌಭಾಗ್ಯವನ್ನೂ ಉನ್ನತಿಯನ್ನೂ ಒದಗಿಸಲಿ' (ಮ.ಪು. 1–25) ಎಂದು ಈತ ಪ್ರಾರ್ಥಿಸಿಕೊಳ್ಳುತ್ತ ತನ್ನ ಕಾವ್ಯದಲ್ಲಿ ಪಂಪ ಪೊನ್ನ, ರನ್ನರ ಧಾರ್ಮಿಕ ಕಾವ್ಯಗಳನ್ನು ಮಾತ್ರವೇ ಪ್ರಸ್ತಾಪಿಸುತ್ತಾನೆ. ಆದರೆ ಅವರ ಇತರ ಲೌಕಿಕ (ಅಭವ್ಯ) ಕೃತಿಗಳನ್ನು ಉಲ್ಲೇಖಿಸುವುದಿಲ್ಲ. ಶಾಶ್ವತ ಲಕ್ಷ್ಮಿಗೆ ಕಾವ್ಯವನ್ನು ಮಾರುವುದು ಮತ್ತು ಅರ್ಥ(ಹಣ)ಕ್ಕಾಗಿ ಕಾವ್ಯವನ್ನು ಮಾರುವುದು ಎರಡನ್ನೂ ಪ್ರಸ್ತಾಪಿಸುತ್ತಾ ನಾಗಚಂದ್ರ ಕಾವ್ಯವನ್ನು ಮಾರಿಕೊಳ್ಳುವುದನ್ನು ಖಂಡಿಸುತ್ತಾನೆ. ಈತನಿಗೆ ಇದು ಒಂದು ರೀತಿ ಕವಿಯು ತನ್ನ ಆತ್ಮಾಭಿಮಾನವನ್ನೇ ಮಾರಿಕೊಂಡ ಹಾಗೆ. ನೇಮಿಚಂದ್ರ ತನ್ನ ಅರ್ಧನೇಮಿ ಪುರಾಣದಲ್ಲಿ(1175) ಮತ್ತು ಹರಿಹರ ತನ್ನ ಗಿರಿಜಾ ಕಲ್ಯಾಣದಲ್ಲಿ(1200) ಸರಿಸುಮಾರು ಇದೇ ರೀತಿಯ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಆದರೆ ಈ ಇಬ್ಬರಿಗೂ ಒಂದು ಶತಮಾನ ಮೊದಲೇ ನಾಗಚಂದ್ರ(1100) ಈ ಮಾತುಗಳನ್ನು ಆಡಿದ್ದಾನೆ ಎಂಬುದಿಲ್ಲಿ ಗಮನಾರ್ಹ.

'ಮೃದುವಾದ ಪದಪ್ರಯೋಗದ ವಿಶಿಷ್ಟತೆಯನ್ನು, ಕಾವ್ಯದಲ್ಲಿನ ಭಾವದ ಮೈಸಿರಿಯನ್ನು, ರಸಪ್ರವಾಹದ ನೆಲೆಗಳನ್ನು ಭಾವಿಸಿ, ಮೆಚ್ಚಿ, ಮೆಚ್ಚುತ್ತ ಹುಟ್ಟಿದ ಪುಳಕಗಳಿಂದ-ಬಂದ ಹರ್ಷದ ಕಣ್ಣೀರಿನ ಧಾರೆಯಿಂದ-ಪಡೆದ ಅನುರಾಗದಿಂದ ಸಜ್ಜನರು ಒಂದೇ ಒಂದು ಹೊಗಳಿಕೆಯ ಮಾತನ್ನು ಆಡಿದರೆ ಕವಿಯಾದವನಿಗೆ ಅಷ್ಟೇ ಸಾಲದೇ?' (ರಾ.ಚ.ಪು. 1–29) ಇಷ್ಟಲ್ಲದೆ ಕವಿಯಾದವನಿಗೆ ಇನ್ನೇನು ತಾನೆ ಬೇಕು ಎಂಬುದು ನಾಗಚಂದ್ರನ ಪ್ರಶ್ನೆ. ಅನೇಕ ಕವಿಗಳಿಗೆ ಇದಿಷ್ಟೆ ಇದ್ದರೆ ಸಾಲದು. ಅವರು ಇದರಾಚೆಗೆ ಹಲವು ರೀತಿಯ-ಹಣ, ಹೆಣ್ಣು, ಗೌರವ, ಕೀರ್ತಿ, ಸಂಪತ್ತು ಇತ್ಯಾದಿಗಳಿಗೆ ಆಶಿಸುತ್ತಾರೆ. ಇಂಥ ಕವಿಯ ನಡವಳಿಕೆಯನ್ನು ನಾಗಚಂದ್ರ ವಿರೋಧಿಸುತ್ತಾನೆ. ಕಾವ್ಯ ಮೀಮಾಂಸೆ ಎಂಬುದು-ಸಾಹಿತ್ಯ ವಿಮರ್ಶೆ ಎಂಬುದು ಹೀಗೆ ಆತ್ಯಂತಿಕವಾಗಿ ಜೀವನ ಮೀಮಾಂಸೆಯೇ ಅಲ್ಲವೇ?

ಆದಿಪುರಾಣದಲ್ಲಿ 'ಪೆರರೀವುದೇಂ, ಪೆರರಿಂದಮಪ್ಪುದೇಂ' ಎನ್ನುವ ಪಂಪನೆ ಅಲ್ಲಿ 'ಸರಸ್ವತೀ ಮಣಿಹಾರನಾದ ಈ ಪಂಪನು ಕೇರಳದ ಸುಂದರಿಯರ ಸೊಂಟದ ಡಾಬಿನ ಕೆಂಪು ಹರಳಿನ ಹಾಗಿದ್ದಾನೆ. ಮಲಯ ಯುವತಿಯರು ತಮ್ಮ ಮುಖವನ್ನು ನೋಡಿಕೊಳ್ಳುವ ಕನ್ನಡಿಯಂತೆ ಇದ್ದಾನೆ. ಆಂಧ್ರದ ಸುಂದರಿಯ ದೊಡ್ಡ ಮೊಲೆಗಳ ಮೇಲೆ ತಾಕುವ ಕೊರಳ ಹಾರದಂತೆ ಇದ್ದಾನೆ' (ಆ.ಪು. 1–32) ಎಂದು ಹೇಳುವ ಮಾತುಗಳೂ, ಆಂಡಯ್ಯನು ತನ್ನ ಅಗ್ಗಳಿಕೆಯನ್ನು ಹೇಳಿಕೊಳ್ಳುವಾಗ 'ಈ ಆಂಡಯ್ಯನು ಅರ್ಹಂತನಿಗೆ ಎರಗುತ್ತಾನೆಯೇ ವಿನಃ ಬೇರೆ ಇನ್ನಾರಿಗೂ ಎರಗುವುದಿಲ್ಲ. ಎಂದಿಗೂ ಯಾವ ಕಾವ್ಯವನ್ನು ಮರೆತೂ ಕನಸುಮನಸಲ್ಲು ಕೂಡ ಓದದೆಯೇ ಮೆಚ್ಚುವುದಿಲ್ಲ.' (ಕ.ಕಾ. )ಎನ್ನುವ ಮಾತುಗಳೂ ಇಲ್ಲಿ ನೆನಪಾಗುತ್ತವೆ. ಈ ಮಾತುಗಳು ಚಾರಿತ್ರಿಕವಾಗಿ ಎಷ್ಟು ನಿಜ, ಎಷ್ಟು ಸುಳ್ಳು ಎಂಬುದು ಅಮುಖ್ಯ. ಆದರೆ ಈ ಮೂಲಕ ಇವರು ಕಟ್ಟಿಕೊಡುತ್ತಿರುವ ಜೀವನ ತಾತ್ವಿಕತೆ ಮಾತ್ರ ನಮಗೆ ಮುಖ್ಯ. ಆತ್ಮಪ್ರಶಂಸೆಯ ರೀತಿಯ ಈ ಮಾತುಗಳನ್ನು ನೋಡಿದರೆ ಇವರು ಏನೇನನ್ನು ಆಸೆ ಪಡುತ್ತಾರೆ ಎಂಬುದಿಲ್ಲಿ ತಿಳಿಯುತ್ತದೆ. ಹಾಗೆಯೇ ಕವಿವ್ಯಕ್ತಿತ್ವ-ಕವಿತ್ವಗಳ ಬಗ್ಗೆ ತಮ್ಮದೇ ಆತ್ಮಾಭಿಮಾನದ; ಅನ್ಯರಿಗೆ ಬಾಗದ ತತ್ವವನ್ನೂ ಮಂಡಿಸುತ್ತಾರೆ ಎನ್ನಿಸುತ್ತದೆ.

ಕವಿಯಾದವನಿಗೆ ಒಳ್ಳೆಯ ಓದುಗನ ಒಂದೇ ಒಂದು ಹೊಗಳಿಕೆಯ ಮಾತೇ ಸಾಕು ಎಂದು ನಾಗಚಂದ್ರ ಹೇಳಿದರೆ, ನೇಮಿಚಂದ್ರ ಏನು ಹೇಳುತ್ತಾನೆ ನೋಡಿ;

> ಕುಡುವವನ್ ಏನನ್ ಇತ್ತಪನೋ ಕಟ್ಟಿ ಬುಧಾಳಿಗೆ ಪೊನ್ನ ಮೊಟ್ಟೆಯಂ?
> ಕುಡುವೊಡೆ ಚೆಚ್ಚರಂ ಕುಡುವುದು ಉಳ್ಳದನ್, ಅಂತದು ತೀರಿದಂದು ಕೈ
> ಯುಡುಗದೆ? ತಂಬಲಂ ಕುಡುವುದಂತದು ತೀರಿದೊಡಂ ಪ್ರಭುತ್ವದೊಳ್
> ತೊಡರ್ದಿರದಾರೆ ಕೂರೆ ನಯದಿಂ ವಿನಯಂ ಗೆಯಲೇನೋ ತೀರದೇ (ಲೀಲಾ. 1–55)

ದೊರೆಯಾದವನು ಬುಧಾಳಿಗೆ ಕೊಟ್ಟರೆ ಅವನ ಅಪ್ಪನ ಮನೆಯ ಗಂಟೇನು ಹೋಗುತ್ತದೆ ಎಂಬುದು ನೇಮಿಚಂದ್ರನ ಮತ. ಇದೇ ನೇಮಿಚಂದ್ರ ತನ್ನ ಅರ್ಧನೇಮಿ ಪುರಾಣದಲ್ಲಿ ಈ ಮಾತಿಗೆ ಸ್ವಲ್ಪ ವಿರುದ್ಧ ಎನಿಸುವ ಮಾತನ್ನು ಆಡುತ್ತಾನೆ

> ಬೆಲೆಯಿಂದಕ್ಕುಮೆ ಕೃತಿ? ಗಾವಿಲ ! ಭುವನದ ಭಾಗ್ಯದಿಂದಮಕ್ಕುಂ, ನೋಳ್ಪಂ ಬೆಲೆ ಕೊಟ್ಟು
> ತಾರ ಮಧುವಂ, ಮಂದಾನಿಲನಂ, ಮನೋಜನಂ, ಕೌಮುದಿಯಂ (ಅ.ನೇ.ಪು. 1–45)

ಕೃತಿಗೆ ಬೆಲೆ ಕಟ್ಟಲು ಆಗುವುದಿಲ್ಲ. ಅದು ಬರಿ ಕವಿಯ ಯತ್ನವೂ ಅಲ್ಲ. ಅದು ಭುವನದ ಭಾಗ್ಯ. ಲೋಕದಲ್ಲಿ ಎಷ್ಟೋ ವಿಚಾರಗಳನ್ನು ಬೆಲೆ ಕೊಟ್ಟು ಕೊಳ್ಳಲಾಗುವುದಿಲ್ಲ. ಹಾಗೇ ಕಾವ್ಯ ಕೂಡ ಕೊಳ್ಳಲಾಗದ ಮಾರಲಾಗದ ಒಂದು ಭಾಗ್ಯಸಿದ್ಧಿ. ಹಣಕ್ಕೆ ಕಾವ್ಯವನ್ನು ಮಾರಿಕೊಳ್ಳುವ ಬಗ್ಗೆ ಖಾರವಾಗಿ ನಾಗಚಂದ್ರ ಪ್ರತಿಕ್ರಿಯಿಸಿದಂತೆಯೇ ನೇಮಿಚಂದ್ರನೂ ಪ್ರತಿಕ್ರಿಯಿಸುತ್ತಾನೆ. 'ಗುಣವನ್ನು ಗಣಿಸದೆ, ಗಾಜಿನ ಮಣಿಯಂತೆ ನಿಮಗೆ ಬೇಕೆ, ನಿಮಗೆ ಬೇಕೆ ಎಂದು ಕೃತಿಯೆಂಬ ಚಿಂತಾಮಣಿಯನ್ನು ಅಹಹ ಮಾರುವವರ ಬುದ್ಧಿಗೆ ನಾನು ಬೆರಗಾದೆ' (ಅ.ನೇ.ಪು. 1–47) 'ಈ ಚತುರ್ದಶ ಭುವನವನ್ನೇ ಬೆಲೆಯನ್ನಾಗಿ ಕೊಟ್ಟರೂ ಸಮವೆನಿಸದ ಕೃತಿಯನ್ನು, ಅಮಲಾಕೃತಿಯನ್ನು ಮರುಳರಾದ ಕವಿಗಳು ಮಾಣಿಕವನ್ನು ಮಾರುವ ರೀತಿಯಲ್ಲಿ ಕಾಂಚನಕಣಿಕೆಗೆ ಅದು ಯಾಕೆ ಮಾರುತ್ತಾರೋ' (ಅ.ನೇ.ಪು. 1–46) ಎಂದು ಬಹು ನೊಂದುಕೊಂಡು ನೇಮಿಚಂದ್ರ ನುಡಿಯುತ್ತಾನೆ. ಹಣವನ್ನು ಗಣಿಕೆಗೆ ಹೋಲಿಸುತ್ತ 'ಅವಧಿ ಜಿನರಾಜರ ಕಥಾಕಥನವು ಸಿದ್ಧಿಸಿರುವಾಗ

ಅಣ್ಣಾ ವಿಚಾರಪರರಾದ ಕವೀಶ್ವರರು ಹಣಕ್ಕಾಗಿ ಅಧಮರನ್ನು ಬಣ್ಣಿಸುತ್ತಾರೆಯೇ?' (ಅ.ನೇ.ಪು. 1-49) ಎಂದೂ ಪ್ರಶ್ನಿಸುತ್ತಾನೆ. ನಾಗಚಂದ್ರ, ನೇಮಿಚಂದ್ರರನ್ನು ಅನುಸರಿಸುವಂತೆ ಜನ್ನನೂ ಕೂಡ ಇದೇ ರೀತಿಯ ಮಾತುಗಳನ್ನು ಆಡುತ್ತಾನೆ. 'ತಿಳಿದು ತಿಳಿದೂ ಇದು ಬಾಳಿನ ದಾರಿಯಾದ ಪರಮಾಗಮವಲ್ಲದೆ ಜಾರ, ಚೋರರ, ವೀರರ ಕತೆಯಂತೆ ಬಾಯ್ಸವಿಯ ಮಾತುಗಳನ್ನು ಬಳಸುವ ಚರ್ಚೆಯಲ್ಲ. ಸುಮ್ಮನೆ ಹೇಳುತ್ತಿದ್ದೇನೆ ಎಂದರೆ ಮುಗಿದು ಹೋಯಿತೇ?..' (ಅನಂ. ಪು. 1-36) ಎನ್ನುತ್ತಾನೆ ಜನ್ನ. ಹರಿಹರ ಕೂಡ ಇವರಂತೆಯೇ 'ಮನುಜರ ಮೇಲೆ ಸಾವವರ ಮೇಲೆ ಕಾವ್ಯ ಬರೆದು, ಇಂದ್ರ ಚಂದ್ರ ದಧೀಚಿ ಬಲೀಂದ್ರ ಎಂದು ಹೊಗಳಿ ಕೆಡಬೇಡಲೆ ಮಾನವ' ಎನ್ನುತ್ತ ತನ್ನ ನಾಲಿಗೆಯನ್ನು ಶಿವನಿಗೆ ಮಾರಿಕೊಂಡಿರುವುದಾಗಿ ಹೇಳಿದ್ದಾನೆ. ರಾಘವಾಂಕನನ್ನಂತೂ ಕೇಳುವ ಹಾಗೆಯೇ ಇಲ್ಲ. ಹರಿಶ್ಚಂದ್ರ ಕಾವ್ಯ ಬರೆದ ಪಾಪದ ಪ್ರಾಯಶ್ಚಿತ್ತಕ್ಕೆ ಪಂಚಶೈವ ಕಾವ್ಯಗಳನ್ನು ಬರೆದು ಬದುಕಿಕೊಂಡಿದ್ದಾನೆ. ಇವರನ್ನು ಅನುಸರಿಸುವಂತೆ ರಾಜಶೇಖರ ವಿಳಾಸ ಬರೆದ ಷಡಕ್ಷರಿಯು 'ಈ ಭೂಮಿಯಲ್ಲಿ ರಸವತ್ತಾದ ಕವಿತೆಯನ್ನು ರಚಿಸಲು ಶಕ್ತಿಯನ್ನು ಪಡೆದಿರುವಾಗ ಅಸಮಾಕ್ಷ ಶಿವನನ್ನು ಹೊಗಳದೆ ಮನುಷ್ಯರನ್ನೂ ಇತರ ದೇವರುಗಳನ್ನೂ ಹೊಗಳುವುದು ಚಿನ್ನವನ್ನು ಹೊರಕ್ಕೆ ಬಿಸಾಡಿ ಕಸವನ್ನು ಸಂಗ್ರಹಿಸಿಕೊಂಡಂತೆ ಆಗುತ್ತದೆ' (ರಾ.ವಿ. 1-21) ಎಂದು ಹೇಳಿದ್ದಾನೆ.

ಭವ್ಯ-ಅಭವ್ಯ, ಭಕ್ತ-ಭವಿ ಎಂಬ ಅವಳಿಗಳಿಗೆ ಜೊತೆಯಾಗಿ ದೈವ-ಜಾರ, ಚೋರ ಎಂಬ 'ನಮ್ಮ ಮತ್ತು ಅನ್ಯ' ಮಾದರಿಯ ಅವಳಿಯು ನಮ್ಮ ಬಹುಪಾಲು ಕಾವ್ಯಗಳಲ್ಲಿ ಪ್ರತಿಪಾದಿತವಾಗಿದೆ. ಜಾರ ಚೋರರ ಕಥೆಗಳನ್ನು ಕಥಿಸದೆ ಶಿವಕಥನ, ಜಿನಕಥನ, ಹರಿಕಥನಗಳನ್ನು ಬಣ್ಣಿಸುವ ಬಗ್ಗೆ ಮಾತ್ರವೆ ಅಲ್ಲ; ಹಣಕ್ಕಾಗಿ ಕೃತಿಗಳನ್ನು-ಆತ್ಮಾಭಿಮಾನವನ್ನೂ ಮಾರಿಕೊಳ್ಳುವ ಬಗ್ಗೆ ಪ್ರಬಲವಾದ ವಿರೋಧವು ಕಾವ್ಯ ಪರಂಪರೆಯುದ್ದಕ್ಕೂ ಪ್ರಕಟವಾಗಿದೆ. ಧರ್ಮ, ಆಧ್ಯಾತ್ಮ ಮತ್ತು ಭಕ್ತಿಗಳು ರಸಿಕತೆ-ಶೃಂಗಾರಗಳನ್ನು ಒಂದು ಕೈ ಮೀರಿಸುವಂತೆ ಕಾವ್ಯಪರಂಪರೆಯ ಉದ್ದಕ್ಕೂ ಮೇಲಾಟ ನಡೆಸಿವೆ. ಕಾವ್ಯ ಕಥನದ ವಸ್ತು, ಶೈಲಿ, ಭಾಷೆಗಳನ್ನು, ಕವಿಧೋರಣೆ, ಚಿಂತನಾ ಕ್ರಮಗಳನ್ನು ಇವು ಬಹುವಾಗಿ ಪ್ರಭಾವಿಸಿವೆ. ಎಲ್ಲಕ್ಕಿಂತ ಮುಖ್ಯವಾಗಿ ಪ್ರಭುತ್ವದ ಎದುರಿಗೆ ನಿರಂತರ ಪ್ರತಿರೋಧ ಒಡ್ಡುತ್ತ ಬಂದಿವೆ. ಪ್ರಭುತ್ವದ ಓಲೈಕೆ ಮತ್ತು ಪ್ರಭುತ್ವದ ಎದುರಿಗಿನ ಪ್ರತಿರೋಧ ಈ ಎರಡೂ ಎರಡು ರೀತಿಯ ಕಾವ್ಯ ತತ್ವಗಳ ನಡುವಿನ ಮುಖಾಮುಖಿಗಳೇ ಆಗಿವೆ. ಪಂಪಕಾಲ ಮತ್ತು ನಾಗಚಂದ್ರ ಕಾಲದ ಕಾವ್ಯಸಂವೇದನೆಗಳನ್ನು ಈ ಎರಡರ ನಡುವಿನ ಮುಖಾಮುಖಿ ಘಟ್ಟಗಳನ್ನಾಗಿ ನೋಡಬಹುದಾಗಿದೆ.

ಆಧುನಿಕ ಸಂದರ್ಭದಲ್ಲಿ ನಿಂತು ಯೋಚಿಸಿದರೆ ಆತ್ಮಾಭಿಮಾನವನ್ನು ಮಾರಿಕೊಳ್ಳುವ ಬಗ್ಗೆ ಆಗಲಿ, ಜಾರ ಚೋರರ ಕತೆಗಳನ್ನು ಕಥಿಸುವ ಬಗ್ಗೆ ಆಗಲಿ ನಮ್ಮದೇನೂ ತಕರಾರು ಇಲ್ಲ. ಆದರೆ ಕಾವ್ಯವನ್ನು ಹಣಕ್ಕೆ ಮಾರಿಕೊಳ್ಳಬಾರದು ಎಂಬ ಮಾತನ್ನು ಇಂದು ಯಾರೂ ಪಾಲಿಸಲಾರರು. ಪುಸ್ತಕ ಬರೆದವರು, ಪ್ರಕಟಿಸಿದವರು ಇಬ್ಬರಿಗೂ ಹಣಕ್ಕಾಗಿ ಪುಸ್ತಕಗಳನ್ನು ಮಾರುವುದು ಸಂಸ್ಕೃತಿಯ ಭಾಗವೇ ಆಗಿಹೋಗಿದೆ. ಬೆಸ್ಟ್ ಸೆಲ್ಲರ್ ಪಟ್ಟಿಯ ಮೂಲಕ ಪುಸ್ತಕದ ತೂಕವನ್ನು ಅಳೆಯುವ ಸಂಪ್ರದಾಯವೂ ಇಂದು ಸೃಷ್ಟಿಯಾಗಿದೆ. ಇಡೀ ಸಂಸ್ಕೃತಿಯೇ ಬೃಹತ್ ಕೈಗಾರಿಕೋದ್ಯಮ ಆಗಿ ಬೆಳೆದಿರುವ ಇಂದು ಪುಸ್ತಕ ಸಂಸ್ಕೃತಿಯಲ್ಲಿ ಪುಸ್ತಕೋದ್ಯಮ ಬೆರೆತು ಹೋಗಿದೆ. ಹಾಗಾಗಿ ಹಣಕ್ಕಾಗಿ ಕೃತಿ ಮಾರುವುದು ಇವತ್ತು ಒಂದು ಸ್ವೀಕೃತ ಆಚಾರವಾಗಿದೆ.

### 1.3.4. ಕಾಲಾತೀತತೆಯ ತತ್ವ

ನಮ್ಮ ಕವಿಗಳು ಸ್ವಕಾವ್ಯ ಸ್ವರೂಪವನ್ನು ನಿರ್ವಚಿಸುವಾಗ ಕಾವ್ಯವು ಶಾಶ್ವತವಾಗಿ ಬಾಳಲಿ ಎಂದು ಆಶಿಸುತ್ತಾರೆ. ಕೆಲವರು ನನ್ನ ಕಾವ್ಯವು ಶಾಶ್ವತವಾಗಿ ಬಾಳುತ್ತದೆ ಎಂದು ಆತ್ಮವಿಶ್ವಾಸದಿಂದ ಹೇಳಿಕೊಂಡೂ ಇದ್ದಾರೆ. ಆಶಯ ಮತ್ತು ಹೇಳಿಕೆಯ ಎರಡೂ ರೀತಿಗಳಲ್ಲಿ ಕಥನವು ಸದಾ ಶಾಶ್ವತವಾದುದು ಎಂಬ ತತ್ವವು ನಮ್ಮಲ್ಲಿ ಪ್ರಕಟವಾಗಿದೆ. 'ಕಾವ್ಯಂ ಕಲ್ಪಾಂತರ ಸ್ಥಾಯಿಯೆನಿಪ ನುಡಿಸತ್ಯಂ ಇದು ಕವೀಶಾಧಿಪತ್ಯಂ' (ಗಿ.ಕ. 1-16) 'ಈ ಗಿರಿಜಾ ಕಲ್ಯಾಣವು ಶಶಿ, ರವಿ, ಧರೆಗಳು, ಇರುವವರೆಗೂ ಶಾಶ್ವತವಾಗಿ ನಿಲ್ಲಲಿ' (ಗಿ.ಕ. 10-114) ಹೀಗೆ ಹರಿಹರನು ಕಾವ್ಯದ ಕಾಲಾತೀತ ತತ್ವದ ಬಗೆಗೆ ಆಶಯ ಮತ್ತು ಹೇಳಿಕೆ ಇವೆರಡೂ ನೆಲೆಯಲ್ಲಿ ಪ್ರತಿಕ್ರಿಯಿಸಿದ್ದಾನೆ. ಕಾವ್ಯದ ಕಾಲಾತೀತತೆಯ ತತ್ವದ ಬಗೆಗೆ ಆಂಡಯ್ಯನೂ ಹೇಳುತ್ತಾನೆ.

ಪದಪಿಂ ಪೊರ್ದಿದರಚ್ಚೆಯಿನ್ ಪದಿನೆಂಟುಂ ದೋಸಮುಂ ಪೊರ್ದನಾ
ಡಿದ ಮಾತೆಲ್ಲರ ಬಾಳ್ಕೆಯಪ್ಪರಿವಿನೊಳ್ ಮೂಲೋಕಮಂ ಕಾಣ್ಬ ಪು

ಟ್ಟಿದವೊಲ್ ಕಣ್ಣಮರ್ದೊಪ್ಪಿ ತೋರುವರುಹಂತಂ ನಲ್ಮೆಯಂ ಮಾಳ್ಕೆ ಬೇ
ದಿಡುದಂ ತನ್ನಳವಟ್ಟೆರ್ಗೆ ನೆಲನುಂ ಮುನ್ನೀರುಮಿರ್ಪನ್ನೆಗಂ (ಕ.ಕಾ. 1-272)

ನೆಲವೂ, ಸಾಗರವೂ ಇರುವವರೆಗೆ ನನ್ನ ಕಾವ್ಯವು ಶಾಶ್ವತವಾಗಿ ಇರುವಂತೆ ಅರುಹಂತನು ಕರುಣಿಸಲಿ ಎಂದು ಆಂಡಯ್ಯ ಕೋರಿಕೊಳ್ಳುತ್ತಾನೆ. ವಿಶೇಷವೆಂದರೆ ಹರಿಹರ, ನಾಗಚಂದ್ರ ಇಂಥವರು ಕಾವ್ಯದ ಶಕ್ತಿಯಿಂದಲೆ ಕಾವ್ಯವು ಶಾಶ್ವತವಾಗಿ ಬಾಳುತ್ತದೆ ಎಂದು ಹೇಳಿದರೆ, ಆಂಡಯ್ಯ ಕಾವ್ಯವು ಶಾಶ್ವತವಾಗಿ ಬಾಳಲು ದೈವಕರುಣೆ ಮುಖ್ಯ ಎಂದು ಹೇಳುತ್ತಾನೆ. ಯುಗ ಯುಗಗಳವರೆಗೆ ಕಾವ್ಯವು ಕಲ್ಪಾಂತರಸ್ಥಾಯಿಯಾಗಿ ನಿಲ್ಲಬೇಕಾದರೆ ಅದು ಹೇಗಿರಬೇಕು ಎಂಬ ಲಕ್ಷಣಗಳನ್ನು ನಾಗಚಂದ್ರ ಹೀಗೆ ಹೇಳುತ್ತಾನೆ.

ಸುಕೃತಿ ಪ್ರೀತಿ ಲತಾ ಸಮುತ್ಕಳಿಕೆ, ವಿದ್ವನ್ಮಂಡಳೀ ರತ್ನಕಂಠಿಕೆ,
ಧರ್ಮಾಮೃತ ಮೇಘಮಾಳಿಕೆ, ವಚಶ್ರೀ ನರ್ತಕಿ ನೃತ್ಯವೇದಿಕೆ,
ಸಾಹಿತ್ಯ ಸರೋಜ ಕರ್ಣಿಕೆ, ಯಶಶ್ರೀ ಕೇಕರಾಳೋಕ ಚಂದ್ರಿಕೆ,
ನಿಲ್ಕೀ ಕೃತಿ ಕಲ್ಪಕೋಟಿವರೆಗಂ ಭದ್ರಂ ಶುಭಂ ಮಂಗಳಂ (ಮ.ಪು. 14-212)

ಸ್ವಕಾವ್ಯ ಸ್ವರೂಪವನ್ನು ಬೇರೆ ಬೇರೆ ರೂಪಕಗಳಿಂದ ನಿರ್ವಚಿಸುತ್ತ ನಾಗಚಂದ್ರನು ತನ್ನ ಪುರಾಣದ ಹೊಗಳಿಕೆಯನ್ನು ತಾನೆ ಮಾಡಿಕೊಳ್ಳುತ್ತ ಇದು ಕಲ್ಪಕೋಟಿಯವರೆಗೆ ನಿಲ್ಲಲಿ ಎಂದು ಆಶಿಸುತ್ತಾನೆ. ಇದೇ ನಾಗಚಂದ್ರನು 'ಪರಮ ಕವಿಜ್ಯೇಷ್ಠರು ಪರಮ ಪುರಾಣಗಳನ್ನು ಹೇಳಿ ಕಲ್ಪಾಂತರ ಖ್ಯಾತಿಯನ್ನು ಹೊಂದಿದರು' (ರಾ.ಚ.ಪು. 1-28) ಎಂದು ಹೇಳುತ್ತ ಕಾವ್ಯಗಳು ಮಾತ್ರವೇ ಅಲ್ಲ ಕವಿಗಳು ಕೂಡ ಕಲ್ಪಾಂತರ ಖ್ಯಾತಿಯನ್ನು ಕಾವ್ಯದಿಂದ ಪಡೆಯಬಹುದು ಎನ್ನುತ್ತಾನೆ. ಹೀಗೆ ಕಾವ್ಯವು ಹೇಗಿರಬೇಕು ಎಂಬ ತತ್ವ ಮಂಡನೆಯಲ್ಲಿ ನಮ್ಮವರು ಅದು ಕಾಲಾತೀತವಾಗಿ ಬಾಳುವಂತಿರಬೇಕು ಎಂದಿದ್ದಾರೆ.

### 1.3.5. ಸೃಷ್ಟಿ ಮೀಮಾಂಸೆ-ದೈವಪ್ರೇರಣೆ

ಕಾವ್ಯವು ಅಲೌಕಿಕವಾದ-ಪಾರಮಾರ್ಥಿಕವಾದ ಫಲಗಳನ್ನು ನೀಡುವ ಶಕ್ತಿಯುಳ್ಳದ್ದು ಎಂದು ನಮ್ಮ ಕವಿಗಳು ನಂಬುವಂತೆಯೇ ಕವಿತಾ ಸೃಷ್ಟಿ ಶಕ್ತಿ ಕೂಡ ದೈವಿಕವಾದದ್ದು ಎಂದೂ ಕೆಲವರು ನಂಬುತ್ತಾರೆ. ನಾನು ಈ ಕಾವ್ಯವನ್ನು ರಚಿಸಿದೆ. ನಾನು ಈ ಕಾವ್ಯವನ್ನು ಹೇಳುತ್ತಿದ್ದೇನೆ ಎಂದು ಹೇಳುತ್ತ ವಿಶಿಷ್ಟವಾದ ಪ್ರತಿಭೆ, ಪಾಂಡಿತ್ಯ, ವ್ಯುತ್ಪತ್ತಿ, ಶ್ರಮಶೀಲತೆಗಳುಳ್ಳ ಮಾನವ ವ್ಯಕ್ತಿತ್ವದ ಉತ್ಪನ್ನ ಕವಿತೆ ಎಂದು ಭಾವಿಸಿರುವವರೂ ನಮ್ಮಲ್ಲಿದ್ದಾರೆ. ಹಾಗೇ ಕಾವ್ಯ ಸೃಷ್ಟಿ ಶಕ್ತಿಯು ದೈವದತ್ತವಾದದ್ದು, ಅದು ಅಭ್ಯಾಸದಿಂದ ಕಲಿತು ಸಿದ್ಧಿಸಿಕೊಳ್ಳಬಹುದಾದ ವಿದ್ಯೆ ಅಲ್ಲ ಎಂಬ ನಂಬಿಕೆಯವರೂ ನಮ್ಮಲ್ಲಿದ್ದಾರೆ. ಪಾಂಡಿತ್ಯವನ್ನಾದರೋ ಯಾರು ಬೇಕಾದರೂ ಗಳಿಸಿಕೊಳ್ಳಬಹುದು ಆದರೆ ಕವಿತ್ವ ಶಕ್ತಿಯು ದೈವಕೃಪೆ ಇಲ್ಲದೆ ಹಾಗೆಲ್ಲ ಎಲ್ಲರಿಗು ಸಿದ್ಧಿಸುವುದಿಲ್ಲ ಎಂದೇ ನಮ್ಮಲ್ಲಿ ಅನೇಕರು ಭಾವಿಸುತ್ತಾರೆ.

ಶಾಸ್ತ್ರಾದಿಗಳೆಂಬ ಮೇರು ಪರ್ವತವನ್ನು ಯಾರು ತಾನೇ ಏರುವುದಿಲ್ಲ? ತುದಿಯಲ್ಲಿನ ಶಿಖರದಲ್ಲಿರುವ ಕವಿತಾ ಚಿಂತಾರತ್ನಗಳು ಎಲ್ಲರಿಗು ದೊರೆಯುತ್ತವೆಯೇ? ಶಿವನ ಕೃಪೆ ಇಲ್ಲದವನಿಗೆ ಈ ಧರಣಿಯಲ್ಲಿ ನೂತನ ಕವಿತಾರತ್ನವು ದೊರೆಯುವುದಿಲ್ಲ.' (ರಾ.ವಿ. 1-29) ಕವಿತ್ವವು ಧರಣಿಯಲ್ಲಿ ದೈವದತ್ತವಾದದ್ದು ಎನ್ನುವ ಈ ಷಡಕ್ಷರಿಯ ಮಾತಿನಲ್ಲಿ ಶಾಸ್ತ್ರ ಮತ್ತು ಕವಿತಾ ಸೃಷ್ಟಿಗಳ ನಡುವೆ ದೊಡ್ಡದು ಚಿಕ್ಕದೆಂಬ ಸೂಕ್ಷ್ಮ ವ್ಯತ್ಯಾಸವಿದೆ. 'ವೀರ ನಾರಾಯಣನೆ ಕವಿ ಲಿಪಿಕಾರ ಕುವರವ್ಯಾಸ' ಎಂದು ಕುಮಾರವ್ಯಾಸನೂ ಹೇಳುತ್ತಾನೆ. 'ಜಾಣರಂ ತಲೆದೂಗಿಸದೆ ನುಡಿದೊಡಾ ಪದ/ಕ್ಕೂಣೆಯಂ ಬಹುದೆಂದು ಸರಸೋಕ್ತಿಯಿಂದೆ ಗೀ/ರ್ವಾಣಪುರನಿಲಯ ಲಕ್ಷ್ಮೀವರಂ ತಾನೆ ಸಂಗೀತ ಸುಕಲಾ ನಿಪುಣನು/ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ ವಾಣಿಯಿಂ ಕವಿತೆಯಂ ಪೇಳಿಸಿದನ್..' (ಜೈ.ಭಾ. 1-8) ಎಂದು ಲಕ್ಷ್ಮೀಶನೂ ಹೆಳುತ್ತಾನೆ. ಹಾಗೇ 'ದೇಗುಲದ ಒಳಗಿದ್ದುಕೊಂಡು ಯಾರಾದರೂ ಮಾತನಾಡಿದರೆ ದೇಗುಲವೇ ಮಾತಾಡಿದಂತೆ ಸಾಮಾನ್ಯ ಜನರಿಗೆ ಅನ್ನಿಸುವುದುಂಟು. ಆದರೆ ಅದು ನಿಜವಲ್ಲ. ಹಾಗೆಯೇ ಈ ಕಾವ್ಯವನ್ನು ನಾನೇ ರಚಿಸಿದಂತೆ ತೋರುತ್ತದೆಯಾದರೂ ನಾನು ರಚಿಸಿಲ್ಲ. ಗುರು ಗುಹೇಶ್ವರನು ನನ್ನ ಒಳಗಿಂದ ನುಡಿಸಲು ಅದನ್ನು ಆಗು ಮಾಡುವಂತೆ ಈ ಪ್ರಬುಲಿಂಗಲೀಲೆಯನ್ನು ಹೇಳಿದ್ದೇನೆ.' 'ಈ ಕೃತಿಯನ್ನು ಹೆಳುತ್ತಿರುವವನು ನಿಜವಾಗಿಯೂ ನಾನಲ್ಲ.. ಶಿವನ ನಾಟಕದ ಮಹಿಮೆಯನ್ನು ಶಿವನೇ ಬಲ್ಲನು. ಹಾಗೆಂದೇ ಭಕ್ತರು ಈ ಪ್ರಭುಲಿಂಗಲೀಲೆಯನ್ನು ತಿಳಿಯುವುದು.' (ಪ್ರ.ಲಿಂ.ಲೀ 1-8, 10) ಎಂದು ಚಾಮರಸನೂ ಹೇಳಿದ್ದಾನೆ. 'ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನ್ ಎನ್ನ ಬಗೆಯೊಳ್ ನಿಲೆ ನಿರ್ಮಲ ತತ್ವಬೋಧಂ

ಉದ್ಯೋತಿಪುದೆಂಬುದನ್ ಬಯಸಿ ಪೇಳಲ್ ಒಡರ್ಚಿದೆನೀ ಪ್ರಬಂಧಮಂ' (ಜ.ವಿ. 1-17) ಎಂದು ರುದ್ರಭಟ್ಟನೂ ಹೇಳಿದ್ದಾನೆ.

> ಬಿನ್ನಹ ಗುರುವೇ ಧ್ಯಾನಕೆ ಬೇಸರಾದಾಗ/ನಿನ್ನನಾದಿಯ ಮಾಡಿಕೊಂಡು ಕನ್ನಡದೊಳಗೊಂದು
> ಕತೆಯ ಪೇಳುವೆನು ಅದು ನಿನ್ನಾಜ್ಞೆ ಕಂಡ್ಯಾ ನನ್ನೊಡೆಯಾ (ಭ.ವೈ. 1-2)
>
> ಗುರು ಹಂಸನಾಥನಾಜ್ಞೆಯೊಳು ಸಿದ್ಧಾಂತದ/ ತಿರುಳರಿದು ಆತ್ಮಲೀಲಾರ್ಥ
> ಭರತೇಶವೈಭವವೆಂಬ ಕಾವ್ಯವಿದನು/ ಬರೆದೆನು ಸುಖಿಗಳಾಲಿಪುದು (ಭ.ವೈ. 80-115)

ಎಂದು ರತ್ನಾಕರನೂ ಹೇಳಿದ್ದಾನೆ. ಇವರ ಎಲ್ಲ ಮಾತುಗಳಲ್ಲಿ ವಿನಯ, ನಮ್ರತೆಗಳು ಎದ್ದು ಕಾಣುತ್ತವೆ. ಆದರೂ ಈ ಮಾತುಗಳು ಕೇವಲ ವಿನಯದ ಮಾತುಗಳಲ್ಲ. ಕವಿಯ ಕಾವ್ಯಸೃಷ್ಟಿ ಮೀಮಾಂಸೆಯ ಬಗೆಗಿನ ತತ್ವಗಳಿವು. ಕವಿಯ ಪಾತ್ರ, ಕವಿಯ ಸೃಷ್ಟಿಶಕ್ತಿ, ಸೃಷ್ಟಿ ಕಾರಣ, ಮತ್ತು ಕವಿ ಎಂಬ ಕಲ್ಪನೆ ಈ ಎಲ್ಲವುಗಳನ್ನು ಕುರಿತ ಜಿಜ್ಞಾಸೆಗಳು ಇಲ್ಲಿವೆ. ಲಕ್ಷ್ಮೀಶ, ಕುಮಾರವ್ಯಾಸ, ಚಾಮರಸ ಈ ಮೂವರೂ ಕೃತಿ ಸೃಷ್ಟಿಶಕ್ತಿಯಲ್ಲಿ ಮಾನವ ಕೇವಲ ಸಾಧನ ಮಾತ್ರ ಎನ್ನುತ್ತಾರೆ. ವೀಣೆ-ವೈಣಿಕ, ಕವಿ-ಲಿಪಿಕಾರ, ಒಳಗಿನ ಆತ್ಮ ಮತ್ತು ನುಡಿ ಈ ರೂಪಕಗಳ ಮೂಲಕ ಕವಿ ಎಂಬ ಮನುಷ್ಯ ಕಾವ್ಯ ಸೃಷ್ಟಿಯಲ್ಲಿ ಕೇವಲ ನಿಮಿತ್ತ ಮಾತ್ರ ಎನ್ನುತ್ತಾರೆ. ಕುಮಾರವ್ಯಾಸನು ತನ್ನನ್ನು ತಾನು ವೀರನಾರಾಯಣನ ಕಿಂಕರ ಎಂದು ಕರೆದುಕೊಂಡ ಹಾಗೆ ರತ್ನಾಕರನೂ ತನ್ನ ಕಾವ್ಯ ಸೃಷ್ಟಿಯು ಒಡೆಯನಾದ ಹಂಸನಾಥನ ಆಜ್ಞೆಯಿಂದ ಆಗಿದೆ ಎಂದು ಹೇಳುತ್ತಾನೆ. ಈ ಒಡೆಯ ಕಿಂಕರ ಸಂಬಂಧ ಕೂಡ ಕವಿಯ ಪ್ರತಿಭಾಶಕ್ತಿ ದೈವದತ್ತವಾದದ್ದು ಎಂದೇ ಹೇಳುತ್ತದೆ. ಕಾವ್ಯದ ಸೃಷ್ಟಿಯು ದೈವಲೀಲೆಯ ಒಂದು ಭಾಗ ಎನ್ನುತ್ತ ನಮ್ಮ ಕವಿಗಳು ಕಾವ್ಯಕ್ಕೆ ಒಂದು ಅತಿಮಾನುಷ, ಪಾರಮಾರ್ಥಿಕ ಅಂತಸ್ತನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಆ ಮೂಲಕ ಪಠ್ಯಗಳು ಪವಿತ್ರವೆಂದೂ, ಆರಾಧನಾ-ಪಾರಾಯಣ ಪಾತ್ರವೆಂದೂ ಜನರು ಭಾವಿಸುವಂತೆ, ನಂಬಿ ಅನುಸರಿಸುವಂತೆ ಮಾಡಿದ್ದಾರೆ. ಪಠ್ಯವನ್ನು ಚಲಾವಣೆಗೆ, ಜನಬಳಕೆಗೆ ಸಿದ್ಧಮಾಡುವ ತಂತ್ರಗಾರಿಕೆ ಇದು. ಪಠ್ಯವನ್ನು ಯಾರೂ ಪ್ರಶ್ನೆ ಮಾಡಬಾರದು ಎಂಬ ಹುನ್ನಾರವೂ ಸ್ವಂತಿಕೆಯ ನಿರಾಕರಣೆಯ ವಿನಯವೂ ಒಟ್ಟಿಗೇ ಪ್ರಕಟವಾಗುವ ಬಗೆ ಇದು. ಹಾಗೇ ಇದು ವಸ್ತುನಿಷ್ಠ, ಪಠ್ಯನಿಷ್ಠ ವಿಮರ್ಶೆಯನ್ನು ದೂರವಿಡುವ ತಂತ್ರ ಕೂಡ ಹೌದು. ಪಠ್ಯಗಳು ಪಂಡಿತಮಾನ್ಯ ಎಂದಾದ ಮೇಲೆ ಜನ ಮರುಮಾತಿಲ್ಲದೆ ಕೇಳಬೇಕು; ಇನ್ನು ದೈವವೇ ಈ ಕಾವ್ಯಕ್ಕೆ ಪ್ರೇರಣೆ-ಇದು ದೈವವಾಣಿ ಎಚಿದಾದರೆ! ಆರಾಧಿಸಬೇಕು, ಆನಂದಿಸಬೇಕು, ಪ್ರಶ್ನಿಸಬಾರದು-ಇಂತಹ ತಾತ್ವಿಕ ತಳಹದಿ ನಮ್ಮ ಈ ಕವಿಗಳ ಮಾತುಗಳಲ್ಲಿದೆ. ಭಕ್ತಿ ತತ್ವವು ಹೇಗೆ ಕಾವ್ಯ ತತ್ವವಾಗುತ್ತದೆ ಎಂಬುದಕ್ಕು ಈ ಮಾತುಗಳು ಉದಾಹರಣೆಗಳಾಗಿವೆ.

### 1.3.6. ಸ್ವಂತಿಕೆಯ ತತ್ವ-ಸ್ವೀಕಾರ ಸಿದ್ಧಾಂತ

ನಮ್ಮ ಎಲ್ಲ ಕವಿಗಳು ತಮ್ಮ ತಮ್ಮ ಧರ್ಮದ ಮತ್ತು ಸಂಸ್ಕೃತ ಭಾಷೆಯ ಸಾಕಷ್ಟು ಪೂರ್ವಕವಿಗಳನ್ನು ನೆನೆಯುತ್ತ ಅವರ ಕಾವ್ಯಗಳ ಗುಣಗಳು ನಮ್ಮ ಕಾವ್ಯದಲ್ಲಿ ನೆಲೆಸಲಿ ಎಂದು ಕೇಳಿಕೊಳ್ಳುತ್ತಾರೆ. ತಪ್ಪುಗಳಿದ್ದರೆ ಸುಜನರು ತಿದ್ದಿ ಎಂದೂ ಕೇಳುತ್ತಾರೆ. ಆದರೆ ಅದೇ ರೀತಿ ಇನ್ನೊಬ್ಬರಿಂದ ಏನನ್ನೂ ಕಡ ಪಡೆಯದ ಸ್ವಂತಿಕೆಯ ಬಗೆಗೂ ಮಾತನಾಡಿದ್ದಾರೆ. ಕವಿ ಕುಮಾರವ್ಯಾಸನು 'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ ಪದವಿಟ್ಟಳುಪದೊಂದಗ್ಗಳಿಕೆ' ಎಂದು ಹೇಳುತ್ತಲೇ 'ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ'ಯ (ಗ.ಭಾ.1-15) ಬಗ್ಗೆ ಕೂಡ ಹೇಳುತ್ತಾನೆ. ಇನ್ನೊಬ್ಬರ ಶೈಲಿ, ಇನ್ನೊಬ್ಬರ ಬರವಣಿಗೆಯ ಕ್ರಮ ಇವುಗಳನ್ನು ನಾನು ಅನುಕರಿಸಿಲ್ಲ ಎಂದಿದ್ದಾನೆ. ಷಡಕ್ಷರಿಯು 'ಇನ್ನೊಬ್ಬರ ಸಂಪತ್ತಿಗೆ ಕೈ ಇಕ್ಕದವನು ಹೇಗೆ ಐಶ್ವರ್ಯ ವಂಚಿತನೋ ಹಾಗೆ ಇನ್ನೊಬ್ಬರ ಪದಾರ್ಥಗಳಿಗೆ ಕೈ ಇಕ್ಕದ ಸತ್ಕವಿಯ ಕೃತಿ ಕಿರಿದಾದರೂ ಅದು ಹಿರಿದೆನ್ನಿಸುವುದು.' (ರಾ.ವಿ. 1-32) ಎನ್ನುತ್ತಾನೆ. ಜನ್ನನ ಯಶೋಧರ ಚರಿತೆಯನ್ನೂ ರತ್ನಾಕರನ ಭರತೇಶ ವೈಭವವನ್ನೂ ಅಕ್ಕಪಕ್ಕ ಇಟ್ಟರೆ ಷಡಕ್ಷರಿಯ ಮಾತಿನ ಅರ್ಥ ಗೊತ್ತಾಗುತ್ತದೆ. ಗಾತ್ರದಲ್ಲಿ ಯಶೋಧರ ಚರಿತೆ ಚಿಕ್ಕದಾದರೂ ಗುಣದಲ್ಲಿ ಚಿಕ್ಕದೇನೂ ಅಲ್ಲ. ವಸ್ತು ಸಾಮಗ್ರಿಯನ್ನು ನಮ್ಮ ಕವಿಗಳು ಪೂರ್ವ ಕವಿಗಳಿಂದ ಎತ್ತಿಕೊಳ್ಳುವುದು ಸರ್ವೇಸಾಮಾನ್ಯವಾದುದು. ಹಾಗೆ ನೋಡಿದರೆ ನಮ್ಮ ರಾಮಾಯಣ ಮಹಾಭಾರತದ ಕತೆಗಳು ಕನ್ನಡದಲ್ಲೆ ಮತ್ತೆ ಮತ್ತೆ ಪುನರ್ಕಥನಕ್ಕೆ ಗುರಿಯಾಗಿವೆ. ನಮ್ಮ ಅನೇಕ ಕಥನಗಳು ಸಂಸ್ಕೃತ, ಪ್ರಾಕೃತ, ಪೈಶಾಚಿ, ದ್ರಮಿಳ ಮೂಲಗಳಿಂದ ಬಂದ ಪುನರ್ಕಥನಗಳೇ ಆಗಿವೆ. ಹಾಗಾಗಿ ನಮ್ಮ ಕವಿಗಳು ವಸ್ತುಸಾಮಗ್ರಿಯ ಸ್ವೀಕಾರದ ಬಗೆಗೆ ಮಾತ್ರ ಸ್ವಂತಿಕೆಯ ಮಾತನಾಡುವುದಿಲ್ಲ. 'ವ್ಯಾಸ ವಚನಾಮೃತ ವಾರ್ಧಿಯನೀಸುವೆನ್ ಕವಿವ್ಯಾಸನೆನ್ ಎಂಬ ಗರ್ವಮೆನಗಿಲ್ಲ' ಎಂದು ಪಂಪ ವಿನಯದಿಂದ ಹೇಳಿಕೊಂಡರೆ 'ತಾಪಸೋತ್ತಮನಾದ

ಜೈಮಿನಿ ಮುನೇಶ್ವರನು ಜನಮೇಜಯನಿಗೆ ಹೇಳಿದ ಸಂಗತಿಗಳನ್ನೆ ನಾನು ಕನ್ನಡದ ಭಾಷಾ ಪದ್ಧತಿಯಲ್ಲಿ ಹೇಳುತ್ತಿದ್ದೇನೆ.' (ಜೈ.ಭಾ. 34–41) ಎಂಬ ವಿನಯದಿಂದ ಲಕ್ಷ್ಮೀಶನು ಹೇಳಿದ್ದಾನೆ. ಸಾಳ್ವನು ಸಂಸ್ಕೃತ ಕನ್ನಡ ಶಾಸ್ತ್ರ ಕವಿಗಳ ವಿಚಾರಗಳನ್ನೆ ಎರಡೂ ಭಾಷೆಗಳಿಗೆ ಒಪ್ಪುವಂತೆ ಕನ್ನಡಿಸಿ ಹೆಳುತ್ತೇನೆ ಎಂದು ಹೇಳಿಕೊಂಡಿದ್ದಾನೆ. ಹೀಗೆ ವಸ್ತು ಸಾಮಗ್ರಿಯ ಕುರಿತು ಈ ಹಿಂದೆ ಕಥಿಸಿರುವ ಕವಿಗಳ ಬಗ್ಗೆ ಇವರಿಗೆ ಗೌರವವಿದೆ. ಇದ್ದಾಗ್ಯೂ ಕನ್ನಡದಲ್ಲಿ ಈವರೆಗೆ ಯಾರೂ ಹೇಳಿರದ ರೀತಿಯಲ್ಲಿ ಅವನಿಗೆ ಮುಮ್ಮಡಿಯಾಗಿ, ಇವನಿಗೆ ನೂರ್ಮಡಿಯಾಗಿ, ಮುನ್ನಿನ ಕಬ್ಬಗಳನ್ನೆಲ್ಲ ಇಕ್ಕಿ ಮೆಟ್ಟುವಂತೆ, ಇದುವರೆಗೆ ಯಾರೂ ಹೇಳಿಲ್ಲದಂತೆ ನಾನು ಕಾವ್ಯ ಬರೆದಿದ್ದೇನೆ ಎಂದು ನಮ್ಮ ಹಲವು ಕವಿಗಳು ಹೇಳಿಕೊಂಡಿದ್ದಾರೆ. ಸ್ವೀಕಾರ ಮತ್ತು ಸ್ವಂತಿಕೆಯ ಬಗ್ಗೆ ನಮ್ಮಲ್ಲಿ ಅರ್ಥಗಳೇ ಬೇರೆ ಇವೆ.

ಪೆರರ ನುಡಿ ಪೆರರ ಮಾರ್ಗಂ ಪೆರರರ್ಥಂ ಪೆರರ ದೇಸಿ ಪೆರರೋಜೆಯೆನಲ್
ಪೆರರ ಬಳಿಸಂದು ತನ್ನಂ ಮೆರೆವಂ ಕವಿಯಲ್ಲ ಮಾಟಕಾರರ ಚೋಹಂ (ಮ.ಪು. 1–30)

ಉತ್ತಮ ಕವಿಗಳನ್ನೊತ್ತರಿಸಿದ ನುಡಿಗಳ/ನೆತ್ತಿಕೊಂಡದರಿಂದ
ಕೃತಿಯೊತ್ತಂಬರದಿಂದೊರೆವ ಕವಿಗಳನಜ/ ಪೆತ್ತನೇಕೆಂದಾನರಿಯೆ (ಕು.ರಾ.ಸಾಂ. 1–82)

ಬೇರೆಯವನ ಬೆಡಗು, ಬೇರೆಯವನ ಮಾತಿನ ಶಕ್ತಿ, ಬೇರೆಯವನ ದೇಸೆ,
ಬೇರೆಯವನ ರಸಜ್ಞತಾ ಸಂಗತಿಗಳನ್ನೆ ಹೇಳುತ್ತ ಹಳೆ ಕವಿಗಳು ನುಡಿದ
ಮಾತನ್ನೆ ಅದಲಿ ಬದಲಿ ಮಾಡಿ ಕಾವ್ಯ ಕಟ್ಟುತ್ತ ಕವಿಗಳ ವೇಷ ಹಾಕಿ
ಕುಣಿಯುವವನು ವಿದೂಷಕನೆಂದು ಹೇಳಿ ನಕ್ಕುಬಿಡುತ್ತೇನೆ (ಅನಂ.ಪು. 1–46)

ಇಲ್ಲಿ ನಾಗಚಂದ್ರ ಮತ್ತು ಜನ್ನ ಇಬ್ಬರೂ ಸ್ವಂತಿಕೆ ಎಂದರೆ ಶೈಲಿಯ ಸ್ವಂತಿಕೆ, ಬಿಡಿ ಬಿಡಿ ಮಾತುಗಳ ಸ್ವಂತಿಕೆ, ಅಲಂಕಾರ, ರಸಭಾವ, ಬೆಡಗು, ಅರ್ಥ, ಓಜೆಗಳ ಸ್ವಂತಿಕೆ ಎಂದು ಹೇಳುತ್ತಾರೆ. ಇವುಗಳನ್ನು ಬೇರೆಯವರಿಂದ ಕದ್ದು ಅನುಕರಿಸಿದರೆ ಕವಿಯು ವಿದೂಷಕನಿಗೆ ಅಥವಾ ಕೋಡಂಗಿಗೆ ಸಮಾನ. ಅವನು ನಕಲಿ ಎಂದು ಗೇಲಿ ಮಾಡುತ್ತಾರೆ. ಹೀಗಾಗಿ ನಮ್ಮವರ ಸ್ವಂತಿಕೆ ಎಂಬುದು ಭಾಷಾ ಪ್ರಯೋಗದಲ್ಲಿ, ಮಾತಿನ ರೀತಿಯಲ್ಲಿ, ಬರವಣಿಗೆಯ ಶೈಲಿಯಲ್ಲಿ, ಹೊಸ ದೇಸಿಯನ್ನು ಬಳಸುವ ಕ್ರಮದಲ್ಲಿ ಅಡಗಿದೆ. ನವೀನ ರೀತಿಯಲ್ಲಿ ನೂತನ ಕಾವ್ಯವನ್ನು ಹೇಳುವ ಬಗ್ಗೆ ನಮ್ಮ ಹಲವು ಕವಿಗಳು ಪ್ರಸ್ತಾಪಿಸಿದ್ದಾರೆ. ನೂತನತೆ ಎಂದರೆ ಹೊಸ ರೀತಿಯ ವಸ್ತು ನಿರ್ವಹಣಾ ಕ್ರಮ. ವಸ್ತು ನಿರ್ವಹಣೆಯಲ್ಲಿ ಅಷ್ಟೇ ಅಲ್ಲದೆ ವಸ್ತುವಿನ ಸೃಷ್ಟಿ ಮತ್ತು ಆಯ್ಕೆಯಲ್ಲಿ ಹರಿಹರ ನಂಜುಂಡ ರಾಘವಾಂಕಾದಿಗಳು ಸ್ವಂತಿಕೆ ಮೆರೆದಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಆದರೂ ನಮ್ಮವರ ಸ್ವಂತಿಕೆಯ ತತ್ವವು ಹೊಸ ರೀತಿಯ ಭಾಷಾಪ್ರಜ್ಞೆ, ಶೈಲಿಪ್ರಜ್ಞೆಯ ತತ್ವವೂ ಆಗಿದೆ. ಇದನ್ನೆಲ್ಲ ನೋಡಿದರೆ ಎರಡು ವಿಚಾರಗಳು ಸಿದ್ಧವಾಗುತ್ತವೆ. ಒಂದು: ನಮ್ಮ ಕಾವ್ಯಪರಂಪರೆಯುದ್ದಕ್ಕೂ ಪರಸ್ಪರ ಪ್ರಭಾವ–ಮೀರುವಿಕೆ, ಕೊಡುಕೊಳೆ ನಡೆದಿದ್ದರೂ ಸ್ವೀಕಾರ ಮತ್ತು ಸ್ವಂತಿಕೆಗಳ ನಡುವೆ ಘರ್ಷಣೆಯು ಬಹು ಜೋರಾಗಿ ನಡೆದಿದೆ. ಇನ್ನೊಂದು: ವಸ್ತು ಸಾಮಗ್ರಿಯನ್ನು ಸ್ವೀಕರಿಸಿ ಅದನ್ನು ಮರುಕಥಿಸುವ ಬಗ್ಗೆ ನಮ್ಮವರಿಗೆ ಯಾವ ತಕರಾರೂ ಇಲ್ಲ. ಆದರೆ ಹೊಸದೆಂಬಂತೆ, ಹೊಸ ರೀತಿಯಲ್ಲಿ ಕಾವ್ಯ ಕಟ್ಟುವ ಸಂಕಲ್ಪ ಬಹುಪಾಲು ಎಲ್ಲರಲ್ಲೂ ಇರುವಂತೆ ಕಾಣುತ್ತದೆ. ಶೈಲಿಯನ್ನು, ಬಿಡಿ ಮಾತುಗಳನ್ನು ಕಡ ತರಬಾರದು ಎಂಬುದು ನಮ್ಮವರ ಸ್ವೀಕಾರ ಸಿದ್ಧಾಂತ. ನಮ್ಮವರ ಪ್ರಕಾರ ವಸ್ತು ಸ್ವೀಕಾರಕ್ಕೆ ನಿರ್ಬಂಧವಿಲ್ಲ. ಕಥನವನ್ನು ಪುನರ್ಕಥಿಸಬಹುದು ಎಂಬ ಅನೌಪಚಾರಿಕ ಒಪ್ಪಿಗೆಯೊಂದು ನಮ್ಮಲ್ಲಿ ಚಾಲ್ತಿಯಲ್ಲಿ ಇದ್ದಂತೆ ಕಾಣುತ್ತದೆ. ಹೀಗೆ ನಮ್ಮಲ್ಲಿ ವಸ್ತುವಿನ ವಿಚಾರದಲ್ಲಿ ಸ್ವಂತಿಕೆ ಎನ್ನುವುದು ಕೆಲವರಿಗೆ ಸಾಪೇಕ್ಷ ಕಲ್ಪನೆಯಾದರೆ ಕೆಲವರಿಗೆ ಅದೊಂದು ಹುಸಿಕಲ್ಪನೆ. ಚರ್ಚೆಯ ವಿಚಾರವೇ ಅಲ್ಲ.

### 1.4. ಕೇಳು ಕಾವ್ಯತತ್ವ

ನಮ್ಮ ಪ್ರಾಚೀನರಲ್ಲಿ ಕಾವ್ಯಗಳ ಹಲವು ರೀತಿಯ ಅನುಸಂಧಾನಗಳು ಜರುಗಿವೆ. ಈ ಹಲವು ಅನುಸಂಧಾನಗಳನ್ನು ನಡೆಸಿರುವ ಹಲವು ವರ್ಗಗಳಿವೆ. ಕಾವ್ಯವನ್ನು ಶಿಕ್ಷಣದ ಒಂದು ಭಾಗವಾಗಿ ಜೀವನತತ್ವಗಳನ್ನು ಅರಿಯಲು ಅಭ್ಯಾಸ ಮಾಡುವ ವಿದ್ಯಾರ್ಥಿವರ್ಗ; ಕಾವ್ಯವನ್ನು ಅದು ಲಕ್ಷಣಬದ್ಧವಾಗಿದೆಯೇ ಇಲ್ಲವೇ ಎಂದು ಮೀಮಾಂಸೆ, ಅಲಂಕಾರ, ಛಂದಸ್ಸು, ಶಬ್ದಶಾಸ್ತ್ರಗಳ ಮೂಲಕ ಪರೀಕ್ಷೆಗೆ ಗುರಿಮಾಡುವ ಪಂಡಿತವರ್ಗ; ಆತ್ಮಸಂತೋಷಕ್ಕಾಗಿ ಕಾವ್ಯವನ್ನು ಓದಿಕೊಳ್ಳುವ ಓದುಗ ವರ್ಗ; ಜನರಿಗಾಗಿ ರಾಗಬದ್ಧವಾಗಿ

ವಾಚಿಸಿ, ವ್ಯಾಖ್ಯಾನಿಸಿ, ಅರ್ಥೈಸುವ ಗಮಕವರ್ಗ; ತಾವು ಬರೆಯುವ ಕಾವ್ಯಗಳಿಗಾಗಿ ಪೂರ್ವಕಾವ್ಯಗಳ ಅನುಭವಗಳನ್ನು ಪಡೆಯಲು ಅವುಗಳನ್ನು ಅಭ್ಯಾಸ ಮಾಡುವ ನವಕವಿವರ್ಗ; ರಾಜಸಭೆ, ಪಂಡಿತಮಂಡಲಿ, ಗೋಷ್ಠಿಗಳಲ್ಲಿ ತಮ್ಮ ವಾಗ್ಮಿತೆ-ವಾದಗಳನ್ನು ಪುಷ್ಟೀಕರಿಸಲು, ಸಮರ್ಥಿಸಲು, ನಿರಾಕರಿಸಲು ಕಾವ್ಯಗಳನ್ನು ಬಳಸುವ ವಾದಿ-ವಾಗ್ಮಿಗಳ ವರ್ಗ; ಪುರಾಣಕಥನ-ಪುಣ್ಯಶ್ರವಣ-ಕತೆ ಓದಿಸುವುದು ಇತ್ಯಾದಿಗಳಿಗೆ ಕಾವ್ಯಗಳನ್ನು ಬಳಸುವ ವಾಚಕವರ್ಗ; ಧಾರ್ಮಿಕ ಪಠಣ, ಪಾರಾಯಣಗಳಿಗಾಗಿ ಕಾವ್ಯಗಳನ್ನು ಪವಿತ್ರ ಗ್ರಂಥಗಳಂತೆ ಬಳಸುವ ಭಕ್ತವರ್ಗ; ಶಿವಾನುಭವಗೋಷ್ಠಿ, ಶಿವಸಂಕಥಾಗೋಷ್ಠಿ, ಕೇಳಿಕೆ, ತತ್ವಕ್ಕೆ ಹಾಕುವುದು ಮೊದಲಾದ ಚರ್ಚಾಕಾರ್ಯಗಳಿಗೆ ಕಾವ್ಯಗಳನ್ನು ಬಳಸುವ ತಾತ್ವಿಕವರ್ಗ; ನಾಟಕಕ್ಕೆ, ಹಾಡುವುದಕ್ಕೆ, ಬಾಜಿಸುವುದಕ್ಕೆ ಬಳಸುವ ನಟವರ್ಗ ಹೀಗೆ ಮತ್ತು ಮುಂತಾದ ಅನೇಕ ಓದುಗ ವರ್ಗಗಳು ಭಿನ್ನ ಭಿನ್ನ ಉದ್ದೇಶಗಳಿಗಾಗಿ ಕಾವ್ಯದ ಅನುಸಂಧಾನಗಳಿಗೆ ಪ್ರಾಚೀನ ಕಾಲದಲ್ಲಿ ತೊಡಗಿದ್ದಾರೆ. ಇಂದಿಗೂ ತೊಡಗುತ್ತಿದ್ದಾರೆ. ಇಂಥ ಬಹುಪಾಲು ಅನುಸಂಧಾನಗಳಲ್ಲಿ ಓದುವ ವರ್ಗಕ್ಕಿಂತಲೂ ಹಲವು ಪಟ್ಟು ಹೆಚ್ಚಿನ ಸಂಖ್ಯೆಯಲ್ಲಿ ಕೇಳುಗರು ಇರುತ್ತಿದ್ದರು. ಹೀಗಾಗಿ ಕಾವ್ಯಕ್ಕೆ ಓದುಗುಣದ ಜೊತೆಗೆ ಕೇಳು ಗುಣ ಕೂಡ ಇರಬೇಕು ಎಂಬುದು ನಮ್ಮ ಕವಿಗಳ ಕಾವ್ಯತತ್ವಗಳಲ್ಲಿ ಒಂದು ಮುಖ್ಯವಾದ ಕಾವ್ಯತತ್ವ.

'ಕಿವಿಗೆ ಕೇಳಿದೊಡನೆಯೇ ಸವಿ ಸಿಕ್ಕಿ ಓಲಾಡದಿದ್ದರೆ, ತನುಮನವು ಮುಳುಗದಿದ್ದರೆ, ಸೌಖ್ಯಾವಲಂಜಿ ಎನಿಸಿದ ಚಿತ್ತವು ಕಾವ್ಯಲೀಲೆಗೆ ಪರವಶವಾಗದಿದ್ದರೆ ಅದೊಂದು ಸತ್ಕೃತಿಯೇ?' (ಹ.ಕಾ. 1-21) ರಾಘವಾಂಕ ಚಿತ್ತವು ಕಾವ್ಯಲೀಲೆಗೆ ಪರವಶವಾಗಬೇಕಾದರೆ ಅದು ಕಿವಿಗೆ ಕೇಳಿದೊಡನೆಯೇ ಸಹೃದಯ ಸವಿ ಸಿಕ್ಕಿ ಓಲಾಡುವಂತೆ ರಚಿತವಾಗಿರಬೇಕು ಎನ್ನುತ್ತಾನೆ. ಕಾವ್ಯವನ್ನು ಹೇಗೆ ರಚಿಸಬೇಕೆಂದರೆ 'ಕವಿ, ವಿಬುಧರ ಕಿವಿಯಲ್ಲಿ ಸೂಸಿದ ರಸವು ಇಳಿದು ತನುವನ್ನೂ ಮನವನ್ನೂ ತುಂಬಿ ಹೊರಸೂಸಿತೇನೋ ಎಂಬಂತೆ ಕಣ್ಣಿನಲ್ಲಿ ಆನಂದದ ನೀರು ತುಳುಕಿ ಬರುವಂತೆ ಕಾವ್ಯವನ್ನು ಹೇಳಬೇಕು' (ರಾ.ವಿ. 1-52). ಹೀಗೆ ನಮ್ಮ ಬಹುಪಾಲು ಪ್ರಾಚೀನ ಕವಿಗಳಲ್ಲಿ ಕೇಳುಕಾವ್ಯ ತತ್ವವು ಪ್ರಕಟವಾಗಿದೆ. ನಮ್ಮ ಬಹುಪಾಲು ಕವಿಗಳು ಕಾವ್ಯವನ್ನು ಬರೆಯುವಾಗ ಲಾಲಿಸಿ, ಪೇಳುವೆನು, ಆಲಿಸಿ, ಒರೆವೆನು, ತಿಳಿಯ ಹೇಳುವೆ, ಕೇಳ್ವುದು, ಒಲಿದಾಲಿಪುದು, ಹೇಳಿದ ಕಾವ್ಯ, ಇಂಥ ಮಾತುಗಳನ್ನು ಬಳಸುತ್ತಾರೆ. ಇಲ್ಲೆಲ್ಲಾ ಕಿವಿಯನ್ನೇ, ಕೇಳುಗನನ್ನೇ ಪ್ರಧಾನವಾಗಿಸಿಕೊಂಡ ಒಂದು ಕಾವ್ಯರಚನಾ ಪದ್ಧತಿ ಇವರ ಮನಸ್ಸಿನಲ್ಲಿ ಇದೆ. ಈ ಕಾವ್ಯತತ್ವವು ಸದಾ ಸಹೃದಯರನ್ನು ಕವಿಗಳು ತಮ್ಮ ಮನಸ್ಸಿನಲ್ಲಿ ಇಟ್ಟುಕೊಂಡು ಪರಿಪಾಲಿಸಿದ ತತ್ವವಾಗಿದೆ. ಹಾಗಾಗಿ ಸಹೃದಯ ಅಥವಾ ಓದುಗ ಮೀಮಾಂಸೆಯ ಒಂದು ಭಾಗವಾಗಿ ಈ ಕಾವ್ಯ ತತ್ವವು ನಮ್ಮ ಕವಿಗಳಲ್ಲಿ ಬರುತ್ತದೆ.

'ಇಂಪಿನಿಂದಲೂ, ಸುರುಚಿರ ಕಾಂತಿಯಿಂದಲೂ, ಸೊಬಗಿನಿಂದಲೂ ಶೋಭಿಸುತ್ತಿರುವ ಈ ಕೃತಿಯು ಬಹುವಾದ ಅನುರಾಗದಿಂದ ಓದುವವರ ನಾಲಿಗೆಗೆ ಅಮೃತವೇ ಆಯಿತು; ಒಲಿದು ಕೇಳುವವರ ಕಿವಿಗೆ ಮಾಣಿಕ್ಯದ ಮಂಜರಿಯಾಯಿತು. ಭಾವಿಸುತ್ತ ಇರುವವರ ಮನಸ್ಸುಗಳಿಗೆ ಹೊಚ್ಚ ಹೊಸ ಬೇಟದ ಹೆಣ್ಣಿನಂತಾಯಿತು.' (ಲೀಲಾ.ಪ್ರ. 1-77), 'ರಸವೋ, ರಸಾಯನವೋ, ಶ್ರುತಿವಸಂತವೋ, ಕಿವಿಗಳಮೃತವೋ...' (ಅ.ನೇ.ಪು. 1-28) ಓದುವವರು ಇರುವಾಗ ಅಲ್ಲಿ ಕೇಳುವವರೂ ಸಾಮಾನ್ಯವಾಗಿ ಇರುತ್ತಾರೆ. ಕಾವ್ಯವು ಓದುವ ಮತ್ತು ಕೇಳುವ ಸಾಮೂಹಿಕವಾದ ಅನುಸಂಧಾನಗಳಿಗೆ ಗುರಿಯಾಗುವ ಸಂಸ್ಕೃತಿ ಇರುವಾಗ ಕೇಳುಗರ ಕಿವಿಗೆ ಕಾವ್ಯವು ಇಂಪಾಗಿಯೂ, ನಾದಮಯವಾಗಿಯೂ, ಮಧುರವಾಗಿಯೂ ಇರಬೇಕಲ್ಲವೇ? ಹಾಗಾಗಿಯೇ ನಮ್ಮ ಕಾವ್ಯಗಳ ಪದ್ಯಗಳನ್ನು ಓದುತ್ತಿದ್ದರೆ, ಅಲ್ಲಿ ಆದಿಪ್ರಾಸ, ಪಾದಾಂತ್ಯ ಯತಿಗಳು ಗಮನಕ್ಕೆ ಬಾರದೆ ಓದಿನ ಮಾಟದಲ್ಲಿ ಕೇಳುವ ಕಿವಿಯನ್ನು ಆಧರಿಸಿದ ಲಯಗಳೇ ಪ್ರಧಾನವಾಗುತ್ತವೆ. ಅರ್ಥಲಯ, ಭಾವಲಯ, ಉಸಿರ್ದಾಣದ ಲಯಗಳೇ ಪ್ರಧಾನವಾಗುತ್ತವೆ. ಶ್ರುತಿ ವಸಂತಗುಣ, ಕಿವಿಗೆ ಅಮೃತದಂತೆ ಸೊಗಸಾಗುವ ಗುಣ, ಮಾಣಿಕ್ಯದ ಮಂಜರಿಯಂತೆ ಶೋಭೆಯಾಗುವ ಗುಣ, ಕೇಳಿದೊಡನೆಯೇ ಸವಿ ಸಿಗುವ ಗುಣ, ಕಾವ್ಯಕ್ಕೆ ಇರಲೇಬೇಕು. ಅದಕ್ಕಾಗಿಯೇ ಪಂಪನು 'ಮೃದು ಮಧುರ ವಚನ ರಚನೆ' ಇದ್ದರೆ ಅದು ಒಳ್ಳೆಯ ಕಾವ್ಯ. 'ಕಿವಿಯಿಂ ಬರೆವುಗುವೊಡೆ ಕೊಂಕುವೆತ್ತ ಪೊಸನುಡಿಯೇ ಪುಗುಗುಮ್' ಎನ್ನುತ್ತಾನೆ. ಕಾವ್ಯವು ಮನಸ್ಸಿಗೆ ಹಿತವಾಗುವುದು ಕಿವಿಯ ಮೂಲಕವೇ. ಅದು ಓದುಗನೇ ಆಗಿರಲಿ ಕೇಳುಗನೇ ಆಗಿರಲಿ, ಯಾರೇ ಆಗಿರಲಿ ಕಾವ್ಯವು ಮನಸ್ಸನ್ನು ಪ್ರವೇಶ ಮಾಡುವುದು ಕಿವಿಯ ಮೂಲಕ.

ಹಾಗಾಗಿ ಕಾವ್ಯ ರಚಿಸುವಾಗ ಅದು ಕೇಳುಕಾವ್ಯದಂತೆ ಇದೆಯೇ? ಎಂಬುದನ್ನು ಮೊದಲು ಗಮನಿಸಬೇಕು ಎಂಬ ಕೇಳುಕಾವ್ಯ ತತ್ವವನ್ನು ನಮ್ಮವರು ಮಂಡಿಸಿದ್ದಾರೆ.

**1.5. ಕವಿ-ಸಹೃದಯ ಮೀಮಾಂಸೆ (ಸುಜನ-ದುರ್ಜನ, ಸತ್ಕವಿ-ಕುಕವಿ ತತ್ವ)**

ಕವಿ, ಓದುಗ, ಕೇಳುಗ, ವಿಮರ್ಶಕ, ಗಮಕಿ, ವಾದಿ, ಹೀಗೆ ಹಲವು ಸಹೃದಯರ ಬಗೆಗೆ ನಮ್ಮ ಕವಿಗಳು ತಮ್ಮ ಪ್ರತಿಕ್ರಿಯೆಗಳನ್ನು ಪ್ರಕಟಿಸಿದ್ದಾರೆ. ಸಹೃದಯ ಎಂಬ ಪದವನ್ನು ನಮ್ಮ ಕವಿಗಳು ಬಳಸುವುದಿಲ್ಲ. ಕವಿಗಳಲ್ಲಿ 'ಸಹಜ ಕವಿ, ಚತುರ ಕವಿ, ನಿಸ್ಸಹಾಯಕ ಕವಿ, ಸುಕವಿ, ಸುಕರ ಕವಿ, ಮಿಥ್ಯಾತ್ವ ಪ್ರಹರ ಕವಿ, ಸುಭಗ ಕವಿ, ನುತಮಹಾಕವೀಂದ್ರ...' (ಸು.ಚ. 1-52) ಹೀಗೆ ಹಲವು ಬಗೆಗಳನ್ನು ಶಾಂತಿನಾಥ ಹೇಳಿದ್ದಾನೆ. ಆದರೂ ನಮ್ಮ ಪ್ರಾಚೀನ ಕವಿಗಳು ಹೇಳುವ ಎರಡು ಮುಖ್ಯವಾದ ಕವಿಗಳ ವರ್ಗಗಳಿವೆ. ಅವೇ ಸತ್ಕವಿ ಮತ್ತು ಕುಕವಿ ವರ್ಗಗಳು. ಸತ್ಕವಿ ಪ್ರಶಂಸೆ ಮತ್ತು ಕುಕವಿ ನಿಂದೆ ನಮ್ಮ ಕಾವ್ಯಗಳ ಒಂದು ಮುಖ್ಯವಾದ ಅಂಗ. ಅಷ್ಟಾದಶ ವರ್ಣನೆ, ರಸ, ಅಲಂಕಾರಗಳು ಕಾವ್ಯಗಳಲ್ಲಿ ಕಾಣಿಸದೇ ಹೋಗಬಹುದು. ಆದರೆ ಈ ಸತ್ಕವಿ ಕುಕವಿ ವಿಚಾರ ಮಾತ್ರ ಅಗತ್ಯವಾಗಿ ಚರ್ಚೆಯಾಗುತ್ತದೆ (ನೋಡಿ.ಸತ್ಕವಿ ಪಶಂಸೆ ಕುಕವಿ ನಿಂದೆ) ಪೂರ್ವಕವಿ ಸ್ಮರಣೆ, ಸತ್ಕವಿ ಕುಕವಿ ನಿರ್ವಚನ, ಸತ್ಕವಿ ಪ್ರಶಂಸೆ-ಕುಕವಿ ನಿಂದೆ, ಸತ್ಕಾವ್ಯ ವಿಚಾರ ಹೀಗೆ ಹಲವು ನೆಲೆಗಳಲ್ಲಿ ಕವಿ ಮೀಮಾಂಸೆಯನ್ನು ನಮ್ಮವರು ಮಂಡಿಸಿದ್ದಾರೆ. ಕವಿ ಎಂಬ ಪರಿಕಲ್ಪನೆಯನ್ನು ನಮ್ಮವರು ಚರ್ಚೆ ಮಾಡುವುದೇ ಒಳ್ಳೆಯ ಕವಿ ಕೆಟ್ಟ ಕವಿ ಎಂದರೆ ಯಾರು ಎಂಬ ಜಿಜ್ಞಾಸೆ ನಡೆಸುವ ಮೂಲಕ. ಇದು ಸಹೃದಯ ಮೀಮಾಂಸೆಗೂ ಅನ್ವಯಿಸುವ ವಿಚಾರ. ಸಹೃದಯ ಮೀಮಾಂಸೆಯು ಕೂಡ ಒಳ್ಳೆಯ ಓದುಗ, ಕೆಟ್ಟ ಓದುಗ (ಸಜ್ಜನ, ಬುಧ, ಕುಜನ, ದುರ್ಜನ) ಇಂತಹ ಪರಿಭಾಷೆಗಳ ಮೂಲಕವೇ ಮಂಡಿತವಾಗಿದೆ. ಕವಿ ಮೀಮಾಂಸೆಯು ನಮ್ಮಲ್ಲಿ ಕರ್ತೃಕೇಂದ್ರಿತ ಚಿಂತನೆಯಾಗಿಯೂ, ಆತ್ಮನಿರ್ವಚನ ವಿಚಾರವಾಗಿಯೂ ಪ್ರಕಟವಾದರೆ; ಸಹೃದಯ ಮೀಮಾಂಸೆಯು ನಮ್ಮಲ್ಲಿ ವಾಚಕ ಕೇಂದ್ರಿತ ಚಿಂತನೆಯಾಗಿಯೂ, ಕೇಳುಗ ಕೇಂದ್ರಿತ ಮತ್ತು ವಿಮರ್ಶಕ(ದೂಷಕ) ಕೇಂದ್ರಿತ ಚಿಂತನೆಯಾಗಿಯೂ, ಪ್ರಶಂಸಕ ಅಥವಾ ಸತ್ಕವಿ ವಿಚಾರವಾಗಿಯೂ ಪ್ರಕಟವಾಗಿದೆ.

ಚಿಪ್ಪಿನೊಳಿಹ ಮುತ್ತು ವಸ್ತುಕ ವರ್ಣಕ/ಚಿಪ್ಪ ಕಳೆದು ಸರಗೈದ/ ಸುಪ್ಪಾಣಿ ಮುತ್ತಿನ ಹಾರವೆನಿಪೊಂ/ ದೊಪ್ಪದೋರದೊಡವ ಕವಿಯೆ? (ನಾ.ಚ. 1-61) ಕತೆ ಹೇಳುವುದು ಮತ್ತು ವರ್ಣನೆಗಳನ್ನು ಬಳಸುವುದು ಈ ಎರಡನ್ನೂ ಶ್ರೇಷ್ಠವಾದ ಮುತ್ತಿನ ಹಾರದ ಹಾಗೆ ಹೊಂದಿಕೊಂಡಂತೆ ಕಾವ್ಯ ರಚಿಸುವವನೇ ಕವಿ. ಇವುಗಳ ನಡುವಿನ ಹೊಂದಾಣಿಕೆ ಗೊತ್ತಿಲ್ಲದವನು ಕವಿಯಲ್ಲ. 'ಗೂಡಾರದ ಕವಿಯಂತಿರೆ ಮುಚ್ಚಿ ಹೋದ ಕವಿಯೂ ಕವಿಯೇ? ಕವಿಮಾರ್ಗದಲ್ಲಿ ಒಳಹೊಕ್ಕು ನವರಸವನ್ನು ತೆರೆಯುವಂತೆ ನುಡಿದವನು ಮಾತ್ರವೆ ಒಳ್ಳೆಯ ಕವಿ ಎನ್ನಿಸಿಕೊಳ್ಳಬಲ್ಲ.' (ಅ.ಪು. 1-86) 'ಅರ್ಥಕ್ಕಾಗಿ ಕುದಿದು ಸರಸ್ವತಿಯ ಗೋಣನ್ನು ಮುರಿಯುವವನು ಕವಿಯಲ್ಲ. ಅವನು ಸರಸ್ವತಿ ದ್ರೋಹಿ, ಪಾತಕಿ' (ಅ.ಪು. 1-89) ಒಳ್ಳೆಯ ಕವಿ ಎನ್ನಿಸಿಕೊಳ್ಳಬೇಕಾದರೆ ಕವಿಗೆ ಹಲವಾರು ಲಕ್ಷಣಗಳಿರಬೇಕು. 'ಅವನು ವ್ಯಾಕರಣ ಪರಿಣತನಾಗಿರಬೇಕು, ಅಲಂಕಾರ ತಿಳಿದವನಾಗಿರಬೇಕು, ಅನೇಕ ರಸಚಿತ್ರಗಳನ್ನು ಚಿತ್ರಿಸುವಲ್ಲಿ ನಿಪುಣನಾಗಿರಬೇಕು. ಪದಾರ್ಥ ವಿಚಾರದಲ್ಲಿ ಪ್ರವೀಣನಾಗಿರಬೇಕು. ಹೀಗೆ ಎಲ್ಲಾ ಕಲಾ ಕುಶಲತೆಗಳನ್ನು ಪಡೆದವನು ಕವಿ ಎನ್ನಿಸಿಕೊಳ್ಳುತ್ತಾನೆ.' (ಸೋ.ಚಾ.) ಇವು ಗೊತ್ತಿಲ್ಲದಿರುವವನೆ ಕುಕವಿ. ಬರಿದೆ ಶಬ್ದಗಳನ್ನು ಜೋಡಿಸಿದರೆ ಮಾತ್ರ ಕವಿತ್ವ ಬರುವುದಿಲ್ಲ. ನಮ್ಮ ಬಹುತೇಕ ಕವಿಗಳು 'ಶಬ್ದಸಂಭ್ರಮದಲ್ಲಿ ಹಿಂದುಗಾಣರು ಮುಂದುಗಾಣರು, ತಮ್ಮ ತಾವರಿಯರು' (ಅಲ್ಲಮ) ಹೀಗೆ ಕವಿಯ ಬಗ್ಗೆ-ಅವನು ಎಂಥವನಾಗಿರಬೇಕು ಹೇಗೆ ಬರೆಯಬಲ್ಲವನಾಗಿರಬೇಕು ಎಂಬ ಬಗ್ಗೆ ತಮ್ಮದೇ ಕಲ್ಪನೆಗಳನ್ನು ನಮ್ಮವರು ಇಟ್ಟುಕೊಂಡಿದ್ದಾರೆ. ನೇಮಿಚಂದ್ರನಂತೂ ಲೀಲಾವತಿಯಲ್ಲಿ ಕವಿಗಳ ಅತಿರಂಜಿತ ಕಲ್ಪನೆ-ಉತ್ಪ್ರೇಕ್ಷೆಗಳನ್ನು ಕುರಿತು ಕಟಕಿಯಾಡಿದ್ದಾನೆ. 'ಕಡಲಿಗೆ ಸೇತುವೆಯನ್ನು ಕಪಿಸಮೂಹ ಕಟ್ಟಿತೋ ಕಟ್ಟಲಿಲ್ಲವೋ, ತನ್ನ ಪಾದದಿಂದ ಆಕಾಶವನ್ನು ವಾಮನನು ಅಳೆದನೋ ಅಳೆಯಲಿಲ್ಲವೋ, ಅರ್ಜುನನು ಶಿವನನ್ನು ಮೆಟ್ಟಿ ತುಳಿದನೋ ತುಳಿಯಲಿಲ್ಲವೋ ಕವಿಗಳಂತೂ ತಮ್ಮ ಕೃತಿಬಂಧದಲ್ಲಿ ಇದೆಲ್ಲವನ್ನೂ ಮಾಡಿಸಿದ್ದಾರೆ. ಈ ಕವಿಗಳ ಅಗ್ಗಳಿಕೆಯನ್ನು ಅದೇನೆಂದು ಹೇಳಲಿ!' 'ಕೇಳು ಕೇಳಿದ್ದೆಲ್ಲವನ್ನು ಈ ಮರ(ಕಲ್ಪವೃಕ್ಷ)ವು ಕೊಡುತ್ತದೆ, ಈ ಮಣಿ (ಪರುಷಮಣಿ)ಯು ಕೊಡುತ್ತದೆ, ಈ ಪಶು(ಕಾಮಧೇನು)ವು ಕೊಡುತ್ತದೆ. ಬೇಕಾದರೆ ನೀವೇ ಕೇಳಿನೋಡಿ ಎಂದು ನಮ್ಮ ನಮ್ಮಲ್ಲೆ ಸ್ಪರ್ಧೆಯನ್ನು ಈ ಕವಿಗಳು

ಹುಟ್ಟಿಸಬಲ್ಲರು. ಇವರು ಕೊರಡನ್ನು ಚಿಗುರಿಸಬಲ್ಲರು. ಕಲ್ಲಿನಲ್ಲು ನಾರನ್ನು ಎತ್ತಬಲ್ಲರು. ಹುಚ್ಚನ್ನು ಉನ್ನತ ತತ್ವವೆಂದೇ ಬಿಂಬಿಸಬಲ್ಲರು. ಕಿವಿಗಳಿಗೆ ಅಮೃತವನ್ನೆ ಹಿಂಡಬಲ್ಲರು. ಇಂಥದ್ದೆಲ್ಲವು ಕವಿಶ್ರೇಷ್ಠರಿಗಲ್ಲದೆ ಬೇರೆಯವರಿಗೆ ಸಾಧ್ಯವೇ!' (ಲೀಲಾ.ಪ್ರ. 1-11, 13) ಕವಿಗಳ ಕಲ್ಪನೆ ಮತ್ತು ಉತ್ಪ್ರೇಕ್ಷೆಗಳನ್ನು ಈ ಮಾತುಗಳ ಮೂಲಕ ವಿಡಂಬಿಸುವ ನೇಮಿಚಂದ್ರ ತನ್ನ ಪೂರ್ವ ಕವಿಗಳ ಕಾವ್ಯಗಳನ್ನು ಚೆನ್ನಾಗಿ ಓದಿಕೊಂಡಿದ್ದಾನೆ. ಸಾಮಾಜಿಕ ವಾಸ್ತವ ಮತ್ತು ಸಾಹಿತ್ಯ ವಾಸ್ತವಗಳ ನಡುವಿನ ಅಂತರ ಹೆಚ್ಚಾದಷ್ಟೂ ಸಹಜತೆ ಕಡಿಮೆಯಾಗುತ್ತದೆ ಎಂಬ ಕಾವ್ಯ ತತ್ವವೂ; ಸಹಜವಾಗಿ ಬರೆಯದೆ ಉತ್ಪ್ರೇಕ್ಷಿತವಾಗಿ ಬರೆಯುವ ಕವಿಗಳು ವಾಸ್ತವಪ್ರಜ್ಞೆಯಿಂದ ದೂರವಾದ ಕಲ್ಪನಾರಮ್ಯರು ಎಂಬ ಕವಿತತ್ವವೂ; ಇಲ್ಲಸಲ್ಲದ್ದನ್ನೆಲ್ಲ ಕಾವ್ಯವು ನೀಡಬಲ್ಲದು ಎಂಬ ಉತ್ಪ್ರೇಕ್ಷಿತ ಫಲಶೃತಿ ಮತ್ತು ಅನುಚಿತ ಉಪಮಾ ವರ್ಣನೆಯನ್ನು ವಿರೋಧಿಸುವ ಔಚಿತ್ಯ ತತ್ವವೂ ಈ ಮಾತುಗಳ ಮೂಲಕ ವ್ಯಕ್ತವಾಗುತ್ತದೆ. ನನ್ನ ಕಾವ್ಯವು ಕಲ್ಪವೃಕ್ಷ, ಕಾಮಧೇನು, ಪರುಷಮಣಿ, ಕರ್ಣರಸಾಯನ ಎಂದೆಲ್ಲ ಹೇಳುವ ಕವಿಗಳ ಅಗ್ಗಳಿಕೆಯನ್ನು ನೇಮಿಚಂದ್ರ ಇಲ್ಲಿ ಲಘು ವ್ಯಂಗ್ಯ, ಲಘು ವಿನೋದಗಳಿಂದ ವಿಮರ್ಶಿಸುತ್ತಿದ್ದಾನೆ. ಇವನ ಲಘು ವೈನೋದಿಕ ಧಾಟಿಯನ್ನೆ ಸ್ವಲ್ಪ ಕಟು ಹೇಳಿಕೆಯಾಗಿ ಮಾರ್ಪಡಿಸಿದ್ದಾನೋ ಎಂಬಂತೆ ಚನ್ನಬಸವಣ್ಣ ತನ್ನ ಒಂದು ವಚನದಲ್ಲಿ; 'ಕವಿತ್ವ ಸಾಧಕರೆಲ್ಲ ಕಳವಳಿಸಿ ಹೋದರು, ವಿದ್ಯಾಸಾಧಕರೆಲ್ಲ ಬುದ್ಧಿಗೆಟ್ಟರು' ಎಂದು ಹೇಳಿದ್ದಾನೆ. ಸಾಹಿತ್ಯವು ಅತ್ಯಂತ ಶ್ರೇಷ್ಠವಾದ ಕ್ರಿಯೆ, ಅದು ಋಷಿತಪಸ್ಸಿಗೆ ಸಮಾನ, ಕವಿಯಾದವನು ಋಷಿಸಮಾನ, ಅವನು ರವಿ, ಬ್ರಹ್ಮರಂತೆ ಸಾಮಾನ್ಯರಿಗಿಂತ ಮಿಗಿಲಾದವನು ಎಂಬ ನಂಬಿಕೆಗಿಂತ ಭಿನ್ನವಾದ-ನಿಮ್ಮ ಸಾಹಿತ್ಯವೇ ಬದುಕಿನಲ್ಲಿ ಎಲ್ಲಕ್ಕಿಂತ ದೊಡ್ಡದಲ್ಲ-ಕವಿಗಳೇನೂ ಬ್ರಹ್ಮರಲ್ಲ ಎಂಬುದು ಇಲ್ಲಿ ಚೆನ್ನಬಸವಣ್ಣನ ಅಭಿಪ್ರಾಯ.

**1.5.1. ಪೂರ್ವಕವಿ ಸ್ಮರಣೆ**

ನಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪೂರ್ವಕವಿ ಸ್ಮರಣೆ ಒಂದು ಒಳ್ಳೆಯ ವಿಮರ್ಶಾ ಮಾರ್ಗ. ಶಾಸ್ತ್ರಕಾರರು ಶಾಸ್ತ್ರಕಾರರನ್ನೂ, ಕವಿಗಳು ಕವಿಗಳನ್ನೂ ಸಾಮಾನ್ಯವಾಗಿ ಸ್ಮರಿಸಿದ್ದಾರೆ. ಅತಿಹೆಚ್ಚು ಸ್ಮರಣೆಗೆ ಗುರಿಯಾಗಿರುವವನೆಂದರೆ ಪಂಪ. ಇವನನ್ನು ರನ್ನ, ದುರ್ಗಸಿಂಹ, ನಾಗವರ್ಮ, ಶ್ರೀಧರಾಚಾರ್ಯ, ನಯಸೇನ, ಕರ್ಣಪಾರ್ಯ, ರುದ್ರಭಟ್ಟ, ಅಗ್ಗಳ, ಆಚಣ್ಣ, ಬ್ರಹ್ಮಶಿವ, ಪಾರ್ಶ್ವಪಂಡಿತ, ಕಮಲಭವ, ಜನ್ನ, 2ನೆ ಗುಣವರ್ಮ, ಮಲ್ಲಿಕಾರ್ಜುನ, ಮಲ್ಲಕವಿ, ಕೇಶೀರಾಜ, ಕುಮುದೇಂದು, ಚೌಂಡರಸ, ನಾಗರಾಜ, ಬಾಹುಬಲಿ ಪಂಡಿತ, ಮಧುರ, ದೇವಕವಿ, ಶಿಶುಮಾಯಣ, ಪದ್ಮಕವಿ, ಪದ್ಮರಾಜ, ಅಳಿಯ ಲಿಂಗರಾಜ, ಹಿರಣ್ಯಗರ್ಭ, ಕುವೆಂಪು ಹೀಗೆ ಅನೇಕ ಜನ ಸ್ಮರಿಸಿದ್ದಾರೆ. ಸ್ತುತಿಸಿದ್ದಾರೆ.

ಪೂರ್ವಕವಿ ಸ್ಮರಣೆಯಲ್ಲಿ ಕಟುವಿಮರ್ಶೆಗೆ ಯಾರೂ ಸ್ಮರಿಸಿಲ್ಲ. ಎಲ್ಲರೂ ಸ್ತುತಿಗಾಗಿಯೇ, ಮೆಚ್ಚುಗೆಗಾಗಿಯೇ ಸ್ಮರಿಸಿದ್ದಾರೆ. ಸ್ಮರಿಸುವ ಸಂದರ್ಭದಲ್ಲಿ ಕವಿಗಳ ಬರವಣಿಗೆಯ ಶೈಲಿ, ಭಾಷಾಬಳಕೆಯ ವಿಧಾನ, ಕಾವ್ಯ ಮೌಲ್ಯ, ಗುಣ-ಕೌಶಲಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸುತ್ತಾರೆಯಾದರೂ ಈ ಮಾತುಗಳು ಕೂಡ ಪ್ರಶಸ್ತಿ ರೂಪಿಯೆ ಆಗಿರುತ್ತವೆ. ಆದರೆ ಅಪವಾದವೇನೋ ಎಂಬಂತೆ ಸ್ವಕಾವ್ಯ ಸಮರ್ಥನೆಯ ಸಂದರ್ಭಗಳಲ್ಲಿ ಪೂರ್ವಕವಿ ಕಾವ್ಯಗಳನ್ನು ಕಟುವಾಗಿ ವಿಮರ್ಶಿಸುವ ಕೆಲಸವನ್ನು ಕೆಲವೇ ಕೆಲವು ಕವಿಗಳು ಮಾಡಿದ್ದಾರೆ. ಅದೂ ನಿರ್ದಿಷ್ಟವಾಗಿ ಯಾರನ್ನೂ ಉಲ್ಲೇಖಿಸಿ; ಉದಾಹರಿಸಿ ನಮ್ಮವರು ಟೀಕಿಸುವುದಿಲ್ಲ. ಜನರಲ್ಲಾಗಿ ಮಾತನಾಡುತ್ತಾರೆ. ತಮ್ಮ ಹಿಂದಿನ ಪರಂಪರೆಯ ಬಗೆಗೆ ಮಾತ್ರ ನಮ್ಮವರು ಮೆಚ್ಚಿ ಮಾತಾಡಿರುವಂತೆಯೇ ಮುಸುಕಿನ ಗುದ್ದುಗಳನ್ನು ನೀಡಿರುವುದೂ ಉಂಟು. ಪರಂಪರೆಯ ವಿಮರ್ಶೆ ನಮ್ಮವರ ಒಂದು ಸಾಮಾನ್ಯ ಪ್ರವೃತ್ತಿ.

> ಕ್ಷಿತಿಗೆ ಸಮಸ್ತ ಭಾರತಮುಂ ಆದಿಪುರಾಣಮುಂ ಈಗಳ್ ಒಂದಲಂ/ಕೃತಿಯವೊಲ್ ಇರ್ದುವು, ಏಕೆ ಅರಿಯ? ಪೋದವರ್ ಆದವರೊಳ್ ಸರಸ್ವತೀ/ಮತಿ ಕವಿತಾಗುಣಕ್ಕೆ ಪದೆದು ಎಯ್ದೆವರಲ್ಕೆ ಕವೀಂದ್ರರಾರ್ ಸರ/ಸ್ವತಿಗೆ ವಿಳಾಸಮಂ ಪೊಸತು ಮಾಡುವ ಪಂಪನ ವಾಗ್ವಿಲಾಸಮಂ? (ವಿ.ವಿ. 14-61)

ಪೋದವರ್, ಆದವರ್, ಕವೀಂದ್ರರಾರ್ ಎಂಬ ಪ್ರಯೋಗಗಳಲ್ಲಿ ಹಿಂದಿನವರ ಕುರಿತ ಕಟುವಾದ ವಿಮರ್ಶೆಯೇ ಇದೆ. ತನ್ನ ಮುನ್ನಿನ ಕಬ್ಬಮನೆಲ್ಲಮನಿಕ್ಕಿ ಮೆಟ್ಟಿದುವು ಎಂಬ ಮಾತಿಗೆ ಜೊತೆಯಾಗುವಂತೆ ಪಂಪ ಇಲ್ಲಿ ಕವಿತಾಗುಣಕ್ಕೆ ಸರಸ್ವತೀ ಮತಿ ಹೊಂದಿಕೊಂಡು ಬರುವಂತೆ ಕಾವ್ಯ ರಚಿಸಿದವರು ಈ ಹಿಂದೆ ಯಾರೂ ಇಲ್ಲ ಎಂದು ಹೇಳಿದ್ದಾನೆ. ಕುಮಾರವ್ಯಾಸ ತನ್ನ ಒಂದು ಪದ್ಯದಲ್ಲಿ:

ತಿಣಿಕಿದನು ಫಣಿರಾಯ ರಾಮಾ/ಯಣದ ಕವಿಗಳ ಭಾರದಲಿ
ತಿಂ/ತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ/
ಬಣಗು ಕವಿಗಳ ಲೆಕ್ಕಿಪನೆ ಸಾ/ಕೆಣಿಸದಿರು ಶುಕರೂಪನಲ್ಲನೆ/
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ (ಗ.ಭಾ.1-17)

ಎಂದು ಹೇಳಿದ್ದಾನೆ. ಇಲ್ಲಿ ರಾಮಾಯಣದ ಒಟ್ಟು ಪೂರ್ವಕವಿ ಪರಂಪರೆಯನ್ನು ಬಣಗು ಕವಿಗಳ ಸಾಲೆಂದೂ, ಗಿಳಿಪಾಠ ಒಪ್ಪಿಸುವ ನಗೆಪಾಟಲಿನ ಕವಿಪರಂಪರೆಯೆಂದೂ ಕಟುವಾಗಿ ಟೀಕಿಸಿದ್ದಾನೆ. ಇಂಥವರನ್ನು ಕಂಡರೆ ನನಗೆ ಮೈ ಕೈ ಕುಣಿಸಿ ಗಹಗಹಿಸಿ ನಗುವಂತೆ ಆಗುತ್ತದೆ ಎಂದು ಗೇಲಿ ಮಾಡಿದ್ದಾನೆ. ಹೀಗೆ ಪೂರ್ವಕವಿ ಸ್ಮರಣೆಯಲ್ಲಿ ಸ್ವಸಮರ್ಥನೆಯ ಮಾತಾಡುವಾಗ ಪೂರ್ವಕವಿಗಳ ಕಟುವಿಮರ್ಶೆ ಅಲ್ಲಲ್ಲಿ ಕಾಣಿಸಿಕೊಂಡಿದೆ. (ಇನ್ನಷ್ಟು ವಿವರಗಳಿಗೆ ನೋಡಿ; ತೌಲನಿಕ ನೋಟ) ಆತ್ಮಾಭಿಮಾನ ಮತ್ತು ಫಲಾಪೇಕ್ಷೆಯ ವಿಚಾರಗಳನ್ನು ಚರ್ಚಿಸುವಾಗ; ಕಾವ್ಯಶಕ್ತಿಯನ್ನು ದೊರೆಗಳಿಗೆ ಮಾಡಿಕೊಳ್ಳುವ ಬಗ್ಗೆ ನಾಗಚಂದ್ರ, ಹರಿಹರಾದಿಗಳ ಪ್ರತಿಕ್ರಿಯೆಗಳನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ವಿಶೇಷವೆಂದರೆ ನಮ್ಮವರು ಟೀಕಿಸುವಾಗ ಯಾರನ್ನು ನಿರ್ದಿಷ್ಟವಾಗಿ ಹೆಸರಿಸದೆ-ಕಾವ್ಯವನ್ನು ಉಲ್ಲೇಖಿಸದೆ ಟೀಕಿಸಿದ್ದಾರೆ. ತಮ್ಮಪರಂಪರೆಗಳನ್ನು ಟೀಕಿಸುವುದು ಸ್ವ ಕಾವ್ಯ ಸ್ವರೂಪದ ಸಮರ್ಥನೆಯಾಗಿಯೂ, ನಮ್ಮಲ್ಲಿ ಪ್ರಕಟವಾಗಿದೆ. ಅಲ್ಲದೆ ಪರಂಪರೆಯ ಪ್ರತಿರೋಧವೆನ್ನುವುದು ಹಳೆಯ ಕಾವ್ಯರಚನಾ ಪದ್ಧತಿಗಳ ಪ್ರತಿರೋಧವೇ ಆಗಿ ನಮ್ಮಲ್ಲಿ ಪ್ರಕಟವಾಗಿದೆ. ಪೂರ್ವಕವಿ-ಕಾವ್ಯ ವಿಮರ್ಶೆ ಪ್ರಕಟವಾಗಿರುವ ಒಂದು ಬಗೆ ಇದು.

ಪಂಪನ ಕಾಲದ ಕಾವ್ಯ ಪದ್ಧತಿಯ ಬಗೆಗೆ ಸಾಕಷ್ಟು ಪ್ರತಿರೋಧ ಪ್ರಕಟವಾಗಿರುವಂತೆಯೇ ಪಂಪನ ಕೃತಿಗಳಿಗೆ ಮುಖ್ಯವಾಗಿ 'ಆದಿಪುರಾಣ'ದ ಕವಿತ್ವಗುಣಕ್ಕೆ ಜೈನಧಾರ್ಮಿಕ ಸಂಗತಿ ಆಚರಣೆಗಳ ಹೃದಯಸ್ಪರ್ಶಿಯಾದ ಹಾಗೂ ಭೋದಪ್ರದವಾದ ನಿರೂಪಣೆಗೆ, ಈಚಿನ ಕಾಲದ ಕವಿಗಳು ಬಹುವಾಗಿ ಮನಸೋತಿರುವುದು ಗೊತ್ತಾಗುತ್ತದೆ. ಪಂಪನ ಹಾಗೆ ತಾವೂ ಕೃತಿರಚನೆ ಮಾಡಬೇಕೆಂಬ ಹಂಬಲವನ್ನು ಹಲವರು ವ್ಯಕ್ತಪಡಿಸಿದ್ದಾರೆ. ಆತನ ಜೈನಶ್ರದ್ಧೆ, ವಾಗ್ವೈಭವ ರಸಭಾವಗಳು, ರೀತಿ, ರಸಿಕತೆ, ಮೃದೂಕ್ತಿ, ಓಜೆ, ಗುಣ, ಇಂಪು, ಯಶಸ್ಸು ಲಕ್ಷಣಲಕ್ಷಿತವಾದ ಅದ್ಭುತ ವಚೋವಿಲಾಸ-ಇವು ಅವರನ್ನು ಮೆಚ್ಚಿಸಿವೆ. ಪಂಪಕವಿಯ ಕಾವ್ಯಶಕ್ತಿಯ ಗುಣವಿಶೇಷಗಳಾದ ಧ್ವನಿಯುಕ್ತತೆ, ನಾಟಕೀಯ ಗುಣ, ಪಾತ್ರ ಮತ್ತು ಸನ್ನಿವೇಶ ರಚನೆಯ ಕೌಶಲ, ವಸ್ತು ಸಂವಿಧಾನದ ನೈಪುಣ್ಯ, ಮಾತುಗಾರಿಕೆ ಹಾಗೂ ಲೋಕಜ್ಞಾನದ ದೇಸಿ ಇತ್ಯಾದಿ ಹಲವು ಗುಣಗಳನ್ನು ಅವರು ತಮ್ಮ ಮೆಚ್ಚುಗೆಯ ಮಾತುಗಳಲ್ಲಿ ಅಂತರ್ಗತಗೊಳಿಸಿರುವಂತೆ ತೋರುತ್ತದೆ.

ಈಗಾಗಲೇ ಸಾಹಿತ್ಯ ಚರಿತ್ರಕಾರರೂ ವಿಮರ್ಶಕರೂ ಗುರುತಿಸಿರುವಂತೆ ಪಂಪನ ಕೃತಿಗಳ ಅನುಸರಣೆ, ಅನುಕರಣೆಗಳು, ಛಾಯೆಗಳು ಉತ್ತರಕಾಲೀನ ಕವಿಗಳಲ್ಲಿ, ಉದಾಹರಣೆಗೆ ಚಾವುಂಡರಾಯ, ರನ್ನ, ನಾಗಚಂದ್ರ, ಶಾಂತಿನಾಥ, ಕರ್ಣಪಾರ್ಯ, ಅಗ್ಗಳ, ಜನ್ನ, ಕುಮಾರವ್ಯಾಸ ಮೊದಲಾದವರಲ್ಲಿ ಕಂಡುಬಂದಿದೆ. ಇವರೆಲ್ಲ ಪ್ರಖ್ಯಾತರಾದ ಕವಿಗಳು. ಇವರಲ್ಲಿ ಚಾವುಂಡರಾಯ, ರನ್ನ, ಕರ್ಣಪಾರ್ಯ ಈ ಕೆಲವರಂತೂ ಪಂಪನ ರಚನೆಗಳನ್ನು ತುಂಬ ನಿಕಟವಾಗಿ ಅನುಸರಿಸಿದ್ದಾರೆ: ದಟ್ಟವಾದ ಪ್ರಭಾವಕ್ಕೆ ಒಳಗಾಗಿದ್ದಾರೆ. ಈ ಪ್ರಭಾವದ ವ್ಯಾಪ್ತಿ ಈಚೆಗೆ 20ನೆಯ ಶತಮಾನದ ಕವಿಗಳವರೆಗೆ ಸಹ ಉಂಟು ಎನ್ನುವುದಕ್ಕೆ ಆಧುನಿಕ ಕವಿಗಳ ಸ್ವೀಕೃತ ಪ್ರಭಾವ ಮುದ್ರೆಯ ರಚನೆಗಳೂ ಸ್ತುತಿಪದ್ಯಗಳೂ ಸಾಕ್ಷ್ಯಗಳಾಗಿವೆ.[9]

ಪೂರ್ವಕವಿ ಸ್ಮರಣೆಯಲ್ಲಿ ಬರುವ ವಿಮರ್ಶೆಯು ಕಾವ್ಯರೂಪಿ ವಿಮರ್ಶೆಯೇ ಆಗಿದ್ದು ಇದು ಈಗಾಗಲೇ ಗುರ್ತಿಸಿರುವಂತೆ ಸ್ತುತಿ-ಅಭಿನಂದನೆ ಮತ್ತು ಮೆಚ್ಚುಗೆಯ ಧಾಟಿಯಲ್ಲಿಯೇ ಇರುತ್ತದೆ. ನಮ್ಮವರ ಸತ್ಕವಿ ಪ್ರಶಂಸೆ ಮತ್ತು ಕುಕವಿ ನಿಂದೆಗಳು ಪೂರ್ವಕವಿಸ್ಮರಣೆಯ ಒಂದು ಅಂಗವೇ ಆಗಿವೆ. ತಾವು ಮೆಚ್ಚುವ ಪೂರ್ವಕವಿಗಳನ್ನು ಸತ್ಕವಿಗಳೆಂದು, ಕಾವ್ಯಗಳನ್ನು ಸತ್ಕಾವ್ಯಗಳೆಂದು ಗುಣವಿವೇಚನೆ ಮಾಡುತ್ತ, ಗುಣನಿರ್ಣಯ ಮಾಡುತ್ತ ಅಂತಿಮವಾಗಿ ಗುಣಗಾನವನ್ನೇ ಮಾಡುತ್ತ ಸ್ತುತಿರೂಪಿ ವಿಮರ್ಶೆಯೊಂದನ್ನು ಸೃಷ್ಟಿಸುವುದು ಈ ವಿಮರ್ಶೆಯ ಒಂದು ಚಹರೆಯಾಗಿದೆ.

### 1.5.2. ಪೂರ್ವಕವಿ-ಗುಣನಿರ್ವಚನ

ಒಂದೊಂದೇ ಮಾತಿನಲ್ಲಿ ಪೂರ್ವ ಕವಿಗಳ ಕಾವ್ಯ ಗುಣವನ್ನು ಹೇಳುವ ಮಾರ್ಗವೂ ನಮ್ಮಲ್ಲಿದೆ. ಇದನ್ನು ಪೂರ್ವಕವಿ ಗುಣನಿರ್ವಚನ ಎನ್ನಬಹುದು. ಇಂಥ ನಿರ್ವಚನಗಳು ಮೇಲ್ನೋಟಕ್ಕೆ ಬೀಸು ಹೇಳಿಕೆಗಳಂತೆ ಕಂಡರೂ ಇವುಗಳ ಉದ್ದೇಶ ಇದಲ್ಲ. ಬಿಡಿ ಮಾತುಗಳಲ್ಲಿ ಇಡಿಯಾಗಿ ಕಾವ್ಯಗುಣಗಳ ಬಗ್ಗೆ

ಹೇಳಲು ಈ ವಿಧಾನವನ್ನು ನಮ್ಮ ಬಹುಪಾಲು ಕವಿಗಳು ಅನುಸರಿಸಿದ್ದಾರೆ. ಒಂದೊಂದೆ ಮಾತುಗಳಲ್ಲಿ ಕವಿ ಕಾವ್ಯವನ್ನು ನಿರ್ವಚಿಸಲು ಹೊರಟಾಗ ಬೀಸು ಹೇಳಿಕೆಯಾಗುವ ಅಪಾಯ ಸದಾ ಇರುತ್ತದೆ. ಹಾಗಾಗಿ ಇದು ವಿಧಾನದ ದೋಷವೇ ಹೊರತು ಅಭಿಪ್ರಾಯದ ದೋಷವಲ್ಲ.

> ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ/ದು ಅಸದೃಶಮಪ್ಪ ಅಪೂರ್ವರಸಮ್
> ಎಯ್ದೆ ಗಜಾಂಕುಶನ ಒಳ್ಪುವೆತ್ತು ರಂ/ಜಿಸುವ ಸದರ್ಥದೃಷ್ಟಿ ಗುರ್ಣವರ್ಮನ ಜಾಣ್ ಕವಿರತ್ನನ
> ಓಜೆ ಶೋ/ಭಿಸೆ ನೆಲೆಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ ನಿರಂತರಂ (ಧರ್ಮಾ. 1–39)

> ಎನ್ನೀ ಕಬ್ಬದೊಳೆಂದುಂ/ಸನ್ನಿದಮಾಗಿರ್ಕೆ ಕನ್ನಮಯ್ಯನ ಕಡುಜಾಣ್
> ರನ್ನನ ಮೆಯ್ಸಿರಿ ಗಜಗನ/ಬಿನ್ನಣಮ್ ಅಗ್ಗಳನ ಕಾಣ್ಕೆ ಜನ್ನಿಗನ ಜಸಂ (ಕ.ಕಾ. 1–4)

> ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ/ನ್ನನ ಬಗೆ
> ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ/ದ್ರನ ರಸಭಾವಮ್ ಅಗ್ಗಳನ ವಕ್ರತೆ
> ನೇಮಿಯ ದೇಸೆ ಪುಷ್ಪಬಾ/ಣನ ಮೃದುಬಂಧಮೀ ಕವಿಗಳಲ್ತೆ ಜಿನೇಂದ್ರ ಪುರಾಣ ಕರ್ತೃಗಳ್ (ಅನಂ.ಪು.15)

> ಈ ಲೋಕವೆಲ್ಲವು ಹೊಗಳುವ ಶಂಖವರ್ಮನ ಬಗೆ, ಶಾಂತಿವರ್ಮನ ನಯ, ಗುಣವರ್ಮನ ಬಂಧಗೌರವ
> ಮನಸಿಜನ ಓಜೆ, ಕರ್ಣಪಾರ್ಯನ ಜಾಣ್ನುಡಿ, ಪಂಪನ ರೀತಿ, ರುದ್ರಭಟ್ಟನ ಯತಿ, ಪೊನ್ನನ ಬೆಡಗು,
> ಗಜಾಂಕುಶನ ಬಿನ್ನಾಣಗಳೆಲ್ಲವೂ ನನ್ನ ಈ ಕೃತಿಯಲ್ಲಿ ನೆಲೆಗೊಳ್ಳಲಿ (ಜ.ವಿ. 1–10)

> ರನ್ನನ ದೇಸಿ, ಪಂಪನ ಗುಣಂ, ಗುಣನಂದಿಯ ತೊಂಡು, ಪೊನ್ನನೊಳ್/ಸನ್ನಿದಮಾದ ಜಾಣ್ನುಡಿ,
> ಗಜಾಂಕುಶನ ಒಳ್ಪು, ಮನೋಜನ ಓಜೆ, ಲೋ/ಕೋನ್ನತಮಾಗಿ ಸಂದ ಗುಣವರ್ಮನ ಜಾತಿ,
> ಸಮಾನುರಕ್ತಿಯಿಂ/ದಂ ನೆಲೆಸಿರ್ಪುವು ಈ ಸುಕವಿಮಲ್ಲನ ಕಾವ್ಯವಿಳಾಸದ ಪರ್ಗಿಯೊಳ್ (ಕಾ.ಸಾ.1–16)

ಈ ಪದ್ಯಗಳಲ್ಲಿ ಪಂಪನ ಇಂಪು, ರೀತಿ, ಪಂಪನ ಅಸದೃಶವಾದ ಅಪೂರ್ವರಸ, ರನ್ನನ ಓಜೆ, ದೇಸಿ, ಮೆಯ್ಸಿರಿ, ಕಾಂತಿ, ಪೊನ್ನನ ಬೆಡಗು, ಜಾಣ್ನುಡಿ, ಬಗೆ–ಹೀಗೆ ಭಿನ್ನ ಭಿನ್ನ ಕವಿಗಳು ಪಂಪ, ರನ್ನ, ಪೊನ್ನಾದಿಗಳ ಭಿನ್ನ ಬಿನ್ನ ಗುಣಗಳನ್ನು ಹೇಳಿದ್ದಾರೆ. ಬೇರೆ ಬೇರೆ ಕಾಲದ ಕವಿಗಳು ಒಬ್ಬೊಬ್ಬರಲ್ಲು ಭಿನ್ನ ಲಕ್ಷಣಗಳನ್ನು ಗುರುತಿಸುವ ಮೂಲಕ ಒಂದೊಂದು ಓದು ಕೂಡ ಭಿನ್ನ ನಿಲುವುಗಳಿಗೆ ನಮ್ಮನ್ನು ಒಯ್ಯುತ್ತದೆ ಎಂಬ ತತ್ವವನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಕಾವ್ಯದ ಮೂಲಕ ಪೂರ್ವಕವಿಗಳ ಲಕ್ಷಣ ನಿರ್ವಚನ ಮಾಡುವಾಗ ಛಂದಸ್ಸು, ಗಣ, ಮಾತ್ರೆ, ಪ್ರಾಸಗಳು ಭಾಷೆಯನ್ನು ನಿಯಂತ್ರಿಸುತ್ತವೆಯಾದರೂ ಕೇವಲ ಛಂದಸ್ಸಿನ ನಿರ್ಬಂಧಕ್ಕೆ ಕವಿಲಕ್ಷಣಗಳನ್ನು ನಮ್ಮವರು ಅಪವ್ಯಾಖ್ಯಾನಿಸಲಾರರು. ಏನೇ ಆದರೂ ಒಬ್ಬೊಬ್ಬರ ಓದುಗಳೂ ಭಿನ್ನ ನಿರ್ವಚನ ವ್ಯಾಖ್ಯಾನಗಳಿಗೆ ಕರೆದೊಯ್ಯುತ್ತವೆ ಎಂಬ ಮಾತು ಮಾತ್ರ ನಿಜ. ಈ ವ್ಯಾಖ್ಯಾನಗಳೆಲ್ಲವೂ ಕಟು ವಿಮರ್ಶೆಗಳಾಗಿರದೆ: ದೋಷಗಳನ್ನು ಹುಡುಕಿ ಗುರ್ತಿಸುವ ಬರಹಗಳಾಗಿರದೆ ಬರಿ ಗುಣಗಳನ್ನು ಗುರ್ತಿಸಿ ಮೆಚ್ಚುವ ಬರಹಗಳಾಗಿವೆ. ನಮ್ಮವರು ಪೂರ್ವಕಾವ್ಯ ಸ್ಮರಣೆ ಮಾಡುವಾಗ ಕವಿಗಳ ದೋಷ ವರ್ಣನ ಕಾರ್ಯವನ್ನು ಇದರ ಜೊತೆಯಲ್ಲೆ ಕೈಗೊಂಡಿದ್ದರೆ ಬಹುಶಃ ಚೆನ್ನಿರುತ್ತಿತ್ತೇನೋ.

ಇಲ್ಲಿ ಒಬ್ಬೊಬ್ಬ ಕವಿಯ ಗುಣವನ್ನು ಒಂದೊಂದು ರೀತಿಯಲ್ಲಿ ನಿರ್ವಚಿಸಲು ಮಾತ್ರವೆ ಯತ್ನಿಸಲಾಗಿದೆ. ಇಂಥ ಒಂದೊಂದೇ ಮಾತುಗಳಿಂದ ಪೂರ್ವಕವಿಗಳ ಗುಣ ನಿರ್ವಚನ ಮಾಡುವುದು ನಮ್ಮ ಪ್ರಾಚೀನ ಕವಿವಿಮರ್ಶಕರ ವಿಮರ್ಶೆಯ ಒಂದು ಮುಖ್ಯ ಚಹರೆಯಾಗಿದೆ. ಒಟ್ಟಾರೆ ಒಂದೇ ಮಾತಿನಲ್ಲಿ ಕವಿಕಾವ್ಯದ ಲಕ್ಷಣವನ್ನು ಇಡಿಯಾಗಿ ನಿರ್ವಚಿಸುವ ವಿಧಾನ ಇದು. ಇಂಥ ಗುಣ ನಿರ್ವಚನಕ್ಕೆ ನಮ್ಮ ಕವಿಗಳಲ್ಲಿ ಒಂದು ದೊಡ್ಡ ಪರಂಪರೆಯೇ ಇದೆ. ನಮ್ಮ ಕವಿಗಳು ತಮ್ಮ ಪೂರ್ವ ಕವಿಗಳನ್ನು ಸ್ಮರಿಸುವಾಗ 1. ತಮ್ಮ ಧಾರ್ಮಿಕ ಪರಂಪರೆಯ ಕವಿಗಳನ್ನು ತಪ್ಪದೆ ಸ್ಮರಿಸುತ್ತಾರೆ. 2. ಕನ್ನಡ ಪರಂಪರೆಯ ಪೂರ್ವಕವಿಗಳ ಜೊತೆ ಸಂಸ್ಕೃತ, ಪ್ರಾಕೃತ ಕವಿಗಳನ್ನೂ ಕೂಡ ಸ್ಮರಿಸುತ್ತಾರೆ. 3. ತಮ್ಮ ತಮ್ಮ ಗುರು ಪರಂಪರೆ ಮತ್ತು ಮುನಿ ಪರಂಪರೆಗಳನ್ನೂ ತಪ್ಪದೆ ಸ್ಮರಿಸುತ್ತಾರೆ. 4. ತಮ್ಮ ಕಾವ್ಯವನ್ನು ತಿದ್ದಿದ, ಶೋಧಿಸಿದ ಮಾರ್ಗದರ್ಶಕರನ್ನೂ, ತಾವು ಮೆಚ್ಚುವ ಶಾಸ್ತ್ರಕಾರರನ್ನೂ ಸ್ಮರಿಸುತ್ತಾರೆ. ಹೀಗೆ ಸ್ಮರಿಸುವಾಗ ಆಯಾ ಕವಿಗಳು ತಮ್ಮ ತಮ್ಮ ಧರ್ಮ, ಸಂಸ್ಕೃತಿ, ಜೀವನವಿಧಾನಗಳ ಹಿನ್ನೆಲೆಯಲ್ಲಿ ತಮ್ಮದೇ ಆದ ಪರಂಪರೆಗಳನ್ನು ಕಟ್ಟಿಕೊಡುತ್ತಾರೆ. ಅಂತಹ ತಮ್ಮ ಪರಂಪರೆಗೆ ತಮ್ಮ ಬದ್ಧತೆಯನ್ನೂ ಪ್ರಕಟಿಸುತ್ತಾರೆ. ಆಯಾಯ ಕವಿಗಳ ಈ ಬದ್ಧತೆಯಲ್ಲಿ ಅನ್ಯವನ್ನು ಓದದೇ ಇರುವ ದ್ವೀಪತನವೇನೂ ಕಾಣುವುದಿಲ್ಲ. ಆದರೆ ಇಂತಹ ಕಡೆ ತಮ್ಮದೇ ಆದ ಧಾರ್ಮಿಕ ಸೈದ್ಧಾಂತಿಕತೆ–ಜೀವನ ವಿಧಾನ–ನಂಬುಗೆಗಳ ಮಂಡನೆ ಮತ್ತು ಸಂಘರ್ಷಗಳನ್ನು ದಾಖಲಿಸಿದ್ದಾರೆ.[10] (ಇನ್ನಷ್ಟು ತಾತ್ವೀಕರಣಕ್ಕೆ ಮಾದರಿ ಸ್ಮರಣೆಗಳನ್ನು ಮುಂದೆ ನೋಡಿ)

ಪಂಪ 'ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆನ್ ಕವಿ ವ್ಯಾಸನೆನ್ ಎಂಬ ಗರ್ವಮೆನಗಿಲ್ಲ' ಎಂದು ತನ್ನ ಕಥಾವಸ್ತು ಪರಂಪರೆಯ ಮೊದಲಿಗರಾದ ವ್ಯಾಸರ ಬಗ್ಗೆ ವಿನಯವನ್ನು ಪ್ರಕಟಿಸುತ್ತಲೆ 'ಮುಂ ಸಮಸ್ತ ಭಾರತಮನ್ ಅಪೂರ್ವಮಾಗೆ ಪೇಳ್ದ ಕವೀಶ್ವರರ್ ಇಲ್ಲ' ಎಂದೂ ಹೇಳುತ್ತಾನೆ. ಈ ಮಾತು ವಿನಯದ ಮಾತೂ ಹೌದು ಸ್ವಾಭಿಮಾನದ ಮಾತೂ ಹೌದು. ಅಪೂರ್ವಮಾಗೆ ಪೇಳ್ದ ಅಂದರೆ ಅ-ಪೂರ್ವ/ಅ-ಭೂತವಾಗಿ ಅಂದರೆ ವರ್ತಮಾನವನ್ನು ಬೆರೆಸಿ ಪ್ರಸ್ತುತಗೊಳಿಸಿ ಹೇಳಿರುವೆ ಎಂದು ಕೂಡ ಅರ್ಥ. ಪೂರ್ವಕವಿ ಕಾವ್ಯಗಳ ಸ್ಮರಣೆಯು ಗುಣನಿರ್ವಚನ ಮಾಡುತ್ತಲೆ ಸ್ವಕಾವ್ಯ ಸ್ವರೂಪ ನಿರ್ವಚನವನ್ನು ಮಾಡುತ್ತಿರುತ್ತದೆ, ಹಾಗೇ ತನ್ನದೆ ಕಾವ್ಯ ತತ್ತ್ವವನ್ನೂ ಹೇಳುತ್ತಿರುತ್ತದೆ ಎಂಬುದಕ್ಕೆ ಈ ಪಂಪನ ಮಾತೇ ಉದಾಹರಣೆ. ಪೂರ್ವ ಕವಿ ಸ್ಮರಣೆಗಳಲ್ಲಿ ಸ್ತುತಿಸಿರುವ ಹಲವು ಕವಿಗಳ ಕೃತಿಗಳು ನಮಗೆ ದೊರಕಿಲ್ಲ. ಶಾಸ್ತ್ರಕೃತಿಗಳ ಲಕ್ಷ್ಯಪದ್ಯಗಳ ಮೂಲಕ, ಸಂಗ್ರಹ ಗ್ರಂಥಗಳ ಉಲ್ಲೇಖಗಳ ಮೂಲಕ ಕೃತಿಗಳು ಲಭ್ಯವಾಗದ ಹಲವು ಕವಿಗಳು ತಿಳಿದುಬಂದಿರುವಂತೆ ಪೂರ್ವಕವಿ ಸ್ಮರಣೆಯಿಂದಲೂ ಕೃತಿಗಳು ಸಿಗದೇ ಇರುವ ಹಲವು ಕವಿಗಳು ತಿಳಿದು ಬರುತ್ತಾರೆ. ಉದಾಹರಣೆಗೆ ದುರ್ಗಸಿಂಹ, ನಯಸೇನ, ರುದ್ರಭಟ್ಟ, ಮಲ್ಲಿಕಾರ್ಜುನ ಹೀಗೆ ಹಲವರು ಗಜಾಂಕುಶ ಎಂಬ ಕವಿಯನ್ನು ಸ್ತುತಿಸಿದ್ದಾರೆ. ಆದರೆ ಇವನ ಯಾವ ಕೃತಿಗಳೂ ಈವರೆಗೆ ಸಿಕ್ಕಿಲ್ಲ. ಇವನು ಬಹುಶಃ ಕ್ರಿ.ಶ. 1000ದ ಸುಮಾರಿನಲ್ಲಿ  ಇದ್ದ ಕವಿಯಿರಬಹುದು.

### 1.5.3. ಪೂರ್ವಕವಿ ಸ್ಮರಣೆ; ಮಾದರಿ ವಿಮರ್ಶೆ

ಪೂರ್ವಕವಿಗಳನ್ನು ಸಾಕಷ್ಟು ಪದ್ಯಗಳಲ್ಲಿ ಸ್ಮರಿಸುತ್ತ ಅವರ ಗುಣಗಾನ ಮಾಡುವ ನಾಲ್ಕು ಮಾದರಿಗಳನ್ನು ಇಲ್ಲಿ ಕೊಡಲಾಗುವುದು. ಚಾಮರಸ, ದುರ್ಗಸಿಂಹ, ಕಮಲಭವ ಮತ್ತು ನಂಜುಂಡಕವಿ ಈ ನಾಲ್ಕು ಮಾದರಿಗಳಲ್ಲಿ ನಮ್ಮ ಪೂರ್ವಕವಿ ಸ್ಮರಣೆಯಲ್ಲಿ ವ್ಯಕ್ತವಾಗಿರುವ ಗುಣ ನಿರ್ವಚನ-ಸ್ತುತಿರೂಪಿ ಮಾದರಿಗಳನ್ನು ವಿವರಿಸಿಕೊಳ್ಳಲಾಗುವುದು.

ಮಾದರಿ-1: ದುರ್ಗಸಿಂಹ;

1. ಶ್ರೀವಿಜಯರ ಕವಿರಾಜಮಾರ್ಗವು ಭಾವಿಸುವ ಕವಿಜನದ ಮನಕ್ಕೆ ಕನ್ನಡಿಯೂ ಕೈದೀವಿಗೆಯೂ ಆಗಿದೆ. ಆದುದರಿಂದ ಶ್ರೀವಿಜಯ ದೇವರನ್ನು ಏನೆಂದು ಬಣ್ಣಿಸಲಿ?
2. ಹೊಸದೆನ್ನಿಸಿದ ದೇಸಿಯಿಂದ ನವರಸಗಳು ಒಸರುವಂತೆ ಒಪ್ಪುವೆತ್ತ ಮಾರ್ಗದಿಂದ ಸುಕವಿಗಳೆಂದೆ ಪ್ರಸಿದ್ಧರಾದ ಅಸಗನ, ಮನಸಿಜನ, ಚಂದ್ರಭಟ್ಟನ ಕೃತಿಗಳು ಲೋಕದಲ್ಲೆಲ್ಲ ಶೋಭಿಸಿದವು.
3. ಮಾರ್ಗದ್ವಯ ಪರಿಣಿತ, ಕವಿಮಾರ್ಗ ಮನೋಹಾರಿಯಾಯಿತು ಎಂದು ಬುಧರು ಸದಾ ನಿಗರ್ವರಾಗಿ ಪಂಪನ ಗೀರ್ಗುಂಫದ ಪೆಂಪನ್ನು ಯಾವಾಗಲೂ ಬಣ್ಣಿಸುವರು.
4. ಸದಾ ಒಳಿತನ್ನೇ ಮಾಡುವ ಕುಶಲವಾಂಛಿತ ಪ್ರಿಯಶೌರ್ಯನಾದ ಗಜಾಂಕುಶ ದಂಡನಾಯಕನು ವಾಕ್‌ವೈಭವದಲ್ಲಿ ಬ್ರಹ್ಮನಿಗಿಂತಲೂ ನೂರ್ಮಡಿಯೆಂದು ಪೆಂಪನ್ನು ತಳೆದನು.(ಕ.ಪಂ.ತಂ. 1-20ರಿಂದ 24)

ಮಾದರಿ-2: ಶಾಂತಿನಾಥ;

1. ಬಿರುಗಾಳಿಗೆ ಮೋಡಗಳು ಚದುರಿ ಹೋಗುವಂತೆ, ರವಿಯಿಂದ ತಮವು, ಸಿಂಹದಿಂದ ಆನೆಯು ಚದುರಿಹೋಗುವಂತೆ ಸುಳ್ಳೆಂಬ ಧೂಳು ತೂರಿಹೋಗಿ ನಿರ್ಮಲ ಧರ್ಮವೊಂದೆ ನಿಲ್ಲುವಂತೆ ಪಂಪನು ಅತ್ಯಂತ ಸೌಷ್ಠವದಿಂದ ಬುಧಜನ ಕಲ್ಯಾಣವಾದ ಆದಿಪುರಾಣವನ್ನು ಹೇಳಿದನು.
2. ನಿರುಪಮ ನವರಸ ರಸಿಕತೆ ದೊರೆವೆತ್ತಿರಲು, ದೇಸಿಯು ದೇಸೆವೆತ್ತಿರಲು, ಪರಮಾದರದಿಂದ ಶಾಂತಿಜಿನೇಶ್ವರ ಪುರಾಣವನ್ನು ಹೇಳಿದ ಪೊನ್ನನನ್ನು ಹೊಗಳದವರಾರು?
3. ಜಾಣು ಮತ್ತು ಬೆಡಗುಗಳು ವಿಬುದಪ್ರಿಯ ಎನಿಸುವಂತೆ, ನೇರ್ಪುವೆತ್ತಂತೆ ಅಳವಟ್ಟ ಕವಿತೆಯಿಂದ ಜನಹಿತಕ್ಕಾಗಿ  ರನ್ನನು ಅಜಿತಪುರಾಣವನ್ನು ಹೇಳಿದನು.
4. ಪ್ರಸಿದ್ಧವಾದ ಸಂಯಕ್ ಜ್ಞಾನದಲ್ಲಿಯೂ ಕವಿತೆಯ ಬರವಣಿಗೆಯಲ್ಲಿಯೂ ಈ ಧರೆಯಲ್ಲಿ ಪಂಪನ, ಪೊನ್ನನ, ರನ್ನನ ಸಮಾನಕ್ಕಾಗಲೀ ಸಮೀಪಕ್ಕಾಗಲೀ ಬರುವವರು ಯಾರೂ ಇಲ್ಲ.
5. ಕವಿಪರಮೇಶ್ವರನೂ ಕವೀಂದ್ರಚೂಡಾಮಣಿಯೂ ಎನಿಸಿದ ಆದಿತ್ಯನ ಕವಿತ್ವವು ತತ್ವಕ್ಕೆ ಅವಲಂಬನವಾದುದು. ಈ ಆದಿತ್ಯನಂತಹ ಸತ್ಕವಿಗಳು ಇನ್ನಾರಿದ್ದಾರೆ? (ಸು.ಚ. 1-38ರಿಂದ41)

ಮಾದರಿ-3: ನಂಜುಂಡಕವಿ;

1. ಕನ್ನಡ ಕವಿಗೆ ಮೊದಲಿಗನೆಂಬ ಉನ್ನತ ಕೀರ್ತಿಯನ್ನು ಸದಾ ಉಳಿಸಿಕೊಂಡಿರುವ ಪಂಪರಾಜನ ಪಾದಗಳಿಗೆ ಎರಗುವೆನು.

2. ಕಾದಂಬರಿಯನ್ನು ಸುಡಿಸಿ ಲೀಲಾವತಿ ಪ್ರಬಂಧಕ್ಕೆ ಕಪ್ಪನ್ನು ಇಡಿಸಿದ, ಜಗವನ್ನೆ ಮೆಚ್ಚಿಸಿದ ಕವಿ ನೇಮಿಚಚಂದ್ರನ ಪಾದಗಳಿಗೆ ಎರಗುವೆನು.

3. ಕರ್ನಾಟಕದ ಎಲ್ಲ ಕವಿಗಳನ್ನು ಗೆದ್ದು ಬಲ್ಲಾಳ ದೊರೆಯ ಮನವನ್ನು ಗೆದ್ದ ಜನ್ನನ ಪಾದಗಳಿಗೆ ಎರಗುವೆನು.

4. ಇಂಪು ಪಡೆದ ಕವಿತಾರಸ ಲಹರಿಯ ಸೊಂಪಿನಿಂದ ವಾದಿಗಳ ಎದೆಗೆ ಕಂಪನ್ನು ಉಂಟುಮಾಡುವ ಗುಣನಂದಿಯನ್ನು ನಾನು ಹೊಗಳುತ್ತ ಒಮ್ಮೆ ಪ್ರದಕ್ಷಿಣೆ ಬರುತ್ತೇನೆ.

5. ಗಜಗನ, ಗುಣವರ್ಮನ, ನಾಗಚಂದ್ರನ, ಸುಜನೋತ್ತಂಸನ, ಅಸಗನ, ರನ್ನನ, ಶಾಂತಿವರ್ಮನ ಕಾವ್ಯಸರೋವರಗಳಿಗೆ ನಾನು ಎರಗುವೆನು.

6. ವಾದಿಗಳೆಲ್ಲರೂ ರಗಳೆಯ ಕವಿ ಎಂದು ತೆಗಳಲು ಸೊಗಸಾಗಿ ವಸ್ತುಕ ಕಾವ್ಯವಾದ ಗಿರಿಜಾಕಲ್ಯಾಣವನ್ನು ಬರೆದ ಹರಿಹರನ ಪಾದಗಳಿಗೆ ಪ್ರೀತಿಯಿಂದ ಎರಗುವೆನು.

7. ನಿನ್ನ ಮಧುರ ನುಡಿಯು ಪೂರ್ವ ಕವಿಗಳ ನುಡಿಗೆ ಸಮಾನವಾದುದು ಎಂದು ಹೊಗಳಿಸಿಕೊಂಡ ಮಧುರಕವಿಗೆ ನಾನು ಆದರದಿಂದ ಬಲಗೊಳ್ಳುವೆನು. (ಕು.ರಾ.ಸಾಂ. 1–30ರಿಂದ36)

ಮಾದರಿ–4: ದುರ್ಗಸಿಂಹ;

1. ಜ್ಞಾನ ಭಕ್ತಿ ಪ್ರೇಮನೂ, ವೇದಪುರಾಣ, ಆಗಮಗಳಿಂದ ಸ್ತುತಿಗೊಂಡವನೂ, ನಾಮ ರೂಪ ಕ್ರಿಯಾದಿಗಳಿಲ್ಲದ ಅವ್ಯಕ್ತನೂ, ಮಹಾಕಾಂತಿವಂತನೂ, ಆಕಾಶದೇಹಿಯೂ ಆದ ಅಲ್ಲಮ ಪ್ರಭುವಿಗೆ ಶರಣಾರ್ಥಿ.

2. ಗುರುಲಿಂಗ ಜಂಗಮರನ್ನು ಗುರ್ತಿಸಲು ಇಷ್ಟಲಿಂಗ ಚಿಹ್ನೆಯನ್ನು ತೋರಿ ಎಲ್ಲ ಭಕ್ತರನ್ನೂ ಪುನೀತರನ್ನಾಗಿ ಮಾಡಿದ ಪೂರ್ವಾಚಾರ್ಯ ಬಸವಣ್ಣನಿಗೆ ಶರಣಾರ್ಥಿ.

3. ವೀರಶೈವ ಮತದ ಆಚಾರಗಳನ್ನು ಕ್ರಮಗೊಳಿಸಿದ, ಕರ್ಮ–ಭಕ್ತಿ–ಜ್ಞಾನಗಳನ್ನು ಬೋಧಿಸಿದ ಷಟ್ಸ್ಥಲಗಳನ್ನು ತಿಳಿಸಿದ ಗುರು ಚೆನ್ನಬಸವಣ್ಣನಿಗೆ ಶರಣಾರ್ಥಿ.

4. ಮನ್ಮಥನನ್ನು ಜಯಿಸಿ ಅಂತರಂಗದ ವಿಚಾರಗಳನ್ನೆಲ್ಲ ಸೊನ್ನಲಾಪುರವೆಂಬ ಸಂತೆಯಲ್ಲಿ ಹರಡಿ ಎಲ್ಲರಿಗು ಗುರುವಾಗಿ ಬೋಧಿಸಿ ಜ್ಞಾನಿ ಎನ್ನಿಸಿದ ಸಿದ್ಧರಾಮಯ್ಯನಿಗೆ ಶರಣಾರ್ಥಿ.

5. ಹೊರಗೆ ಹಸುವಿನಂತೆ ಕಂಡರೂ ಒಳಗೆ ಹೆಬ್ಬುಲಿಯೇ ಆಗಿರುವ ಅರಿಷಡ್ವರ್ಗಗಳನ್ನು ಮೀರಿರುವ, ಐಕ್ಯಪದವಿ ಬೋಧಿಸಿದ ಮಹದೇವಿಯಕ್ಕನಿಗೆ ಶರಣಾರ್ಥಿ.

6. ಮನದ ಮಾಯೆಯೆಂಬ ಮೈಲಿಗೆಯನ್ನು ಭಕ್ತಿರಸ ಪ್ರವಾಹದಲ್ಲಿ ತೊಳೆದು ಭಕ್ತರನ್ನೆಲ್ಲ ಶರಣ ಪದವಿಗೆ ಸಲ್ಲಿಸಿದ ಕರುಣಾಸಾಗರ ಮಾಚಿದೇವಯ್ಯನಿಗೆ ಶರಣಾರ್ಥಿ.

7. ಮರುಳಶಂಕರದೇವ, ಕಿನ್ನರಿ ಬೊಮ್ಮಣ್ಣ, ಎಲೇಶ್ವರದ ಕೇತಯ್ಯ, ಗಾಣದ ಕನ್ನಪಯ್ಯ ಈ ಎಲ್ಲ ಮಹಾಶರಣರಿಗೆ ಮತ್ತು ನಾನಾ ರೀತಿಯಲ್ಲಿ ಯಮನ ದಾಳಿಯನ್ನು ದೂರ ಮಾಡಿ ಶಿವೈಕ್ಯರಾದ ಎಲ್ಲ ಶರಣರಿಗೆ ಶರಣಾರ್ಥಿ. (ಪ್ರ.ಲಿಂ.ಲೀ 1ರಿಂದ7))

ಈ ನಾಲ್ಕು ಜನರ ಪೂರ್ವ ಕವಿ ಸ್ಮರಣೆಗಳನ್ನು ನೋಡಿದರೆ:

1. ಇಲ್ಲಿ ಒಬ್ಬೊಬ್ಬರೂ ತಮ್ಮದೇ ಪರಂಪರೆಗಳನ್ನು ನಿರ್ವಚಿಸಿಕೊಳ್ಳುತ್ತಿದ್ದಾರೆ. ತಮ್ಮದೇ ಆದ ಪರಂಪರೆ ಯಾವುದು? ಅದರಿಂದ ನಾವು ಏನನ್ನು ಕಲಿಯಬೇಕು ಎಂಬುದನ್ನು ತಮಗೆ ತಾವೇ ಸ್ಪಷ್ಟಪಡಿಸಿಕೊಳ್ಳುತ್ತಿದ್ದಾರೆ. ಹಾಗಾಗಿ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಹಲವಾರು ಪರಂಪರೆಗಳಿವೆ ಎಂಬುದು ಸಿದ್ಧವಾಗುತ್ತದೆ. ಪರಂಪರೆಯ ನಿರ್ವಚನವು ನಮ್ಮ ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ಚಹರೆಯಾಗಿದೆ.

2. ನಂಜುಂಡ ಕವಿ ದುರ್ಗಸಿಂಹಾದಿಗಳು ಜಾತ್ಯಾತೀತವಾಗಿಯೂ, ಧರ್ಮಾತೀತವಾಗಿಯೂ ತಮ್ಮ ಪೂರ್ವಕವಿ ಪರಂಪರೆಯನ್ನು ಕಟ್ಟಿಕೊಂಡಿದ್ದಾರೆ. ಆದರೆ ಚಾಮರಸ, ಕಮಲಭವರು ಧರ್ಮಬದ್ಧವಾದ ಪರಂಪರೆಯನ್ನು ಕಟ್ಟಿಕೊಂಡಿದ್ದಾರೆ. ಇದರಿಂದ ನಮ್ಮಲ್ಲಿ ತಮ್ಮ ತಮ್ಮ ಧಾರ್ಮಿಕ ಪರಂಪರೆಯ ಆಚೆಗೂ ಕವಿಕಾವ್ಯಗಳನ್ನು ಸ್ಮರಿಸಿ ವಿಮರ್ಶಿಸುವ ಮತ್ತು ತಮ್ಮ ತಮ್ಮ ಧಾರ್ಮಿಕ ಕವಿ ಪಂಪರಂಪರೆಯನ್ನು ಮಾತ್ರವೇ ಸ್ಮರಿಸಿ ಸ್ತುತಿಸುವ ಎರಡೂ ಪದ್ಧತಿಗಳಿವೆ.

3. ಕನ್ನಡ ಮತ್ತು ಸಂಸ್ಕೃತ ಕವಿಪರಂಪರೆ ಹಾಗೂ ಕನ್ನಡ ಮತ್ತು ಸಂಸ್ಕೃತ ಗುರು ಪರಂಪರೆಗಳೆರಡನ್ನೂ ನಮ್ಮ ಎಲ್ಲಾ ಕವಿಗಳು ಆದರಿಸುತ್ತಾರೆ. ಆದ್ದರಿಂದ ನಮ್ಮ ಯಾವ ಕವಿಗಳೂ ಭಾಷೆಯ ಅಂಧಾಭಿಮಾನಿಗಳಲ್ಲ. ಭಾಷಾತೀತ ಪ್ರಜ್ಞೆಯವರು. ಕವಿ ಯಾವ ಭಾಷೆಗೇ ಸೇರಿರಲಿ, ಯಾವ ಪ್ರದೇಶಕ್ಕೇ ಸೇರಿರಲಿ, ಯಾವ ಕಾಲಕ್ಕೇ ಸೇರಿರಲಿ 'ಗುಣಕೆ ಮಚ್ಚರಮುಂಟೆ?' ಎಂಬ ಭಾವದವರು.

ಆದರೆ ಅವರವರ ಧರ್ಮ ಪ್ರಜ್ಞೆ, ಸ್ವ-ಅನ್ಯ ಪ್ರಜ್ಞೆಗಳು ಇವನ್ನೆಲ್ಲ ನಿಯಂತ್ರಿಸಿವೆ. ವಚನಕಾರರಲ್ಲಂತು ಸಂಸ್ಕೃತ ಪರಂಪರೆಯ ಅವಜ್ಞೆ, ಮತ್ತು ನಿರಾಕರಣೆಗಳೇ ತುಂಬಿವೆ.

4. ಚಾಮರಸನ ಪೂರ್ವಕವಿ ಸ್ಮರಣೆಯ ಪರಿಭಾಷೆಗೂ ದುರ್ಗಸಿಂಹನ ಪರಿಭಾಷೆಗೂ ಅಂತರವಿದೆ. ಒಬ್ಬೊಬ್ಬರ ಪರಿಭಾಷೆಗೂ ಅಂತರವಿದೆ. ಒಂದೊಂದು ಪರಂಪರೆಗಳಿಗೂ ಅವುಗಳದ್ದೇ ಆದ ಪರಿಭಾಷೆಗಳು ಸಿದ್ಧಗೊಂಡಿವೆ. ಈ ಪರಿಬಾಷೆಯು ಕಾವ್ಯ ಕಟ್ಟುವ ಪರಿಭಾಷೆಯೂ, ವಿಮರ್ಶೆಯ ಪರಿಭಾಷೆಯೂ ಆಗಿದೆ.

5. ಚಾಮರಸನ ಪ್ರಬುಲಿಂಗಲೀಲೆ ಕಾವ್ಯವೇ ಒಂದು ಪೂರ್ವಕವಿಯನ್ನು ಕುರಿತ ಕಾವ್ಯ. (ರಾಘವಾಂಕ ಚಾರಿತ್ರ, ಬಸವಪುರಾಣ, ಮಡಿವಾಳಯ್ಯಗಳ ತಾರಾವಳಿ, ಹರಿಹರ ಮಹತ್ವ ಹೀಗೆ) ಇಂತಹ ಪರಂಪರೆಯನ್ನೆ ಸಾಹಿತ್ಯ ಚರಿತ್ರೆಯಲ್ಲಿ ನಾವು ಕಾಣಬಹುದು.

6. ಒಬ್ಬನು ಸ್ತುತಿಸಿದ ಕವಿಗಳನ್ನೆಲ್ಲ ಇನ್ನೊಬ್ಬನು ಸ್ತುತಿಸುವುದಿಲ್ಲ. ಒಬ್ಬನು ನಿರ್ವಚಿಸಿದ ಕವಿಗುಣವನ್ನೆ ಆ ಕವಿಯನ್ನು ಸ್ಮರಿಸುವ ಇನ್ನೊಬ್ಬನು ನಿರ್ವಚಿಸುವುದಿಲ್ಲ. ಒಬ್ಬನು ಶ್ರೇಷ್ಠನೆಂದು ಹೇಳಿದವನನ್ನೆ ಇನ್ನೊಬ್ಬನೂ ಶ್ರೇಷ್ಠನೆಂದು ಭಾವಿಸುವುದಿಲ್ಲ. ಭಾವಿಸಿದರೂ ಅವನ ಕಾರಣ ಮತ್ತು ಮಾನದಂಡ ಬೇರೆಯಾಗಿರುತ್ತವೆ. ಹಾಗಾಗಿ ನಮ್ಮವರ ಒಬ್ಬೊಬ್ಬರ ಓದೂ ಭಿನ್ನ ಓದುಗಳಾಗಿವೆ. ಪೂರ್ವಕಾವ್ಯ ಸ್ಮರಣೆಯಲ್ಲಿ ಒಬ್ಬೊಬ್ಬರ ಕವಿ ಯಾದಿಗಳೂ ಭಿನ್ನವಾದ್ದರಿಂದ ನಮ್ಮ ಪರಂಪರೆಯಲ್ಲಿ ಬಿನ್ನ ಓದುಗಳು ಜರುಗಿವೆ ಎಂದು ಹೇಳಬಹುದು.

7. ಪೂರ್ವಕವಿಸ್ಮರಣೆಯಲ್ಲಿ ಗುಣನಿರ್ವಚನವೂ ಸ್ತುತಿಯಂತೆ ಮೇಲ್ನೋಟಕ್ಕೆ ಕಾಣುತ್ತದೆ. ಆದಾಗ್ಯೂ ಅದರಲ್ಲಿ ಅಂತರ್ಗತವಾಗಿ ಕಾವ್ಯದ ಮೌಲ್ಯಮಾಪನವೂ ಅಡಗಿದೆ. ಆದರೆ ಕಟುವಾದ ಮೌಲ್ಯಮಾಪನ ಕಡಿಮೆ.

8. ಕವಿಯ ಗುಣಗಳನ್ನು ಹೇಳುವಾಗ ಕವಿಯ ಕಾವ್ಯವನ್ನು ಗಮನಿಸುವಂತೆ ಕವಿಗಳ ಬಾಳನ್ನು ಕೂಡ ಗಮನಿಸುವುದು ಮುಖ್ಯವಾದುದಾಗಿದೆ. ಚಾಮರಸನ ಮಾತುಗಳಲ್ಲಿ ಇಂಥ ಗಮನವನ್ನು ಕಾಣಬಹುದು. ಕವಿಯ ಕಾವ್ಯ ಮತ್ತು ಬದುಕು ಎರಡನ್ನೂ ಪರಿಭಾವಿಸಿ ಅವರನ್ನು ಮೌಲ್ಯಮಾಪನಕ್ಕೆ ಗುರಿಮಾಡುವ ಪದ್ಧತಿ ನಮ್ಮಲ್ಲಿದೆ. ಇದು ಕಾವ್ಯದ ಆಶಯ-ಫಲಿತ ಮತ್ತು ಬದುಕಿನಲ್ಲಿನ ಅದರ ಚಲಾವಣೆಗಳ ಕುರಿತ ವಿಮರ್ಶೆ.

9. ಪೂರ್ವಕವಿಗಳ ಗುಣ, ಶಕ್ತಿಗಳು ನಮ್ಮಲ್ಲಿ ನೆಲೆಸಲಿ ಎಂದು ಕವಿಗಳು ಆಶಿಸುವ ಪ್ರವೃತ್ತಿಯು ನಮ್ಮವರ ಚರಿತ್ರೆಯಿಂದ ಪಾಠ ಕಲಿಯುವ ಪ್ರವೃತ್ತಿಯನ್ನೆ ತೋರುತ್ತದೆ. ಪೂರ್ವಿಕರ ಗುಣಗಳನ್ನು ತೆಗೆದುಕೊಂಡು ದೋಷಗಳನ್ನು ಪರಿಗಣಿಸದೆ ಇರುವ ಪ್ರವೃತ್ತಿಯು ನಮ್ಮವರದಾಗಿದೆ. ಕವಿಗಳ ಹೆಸರುಗಳನ್ನು ಉಲ್ಲೇಖಿಸುವಾಗ ಅವರ ಗುಣಗಳನ್ನು ಮಾತ್ರವೇ ಉಲ್ಲೇಖಿಸಿ ದೋಷಗಳನ್ನು ಹೇಳದೇ ಇರುವುದನ್ನು ನೋಡಿದರೆ ನಮ್ಮವರ ಪೂರ್ವಕವಿ ವಿಮರ್ಶೆಯು ಗುಣಗ್ರಾಹಿ ವಿಮರ್ಶೆಯಾಗಿದೆ ಎನ್ನಿಸುತ್ತದೆ.

10. ಕವಿಗಳು ಕಾವ್ಯಗಳನ್ನು ಉಲ್ಲೇಖಿಸುವಾಗ ಆಗಮಿಕ ಅಥವಾ ಧಾರ್ಮಿಕ ಕಾವ್ಯಗಳನ್ನು ಪ್ರಧಾನವೆಂದು ಪರಿಗಣಿಸುವ ಮಿಕ್ಕ ಲೌಕಿಕ-ಶೃಂಗಾರ ಕಾವ್ಯಗಳನ್ನು ಉಲ್ಲೇಖಿಸದೆ ಮರೆಯುವ ಪ್ರವೃತ್ತಿಯೂ ನಮ್ಮಲ್ಲಿದೆ. ಶಾಂತಿನಾಥನ ಮಾದರಿಯನ್ನು ನೋಡಿದರೆ ಇದು ತಿಳಿಯುತ್ತದೆ. ಉಲ್ಲೇಖಿಸಲು ಆಯ್ದುಕೊಳ್ಳುವ ಮತ್ತು ಉಲ್ಲೇಖಿಸದೆ ಅಲಕ್ಷಿಸುವ ಪ್ರವೃತ್ತಿಯ ಹಿಂದೆ ಕವಿಗಳ ತಮ್ಮದೇ ಆದ ಅಭಿರುಚಿ ಪ್ರಜ್ಞೆ ಕೆಲಸ ಮಾಡಿದೆ. ಇಲ್ಲಿ ಆಧ್ಯಾತ್ಮ, ಮತ್ತು ಧಾರ್ಮಿಕ ಕಾವ್ಯಗಳಿಗೆ ಸಾರ್ವಜನಿಕವಾಗಿ ಹೆಚ್ಚು ಪ್ರಾಶಸ್ತ್ಯ ಇದ್ದಂತೆ ಕಾಣುತ್ತದೆ.

11. ನಮ್ಮ ಕವಿಗಳು ಸ್ತುತಿಸುವ ಅಸಗ, ಗುಣನಂದಿ, ಗಜಾಂಕುಶ (ಗಜಗ), ಆದಿತ್ಯ, ಮನಸಿಜ, ಚಂದ್ರಭಟ್ಟ ಮೊದಲಾದ ಕವಿಗಳ ಕನ್ನಡ ಕಾವ್ಯಗಳು ಇದುವರೆಗೆ ನಮಗೆ ದೊರಕಿಲ್ಲ. ಈ ಪೂರ್ವಕವಿ ಸ್ಮರಣೆಗಳಿಂದ ನಮಗೆ ದೊರಕಿಲ್ಲದ ಹಲವಾರು ಕವಿಗಳು ತಿಳಿದು ಬಂದಿದ್ದಾರೆ. ಹಾಗಾಗಿ ಇಂದು ನಾವು ಕಟ್ಟಿಕೊಂಡಿರುವ ಸಾಹಿತ್ಯ ಚರಿತ್ರೆಯು ಅಸಮಗ್ರ ಎಂಬುದು ಸಾಬೀತಾಗುತ್ತದೆ.

12. 'ಕಾದಂಬರಿಯನ್ನು ಸುಡಿಸಿ ಲೀಲಾವತಿಗೆ ಕಪ್ಪನ್ನು ಇಡಿಸಿದ' ಮತ್ತು 'ವಾದಿಗಳೆಲ್ಲರು ರಗಳೆಯ ಕವಿಯೆಂದು ತೆಗಳಲು' ಇಂಥ ಉಲ್ಲೇಖಗಳಿಂದ ಕಾವ್ಯಗಳ ಜನಬಳಕೆಯ ವಿಚಾರಗಳು ತಿಳಿಯುತ್ತವೆ. ಜನಸಂವೇದನೆಯು ಕವಿ ಮತ್ತು ಕಾವ್ಯಸಂವೇದನೆಗಳನ್ನು ರೂಪಿಸುತ್ತಿದ್ದ ವಿಚಾರಗಳು ತಿಳಿಯುತ್ತವೆ.

ಲಿಖಿತ ಪರಂಪರೆ ಮತ್ತು ಮೌಖಿಕ ಪರಂಪರೆಗಳಲ್ಲಿ ಕಾವ್ಯವಿಚಾರಗಳ ಬಗ್ಗೆ ಇರಬಹುದಾದ ಒಳಸುಳಿಗಳು ತಿಳಿಯುತ್ತವೆ. ಪಾಂಡಿತ್ಯ ಮತ್ತು ಕವಿತ್ವಗಳ ಸಂಬಂಧ-ಸಂಘರ್ಷಗಳು ತಿಳಿಯುತ್ತವೆ. ದಂತಕತೆಗಳು ಮತ್ತು ಸಾಹಿತ್ಯದ ಸಂಬಂಧಗಳು ತಿಳಿಯುತ್ತವೆ. ಈ ಎಲ್ಲ ಮಾದರಿಗಳಿಂದ ಹೀಗೆ ಹತ್ತು ಹಲವು ನಿಲುವುಗಳಿಗೆ ನಾವು ತಲುಪಬಹುದು.

### 1.5.4. ಕೃತಿ ಪರೀಕ್ಷೆ-ತೌಲನಿಕ ನೋಟ

ಕೃತಿಗಳನ್ನು ಪರೀಕ್ಷಿಸಿ ನೋಡುವ, ಪರಿಶೀಲಿಸಿ ನೋಡುವ ಪರಿಪಾಠವು ಹಿಂದೆ ಇತ್ತು. ಅದಕ್ಕಾಗಿಯೇ ಪಂಡಿತರು ಇದ್ದರು. ಯಾವುದು ಶ್ರೇಷ್ಠವಾದುದು, ಯಾವುದು ಸ್ವೀಕಾರಾರ್ಹ ಎಂಬ ನಿರ್ಣಯಗಳನ್ನು ಅವರು ನೀಡುತ್ತಲೂ ಇದ್ದರು. ಆದರೆ ಈ ನಿರ್ಣಯಗಳು ತೀರಾ ಅನೌಪಚಾರಿಕವಾಗಿ ಇರುತ್ತಿದ್ದವು. ಇವುಗಳನ್ನು ಉದಾಹರಣೆ ಸಮೇತ ಮಂಡಿಸಿ ಬರೆಯುವ ಪರಿಪಾಠ ಆಗ ಇರಲಿಲ್ಲ.

> 'ಕವಿಗಳೊಳ್ ಆ ಪುರಾಣಕವಿಪುಂಗವರ್ ಒಳ್ಳಿದರ್ ಈಗಳಿಲ್ಲ. ಸ/ತ್ಕವಿಗಳ್ ಎನಲ್ಕವೇಡ ಅವರ
> ಪೋದೊಡೆ ಅವಂದಿರ ಕಬ್ಬಂ ಇನ್ನುಂ/ ಇರ್ಪುವು, ಗುಣ ದೋಷಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ
> ತಾವೇ ಪೇಳವೆ? ಬುಧರ್ ಇರ್ದು ನೋಳ್ಪುದು ಪುರಾತನ ನೂತನ ಕಾವ್ಯರೇಖೆಯಂ' (ಗ.ಯು.1-47)

ರನ್ನ ಈ ಪದ್ಯದಲ್ಲಿ ಗುಣ ದೋಷಗಳನ್ನು ನಿಕಷವಾಗಿ ಇಟ್ಟುಕೊಂಡು ಪುರಾತನ ನೂತನ ಕಾವ್ಯಗಳನ್ನು ತೌಲನಿಕವಾಗಿ ಪರೀಕ್ಷಿಸಿ ನೋಡುವ ಬಗ್ಗೆ ಹೇಳುತ್ತಿದ್ದಾನೆ. ಪುರಾತನ ನೂತನ ಕಾವ್ಯಗಳನ್ನು ತೌಲನಿಕವಾಗಿ ಪರೀಕ್ಷಿಸಿ ನೋಡುವ ರೂಡಿ ಚಾಲ್ತಿಯಲ್ಲಿ ಆ ಕಾಲಕ್ಕೆ ಇದ್ದಿರಬೇಕು. ಆದರೆ ಅದರ ದಾಖಲೀಕರಣ ಆಗದಿರುವುದರಿಂದ ಅಂಥ ವಿಮರ್ಶೆ ನಮಗಿಂದು ಸಿಗುತ್ತಿಲ್ಲ. ಇದೇ ರನ್ನ ತನ್ನ ಇನ್ನೊಂದು ಪದ್ಯದಲ್ಲಿ

> 'ಮೃದು ಪದ್ಯರಚನೆಯೊಳ್ ಕಾ/ಳಿದಾಸನುಂ ಗದ್ಯರಚನೆಯೊಳ್ ಬಾಣನುಂ/
> ಅಂಕದ ಕವಿಗಳೆನಿಸಿ ನೆಗಳ್ದಿ/ದುದರಿಂ ಸತ್ಕವಿಗಳೀರ್ವರೆಮಗಭಿವಂದ್ಯರ್' (ಗ.ಯು. 1-9)

ಎಂದು ಹೇಳುತ್ತಾನೆ. ಅದುವರೆಗೆ ಪದ್ಯ ರಚನೆಯಲ್ಲಿ ಮತ್ತು ಗದ್ಯರಚನೆಯಲ್ಲಿ ಕನ್ನಡದಲ್ಲಿ ಕಾಳಿದಾಸ ಬಾಣರನ್ನು ಮೀರಿಸುವ ಕವಿಗಳು ಇರಲಿಲ್ಲ ಎಂಬುದು ರನ್ನನ ಅಭಿಪ್ರಾಯ. ಕನ್ನಡ ಮತ್ತು ಸಂಸ್ಕೃತ ಕಾವ್ಯಪರಂಪರೆಯ ಅಖಂಡ ವ್ಯಾಖ್ಯಾನದ ರೀತಿಯ ಮಾತು ಇದು. ಎರಡೂ ಭಾಷೆಯ ಕಾವ್ಯಗಳ ತೌಲನಿಕ ನೋಟದಿಂದ ಹುಟ್ಟಿರುವ ಮಾತು ಇದು. ಆದರೆ ದುರಂತವೆಂದರೆ ರನ್ನ ತನ್ನ ಇನ್ನೊಂದು ಪದ್ಯದಲ್ಲಿ ನಾನು ಕಾಳಿದಾಸನಿಗೆ ನೂರ್ಮಡಿ ಎಂದು ಅಗ್ಗಳಿಕೆಯಿಂದ ಹೇಳಿಕೊಂಡಿದ್ದಾನೆ. ಇವನ ವಿಮರ್ಶೆಯ ನಿಲುವು ಏನೇ ಇರಲಿ ಪೂರ್ವಕವಿಗಳನ್ನು ಹೆಸರಿಸಿ ವಿಮರ್ಶಿಸದೆ ಬರಿದೇ ಗುಡಿಸಿಹಾಕುವ ರೀತಿಯ ಮಾತುಗಳನ್ನು ನಮ್ಮಲ್ಲಿ ಪರಂಪರೆಯುದ್ದಕ್ಕು ಕಾಣಬಹುದು.

## 1.6. ಸತ್ಕವಿ ಪ್ರಶಂಸೆ ಕುಕವಿ ನಿಂದೆ

ಸ್ವಕಾವ್ಯ ಸ್ವರೂಪ ಮೀಮಾಂಸೆ, ಕಾವ್ಯದ ಗುಣನಿರ್ವಚನ, ಪೂರ್ವಕಾವ್ಯ ಸ್ಮರಣೆಗಳು ಕೃತಿಕೇಂದ್ರಿತ ಮೀಮಾಂಸೆಯ ಅಂಗಗಳಾದರೆ; ದುರ್ಜನ-ಸುಜನ ಮೀಮಾಂಸೆ, ಓದುಗ-ಕೇಳುಗ ಮೀಮಾಂಸೆ, ಜಡ-ಬುಧ-ಬೆಳ್ಳಕ್ಕರಿಗ-ಪರೀಕ್ಷಕರ ಕುರಿತ ವಿಚಾರಗಳು, ಸಹೃದಯ ವಿಚಾರಗಳು ಓದುಗ ಕೇಂದ್ರಿತ ಮೀಮಾಂಸೆಯ ಅಂಗಗಳಾಗಿವೆ. ಸತ್ಕವಿ ಪ್ರಶಂಸೆ-ಕುಕವಿ ನಿಂದೆ, ಕವಿನಿರ್ವಚನ, ಪೂರ್ವಕವಿ ಸ್ಮರಣೆಗಳೆಲ್ಲ ಕರ್ತೃಕೇಂದ್ರಿತ ಮೀಮಾಂಸೆಯ ಅಂಗಗಳಾಗಿವೆ. ಪ್ರಶಂಸೆ ಮತ್ತು ನಿಂದೆಗಳು ನಮ್ಮ ಪ್ರಾಚೀನ ವಿಮರ್ಶೆಯ ಎರಡು ಆದಿಮ ರೂಪಗಳು. ಪ್ರಶಂಸೆ ಮತ್ತು ನಿಂದೆಗಳಲ್ಲದೆ ಸತ್ಕವಿ-ಕುಕವಿ ವಿಚಾರದಲ್ಲಿ ಸತ್ಕವಿ-ಕುಕವಿ ನಿರ್ವಚನದ ಕೆಲಸವನ್ನು ನಮ್ಮವರು ಮಾಡಿದ್ದಾರೆ. ಪೂರ್ವಕವಿಗಳಲ್ಲಿ ಕೆಲವರನ್ನು ಸತ್ಕವಿಗಳೆಂದು ಕರೆದು ಸ್ಮರಿಸಿ, ಸ್ತುತಿಸಿದ್ದರೆ, ಹಲವರನ್ನು ಕುಕವಿಗಳೆಂದು ಹೆಸರಿಸದೆ ಅಲಕ್ಷಿಸಿದ್ದಾರೆ. ಸ್ಮರಣೆಯಲ್ಲಿ ನೆನಪು ಮತ್ತು ನಿರ್ವಚನಗಳು ಇರುವಂತೆಯೇ ಮರೆವು ಮತ್ತು ಅಲಕ್ಷ್ಯಗಳೂ ಇವೆ. ಈ ಅಲಕ್ಷ್ಯತೆಯ ರಾಜಕಾರಣವು ನಮ್ಮ ಪ್ರಾಕ್‌ವಿಮರ್ಶೆಯ ಒಂದು ಮುಖ್ಯ ಲಕ್ಷಣವಾಗಿದೆ. ಯಾರ್‍ಯಾರು ಉಲ್ಲೇಖಿತಗೊಂಡಿಲ್ಲವೋ ಅವರೆಲ್ಲರೂ ಅಪ್ರಸ್ತುತರೂ, ಕುಕವಿಗಳೂ ಇರಬಹುದು. ಆದರೆ (ಕುತೂಹಲಕ್ಕಾಗಿ) ಅಲಕ್ಷಿತರು ಯಾರ್‍ಯಾರಿದ್ದಾರೋ ಅವರದೇ ಒಂದು ಚರಿತ್ರೆ ಕಟ್ಟಿಕೊಂಡರೆ ನಮ್ಮ ಪ್ರಾಚೀನರ ಕಾವ್ಯಸಂವೇದನೆಗಳು, ಅನುಸಂಧಾನ ಮಾನದಂಡಗಳನ್ನು ತಿಳಿಯಬಹುದು. ಭಿನ್ನ ಪರಂಪರೆಗಳ ಅಭಿರುಚಿಗಳು ಮತ್ತು ತಾಕಲಾಟಗಳನ್ನು ತಿಳಿಯಬಹುದು. ವಿಮರ್ಶೆಯ ಧಾರೆಗಳು ಮತ್ತು ಕಾವ್ಯಧಾರೆಗಳ ನಿರ್ಧಿಷ್ಟ ಹಾದಿಗಳನ್ನು ಕಂಡುಕೊಳ್ಳಬಹುದು.

### 1.6.1. ಗುಣದೋಷ ವಿವೇಕ ಇಲ್ಲದ ವಿಮರ್ಶಕ

ಕಾವ್ಯ ಸೃಷ್ಟಿಯ ಪ್ರಜ್ಞೆ, ಔಚಿತ್ಯ ಜ್ಞಾನ, ವ್ಯುತ್ಪತ್ತಿ, ಸಾಮಾನ್ಯ ಸ್ಪಂದನ ವಿವೇಕ, ರಸಭಾವ-ಅಲಂಕಾರಾದಿಗಳನ್ನು ಹೇಗೆ ಎಷ್ಟು ಬಳಸಬೇಕೆಂಬ ತಿಳುವಳಿಕೆ ಇತ್ಯಾದಿಗಳು ಇಲ್ಲದಿರುವವನೇ ಕುಕವಿ. ಇವುಗಳೆಲ್ಲ ಇರುವವನು ಸತ್ಕವಿ. ಕಾವ್ಯವನ್ನು ಸರಿಯಾಗಿ ತಿಳಿಯಲಾರದವನು, ಸದಾ ದೋಷವನ್ನೆ ಹುಡುಕುವವನು ಕುಕವಿ. ಕವಿಗಳನ್ನು ತಿದ್ದಿ ಆಸ್ವಾದಿಸುವವನು ಸತ್ಕವಿ. 'ಸುಕವಿಗಳಾದವರು ದೋಷ ಕಂಡರೆ ಅದನ್ನು ನಯವಾಗಿ ತಿದ್ದುತ್ತಾರೆ. ದೋಷವಿಲ್ಲದಿದ್ದರೂ ಕಾವ್ಯ ಚೆನ್ನಾಗಿಲ್ಲವೆಂದು ಕುಕವಿಗಳು ದೂಷಿಸುತ್ತಾರೆ.' 'ವಿವೇಕಿಯಾದವನಿಗೆ ನವಿಲಿನ ನೃತ್ಯವು ಸೊಗಸಾಗಿ ಕಾಣುತ್ತದೆಯಲ್ಲದೆ ಅದು ನಾಯಿಗಳಿಗೆ ಸೊಗಸಾಗಿ ಕಾಣಿಸದು. ಹಾಗೆಯೇ ಕಾವ್ಯಗುಣವು ಸತ್ಕವಿಯ ಮನಸ್ಸಿಗೆ ಹಿಡಿಸುವಂತೆ ಅವಿವೇಕಿಗಳಿಗೆ ಹಿಡಿಸಲಾರದು.' (ಧರ್ಮಾ. 1-45, 47) 'ಜಾಣರ ಕೃತಿಗಳಲ್ಲಿ ಶೋಭಿಸುವ ಅಭಿಲಷಿತ ಗುಣಗಳನ್ನು ಬಿಟ್ಟು ಈ ಕುಕವಿ ಬಕಗಳು ಮಹಾ ಮತ್ಸರಮತಿಯಿಂದ ದೋಷವೆಂಬ ವಿಷವನ್ನೇ ಸದಾ ಹೊತ್ತುಕೊಂಡಿರುತ್ತವೆ!' (ಆ.ಪು. 1-22) ಪಂಪ, ನಯಸೇನರು ಹೇಳುವಂತೆ ಗುಣ ಮತ್ತು ದೋಷಗಳನ್ನು ಅರಿಯುವ ವಿವೇಕವು ಕುಕವಿಗೆ ಇರುವುದಿಲ್ಲ. ಅಷ್ಟೇ ಅಲ್ಲ ದೋಷ-ಗುಣ ಎರಡೂ ಇರುವಾಗ ಕುಕವಿಗಳು ಗುಣದ ಬಗ್ಗೆ ಮಾತನಾಡುವುದೇ ಇಲ್ಲ. ಬರೀ ದೋಷಗಳ ಬಗ್ಗೆ ಮಾತ್ರ ಮಾತನಾಡುತ್ತಾರೆ. ಈ ಮಾತುಗಳಲ್ಲಿ ಗಮನಿಸಬಹುದಾದ ಇನ್ನೊಂದು ಅಂಶವೆಂದರೆ; ನಯಸೇನ ಸೂಕ್ಷ್ಮವಾಗಿ ಕುಕವಿ ಮತ್ತು ವಿಮರ್ಶಕ ಇಬ್ಬರನ್ನೂ ಸಮೀಕರಿಸಿ ಮಾತನಾಡುತ್ತಾನೆ. ಗುಣವು ಹಿಡಿಸದಿರುವ, ಕಾವ್ಯಗಳನ್ನು ಗುಣಗಳಿಂದ ಕೂಡಿದ್ದರೂ ದೂಷಿಸುವ ಕಟುವಿಮರ್ಶಕರನ್ನೇ ಇಲ್ಲಿ ನಯಸೇನ ಕುಕವಿಗಳೆಂದು ಕರೆಯುತ್ತಿದ್ದಾನೆ. ಸರಿಯಾಗಿ ಬರೆಯಲು ಬರದೇ ಇರುವವನು ಕುಕವಿ. ಅದೇ ರೀತಿ ಬರೆಯಲು ಬರದಿದ್ದರೂ ಬರಿದೇ ಬರೆದವರನ್ನು ದೂಷಿಸುವವನೂ ಕುಕವಿಯೇ.

### 1.6.2. ಬರೆಯಲು ಬಾರದ ಕುಕವಿ

'ಕ್ಷುದ್ರನೂ ಅತಿಶಬ್ದ ದರಿದ್ರನೂ, ಸಕಲ ಸುಜನ ಉಪದ್ರವರೂಪನೂ, ಪರರ ಕಾವ್ಯಾರ್ಥವನ್ನು ಛಿದ್ರಮಾಡುವವನೂ ಆದವನಿಗೆ ನವೀನ ಕಾವ್ಯಾರಂಭವು ಸಿದ್ಧಿಸುವುದೆ? (ಗಿ.ಕ. 1-25) 'ಬರೆದು ಬರೆದು ಬರೆದದ್ದನ್ನೆ ತೊಡೆಯುತ್ತ, ತಟ್ಟನೆ ನಿಲ್ಲಿಸಿ ದಿಟ್ಟಿಸಿ ನೋಡುತ್ತ, ಸಲೀಸಾಗಿ ಒಂದೂ ಸರಸ ಪದಾರ್ಥವನ್ನು ಕಾಣದೆ, ಯುಕ್ತಿಪೂರ್ಣವಾದ ಪರರ ಉಕ್ತಿಯನ್ನು ಕದ್ದು, ಅಂತೂ ಇಂತೂ ಹೇಗೋ ಒಂದು ಅಧಮ ಕಾವ್ಯವನ್ನು ರಚಿಸಿ, ಕೇಳಿಸುತ್ತ ಗಾಂಪರಂತೆ ಕಾಣುವ ದುಷ್ಕವಿಯೂ ಮಹಾಕವಿಗಳ ಮಧ್ಯದಲ್ಲಿ ಮಾನ್ಯನಾಗುವನೆ? (ರಾ.ವಿ 1-23) 'ನಾಯಿಗಳು ಪೇರಿಸಿ ಇಡುವುದನ್ನು ತಿಳಿಯವು. ಜಡರು ಎಂದೂ ಕೃತಿಯನ್ನು ಕೆಡೆನುಡಿವರಲ್ಲದೆ ಕವಿಯಂತೆ ತಿದ್ದಿ ನುಡಿಯಲಾರರು' (ಧರ್ಮಾ 1-48) 1. ಪರರ ನುಡಿಗಳನ್ನು ಕದಿಯುವವನು ಎಷ್ಟೇ ಒಳ್ಳೆಯವನಾದರು ಅವನು ಕಳ್ಳ ಮತ್ತು ಕುಕವಿ. 2. ಸ್ವಂತಿಕೆಯುಳ್ಳವನು ಸತ್ಕವಿ. ಸ್ವಂತಿಕೆಯಿಲ್ಲದವನು ಮತ್ತು ಪರರ ನುಡಿಯನ್ನು ಕದಿಯುವವನು ಇಬ್ಬರೂ ಒಂದೇ. ಹೀಗೆ ನಮ್ಮ ಬಹುಪಾಲು ಕವಿಗಳು ಈ ಸತ್ಕವಿ ಕುಕವಿ ಚರ್ಚೆಯಲ್ಲಿ ಒಬ್ಬೊಬ್ಬರೂ ಭಿನ್ನವಾದ ಸಿದ್ಧಾಂತಗಳನ್ನೇನೂ ಕಟ್ಟುವುದಿಲ್ಲ. ಸರಿಸುಮಾರು ಎಲ್ಲರೂ ಒಂದೇ ರೀತಿಯಾಗಿ ಹೇಳುತ್ತಾರೆ. ಇವರು ಹೆಳುವ ವಿಚಾರದಲ್ಲಿ ಅಂಥ ಭಿನ್ನತೆ ಕಾಣುವುದಿಲ್ಲ. ಆದರೆ ಹೇಳುವ ವಿಧಾನದಲ್ಲಿ ಭಿನ್ನತೆ ಇದೆ ಅಷ್ಟೆ. ಈ ಎಲ್ಲಾ ಮಾತುಗಳಲ್ಲು ಕುಕವಿಯು ಬರೆಯಲು ಬಾರದ ಆದರೆ ದೂಷಿಸಲು ಬರುವವನಾಗಿದ್ದಾನೆ. ಇಲ್ಲೂ ಕೂಡ ವಿಮರ್ಶಕನ ವಾಸನೆ ಬಡಿಯುತ್ತದೆ. ಕೆಡವಲು ಬಲ್ಲ ಆದರೆ ಕಟ್ಟಲು ಬರದವನು ಕುಕವಿ ಅಷ್ಟೇ ಅಲ್ಲ ಉಪದ್ರವಿ ಕೂಡ. ಕಾವ್ಯವನ್ನು ದೂಷಿಸುವವನಿಗೆ ಮೊದಲು ಬರೆಯುವ ಕಷ್ಟ ಮತ್ತು ಬರೆಯುವ ಶಕ್ತಿಯ ಸ್ವರೂಪ ಏನು ಎಂಬುದು ತಿಳಿದಿರಬೇಕಾಗುತ್ತದೆ. ನಮ್ಮ ಕವಿಗಳ ಪ್ರಕಾರ ಇವರು ಬೇನೆಯರಿಯದ, ವಿವೇಕವಿಲ್ಲದ ಕೆಡವಬಲ್ಲ ಆದರೆ ಕಟ್ಟಲಾರದ ಜಡರು.

### 1.6.3. ಮರಕುಟಿಗ, ಮುದಿ ಎತ್ತುಗಳ ಕಟು ವಿಮರ್ಶೆಯ ನಿಷೇಧ

'ಇಲಿಗಳಿಗೆ ಮತ್ತು ಮರಕುಟಿಕಗಳಿಗೆ ಸದಾ ಕುಟು ಕುಟು ಎಂದು ಕುಟುಕುವುದೇ ಸ್ವಭಾವ. ಹಾಗೇ ಕುಕವಿಗಳು ಇತರರ ಕೃತಿಗಳನ್ನು ಸದಾ ಕುಟುಕುತ್ತಲೇ ಇರುತ್ತಾರೆ.' 'ಮಂಡೂಕವು ಸಮುದ್ರವನ್ನು ಕಾಣದೆ ಅದನ್ನು ಹಳಿದರೆ ಸಮುದ್ರಕ್ಕೆ ಏನಾದರೂ ಆಗುವುದೇ? ಹೇಳಿ. ಕುಕವಿ ಸಮೂಹವು ತಿಳಿಯದೆ

ಸುಮ್ಮನೆ ಖಂಡಿಸಿದರೆ ಪಂಡಿತರಿಗೆ ಕುಂದುಂಟಾಗುತ್ತದೆಯೇ?' (ಧರ್ಮಾ. 1-44, 46) 'ಕುಕವಿ ಕೂಪ ಮಂಡೂಕಗಳು ಪದ ವಿನ್ಯಾಸವನ್ನು ಅರಿಯದೆ, ಸರಸತೆಯನ್ನು ಅರಿಯದೆ, ಪ್ರತಿಭೆಯ ಗುಟ್ಟನ್ನೂ ಅರಿಯದೆ ಸುಮ್ಮನೆ ಡುರುಕ್ ಡುರುಕ್ ಎನ್ನುತ್ತವೆ.' (ಅನಂ.ಪು. 1-42) 'ಕಟವಾಯಿಯಿಂದ ನೊರೆ ಸುರಿಸುವ ದುಷ್ಕವಿ ಎಂಬ ಮುದಿ ಎತ್ತು ಅಪರಿಮಿತವೂ, ಪರಿಪಕ್ವವೂ, ಉದಾರವೂ ಆದ ಕಾವ್ಯ ಸಸ್ಯರಾಶಿಯನ್ನು ಮೇದು ಮೆಲುಕು ಹಾಕದೆ ಸುಮ್ಮನೆ ಕಟುಕತನದಿಂದ ಗುಟುರು ಹಾಕುತ್ತದೆ.' (ಲೀಲಾ. ಪ್ರ. 1-20) ಕುಕವಿಗಳು ಕಾವ್ಯವನ್ನು ದೂಷಿಸಿದರೆ ಕವಿಗಳು ನಿರಂತರವಾಗಿ ಕುಕವಿಗಳನ್ನು ದೂಷಿಸುತ್ತಾರೆ. ಕೂಪಮಂಡೂಕ, ಬಕ, ನಾಯಿ, ಮರಕುಟಿಗ, ಇಲಿ, ಮುದಿ ಎತ್ತು ಇತ್ಯಾದಿ ಉಪಮೆಗಳಿಂದ ಕುಕವಿಗಳನ್ನು ಲೇವಡಿ ಮಾಡಿರುವ ನಮ್ಮ ಕವಿಗಳ ಈ ಪರಿಯ ಸಿಟ್ಟನ್ನು ನೋಡಿದರೆ ಸಮಾಜದಲ್ಲಿ ಆ ಕಾಲಕ್ಕೆ ಕಾವ್ಯಗಳ ಬಗ್ಗೆ ಅಪಾರವಾಗಿ ಕಟು ವಿಮರ್ಶೆ ಹುಟ್ಟುತ್ತ ಇದ್ದಿರಬಹುದು. ಅದನ್ನು ತಡೆಯಲಾರದೆ ಸ್ವಸಮರ್ಥನೆ ಮಾಡಿಕೊಳ್ಳಲು ಇಂಥ ಲೇವಡಿಗಳು ಹುಟ್ಟಿರಬಹುದು ಎನ್ನಿಸುತ್ತದೆ.

ನೇಮಿಚಂದ್ರನ ಮುದಿ ಎತ್ತಿನ ಉಪಮೆಯಲ್ಲಿ ಕಾವ್ಯವನ್ನು ಕಟುವಾಗಿ ವಿಮರ್ಶಿಸಕೂಡದು ಆಸ್ವಾದಿಸಬೇಕು ಎಂಬ ಓದಿನ ತತ್ವವೊಂದು ಪ್ರತಿಪಾದಿತವಾಗಿದೆ. ಕಾವ್ಯವನ್ನು ಮೆಲುಕು ಹಾಕಬೇಕು ಅಷ್ಟೆ. ಕಾವ್ಯ ಇರುವುದು ವಿಮರ್ಶಿಸಲು ಅಲ್ಲ. ದೋಷ ಹುಡುಕಲು ಅಲ್ಲ. ಬರೀ ಆಸ್ವಾದಿಸಲು ಮಾತ್ರ ಎಂಬ ತತ್ವವಿದು. ಕಟುವಿಮರ್ಶೆ-ಕುಟುಕು ವಿಮರ್ಶೆಯನ್ನು ನಿಷೇಧಿಸುವ ಬಗೆಯಿದು. ನಯಸೇನ, ನೇಮಿಚಂದ್ರ, ಜನ್ನ ಈ ಎಲ್ಲರ ಮಾತುಗಳಲ್ಲು ಕುಕವಿ ಮತ್ತು ಕಟು ವಿಮರ್ಶಕರ ಸಮೀಕರಣವೇ ಇದೆ. ಕುಕವಿಗಳ ಸಮೂಹವನ್ನು ನಿರ್ದಿಷ್ಟವಾಗಿ ಗುತಿಸಿ ಹೇಳದೆ ಕುಕವಿ ವ್ಯಕ್ತಿತ್ವ, ಪ್ರವೃತ್ತಿಗಳನ್ನು ಮೇಲಿನ ಮಾತುಗಳಲ್ಲಿ ಹಳಿಯಲಾಗಿದೆ. ಅಲ್ಲದೆ ಕಾವ್ಯದೋಷಗಳನ್ನು ಗುರ್ತಿಸಿ ಹಳಿಯುವಾಗ ಕವಿ ಮತ್ತು ಕಾವ್ಯ ಅಪ್ರಧಾನವಾಗಿ ವಿಮರ್ಶಕನೇ ಮುನ್ನೆಲೆಗೆ ಬರುವ ಸಾಧ್ಯತೆ ಇರುತ್ತದೆ. ಇಂಥ ಸಾಧ್ಯತೆಯನ್ನು ತಪ್ಪಿಸುವ ತಂತ್ರಗಾರಿಕೆಯೂ ಇದಾಗಿದೆ. ಪರೋಕ್ಷವಾಗಿ ಇದು ಕವಿಗಳ ಸ್ವ ಸಮರ್ಥಕ ಮತ್ತು ಸ್ವ ಪ್ರಭುತ್ವ ಸ್ಥಾಪನೆಯ ತಂತ್ರವೂ ಹೌದು.

### 1.6.4. ಸತ್ಕವಿ-ಕುಕವಿ ನಿರ್ವಚನ

'ವಿವಿಧಾಲಂಕಾರದಿಂ ರಂಜಿಸೆ ತಮಗೆ ವಶಂ ಮಾಡಿ ಶಬ್ದಂಗಳಂ ತಮ್ಮ ವಚಃಸಂಪತ್ತಿ ಕರ್ಣಾಮೃತಮೆನೆ ರಸಭಾವಂಗಳಂ ತೋರೆ ಜಾಡ್ಯ/ವ್ಯವಹಾರಂ ಪಿಂಗೆ ತಮ್ಮಿಂ ನೆಗಳೆ ಸುಖಮಯಂ ಸೃಷ್ಟಿ ಸತ್ಕೀರ್ತಿಯಂ ಭೂಭುವನಂ ನಿಲ್ವನ್ನೆಗಂ ತಾಳ್ದಿದ ಸುಕವಿಗಳಿಂದಕ್ಕೆ ವಿದ್ಯಾಪ್ರಸಾದಂ.' (ಮ.ಪು. 1-22) ಕವಿತಾರಹಸ್ಯಮಂ ಸ/ತ್ಕವಿಯರಿಗುಂ ಏಕಮೂಕನೇಡಂ ಜಡನೆಂ/ಬವನರಿಗುಮೆ ವಿಟನರಿಗುಂ/ ಕುವಿಟಂ ಸ್ತ್ರೀರತರಹಸ್ಯದೊಳಗರಿದಪನೇ?' (ಆ.ಪು. 1-20) ಲಲಿತ ಪದಂ ಪ್ರಸನ್ನ ಕವಿತಾಗುಣಂ ಇಲ್ಲದೆ ಪೂಣ್ದು ಪೇಳ್ದ ಬೆಳ್ಗಳ ಕೃತಿಬಂಧಮೇಂ ಬರೆಕಾರರ ಕೈಗಳ ಕೇಡು, ನುಣ್ದನಪ್ಪಳಕದ ಕೇಡು, ಪೇಳಿಸಿದೊಡರ್ಥದ ಕೇಡು, ಎನೆ ಪೇಳ್ದು ಬೀಗಿ ಪೊಟ್ಟಳಿಸಿ ನೆಗಳ್ತೆಗಾಟಿಸುವ ದುಷ್ಕವಿಯುಂ ಕವಿಯೆಂಬ ಲೆಕ್ಕಮೇ?' (ವಿ.ವಿ. 1-12) 'ಕವಿಮಾರ್ಗದೊಳ್ ಒಳಪೊಕ್ಕುಂ ನವರಸಮಂ ತೆರೆಯೆ ನುಡಿದೆನಿಸಿದ ಕವಿ ಸತ್ಕವಿಯೆನಿಕುಂ ಗೂಡಾರದ ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೆ?' (ಅ.ಪು. 1-76)

ಲಲಿತ ಪದರಚನೆ, ಕವಿತಾಗುಣಗಳಿಲ್ಲದವನು ದುಷ್ಕವಿ. ನವರಸಗಳನ್ನು ತೆರೆದು ಹೇಳಬಲ್ಲವನು ಸತ್ಕವಿ. ವಿವಿಧ ಅಲಂಕಾರಗಳನ್ನು ಹೇಗೆ ಬಳಸಬೇಕೆಂದು ತಿಳಿದವನು ಸತ್ಕವಿ. ಸೃಷ್ಟಿಯು ಸೌಖ್ಯ ಹೊಂದುವಂತೆ ಮಾಡಬಲ್ಲವನು ಸತ್ಕವಿ. ಕವಿತಾರಹಸ್ಯವನ್ನು ಅರಿದವನು ಸತ್ಕವಿ. ಇವೇನೂ ಅಲ್ಲದವನು ದುಷ್ಕವಿ. ಕುಕವಿ ಲಕ್ಷಣ ನಿರ್ವಚನವು ಸತ್ಕವಿಯಾದವನು ಹೇಗಿರಬೇಕೆಂಬ ಸತ್ಕವಿ ನಿರ್ವಚನದ ಪರೋಕ್ಷ ಪ್ರತಿಪಾದನೆಯೇ ಆಗಿದೆ. ಒಳ್ಳೆಯ ಕಾವ್ಯ ಮತ್ತು ಒಳ್ಳೆಯ ಕವಿತ್ವದ ಕಾವ್ಯ ತತ್ವಗಳೇ ಕರ್ತೃ ಕೇಂದ್ರಿತ ನೆಲೆಯಿಂದ ಇಲ್ಲಿ ಪ್ರತಿಪಾದಿತವಾಗಿವೆ. ಸಹಜವಾಗಿಯೇ ಸತ್ಕವಿ-ಕುಕವಿಗಳಲ್ಲಿ ಸತ್ಕವಿಯು ದೊಡ್ಡವನೆಂದೂ ಕುಕವಿಯು ಕೂಪಮಂಡೂಕ, ಇಲಿ, ಬಕ, ಮುದಿ ಎತ್ತು ಇತ್ಯಾದಿ ನಿಕೃಷ್ಟ ಪ್ರಾಣಿ ಎಂದೂ ಶ್ರೇಣೀಕರಣ ಮಾಡಿ ನೋಡುವ ಪ್ರವೃತ್ತಿ ಈ ಮೀಮಾಂಸೆಯಲ್ಲಿದೆ. ಸತ್ಕವಿ-ಕುಕವಿಗಳನ್ನು ಕವಿ-ವಿಮರ್ಶಕ ಎಂದು ತೆಗೆದುಕೊಂಡರೆ ಇಬ್ಬರೂ ಕೂಡ ಸಮಾನರಲ್ಲ ಎಂಬ ತತ್ವವು ನಮ್ಮವರಲ್ಲಿ ಅಡಗಿರುವುದು ಎದ್ದು ಕಾಣುತ್ತದೆ. 'ತಾವು

ವಿದ್ವಾಂಸರ ಜೊತೆಯಲ್ಲಿ ರಾಜನ ಆಸ್ಥಾನದಲ್ಲಿ ಇರುವೆವೆಂದು ಆಕಾಶದುದ್ದಕ್ಕೂ ಈ ಕುಕವಿ ಸಮೂಹವು ಬೀಗುವುದೇತಕ್ಕೆ? ಉದ್ಯಾನವನದಲ್ಲಿ ಕಾಗೆಯೂ ಕೋಗಿಲೆಯೂ ಒಟ್ಟಿಗೆ ಇರುವುದಿಲ್ಲವೇ?' (ಲೀಲಾ.ಪ್ರ 1–26) ಹೀಗೆ ಕುಕವಿಯು (ವಿಮರ್ಶಕನು) ಕವಿಯ ಜೊತೆಯಲ್ಲೇ ಇದ್ದರೂ ಕವಿಯ ಸಮಾನಕ್ಕೆ ಎಂದಿಗೂ ಬರಲಾರ. ಕಾಗೆ ಕಾಗೆಯೇ ಕೋಗಿಲೆ ಕೋಗಿಲೆಯೇ. ಸತ್ಕವಿ ಮತ್ತು ಕುಕವಿ ಎಂಬವನ್ನು ಎರಡು ವ್ಯಕ್ತಿತ್ವಗಳು ಎಂದು ನೋಡುವ ಪ್ರವೃತ್ತಿಯೂ ನಮ್ಮವರಲ್ಲಿದೆ. ಆ ವ್ಯಕ್ತಿತ್ವಗಳ ಜಿಜ್ಞಾಸೆಯಲ್ಲಿ ಸತ್ಕವಿಯ ಗುಣಗಳು ತಮಗೂ ಒದಗಲಿ ಎಂದು ಆಶಿಸುವ ಭಾವ ಇದ್ದರೆ, ಕುಕವಿಗಳ ಪ್ರವೃತ್ತಿಯು ಇಲ್ಲವಾಗಲಿ ಎಂಬ ಆಶಯವಿದೆ. ಕೆಲವೊಮ್ಮೆ ಕುಕವಿ ವಂಶವೇ ನಿರ್ವಂಶವಾಗಲಿ ಎಂಬಂತೆಯೂ ನಮ್ಮವರು ಮಾತಾಡಿದ್ದಾರೆ.

### 1.7. ಸುಜನ–ದುರ್ಜನ ಎಂಬ ಸಹೃದಯ ಮತ್ತು ದುಷ್ಟಹೃದಯರು

ಓದುಗ–ಕೇಳುಗರನ್ನು ಕೂಡ ಎರಡು ವರ್ಗಗಳನ್ನಾಗಿ ವರ್ಗೀಕರಿಸುವ ಪ್ರವೃತ್ತಿ ನಮ್ಮ ಕವಿಗಳಲ್ಲಿದೆ. ಸುಜನ–ದುರ್ಜನ ಎಂಬುದೇ ಈ ಎರಡು ವರ್ಗಗಳು, ಓದುಗ ಕೇಳುಗರ ಬಗೆಗೆ ಹೇಳುವಾಗ ಕೆಟ್ಟ ಓದುಗರನ್ನು ದುರ್ಜನರು, ಖಳರು, ಕತ್ತೆಗಳು, ನಾಯಿಗಳು, ಕಪ್ಪೆಗಳು, ಘಟಸರ್ಪ ಎಂದೆಲ್ಲ ಬೇರೆ ಬೇರೆ ಮಾತುಗಳಿಂದ ಜರೆದಿದ್ದಾರೆ. ಕಾವ್ಯದ ಕುರಿತ ಪ್ರತಿಕ್ರಿಯೆ(ವಿಮರ್ಶೆ)ಯನ್ನೂ ಇವರು ಕೆಟ್ಟ ಓದು–ಒಳ್ಳೆಯ ಓದು, ಹಳಿಯುವುದು–ಹೊಗಳುವುದು. ಹೀಗೆ ಎರಡು ಅವಳಿ ವೈರುಧ್ಯಗಳ ನೆಲೆಯಲ್ಲೇ ವರ್ಗೀಕರಿಸಿ ನೋಡುತ್ತಾರೆ. ಕೃತಿಯನ್ನು ಕೆಟ್ಟದಾಗಿ ಓದುವವರ ಬಗ್ಗೆ, ಕೃತಿಯ ದೋಷಗಳನ್ನು ಗುರ್ತಿಸಿ ಹಳಿಯುವವರ ಬಗ್ಗೆ, ಕುಕವಿಗಳ ಬಗ್ಗೆ ನಮ್ಮ ಕವಿಗಳಿಗೆ ಎಳ್ಳಷ್ಟೂ ಸಹನೆ ಇಲ್ಲ. ದುರ್ಜನರ ಕಾವ್ಯನಿಂದೆಯ ಬಗ್ಗೆ ನಮ್ಮ ಕವಿಗಳು ತುಂಬಾ ಸಿಟ್ಟಿನಿಂದ ಪ್ರತಿಕ್ರಿಯಿಸಿದ್ದಾರೆ ಕೂಡ. ಇವರಿಗೆ ತೆಗಳುವವರು–ಹಳಿಯುವವರೆಲ್ಲ ದುರ್ಜನರು, ಕೊಂಡಾಡುವವರು–ಹೊಗಳುವವರೆಲ್ಲ ಸುಜನರು. ಕಾವ್ಯದ ಕುರಿತಾದ ತೆಗಳಿಕೆ–ಹೊಗಳಿಕೆ (ಜೈ ಮತ್ತು ಬೈ) ಈ ಎರಡನ್ನೂ ಸಮಚಿತ್ತದಿಂದ ತೆಗೆದುಕೊಂಡಿರುವ ಕವಿಗಳು ನಮ್ಮಲ್ಲಿ ಕಡಿಮೆ. ಇದರ ಕುರಿತ ಪ್ರತಿಕ್ರಿಯೆಗಳನ್ನು ನೋಡಿದರೆ ನಮ್ಮ ಪ್ರಾಚೀನ ಸಂದರ್ಭದಲ್ಲು ಬರಿ ಜೈ ಮತ್ತು ಬೈ ವಿಮರ್ಶೆಗಳು ಮಾತ್ರ ತುಂಬಿದ್ದುವಾ ಎಂದು ಅನುಮಾನ ಬರುತ್ತದೆ. ಆದರೆ ಹಾಗೇನೂ ಭಾವಿಸಬೇಕಿಲ್ಲ.

'ಹೋಗಯ್ಯಾ ಹುಚ್ಚನೇ, ರೋಗಿ ಹಳಿದಷ್ಟಕ್ಕೆ ಹಾಲು ಹುಳಿಯಾಗುತ್ತದೆಯೇ? ಗೂಬೆಯು ಹಗಲನ್ನೆ ಕಾಣದು ಎಂದರೆ ರವಿ ಮುಳುಗಿ ಹೋಗುತ್ತಾನೆಯೇ? ಕುರುಡನು ಏನು ಮಾಡಿದರೂ ನೋಡಲಾರ ಎಂದರೆ ಕನ್ನಡಿಗೇನು ಕೇಡೆ? ದುರ್ಜನರು ಮೆಚ್ಚದಿದ್ದರೆ ಈ ನಾಗಭೂಷಣನ ಕಾವ್ಯವೇನು ಕೆಟ್ಟು ಹೋಗುವುದೇ?' (ಹ.ಕಾ. 1–27) 'ಎಷ್ಟೇ ಚೆನ್ನಾಗಿ ಕವಿ ಕಾವ್ಯವನ್ನು ಬರೆದರೂ ಕವಿ ಏನು ತಾನೆ ಮಾಡಬಲ್ಲ? ಅದಕ್ಕೊಂದು ಒಳ್ಳೆಯ ಹೆಸರನ್ನಿಟ್ಟು ಮೆಚ್ಚಬಲ್ಲ. ಆದರೆ ಜಗತ್ತಿನಲ್ಲಿ ಕೃತಿಗೆ ಓದುಗ ಮಾತ್ರ ಸಿಗಲೇಬೇಕು. ಅಲ್ಲದ್ದು ಸಲ್ಲದ್ದನ್ನು ಓದುಗನ ಮುಖದಿಂದ ಪಡೆಯಲಾಗದು. ಮಾಲೆಗಾರನು ಹೊಸಬಾಸಿಗವನ್ನು ಕಟ್ಟಿದರೆ ತಾನೆ ಏನು? ಮುಡಿಯುವ ಭೋಗಿಗಳು ಇಲ್ಲದಿದ್ದರೆ ಅದು ಬಾಡಿ ಹೋಗುವುದಿಲ್ಲವೇ? (ಅನಂ.ಪು. 1–45) ಇಲ್ಲಿ ರಾಘವಾಂಕ ಮತ್ತು ಜನ್ನ ಈ ಇಬ್ಬರ ಮಾತುಗಳನ್ನು ನೋಡಿದರೆ; ಈ ಇಬ್ಬರೂ ಪರಸ್ಪರ ವೈರುಧ್ಯದ ಮಾತುಗಳನ್ನು ಆಡುತ್ತಿದ್ದಾರೆ ಅನ್ನಿಸುವುದಿಲ್ಲ. ಇಬ್ಬರೂ ಒಳ್ಳೆಯ ಓದುಗರು ಕಾವ್ಯಕ್ಕೆ ಅಗತ್ಯವಾಗಿ ಸಿಗಬೇಕು ಎಂಬ ತತ್ವವನ್ನೇ ಮಂಡಿಸುತ್ತಿದ್ದಾರೆ. ಕೆಟ್ಟ ಓದುಗರ (ಕುಜನ–ದುರ್ಜನರ) ಬಗ್ಗೆ ನಮ್ಮವರಲ್ಲಿ ಅಪರಿಮಿತವಾದ ಸಿಟ್ಟು ಇದ್ದರೂ ಕಾವ್ಯಕ್ಕೆ ಮೆಚ್ಚುಗೆ ತೋರುವ ಸಹೃದಯರು ಬೇಕೇ ಬೇಕು ಎಂದು ಎಲ್ಲರೂ ಹೇಳುತ್ತಾರೆ.

ಕಾವ್ಯವನ್ನು 'ಅಕ್ಷರ ದರಿದ್ರರೂ ಕಪಟ ಪಂಡಿತರೂ ಓದಿದರೆ ಏನು ಪ್ರಯೋಜನ? ಕಾವ್ಯಕಳಾ ಶಿಕ್ಷಕರೂ, ಪರೀಕ್ಷಕರೂ ಪ್ರೀತಿಯಿಂದ ಕೃತಿಯನ್ನು ಓದಿದರೆ ಕವಿಗಳು ಕೃತಾರ್ಥರಲ್ಲವೇ?' (ಲೀಲಾ.ಪ್ರ. 1–62) 'ದುಷ್ಟನು ಹೊಸ ರೀತಿಯ ಕಾವ್ಯವನ್ನು ಹಳಿಯಬಲ್ಲನೇ ಹೊರತು ಸೃಷ್ಟಿಸಲೇನು ಬಲ್ಲನೇ? ಮೋಡವು ಸೂರ್ಯನ ಕಿರಣಗಳನ್ನು ತಡೆಯಬಲ್ಲುದೇ ಹೊರತು ಸ್ವತಃ ಬೆಳಕನ್ನು ಕೊಡಬಲ್ಲುದೇ?' (ರಾ.ವಿ. 1–48) ವಿಮರ್ಶೆ ಎಂಬುದು ಕೆಲವರಿಗೆ ಬಹಳ ಸುಲಭವಾದ ಕೆಲಸ. ಕೆಲವು ವಿಮರ್ಶಕರು 'ಬೇನೆಯನರಿಯದ' ಅರಸಿಕರು. ಅವರಿಗೆ ಕೆಡವಲು ಬರುತ್ತದೆಯೇ ವಿನಃ ಕಟ್ಟಲು ಬರುವುದಿಲ್ಲ. ಯಾವುದೇ ಮಹಾ ಕಾವ್ಯವನ್ನು ಹಳಿಯುವದು ಸುಲಭ. ಆದರೆ ಅದೇ ದೋಷರಹಿತ ಮಹಾಕಾವ್ಯವೊಂದನ್ನು ತಾನೇ ಬರೆಯುವುದು ಸವಾಲಿನ ಕೆಲಸ. ಕಾವ್ಯಸೃಷ್ಟಿ ಮತ್ತು ಕಾವ್ಯವಿಮರ್ಶೆ ಎರಡೂ ಭಿನ್ನ ಮತ್ತು ಒಂದೊಂದೂ ಬೇರೆ ಬೇರೆ ಮಟ್ಟದ ಪ್ರತಿಭೆಗಳು ಎಂಬುದು ಷಡಕ್ಷರಿಯ ಅಭಿಪ್ರಾಯ. ಸ್ವತಃ ಬೆಳಕನ್ನು ಕೊಡುವ ಸೂರ್ಯ ಮತ್ತು

ಬೆಳಕನ್ನು ತಡೆಯುವ ಮೋಡದ ಕಲ್ಪನೆಯ ಮೂಲಕ ಷಡಕ್ಷರಿ, ಕವಿ ಮತ್ತು ವಿಮರ್ಶಕರ ಬಗ್ಗೆ ಇಲ್ಲಿ ತರತಮವಾಗಿ ಮಾತನಾಡಿದ್ದಾನೆ.

ಹಳಿಯುವುದಕ್ಕೆ ಸದಾ ಸಿದ್ಧವಾಗಿರುವ ಜನರು ಹೊಗಳುವುದಕ್ಕೆ ಮಾತ್ರ ಹಿಂದೆ ಮುಂದೆ ನೋಡುತ್ತಾರೆ. 'ಸತ್ಕವಿ ನಿರ್ಮಿತ ಕಾವ್ಯದ ಸ್ತುತಿಯ ವಿಷಯದಲ್ಲಿ ಖಳನ ನಾಲಗೆಯು ಅಲ್ಲಾಡುವುದೇ ಇಲ್ಲ. ನಾಲಗೆಯೇ ಕತ್ತರಿಸಿ ಹೋಗಿದೆಯೋ, ವಿಷದ ಮುಳ್ಳು ನಾಟಿಕೊಂಡಿದೆಯೋ, ಕಬ್ಬಿಣದ ಸಲಾಕೆ ಚುಚ್ಚಿಕೊಂಡಿದೆಯೋ ಎಂಬಂತೆ ಅದು ಅಲ್ಲಾಡುವುದೇ ಇಲ್ಲ.' (ರಾ.ವಿ. 1–41) ಒಟ್ಟಿನಲ್ಲಿ ನಮ್ಮ ಕವಿಗಳಿಗೆ ಸಜ್ಜನರು ಅಂದರೆ ಹೊಗಳುವವರು ಕಂಡರೆ ಮಾತ್ರ ಪ್ರೀತಿ. ತೆಗಳುವವರು ಕಂಡರೆ ಅಲರ್ಜಿ. ತೆಗಳುವವರು ತೆಗಳಿಕೆಗೆ ಮಾತ್ರ ಅರ್ಹರು. ಹೊಗಳುವವರು ಹೊಗಳಿಕೆಗೆ ಮಾತ್ರ ಅರ್ಹರು ಎಂಬ ಸಿದ್ಧಾಂತವನ್ನು ಪಾಲಿಸುತ್ತಾರೇನೋ ಎಂಬಂತೆ ನಮ್ಮ ಬಹುಪಾಲು ಕವಿಗಳು ವಿಮರ್ಶಕರ ವಿಚಾರದಲ್ಲಿ ಮಾತಾಡಿದ್ದಾರೆ.

'ಪಂಡಿತರು ಎನ್ನಿಸಿಕೊಂಡ ಮಾತ್ಸರ್ಯರಹಿತರನ್ನು ಮೆಚ್ಚಿಸುವುದು ಗಹನವೇನೂ ಅಲ್ಲ. ಆದರೆ ಜಡರಿಗೆ ಚೆನ್ನಾಗಿ ತಿಳಿಯುವಂತೆ ಕಾವ್ಯ ಹೇಳುವುದು ಬಹಳ ಕಷ್ಟ. ಅದು ಗೂಬೆಗೆ ಇರುಳಲ್ಲಿ ಸೂರ್ಯನನ್ನು ತೋರಿಸುವ ಪ್ರಯತ್ನದಂತೆ ಆಗುತ್ತದೆ' (ಧರ್ಮಾ. 1–43) 'ಮೂರ್ಖನಾದವನನ್ನು ಕರೆದು ಉನ್ನತವಾದ ಆಸನದಲ್ಲಿ ಕೂರಿಸಿ ಪೂಜಾಪೂರ್ವಕವಾಗಿ ಇಡೀ ಕಾವ್ಯಸಾಗರವನ್ನೇ ಹೊಯ್ದರೂ ಅವನು ಸ್ವಲ್ಪವೂ ನೆನೆಯುವುದಿಲ್ಲ. ದೊಡ್ಡ ಬಂಡೆಕಲ್ಲನ್ನು ತಂದು ದೇಗುಲದ ಮಧ್ಯಪೀಠದಲ್ಲಿ ಇಟ್ಟು ತೀರ್ಥಜಲ ಸುರಿದು, ನಮಸ್ಕರಿಸಿ ಎಷ್ಟೇ ಪೂಜಿಸಿದರೂ ಕಲ್ಲು ಮೆತ್ತಗಾಗಬಲ್ಲುದೇ? (ಲೀಲಾ.ಪ್ರ. 1–51) 'ರಜೋಧಿಕವಾದ ಈ ವಿಧಿಯು ಹೆಡೆಮಣಿಯನ್ನೂ ಫಣಿಯನ್ನೂ; ಅಮೃತವನ್ನೂ, ವಿಷವನ್ನೂ; ಕಡಲನ್ನೂ–ಸುಳಿಯನ್ನೂ–ಮಳೆಯನ್ನೂ–ಸಿಡಿಲನ್ನೂ ಪಡೆಯುವಂತೆ ಸುಜನರನ್ನೂ ದುರ್ಜನರನ್ನೂ ಒಟ್ಟಿಗೇ ಪಡೆದಿದ್ದಾನೆ. ದುರ್ಜನರಾದ ಓದುಗರಿಂದ ಕವಿಗಳಿಗೆ ಬಹಳವೇ ಕೋಟಲೆಯಾಗುತ್ತಿದೆ. ಈ ಕರ್ಣಕೋಟರರಾದ ದುರ್ಜನರನ್ನು ಬ್ರಹ್ಮನಾದರೂ ಯಾಕೆ ಸೃಷ್ಟಿಸಿದನೋ?' (ರಾ.ಚ.ಪು. 1–31 ಮತ್ತು 32) ದುರ್ಜನ ಸುಜನರ ಬಗ್ಗೆ ಮಾತಾಡುವಾಗ ನಮ್ಮ ಕವಿಗಳಿಗೆ ಎಷ್ಟರ ಮಟ್ಟಿಗಿನ ಬೇಸರವೆಂದರೆ ಅವರ ಹುಟ್ಟನ್ನೆ ವಿಧಿ ಬರಹ ಎಂದುಬಿಡುತ್ತಾರೆ. ದುರ್ಜನರನ್ನು ನಿಯಂತ್ರಿಸುವ ಪರಿಯನ್ನು ಕಾಣದ ಕಂಗಾಲು ಸ್ಥಿತಿ ಇದು. ಗೂಬೆಗೆ ಇರುಳಲ್ಲಿ ಸೂರ್ಯನನ್ನು ತೋರಿಸುವ ಮತ್ತು ಬಂಡೆಕಲ್ಲಿಗೆ ಅಭಿಷೇಕ ಮಾಡುವ ಕ್ರಿಯಾರೂಪಕಗಳಲ್ಲಿ ನಮ್ಮ ಕವಿಗಳ ಹತಾಶೆ ಚೆನ್ನಾಗಿ ವ್ಯಕ್ತವಾಗುತ್ತಿದೆ. ಇಂತಹ ನಮ್ಮವರ ಸಹೃದಯ ಮೀಮಾಂಸೆಯಲ್ಲಿ ದೋಷಗ್ರಹಣ ಧಾಟಿಯ ಓದು ನಿಷೇಧಿತವಾದುದು. ಗುಣಗ್ರಹಣ ಧಾಟಿಯ ಓದು ಪುರಸ್ಕಾರಾರ್ಹವಾದುದು. ಅಲ್ಲದೆ ಸಹೃದಯನಿಗೆ ಕೆಲವು ಕನಿಷ್ಟ ಅರ್ಹತೆಗಳಾದರೂ ಇರಬೇಕು. ಗೂಬೆತನ, ಬಂಡೆಕಲ್ಲುತನಗಳು ಸಹೃದಯತೆಯ ಲಕ್ಷಣಗಳಲ್ಲ.

ದುರ್ಜನ, ಕುಕವಿ, ಕಟುವಿಮರ್ಶಕ ಈ ಮೂವರನ್ನೂ ಒಟ್ಟಿಗೆ ಸಮೀಕರಿಸಿ ನೋಡುವ ದೃಷ್ಟಿಕೋನವು ನಮ್ಮ ಕವಿಗಳಲ್ಲಿ ಇದೆ. ಇವರೆಲ್ಲರನ್ನೂ ಸತ್ಕಾವ್ಯದ ವಿರೋಧಿಗಳು ಮತ್ತು ಕವಿಕಂಟಕರು ಎಂಬ ರೀತಿಯಲ್ಲೇ ನಮ್ಮವರು ಕಂಡಿದ್ದಾರೆ. ಕುಕವಿ, ದುರ್ಜನ ಎಂಬ ಪರಿಭಾಷೆಯು ಕೇವಲ ವ್ಯಕ್ತಿಗಳನ್ನು ಕುರಿತ ಪರಿಭಾಷೆಗಳು ಮಾತ್ರ ಅಲ್ಲ. ಇವು ವ್ಯಕ್ತಿತ್ವ ಮತ್ತು ವರ್ತನೆಗಳನ್ನು ಕುರಿತ ಪರಿಬಾಷೆಗಳು ಕೂಡ. ದುಷ್ಟತೆ ಮತ್ತು ಕುಕವಿತನದ ವ್ಯಕ್ತಿತ್ವ ಅಥವಾ ವರ್ತನೆ ಯಾವ ವ್ಯಕ್ತಿಯಲ್ಲಾದರೂ ಇರಬಹುದು. ಇದನ್ನು ಬದಲಿಸುವುದು ಬಹು ಕಷ್ಟ ಎಂಬುದು ನಮ್ಮವರ ಅನುಭವದ ನುಡಿ. ನಮ್ಮ ಕವಿಗಳು ಕುಜನರನ್ನು ಹೇಗೆಲ್ಲ ಹೋಲಿಸಿದ್ದಾರೆ ನೋಡಿ;

'ಹಳಿದಾಕ್ಷಣಕ್ಕೇ ಯಾರಾದರೂ ಬಾಳದೆ ಸತ್ತು ಹೋಗುವುದಿಲ್ಲವಲ್ಲ. ಒಳ್ಳೆಯ ಕೃತಿಯನ್ನು ಕೇಳಿ ದುರ್ಜನರು ಹಳಿದರೆ ವೃಥಾ ಮಾತುಗಳು ದಂಡವಲ್ಲದೆ ಇನ್ನೇನು? ಕಾವ್ಯನಿಬಂಧನಕ್ಕೆ ಹಳಿಯುವುದೇ ಹೊಗಳಿಕೆಯಲ್ಲವೇ? ರಸವತ್ತಾದ ಕೃತಿಯನ್ನು ಕವಿಗಳು ಹೇಳುತ್ತಲೇ ಇರಲಿ. ದುರ್ಜನರು ಹಳಿಯುತ್ತಲೇ ಇರಲಿ. ಬಾಳುವ ಮನೆಗೊಂದು ಬಗುಳುವ ನಾಯಿ ಇರಲೇಬೇಕಲ್ಲವೇ?' (ಅನಂ.ಪು. 1–40) 'ದುರ್ಜನರ

ಹೆಸರು ಹೇಳಿದರೆ ಸಾಕು ನನಗೆ ಮೈ ಜುಮ್ಮೆನ್ನುತ್ತದೆ. ಕನಸಲ್ಲಾಗಲೀ ಎಚ್ಚರದಲ್ಲಾಗಲೀ ಎಲ್ಲಾದರೂ ಸರಿ ಕತ್ತೆಯ ದರ್ಶನವು ಅಶುಭವೇ ಅಲ್ಲವೆ? ಈ ದುರ್ಜನರ ಹೆಸರು ಕೇಳಿದರೆ ನಿನಗೆ ನಗು ಬರುವುದಿಲ್ಲವೆ? ಹರನು ಕೊರಳಲ್ಲಿ ವಿಷವನ್ನು ಧರಿಸಿದ್ದರೆ ಈ ಕೃತಿ ಪರೀಕ್ಷಕ ಪಿಶುಣರು ತಮ್ಮ ನಾಲಗೆಯ ತುದಿಯಲ್ಲೆ ವಿಷವನ್ನು ಇಟ್ಟುಕೊಂಡಿರುತ್ತಾರೆ.. ..' (ಲೀಲಾ. ಪ್ರ. 1–33) 'ಘಟದಲ್ಲಿರುವ ಘಟಸರ್ಪವು ತನ್ನನ್ನು ಹಿಡಿಯಲು ಕೈ ಹಾಕಿದಾಗ ದೋಷಿಗಳನ್ನು ಮಾತ್ರವೇ ಕಚ್ಚುವುದು. ಆದರೆ ಗಡಿಗೆಯಂಥ ಮುಖದಲ್ಲಿರುವ ಖಳರ ನಾಲಿಗೆ ಎಂಬ ಸರ್ಪವು ನಿರ್ದೋಷಿಗಳನ್ನು ಕೂಡ ಕಚ್ಚುವುದು.' (ಜ. ವಿ. 1–12) ಈ ಮೇಲಿನ ಪದ್ಯಗಳಲ್ಲಿ ಪಂಪ, ನಯಸೇನ, ನೇಮಿಚಂದ್ರ, ನಾಗಚಂದ್ರ, ರುದ್ರಭಟ್ಟ ಮತ್ತು ಜನ್ನ ಇವರುಗಳು ದುರ್ಜನರನ್ನು ಗೂಬೆ, ಮೂರ್ಖ, ವಿಷಸರ್ಪ, ಕತ್ತೆ, ಖಳ, ನಾಯಿಗಳಿಗೆಲ್ಲ ಹೋಲಿಸಿದ್ದಾರೆ. ಕಾವ್ಯವನ್ನು ತೆಗಳುವವರ ಬಗ್ಗೆ, ಕಟುವಿಮರ್ಶೆ ಮಾಡುವವರ ಬಗ್ಗೆ ನಮ್ಮ ಕವಿಗಳಿಗೆ ಎಂತಹ ಅಸಹನೆ, ಸಿಟ್ಟು ಇತ್ತು ಎಂಬುದು ಈ ಹೋಲಿಕೆಗಳಿಂದ ತಿಳಿಯುತ್ತದೆ. ದುರ್ಜನರ ಅವಿವೇಕ ಎಂಥದ್ದೆಂದರೆ ಒಂದು ಕ್ರಿಮಿಯಾದ ಸರ್ಪಕ್ಕೆ ಕೂಡ ದೋಷಿ ಯಾರು ನಿರ್ದೋಷಿ ಯಾರು ಎಂಬ ಬಗ್ಗೆ ವಿವೇಚನೆ ಇರುತ್ತದೆ. ಆದರೆ ಇವರಿಗೆ ಆ ವಿವೇಕವು ಇರುವುದಿಲ್ಲ. ಇವರು ಸರ್ಪದಂಥ ಕ್ರಿಮಿಗಿಂತ ಕಡೆ. ಬಾಳುವ ಮನೆಯ ಬೊಗಳುವ ನಾಯಿಗಳು.

ಇವು ಕೆಟ್ಟ ಓದಿನ ಬಗೆಗಿನ ಅಥವಾ ಕಾವ್ಯದ ಅಪ ಓದಿನ ಕುರಿತಾದ ಕಟು ವಿಮರ್ಶೆಯ ಮಾತುಗಳು ಕೂಡ ಆಗಿವೆ. ದುರ್ಜನರನ್ನು ದೂಷಿಸುವುದು ಎಂದರೆ ಅಪ ಓದುಗಳನ್ನು ಪ್ರತಿರೋಧಿಸುವುದು ಎಂದೇ ಅರ್ಥ. ಪರೋಕ್ಷವಾಗಿ ಈ ರೀತಿಯ ಪ್ರವೃತ್ತಿಯು ನಮ್ಮ ಕವಿಗಳಲ್ಲಿ ಚಾಲ್ತಿಯಲ್ಲಿದ್ದ ಸ್ವಕಾವ್ಯ ಸಮರ್ಥನೆಯ ದಾರಿಗಳನ್ನೇ ಸೂಚಿಸುತ್ತಿವೆ. ಹಾಗೇ ಕಾವ್ಯದ ಬಗೆಗೆ ಬಹು ಕಟುವಾದ ವಿಮರ್ಶಾ ಪರೀಕ್ಷೆಗಳು ಇರುತ್ತಿದ್ದ ಬಗೆಗೂ ಈ ಮಾತುಗಳು ಸೂಚನೆಗಳನ್ನು ನೀಡುತ್ತಿವೆ.

### 1.7.1. ಅಲ್ಲ ಎಂದರೆ ಎಕ್ಕಡದ ಏಟು!

ದುರ್ಜನರ ಅಪ ಓದುಗಳ ಬಗ್ಗೆ ನಯಸೇನ, ನೇಮಿಚಂದ್ರ, ನಾಗಚಂದ್ರರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ರಾಘವಾಂಕ ಪ್ರತಿಕ್ರಿಯಿಸಿದ್ದಾನೆ. ಸುಳಿವ ಶಾಸನ ಎಂದು ತನ್ನ ಕಾವ್ಯವನ್ನು ಬಣ್ಣಿಸಿಕೊಂಡಿರುವ ಇವನ ಮಾತುಗಳು ರಾಜಾಜ್ಞೆಯಂತೆ ಕಾಣುತ್ತವೆ.

> ಈ ಧರೆಗೆ ಸೊನ್ನಲಿಗೆ ಪುರವೇ ಕೈಲಾಸ. ಈ ಜಗದ ಗುರು ಸಿದ್ಧರಾಮನು ಇಲ್ಲಿಗೆ ಈಶ್ವರನು. ಅಲ್ಲಿ ಮೆರೆವ ಗುಡ್ಡರೂ, ಗಣೇಶ್ವರರೂ, ಅಖಿಲ ಜನರೂ ದೇವತೆಗಳು. ಅವರ ಸತಿಯರು ರುದ್ರಕನ್ಯೆಯರು. ಅಲ್ಲಿರುವ ಶಿವಾಲಯಗಳೆಲ್ಲ ಹದಿನಾಲ್ಕು ತೀರ್ಥಕ್ಷೇತ್ರಗಳು. ಹೀಗೆಂದು ನಾನು ಕೈಯೆತ್ತಿ ಹೇಳುತ್ತಿದ್ದೇನೆ. ಇದನ್ನು ಅಲ್ಲ ಎನ್ನುವವನು ಅವನು ಯಾವನು? ಅವನ ತಲೆಗೆ ನನ್ನ ಎಡಗಾಲಿನ ಎಕ್ಕಡದಿಂದ ಇಳುವುತ್ತೇನೆ (ಸಿ.ಚಾ. 1–8)

ನಾವು ದಿಗ್ಭ್ರಮೆಗೊಳ್ಳುವಂತೆ ರಾಘವಾಂಕ ನಾನು ಹೇಳಿದುದನ್ನು ಅಲ್ಲ ಎಂದರೆ ಎಕ್ಕಡದ ಏಟು ಬೀಳುತ್ತವೆ ಎನ್ನುತ್ತಾನೆ! ಅದೂ ಎಡಗಾಲಿನ ಎಕ್ಕಡದ ಏಟು! ಸಾಂಸ್ಥಿಕ ಧರ್ಮದ ಚೌಕಟ್ಟನ್ನು ಕಟ್ಟಿಕೊಡುವ ಅಧಿಕಾರ ಕೈಗೆ ಸಿಕ್ಕ ಸರ್ವಾಧಿಕಾರಿಯ ಮಾತಿನಂತೆ ಇವು ಇವೆ. ಧಾರ್ಮಿಕ ಆಚರಣೆಯನ್ನು ಹೇಳುವ ಪಠ್ಯವು ಪಾರಾಯಣಕ್ಕೆ ಮಾತ್ರವೇ ಸ್ವೀಕಾರವಾಗಬೇಕು. ವಿಮರ್ಶೆಗೆ ಅಲ್ಲ. ಅಂತಹ ಪಠ್ಯಗಳು ಆದೇಶಗಳಷ್ಟೆ. ಪ್ರಶ್ನೆ ಮಾಡುವಂತಿಲ್ಲ. ಅನ್ಯಧರ್ಮೀಯರಂತು ಕೆಮ್ಮುವಂತೆಯೇ ಇಲ್ಲ. ಈ ಪದ್ಯವು ಮುಖ್ಯವಾಗಿ ಅನ್ಯಧರ್ಮೀಯ, ನಾಸ್ತಿಕ ಭವಿಗಳಿಗೆ ನೀಡುತ್ತಿರುವ ಎಚ್ಚರಿಕೆಯಂತೆ ರಚಿತವಾಗಿದೆ. ಕಾವ್ಯಗಳಲ್ಲಿ ತಪ್ಪು ಇದ್ದರೆ ತಿದ್ದಿಕೊಂಡು ಓದಿ; ಅನ್ಯರು ಕೈಯಿಕ್ಕದಂತೆ ನನ್ನ ಕಾವ್ಯವನ್ನು ಭಕ್ತರು ಸಲಹಿ; ನಾನು ನಿಮ್ಮ ಮನೆಯ ಹುಡುಗ ಎಂದೆಲ್ಲ ಭಕ್ತರಿಗೆ ಹೇಳುವ ರಾಘವಾಂಕ ಅನ್ಯರಿಗೆ ಮಾತ್ರ ಹೀಗೆ ಮಾತನಾಡುತ್ತಾನೆ.

### 1.7.2. ಅನುಭವಿಸುವುದು ಮತ್ತು ವಿವರಿಸುವುದು

'ಕಡುಕಂಪನ್ನು ಹಿಡಿಯಲು ಬರುವುದೇ? ಸುಳಿಯುವ ತಂಗಾಳಿಯನ್ನು ಹಿಡಿದಿಡಲು ಬರುವುದೇ? ಬಾಯಾರಿಕೆಗೆ ಬೆಳದಿಂಗಳನ್ನು ಕುಡಿಯಲು ಬರುವುದೇ? ಶಕ್ತಿಯುಂಟೆಂದು ತರುಣಿಯೊಡನ ಸಂಭೋಗ ಸೌಖ್ಯವನ್ನು ನುಡಿದು ವರ್ಣಿಸಲು ಬರುವುದೇ? ಬಾರದು. ಹೀಗೆಯೆ ಕಾವ್ಯದ ಆಸ್ವಾದನೆಯು ಕೂಡ.' (ಅ.ನೇ.ಪು. 1–31) ಇಲ್ಲಿ ನೇಮಿಚಂದ್ರ ಅನುಪಮ ಉಪಮೆಗಳಿಂದ ಓದು ಮತ್ತು ವಿಮರ್ಶೆಯ ನಡುವಿನ

ಸಂಬಂಧವನ್ನು ನಿರೂಪಿಸಿದ್ದಾನೆ. ಕಾವ್ಯವನ್ನು ಅನುಭವಿಸಲು ಸಾಧ್ಯ ಆದರೆ ಅದನ್ನು ವಿವರಿಸಲು ಆಗುವುದಿಲ್ಲ ಎಂಬುದು ಇಲ್ಲಿನ ತತ್ವ. ಕಾವ್ಯದ ಅನುಭವ ಭಾಷೆಯ ಮೂಲಕವೇ ಒದಗುವ ಅನುಭವವಾದರೂ ಅದು ವಿವರಣಾತೀತವಾದುದು. ಕಾವ್ಯದ ಪರಿಣಾಮ ಎಂಬುದು ಭಾಷೆಯನ್ನು ಮೀರಿದ ಒಂದು ಅನುಭವ ಯಾನ. ತರುಣಿಯೊಡನ ಸಂಭೋಗ ಸೌಖ್ಯವನ್ನು ಹೇಗೆ ಮಾತುಗಳಾಗಿ ಪರಿವರ್ತಿಸಲು ಆಗುವುದಿಲ್ಲವೋ ಹಾಗೇ ಕಾವ್ಯದ ಅನುಭವವನ್ನು ಕೂಡ ವಿಮರ್ಶೆಯಾಗಿ ಪರಿವರ್ತಿಸಲು ಸಾಧ್ಯವಿಲ್ಲ. ಅಂತಿಮವಾಗಿ ಇವು ವಿಮರ್ಶೆಯ ನಿರಾಕರಣೆಯ ಮಾತುಗಳಲ್ಲ. ವಿಮರ್ಶೆಯ ಸೋಲನ್ನು ಹೇಳುವ ಮಾತುಗಳಿವು. ಕಾವ್ಯದ ಆಸ್ವಾದನೆ ಮತ್ತು ವಿಮರ್ಶೆಗಳಲ್ಲಿ ನಮ್ಮವರಿಗೆ ಆಸ್ವಾದನೆಯ ಬಗೆಗೇನೆ ಒಲವು ಹೆಚ್ಚು. ಕಾವ್ಯದ ಓದುಗರು ಕಾವ್ಯವನ್ನು ವಿಮರ್ಶಿಸಿ; ಆ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ದಾಖಲಿಸುವಂತಿಲ್ಲ. ಕಾವ್ಯವನ್ನು ಆಸ್ವಾದಿಸಬೇಕು ಅಷ್ಟೆ. ಅನುಭವಿಸಬೇಕು ಅಷ್ಟೆ. ಹಾಗಾಗಿಯೇ ನಮ್ಮಲ್ಲಿ (ಪ್ರಾಚೀನರಲ್ಲಿ) ವಿಮರ್ಶೆಯ ಉದ್ದೇಶದ ವಿಮರ್ಶೆಯ ಬರವಣಿಗೆ ಅಷ್ಟಾಗಿ ಸಂಭವಿಸಲಿಲ್ಲ.

### 1.7.3. ಅರಿವು ಮತ್ತು ಅರ್ಹತೆ

ಕಾವ್ಯದ ಓದು(ಕೇಳುವಿಕೆ) ಹೇಗೆ ಒಂದು ಅನುಭವವೋ ಹಾಗೆಯೆ ಅದೊಂದು ಅರಿವೂ ಕೂಡ. ಬುಧರು ಮಾತ್ರವೇ ಆ ಅರಿವನ್ನು ಅರಿಯಬಲ್ಲರು. ದುರ್ಬುಧರಿಂದ ಅದು ಸಾಧ್ಯವಿಲ್ಲ. 'ವರಕಳಿಕಾ ರಸಪ್ರಸರ ಸೇವೆಯಿನ್ ಉಣ್ಮುವ ಸೌಖ್ಯಮಂ ಪಿಕೋತ್ಕರಂ ಅರಿವಂತೆ ಕಾಕಕುಳಂ ಏನರಿದಪುದೋ? ಸಂದ ಸತ್ಕವೀಶ್ವರ ಕೃತ ನವ್ಯ ಕಾವ್ಯ ಮಧುರೋಕ್ತಿಗಳಂ ಬುಧಸಂಕುಳಂ ನಿರಂತರಂ ಅರಿವಂತೆ ಅದೇನ್ ಅರಿವುದೇ ನೆರೆದಾಲಿಪ ದುರ್ಬುಧ ವ್ರಜಂ?' (ಶಾಂ.ಪು. 1–46) ಕಳಿಕೆಯ ಗಿಡದ(?) ರಸಸೇವನೆಯ ಸೌಖ್ಯವನ್ನು ಗಿಳಿಗಳು ತಿಳಿಯಬಲ್ಲವೇ ಹೊರತು ಕಾಗೆಗಳು ತಿಳಿಯಬಲ್ಲವೇ? ದುಷ್ಟ ಪಂಡಿತರು ಕಾವ್ಯ ಸೌಖ್ಯವನ್ನು ಅರಿಯಲಾರರು. ಕಾವ್ಯಸೌಖ್ಯದ ಅರಿವು ಉಂಟಾಗಬೇಕಾದರೆ ಒಳ್ಳೆಯ ಮತಿ ಇರಬೇಕು. ಅಂದರೆ ಕಾವ್ಯ ಎಲ್ಲರಿಗೂ ಅಲ್ಲ. ಗಿಳಿಗಳು ಮತ್ತು ಕಾಗೆಗಳು ಎಂದು ಒಳ್ಳೆಯ ಓದುಗರು ಮತ್ತು ಕೆಟ್ಟ ಓದುಗರನ್ನು ಇಲ್ಲಿ ಸಂಕೇತಿಸಲಾಗಿದೆ. ಬುಧ ವ್ಯಕ್ತಿತ್ವವು ದುರ್ಜನ ವ್ಯಕ್ತಿತ್ವಕ್ಕಿಂತ ಬೇರೆಯಾದುದು. ಕಾವ್ಯವನ್ನು ಆಸ್ವಾದಿಸಬೇಕಾದರೆ, ಅದರಿಂದ ಅರಿವನ್ನು ಪಡೆಯಬೇಕಾದರೆ ಅದು ಎಲ್ಲರಿಂದ ಸಾಧ್ಯವಿಲ್ಲ. ಬುಧರಿಂದ ಮಾತ್ರ ಸಾಧ್ಯ. ಬುಧ ಕಲ್ಪನೆಯು ಕಾವ್ಯವನ್ನು ಆಸ್ವಾದಿಸುವಂತಹ ವಿಶೇಷ ಶಕ್ತಿಯನ್ನು ಹೊಂದಿರುವ ವ್ಯಕ್ತಿತ್ವವನ್ನು ಸಂಕೇತಿಸುತ್ತದೆ.

'ರಸವನ್ನು ನಾಲಗೆಯೂ, ಕುಸುಮರಸವನ್ನು ದುಂಬಿಯೂ, ಅಮೃತದ ಸವಿಯನ್ನು ಸುರರೂ, ಅಕ್ಷಯಸುಖವನ್ನು ಪರಮಾತ್ಮನೂ ಅರಿಯುವಂತೆ ಕವಿಯಾದವನು ಕವಿತಾರಸವನ್ನು ಅರಿಯಬಲ್ಲ. ಬೇರೆಯವರಿಂದ ಅದನ್ನು ಅರಿಯಲು ಸಾಧ್ಯವಿಲ್ಲ.' (ಮ.ಪು. 1–28) ಅಂದರೆ ಕವಿಯ ಮರ್ಮವನ್ನು ಕವಿಯಾದವನು ಮಾತ್ರ ಅರಿಯಬಲ್ಲ. ಬೇರೆಯವರಿಗೆ ಅದು ಸಾಧ್ಯವಿಲ್ಲ. ಇದನ್ನೆ ಬೇರೆ ಮಾತುಗಳಲ್ಲಿ ಹೇಳುವುದಾದರೆ ಸಹೃದಯನು ಕವಿಸಮಾನ ಹೃದಯ ಉಳ್ಳವನಾದರೆ ಕಾವ್ಯವನ್ನು ಚೆನ್ನಾಗಿ ಅರಿಯಬಲ್ಲ. 'ರತಿಲಾಲಸ ರಮಣಿಯ ಸಮರತಿಯನ್ನು ನಪುಂಸಕರಾದವರು ತಿಳಿಯಲು ಸಾಧ್ಯವೇ? ಸಾಧ್ಯವಿಲ್ಲ.' ದುಂಬಿಯು ಬೇರೆ ಬೇರೆ ಪುಷ್ಪಗಳ ನರುಗಂಪಿನ ವಿಶೇಷತೆಗಳನ್ನು ಅರಿಯುವಂತೆ ಬುಧರಾದವರು ನಾನಾ ರೀತಿಯ ಕಾವ್ಯಗಳ ಹೊಸ ಹೊಸ ಪ್ರಕಾರದ ಭಾವ ಭೇದಗಳನ್ನು ಅರಿಯಬಲ್ಲರು.'(ರಾ.ವಿ. 1–26, 27) 'ರತಿಲಾಲಸ ರಮಣಿಯ ಸಮರತಿಯನ್ನು ನಪುಂಸಕರಾದವರು ತಿಳಿಯಲು ಸಾಧ್ಯವೇ?' ಎಂಬ ಷಡಕ್ಷರಿಯ ಪ್ರಶ್ನೆ ಬಹಳ ಮಾರ್ಮಿಕವಾದುದು. ರತಿಯಲ್ಲಿ ತೊಡಗಿದಾಗ ಇರುವ ಏಕಾಗ್ರತೆಯಂತೆಯೇ ಕಾವ್ಯದಲ್ಲಿ ತೊಡಗಿದಾಲೂ ಏಕಾಗ್ರತೆ ಇರಬೇಕು. ನಪುಂಸಕರು ರಮಣಿಯೊಡನೆ ರತಿಯಲ್ಲಿ ಸಮರತಿಯಾಗಿ ತೊಡಗಲು ಸಾಧ್ಯವಿಲ್ಲ. ಹಾಗೆಯೇ ಅರಸಿಕನಾದವನು, ಜಡನಾದವನು ಕಾವ್ಯವನ್ನು ಕ್ರೀಡಿಸಲಾರ. ಕಾವ್ಯದ ಆಸ್ವಾದಕನಿಗೆ ಆಸ್ವಾದನಾ ಶಕ್ತಿ ಇರಬೇಕು. ಕಾವ್ಯವನ್ನು ತಿಳಿಯುವ, ಅನುಭವಿಸುವ, ಸವಿಯುವ ಅರ್ಹತೆಗಳಿರಬೇಕು. ಮದನನ ಬಾಣ ಕಲ್ಲನ್ನು ಕದಲಿಸಲಾರದು. ಹಾಗೆಯೇ ಕವಿತೆಯ ಭಾವಗಳು ಕಲ್ಲೆದೆಯವನನ್ನು ಕರಗಿಸಲಾರವು. ಕವಿತಾರಸ, ಕವಿತಾಭಾವ, ಕವಿತಾವಿಷಯವನ್ನು ತಿಳಿಯಬೇಕಾದರೆ ಓದುಗನು ಸಂವೇದನಾಶೀಲನಾಗಿರಬೇಕು. ಸಂವೇದನೆಗಳೇ ಇಲ್ಲದವನು ಕಠಿಣ ಹೃದಯಿ. ಅವನಿಗೆ ಕಾವ್ಯ

ತಟ್ಟುವುದಿಲ್ಲ. ಕಿವುಡನು ಹೇಗೆ ಸುಂದರಿಯ ಸಪಿದನಿಯುನ್ನು ಕೇಳಲಾರನೋ ಹಾಗೆ ಕೇಳುವ ಸಂಸ್ಕಾರ, ಕೇಳಿಸಿಕೊಳ್ಳುವ ಕಿವಿ ಇಲ್ಲದ ಜಡನು ಕಾವ್ಯವನ್ನು ಪಡೆದುಕೊಳ್ಳಲಾರ. ಈ ಎಲ್ಲಾ ರೀತಿಯ ಷಡಕ್ಷರಿ, ನಾಗಚಂದ್ರಾದಿಗಳ ಜಿಜ್ಞಾಸೆಗಳು ಕಾವ್ಯದ ಕೇಳುಗ+ಓದುಗ=ಸಹೃದಯರಿಗೆ ಕನಿಷ್ಟ ಮಟ್ಟದ ಸಂವೇದನಶೀಲತೆ, ಭಾವಕತೆ, ಸಮಾನಹೃದಯತೆ, ಮುಕ್ತಚಿತ್ತತೆ ಇತ್ಯಾದಿ ಅರ್ಹತೆಗಳಿರಬೇಕು ಎಂಬ ಅರ್ಹತಾ ತತ್ವವನ್ನು ಮಂಡಿಸುತ್ತವೆ.

### 1.7.4. ಕಾವ್ಯಾನುಭವದ ಚತುರ್ಮುಖಿ ಅರ್ಹತೆಗಳು

ಕಾವ್ಯವನ್ನು ಕೇಳುವಾಗ ಯಾವುದೇ ಕೇಳುಗ ಬರಿದೆ ನಿಷ್ಕ್ರಿಯವಾಗಿದ್ದರೆ ಏನೂ ಪ್ರಯೋಜನವಿಲ್ಲ. ಸಹೃದಯತೆ, ಭಾವಕತೆ, ಸಂವೇದನಾಶೀಲತೆ ಎಲ್ಲ ಇದ್ದು ಕೇಳುಗನಾದವನು ಅನ್ಯ ಮನಸ್ಕ ಅಥವಾ ನಿಷ್ಕ್ರಿಯನಾಗಿದ್ದರೆ ಕಾವ್ಯದ ಕೇಳಿಕೆಯಿಂದ ಏನೇನೂ ಲಭಿಸುವುದಿಲ್ಲ. ಕಾವ್ಯದ ಓದುಗ ಕಾವ್ಯವನ್ನು ಓದಲು ಕೇಳಲು ಶ್ರಮಶೀಲನೂ, ಕ್ರಿಯಾಶೀಲನೂ, ಸೃಜನಶೀಲನೂ ಆಗಿರಬೇಕಾಗುತ್ತದೆ. ತಿಳಿಯುವ, ಭಾವಿಸುವ, ಹೊಸಹೊಸ ಅರ್ಥಸೌಖ್ಯ, ರಸಾನಂದಗಳನ್ನು ಸೃಷ್ಟಿಸಿಕೊಳ್ಳುವ ಶ್ರಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಆ ಕಡೆಗೆ ಕ್ರಿಯಾಶೀಲನೂ, ಸೃಷ್ಟಿಶೀಲನೂ ಆಗಬೇಕಾಗುತ್ತದೆ. ಇದು ಒಳ್ಳೆಯ ಓದುಗನ ಲಕ್ಷಣ.

> ಕೆನೆವಾಲ ಕಡೆದು ನವನೀತಮಂ ತೆಗೆದು ಬಾ/ಯ್ಸಿನಿದಾಗಿ ಸವಿಯದದರೊಳಗೆ ಹುಳಿವಿಡಿದು
> ರಸ/ವನೆ ಕೆಡಿಸಿದೊಡೆ ಕರೆದ ಸುರಭಿಗಪ್ಪುದೆ ಕೊರತೆ? ಕಾವ್ಯಮಂ ಕೇಳ್ದು ಮಥಿಸಿ/ಜನಿಸಿದ
> ಪದಾರ್ಥಮಂ ತಿಳಿದು ನೋಡದೆ ಏನೂ/ತನ ಕಪಿತೆಯೆಂದು ಕುಂದಿಟ್ಟು ಜರೆದೊಡೆ
> ಪೇಳ್ದ/ವನೊಳಾವುದೂಣೆಯಂ ಜಾಣರಿದನರಿದು ಮತ್ಸರವ ಮರೆದಾಲಿಸುವುದು(ಜೈ.ಭಾ. 1-7)

ಕಾವ್ಯವನ್ನು ಆಲಿಸುವವನು ಮಥಿಸಿ ನೋಡಬೇಕು. ಮಥಿಸಿದಾಗ ಜನಿಸಿದ ಪದಾರ್ಥವನ್ನು ತಿಳಿದು ನೋಡಬೇಕು. ಕೆನೆಹಾಲನ್ನು ಕರೆದು, ಕಡೆದು ಬೆಣ್ಣೆಯನ್ನು ತಗೆದುಕೊಳ್ಳುವ ಶ್ರಮಶೀಲತೆ, ಕ್ರಿಯಾಶೀಲತೆ, ಶೃಜನಶೀಲತೆಗಳನ್ನು ಸಹೃದಯನು ತೋರಬೇಕು. ಬೆಣ್ಣೆ ತೆಗೆಯುವಾಗ ರಸ ಕೆಡಿಸಿದರೆ ಅದು ಕರೆದ ಹಸುವಿನ ಕೊರತೆಯೇನೂ ಅಲ್ಲ. ಕುಂದಿಟ್ಟು ಜರೆದರೆ ಕವಿಗೆ ಯಾವ ನ್ಯೂನತೆಯೂ ಇಲ್ಲ. ಅಂದರೆ ಕಾವ್ಯವನ್ನು ತಿಳಿಯುವುದರಲ್ಲಿ ಓದುಗನ ಪಾತ್ರವೂ ಇರುತ್ತದೆ. ಅವನ ಕ್ರಿಯಾಶೀಲ ತೊಡಗಿಕೊಳ್ಳುವಿಕೆ ಇಲ್ಲದಿದ್ದರೆ; ತಾನೇ ಹಾಲು ಕರೆದು ಬೆಣ್ಣೆಯನ್ನು ತೆಗೆದುಕೊಳ್ಳುವ ಶ್ರಮವನ್ನು ಅವನು ತೆಗೆದುಕೊಳ್ಳದಿದ್ದರೆ ಕಾವ್ಯಾನುಭವ ಲಭಿಸುವುದಿಲ್ಲ. ಕಾವ್ಯ ರೆಡಿಮೇಡಲ್ಲ. ಅದು ಕ್ಷೀರ. ಬೆಣ್ಣೆ ಬೇಕಾದರೆ ಬೇಕಾದವರೇ ತೆಗೆದುಕೊಳ್ಳಬೇಕು. ಅಲ್ಲದೆ ಓದುಗ ಯಾವುದೇ ಕೃತಿಯನ್ನು ಮತ್ಸರದಿಂದ-ಪೂರ್ವಾಗ್ರಹದಿಂದ ಓದಕೂಡದು. ಹಾಗೆ ಓದಿದರೆ ಅದು ಕಾವ್ಯದ ಸರಿಯಾದ ಓದಲ್ಲ. ಸಹೃದಯನು ಶ್ರಮಶೀಲ, ಕ್ರಿಯಾಶೀಲ, ಸೃಜನಶೀಲ ವ್ಯಕ್ತಿತ್ವದವನಾಗಿರಬೇಕು ಎಂಬ ತ್ರಿವಳಿ ತತ್ವದ ಜೊತೆಗೆ ಲಕ್ಷ್ಮೀಶ ಇಲ್ಲಿ ಮತ್ಸರ ರಹಿತ ವ್ಯಕ್ತಿತ್ವದವನೂ ಆಗಿರಬೇಕೆಂಬ ನಾಲ್ಕನೇ ತತ್ವವನ್ನೂ ಹೇಳುತ್ತಾನೆ. ಇವುಗಳನ್ನೆಲ್ಲ ಕಾವ್ಯದ ಚತುರ್ಮುಖಿ ಅರ್ಹತೆಗಳು ಎನ್ನಬಹುದು.

## 1.8. ಕನ್ನಡದ ಆದಿ ವಿಮರ್ಶಕ

ಕನ್ನಡದ ಮೊಟ್ಟಮೊದಲ ವಿಮರ್ಶಕ ಶ್ರೀವಿಜಯ. ಇವನು ತನ್ನವರೆಗಿನ ಕನ್ನಡ, ಸಂಸ್ಕೃತ, ಪ್ರಾಕೃತ(ಪಾಗದ) ಕಾವ್ಯ ಪರಂಪರೆಗಳನ್ನು ಅವಲೋಕಿಸಿ ತೌಲನಿಕ ದೃಷ್ಟಿಯಿಂದ ತನ್ನದೇ ವಿಚಾರಗಳನ್ನು ಮಂಡಿಸಿದ್ದಾನೆ. ಕನ್ನಡ ಕಾವ್ಯ ಪರಂಪರೆಯಲ್ಲಿನ ಕಾವ್ಯಪದ್ಧತಿಯನ್ನು ಗದ್ಯ ಪದ್ಯಗಳೆಂದು ಎರಡಾಗಿ ವಿಂಗಡಿಸಿ ವ್ಯಾಖ್ಯಾನಿಸಿದ್ದಾನೆ. ಕನ್ನಡ ಕಾವ್ಯಗಳ ಭಾಷೆ, ಪದಪ್ರಯೋಗ, ವ್ಯಾಕರಣ, ಛಂದಸ್ಸು, ಗುಣದೋಷಗಳ ಬಗೆಗೆ ವಿವರವಾಗಿ ಮಾತನಾಡಿದ್ದಾನೆ. ಶ್ರೀವಿಜಯನೇನಾದರೂ ಅಚ್ಚಗನ್ನಡದಲ್ಲಿ-ನಾಡವರ ನುಡಿಯಲ್ಲಿ ತನ್ನ ಗ್ರಂಥ ಬರೆದಿದ್ದರೆ ಇನ್ನಷ್ಟು ಸ್ಪಷ್ಟವೂ, ನಿರ್ಧಿಷ್ಟವೂ ಆದ ರೀತಿಯಲ್ಲಿ ವಿಮರ್ಶೆ ಮೂಡಿಬರುತ್ತಿತ್ತೇನೋ. ಆದರೆ ಅವನಿಗೆ ತಾನು ಕಾವ್ಯಶರೀರದಲ್ಲಿಯೆ ತನ್ನೆಲ್ಲ ಚಿಂತನೆಗಳನ್ನು ಹುದುಗಿಸಿ ಹೇಳಬೇಕೆಂಬ ಅನಿವಾರ್ಯತೆಯನ್ನು ಹೇರಿಕೊಂಡಿದ್ದಾನೆ. ಹೀಗಾಗಿ ಪದ್ಯಪಾದಗಳ ಛಂದಸ್ಸಿಗೆ ಕಟ್ಟುಬಿದ್ದು ವಿವರಿಸಿ,

ಹೇಳಬೇಕಾಗಿದ್ದ ಕಡೆ ಕುಗ್ಗಿಸಿಯೂ ಕಿರಿದಾಗಿ ಹೇಳಬೇಕಾಗಿದ್ದ ಕಡೆ ಪಾದಪೂರಣಕ್ಕಾಗಿ ಹಿಗ್ಗಿಸಿಯೂ ಹೇಳುವ ಅನಿವಾರ್ಯತೆಗೆ ಸಿಲುಕಿದ್ದಾನೆ. ಇದು ಆದಿ ವಿಮರ್ಶಕ ಶ್ರೀವಿಜಯನಿಗೆ ಮಾತ್ರ ಸಂಬಂಧಿಸಿದ ಸಮಸ್ಯೆ ಅಲ್ಲ. ನಮ್ಮ ಎಲ್ಲ ಶಾಸ್ತ್ರಕಾರರಿಗೂ ಸಂಬಂಧಿಸಿದ ಸಮಸ್ಯೆ.

### 1.9. ಕಾವ್ಯ ಭೇದಗಳು

'ಚತ್ತಾಣ ಮತ್ತು ಬೆದಂಡೆಗಳು ಇತ್ತೀಚೆಗೆ ಪ್ರಸಿದ್ಧಿಗೊಂಡಿರುವ (ಶೈಲಿ?) ಎರಡು ಕಾವ್ಯರೂಪಗಳು. ಪುರಾತನ ಕವಿಗಳು ತಮ್ಮ ಕಾವ್ಯಗಳಲ್ಲಿ ಇವುಗಳನ್ನು ಬಳಸಿದ್ದಾರೆ. ಒಂದೊಂದು ಕಂದವೂ ಒಂದೊಂದು ವೃತ್ತಗಳೂ ಎಡೆಗೊಂಡಿದ್ದರೆ ಅದು ಬೆದಂಡೆ ಕಾವ್ಯ. ಹಲವಾರು ಕಂದಗಳೂ, ಸುಂದರ ವೃತ್ತಗಳೂ, ಚೌಪದಿ, ಗೀತಿಕೆ ತ್ರಿವಿಧಿಗಳೆಲ್ಲ ಬೆರೆತಿದ್ದರೆ ಅದು ಚತ್ತಾಣವು' (ಕ.ರಾ.ಮಾ.1–22ರಿಂದ35)

ಶ್ರೀವಿಜಯ ಚತ್ತಾಣ, ಮತ್ತು ಬೆದಂಡೆಗಳೆಂಬ ಎರಡು ಕಾವ್ಯಬೇಧಗಳನ್ನು ಹೇಳಿ ಗದ್ಯಾಶ್ರಮ ಮತ್ತು ಪದ್ಯಾಶ್ರಮಗಳನ್ನು ಹೇಳಿದರೆ, ನಾಗವರ್ಮನು 'ಗದ್ಯಮಯಂ ಪದ್ಯಮಯಂ ತದ್ಯಮಳ ವಿಮಿಶ್ರಮೆಂದು ಕೃತಿ ಮೂರು ತೆರಂ' (ಕಾ.ಲೋ. 949) ಎಂದು ಹೇಳುತ್ತಾನೆ. ಗದ್ಯ ಮಾತ್ರ ಇದ್ದರೆ ಕಥಾಖ್ಯಾಯಿಕೆ ಎಂದೂ, ಪದ್ಯ ಮಾತ್ರ ಇದ್ದರೆ ಸರ್ಗಬಂಧವೆಂದೂ, ಗದ್ಯ ಪದ್ಯ ಮಿಶ್ರವಿದ್ದರೆ ಚಂಪೂ ಎಂದೂ ಹೇಳುತ್ತಾನೆ. ಈ ಮೂರು ಮುಖ್ಯ ಬರವಣಿಗೆಯ ವಿಧಗಳನ್ನು ಹೇಳಿ ನಂತರ ಇಡುಕುಂಗಬ್ಬ, ಮುಕ್ತಕ, ಕುಳಕ, ಕೋಶ ಇವುಗಳನ್ನು ಹೆಳುತ್ತಾನೆ. (951) ಆದರೆ ಇವುಗಳನ್ನು ವಿವರಿಸುವುದಿಲ್ಲ. ಸುಮ್ಮನೆ ವಸ್ತುಕಥನಗಳೆನ್ನುತ್ತಾನೆ. ಅನಂತರದಲ್ಲಿ ಮೆಲ್ವಾಡು, ಹಾಡು, ಬೆದಂಡೆಗಬ್ಬ, ಬಾಜನೆಗಬ್ಬ ಇವುಗಳನ್ನು ಕೆಲವೇ ಮಾತುಗಳಲ್ಲಿ ವಿವರಿಸಿ (952ರಿಂದ 956) ಕೊನೆಗೆ ಇವುಗಳೆಲ್ಲ ವರ್ಣಕಗಳು ಎನ್ನುತ್ತಾನೆ. ತ್ರಿವಿಧಿ, ರಗಳೆ, ಷಟ್ಪದಿಗಳು ಇತ್ಯಾದಿ ಛಂದಸ್ಸುಗಳು ಇವನ ಪ್ರಕಾರ ಛಂದೋರೂಪಗಳಷ್ಟೆ. ಕಾವ್ಯ ಬೇಧಗಳಲ್ಲ. ಉದಯಾದಿತ್ಯನು ನಾಗವರ್ಮನನ್ನು ಗಿಳಿಯಂತೆ ಅನುಸರಿಸಿ ಗದ್ಯ ಪದ್ಯ ಮಿಶ್ರವೆಂದು ಕಾವ್ಯದಲ್ಲಿ ಮೂರು ಬಗೆ, ಗದ್ಯಕ್ಕೆ ಪಾದಗಳಿಲ್ಲ, ಪದ್ಯಕ್ಕೆ ಪಾದಗಳಿರುತ್ತವೆ, ಜೊತೆಗೆ ಪದ್ಯದಲ್ಲಿ ಮುಕ್ತಕ ಕುಳಕ ಕೋಶ (ಸಂಕಲನ) ಹೀಗೆ ಹಲವು ಅಂಗಗಳಿವೆ. ಕಾವ್ಯದ ಎರಡು ಭೇದಗಳಾದ ಚತ್ತಾಣ ವೈದಂಡಿಕಗಳನ್ನು ಸರ್ಗಬಂಧಗಳೆಂದು ಕರೆಯಲಾಗುತ್ತದೆ. ಗದ್ಯಗಳನ್ನು ಆಖ್ಯಾಯಿಕೆ ಎನ್ನಲಾಗುತ್ತದೆ. ಗದ್ಯ ಪದ್ಯ ಮಿಶ್ರವಾದ ಚಂಪೂ ಕೃತಿಗಳನ್ನು ವಚನ ಕಾವ್ಯಗಳೆನ್ನಲಾಗುತ್ತದೆ ಎಂದು ಹೇಳುತ್ತಾನೆ.

### 1.9.1 ಗದ್ಯ ಪದ್ಯ ಪಂಥ

'ಅತಿಶಯಧವಳನ ಬರವಣಿಗೆಯ ಗದ್ಯಪದ್ಯಗಳೆಂಬ ಎರಡು ಮಾರ್ಗಗಳಿವೆ. ಗದ್ಯದಲ್ಲಿ ಅನೇಕ ರೂಪ ಬೇಧಗಳಿವೆ. ಸಂಸ್ಕೃತದಲ್ಲಿ ಹರ್ಷಚರಿತ ಮತ್ತು ಬಾಣನ ಕಾದಂಬರಿಗಳು ಇದಕ್ಕೆ ಉದಾಹರಣೆಗಳು. ಕನ್ನಡದಲ್ಲಿ ಪೂರ್ವಾಚಾರ್ಯರು ಗದ್ಯ ಪದ್ಯ ಮಿಶ್ರಿತವಾದ ರಚನೆಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಸಕಲ ಕಲಾ ಭಾಷಾ ಪ್ರಯೋಗ, ಲೌಕಿಕ ಸಾಮಯಿಕಾದಿ ವರ್ಣನಾವಿವರ, ವಸ್ತುವಿಸ್ತಾರ ವಿವರಗಳೆಲ್ಲ ಬರುವವು. ಈ ಗದ್ಯಾಶ್ರಮ ಪ್ರತೀತಿಯಲ್ಲಿ ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತಾದಿಗಳು ಖ್ಯಾತರು. ಪದ್ಯವು ಸಮಸ್ತ ಜನತಾ ಹೃದ್ಯವಾದುದು, ಪದ್ಯ ಪಾದನಿಯಮಗಳಿಂದ ಕೂಡಿದುದು, ಒಳ್ಳೆಯ ಜಾತಿ ವೃತ್ತಗಳಿಂದ ಕೂಡಿ ಆದಿಯಿಂದಲೂ ವಿದ್ಯಾಪಾರಂಗತರಿಂದ ಪಾರಾಯಣಗೊಳ್ಳುತ್ತಿರುವದು. ಗುಣಸೂರಿ, ನಾರಾಯಣ, ಭಾರವಿ, ಕಾಳಿದಾಸ, ಮಾಘ ಮೊದಲಾದವರು ಪದ್ಯ ಮಾರ್ಗದಲ್ಲಿ ಮಹಾಕಾವ್ಯ ರಚಿಸಿದ್ದಾರೆ. ಶ್ರೀವಿಜಯ, ಕವೀಶ್ವರಪಂಡಿತ, ಚಂದ್ರ, ಲೋಕಪಾಲ ಮೊದಲಾದವರು ಕನ್ನಡದ ಮುಖ್ಯ ಪದ್ಯಕವಿಗಳು' (ಕ.ರಾ.ಮಾ. 1–24ರಿಂದ32) ಹೀಗೆ ಗದ್ಯಾಶ್ರಮ ಪದ್ಯಾಶ್ರಮಗಳನ್ನು ಪ್ರಸ್ತಾಪಿಸುವ ಮೂಲಕ ನಮ್ಮಲ್ಲಿ ಹೀಗೆ ಎರಡು ಗದ್ಯ ಪದ್ಯ ಧಾರೆಗಳು (ಸ್ಕೂಲುಗಳು) ಇದ್ದ ಬಗ್ಗೆ ಶ್ರೀವಿಜಯ ವಿವರಿಸಿದ್ದಾನೆ.

### 1.9.2. ಕಾವ್ಯಮಾರ್ಗ

ಅಲಂಕಾರಗಳ ಬಳಕೆ ಮತ್ತು ಉಕ್ತಿ ರೀತಿಗಳಲ್ಲಿ ಹೇಳಲಾಗದಷ್ಟು ಅಗಣಿತ ಮಾರ್ಗಗಳು ಇವೆ ಎಂದು ಶ್ರೀವಿಜಯ ಹೆಳುತ್ತಾ: ಕನ್ನಡ ಕಾವ್ಯಗಳಲ್ಲಿ ಇರುವ ದಕ್ಷಿಣ ಮತ್ತು ಉತ್ತರ ಎಂಬ ಎರಡು ಮಾರ್ಗಗಳನ್ನು ಹೇಳಿದ್ದಾನೆ. ಈ ದಕ್ಷಿಣ ಮತ್ತು ಉತ್ತರವೆಂಬ ಎರಡು ಪ್ರಾದೇಶಿಕ ಕಾವ್ಯ ಮಾರ್ಗಗಳು

ಅದಾಗಲೇ ಕನ್ನಡದಲ್ಲಿ ಇದ್ದು ಅವುಗಳನ್ನು ಲಕ್ಷಣೀಕರಿಸಲು ಶ್ರೀವಿಜಯ ಇಲ್ಲಿ ಯತ್ನಿಸಿದ್ದಾನೆಂದು ತಿಳಿಯಲಾಗದು. ಕಾವ್ಯ ಹೇಗಿದೆಯೋ ಅದನ್ನು ನೋಡಿ ಅವುಗಳ ಲಕ್ಷಣಗಳನ್ನು ವಿವರಿಸುವ ಪದ್ಧತಿ ನಮ್ಮಲ್ಲಿ ಇಲ್ಲವಾದ್ದರಿಂದ; ಕಾವ್ಯಗಳು ಹೇಗೆ ಇರಬೇಕು ಎಂದು ನಿರ್ದೇಶನ ನೀಡುವ ಪದ್ಧತಿ ನಮ್ಮಲ್ಲಿ ಇರುವುದರಿಂದ ಶ್ರೀವಿಜಯನು ಕನ್ನಡವು ಹಿಡಿಯಬಹುದಾದ/ ಹಿಡಿಯಬೇಕಾಗಿರುವ ಮಾರ್ಗಗಳನ್ನು ಈ ಮೂಲಕ ಹೇಳುತ್ತಿದ್ದಾನೆಂದು ತಿಳಿಯಬಹುದು. ಆದರೆ ಆಮೇಲೆ ಈ ರೀತಿಯ ಕಾವ್ಯ ಮಾರ್ಗಗಳು ನಮ್ಮಲ್ಲಿ ಸೃಷ್ಟಿಯಾಗಲಿಲ್ಲ ಎಂಬುದು ನಮಗೆಲ್ಲ ತಿಳಿದಿದೆ. ನಾಗವರ್ಮನು ಈ ಎರಡು ಕಾವ್ಯ ಮಾರ್ಗಗಳ ಬಗ್ಗೆ ಉಲ್ಲೇಖಿಸುವನಾದರೂ ಇವುಗಳನ್ನು ವಿವರಿಸುವ ಗೋಜಿಗೆ ಆತ ಹೋಗುವುದಿಲ್ಲ. ಅನಂತರದ ಲಾಕ್ಷಣಿಕರು ಈ ಮಾರ್ಗಗಳನ್ನು ಚರ್ಚಿಸುವುದಿಲ್ಲ. ಹಾಗಾಗಿ ಈ ಮಾರ್ಗಗಳಿಗೆ ಶ್ರೀವಿಜಯನದೇ ಕಡೇ ಮಾತು."

### 1.9.3. ಮಾರ್ಗದರ್ಶನ

ಶ್ರೀವಿಜಯ ಸರಿಯಾದ ಮಾರ್ಗದರ್ಶನವಿಲ್ಲದೆ, ಮಾರ್ಗದರ್ಶಕರೂ ಇಲ್ಲದೆ ಕನ್ನಡದಲ್ಲಿ ಅಡ್ಡಾದಿಡ್ಡಿಯಾಗಿ ಕಾವ್ಯ ಪದ್ಧತಿಗಳು ಬೆಳೆದಿವೆ ಎಂದೂ ಹೇಳುತ್ತಾನೆ. ಸಾಕಷ್ಟು ಜನ ತಮತಮಗೆ ತೋಚಿದಂತೆ ಕಾವ್ಯ ಬರೆದಿದ್ದಾರೆ. ಅವರಿಗೆಲ್ಲ ಒಂದು ಕವಿಮಾರ್ಗವನ್ನು ನಿರ್ಮಿಸಿಕೊಡುವ ಅಗತ್ಯ ಇದೆ ಎಂದು ಹೇಳಿ ಇದಕ್ಕಾಗಿ ಕವಿರಾಜಮಾರ್ಗ ಬರೆದಿದ್ದೇನೆ ಎಂದು ಹೇಳಿದ್ದಾನೆ. ತನ್ನ ಕಾವ್ಯದುದ್ದಕ್ಕೂ ಕವಿಗಳಿಗೆ ಗುಣ, ದೋಷ, ಯತಿ, ಛಂದೋಭಂಗ, ವಿಸಂಧಿ, ವಿಭಕ್ತಿ, ಪ್ರಾಸ, ಶಬ್ದಾಲಂಕಾರ, ಅರ್ಥಾಲಂಕಾರಾದಿಗಳ ಬಗ್ಗೆ ಕವಿಗಳಿಗೆ ಮಾರ್ಗದರ್ಶನ ಮಾಡಿದ್ದಾನೆ. ಶ್ರೀವಿಜಯನು ತನ್ನ ಕೃತಿಗೆ ಕವಿರಾಜಮಾರ್ಗವೆಂದು ಹೆಸರಿಟ್ಟಿರುವುದರಿಂದಲೆ ತನ್ನದು ಮಾರ್ಗದರ್ಶನ ಎಂದು ಸೂಚಿಸುತ್ತಿದ್ದಾನೆ. ಹೆಸರಿಗೆ ತಕ್ಕಂತೆ ಕಾವ್ಯದಲ್ಲಿ ನಡೆದಿದ್ದಾನೆ ಕೂಡ.

ಕಾವ್ಯವನ್ನು ಹೇಗೆ ಬರೆಯಬೇಕು ಮತ್ತು ಹೇಗೆ ಬರೆಯಬಾರದು ಎಂದು ಶ್ರೀವಿಜಯನನ್ನು ಅನುಸರಿಸಿ ಎಲ್ಲೆಲ್ಲಿ ಏನೇನು ನಿಷೇಧ ಎಂದೆಲ್ಲ ನಮ್ಮ ಹಲವು ಶಾಸ್ತ್ರಕಾರರು ಮಾರ್ಗದರ್ಶನ ಮಾಡಿದ್ದಾರೆ. ನಾಗವರ್ಮನು ಸೂಚಿಸುವ ಒಂದು ಮಾದರಿ ಮಾರ್ಗದರ್ಶನವನ್ನು ಇಲ್ಲಿ ನೀಡಲಾಗಿದೆ. 'ಅಸುಕೆಯ ಕುಜ(ಸಾಲವೃಕ್ಷ)ದಲ್ಲಿ ಫಲವನ್ನೂ, ವಸಂತ ಋತುವಿನಲ್ಲಿ ಜಾತಿಕುಸುಮವನ್ನೂ, ಚಂದನ ವೃಕ್ಷದಲ್ಲಿ ಹೂವು ಹಣ್ಣುಗಳನ್ನೂ ವರ್ಣಿಸಬಾರದು. ಅಮಾವಾಸ್ಯೆಯಲ್ಲಿ ಬೆಳದಿಂಗಳನ್ನೂ, ಪೌರ್ಣಮಿ ಕಾಲದಲ್ಲಿ ಕತ್ತಲನ್ನೂ ವರ್ಣಿಸಬಾರದು. ಹಗಲಲ್ಲಿ ಕಮಲವು ಅರಳುವುದನ್ನೂ, ಷೇಫಾಳಿಕಾಶ್ರುಬಿಂದುಪರಿಭ್ರಂತವನ್ನೂ' ಹೇಳಬಾರದು. ತತ್ವದರ್ಶನದ್ಯುತಿಯಲ್ಲಿ ಅರಕ್ತತೆಯನ್ನು, ವಿಕಸತ್ರಿಯನಿಗೆ ಸುಮನಸದಲ್ಲಿ ಅಪೀತತೆಯನ್ನು, ಪಂಕಜಮುಕುಲ ಪ್ರತತಿಯಲ್ಲಿ ಹರಿತ್ವ ವೃತ್ತಿಯನ್ನು ಬುಧರು ಹೇಳಬಹುದು' (ಕಾ.ಲೋ. 968, 973, 975, 978, 981) ಕವಿಸಮಯ ವಿಭಾಗದಲ್ಲಿ ಇವನ್ನೆಲ್ಲ ಹೇಳುವ ನಾಗವರ್ಮ ಇದಕ್ಕೊಂದು ಅಧಿಕರಣವನ್ನೆ ಮೀಸಲಿಟ್ಟು 1. ಅಸದಾಖ್ಯಾತಿ 2. ಸದಕೀರ್ತನ 3. ನೇಯಾರ್ಥ 4. ಐಕ್ಯ ಎಂದು ನಾಲ್ಕು ಬಗೆಗಳಲ್ಲಿ ವರ್ಣನೆ ಮತ್ತು ನಿಷೇಧಗಳ ಬಗ್ಗೆ ಮಾರ್ಗದರ್ಶನ ಮಾಡುತ್ತಾನೆ. ಇದೇ ಪ್ರಕರಣದಲ್ಲಿ ಕಾವ್ಯ ಪ್ರಭೇದಗಳನ್ನೂ ವಿವರಿಸುತ್ತಾನೆ. ಮಾರ್ಗದರ್ಶನ ಮಾಡುವಾಗ ಲಕ್ಷಣ ಸೂತ್ರಗಳಿಗೆ ಲಕ್ಷ್ಯ ಪದ್ಯಗಳನ್ನೂ ಕೊಟ್ಟು ಸರಿ ಮತ್ತು ಸರಿಯಲ್ಲದ ಕ್ರಮಗಳನ್ನೂ ವಿವರಿಸುತ್ತಾನೆ. ಲಕ್ಷ್ಯಪದ್ಯಗಳನ್ನು ಬೇರೆಯವರಿಂದ ಆಯ್ದು ಕೊಡುವ ಜೊತೆಗೆ ತಾನೂ ಸೃಷ್ಟಿಸುವ ಮೂಲಕ ಒಳ್ಳೆಯ ಕಾವ್ಯ ಹೇಗೆ ರಚಿಸಬೇಕೆಂಬ ತತ್ವವನ್ನು ತಾನೇ ಆಚರಿಸುವ ಕ್ರಿಯಾಪರೀಕ್ಷೆಗೂ ಒಳಗಾಗಿದ್ದಾನೆ. ಈ ಮಾದರಿಯನ್ನು ನಮ್ಮ ಬಹುತೇಕ ಎಲ್ಲ ಅಲಂಕಾರಿಕರೂ ಅನುಸರಿಸಿದ್ದಾರೆ.

ಉದಯಾದಿತ್ಯನು ರಸವಿಚಾರ ಹೇಳುತ್ತ 'ಶೃಂಗಾರವನ್ನು ಬೀಭತ್ಸದಲ್ಲೂ, ಭಯಾನಕವನ್ನು ರೌದ್ರದಲ್ಲೂ, ಕರುಣಾರಸಕ್ಕೆ ವೀರವನ್ನೂ, ಪರಿಹಾಸಕ್ಕೆ ಅದ್ಭುತ ರಸವನ್ನೂ ಬೆರೆಸಿ ಹೇಳಬಾರದು. ಇವೆಲ್ಲವೂ ಪರಸ್ಪರ ವಿರೋಧವಾದುವು.' (ಉದಯಾ. 1-12) ಎಂದು ಹೇಳುತ್ತಾನೆ. ಈ ರೀತಿಯ ರಸವಿರೋಧದ ವಿಚಾರಗಳನ್ನು ಸಾಳ್ವನೂ, ಕವಿಕಾಮನೂ, ಹೀಗೆ ಹಲವರು ಚರ್ಚಿಸಿದ್ದಾರೆ. ಸಾಳ್ವನಂತೂ ಇದು ಕವಿಕಾಮನ ಮತಂ, ಇದು ನಾಗವರ್ಮನ ಮತಂ ಎಂದೇ ನಿರ್ದೇಶಿಸಿ ಹೇಳಿದ್ದಾನೆ.

### 1.10. ಕಲೆಗಾಗಿ ಕಲೆ–ವಿಮರ್ಶೆಗಾಗಿ ವಿಮರ್ಶೆ

ಕಲೆಗಾಗಿ ಕಲೆ ಎಂಬ ತತ್ವವೊಂದು ನಮ್ಮಲ್ಲಿ ಇದೆ. ನಮ್ಮ ಪ್ರಾಚೀನ ವಿಮರ್ಶೆಗಂತೂ ಇದು ಅನ್ವಯಿಸುವುದಿಲ್ಲ. ಬರಿ ವಿಮರ್ಶೆಗಾಗಿಯೆ ವಿಮರ್ಶೆಯು ನಮ್ಮಲ್ಲಿ ಎಂದೂ ಸಂಭವಿಸಿಲ್ಲ. ಅಲ್ಲಿ ಸಂಭವಿಸಿರುವ ಪ್ರತಿಯೊಂದು ವಿಮರ್ಶೆಯ ಹಿಂದೆಯೂ ಒಂದೊಂದು ಉದ್ದೇಶ ಕಾರಣಗಳು ಇವೆ. ಉದ್ದೇಶ ಕಾರಣಗಳು ಕೆಲವೊಮ್ಮೆ ಸಂದರ್ಭ ಸನ್ನಿವೇಶಗಳ ಒತ್ತಡಕ್ಕೆ; ಕೆಲವೊಮ್ಮೆ ಧರ್ಮ, ಪ್ರಭುತ್ವ, ಜನಾಚರಣೆಗಳ ಒತ್ತಡಕ್ಕೆ ಗುರಿಯಾಗಿರಬಹುದು. ವಿಮರ್ಶೆ ಬರೆಯುವ ಉದ್ದೇಶದಿಂದ ಮಾತ್ರವೇ ವಿಮರ್ಶೆ ಬರೆಯುವ ಪರಿಪಾಠ ಆಧುನಿಕ ಸಂದರ್ಭದಲ್ಲಿ ಹುಟ್ಟಿದೆ. ಆದರೆ ನಮ್ಮ ಪ್ರಾಚೀನರಲ್ಲಂತೂ ಇದು ಇಲ್ಲ. ವಿಮರ್ಶೆಯ ಸಲುವಾಗಿ ಹುಟ್ಟಿರುವ ಆಧುನಿಕ ವಿಮರ್ಶೆಯ ಹಿಂದೆ ಕೂಡ ಸಾಂದರ್ಭಿಕತೆಯ ರಾಜಕಾರಣಗಳು ಕೆಲಸ ಮಾಡಿವೆ ಎಂಬುದರಲ್ಲಿ ಎರಡು ಮಾತಿಲ್ಲ. ಕಾವ್ಯ ರಚಿಸುವುದಕ್ಕಾಗಿ ಕಾವ್ಯ ರಚಿಸುವ, ಸಾಹಿತ್ಯ ರಚಿಸಬೇಕೆಂಬ ಉದ್ದೇಶಕ್ಕಾಗಿ ಮಾತ್ರವೆ ಸಾಹಿತ್ಯ ರಚಿಸುವ ಪರಿಪಾಠವು ಇತ್ತೀಚೆಗೆ ಬೆಳೆಯುತ್ತಿದೆ. ಅದರ ಹಿಂದೆ ಕೀರ್ತಿ, ಹಣ, ಉದ್ಯೋಗ, ಶೈಕ್ಷಣಿಕತೆ ಇತ್ಯಾದಿ ಕಾರಣಗಳು ಕೆಲಸ ಮಾಡುತ್ತಿದ್ದರೂ ಅವು ಗೌಣ ಎಂಬ ಸ್ಥಿತಿ ಈಗ ಇದೆ.

### 1.11. ಓದು–ಕೆಟ್ಟ ಓದು

ಕೃತಿಯ ಸರಿಯಾದ ಓದು ಮತ್ತು ಅಪ ಓದಿನ ಬಗ್ಗೆ ನಮ್ಮ ಕವಿಗಳಿಗೆ ಅವರದ್ದೇ ಕಲ್ಪನೆಗಳು ಇವೆ. ಅವನ್ನು ಕಾವ್ಯರೂಪದಲ್ಲಿ ಅಭಿವ್ಯಕ್ತಿಸಲು ಅವರು ಯತ್ನಿಸಿದ್ದಾರೆ. 'ರಾಗ ದ್ವೇಷದಿಂದ ದೂರವಾದ ಕೃತಿಯನ್ನು ಹಲವು ನಿರ್ಬಂಧಗಳಿಂದಲೂ, ಬಂಧವು ಇಂಬಾಗಿ ಅರ್ಥವು ಹೊಸತಾಗುವಂತೆ ಹೇಳಿರುವ ಎಲ್ಲವನ್ನೂ ರಾಗಬದ್ಧವೆಂಬಂತೆ ಓದುವುದರಿಂದಲೂ ಏನೂ ಒಳಿತಾಗುವುದಿಲ್ಲ. ವಿದ್ಯಾಗರ್ವಗ್ರಹ ಪೀಡಿತರು ನಮ್ಮದು–ಬೇರೆಯವರದು ಎಂಬ ಬಾಧೆಯನ್ನೆ ಹಿಡಿದು; ಈ ಬೇಧ ಭಾವವನ್ನೆ ಉದ್ಯೋಗ ಮಾಡಿಕೊಂಡು ವಿಷದ ಉದ್ಯಾನವನ್ನೆ ಬೆಳೆದ ಹಾಗಾಗುತ್ತದೆ.' (ರಾ.ಚ.ಪು. 1–34) ಲೌಕಿಕ ಆಗಮಿಕ ಕೃತಿ ರಚನೆಯ ಬಗೆಗೆ ಕಟುವಾಗಿ ಮಾತನಾಡುವ ನಾಗಚಂದ್ರನೇ ಇಲ್ಲಿ ಸ್ವ ಮತ್ತು ಪರ ಎಂಬ ಬಾಧೆಯಿಂದ ಕೃತಿಯನ್ನು ಓದಬಾರದು; ವಿರಾಗ(ಆಧ್ಯಾತ್ಮ) ಕೃತಿಯನ್ನು ರಾಗಬದ್ಧಗೊಳಿಸಿ ವ್ಯಾಖ್ಯಾನಿಸಬಾರದು ಎಂದು ಹೇಳುತ್ತಾನೆ. ಇದು ನಮ್ಮವರ ಕೃತಿ ಇದು ಬೇರೆಯವರ ಕೃತಿ ಎಂಬ ಜಾತಿ, ಪಂಗಡ, ಕೌಟುಂಬಿಕ ಸಂಬಂಧಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ರಾಗದ್ವೇಷ ಬದ್ಧವಾಗಿ ಕೃತಿಯನ್ನು ಓದಕೂಡದು. ಇದರಿಂದ ವಿಷದ ಗಿಡಗಳ ಉದ್ಯಾನವನ್ನೇ ಬೆಳೆದಂತೆ ಆಗುತ್ತದೆ ಎಂದು ಹೇಳುವ ಮೂಲಕ ಇಲ್ಲಿ ನಾಗಚಂದ್ರ ಪಠ್ಯನಿಷ್ಠ–ಕೃತಿನಿಷ್ಠ ಓದೊಂದರ ಅಗತ್ಯವನ್ನು ಪ್ರಸ್ತಾಪಿಸಿದ್ದಾನೆ.

> ಲೋಗರ ಬಗೆಗೋದಿನೊಳಗನುರಾ/ಗಮನಾಗಿಸದೊಡೋದಿದಂಗೋದಿದೊಡೋ/ದಾಗದು
> ಪೇಳಕ್ಕುಮೆ ಮೊಲೆ/ನಾಗಂ ಕಿವಿಗಿವುಡುವೀಳ್ವಿನಂ ಗಳಪದುದೇ? (ಲೀಲಾ.ಪ್ರ. 1–21)

ಕಾವ್ಯವನ್ನು ಓದಿದಾಗ ಆ ಓದು ಜನರ ಮನಸ್ಸಿನಲ್ಲಿ ಅನುರಾಗವನ್ನು ಉಂಟುಮಾಡಬೇಕು. ಹಾಗಾಗದಿದ್ದರೆ ಆ ಓದು ಓದಾಣಿಕೆಯೇ ಅಲ್ಲ. ಒಳ್ಳೆಯ ಕಿವಿಯು ಕಿವುಡು ಬೀಳುವವರೆಗೆ ಗಳಪಿದಂತಾಗುತ್ತದೆ ಅಷ್ಟೆ. ಓದುವುದು ಒಂದು ಆಚರಣೆ ಆದಾಗ, ಕಾವ್ಯವನ್ನು ಅಪಾರವಾದ ಜನಸಮೂಹದ ಎದುರಿಗೆ ಓದಬೇಕಾದ ಪ್ರಸಂಗ ಒದಗಿದಾಗ ನಾವು ಓದುವ ಓದು ಕೇಳುಗರಿಗೆ ಸಂವಹನ ಆಗುವಂತೆ ಇರಬೇಕು. ಜನರ ಮನಸ್ಸಿನಲ್ಲಿ ಅನುರಾಗ ಉಂಟಾಗದೆ ಕಾವ್ಯದ ಬಗೆಗೆ ಅನಾದರ ಉಂಟಾಗುವಂತೆ ಕಾವ್ಯ ಓದಿದರೆ ಅದೆಂಥ ಓದು? ಇಂಥ ಕೆಟ್ಟ ಓದಿನ ಬಗೆಗೆ ನೇಮಿಚಂದ್ರ ತಕರಾರು ತೆಗೆಯುತ್ತ ಜನರನ್ನು ಸೆಳೆಯಬಲ್ಲ–ಮೋಡಿ ಮಾಡಬಲ್ಲ ಓದನ್ನು ಇಲ್ಲಿ ಪ್ರತಿಪಾದಿಸುತ್ತಿದ್ದಾನೆ. ಇಂಥ ಕೆಟ್ಟ ಓದುಗಳನ್ನು ಕಂಡೇ ನೇಮಿಚಂದ್ರ 'ಎಷ್ಟು ಕಾಡಿದರೂ ಕರೆಯದ ಕೆಚ್ಚಲ ಹಸುವ, ಕೋಡಿಯೇ ಆಗದ ಕೆರೆಯ, ಅರ್ಥವನ್ನು ಹೊರಕ್ಕೆ ತೆಗೆಯದ ಒಳಗೇ ಕಪಟದ ಮಾತಾಡುವ ಕುಬುದ್ಧಿಯ ಓದಿನ ಕೇಡನ್ನು ಈ ಜಿಪುಣರು ಅಯ್ಯೋ ಯಾಕೆ ಕಾಣುವುದೇ ಇಲ್ಲವಲ್ಲ!' (ಲೀಲಾ.ಪ್ರ. 1–48)ಎಂದು ಕೊರಗುತ್ತಾನೆ. ಯಾವುದೇ ಪಠ್ಯದ ಓದು ಅರ್ಥವನ್ನು ಹೊರಕ್ಕೆ ತೆಗೆಯುವಂತಹ ಓದು ಆಗಿರಬೇಕು ತಾನೆ? ಕಾವ್ಯದ ಓದು ಓದುಗನಿಗೆ ಸುಮ್ಮನೆ ರಂಜನೆ ಒದಗಿಸುವ ಕೈಗಾರಿಕೋತ್ಪನ್ನ ಅಲ್ಲ. ಓದುಗನು ತಾನೇ ಅದರಲ್ಲಿ ತೊಡಗಿ ಅದರಿಂದ ಬೇಕಾದುದನ್ನು ಪಡೆಯಬೇಕು. ಓದೆಂಬುದು ಇಂತಹ ಒಂದು ತೊಡಗುವ ಕ್ರಿಯೆ. ತೆರೆಯುವ ಕ್ರಿಯೆ. ಈ ಕ್ರಿಯಾಶೀಲತೆ

ಇಲ್ಲದವನು ಓದುಗನಾಗಲಾರ. ಕಾವ್ಯವು ಅಮೃತವೇ ಆಗಿರಬಹುದು. ಕಲ್ಪವೃಕ್ಷವೇ ಆಗಿರಬಹುದು. ಕಾಮಧೇನುವೇ ಆಗಿರಬಹುದು. ಆದರೆ ಓದುಗ ಅವುಗಳಿಂದ ದೊರಕಬಹುದಾದ ಫಲಗಳನ್ನು ತಾನೇ ಕ್ರಿಯಾಶೀಲನಾಗಿ ಪಡೆಯಬೇಕು. ಇಲ್ಲವಾದರೆ ಏನೂ ಲಭಿಸುವುದಿಲ್ಲ. (ಇದು ಓದಿಕೊಳ್ಳುವ ಮತ್ತು ಓದಿ ಹೇಳುವ ಎರಡೂ ಕ್ರಿಯೆಗಳಿಗೆ ಅನ್ವಯಿಸುವ ಮಾತು)

'ಸರಿಯಾಗಿ ಶುದ್ಧಿಯಾಗದ ಸ್ಫಟಿಕ ಮಣಿಯಂತೆ, ತತ್ವ ಅರ್ಥವನ್ನು ಅರಿಯುವ ಮುನ್ನವೆ ಅಪಾರ್ಥ ಉಂಟಾಗುವಂತೆ ಓದಬಾರದು. ಅರ್ಥದ ಆಭಾಸ ಆಗುವಂತೆ ಕಾವ್ಯವನ್ನು ಓದಿದರೆ ಕಾವ್ಯವು ಹೇಗೆ ತಾನೆ ಇಷ್ಟವಾಗುತ್ತದೆ?' (ಜ.ವಿ. 1–14) ಅರ್ಥವು ಹೊರಕ್ಕೆ ಬರುವಂತೆ ಓದುವುದು ಸರಿ. ಆದರೆ ಅಪಾರ್ಥವು ಉಂಟಾಗುವಂತೆ ಓದಿದರೆ! ಆಗ ಕಾವ್ಯಕ್ಕೇ ಕುತ್ತು. ಕೆಲವೊಮ್ಮೆ ಸಹೃದಯರ ಓದಿಗೂ ಪಂಡಿತ–ಪರೀಕ್ಷಕರ ಓದಿಗೂ ಬಹಳಷ್ಟು ಅಂತರ ಇರುತ್ತದೆ. ಸಹೃದಯ ಆದವನು ಕಾವ್ಯವನ್ನು ಆಸ್ವಾದಿಸಲು ಓದುತ್ತಾನೆ. ಆದರೆ ಪರೀಕ್ಷಕ ಹಾಗಲ್ಲ. ಅವನು ದೋಷಗಳನ್ನು ಹುಡುಕುವುದಕ್ಕೆಂದೇ ಕಾವ್ಯವನ್ನು ಓದುತ್ತಾನೆ. ಬರಿ ದೋಷಗಳನ್ನು ಹುಡುಕುವ ಓದುಗ ಮತ್ತು ಅಂತಹ ಓದಿನ ಬಗ್ಗೆ ನಮ್ಮ ಕವಿಗಳಿಗೆ ಬಹಳ ಸಿಟ್ಟಿದೆ. ಆದರೆ ಶಾಂತಿನಾಥ ಸಮಚಿತ್ತದಿಂದ 'ಇದು ಗುಣ ಇದು ದೋಷ ಎಂದು ಇವರು ಅರಿಯರು. ಗುಣಗಳನ್ನೆ ದೋಷವೆಂದು ದೋಷಗಳನ್ನೆ ಗುಣವೆಂದು ಹಳಿಯುವ ಹೊಗಳುವ ಅವಗುಣಿಗಳ ಗುಣವನ್ನು ಗುಣಜ್ಞನಾದವನು ಎಣಿಸಬಾರದು.' (ಸು.ಚ. 1–48) ಎಂದು ಹೇಳುತ್ತಾನೆ. ಕೆಟ್ಟ ವಿಮರ್ಶೆಯ ಬಗೆಗೆ, ಕೆಟ್ಟ ಓದುಗರ ಬೇಜವಾಬ್ದಾರಿ ಪ್ರತಿಕ್ರಿಯೆಗಳ ಬಗೆಗೆ ತಲೆಕೆಡಿಸಿಕೊಳ್ಳಬಾರದು. ಆದರೆ ಯಾವುದೇ ಒಬ್ಬ ಓದುಗನ ಓದು ಕಾವ್ಯದಲ್ಲಿ ಗುಣ ಯಾವುದು ದೋಷ ಯಾವುದು ಎಂಬುದನ್ನು ತಿಳಿಯಬಲ್ಲ ಕನಿಷ್ಠ ವಿವೇಕವನ್ನಾದರೂ ಪಡೆದಿರಬೇಕಾಗುತ್ತದೆ. ಹೀಗೆ ನಮ್ಮ ಕವಿಗಳು ವಯಕ್ತಿಕ ಓದು ಮತ್ತು ಸಾಮುದಾಯಿಕ ವಾಚನ ಈ ಎರಡೂ ನೆಲೆಯಲ್ಲಿ ಸಂವಹನಪೂರ್ವಕ, ಅರ್ಥಗ್ರಹಣ ಸಾಧ್ಯ–ವಿವೇಕಪೂರ್ಣ ಓದಿನ ಸಿದ್ಧಾಂತವನ್ನು ಚರ್ಚಿಸಿದ್ದಾರೆ.

> ಮಾನಿತ ಪದಮಂ ಪದಸಂ/ಧಾನಮನರ್ಥ ಪ್ರತೀತಿಯಂ ಕವಿಹೃದಯಾಸ್ಥಾನಮನ್
> ಅರಿಯದದೇನ್ ಕಣ್/ಬೇನೆಯ ಕರಡಿಯವೊಲರಿಚುವಂ ವಾಚಕನೆ? (ಛಂದೋ. 1–10 ಪ್ರಕ್ಷಿಪ್ತ)
>
> ಛಂದವನ್ನು ಅರಿಯದವನ ಓದೂ ಮುಂದೆ ಇದ್ದ ಆ ತಾಳ ಮಾನಗಳನ್ನು ಅರಿಯದ ಹಾಡೂ
> ಬಂದದ್ದನ್ನೆ ಗಳಹುವ ನುಡಿಯೂ ಈ ಯಾವಕ್ಕೂ ಬಾಳ್ಗೆ ಇಲ್ಲ. (ಛಂದೋ. 1–23)

ಸರಿಯಾದ ಓದು ಎಂಥದ್ದು? ಸರಿಯಾದ ಓದುಗನೆಂದರೆ ಹೇಗಿರಬೇಕು? ಎಂಬ ಬಗ್ಗೆ ತನ್ನದೇ ಚಿಂತನೆಗಳನ್ನು ಒಂದನೇ ನಾಗವರ್ಮ ಇಲ್ಲಿ ಮಂಡಿಸಿದ್ದಾನೆ. ಛಂದೋಕೃತಿಯ ಕರ್ತೃವಾದ ನಾಗವರ್ಮ ಇಲ್ಲಿ ಸಹಜವಾಗಿಯೇ ಒಳ್ಳೆಯ ಓದುಗ ಛಂದಸ್ಸನ್ನು ಚೆನ್ನಾಗಿ ಅರಿತವನಾಗಿರಬೇಕು. ಕಾವ್ಯವನ್ನು ಪರಿಶೀಲಿಸುವವನು ಮೊದಲು ಛಂದಸ್ಸನ್ನು ಅರಿತಿರಬೇಕು ಎನ್ನುತ್ತಾನೆ. ಕಾವ್ಯ ಬರೆಯಲು ಮಾತ್ರ ಅಲ್ಲ, ಕಾವ್ಯ ಓದಲು ಕೂಡ ಛಂದಸ್ಸು ಗೊತ್ತಿರಬೇಕು. ಇವು ವಿಮರ್ಶಕ ಓದುಗರಿಗೆ ಮಾತ್ರ ಅನ್ವಯಿಸುವ ಮಾತುಗಳಲ್ಲ. ಕವಿಗಳಿಗೂ ಅನ್ವಯಿಸುವ ಮಾತುಗಳು. ತಾಳಮಾನಗಳನ್ನು ಅರಿಯದವನ ಹಾಡು ಇವನ ಪ್ರಕಾರ ಹೆಚ್ಚು ಕಾಲ ಬಾಳಲಾರದು. ಕಾವ್ಯ ಬರೆಯಲು ಛಂದಸ್ಸು, ಹಾಡು ಬರೆಯಲು ತಾಳ ಮಾನಗಳು ಇರಲೇಬೇಕು.[12] ಕಾವ್ಯ ಬರೆಯುವಾಗ ಛಂದಸ್ಸು, ತಾಳ ಮಾನ ಇರಲೇಬೇಕೆಂಬ ನಿರ್ಬಂಧವನ್ನು ನಮ್ಮ ವಚನಕಾರರು, ಕೀರ್ತನಕಾರರು, ತತ್ವಪದಕಾರರು, ಕಾಲಜ್ಞಾನಿಗಳು ಹೀಗೆ ಅನೇಕರು ಮೀರಿದ್ದಾರಾದರೂ ಈ ಛಂದೋಪರಂಪರೆಯೆಂಬ ಕತ್ತೆ ಹೇರನ್ನು ತಲೆಮೇಲೆ ಹೊತ್ತುಕೊಂಡು ಶತಮಾನಗಳ ಕಾಲ ನಮ್ಮ ಅನೇಕ ಕವಿಗಳು ಬಸವಳಿಯುತ್ತ ಬಂದಿದ್ದಾರೆ. ಕೈಕೊಟ್ಟು ಹಗ್ಗ ಕಟ್ಟಿಸಿಕೊಂಡವರಂತೆ ನಮ್ಮ ಛಂದಸ್ಸು, ವ್ಯಾಕರಣ, ನಿಘಂಟುಶಾಸ್ತ್ರಕಾರರೂ ಶತಮಾನಗಳಿಂದ ನರಳುತ್ತ ಬಂದಿದ್ದಾರೆ. ಇರಲಿ:

ಒಟ್ಟಾರೆಯಾಗಿ ಪಠ್ಯನಿಷ್ಠ ಓದು, ಪೂರ್ವಾಗ್ರಹ ರಹಿತ ಅಥವಾ ವಿದ್ಯಾ ಗರ್ವಗ್ರಹ ಪೀಡಿತವಲ್ಲದ ಓದು, ನಮ್ಮ ಮತ್ತು ಅನ್ಯ ಎಂಬ ಭೇದವಿಲ್ಲದ ಓದು, ವಿವೇಕ ಸಹಿತ ಮತ್ತು ಮತ್ಸರರಹಿತ ಓದು, ಅರ್ಥಗ್ರಹಣ ಸಾಧ್ಯ ಓದು, ಸಂವಹನ ಸಾಧ್ಯ ಓದು, ಪದಸಂಧಾನದ ಮತ್ತು ಛಂದಸ್ಸಿನ ಅರಿವುಳ್ಳ ಓದು ಹೀಗೆ ಹಲವು ನೆಲೆಗಳಲ್ಲಿ ನಮ್ಮ ಕವಿಗಳು ಓದು ಮೀಮಾಂಸೆಯನ್ನು ಮಂಡಿಸಿದ್ದಾರೆ.

## 1.12. ಉದ್ದೇಶಿತ ಸಹೃದಯ ವರ್ಗ

ಯಾರಿಗಾಗಿ ಕಾವ್ಯ ಬರೆಯುತ್ತಿದ್ದೇನೆ ಎಂಬ ಸಹೃದಯ ಸಮುದಾಯದ ಸರಿಯಾದ ತಿಳುವಳಿಕೆ ಕಾವ್ಯದ ಭಾಷೆ, ವಸ್ತು, ಸ್ವರೂಪಗಳನ್ನೆಲ್ಲ ರೂಪಿಸುತ್ತಿರುತ್ತದೆ. ಉದಾಹರಣೆಗೆ ಜೈನನಾದ 3ನೆ ಮಂಗರಸನು ತನ್ನ ಸೂಪಶಾಸ್ತ್ರವನ್ನು ಎಲ್ಲರಿಗು ಬರೆಯಬೇಕು ಎಂದುಕೊಂಡಿದ್ದರೆ ಆತನ ಕಾವ್ಯದಲ್ಲಿ ಖಂಡಿತಾ ಮಾಂಸಾಹಾರಿ ಪಾಕಗಳ ವಿಚಾರ ಇರುತ್ತಿತ್ತು. ಆದರೆ ಆತ ಶಾಖಾಹಾರಿಗಳಿಗೆ ಮಾತ್ರ ತನ್ನ ಕಾವ್ಯ ಬರೆದಿರುವುದರಿಂದ ಅಲ್ಲಿ ಮಾಂಸಾಹಾರ ವಿಚಾರ ಇಲ್ಲ. ಯಾರಿಗಾಗಿ ಕಾವ್ಯ ಬರೆಯುತ್ತಿದ್ದೇನೆ ಮತ್ತು ಯಾತಕ್ಕಾಗಿ ಕಾವ್ಯ ಬರೆಯುತ್ತಿದ್ದೇನೆ ಎಂದು ನಮ್ಮ ಕವಿಗಳು ಸಾಕಷ್ಟು ಪದ್ಯಗಳಲ್ಲಿ ಹೇಳಿಕೊಂಡಿದ್ದಾರೆ. ಇಂಥ ಪದ್ಯಗಳಲ್ಲಿ ತಾವು ಕೆಲವು ಓದುಗ, ಕೇಳುಗರನ್ನು (ಸಹೃದಯ ಸಮೂಹ) ಉದ್ದೇಶಿಸಿ ಕಾವ್ಯ ಬರೆದಿರುವಂತೆ ಹೇಳಿಕೊಂಡಿದ್ದಾರೆ. ಯಾರ್‍ಯಾರಿಗೆ ನನ್ನ ಕಾವ್ಯದಲ್ಲಿ ಏನೇನು ಸಿಗುತ್ತದೆ. ಯಾರು ನನ್ನ ಉದ್ದೇಶಿತ ಓದುಗವರ್ಗ ಎಂದೆಲ್ಲ ಹೇಳಿಕೊಂಡಿದ್ದಾರೆ.

'ಅರಸುಗಳಿಗಿದು ವೀರ, ದ್ವಿಜರಿಗೆ ಪರಮವೇದದ ಸಾರ, ಯೋಗೀಶ್ವರರ ತತ್ವವಿಚಾರ, ಮಂತ್ರಿಜನಕ್ಕೆ ಬುದ್ಧಿಗುಣ, ವಿರಹಿಗಳ ಶೃಂಗಾರ, ವಿದ್ಯಾಪರಿಣತರ ಅಲಂಕಾರ, ಕಾವ್ಯಕೆ ಗುರು' (ಗ.ಭಾ. 1-19). ಹೀಗೆ ನನ್ನ ಕಾವ್ಯವು ಅರಸರಿಗೆ, ದ್ವಿಜರಿಗೆ, ಯೋಗಿಗಳಿಗೆ, ಮಂತ್ರಿಜನಕ್ಕೆ, ವಿರಹಿಗಳಿಗೆ, ವಿದ್ಯಾಪರಿಣತರಿಗೆ, ಕವಿಗಳಿಗೆ ಇವರೆಲ್ಲರಿಗೆ ಸಲ್ಲುವ ಹಾಗೆ ಬರೆಯಲ್ಪಟ್ಟಿದೆ ಎಂದು ಕುಮಾರವ್ಯಾಸ ಹೇಳಿದ್ದಾನೆ. ಆ ಮೂಲಕ ಉತ್ತಮ ಕಾವ್ಯವೊಂದು ಭಿನ್ನ ಭಿನ್ನ ಜನಸಮುದಾಯಗಳನ್ನು ಸಹೃದಯರನ್ನಾಗಿ ಹೊಂದುವಂತೆ ರಚಿತವಾಗಬೇಕು ಎಂಬ ತತ್ವವನ್ನೂ ಮಂಡಿಸಿದ್ದಾನೆ. ಎಲ್ಲರನ್ನೂ ಒಳಗೊಳ್ಳುವ ಹೋಲಿಸ್ಟಿಕ್ ಅಪ್ರೋಚು ಅಥವಾ ಆಲ್ ಇಂಕ್ಲೂಸಿವ್ ತತ್ವ ಇದು. ಹರಿಹರ, ಕುಮಾರವ್ಯಾಸನಿಗಿಂತ ಭಿನ್ನವಾಗಿಯೇನೂ ಮಾತಾಡುವುದಿಲ್ಲ. 'ಗುರುಕರುಣದಿಂದ ಒಲಿದು ಗಿರಿಜಾಕಲ್ಯಾಣವನ್ನು ಬರೆಯುತ್ತಿದ್ದೇನೆ; ರಸಿಕರೂ ಕವಿಗಳೂ ಹಿರಿಯರೂ ಸುಜನರೂ ಭಕ್ತರೂ ಪರಮಾರ್ಥದಿಂದ ಈ ಪ್ರಬಂಧವನ್ನು ಕೇಳುವುದು' (ಗಿ.ಕ. 1-43) ಎನ್ನುತ್ತಾನೆ. ಹರಿಹರ ಹೇಳುವ ರಸಿಕರು, ಕವಿಗಳು, ಹಿರಿಯರು, ಸುಜನರು ಇವರೆಲ್ಲ ಕಾವ್ಯದ ಭಿನ್ನ ಭಿನ್ನ ಓದುಗರು. ಈ ಭಿನ್ನ ಸಹೃದಯರು ಭಕ್ತರಿಗಿಂತ ಭಿನ್ನವಾದವರು. ಭಿನ್ನ ಸಮುದಾಯದ ಸಹೃದಯರನ್ನು ತಲುಪುವ ಆಕಾಂಕ್ಷೆ ನಮ್ಮ ಬಹುತೇಕ ಕವಿಗಳಿಗೆ ಇದೆ. ಹಾಗೆಯೇ ಇವೆಲ್ಲ ಓದುಗರ ಭಿನ್ನ ಭಿನ್ನ ಸಂವೇದನೆಗಳು ಕೂಡ. ಈ ಭಿನ್ನ ಸಂವೇದನೆಗಳಿಗೆ ಸಂವಾದಿಯಾಗಬಲ್ಲ ಸಂವೇದನೆಗಳು ಕಾವ್ಯದಲ್ಲೂ ಇರುವಂತೆ ನಮ್ಮವರು ಕಾವ್ಯ ರಚಿಸಿದ್ದಾರೆ. ಹಾಗಾಗಿ ಇದು ಓದು/ಓದುಗ ಕೇಂದ್ರಿತ ಕಾವ್ಯತತ್ವ ಕೂಡ ಹೌದು.

> ಈ ಕೃತಿ ಕೇಳ್ದ ಭವ್ಯ ನಿವಹಕ್ಕೆ ಚಮತ್ಕೃತಿ, ಮೆಚ್ಚುವೊಂಗೆ ಪುಣ್ಯಾಕೃತಿ, ಭಾರತೀಸತಿಗೆ ಮಾಡಿದಳಂಕೃತಿ
> ಪುಷ್ಪಚಾಪ ಬಾಣಾಕೃತಿ ಬಾಜಿಪೊಂಗೆ ಮುಕುರಾಕೃತಿ, ಭಾವಿಸುವಂಗಗಾಧ ಬೋಧಾಕೃತಿಯೆಂದೊಡೆ
> ಆರ್ಗಮಿದನ್ ಅಂತೆನೆಲ್ ಉಂತೆನಲ್ ಎಂತು ತೀರ್ಗುಮೊ (ಸು.ಚ. 1-61)

ಭವ್ಯ-ಅಭವ್ಯ, ಭಕ್ತ-ಭವಿ, ವೈದಿಕ-ಅವೈದಿಕ ಹೀಗೆ ಇಡೀ ಜನಸಮುದಾಯವನ್ನೇ ವರ್ಗೀಕರಿಸಿ ನೋಡುವ ದೃಷ್ಟಿ ನಮ್ಮ ಕವಿಗಳಲ್ಲಿ ಇದೆ. ಇಂಥ ದೃಷ್ಟಿಯಿರುವ ಕವಿಗಳು ಇವರ ಬಗೆಗೆ ಮಾತ್ರ ಬರೆಯುತ್ತೇವೆ; ಇವರಿಗಾಗಿ ಮಾತ್ರ ಬರೆಯುತ್ತೇವೆ ಎಂದು ಸಂಕಲ್ಪ ಮಾಡಿಯೂ ಇದ್ದಾರೆ. ಆದರೆ 'ಕಟ್ಟಿಯುಮ್' ಏನೋ ಮಾಲೆಗಾರನ ಪೊಸಬಾಸಿಗಮಂ ಮುಡಿವ ಭೋಗಿಗಳಿಲ್ಲದೆ ಅದು ಬಾಡಿಪೋಗದೇ?' ಎಂಬಂತೆ ಓದುಗನಿಲ್ಲದ ಕಾವ್ಯ ರಚಿಸುವುದು ಯಾರಿಗೂ ಬೇಕಿಲ್ಲ. ಕಮಲಭವ 'ಭವ್ಯನಿವಹ'ವನ್ನೇ ಉದ್ದೇಶಿಸಿ ಕಾವ್ಯ ಬರೆದರೆ, ಚಾಮರಸ 'ನನ್ನ ಮಾತಿನ ಸೌಂದರ್ಯವನ್ನೂ ಮಾಧುರ್ಯವನ್ನೂ ತಿಳಿದ ಜ್ಞಾನಿಗಳು, ಸಹೃದಯರು, ಶ್ರೇಷ್ಠಭಕ್ತರು ಈ ಪ್ರಭುಲಿಂಗಲೀಲೆಯನ್ನು ಆಲಿಸುವುದು' (ಪ್ರ.ಲೀ. 1-8) ಎಂದು ಭಕ್ತರನ್ನು ಉದ್ದೇಶಿಸಿ ಬರೆದಂತೆ ಹೇಳುತ್ತಾನೆ. ಚಾಮರಸ ಇನ್ನೂ ಮುಂದುವರಿದು 'ಕಬ್ಬು ಇದ್ದರೂ ಕುರಿಯು ಅದರ ಎಲೆಯನ್ನು ಮೇದು ಮೆಲುಕು ಹಾಕುವಂತೆ ಅಲ್ಪಸುಖಕ್ಕೆ ಸೋಲದೆ, ಕಬ್ಬನ್ನೆ ತಿಂದು ಅದರ ರಸವನ್ನು ಸವಿಯುವ ಆನೆಯಂತೆ ಭಕ್ತಿಯ ಕ್ರಮವನ್ನು ಅರಿತು ಆಚರಿಸಬೇಕೆಂದು ತಿಳಿದವರು ಈ ಪ್ರಭುಲಿಂಗಲೀಲೆಯನ್ನು ಲಾಲಿಸುವುದು' (ಪ್ರ.ಲೀ. 1-14) ಎಂದೂ ಹೇಳುತ್ತಾನೆ. ಸೌಂದರ್ಯ, ಮಾಧುರ್ಯವನ್ನು ತಿಳಿದ ಜ್ಞಾನಿಗಳು, ಸಹೃದಯರು, ಭಕ್ತಿಯ ಕ್ರಮವನ್ನು ಅರಿತು ಆಚರಿಸಬೇಕೆಂದು ಉದ್ದೇಶಿಸಿರುವ ಭಕ್ತರು ತನ್ನ ಕಾವ್ಯವನ್ನು ಆಲಿಸಲಿ ಎಂದು

ಹೇಳುವಾಗ ಚಾಮರಸನು ಸಂಸ್ಕಾರವಂತ ಶೈವ ಕೇಳುಗರನ್ನೇ ಉದ್ದೇಶಿಸಿದ್ದಾನೆ ಎಂಬುದು ಸ್ಪಷ್ಟ. ನಮ್ಮ ಉದ್ದೇಶಿತ ಕೇಳುಗ-ಓದುಗರು ಯಾರು ಎಂಬುದು ನಮಗೆ ಸ್ಪಷ್ಟವಾಗಿದ್ದಾಗ ಅವರ ಬೇಡಿಕೆ-ಕೇಳಿಕೆಗೆ ತಕ್ಕಂತೆ ಕಾವ್ಯ ರಚಿಸಲು ಬರುತ್ತದಲ್ಲವೆ? ನಮ್ಮ ಕಾವ್ಯತತ್ವಗಳನ್ನು ಯಾರು-ಯಾವುದು ನಿಯಂತ್ರಿಸಿ, ನಿರೂಪಿಸಿದವು ಎಂಬುದು ಹಾಗಿರಲಿ; ನಮ್ಮ ಕಾವ್ಯಗಳ ಸ್ವರೂಪವನ್ನು ಖಂಡಿತಾ ಆಯಾ ಕವಿಗಳ ಉದ್ದೇಶಿತ ಸಹೃದಯರು (ಟಾರ್ಗೆಟ್ ಆಡಿಯೆನ್ಸ್) ನಿಯಂತ್ರಿಸಿ, ರೂಪಿಸಿದ್ದಾರೆ.

'ಕರ್ನಾಟಕ ವ್ಯಾಕರಣ, ಛಂದಸ್ಸು, ಅಲಂಕಾರ, ಶಬ್ದಂಗಳ ಅನುಗೊಳಿಸಿ, ವರ್ಣಕಕ್ಕಿಲ್ಲ ಲಕ್ಷಣಂ ಎಂಬ ಜನರ ನಾಣ್ನುಡಿಯನ್ನು ಅಲ್ಲ ಎನಿಸಿ ಪೇಳ್ದೆಂ ವಿನೂತನ ಕಾವ್ಯಮಂ ಜಗತ್ಸೇವ್ಯಮಂ ಕಿವಿಗೊಟ್ಟು ಕೇಳ್ವುದು ಎಲ್ಲಾ ಸುಜನರು (ಚೆ.ಬ.ಪು. 1-28), 'ಸಕಲ ಜನರಿಂದ ಸುಶ್ರಾವ್ಯಮಪ್ಪಂತೆ ಎನ್ನ ವದನಾಬ್ಜದಲ್ಲಿ ನೀನೇ ವ್ಯಾಪಿಸಿರ್ದು ಅಮಲ ಸುಮತಿಯಂ ತಾಯೆನತೆ ತಾಯೆನಗೆಗೂಡಿ ನೋಡಿ' (ಜೈ.ಭಾ. 1-4). ಇಲ್ಲಿ ವಿರೂಪಾಕ್ಷ ಪಂಡಿತ ಮತ್ತು ಲಕ್ಷ್ಮೀಶರು ಹೇಳುವ 'ಎಲ್ಲಾ ಸುಜನರು' ಮತ್ತು 'ಸಕಲ ಜನರು' ಎಂಬ ಮಾತುಗಳು ಇನ್ನಷ್ಟು ಮತ್ತಷ್ಟು ವ್ಯಾಪ್ತವಾದ ಸಹೃದಯ ಸಮುದಾಯವನ್ನು ಬಿಂಬಿಸುತ್ತವೆ. ಎಲ್ಲ ರೀತಿಯ ಸಹೃದಯರು/ಸುಜನರು ನಮ್ಮ ಕಾವ್ಯವನ್ನು ಓದಲಿ ಎಂದು ಇವರು ಆಶಿಸುತ್ತಾರೆ. ಈ ಎಲ್ಲ ಅಂದರೆ ಎಲ್ಲ ಶೈವರೋ? ಇದು ವಿಚಾರಾರ್ಹ.

ಓದು ಮತ್ತು ಕೇಳು ಸಂಸ್ಕೃತಿಯು ಕೀಳಾಗಿರುವ ಬಗ್ಗೆ ರತ್ನಾಕರ ಪ್ರತಿಕ್ರಿಯಿಸಿದ್ದಾನೆ. 'ನಡುಸಣ್ಣ, ಮುಡಿತೋರ, ನುಣುಪಾದ ತೊಡೆ, ದಪ್ಪ ಮೊಲೆ ಎಂದರೆ ಅರೆಬಾಯ ಬಿಟ್ಟು ಮಿಡುಕದೆ ಕೇಳುವವರುಂಟು, ರಣಕತೆ, ಜಾರ-ಚೋರರ ಕತೆ, ಸ್ಮರಕತೆ, ಗಣಿಕಾ ಕತೆಗೆ ಸೋತು ಜನರು ಗಣನೆಯಿಲ್ಲದೆ ಭವಕ್ಕೆ ಒಳಗಾಗುತ್ತಾರೆ...' (ಭ.ವೈ. 2-50 ಮತ್ತು 2-53). ಆಧ್ಯಾತ್ಮ, ಭಕ್ತಿಗಳನ್ನು ನಮ್ಮ ಕವಿಗಳು ಎಷ್ಟೇ ಹೇಳಲಿ ಆ ವಿಚಾರವನ್ನು ಕೇಳುವ ಜನವರ್ಗ ಯಾವತ್ತೂ ಇರುತ್ತಿತ್ತು. ಆದರೆ ಮಿತಿಮೀರಿದ ಶೃಂಗಾರ, ವೀರ, ರೌದ್ರಗಳನ್ನು ಹೇಳುವವರೂ ಇದ್ದರು. ಕೇಳುವವರೂ ಇದ್ದರು. ಜಾರ, ಚೋರ, ಸ್ಮರ, ಗಣಿಕಾ ಕತೆಗಳು ಕೂಡ ತಮ್ಮದೇ ಓದುಗ ವರ್ಗವನ್ನು ಹೊಂದಿದ್ದವು. ಅಂಥ ಓದು-ಕೇಳು ಸಂಸ್ಕೃತಿಯ ಬಗ್ಗೆ ರತ್ನಾಕರ ಬಿರುಸಾಗಿ ಮಾತನಾಡುತ್ತ, ಭಕ್ತಿ-ಆಧ್ಯಾತ್ಮಿಕ ವಿಚಾರಗಳನ್ನು ಜನ ಕೇಳಬೇಕೆಂಬ ತತ್ವವನ್ನು ಪ್ರತಿಪಾದಿಸುತ್ತಾನೆ. ನಮ್ಮ ಕವಿಗಳು ಏನೇ ಹೇಳಿರಲಿ, ನಮ್ಮವರ ಹಸ್ತಪ್ರತಿಗಳ ಸೂಳೆಗೇರಿ ವರ್ಣನೆ, ಶೃಂಗಾರ ವರ್ಣನೆಗಳಿರುವ ತಾಳೆಗರಿಗಳು ಮತ್ತೆ ಮತ್ತೆ ತಿರುತಿರುವಿ ಹಾಕಲ್ಪಟ್ಟು ಸವೆದಿರುವುದಂತೂ ನಿಜ.

**1.13. ಭಾಷಾ ಮೀಮಾಂಸೆ**

ಭಾಷೆಯನ್ನು ಕಾವ್ಯದಲ್ಲಿ ಬಳಸುವ ಬಗೆಗೆ, ಕಾವ್ಯಶೈಲಿ, ರೀತಿ, ಕಾವ್ಯಪದಪ್ರಯೋಗಗಳ ಬಗೆಗೆ ತಮ್ಮದೇ ಅಭಿಪ್ರಾಯಗಳನ್ನು ನಮ್ಮವರು ಪ್ರಕಟಪಡಿಸಿದ್ದಾರೆ. ಭಾಷೆ-ಪದಪ್ರಯೋಗದ ಬಗ್ಗೆ ಲಕ್ಷ್ಮಣರೇಖೆಯ ರೀತಿಯ ಸಿದ್ಧಾಂತವನ್ನು ಯಾರೂ ಪ್ರಕಟಿಸಿಲ್ಲ. ಆಂಡಯ್ಯನೊಬ್ಬ ಮಾತ್ರ ಸಂಸ್ಕೃತದ ಸಹಾಯವಿಲ್ಲದೆ ಬರಿ ಕನ್ನಡದಲ್ಲಿಯೆ ಕಾವ್ಯ ಬರೆಯಬೇಕು, ಕನ್ನಡ ಮತ್ತು ಸಂಸ್ಕೃತಗಳನ್ನು ಬೆರೆಸಬಾರದು ಎಂಬ ಸಿದ್ಧಾಂತವನ್ನು ಮಂಡಿಸಿದ್ದಾನೆ. ಅದನ್ನು ತಾನೇ ಆಚರಿಸುವಂತೆ ಕಬ್ಬಿಗರ ಕಾವವನ್ನು ಬರೆದೂ ಇದ್ದಾನೆ. 'ಸೊಗಯಿಪ ಸಕ್ಕದಮಂ ಬೆರೆಸಿದಲ್ಲದೆ ಕನ್ನಡದಲಿ ಕಬ್ಬಂ ಬಗೆಗೊಳೆ' (ಕ.ಕಾ.1-15)ಹೇಳಿದ ಕವಿಗಳು ಕನ್ನಡದಲ್ಲಿ ಇದುವರೆಗೆ ಯಾರೂ ಇಲ್ಲ ಎಂದು ಆಂಡಯ್ಯ ಹೇಳುತ್ತಾನೆ. ಕನ್ನಡ ಕಾವ್ಯ ಪರಂಪರೆಯನ್ನು ಭಾಷೆಯ ದೃಷ್ಟಿಯಿಂದ ಓದಿ ಮಾಡಿದ ಒಂದು ವ್ಯಾಖ್ಯಾನ ಇದಾಗಿದೆ. ಕನ್ನಡದ ವ್ರತ ಹಿಡಿದವನಂತೆ ಆಂಡಯ್ಯ 'ಅಚ್ಚಗನ್ನಡ ಬಿಗಿವೊಂದಿರೆ' (1-16) ಕಬ್ಬಿಗರ ಕಾವ ಬರೆದಿದ್ದಾನೆ. ಇದೊಂದು ವಿಶಿಷ್ಟ ಸೈದ್ಧಾಂತಿಕ ಪ್ರಯೋಗವೇ ವಿನಾಃ ಇದರಿಂದ ಯಾವ ಕಾವ್ಯಸಾಧನೆಯೂ ಆಗಲಿಲ್ಲ ಎಂಬುದು ಬೇರೆ ಮಾತು. ಆದರೆ ನಮ್ಮಲ್ಲಿ ಅತಿಯಾಗಿ ಸಂಸ್ಕೃತ ಕನ್ನಡವನ್ನು ಬೆರೆಸುವ ಬಗ್ಗೆ ವಿರೋಧವಂತೂ ಹಲವಾರು ಕವಿಗಳಲ್ಲಿ ಇದೆ.

ಪೊಸಗನ್ನಡದಿಂ ವ್ಯಾವ/ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ/ತಿಸಿ
ಕೂಡಲಾರದಕ್ಕಟ ಮಿಸುಕದ ಸಕ್ಕದಮನಿಕ್ಕುವನುಂ ಕವಿಯೇ? (ಧರ್ಮಾ. 1-42)

ಸಕ್ಕದಮಂ ಪೇಳ್ವೊಡೆ ನೆರೆ/ಸಕ್ಕದಮಂ ಪೇಳ್ಗೆ ಸುದ್ಧಗನ್ನಡ ದೊಳ್ತಂ/ದಿಕ್ಕುವುದೇ
ಸಕ್ಕದಮಂ/ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾ. 1-42)

ಕನ್ನಡ ಮತ್ತು ಸಂಸ್ಕೃತಗಳನ್ನು ಬೆರೆಸುವುದನ್ನು ಕಟುವಾಗಿ ವಿರೋಧಿಸಿದವರಲ್ಲಿ ಆಂಡಯ್ಯನನ್ನು ಬಿಟ್ಟರೆ

ನಯಸೇನ ಮುಖ್ಯನು. ಸಂಸ್ಕೃತದಲ್ಲಿ ಹೇಳುವುದಾದರೆ ಸಂಸ್ಕೃತದಲ್ಲಿ ಹೇಳಿ. ಆದರೆ ಎಣ್ಣೆಯನ್ನು ತುಪ್ಪವನ್ನು ಯಾಕೆ ಬೆರೆಸುತ್ತೀರಿ ಎಂದು ಕೇಳುವ ನಯಸೇನ ಭಾಷೆಗಳು ಎಂದರೆ ಒಂದಕ್ಕೊಂದು ಹೊಂದಿಕೆಯಾಗದ ಎರಡು ಭಿನ್ನವಸ್ತುಗಳೆಂಬಂತೆ ಹೇಳುತ್ತಾನೆ. ಇವನ ಹಾಗೆಯೇ ಕನ್ನಡವನ್ನು ಅಭಿಮಾನದಿಂದ ಹಿಡಿದು ಮಾತನಾಡಿರುವ ಕವಿಯೆಂದರೆ ಮಹಲಿಂಗರಂಗ. ಆತ 'ಲಲಿತವಹ ಕನ್ನಡದ ನುಡಿಯಲಿ ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ? ಸಂಸ್ಕೃತದೊಳಿನ್ನೇನು?' ಎಂದು ಕೇಳುತ್ತಾನೆ. ಸಂಸ್ಕೃತ ಭೂಯಿಷ್ಠವಾದ ಕಾವ್ಯಭಾಷೆ ಬಳಸಿ ಕಾವ್ಯ ಬರೆದರೆ ಅಂತಸ್ತು, ಗೌರವ ಹೆಚ್ಚಾಗುತ್ತದೆ. ಕನ್ನಡವನ್ನು ಅದರಲ್ಲೂ ಸರಳಗನ್ನಡವನ್ನು ಬಳಸಿ ಎಲ್ಲರಿಗೂ ಅರ್ಥವಾಗುವಂತೆ ಬರೆದರೆ ಅದು ಕೀಳರಿಮೆಯ ಸಂಗತಿ ಎಂಬ ಭಾಷಾ ತರತಮ ನಂಬಿಕೆಯನ್ನು ಇವರೆಲ್ಲ ವಿರೋಧಿಸಿದ್ದಾರೆ.

ಆದರೆ ಆಡುಮಾತನ್ನು ಬಳಸುವ ಬಗ್ಗೆ, ಹೊಸ ದೇಸಿಯನ್ನು ಬಳಸುವ ಬಗ್ಗೆ, ತಮ್ಮ ತಮ್ಮ ಪ್ರದೇಶದ ನಾಣ್ನುಡಿಯನ್ನು ಬಳಸುವ ಬಗ್ಗೆ ಬಹಳಷ್ಟು ಕವಿಗಳು ಹೇಳುತ್ತ ಬಂದಿದ್ದಾರೆ. 'ಸಾಜದ ಪುಲಿಗೆರೆಯ ತಿರುಳ್ಗನ್ನಡ'ದ ಮಾತಾಡುವ ಪಂಪ, 'ನಾಳ್ನುಡಿಯ ಬೆಡಂಗಿನ' ಬಗ್ಗೆ ಮಾತನಾಡುವ ಶ್ರೀವಿಜಯ ಮೊದಲಾದ ಕವಿಗಳು ಪೊಸಗನ್ನಡ, ತಿರುಳ್ಗನ್ನಡ, ಬೆಳುಗನ್ನಡ, ಸುದ್ದಗನ್ನಡ, ಲಲಿತವಹ ಕನ್ನಡ, ಪೊಸದೇಸಿ, ಪೊಚ್ಚ ಪೊಸದೇಸೆ, ದೇಸಿಯೊಳ್ ಪುಗುವುದು, ಇತ್ಯಾದಿಯಾಗಿ ಹೇಳುತ್ತ ಆಡುನುಡಿಯ ಬಳಕೆಯೇ ಕಾವ್ಯದಲ್ಲಿ ಉನ್ನತವಾದದ್ದು ಎಂಬುದನ್ನು ಪ್ರತಿಪಾದಿಸಿದ್ದಾರೆ.

'..ಮಾತನಾಡಿದವೊಲಂದವನಾಳ್ದಿರೆ ಬಲ್ಪು ನೆ/ಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳುಂ' (ಕ.ಕಾ. 1-15) ಈ ಮೆಲಿನ ಕಬ್ಬಿಗರ ಕಾವದ ಆಂಡಯ್ಯನ ಅಗ್ಗಳಿಕೆಯ ಪದ್ಯದಲ್ಲಿ ಕಾವ್ಯದ ಭಾಷೆಯನ್ನು ಕುರಿತ ಒಂದು ಅತ್ಯಾಧುನಿಕ ಸೂತ್ರ ಅಭಿವ್ಯಕ್ತವಾಗಿರುವುದನ್ನು ಗಮನಿಸಬೇಕಾಗಿದೆ. 'ಕಾವ್ಯ ಮಾತನಾಡಿದವೊಲ್' ಇರಬೇಕು. ಎಂದರೆ ಕಾವ್ಯ ಭಾಷೆ ಜನ ಸಾಮಾನ್ಯರು ಮಾತನಾಡಿದ ಹಾಗೆ ಇದ್ದು ಅದು ಅಂದವನ್ನು ಒಳಗೊಂಡಿರಬೇಕು. ಅಂದರೆ ದೈನಂದಿನ ಭಾಷೆಗೆ ಇಲ್ಲದ ಅಂದ ಕವಿಯ ಅನುಭವದಿಂದ ಭಾಷೆಗೆ ಪ್ರಾಪ್ತವಾಗಬೇಕು. ಆಗ ಅದಕ್ಕೆ ಬಲ್ಪು ಅಂದರೆ ಒಂದು ವಿಶೇಷ ಶಕ್ತಿ ಪ್ರಾಪ್ತವಾಗುತ್ತದೆ ಎಂದು ಆಂಡಯ್ಯ ಹೇಳುತ್ತಾನೆ. 'ಜಗದೊಳ್ ಸನ್ನಿದಮಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತೆ ನೆಟ್ಟಗೆ ಮಾತನಾಡುವ ಬಲ್ಮೆ' (ಶೃಂ.ರ. 1-9) ಎಂಬ ಮಾತನ್ನು ಕವಿಕಾಮ ಆಡುತ್ತಾನೆ. ನಿತ್ಯದ ಆಡು ಮಾತುಗಳನ್ನು ಛಂದಸ್ಸಿಗೆ ಬರುವಂತೆ ಬರೆಯುವ ಸಾಮರ್ಥ್ಯವನ್ನು ಕಾವ್ಯ ಭಾಷೆ ಹೊಂದಿರಬೇಕು ಎಂಬುದು ಇವನ ಅಭಿಪ್ರಾಯ. ಅಂದರೆ ಲೋಕದ ಆಡುಮಾತನ್ನು ಒಂದು ಅಂದ ಕೊಟ್ಟು ಅದಕ್ಕೊಂದು ಶಕ್ತಿ ವಿಶೇಷ ಬರುವಂತೆ ಮಾಡಿ ಛಂದೋಬದ್ಧತೆಯಲ್ಲಿ ಕಾವ್ಯಭಾಷೆಯಾಗಿ ಬಳಸಬೇಕಾಗುತ್ತದೆ. ಇಲ್ಲಿ ಆಂಡಯ್ಯ ಮತ್ತು ಕವಿಕಾಮ ಹೇಳಿರುವ ವಿಚಾರಗಳನ್ನೇ ಸರ್ವಜ್ಞ, ಬಸವ, ಅಕ್ಕ, ಕನಕಾದಿಗಳು ಆಚಾರದಲ್ಲಿ ಅಳವಡಿಸಿಕೊಂಡಿದ್ದಾರೆ. ಇವರು ಕವಿತಾರಚನೆಗಳಲ್ಲಿ ಅಚ್ಚಗನ್ನಡ ಆಡುನುಡಿಯನ್ನೆ ತಮ್ಮ ಕಾವ್ಯ ಭಾಷೆಯನ್ನಾಗಿ ಬಳಸಿದ್ದಾರೆ. ಈ ಮೂಲಕ 1. ಆಡುನುಡಿಯನ್ನು ಕಾವ್ಯನುಡಿಯನ್ನಾಗಿ ಮಾರ್ಪಡಿಸುವ ಮತ್ತು 2. ಕಾವ್ಯಭಾಷೆಯನ್ನು ಸಂವಹನಶೀಲ (ಲಲಿತ) ಕನ್ನಡವನ್ನಾಗಿ ಕಟ್ಟುವ ತತ್ವಗಳೆರಡನ್ನೂ ಮಂಡಿಸಿದ್ದಾರೆ.

### 1.13.1. ಮೃದು ಪದರಚನೆ-ಕಿವಿಯ ಭಾಷೆ

'ಮೃದು ಪದಗತಿಯಿಂ ರಸಭಾವದ ಪೆರ್ಚಿಂ..' 'ಮೃದು ಮಧುರ ವಚನ ರಚನೆಯೊಳ್/ ಉದಾತ್ತಂ ಅರ್ಥಪ್ರತೀತಿಯಂ ಕೇಳ್ವ ಜನಕ್ಕೆ/ಇದಿರೊಳ್ ಕುಡದಂದದು ಕ/ಬ್ಬದೊಳಿರ್ದುಂ ಕವಿಯ ಮನದೊಳಿರ್ದಂತೆ ವಲಂ' 'ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪುಗುಗುಂ..' (ಆ.ಪು. 1-17 ರಿಂದ 19) ಈ ಎಲ್ಲ ಮಾತುಗಳಲ್ಲಿ ಪಂಪ ಕಿವಿ ಪ್ರಧಾನವಾದ ಕಾವ್ಯ ಭಾಷಾ ತತ್ವವನ್ನೆ ಮಂಡಿಸುತ್ತಿದ್ದಾನೆ. ಪ್ರಾಚೀನ ಕಾವ್ಯಗಳು ವಯಕ್ತಿಕವಾಗಿ ಮನದಲ್ಲಿಯೇ ಓದಿಕೊಳ್ಳುವ ಕಾವ್ಯಗಳು ಮಾತ್ರವಾಗಿರದೆ ಕೇಳು ಕಾವ್ಯಗಳು ಕೂಡ ಆಗಿದ್ದುದರಿಂದ ನಮ್ಮ ಕವಿಗಳು ಹೇಳು ಕಾವ್ಯಗಳನ್ನು ಬರೆದಿದ್ದಾರೆ. ಹಾಗಾಗಿ ನಮ್ಮವರ ಭಾಷಾ ಪ್ರಜ್ಞೆಯಲ್ಲಿ ಕಿವಿಯ ಭಾಷೆ ಮುಖ್ಯವಾಗಿ ಕೆಲಸ ಮಾಡಿದೆ. ಕರ್ಣರಸಾಯನವೆಂದು ತನ್ನ ಕಾವ್ಯವನ್ನು ಕರೆದಿರುವ ಪಂಪನಿಂದ ಹಿಡಿದು 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಂದ ಮುದ್ದಣನವರೆಗೆ ಕಿವಿ ಪ್ರಧಾನವಾದ ಭಾಷೆಗೆ ನಮ್ಮ ಕವಿಗಳು ಸಾಕಷ್ಟು ಒತ್ತು ನೀಡಿದ್ದಾರೆ. ಪಾರಾಯಣ, ಪಠಣ, ಗಮಕ ವಾಚನಗಳು ಮತ್ತು ಕೀರ್ತನ, ಸ್ವರಸಂಕೀರ್ತನಗಳ(ಸಂಗೀತ ಪದ್ಧತಿಯ ಹಾಡುಗಾರಿಕೆ) ಈ ಎಲ್ಲ ರೀತಿಯ

ಬಳಕೆಗಳಿಂದ ನಮ್ಮ ಕಾವ್ಯಗಳ ಭಾಷೆಗಳು ಪ್ರಭಾವಿತವಾಗಿವೆ. ಅರ್ಥಲಯ, ಭಾವಲಯ, ಪಾದಲಯ, ಅನುಪ್ರಾಸ ಹೀಗೆ ಹಲವು ರೀತಿಯ ನಾದಲಯಗಳಿಂದ ಕೂಡಿದ ನಾದಮಯತೆ ನಮ್ಮ ಕಾವ್ಯಗಳ ಪ್ರಧಾನ ಲಕ್ಷಣವಾಗಿದೆ. ಇದನ್ನೇ ನಮ್ಮ ಕವಿಗಳು ಮೃದು, ಮಧುರ ಪದರಚನೆ ಎಂದು ಕರೆದಿದ್ದಾರೆ.

ಮೃದುಮಯಮಪ್ಪ ಶಬ್ದತತಿ ಶಬ್ದಸಮಾಜದೊಳೊಂದಿದ ಅರ್ಥಂ
ಅರ್ಥದೊಳ್ ಅವಗಾಹಮಾಗಿ ಬಿಡದುಣ್ಮುವುದಗ್ರ ಸುಭಾವ ಭಾವದೊಳ್
ಪುದಿದ ರಸಂ ರಸಪ್ರಸರದೊಳ್ ಸವಿಸಂಗಳಿಪಂತೆ ಪೂಣ್ದು ಪೇ/ಳ್ವುದು
ಕೃತಿಯಂ ಚಮತ್ಕೃತಿಯೆನಲ್ ವಿಬುಧಾಳಿಗೆ ಸತ್ಕವೀಶ್ವರಂ (ಶಾಂ.ಪು. 1–56)

ಯಾವುದೇ ಕೃತಿಯು ಚಮತ್ಕೃತಿಯಂತೆ ಎಲ್ಲರಿಗು ಇಷ್ಟವಾಗಬೇಕಾದರೆ ಅದು ಮೊದಲಿಗೆ ಮೃದುಮಯವಾದ ಪದಪ್ರಯೋಗದಿಂದ ಕೂಡಿರಬೇಕು. (ಹೆಚ್ಚಿನ ವಿವರಗಳಿಗೆ ನೋಡಿ: ಕೇಳು ಕಾವ್ಯ ತತ್ವ)

### 1.13.2. ಅಸಂಧಿಗ್ದತೆ–ರಳಕುಳ ಕ್ಷಳ

'ರಳಕುಳ ಶಿಥಿಲ ಸಮಾಸ ಮುಂತಾದುವುಗಳಲ್ಲಿ ಕೆಲವು ಬಂದರೆ ಬರಬಹುದು. ಕೆಲವು ಇಲ್ಲವಾದರೆ ಇಲ್ಲ. ಹಾಡುಗಬ್ಬದಲ್ಲಿ ಇವುಗಳ ಕೋಟಲೆಯೇಕೆ?' (ಭ.ವೈ. 1–8) ರತ್ನಾಕರವರ್ಣಿ ಹೀಗೆ ಹೇಳಿದರೆ ಹರಿಹರ 'ನೋಡುವುದಕ್ಕೆ ರ ಮತ್ತು ಳಗಳು ಒಂದೇ ರೀತಿಯಾಗಿವೆ. ಆದರೆ ಉಚ್ಚಾರಣೆಯಲ್ಲಿ ಮಾತ್ರ ಬೇರೆ ಬೇರೆ. ರಳ ಕುಳ ಕ್ಷಳ ಈ ಮೂರನ್ನೂ ಈ ಕಾವ್ಯದಲ್ಲಿ ನಾನು ಬಳಸುವುದಿಲ್ಲ.' (ಗಿ.ಕ. 1–32) ಎಂದು ಹೇಳುತ್ತಾನೆ. ಆದರೆ ಸಾಳ್ವ 'ರಳ ,ಕುಳ, ಕ್ಷಳ, ಲತ್ವ, ರೇಫ, ಉಜ್ವಲವಾದ ಪ್ರಾಸ ಬೇಧಗಳು, ಸ್ವರ, ವ್ಯಂಜನ, ವಿಭಕ್ತಿ, ಸಮಾಸ, ಶಿಥಿಲದ್ವಿತ್ವಗಳು ಇವ್ಯಾವುದರ ಗೊಡವೆಯೂ ಹಾಡುಗವಿತೆಯಲ್ಲಿ ಬೇಕಾಗಿಲ್ಲ ಎಂಬ ಅಗ್ಗಳದ ಹಳೆ ಕವಿಗಳ ಹೇಳಿಕೆಯಂತೆ ನಾನು ಕಾವ್ಯ ರಚಿಸಿಲ್ಲ.' (ನೇ.ಚ. 1–45) ಎಂದು ಹೇಳುತ್ತಾನೆ. 'ಸಕಲ ಲಕ್ಷಣವು ವಸ್ತುಕಕೆ ವರ್ಣಕಕಕಿಷ್ಟು ವಿಕಳವಾದರು ದೋಷವಿಲ್ಲ.' ಮತ್ತು ಅಲಂಕಾರ, ಧ್ವನಿ, ಸಮಾಸ, ಸಂಧಿ, ವಿಭಕ್ತಿಗಳ ಗೊಡವೆ ಹಾಡುಗಬ್ಬದಲ್ಲೇಕೆ?' ಎಂಬ ಪೂರ್ವಿಕರ ಮಾತುಗಳಿಗೆ ಪ್ರತಿಕ್ರಿಯೆಯಾಗಿ ಸಾಳ್ವ ಹೀಗೆ ಹೇಳಿದ್ದಾನೆ. ತತ್ವಕ್ಕೆ ಯಾರು ಏನೇ ಹೇಳಿರಲಿ ಆಚಾರದಲ್ಲಿ ಅನೇಕ ಕವಿಗಳು ರಳ, ಕುಳ, ಕ್ಷಳಗಳ ಬೇಧಗಳನ್ನು ಪಾಲಿಸುತ್ತ ಬಂದಿದ್ದಾರೆ. ಹರಿಹರ ಇವುಗಳನ್ನು ಬಳಸುವುದಿಲ್ಲವೆಂದು ದಿಟ್ಟ ನಿರ್ಧಾರ ಕೈಗೊಂಡರೂ ಹರಿಹರನನ್ನು ಮೆಚ್ಚುವ ವೀರಶೈವ ಕವಿಗಳೇ ಅನಂತರದಲ್ಲಿ ಈತನ ನಿರ್ಧಾರವನ್ನು ಬೆಂಬಲಿಸಿಲ್ಲ. ಕಾವ್ಯಗಳನ್ನು ರಚಿಸಿದ ಕವಿಗಳಷ್ಟೆ ಅಲ್ಲ ಸ್ವರಪದಗಳನ್ನು ಸಂಕಲಿಸಿದ ಚೆನ್ನಂಜೆದೇವ, ಮಹಲಿಂಗ, ಜಕ್ಕಣಾರ್ಯಾದಿಗಳು ಕೂಡ ಈ ರಳ ಕುಳ ಬೇಧಗಳನ್ನು ಅನುಸರಿಸಿದ್ದಾರೆ. ಈ ವರ್ಣಬೇಧ ಪ್ರಯೋಗವು ಪಾಂಡಿತ್ಯದ ಪ್ರತೀಕದಂತೆ ಕವಿಗಳನ್ನು ಕಾಡಿದೆ. ಪರಂಪರೆಯುದ್ದಕ್ಕು ಹಲವರು ಇವುಗಳನ್ನು ಬಿಡುವ ಮತ್ತು ಒಳಗೊಳ್ಳುವ ಎರಡೂ ನಿರ್ಧಾರಗಳನ್ನು ಆಚರಿಸಿದ್ದಾರೆ. ಮತ್ತು ತತ್ವದಲ್ಲಿಯೂ ಹೇಳಿದ್ದಾರೆ.

ನಾಗವರ್ಮ, ಕೇಶೀರಾಜ ಇಂಥ ಶಾಸ್ತ್ರಕಾರರು ಬದಲಾಗುತ್ತಿರುವ ಭಾಷೆಯ ಬಗ್ಗೆ, ಹೊಲಗೆಡುತ್ತಿರುವ ಹಳಗನ್ನಡದ ಬಗ್ಗೆ ಸಾಕಷ್ಟು ಹೇಳಿದ್ದಾರೆ. ಕವಿಗಳು ವಿವೇಚನೆಯಿಲ್ಲದೆ ವರ್ಣ, ಪದ ಪ್ರಯೋಗ ವಿವೇಕ ಇಲ್ಲದೆ ಭಾಷೆಯನ್ನು ಕೆಟ್ಟದಾಗಿ ಬಳಸುತ್ತಾರೆ ಎಂದು ಆತಂಕ ವ್ಯಕ್ತಪಡಿಸಿದ್ದಾರೆ. ಛಂದಸ್ಸು, ವರ್ಣಮಾಲೆಯ ಅಕ್ಷರ ಪ್ರಜ್ಞೆ(ರಳ ಕ್ಷಳ ಕುಳ ರೇಫೆ ಲತ್ವಾದಿಗಳು), ಪದರೂಪ (ಕನ್ನಡ ಸಂಸ್ಕೃತ ಬೆರಕೆ, ಸಮಾಸ, ಸಮಸಂಸ್ಕೃತ), ವಾಕ್ಯಪ್ರಯೋಗ, ವಿಭಕ್ತಿ, ಲಿಂಗ, ವಚನಾದಿ ವ್ಯಾಕರಣ ಶುದ್ಧತೆ ಇವುಗಳನ್ನು ಕವಿಗಳು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ ಎಂದು ನಮ್ಮ ಶಾಸ್ತ್ರಕಾರರು ಅವಲತ್ತುಕೊಂಡಿದ್ದಾರೆ. ಕೆಲವರು ಇವನ್ನು ಗಂಭೀರವಾಗಿ ಪರಿಗಣಿಸಿ ಎಚ್ಚರದಿಂದ ಪಾಲಿಸಿದ್ದಾರೆ. ಆದರೆ ಕೆಲವರು ಈ ಮಾತುಗಳನ್ನು ಗಮನಕ್ಕೇ ತೆಗೆದುಕೊಂಡಿಲ್ಲ. ಹರಿಹರ, ವಚನಕಾರರು, ತತ್ವಪದಕಾರರು, ಸ್ವರವಚನಿಗಳು, ಕೀರ್ತನಕಾರರು ಇಂಥವರಿಗೆ ಈ ಯಾವ ಮಾತುಗಳೂ ಅನ್ವಯಿಸುವುದಿಲ್ಲ. ಕುಮಾರವ್ಯಾಸ ಕೂಡ ಆನೆ ನಡೆದುದೆ ಮಾರ್ಗ ಎಂಬಂತೆ ಭಾಷಾ ಪ್ರಯೋಗದ ವಿಚಾರದಲ್ಲಿ ಸಾಕಷ್ಟು ಸ್ವಾತಂತ್ರ್ಯ ವಹಿಸಿದ್ದಾನೆ. ಪದಕೂಟಗಳನ್ನು ರಚಿಸುವಲ್ಲಿ, ಸಮಾಸಗಳ ರಚನೆಯಲ್ಲಿ, ಪದಗಳನ್ನು ಬಿಡಿಸುವ ವಿಚಾರದಲ್ಲಿ (ವೀರನರಯಣ, ದುರುಪದಿ ಇತ್ಯಾದಿ) ಭಾಷೆಯ ಸ್ಥಾಪಿತ ನಿಯಮಗಳನ್ನು ಮೀರಿದ್ದಾನೆ. ಛಂದಸ್ಸು, ಪ್ರಾಸಗಳ ಎದುರಿಗೆ ತನ್ನದೇ ಕಾವ್ಯಭಾಷಾ ನೀತಿಯೊಂದನ್ನು ಪ್ರಕಟಿಸಿದ್ದಾನೆ.

ಭಾಷಾ ತತ್ವ ವಿಚಾರದಲ್ಲಿ ನಮ್ಮ ಪ್ರಾಚೀನರಲ್ಲಿ ಒಮ್ಮತಾಭಿಪ್ರಾಯ ಇಲ್ಲ. ತತ್ವ ಮತ್ತು ಆಚಾರ ಎರಡೂ ನೆಲೆಯಲ್ಲಿ ಸಾಕಷ್ಟು ಭಿನ್ನಾಬಿಪ್ರಾಯಗಳಿವೆ. ಹಾಗೆ ನೋಡಿದರೆ ನಮ್ಮವರು ಬರಿ ಭಾಷೆಗೆ ಮಾತ್ರವಲ್ಲ, ಪ್ರತಿಯೊಂದು ವಿಚಾರದಲ್ಲೂ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದಾರೆ. ಒಂದು ಕಡೆ ಯಾವುಯಾವುದೊ ಸಿದ್ಧಾಂತ ಕಾಣಿಸಿಕೊಂಡರೆ ಇನ್ನೆಲ್ಲೊ ಇನ್ನೊಂದು ಸಿದ್ಧಾಂತ ಎದುರು ಬರುತ್ತದೆ. ಹಾಗಾಗಿ ನಮ್ಮವರದು ಪ್ರತಿಯೊಂದರಲ್ಲೂ ಬಹುರೂಪಿ ತಾತ್ವಿಕತೆ. ವ್ಯವಸ್ಥಿತವಾಗಿ ಸಿದ್ಧಾಂತಗಳನ್ನು ಮಂಡಿಸುವ ಉದ್ದೇಶದಿಂದ ನಮ್ಮವರು ಈ ಮಾತುಗಳನ್ನು ಬರೆದಿಲ್ಲ. ಕಾವ್ಯ ಸಂದರ್ಭ, ಧರ್ಮ-ಭಕ್ತಿ-ಪ್ರಭುತ್ವಾದಿ ಒತ್ತಡಗಳಿಂದ ಬರೆದಿರುವ ಈ ಮಾತುಗಳಲ್ಲಿ ಆಯಾ ಕಾಲ ಮತ್ತು ಕಾವ್ಯ ಸಂದರ್ಭಗಳು ಹೆಚ್ಚಾಗಿ ಕೆಲಸ ಮಾಡಿವೆ. ಹಾಗಾಗಿ ಇವುಗಳನ್ನು ತಾತ್ವೀಕರಿಸಿಕೊಳ್ಳುವಾಗ ಪರಸ್ಪರ ವೈರುಧ್ಯತೆಗಳು ಕಾಣುವುದು ಸಹಜ. ಸಾವಿರಕ್ಕು ಹೆಚ್ಚು ವರ್ಷಗಳಲ್ಲಿ ಯಾವ ಯಾವುದೋ ಸಂದರ್ಭಗಳಲ್ಲಿ ಪ್ರಕಟವಾಗಿರುವ ಮಾತುಗಳಲ್ಲಿ ಬಹುರೂಪಿ ತಾತ್ವಿಕತೆ ಇರುವುದು ಸಹಜವಾದುದು. ಇದು ನಮ್ಮ ಪ್ರಾಗ್ವಿಮರ್ಶೆಯ ಚಹರೆಯೂ ಹೌದು.

**1.13.3. ಪಾರದರ್ಶಕತೆ-ಸಂವಹನಶೀಲತೆ-ಸೂಕ್ತಿಗರ್ಭಿತೆ**

'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಸ್ಪಟಿಕದ ಶಲಾಕೆಯಂತಿರಬೇಕು' ಎಂಬ ಬಸವಣ್ಣನ ವಚನದಲ್ಲಿ ನುಡಿಯುವುದು ಎಂದರೆ ಕಾವ್ಯವನ್ನು ರಚಿಸುವುದು/ಹೇಳುವುದು ಮತ್ತು ಕಾವ್ಯದಲ್ಲಿ ಭಾಷೆಯನ್ನು ಬಳಸುವುದು ಎಂಬ ಎರಡೂ ಅರ್ಥಗಳಿವೆ. ಭಾಷೆ ಮತ್ತು ಕಾವ್ಯ ಸ್ವರೂಪ ಎರಡೂ ನೆಲೆಯಲ್ಲಿ ಪಾರದರ್ಶಕತೆ ಮತ್ತು ಸಂವಹನಶೀಲತೆ ಇರಬೇಕು ಎಂಬುದಿಲ್ಲಿ ಬಸವಣ್ಣನ ತತ್ವ. ಇದನ್ನು ಬಸವಣ್ಣ ಆಚರಣೆಗೂ ತಂದಿದ್ದಾನೆ ಎಂಬುದರಲ್ಲಿ ಎರಡು ಮಾತಿಲ್ಲ. 'ತಾಳ ಮಾನವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ ಆನು ಒಲಿದಂತೆ ಹಾಡುವೆ' ಎಂಬ ಬಸವನ ಮಾತು ಛಂದಸ್ಸನ್ನು ಮೀರಿದ ಬರವಣಿಗೆ ನನ್ನದು ಎಂಬ ಅಭಿಪ್ರಾಯದ ನುಡಿ ಅಲ್ಲ. ಸ್ವರ ಪದಗಳನ್ನು ರಾಗ ತಾಳ ಬದ್ಧವಾಗಿ ರಚಿಸುತ್ತಿದ್ದ ಸಂಪ್ರದಾಯಕ್ಕೆ ಬಸವಣ್ಣ ನೀಡಿರುವ ಪ್ರತಿಕ್ರಿಯೆ ಇದು. ಆದಾಗ್ಯೂ ಸ್ವರಪದಗಳನ್ನು (ಸ್ವರವಚನಗಳನ್ನು) ಬಸವಣ್ಣ ತಾಳ ರಾಗಗಳಿಗೆ ಬದ್ಧವಾಗಿ ರಚಿಸಿದ್ದಾನೆ.[13]

> ಮಾತು ಮಾಣಿಕ ಮುತ್ತು ಮಾತೆ ತಾ ಸದರವು
> ಮಾತಾಡಿದಂತೆ ನಡೆದಾತ ತಾ ಜಗವನು
> ಕೂತಲ್ಲೆ ಆಳ್ವ ಸರ್ವಜ್ಞ



ಸರ್ವಜ್ಞನ ಈ ವಚನ ಬಸವಣ್ಣ ನ 'ನುಡಿದರೆ ಮುತ್ತಿನ ಹಾರದಂತಿರಬೇಕು..' ಎಂಬ ವಚನದ ಧೋರಣೆಯದ್ದೇ ಆಗಿದೆ. ಸರ್ವಜ್ಞನ ಪ್ರಕಾರ ಮಾತು ಎಂದರೆ ಕಾವ್ಯ, ಮಾತು ಎಂದರೆ ನಾವು ವ್ಯವಹಾರದಲ್ಲಿ ಬಳಸುವ ಭಾಷೆ. ಹಾಗೇ ಕಾವ್ಯದ ಭಾಷೆ. ಈ ಮೂರೂ ಮುತ್ತಿನಂತೆ, ಮಾಣಿಕದಂತೆ ಇರಬೇಕು. ಪಂಪ ತನ್ನ ಕಾವ್ಯವನ್ನು 'ವಾಕ್ಯಮಾಣಿಕ್ಯಕೋಶ' ಎಂದು ಕರೆದು ಕೊಂಡಿದ್ದಾನೆ. ಅಂದರೆ ಅವನ ಕಾವ್ಯದ ಒಂದೊಂದು ಮಾತೂ ಮಾಣಿಕ್ಯದಂತೆ 'ಸೂಕ್ತಿ ಗರ್ಭಿತ'ವಾದ ಮಾತುಗಳು. ಅಂದರೆ ಕಾವ್ಯದ ಭಾಷೆ ಹೀಗೆ ಬರಿ ಪಾರದರ್ಶಕ ಮತ್ತು ಸಂವಹನಶೀಲ ಅಷ್ಟೇ ಅಲ್ಲ ಅದು ಹಿರಿದಾದದ್ದನ್ನು ಕಿರಿದಾದದ್ದರಲ್ಲಿ ಅಭಿವ್ಯಕ್ತಿಸುವ ಶಕ್ತಿ ಉಳ್ಳ ಸೂಕ್ತಿ ರೂಪಿ ಆಗಿರಬೇಕು ಎಂಬುದು ನಮ್ಮ ಕವಿಗಳ ಇನ್ನೊಂದು ಭಾಷಾತತ್ವ

ಸರ್ವಜ್ಞ ಮತ್ತು ಬಸವನ ಎರಡೂ ವಚನಗಳಲ್ಲಿ ನಡೆ ಮತ್ತು ನುಡಿಗಳ ಪ್ರಸ್ತಾಪ ಬರುತ್ತದೆ. ಕಾವ್ಯದ ಭಾಷಾರೂಪ ಮತ್ತು ಬದುಕಿನ ನಡೆ ಹಾಗೂ ಮನುಷ್ಯನ ನಡೆ ಮತ್ತು ನುಡಿಗಳಲ್ಲಿ ಸಾಮ್ಯ ಇರಬೇಕೆಂದು ಈ ಮಾತುಗಳು ಒತ್ತಾಯಿಸುತ್ತವೆ. ಬರೆಯುವುದು ಒಂದು ಬದುಕುವುದು ಒಂದು ಆಗಬಾರದು ಎಂಬ ಹಾಗೆಯೇ ಬದುಕು ಇರುವಂತೆಯೇ ಕಾವ್ಯ ಇರಬೇಕು ಅಲ್ಲವೇ? (ಇನ್ನಷ್ಟು ವಿವರಗಳಿಗೆ ನೋಡಿ; ನೈತಿಕತೆ ಮತ್ತು ಕಾವ್ಯ) ಹೀಗೆ ನಮ್ಮವರು ಭಾಷೆಯ ತತ್ವವು ಬದುಕಿನ ತತ್ವವೂ ಹೌದು. ಕಾವ್ಯವೆಂದರೆ ಅದು ಬಾಳು.

**13.4. ಭಾಷೆಯೆಂದರೆ ಕಾವ್ಯ-ನವೀನ ಭಾಷಾ ನಿರ್ಮಾಣ**

'ಪರರ ವಸ್ತುವನ್ನು ತೆಗೆದುಕೊಂಡು ಕೃತಿಯನ್ನು ಹೇಳದಿರುವ ಭಾಷೆ, ಪರರ ಕಾವ್ಯಾರ್ಥಗಳನ್ನು ಛಿದ್ರಿಸದಿರುವ ಭಾಷೆ, ಪರರ ದೈವಗಳನ್ನು ಸ್ತುತಿಸದಿರುವ ಭಾಷೆ, ಪರರ ಕ್ಲೇಶಗಳನ್ನು ನೋಡದ ಭಾಷೆ,

ಪರರನ್ನು ನಿಂದಿಸಿ ತನ್ನನ್ನು ಹೊಗಳಿಕೊಳ್ಳದ ಭಾಷೆ, ಪರರ ಹೆಣ್ಣನ್ನು ಕಂಡು ಮನಸೋಲದೆ ಇರುವ ಭಾಷೆ, ಪರರ ವಸ್ತುವನ್ನು ತೃಣಕ್ಕೆ ಸಮಾನವೆಂದು ನೋಡುವ ಭಾಷೆ ಇದು ರಾಘವಾಂಕನಿಗೆ ಸಂದ ಬಾಷೆ' (ಹ.ಕಾ.1–16) ಭಾಷೆ ಎಂದರೆ ಅದು ಶೈಲಿ; ಭಾಷೆ ಎಂದರೆ ಅದು ಶೀಲ; ಭಾಷೆ ಎಂದರೆ ಅದು ಸಂಕಲ್ಪ; ಭಾಷೆ ಎಂದರೆ ಅದು ಸಂಯಮ–ನೀತಿಬದ್ಧತೆ; ಭಾಷೆ ಎಂದರೆ ಅದು ಸ್ವಂತಿಕೆ; ಭಾಷೆ ಎಂದರೆ ಅದು ಸ್ವಾವಲಂಬನೆ; ಭಾಷೆ ಎಂದರೆ ಅದು ಸ್ವಾನುಭವದ ಅಭಿವ್ಯಕ್ತಿ; ಭಾಷೆ ಎಂದರೆ ಅದು ಒಟ್ಟಾರೆ ಕಾವ್ಯ ಮತ್ತು ಬದುಕು. ರಾಘವಾಂಕ ಇಷ್ಟೆಲ್ಲ ವಿಚಾರಗಳನ್ನು ಸೂತ್ರಪ್ರಾಯವಾಗಿ ಒಂದೇ ಪದ್ಯದ ಮೂಲಕ ಹೇಳಿದ್ದಾನೆ. ಈ ರಾಘವಾಂಕನ ಅಭಿಪ್ರಾಯವನ್ನು ನಮ್ಮ ಬಹುತೇಕ ಕವಿಗಳು ಆಚರಣೆಯಲ್ಲಿ ಪಾಲಿಸಿದ್ದಾರೆ.

ಸ್ವಂತಿಕೆಯ ತತ್ವ–ಸ್ವಧರ್ಮ ಬಿಟ್ಟು ಅನ್ಯವನ್ನು ಸ್ತುತಿಸದಿರುವ ನಿಯಮ, ಅನ್ಯಕನ್ಯೆಯರಿಗೆ ಆಶಿಸದ ಶೀಲ ಇತ್ಯಾದಿಗಳ ಬಗ್ಗೆ ನಮ್ಮ ಹಲವು ಕವಿಗಳು ತುಂಬ ಎಚ್ಚರದಿಂದ ಪ್ರತಿಕ್ರಿಯಿಸಿದ್ದಾರೆ. ರಾಘವಾಂಕ ಇಲ್ಲಿ ನಡೆ ನುಡಿಯ ಬಗ್ಗೆ–ಬದುಕು ಮತ್ತು ಕಾವ್ಯಗಳ ನಡುವಿನ ಸಂಬಂಧಗಳ ಬಗ್ಗೆ ಕೂಡ ಹೇಳಿದ್ದಾನೆ. ಕಾವ್ಯದ ಭಾಷೆ ಎಂದರೆ ಅದು ಬದುಕು ಮತ್ತು ಅಭಿವ್ಯಕ್ತ ಸಂಗತಿಗಳ ನಡುವಿನ ತಾದಾತ್ಮ್ಯ ಸಂಬಂಧ. ಇಲ್ಲಿ ಭಾಷೆ–ಭಾಷೆ ಎಂಬ ಮಾತಲ್ಲೆಲ್ಲ ಮುಖ್ಯವಾಗಿ ಎದ್ದು ಕಾಣುವುದು ಸ್ವಂತಿಕೆಯ ತತ್ವ ವಸ್ತು, ಶೈಲಿ, ಭಾವ, ಅರ್ಥಗಳ ಸ್ವಂತಿಕೆಯ ತತ್ವ. ಹಾಗೆಯೇ ಅನ್ಯ(?)–ಪರರ ಭಾಷೆಗಿಂತ ಭಿನ್ನವಾದ ತನ್ನದೇ ಭಾಷೆಯ ತತ್ವ. ಇಲ್ಲಿ ಕಾವ್ಯವೆಂದರೆ ಒಂದು ಹೊಸದಾದ ಭಾಷೆಯ ನಿರ್ಮಾಣ. ಇದು ಪಂಪನ ಕನ್ನಡ, ಇದು ಹರಿಹರನ ಕನ್ನಡ, ಇದು ರಾಘವಾಂಕ ಕನ್ನಡ, ಇದು ಕುವೆಂಪು ಕನ್ನಡ ಎಂಬಂತೆ ಕವಿಯು ತಾನೇ ಒಂದು ಭಾಷೆಯನ್ನು ಸೃಷಿಸಬೇಕು. ಅದು ಕವಿಯ ಸ್ವಂತಿಕೆ ಪ್ರತೀಕ ಆಗಬಲ್ಲುದು. ಇಂತಹ ಸ್ವಂತ ಭಾಷೆಯ ತತ್ವದ ಕುರಿತು ನಮ್ಮವರಲ್ಲಿ ಸಾಕಷ್ಟು ಎಚ್ಚರ ಇದೆ. ತಾತ್ವಿಕವಾಗಿ ಈ ಬಗ್ಗೆ ನಮ್ಮವರು ಹೆಚ್ಚಿಗೆ ಹೇಳದಿದ್ದರೂ ಆಚರಣೆಯ ಮೂಲಕ ಈ ತತ್ವವನ್ನು ಚೆನ್ನಾಗಿ ಪ್ರಕಟಿಸಿದ್ದಾರೆ. ಹರಿಹರನ ರಗಳೆಯ ಭಾಷೆ, ಬಸವನ ವಚನದ ಭಾಷೆ, ಪಂಪನ ಭಾಷೆ, ಕನಕ ಪುರಂದರರ ಭಾಷೆ, ರತ್ನಾಕರನ ಭಾಷೆ, ಹೀಗೆ ನಮ್ಮ ಪ್ರಾಚೀನರ ಆಚರಣೆಯಲ್ಲಿ ಹಲವು ಬಾಷೆಗಳು ನಿರ್ಮಾಣಗೊಂಡಿವೆ. ನವೀನ ಭಾಷಾ ನಿರ್ಮಾಣ ತತ್ವವು ನಮ್ಮ ಬಹುಪಾಲು ಕವಿಗಳ ಆಚರಣೆಯಲ್ಲಿ ಎದ್ದು ಪ್ರಕಟವಾಗಿದೆ.

### 1.14. ಗುಣ ದೋಷ ವಿಚಾರ

ಪೂರ್ವಕವಿ ಗುಣ ನಿರ್ವಚನ ಮಾಡುವಾಗ, ಪೂರ್ವಕವಿ ನಿರ್ವಚನ, ಪ್ರಶಂಸೆಗಳ ವಿಚಾರದಲ್ಲಿ ನಮ್ಮ ಕವಿಗಳು ಶಾಸ್ತ್ರಕಾರರಿಗಿಂತ ಭಿನ್ನವಾದ ಹಲವಾರು ಕಾವ್ಯಗುಣಗಳ ಬಗೆಗೆ ಮಾತನಾಡಿದ್ದಾರೆ. ನಮ್ಮ ಕಾವ್ಯಮೀಮಾಂಸಕರು ಗುಣದೋಷಗಳ ಬಗ್ಗೆ ಹೇಳುವುದನ್ನು ನಮ್ಮ ಕವಿಗಳು ತಿಳಿದಿದ್ದಾರೆ. ಆದರೆ ಅವರ ಗುಣದೋಷಗಳನ್ನು ತಮ್ಮ ಕಾವ್ಯದಲ್ಲಿ ಯಥಾವತ್ತಾಗಿ ಏನೂ ಇವರು ಚರ್ಚಿಸುವುದಿಲ್ಲ. ತಮ್ಮದೇ ಪರಂಪರೆಗಳ ಹಿನ್ನೆಲೆಯಲ್ಲಿ ತಮ್ಮದೇ ಅನುಭವಗಳ ಹಿನ್ನೆಲೆಯಲ್ಲಿ ಯಾವುದು ಕಾವ್ಯದ ಗುಣ ಯಾವುದು ಕಾವ್ಯದ ದೋಷ ಎಂದು ಸಾಕಷ್ಟು ಜಿಜ್ಞಾಸೆ ನಡೆಸಿದ್ದಾರೆ. ಕಾವ್ಯವನ್ನು ಹೇಗೆ ಬರೆಯಬೇಕು ಎಂಬ ತತ್ವದ ಒಂದು ಭಾಗವಾಗಿ ಈ ಗುಣದೋಷ ಜಿಜ್ಞಾಸೆ ಬರುತ್ತದೆ. ಈ ವಿಚಾರದಲ್ಲಿ 'ಮಿಥ್ಯಾಮಾರ್ಗವನ್ನು, ಲೌಕಿಕವೆಂಬ ಮಾಯೆಯನ್ನು, ತತ್ವ ವಿರುದ್ಧ ವಿಚಾರವನ್ನೂ, ಕುಮತವಿಚಾರವನ್ನೂ, ನಾನಾ ಕುಸ್ಪಷ್ಟ ಕುಹೇತುಕ ದೃಷ್ಟಾಂತಗಳನ್ನು, ಕುಮಾರ್ಗ, ಕುತ್ಸಿತ ಕುಭಾಷೆ ಇತ್ಯಾದಿ ದೋಷಗಳನ್ನು ಬಿಸುಟು ಸುಕಥಾಲಾಪವನ್ನೇ ಕೈಗೊಂಡು ಶಾಸ್ತ್ರಕವೀಂದ್ರರೂ, ವಸ್ತು ಕವೀಂದ್ರರೂ ಮೆಚ್ಚುವಂತೆ ಪದಾರ್ಥೋಕ್ತಿಯಿಂದ ಕಾವ್ಯವನ್ನು ಹೇಳಬೇಕು' (ಸು.ಚ. 1–46) ಎಂಬುದು ಶಾಂತಿನಾಥನ ಅಭಿಮತ. ಹೀಗೆ ಒಬ್ಬೊಬ್ಬರೂ ಕಾವ್ಯದ ಒಳ್ಳೆಯ ಗುಣಗಳು ಮತ್ತು ಕಾವ್ಯದ ದುಷ್ಟಲಕ್ಷಣ ಅಥವಾ ದೋಷಗಳ ಬಗ್ಗೆ ಸಾಮಾನ್ಯವೆಂಬಂತೆ– ಯಾವುದೇ ಸಿದ್ಧಾಂತಗಳ ಗೊಡವೆ ಇಲ್ಲದೆ; ಲಕ್ಷ್ಯಗಳ ಗೊಡವೆ ಇಲ್ಲದೆ ಚರ್ಚೆಮಾಡಿದ್ದಾರೆ. 'ದೇಸಿಯ ಗೊತ್ತು (ಸ್ಥಾನ), ಜಾಣ್ನುಡಿಯ ತಾಯಿಮನೆ, ಶ್ರೇಷ್ಠವಾದ ಅರ್ಥಗಳ ಏಳಿಗೆ' ಇವುಗಳೆಲ್ಲವೂ ಉನ್ನತ ಕಾವ್ಯದ ಗುಣಗಳು. (ಕ.ಕಾ. 1–271) ಇವುಗಳಿಂದ ಕೂಡಿರುವ ಆದರೆ ದೋಷದ ಮಾತೇ ಹತ್ತಿರ ಸುಳಿಯದಂತೆ ನಾನು ಕಾವ್ಯ ರಚಿಸುತ್ತೇನೆ ಎಂದು ಆಂಡಯ್ಯ ಹೇಳುತ್ತಾನೆ. 'ಲಲಿತ ಪದರಚನೆ ಮತ್ತು ಪ್ರಸನ್ನತೆ'ಗಳು ಕವಿತೆಯ ಗುಣಗಳು (ವಿ.ವಿ. 1–12) ಈ ಗುಣಗಳು ಇಲ್ಲದಿದ್ದರೆ ಅದು ಬರೆಯುವ ಕೈಗಳ ಕೇಡು. ಅರ್ಥದ ಕೇಡು ಎಂದೆಲ್ಲ ಪಂಪ ಹೇಳುತ್ತಾನೆ.

ಸುಲಕ್ಷಣವು ವಸ್ತುಕಕೆ, ವರ್ಣಕಕಿಷ್ಟು ವಿಕಳವಾದರು ದೋಷವಿಲ್ಲ.
ಸಕಲ ಲಕ್ಷಣಕಾಗಿ ಬಿರುಸು ಮಾಡಿದರೆ ಪುಸ್ತಕದ ಬದನೆಕಾಯಹುದು (ಭ.ವೈ.ಆ.ಸಂ. 9)

ಅಷ್ಟಾದಶ ವರ್ಣನೆಗಳನ್ನು ಮಾರ್ಗಕಾವ್ಯದ/ವಸ್ತುಕದ ಲಕ್ಷಣವಾಗಿ ನಮ್ಮ ಶಾಸ್ತ್ರಕಾರರು ವಿಧಿಸಿರುವುದುಂಟು. ಆದರೆ ಅದನ್ನು ನಮ್ಮ ಕವಿಗಳು ಚಾಚೂ ತಪ್ಪದೆ ಏನೂ ಅನುಸರಿಸಿಲ್ಲ. ಶಾಸ್ತ್ರಕಾರರು ಹೇಳುವ ಲಕ್ಷಣಗಳಿಗೆ ಕಟ್ಟುಬಿದ್ದರೆ ಅದು ಬರಿ ಪುಸ್ತಕದ ಬದನೆಕಾಯಿ ಆಗುತ್ತದೆ ಅಷ್ಟೆ. ಅತಿ ಲಕ್ಷಣಬದ್ಧತೆ ಕೂಡ ಕಾವ್ಯದ ದೋಷವೆ ಆಗಿದೆ ಎಂಬ ಪ್ರಜ್ಞೆ ನಮ್ಮ ಕವಿಗಳಲ್ಲಿ ಇದ್ದೇ ಇದೆ. ಹಾಗಾಗಿ ಕಾವ್ಯದ ಸನ್ನಿವೇಶ-ವಸ್ತುಗಳಿಗೆ ಅನುಗುಣವಾಗಿ ಲಕ್ಷಣಗಳು ಒದಗಬೇಕು ಎಂಬುದು ಇವರ ಔಚಿತ್ಯ ವಿವೇಕವಾಗಿದೆ. ಇಷ್ಟಕ್ಕೂ ಕಾವ್ಯ ರಚಿಸುವಾಗ ದೋಷಗಳು ಉಂಟಾಗುವುದೇ ಇಲ್ಲ ಎಂದೇನೂ ಅಲ್ಲ. 'ನಡೆವವರು ಎಡವುತ್ತಾರಲ್ಲದೆ ಕುಳಿತವರು ಎಡವಲು ಸಾಧ್ಯವೇ? ಕಾವ್ಯವನ್ನು ನಡೆಸುವಾತನ ರಸಾವೇಶ, ಮರಹು, ಆಲಸ್ಯ ಇವುಗಳಿಂದಾಗಿ ತಪ್ಪುಗಳು ಉಂಟಾಗಬಹುದಲ್ಲದೆ ಕಾವ್ಯಕರ್ತೃ ಎಲ್ಲಾದರೂ ಉದ್ದೇಶ ಪೂರ್ವಕವಾಗಿ ತಪ್ಪು ಮಾಡುತ್ತಾನೆಯೇ? ಒಂದೆರಡು ಕಡೆ ಹೇಗೋ ನುಸುಳಿದ ತಪ್ಪುಗಳನ್ನೇ ಹಿಡಿದು ಸಾಧಿಸದೆ, ಕಡೆತನಕ ಇರುವ ಲೇಸಿಗೆ ತಲೆದೂಗಿದರೆ ತಲೆಯೇನು ಒಡೆದು ಹೋಗುತ್ತದೆಯೇ? ಬೇನೆಯನ್ನು ಅರಿಯದ ನೀರಸರನ್ನು ಈ ಬ್ರಹ್ಮನು ಯಾಕೆ ತಾನೆ ಹುಟ್ಟಿಸಿದನೋ!' (ಹ.ಕಾ. 1-23 ಮತ್ತು ಸೋ.ಚಾ. 1-14) ಗುಣ ಮತ್ತು ದೋಷ ಎಂಬ ಪರಿಭಾಷೆಯನ್ನು ಇಲ್ಲಿ ರಾಘವಾಂಕ ಬಳಸದಿದ್ದರೂ ತಪ್ಪು ಮತ್ತು ಲೇಸು ಎಂಬ ಪರಿಭಾಷೆಗಳನ್ನು ಬಳಸುತ್ತಾನೆ. ಹೆರುವ ಬೇನೆ ಹೆರುವವಳಿಗೆ ಮಾತ್ರ ಗೊತ್ತೇ ವಿನಃ ಅನ್ಯರಿಗೆ ಅದು ತಿಳಿಯಲಾರದು. ಹಾಗಾಗಿ ಬರಿ ದೋಷಗಳನ್ನು ಮಾತ್ರವೆ ಹುಡುಕಿ ಹಳಿಯದೆ ಗುಣಗಳಿಗೆ ತಲೆದೂಗಬೇಕು ಎಂಬ ತನ್ನದೇ ಓದುಗ ತತ್ವವನ್ನು ರಾಘವಾಂಕ ಇಲ್ಲಿ ಮಂಡಿಸುತ್ತಿದ್ದಾನೆ. ಇವು ಕಾವ್ಯದ ಗುಣ ದೋಷಗಳ ಸಂಭವನೀಯತೆಯ ಮಾತುಗಳು ಹೇಗೋ ಹಾಗೇ ಕವಿಯ ಕಾವ್ಯವನ್ನು ಸಮರ್ಥಿಸುವ ರೀತಿಯ ಕಾವ್ಯ ಸಮರ್ಥನಾ ತತ್ವದ ಮಾತುಗಳೂ ಕೂಡ ಹೌದು.

### 1.14.1. ಅಮರ್ಕೆ ಅಥವಾ ಕಾಳಸೆಯ ತತ್ವ

ಗುಣದೋಷ ಚರ್ಚೆಯ ಮುಂದುವರಿದ ಭಾಗದಂತೆ ಕಾವ್ಯದಲ್ಲಿ ಅಮರ್ಕೆ ಅಥವಾ ಕಾಳಸೆ (ಹೊಂದಾಣಿಕೆ-ಪರಸ್ಪರ ಬೆಸುಗೆ)ಯ ತತ್ವ ನಮ್ಮವರಲ್ಲಿ ಸಾಕಷ್ಟು ಚರ್ಚೆಯಾಗಿದೆ. ಒಂದು ಕಾವ್ಯ ಉತ್ತಮ ಕಾವ್ಯ ಆಗಬೇಕಾದರೆ ಯಾವ್ಯಾವುದು ಹೇಗೆಲ್ಲ ಹೊಂದಿಕೊಂಡಿರಬೇಕು? ಯಾವುದು ಯಾವುದರ ಜೊತೆ ಬೆಸುಗೆಗೊಂಡು ಮೋಹಕವಾಗಬೇಕು? ಯಾವ ಯಾವ ಲಕ್ಷಣ, ಗುಣಗಳು ಹೇಗೆ ಹೇಗೆ ಬೆರೆತಿರಬೇಕು ಎಂಬ ಬಗ್ಗೆ ನಮ್ಮ ಕವಿಗಳಿಗೆ ಅವರದ್ದೇ ಆದ ಕಲ್ಪನೆಗಳಿವೆ. ಆ ಕಲ್ಪನೆಗಳನ್ನು ಸಾಕಾರಗೊಳಿಸಲು ಕಾವ್ಯಗಳ ಮೂಲಕ ಯತ್ನಿಸಿಯೂ ಇದ್ದಾರೆ. ಒಂದು ಉತ್ತಮ ಕಾವ್ಯವು ಹೇಗೆ ರಚಿತವಾಗಬೇಕು ಎಂಬ ತತ್ವ ಇಂಥ ಯತ್ನಗಳಲ್ಲಿ ಅಡಕವಾಗಿದೆ.

ಉನ್ನತವಾದ ಕಾವ್ಯ ಬಂಧವು ಹೇಗಿರಬೇಕು? 'ಬಗೆ ಪೊಸತಪ್ಪುದಾಗಿ, ಮೃದುಬಂಧದೊಳ್ ಒಂದುವುದು ಒಂದಿ, ದೇಸಿಯೊಳ್ ಪುಗುವುದು ಪೊಕ್ಕು, ಮಾರ್ಗದೊಳ್ ತಳ್ವುದು ತಳ್ತೊಡೆ ಕಾವ್ಯಬಂಧಂ ಒಪ್ಪುಗುಂ.. ಎಳಮಾವು.. ಸುಗ್ಗಿಯೊಳ್ ಒಪ್ಪವಂತೆವೋಲ್' (ವಿ.ವಿ. 1-8) ಬರೆಯುವ ಬಗೆ ಹೊಸದಾಗಿರಬೇಕು. ಈಗಾಗಲೇ ಬರೆದವರ ಬಗೆಯಲ್ಲೇ ಬರೆದರೆ ಆದು ಉನ್ನತ ಕಾವ್ಯವಾಗುವುದಿಲ್ಲ. ತಾನೇ ಒಂದು ಹೊಸ ಬರೆಯುವ ಬಗೆಯನ್ನು ಕವಿಯಾದವನು ಸೃಷ್ಟಿಸಬೇಕು. ಪದರಚನೆಯು ಮೃದುವಾಗಿಯೂ, ಮಧುರವಾಗಿಯೂ ಇರಬೇಕು, ದೇಸಿಯಲ್ಲಿ ಹೇಳಬಹುದಾದದ್ದನ್ನು ದೇಸಿಯಲ್ಲಿ, ಮಾರ್ಗದಲ್ಲಿ ಹೇಳಬಹುದಾದದ್ದನ್ನು ಮಾರ್ಗದಲ್ಲಿಯೂ ಹೇಳಬೇಕು. ಹಾಗೆ ಹೇಳಿದಾಗ ಸುಗ್ಗಿಯಲ್ಲಿ ಚಿಗುರಿದ ಎಳಮಾವು ಮನ ಮೋಹಿಸುವಂತೆ ಕಾವ್ಯವೂ ಸುಂದರವಾಗಿರುತ್ತದೆ ಎಂದು ಪಂಪ ಹೇಳುತ್ತಾನೆ. ಸರಿ ಸುಮಾರು ಇದೇ ರೀತಿಯ ಅಭಿಪ್ರಾಯವನ್ನು ಶಾಂತಿನಾಥನೂ ವ್ಯಕ್ತಪಡಿಸುತ್ತಾನೆ.

ರಸದೊಳಮರ್ಕೆ, ಬಿನ್ನದೊಳೊಟ್ಪಜೆ, ಮಾತಿನ ರೀತಿಯೊಳ್ ಚಲಂ,
ಕುಸಿವ ನಿಮಿರ್ಚುವೋಜೆಯೊಳುದಾತ್ತತೆ, ಸೂಕ್ತಿಯೊಳರ್ಥಯುಕ್ತಿ,
ಕಾಳಸೆಯೊಳಪೂರ್ವಭಂಗಿ, ಪೊಸದೇಸೆಯೊಳೊಂದಿದ ಮಾರ್ಗಂ
ಒಳ್ಪುವೆತ್ತೆಸೆದಿರೆ ಪೇಳ್ದುರಂಜಿಸದೆ ಕೆಮ್ಮನೆ ಬಲ್ಮೆಗೆ ಮುಯ್ಯನಾಂಪುದೇ (ಸು.ಚ. 1-44)

ಪರಸ್ಪರ ಬೆಸೆದುಕೊಂಡ ರಸಸಂಯೋಜನೆ, ಮಾರ್ಗದೊಳಗೆ ಹೊಂದಿಕೊಂಡ ಹೊಸದೇಸಿ, ಅರ್ಥಯುಕ್ತಿ

ತುಂಬಿಕೊಂಡ ಸೂಕ್ತಿ, ಏರಿಳಿಯುವ ಓಜೆಯಲ್ಲಿ ಉದಾತ್ತತೆ, ಕಾವ್ಯಬಂಧದ (ಕಾಳಸೆಯ) ಅಪೂರ್ವವಾದ ನಿಲುವು, ಬೇರೆ ಬೇರೆ ರೀತಿಗಳಲ್ಲಿ ಕಾಣುವ ಮೋಹಕತೆ, ಪದಪ್ರಯೋಗದಲ್ಲಿ ಚಲನಶೀಲತೆ, (ಒಳ್ಪು) ಗುಣಗಳು ತುಂಬಿದ ಕಾವ್ಯವು ಇವೆಲ್ಲವುಗಳಿಂದ ಶೋಭಿಸುವಂತೆ ರಚಿತವಾಗಬೇಕು ಎಂಬುದು ಶಾಂತಿನಾಥನ ಅಭಿಮತ. ಕಾಳಸೆ ಮತ್ತು ಅಮರ್ಕೆಗಳನ್ನು ಈತ ಪರಸ್ಪರ ಕಾವ್ಯದಲ್ಲಿ ಬೇರೆ ಬೇರೆ ಗುಣಗಳು ಹೊಂದಿಕೊಂಡಿರುವುದನ್ನು ಸೂಚಿಸಲು ಬಳಸುತ್ತಾನೆ. ಒಂದಕ್ಕೆ ಇನ್ನೊಂದು ಅನುಗುಣವಾಗಿ ಬೆಸೆದು ಹೊಸದೊಂದು ಅನುಭವವನ್ನು ಕಾವ್ಯವು ನೀಡಬೇಕು ಎಂಬುದು ಈತನ ಅಭಿಪ್ರಾಯ. ಹರಿಹರನೂ ಸರಿಸುಮಾರು ಇದೇ ರೀತಿಯ ಮಾತುಗಳನ್ನು ಆಡುತ್ತಾನೆ. ನಾನು ಹೇಗೆ ಬರೆಯುತ್ತೇನೆ ಎಂದು ಹೇಳುತ್ತ ಹರಿಹರ; 'ಅತಿಶಯವಾದ ಅರ್ಥ, ಅರ್ಥಕ್ಕನುಗುಣವಾದ ಪದ, ಆ ಪದಕ್ಕೆ ಅನುಗುಣವಾದ ಬಂಧ, ಆ ಊರ್ಜಿತ ಪದಬಂಧಕ್ಕೆ ಅನುಗುಣವಾದ ನವೀನ ರೀತಿ, ಆ ಒಳ್ಳೆಯ ರೀತಿಗೆ ಅನುಗುಣವಾದ ಗುಣ, ಗುಣಗಳಿಗೆ ಅನುಗುಣವಾದ ಅಲಂಕಾರಗಳು, ಅಲಂಕಾರಗಳಿಗೆ ಒಪ್ಪುವ ಭಾವ, ಆಯಾ ಭಾವಗಳಿಗೆ ಅನುಗುಣವಾದ ಉನ್ನತರಸಗಳು ಇವೆಲ್ಲವೂ ಕೂಡಿವೆಯೆಂದು ಸತ್ಕವಿಗಳು ಆದರಿಸುವಂತೆ ಈ ಪ್ರಬಂಧವನ್ನು ಹೇಳುತ್ತೇನೆ' ಎಂದು ಹೇಳುತ್ತಾನೆ. (ಗಿ.ಕ. 1–11)

ಹರಿಹರನು ಹೇಳುವ ಹಲವು ಗುಣಗಳ ಹೊಂದಾಣಿಕೆಯಲ್ಲಿ ಶಾಸ್ತ್ರಕಾರರು ಹೇಳುವ ಕಾವ್ಯಗುಣ ಕೂಡ ಇದೆ. ಒಟ್ಟಾರೆ ಕಾವ್ಯದ ಸಮಗ್ರ ಶಿಲ್ಪವು ಹಲವಾರು ಅಂಗಗಳಿಂದ ಕೂಡಿ ರೂಪಗೊಳ್ಳುವಂಥದ್ದು. ಅಂಗಗಳನ್ನು ಬಿಡಿಬಿಡಿಯಾಗಿ ಭಾವಿಸಿ ನೋಡಬಹುದಾದ ಸಾಧ್ಯತೆ ಇದ್ದು ಕಾವ್ಯವು ಒಟ್ಟಾರೆಯಾಗಿ ಒಂದು ತನ್ನದೇ ಆಕೃತಿಯನ್ನು ಹೊಂದಿರಬೇಕು. ಅಂತಹ ಆಕೃತಿಯ ಪದ, ಅರ್ಥ, ಭಾವ, ರೀತಿ ಗುಣ, ಅಲಂಕಾರ, ರಸ ಮುಂತಾದ ಅಂಗಗಳು ಪರಸ್ಪರ ಬೇರೆ ಬೇರೆ ಎಂಬಂತೆ ಇರದೆ ಹೊಂದಿಕೊಂಡು ಒಂದು ಮಹದನುಭವವನ್ನು ನೀಡಬೇಕು. ಇಂತಹ ಹೊಂದಾಣಿಕೆ ಮಹಾಕಥನವೊಂದಕ್ಕೆ ಅನಿವಾರ್ಯ ಎಂಬ ತತ್ವವನ್ನು ಹರಿಹರ ಈ ಮಾತುಗಳ ಮೂಲಕ ವ್ಯಕ್ತ ಮಾಡಿದ್ದಾನೆ. ಆ ಮೂಲಕ ಉನ್ನತವಾದ ಕಾವ್ಯವೊಂದನ್ನು ಹೇಗೆ ಬರೆಯಬೇಕು ಎಂಬ ತತ್ವವನ್ನು ಹರಿಹರ ಇಲ್ಲಿ ವ್ಯಕ್ತ ಮಾಡಿದ್ದಾನೆ. ಕವಿ ಕಮಲಭವ ಕೂಡ ಸರಿಸುಮಾರು ಇದೇ ರೀತಿಯ ಮಾತುಗಳನ್ನು ತನ್ನ ಶಾಂತಿನಾಥ ಪುರಾಣದಲ್ಲಿ ಆಡಿದ್ದಾನೆ.

ಮೃದುಮಯಮಪ್ಪ ಶಬ್ದತತಿ, ಶಬ್ದಸಮಾಜದೊಳೊಂದಿದ ಅರ್ಥಂ
ಅರ್ಥದೊಳ್ ಅವಗಾಹಮಾಗಿ ಬಿಡದುಣ್ಮುವುದಗ್ರ ಸುಭಾವ
ಭಾವದೊಳ್ ಪುದಿದ ರಸಂ, ರಸಪ್ರಸಾರದೊಳ್ ಸವಿಸಂಗಳಿಪಂತೆ ಪೂಣ್ದು
ಪೇಳ್ದುದು ಕೃತಿಯಂ ಚಮತ್ಕೃತಿಯೆನಲ್ ವಿಬುಧಾಳಿಗೆ ಸತ್ಕವೀಶ್ವರಂ (ಶಾಂ.ಪು. 1–56)

ಶಬ್ದ, ಅರ್ಥ, ಭಾವ, ರಸ ಇವುಗಳೆಲ್ಲ ಪರಸ್ಪರ ಅಂತಃಸಂಬಂಧದಿಂದ ಹೊಂದಿಕೊಂಡು ಆ ಮೂಲಕ ಚಮತ್ಕಾರಪೂರಕ ಸವಿಯೊಂದು ಸಮನಿಸುವಂತೆ ಕೃತಿಯು ಇರಬೇಕು. ಅಂತಹ ಕೃತಿಯೆ ಶ್ರೇಷ್ಠವಾದ ಕೃತಿ ಎಂದು ಸತ್ಕೃತಿಯ ತತ್ವವನ್ನು ಕಮಲಭವ ಹೇಳುತ್ತಾನೆ. ಈತನ ಮಾತುಗಳನ್ನೇ ಹೋಲುವ ರೀತಿಯ ಮಾತುಗಳನ್ನು ತನ್ನ ಒಂದು ಪದ್ಯದಲ್ಲಿ ನಯಸೇನನು ಹೇಳುತ್ತಾನೆ. 'ರಸಭಾವ ಗಮಕಗಳು ಎದ್ದು ಕಾಣಿಸುವಂತೆ, ನಾಣ್ನುಡಿಗಳು, ಹೊಸ ರೀತಿಯ ದೇಸಿಯು, ಮಾರ್ಗವು ಕುಸುರಿ ಕೆಲಸ ಮಾಡಿದಂತೆ ಹೊಂದಿಕೊಂಡು ಶೋಭಿಸದಿರುವ ಒಂದು ಕೃತಿಯೂ ಈ ಲೋಕದಲ್ಲಿ ಒಂದು ಕೃತಿಯೇ?' (ಧರ್ಮಾ. 1–40) ಇದೇ ರೀತಿಯ ವಿಚಾರಗಳನ್ನು ಕಬ್ಬಿಗರ ಕಾವದಲ್ಲಿ 'ಒಪ್ಪಂಬೂಸಿದವೊಲ್ ತೆರಂಬೊಳೆವ ಕೊಂಕುಂ.. ಪಾಲೊಳ್ ಒಂದಿಪ್ಪವೊಲ್ ಒಪ್ಪಂಬೆತ್ತಿ ಇನಿದಾದ ಬರ್ದುನುಡಿಯುಂ, ತಳ್ತ ಓಜೆಯುಂ, ನಿಳ್ಪಿನಂ ತಪ್ಪೊಂದುಂ ತಲೆದೋರದಂತೆ' (ಕ.ಕಾ. 1–5) ಎಂದು ಆಂಡಯ್ಯನು ಹೇಳುತ್ತಾನೆ. ಹಾಲಿನಲ್ಲಿ ಸವಿಯು ಹೇಗೆ ಬೆರೆತಿರುತ್ತದೋ ಹಾಗೆ ಓಜೆಯಲ್ಲಿ ಬೆರೆತ ಇನಿದಾದ ಬರ್ದುನುಡಿ (ಜಾಣ್ನುಡಿ) ಉಳ್ಳ ಕಾವ್ಯವು ಎಂಥವರಿಗೂ ಇಷ್ಟವಾಗುತ್ತದೆ. ಗಿಳಿಯ ಹಿಂಡಿನಂತೆ, ಹಂಸಗಳ ಒಡ್ಡಿನಂತೆ ಎಲ್ಲಾ ಕವಿಗಳೂ ಅವರು ಯಾವುದೇ ಧರ್ಮಕ್ಕೆ ಸೇರಿರಲಿ, ಪಂಥಕ್ಕೆ ಸೇರಿರಲಿ ಈ ಹೊಸ ದೇಸಿಯ ವಿಚಾರದಲ್ಲಿ, ರಸ, ಭಾವ, ಅರ್ಥ, ರೀತಿ, ಮಾರ್ಗಗಳು ಹೊಂದಿಕೊಂಡಂತೆ ಕಾವ್ಯ ರಚಿಸಬೇಕು ಎನ್ನುವ ವಿಷಯಕ್ಕೆ ಮಾತ್ರ ಒಂದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಉನ್ನತ ಕವಿತ್ವದ ಸೃಷ್ಟಿ ವಿಚಾರಕ್ಕೆ ಯಾರಲ್ಲಿಯೂ ಭಿನ್ನಾಭಿಪ್ರಾಯಗಳಿಲ್ಲ. ಆದರೆ ಆಯಾ ಅಭಿಪ್ರಾಯಗಳನ್ನು ವ್ಯಕ್ತ ಮಾಡುವ ರೀತಿಯಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಿದೆ ಅಷ್ಟೇ. ವರ್ಣಕವು ವಸ್ತುಕದಲ್ಲಿ ಒಡಂಬಡುವುದು, ದೇಸಿಯು ಮಾರ್ಗದಲ್ಲಿ ಒಡಂಬಡುವುದು, ಧರ್ಮ ಕಾವ್ಯಧರ್ಮಗಳು

ಒಟ್ಟಿಗೆ ಬೆಸೆದುಕೊಂಡಿರುವುದು, ಇಂತಹ ಮಾತುಗಳಲ್ಲು ಕೂಡ ಸರಿಸುಮಾರು ಕಾವ್ಯದಲ್ಲಿನ ಹಲವು ವಿಚಾರ–ಗುಣ–ಶೈಲಿ–ಆಚಾರ–ತತ್ವಗಳ ಪರಸ್ಪರ ಹೊಂದಾಣಿಕೆಯ ತತ್ವವೇ ಅಡಗಿದೆ. ಹಾಗಾಗಿ ಅಮರ್ಸೆ, ಕಾಳಸೆ, ಸಮನ್ವಯ ತತ್ವಗಳ ನಡುವೆ ಒಂದು ಅಂತಃಸಂಬಂಧ ಇದೆ. (ಜೊತೆಗೆ ನೋಡಿ; ಸಮನ್ವಯ ತತ್ವ)

### 1.14.2. ಶ್ರೀವಿಜಯನ ಗುಣ ದೋಷ ವಿಮರ್ಶೆಯ ಒಂದು ಮಾದರಿ

ಇದು ಸಸ್ಯ ಇದು ಪ್ರಣಯ ಎಂಬ ಭೇದವಿಲ್ಲದೆ ಎಲ್ಲವೂ ಮೃಗಗಳಲ್ಲಿ ಒಂದೇ ಆಗಿರುವಂತೆ ಅಶ್ರುತ ಪ್ರಕೃತಿಯ ಜನರು ಇದು ಗುಣ ದೋಷ ಎಂಬ ಗಣಿತವನ್ನು ಎತ್ತ ಬಲ್ಲರು? (ಕ.ರಾ.ಮಾ 1–8) ಜಾಣರಲ್ಲದವರೂ ಕೂಡ, ಕವಿಗೇ ಕಾಣದಿರುವ ಕಿರಿದಾದ ಅವಗುಣ ಇದ್ದರೂ ಅದನ್ನೇ ಓಡಿದು ದೊಡ್ಡದು ಮಾಡಿ ದೂಷಿಸುತ್ತಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮಲ್ಲಿ ಕವಿಗಳಿಗೆ ಮಾರ್ಗದರ್ಶನ ಮಾಡುವ ಲಕ್ಷಣಗ್ರಂಥಗಳ ಕೊರತೆ ಇದೆ. ಸಂಸ್ಕೃತ, ಪ್ರಾಕೃತಗಳಲ್ಲಾದರೋ ಲಕ್ಷ್ಯಗಳೂ ಲಕ್ಷಣಗ್ರಂಥಗಳೂ ಸಾಕಷ್ಟಿವೆ. ಆದರೆ ಕನ್ನಡದಲ್ಲಿ ಹಾಗಲ್ಲ. ಅವರಿವರನ್ನು ಕೇಳಿ ಅರಿತು ಬರೆಯೋಣ ಅಂದರೆ ಅಂಥಹ ನಾಡೋಜರಾಗಲೀ, ತಿಳಿದವರಾಗಲೀ ಇಲ್ಲಿ ಇಲ್ಲ. ಕಾವ್ಯದಲ್ಲಿ ಅವಗುಣವು ಇನಿತೇ ಆದರೂ ಇಡಿ ಕಾವ್ಯವನ್ನೆ ಜನ ದೂಷಿಸುತ್ತಾರೆ. ಕಾವ್ಯ ಶ್ರೇಷ್ಠವಾಗಿದ್ದರೂ ಕಸದಂತೆ ಕಾಣುತ್ತಾರೆ. ಆದ್ದರಿಂದ ಆಲಸ್ಯ ಮಾಡದೆ ದೋಷವನ್ನು ಕಳೆದು ಕವಿರಾಜಮಾರ್ಗದ ತತ್ವಮಾರ್ಗದಲ್ಲಿ ಕಾವ್ಯವನ್ನು ಬರೆಯಿರಿ. ಪುರಾಣ ಕವಿಗಳ ಪರಂಪರೆಯಲ್ಲಿ ಇರುವ ದೋಷಗಳನ್ನು ಚಿಂತಿಸಿ, ಮತ್ತೆ ನನ್ನ ತಿಳುವಳಿಕೆಗೆ ಬಂದಷ್ಟು ಯೋಜಿಸಿ ದೋಷಗಳ ಬಗ್ಗೆ ಬುಧಜನರಿಗೆ ಈ ಕೃತಿಯಲ್ಲಿ ತಿಳಿಸುವೆನು. ರಚಿತವಾಗಿರುವ ಹಿಂದಿನ ಕಾವ್ಯಗಳೇ ತಮ್ಮ ಕಾವ್ಯರಚನೆಗೆ ಮಾದರಿಗಳೆಂದು ತಿಳಿದು, ಆಗಮಬಲ(ಕಾವ್ಯಸತ್ವ) ಇಲ್ಲದ ಕೆಲವರು ದೇಸಿ ಯಾವುದು, ದೇಸಿಯಲ್ಲದುದು ಯಾವುದು ಎಂದು ತಿಳಿದೂ ಕೂಡ ಹಳೆಗನ್ನಡವನ್ನು ಹೊಲಗೆಡಿಸಿ ಬರೆಯುತ್ತಿದ್ದಾರೆ. ಪೊಡವಿಪತಿಗೊರವ ಎಂದೂ ಪಡೆಯದುದು ಅದೆಕರಿಸಿ ಕರ್ಬಿಗದೂರ್ರ್ ಎಂದೂ ಹಡುವಸುಮರೆ ಸೆಟ್ಟಿಸು ಎಂದೂ ಮುಡಿಯೊಳಮಾರ್ಗೆ ಎಂದೂ ಹಳಗನ್ನಡವನ್ನು ನುಡಿದು ಕೆಡಿಸುತ್ತಿದ್ದಾರೆ. ಈ ರೀತಿ ಹಳಗನ್ನಡವನ್ನು ಪುರಾತನ ಕಾವ್ಯದಲ್ಲಿ ಬಳಸುವುದಾಗಿದ್ದರೆ ಒಪ್ಪಿಕೊಳ್ಳಬಹುದಾಗಿತ್ತೇನೋ. ಆದರೆ ಈಚಿನ ಕಾವ್ಯಕ್ಕೆ ಈ ರೀತಿಯ ಪ್ರಯೋಗಗಳು ಒಪ್ಪುವುದಿಲ್ಲ. ರೋಗಿಯಾದ ಹೆಣ್ಣಿನೊಡನೆ ಸುರತಕ್ಕೆ ಎಳಸುವ ರಸಿಕತೆಯಂತೆ ಈ ಭಾಷೆ ದೇಸಿಗೆ ಒಪ್ಪುವುದಿಲ್ಲ. ಈಗಿನ ದೇಸಿಯೇ ಬೇರೆ.

ಸಮಸಂಸ್ಕೃತ ಪದಗಳ ಜೊತೆ ಬೇಕಾದರೆ ಕನ್ನಡವನ್ನು ಬೆರೆಸಬಹುದು. ಕಾವ್ಯಮಾರ್ಗದಲ್ಲಿ ಇಂಥ ಪದ್ಧತಿಯು ಇದೆ. ಆದರೆ 'ಸಮಸಂಸ್ಕೃತ'ವಲ್ಲದ ಸಂಸ್ಕೃತ ಪದಗಳೊಂದಿಗೆ ಕನ್ನಡವನ್ನು ಬೆರೆಸಬಾರದು. ಅಹರಹಃ, ಉಚ್ಚೈಃ, ನೀಚೈಃ, ಪುನಃ ಪುನಃ, ಅಂತಃ, ಬಹಿಃ, ಇಹಃ, ಪ್ರಾದುಃ, ಅಹೋ ಇವೆಲ್ಲ ಸಂಸ್ಕೃತ ಅವ್ಯಯಗಳು. ಹಾಗಾಗಿ ಇವು ಅಸಹಾಯಗಳು. ಇವನ್ನು ಕನ್ನಡ ಕಾವ್ಯದಲ್ಲಿ ಬೆರೆಸಬಾರದು. (ಕೇಶೀರಾಜನೂ ಈ ಅವ್ಯಯಗಳನ್ನು ವಿವರಿಸಿದ್ದಾನೆ) ಹಾಗೆ ಮಾಡಿದರೆ ಒತ್ತುಗರಡೆಯ ಮತ್ತು ಮದ್ದಲೆಯ ಜರ್ಜರ ಧ್ವನಿಗಳಂತೆ ಕಾವ್ಯವು ಕರ್ಕಶವಾಗುತ್ತದೆ. (ಇದಕ್ಕೊಂದು ಉದಾಹರಣೆಯನ್ನು ಶ್ರೀವಿಜಯ ಕೊಟ್ಟಿದ್ದಾನೆ. ನೋಡಿ: ಕ.ರಾ.ಮಾ. 1–54) ಈ ಅವ್ಯಯಗಳನ್ನು ಸಮಾಸಗಳನ್ನಾಗಿ ಮಾಡಿ ಬೇಕಾದರೆ ಬಳಸಬಹುದು. ಸಮಸಂಸ್ಕೃತ ಬೆರೆಸಿ ಕಾವ್ಯ ಬರೆದರೆ ಆ ಕಾವ್ಯವು ಮೃದಂಗ ಸಂಗೀತದಂತೆ ಮಧುರವಾಗಿರುವುದು.

1. ಶೃತದುಷ್ಟ, 2, ಅರ್ಥದುಷ್ಟ 3. ಶೃತಿಕಷ್ಟ 4. ಕಲ್ಪನೋಕ್ತಿ ಕಷ್ಟ ಎಂಬ ನಾಲ್ಕು ಬಗೆಯ ಕಾವ್ಯದೋಷಗಳಿವೆ

ನಿಲ್ತೋಳಂ ಬರ್ಪುದು ಸ/ಯ್ತಲ್ಲೂರುಂ ದೂರಮೆನೆಡೆ ತುಡಗರ್ಪೂರಂ/
ಕಲ್ತುಲ್ಲಿಂದೋಡುವಮೆಂ/ ಬಲ್ತುಣ್ಣಿಂ ತಂದ ಕೂಳನೂ ಸಂಗಮದೊಳ್

(ನಿಲ್ ತೋಳಂ ಬರ್ಪುದು, ಸಯ್ತು ಅಲ್ತು ಊರುಂ ದೂರಂ, ಎನ್ ಎಡೆತುಡಗರ್(ದಾರಿ ಕಳ್ಳರು) ಪೂರಂ, ಕಲ್ತು ಉಲ್ಲಿಂದೆ ಓಡುವಂ ಎಂಬಲ್ತು, ಉಣ್ಣಿಂ ತಂದ ಕೂಳನ್ ಊ ಸಂಗಮದೊಳ್) ಇತ್ಯಾದಿ ಇತ್ಯಾದಿ... ಹೀಗೆ ಶ್ರೀವಿಜಯ ಹಲವು ಶೃತಿ ದೋಷಗಳನ್ನು ಹೇಳುತ್ತಾನೆ. ಕೇಶೀರಾಜನೂ ಕೂಡ ಶ್ರೀ ವಿಜಯನನ್ನೆ ಅನುಸರಿಸಿ ಸಂಸ್ಕೃತ–ಕನ್ನಡವನ್ನು ಬೆರೆಸಿ ಸಮಾಸ ಮಾಡುವ ಬಗ್ಗೆ ಕುದಿಯುವ ಹಾಲಿಗೆ ಮಜ್ಜಿಗೆಯನ್ನು ಬೆರೆಸಿದಂತೆ ಬೆರೆಸಲಾಗದು ಎಂದು ಹೇಳುತ್ತಾನೆ. ಇವರ ಪ್ರಕಾರ ಸಮಸಂಸ್ಕೃತಗಳಾದರೆ ಬೆರೆಸಬಹುದು. ಆದರೆ ಸಂಸ್ಕೃತ ಕನ್ನಡಪದಗಳನ್ನು ಬೆರೆಸಬಾರದು. ಕನ್ನಡ ಸಂಸ್ಕೃತ ಬೆರಕೆಯ ಬಗ್ಗೆ ಕವಿಗಳಲ್ಲೂ ಸಾಕಷ್ಟು ಚರ್ಚೆ ನಡೆದಿದೆ. (ಹೆಚ್ಚಿನ ವಿವರಗಳಿಗೆ ನೋಡಿ; ಭಾಷೆ ಪದಪ್ರಯೋಗ) ನಮ್ಮ ನಾಗವರ್ಮನಾದರೋ ಕಾವ್ಯದಲ್ಲಿ ಬಳಕೆಯಾಗಬಹುದಾದ ಸಮಸಂಸ್ಕೃತ ಪದಗಳ ಒಂದು ನಿಘಂಟು

ಮಾಡಿದ್ದಾನೆ. ಗುಣ ದೋಷಗಳ ಬಗ್ಗೆ ಪ್ರತ್ಯೇಕವಾಗಿ ಎರಡು ಅಧಿಕರಣಗಳನ್ನೆ ಮೀಸಲಿಟ್ಟು ನಾಗವರ್ಮ ದೀರ್ಘವಾಗಿ ಬರೆದಿದ್ದಾನೆ. 'ಕೃತಿ ಸತಿಯ ಮೈಯಲ್ಲಿ ಎಳ್ಳಷ್ಟು ದೋಷವಿದ್ದರೂ ಕನ್ನಡಿಗೆ ಒಂದು ಚಿಕ್ಕ ಕಪ್ಪು ಚುಕ್ಕೆ ಇದ್ದಂತೆ ಕವಿಗೆ ಹೆಸರು ಕೆಡುವುದು. ಆದ್ದರಿಂದ ಉಪೇಕ್ಷೆ ಮಾಡದೆ ಪದ, ವಾಕ್ಯ, ಅರ್ಥ ಇವುಗಳಲ್ಲಿ ಎಲ್ಲಿಯೂ ದೋಷ ಇರದಂತೆ ಕಾವ್ಯ ಬರೆಯಬೇಕು.' (ಕಾ.ಲೋ. 428,429)

ಕವಿರಾಜಮಾರ್ಗದಲ್ಲಿನ ಶ್ರೀವಿಜಯನ ಗುಣದೋಷ ವಿವರಗಳು ತತ್ವ ಸಿದ್ಧಾಂತಗಳಾಗುವುದಕ್ಕಿಂತ ಮಾರ್ಗದರ್ಶಿ ಸೂತ್ರಗಳಂತೆ ಇವೆ. ನಾಗವರ್ಮನಲ್ಲೂ ಕೂಡ ಮಾರ್ಗದರ್ಶಿ ಧಾಟಿಯೆ ಇದೆ. ಗುಣ ದೋಷಗಳನ್ನು ಒಂದೊಂದಾಗಿ ಸೂತ್ರಗಳಲ್ಲಿ ಹೇಳುತ್ತ ಅವುಗಳಿಗೆ ಉದಾಹರಣೆಗಳನ್ನು ನೀಡುತ್ತ ನಾಗವರ್ಮ ಗುಣದೋಷ ವಿಚಾರ ಮುಗಿಸುತ್ತಾನೆ. ದೋಷನಿರ್ವಚನವನ್ನು ವಿಸ್ತರಿಸುವುದಾಗಲೀ ದೋಷದ ಉದಾಹರಣೆಗಳನ್ನು ವಿವರಿಸುವುದಾಗಲೀ ಮಾಡುವುದಿಲ್ಲ. ಹಾಗೆ ಒಂದು ವೇಳೆ ವಿಸ್ತರಣೆ, ವಿವರಣೆಗೆ ತೊಡಗಿದ್ದರೆ ಇನ್ನಷ್ಟು ಗಂಭೀರವಾದ ವಿಮರ್ಶೆ ನಮಗೆ ಲಭಿಸುತ್ತಿತ್ತು. ಹೀಗೆ ಮಾಡದಿರಲು ಕಾವ್ಯದ ಆಕೃತಿಯೂ ಒಂದು ತೊಡಕಾಗಿರಬಹುದು.

ನಮ್ಮ ಒಬ್ಬೊಬ್ಬ ಅಲಂಕಾರಿಕರು ಹೇಳುವ ಗುಣ ದೋಷಗಳ ಬಗ್ಗೆಯೂ ಸಾಕಷ್ಟು ಅಭಿಪ್ರಾಯ ಭೇದಗಳಿವೆ. ಒಬ್ಬೊಬ್ಬರೂ ಹೇಳುವ ಗುಣ ದೋಷಗಳ ಸಾಮ್ಯ-ವ್ಯತ್ಯಾಸಗಳು ಮತ್ತು ಅದಕ್ಕೆ ಕಾರಣಗಳು ಏನು ಎಂಬುದು ಒಂದು ಪ್ರತ್ಯೇಕ ಅಧ್ಯಯನ ಆಗಬಹುದಾದ ವ್ಯಾಪ್ತಿ ಉಳ್ಳದ್ದು. ಹಾಗಾಗಿ ಇಲ್ಲಿ ಅದನ್ನು ಕೈಗೊಂಡಿಲ್ಲ. ನಮ್ಮ ಕವಿಗಳು ಕಾವ್ಯಕ್ಕೆ ಇರಬಹುದಾದ ಮತ್ತು ತಮ್ಮ ತಮ್ಮ ಕಾವ್ಯಗಳಲ್ಲಿ ಇರುವ ಗುಣಗಳ ಬಗ್ಗೆ ಹೇಳಿಕೊಂಡಿದ್ದಾರೆ. ಅವರು ಹೇಳುವ ಗುಣಗಳಿಗು ಇವರು ಹೇಳುವ ಗುಣಗಳಿಗು ಸಾಕಷ್ಟು ಭೇದಗಳಿವೆ. ಹಾಗೇ ನಮ್ಮ ಕವಿಗಳ ರಚಿತ ಕಾವ್ಯಗಳಲ್ಲಿ ಆಚರಣೆಯ ಮೂಲಕ ಪ್ರಕಟವಾಗುವ ಗುಣಗಳಿಗೂ ಲಕ್ಷಣಕಾರರು ಹೆಳುವ ಕಾವ್ಯಗುಣಗಳಿಗೂ ಸಾಕಷ್ಟು ಅಂತರವಿದೆ.

### 1.15. ಅಷ್ಟಾದಶ ವರ್ಣನೆಗಳ ಜಿಜ್ಞಾಸೆ.

ಯಾವುದೇ ಮಾಹಾಕವಿಯ ಕಾವ್ಯವನ್ನು ತೆಗೆದುಕೊಂಡರೆ ಅಲ್ಲಿ ಕಥನ ಪ್ರಸಂಗಗಳಿಗೆ ರಸಭಾವಗಳಿಗೆ ಅನುಗುಣವಾದ ವರ್ಣನೆಗಳು ಇದ್ದೇ ಇರುತ್ತವೆ. ಕೆಲವೊಮ್ಮೆ ಅಪ್ರಾಸಂಗಿಕ ಮತ್ತು ಅನವಶ್ಯಕವಾದ ವರ್ಣನೆಗಳೂ ಬರಬಹುದು. ಮಹಾಕಾವ್ಯದಲ್ಲಿನ ವರ್ಣನೆಗಳಿಗೆ ಇರುವ ಹದಿನೆಂಟು ಅಂಗಗಳೇ ಅಷ್ಟಾದಶ ವರ್ಣನೆಗಳು. ಈ ಅಷ್ಟಾದಶ ವರ್ಣನಾ ಪದ್ಧತಿಯು ಹದಿನೆಂಟು ವರ್ಣನೆಗಳನ್ನು ಒಳಗೊಂಡ ಒಂದು ಕಾವ್ಯ ರಚನಾ ಶೈಲಿ. ಹಾಗೇ ಇದೊಂದು ಕಾವ್ಯ ರಚನಾ ನಿಯಮ ಕೂಡ. ಮೀಮಾಂಸಾ ಲಕ್ಷಣಗಳಿಗೆ ತೋರಿರುವ ಮಿಶ್ರ ಪ್ರತಿಕ್ರಿಯೆಯನ್ನೇ ಅಷ್ಟಾದಶ ವರ್ಣನೆಗಳಿಗೂ ನಮ್ಮ ಕವಿಗಳು ತೋರಿದ್ದಾರೆ. ಅಷ್ಟಾದಶ ವರ್ಣನೆಗಳನ್ನು ನಮ್ಮ ಕವಿಗಳು ಚಾಚೂ ತಪ್ಪದೆ ಏನೂ ಅನುಸರಿಸಿಲ್ಲ. ಸಂಪೂರ್ಣವಾಗಿ ನಿರಾಕರಿಸಿಯೂ ಇಲ್ಲ. ಈ ವರ್ಣನೆಗಳಲ್ಲಿ ಕೆಲವನ್ನು ಬಳಸುತ್ತಲೂ ಕೆಲವನ್ನು ಕೈಬಿಡುತ್ತಲೂ ತಮ್ಮದೇ ಸ್ವಾತಂತ್ರ್ಯವನ್ನು ನಮ್ಮ ಮಹಾಕವಿಗಳು ತೋರಿದ್ದಾರೆ. ಸನ್ನಿವೇಶದ ಅಗತ್ಯಕ್ಕೆ ತಕ್ಕಂತೆ, ತಮಗೆ ಸರಿಕಂಡಂತೆ ಕಾವ್ಯವನ್ನು ರಚಿಸುತ್ತಾ ಆ ಮೂಲಕವೇ ಪರೋಕ್ಷವಾಗಿ ಈ ಪದ್ಧತಿ/ನಿಯಮದ ಬಗ್ಗೆ ತಮ್ಮ ನಿಲುವನ್ನು ಕೆಲವರು ಪ್ರಕಟಿಸಿದ್ದರೆ, ಇನ್ನು ಕೆಲವರು ನೇರವಾಗಿ ಈ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ. ಯಾವುದೇ ಕಾವ್ಯ ಬರವಣಿಗೆಯ ಪದ್ಧತಿ/ನಿಯಮದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ಕೂಡ ವಿಮರ್ಶೆಯೇ ತಾನೆ? ಹೀಗಾಗಿ ಈ ಕುರಿತ ನಮ್ಮವರ ಜಿಜ್ಞಾಸೆಯು ಪ್ರಾಚೀನ ವಿಮರ್ಶಾ ರೂಪಗಳಲ್ಲಿ ಒಂದಾಗಿದೆ.

> ಋತು ನಂದನಂ ತರಣಿ ಶಶಿ ಶರಧಿ ಪರಿಣಯಂ/ರತಿ ನಗಂ ಗಿರಿ ಸುತಂ ವಾರಿ ಮಧು ವಿರಹಂ/
> ಉನ್ನತ ದಂಡಯಾತ್ರೆ ಯಾನಂ ರಣಂ ನೃಪರೇಳ್ಗೆ ರಾಜಮಂತ್ರಗಳೆಂಬ/ನುತಿವಡೆದ
> ಪದಿನೆಂಟು ವರ್ಣನೆಗಳಿಂ ಸಮಾ/ಶ್ರಿತ ನವರಸಾದ್ಯಲಂಕಾರಗಳಿಂ ವಿಬುಧ/ತತಿ
> ಬಣ್ಣಿಪಂತು ಉಸಿರ್ದನೀ ಕಾವ್ಯಮತಿಸೇವ್ಯಂ ಆದುದೆಂಬವೊಲ್ ಸುಜನರು (ಚೆ.ಬ.ಪು. 1-36)

ವಿರುಪಾಕ್ಷ ಪಂಡಿತ ಇಲ್ಲಿ ಹದಿನೆಂಟು ವರ್ಣನೆಗಳು ಯಾವುವು ಎಂದು ಹೇಳುತ್ತಾನೆ. ರಸ, ಅಲಂಕಾರಗಳ

ಜೊತೆ ಹದಿನೆಂಟು ವರ್ಣನೆಗಳಿಂದ ಕೂಡಿದ ಕಾವ್ಯವನ್ನು ನಾನು ಹೇಳುತ್ತಿದ್ದೇನೆ ಎಂದು ಹೇಳುತ್ತಾನೆ. ಇವುಗಳನ್ನು ಮೀರಿಯೂ ಅಷ್ಟಾದಶವೇನು ನೂರಾರು ರೀತಿಯ ವರ್ಣನೆಗಳನ್ನು ನಮ್ಮವರು ಮಾಡಿದ್ದಾರೆ.

'ಶ್ರೇಷ್ಠವಾದ ಅಮೃತವನ್ನು ಸೇವಿಸುವಾಗ ಸವಿಯ ಹಂಗೇಕೆ? ಸೂರ್ಯನ ಸಭೆಯಲ್ಲಿ ಸೊಡರನ್ನು ಹಿಡಿಯುವ ತೊಡಕೇಕೆ? ಸ್ಪರ್ಷಮಣಿಯೇ ಆಭರಣವಾಗಿರುವಾಗ ಮಿಸುನಿಯನ್ನಿಟ್ಟು ತೊಳಲುವುದೇಕೆ? ನೆರೆದ ಸೊಗಸಿನ ಸುಗ್ಗಿ, ರಸದ ಮಡು, ಪುಣ್ಯದ ಆಗರ ಎನಿಸಿರುವ ಸಿದ್ಧರಾಮನ ಕತೆಗೆ ಕಾವ್ಯವನ್ನು ರಚಿಸುವಾಗ ಅಷ್ಟಾದಶ ವರ್ಣನೆಗಳನ್ನು ವರ್ಣಿಸುವ ಹಂಗೇಕೆ? ಅದೂ ಶ್ರೇಷ್ಠ ಮತ್ತು ಸಮರ್ಥನಾದ ಕವಿಗೆ ಇವು ಬೇಕೆ?' (ಸಿ.ಚ. 1–4) ಸಣ್ಣ ಪುಟ್ಟ ಕವಿಗಳಿಗೆ ಮಾತ್ರ ಇಂಥ ನಿಯಮಗಳ ಸಹಾಯ ಬೇಕು. ಸಮರ್ಥನಾದ ಕವಿಗೆ ಈ ವರ್ಣನೆಗಳಿಂದಲೆ ಕಾವ್ಯವನ್ನು ಮಹಾ ಕಾವ್ಯವನ್ನಾಗಿ ಮಾಡಬೇಕಾಗಿಲ್ಲ. ಕಾವ್ಯದ ಮಹತ್ತು ಮತ್ತು ಬೃಹತ್ತು ಕೇವಲ ವರ್ಣನೆಗಳಲ್ಲಿ ಮಾತ್ರ ಇರುವುದಿಲ್ಲ. ಹೇಳುವ ರೀತಿ, ಗುಣಗಳಿಂದಲೇ ಕಾವ್ಯಕ್ಕೆ ಮಹತ್ತು ಲಭಿಸುತ್ತದೆ. ರಾಘವಾಂಕನ ಪ್ರಕಾರ ಕೆಲವು ಕಥೆಗಳೇ ಸ್ವತಃ ಸೊಗಸಿನ ಸುಗ್ಗಿ, ರಸದ ಮಡು, ಪುಣ್ಯದ ಆಗರದಂತೆ ಇರುತ್ತವೆ. ಇನ್ನು ಅಂತಹ ಕವಿತೆಗಳಿಗೆ ಭಕ್ತಿಯೂ ಸೇರಿಕೊಂಡರೆ ಮುಗಿಯಿತು. ಅಲ್ಲಿಗೆ ಅಷ್ಟಾದಶ ವರ್ಣನೆಗಳ ಹಂಗು ಬೇಕಿಲ್ಲ.

ಕಾವ್ಯವನ್ನು ಬರೆಯಲು ಏನೇನು ಪರಿಕರಗಳು ಬೇಕು ಎಂದರೆ ನಮ್ಮ ಕವಿಗಳು ಪ್ರಾಸ, ಯತಿ, ವ್ಯಾಕರಣ, ಶಬ್ದಸಂಪತ್ತಿ, ಅಲಂಕಾರ, ರಸಜ್ಞಾನ, ಔಚಿತ್ಯ, ಹೊಸ ಬೆಡಗು ಇತ್ಯಾದಿಗಳನ್ನು ಹೇಳುತ್ತಾರೆ. ಇದೇ ರೀತಿಯಲ್ಲಿ ಅಷ್ಟಾದಶ ವರ್ಣನೆಗಳೂ ಕೂಡ ಕಾವ್ಯದ ಪರಿಕರಗಳು. ಆದರೆ ಜನ್ನ ಕಾವ್ಯವನ್ನು ಬರೆಯಲು ಕವಿಯಾದವನಿಗೆ ಏನೇನು ತಿಳಿದಿರಬೇಕು ಎಂದು ಹೇಳುವಾಗ ಈ ಅಷ್ಟಾದಶ ವರ್ಣನೆಗಳನ್ನು ಹೇಳುವುದೇ ಇಲ್ಲ. ಅವನ ಪ್ರಕಾರ ಮಹಾಕಾವ್ಯ ರಚನೆಗೆ 'ಸಹಜವಾಗಿ ಮತ್ತು ವೇಗವಾಗಿ ಕತೆ ಹೇಳುವುದು ಗೊತ್ತಿರಬೇಕು. (ನೀರಸತೆ ಕಾವ್ಯದ ಒಂದು ಮುಖ್ಯ ದೋಷ) ಪದವ್ಯುತ್ಪತ್ತಿ ಇರಬೇಕು, ಅನೇಕ ಪೂರ್ವ ಕಾವ್ಯಗಳನ್ನು ಓದಿ ಅನುಭವ ಪಡೆದಿರಬೇಕು, ಕಲಾಪ್ರತಿಭೆಯೂ, ಲೋಕದ ತಿಳುವಳಿಕೆಯೂ, ಆಗಮದ ಜ್ಞಾನವೂ ಇರಬೇಕು. ಇವೆಲ್ಲವೂ ಇಲ್ಲದ ಕವಿಗಳು ಕಾವ್ಯಗಳನ್ನು ಮಾಡುತ್ತೇವೆ ಎಂದು ಆಗ್ರಹಗೊಂಡರೆ ಯಾವುದೋ ಗ್ರಹ ಬಡಿದವರಂತೆ ಬಳಲಿ ಬೆಂಡಾಗುತ್ತಾರಷ್ಟೆ' (ಅನಂ.ಪು. 1–38) ಈ ಹಲವಾರು ತಿಳುವಳಿಕೆ–ಪರಿಕರಗಳನ್ನು ಹೇಳುವಾಗ ಜನ್ನ ಹದಿನೆಂಟು ವರ್ಣನೆಗಳನ್ನು ಹೇಳುವುದಿಲ್ಲ ಎಂಬುದಿಲ್ಲಿ ಗಮನಾರ್ಹ. ಯಾವುದೇ ವಿಚಾರದ ಗೈರು ಹಾಜರಿ ಅಥವಾ ಅಲಕ್ಷ್ಯ ಕೂಡ ಅದನ್ನು ಕುರಿತ ವಿಮರ್ಶೆಯೇ ಅಲ್ಲವೆ?

ಲಕ್ಕಣ್ಣ ದಂಡೇಶನು ಅಷ್ಟಾದಶವರ್ಣನೆಗಳ ವಿಚಾರವಾಗಿ 'ಕೃತಿಗೆ ಪದಿನೆಂಟಂಗವನೆ ಮೊದಲು ಪೇಳ್ವುದಪ್ರತಿಮವೆನಿಸುವ ನಿತ್ಯ ತತ್ವವದು' ಎಂದು ಹೇಳಿದ್ದಾನೆ. ಚೆನ್ನಾಗಿ ಕಾವ್ಯ ಬರೆಯಬೇಕು ಎಂಬುದಕ್ಕಿಂತ ಚೆನ್ನಾದ ಬದುಕನ್ನು ತಿಳಿಯಹೇಳಬೇಕು ಎಂಬ ಅಂಶಕ್ಕೆ ಮೊದಲ ಸ್ಥಾನವನ್ನು ನೀಡುವ ವೀರಶೈವ ಮಹಾಪುರಾಣದ ರಚನಾ ಪದ್ಧತಿಯನ್ನು ಇಲ್ಲಿ ತಕ್ಕಮಟ್ಟಿಗೆ ಕಾಣಬಹುದು.[14] ದಂಡೇಶ ಅಷ್ಟಾದಶವರ್ಣನೆಗಳ ಬಗ್ಗೆ ಏನೇ ಹೇಳಲಿ; ಶಾಸ್ತ್ರವಾಗಲಿ ಕಾವ್ಯವಾಗಲಿ ನಮ್ಮಲ್ಲಿ ವೀರಶೈವ ಪುರಾಣಗಳು ಅಷ್ಟಾದಶವರ್ಣನೆಗಳನ್ನು ಪಾಲಿಸಿಲ್ಲ. ಅವುಗಳ ಸ್ವರೂಪವೇ ಬೇರೆ. ಹಾಗಾಗಿ ಇವುಗಳು ಇತರ ಧಾರ್ಮಿಕ ಅಥವಾ ಲೌಕಿಕ ಕಾವ್ಯಗಳ ಮಾದರಿಗಳನ್ನು ಅನುಸರಿಸುವುದಿಲ್ಲ.

### 1.15.1. ಆಯ್ಕೆ–ಸಂಯೋಜನೆ, ಆಯ್ಕೆ–ಅನ್ವಯ

ಮಲ್ಲಿಕಾರ್ಜುನ, ಮಲ್ಲಕವಿ, ಅಭಿನವವಾದಿ ವಿದ್ಯಾನಂದರ ಸಂಗ್ರಹ ಗ್ರಂಥಗಳು ಅಷ್ಟಾದಶ ವರ್ಣನೆಗೆ ತೋರಿದ ಬಹು ಮುಖ್ಯ ಪ್ರತಿಕ್ರಿಯೆಗಳಾಗಿವೆ. ಕನ್ನಡದ ಮುಖ್ಯ ಕವಿಗಳೆಲ್ಲರಿಂದ ಈ ವರ್ಣನೆಗಳಿಗೆ ತಕ್ಕಂತೆ ಇರುವ ಪದ್ಯಗಳನ್ನು ಆಯ್ಕೆ ಮಾಡಿ ಆಯಾ ವರ್ಣನೆಗಳಿಗೆ ಅನುಗುಣವಾಗಿ ಅವುಗಳನ್ನು ಜೋಡಿಸಿ ಇವರು ಸಂಗ್ರಹ ಗ್ರಂಥಗಳನ್ನು ಮಾಡಿದ್ದಾರೆ. ಅಷ್ಟಾದಶ ವರ್ಣನೆಗಳ ಪ್ರಾತಿನಿಧಿಕ ಸಂಕಲನದಂತೆ ಈ ಸಂಗ್ರಹಗಳು ಇವೆ. ಪದ್ಯಗಳ ಆಯ್ಕೆಯ ಮಾನದಂಡವೇ ಇಲ್ಲಿ ಅಷ್ಟಾದಶ ವರ್ಣನೆಗಳಾಗಿವೆ. ಯಾರ್‍ಯಾರು ಈ ವರ್ಣನೆಗಳನ್ನು ಹೇಗೆ ಹೇಗೆ ಮಾಡಿದ್ದಾರೆಂಬ ಮಾದರಿಗಳು ಇಲ್ಲಿ ಒಂದೆಡೆ ದೊರೆಯುತ್ತವೆ. ಆಯ್ಕೆ ಮತ್ತು ಸಂಯೋಜನೆಯ ಇಲ್ಲಿನ ಪ್ರಯತ್ನವು ನಮ್ಮ ಪ್ರಾಚೀನ ಕಾವ್ಯಗಳಿಗೆ ದೊರೆತ ವಿಮರ್ಶೆಯ ಒಂದು ಮಾದರಿ ಆಗಿದೆ.

ಆಯ್ಕೆ ಮತ್ತು ಸಂಯೋಜನೆಯ ಇನ್ನೊಂದು ವಿಮರ್ಶಾ ಮಾದರಿಯನ್ನು ನಾವು ಶೂನ್ಯ ಸಂಪಾದನೆಗಳಲ್ಲಿ ಕಾಣುತ್ತೇವೆ. ಅಲ್ಲಿ ವಚನಗಳಿಗೆ ಇರುವ ಸಂವಾದ ಗುಣ ಮತ್ತು ಸಾಂದರ್ಭಿಕತೆಯ ಗುಣಗಳೇ ಆಯ್ಕೆಯ ಮಾನದಂಡ ಆಗಿವೆ. ಬಿಡಿ ವಚನಗಳು ಮಹಾಕಥನವೊಂದರ ನಿರ್ಮಾಣಕ್ಕೆ ಸಾಮಗ್ರಿಗಳಂತೆ ಇಲ್ಲಿ ಬಳಕೆಯಾಗಿವೆ. ಈ ಎರಡು ರೀತಿಯ ಆಯ್ಕೆಯ ಮಾನದಂಡಗಳಲ್ಲದೆ ನಮ್ಮ ಮೀಮಾಂಸಾ ಗ್ರಂಥಗಳಲ್ಲಿ ಇನ್ನೊಂದು ಆಯ್ಕೆಯ ಮಾದರಿ ಇದೆ. ಮೀಮಾಂಸೆಯ ಲಕ್ಷಣಗಳಿಗೆ ಅನುಗುಣವಾದ ಲಕ್ಷ್ಯಪದ್ಯಗಳನ್ನು ಆರಿಸಿ ಉದಾಹರಿಸುವ ಮಾದರಿ ಇದು. ಕಾವ್ಯಸಾರ ಸಂಗ್ರಹ ಗ್ರಂಥಗಳು ಮತ್ತು ಶೂನ್ಯಸಂಪಾದನೆಗಳು ಆಯ್ಕೆ ಮತ್ತು ಸಂಯೋಜನಾ ಮಾದರಿಯ ವಿಮರ್ಶೆಗಳಾದರೆ; ಲಾಕ್ಷಣಿಕರ ಲಕ್ಷಣ ಲಕ್ಷ್ಯ ನಿರೂಪಣೆಗಳು ಆಯ್ಕೆ ಮತ್ತು ಅನ್ವಯೀಕರಣ ಮಾದರಿಯ ವಿಮರ್ಶೆಗಳಾಗಿವೆ. ಕಲ್ಲುಮಠದ ಪ್ರಭುದೇವನ ಲಿಂಗಲೀಲಾ ವಿಲಾಸ ಚಾರಿತ್ರ, ಮಹಲಿಂಗನ ಏಕೋತ್ತರ ಶತಸ್ಥಲ ಇಂತಹ ಗ್ರಂಥಗಳು ಕೂಡ ಸಂಪಾದನಾ-ಸಂಗ್ರಹ ಗ್ರಂಥಗಳೇ ಆಗಿದ್ದು ಇವುಗಳಲ್ಲಿ ಶಿವತತ್ವ, ಶಿವಾಚಾರ, ವೀರಶೈವ ಧರ್ಮಲಕ್ಷಣಗಳೇ ಆಯ್ಕೆಯ ಮಾನದಂಡಗಳಾಗಿವೆ. ಕಲ್ಲುಮಠದವನ ಸಂಪಾದನೆಯು ಟೀಕು-ವ್ಯಾಖ್ಯಾನ ಕೂಡ ಆಗಿದ್ದು ಇದನ್ನು ಪ್ರತ್ಯೇಕವಾಗಿ ಪರಿಶೀಲಿಸಲಾಗಿದೆ.

ಮೀಮಾಂಸೆಯ ಲಕ್ಷಣಗಳಿಗೆ ಹೊಂದುವ ಲಕ್ಷ್ಯವಾಗಬಲ್ಲ ಗುಣವೇ ಲಕ್ಷಣಶಾಸ್ತ್ರದಲ್ಲಿ ಆಯ್ಕೆಯ ಮಾನದಂಡ. ನಮ್ಮ ಅಲಂಕಾರಶಾಸ್ತ್ರಜ್ಞರು ಎಲ್ಲರೂ ಲಕ್ಷ್ಯ ಪದ್ಯಗಳನ್ನು ಆರಿಸಿಕೊಡುವ ಜೊತೆಗೆ ತಾವೇ ಸೃಷ್ಟಿಸಿಯೂ ನೀಡಿದ್ದಾರೆ. ಅನುವಾದಿಸಿಯೂ ನೀಡಿದ್ದಾರೆ. ಲಕ್ಷ್ಯಗಳನ್ನು ಹೀಗೆ ಲಾಕ್ಷಣಿಕರೇ ಬರೆಯುವ ಮತ್ತು ಅನುವಾದಿಸಿ ನೀಡುವ ಅಗತ್ಯವಾದರೂ ಯಾಕೆ ಉಂಟಾಯಿತು? ಎಲ್ಲ ಲಕ್ಷಣಗಳಿಗೂ ಅನ್ವಯ ಆಗಬಹುದಾದ ಲಕ್ಷ್ಯಗಳು ಸಮೃದ್ಧವಾಗಿ ದೊರಕದೇ ಇರುವುದೇ ನಮ್ಮ ಕಾವ್ಯಗಳು ಮೀಮಾಂಸಾ ಲಕ್ಷಣಗಳಿಗೆ ಸಂಪೂರ್ಣ ಅನುಗುಣವಾಗಿ ರಚಿತವಾಗಿಲ್ಲ ಎಂಬುದನ್ನು ಹೇಳುತ್ತದೆ. ಹಾಗೆ ನೋಡಿದರೆ ಮಿಮಾಂಸಾ ಲಕ್ಷಣಗಳಿಗೆ ಲಕ್ಷ್ಯಗಳಾಗುವ ಪದ್ಯಗಳಿಗಿಂತ ಅಷ್ಟಾದಶ ವರ್ಣನೆಗಳಿಗೆ ಲಕ್ಷ್ಯಗಳಾಗುವ ರಚನೆಗಳೇ ನಮ್ಮಲ್ಲಿ ಹೆಚ್ಚಾಗಿ ಇವೆ. ಇದಕ್ಕೆ ಮಲ್ಲಕವಿ, ಮಲ್ಲಿಕಾರ್ಜುನ, ವಿದ್ಯಾನಂದರ ಕಾವ್ಯ ಸಂಗ್ರಹಗಳೇ ಸಾಕ್ಷಿ. ಎಲ್ಲ ಲಾಕ್ಷಣಿಕರು ಉದಾಹರಿಸಿರುವ ಲಕ್ಷ್ಯ ಪದ್ಯಗಳನ್ನು ಸಂಗ್ರಹಿಸಿ ಒಂದು ಸಂಗ್ರಹ ಗ್ರಂಥ ಮಾಡಿ ಅಭ್ಯಾಸ ಮಾಡಿದರೆ ಆಗ ನಮ್ಮ ಲಕ್ಷಣ-ಲಕ್ಷ್ಯ ಮಾದರಿಯ ಕಾವ್ಯರಚನೆಯ ಸ್ವರೂಪ ತಿಳಿಯಬಹುದು.

### 1.16. ವಸ್ತುಕ-ವರ್ಣಕ ಜಿಜ್ಞಾಸೆ

ವಸ್ತುಕ ಮತ್ತು ವರ್ಣಕ ಎಂಬುವು ಕನ್ನಡದ ಪ್ರಾಚೀನರಲ್ಲಿ ಪ್ರಚಲಿತದಲ್ಲಿದ್ದ ಎರಡು ಕಾವ್ಯ ಬರವಣಿಗೆಯ ಶೈಲಿಗಳು ಮತ್ತು ಎರಡು ಕಾವ್ಯಜಾತಿಗಳು. ಲೌಕಿಕ-ಆಗಮಿಕ ಮತ್ತು ದೇಸಿ-ಮಾರ್ಗ ಎಂಬುವು ಹೇಗೆ ಭಿನ್ನ ಶೈಲಿಗಳು ಮತ್ತು ಕಾವ್ಯ ಜಾತಿಗಳೂ ಆಗಿದ್ದವೋ ಹಾಗೆಯೇ ಇವು ಕೂಡ ಆಗಿದ್ದವು. ಒಂದೇ ಕಾವ್ಯದಲ್ಲಿ, ಈ ಎರಡೂ ಶೈಲಿಗಳು ಕಾಣಿಸಿಕೊಳ್ಳಬಹುದು. ಒಂದನ್ನೊಂದು ಹದವಾಗಿ-ಸಮವಾಗಿ ಬೆರೆಸದಂತೆ ಯಾವುದಾದರೊಂದಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿ ಕಾವ್ಯ ಬರೆವಾಗ ಅದನ್ನು ವಸ್ತುಕವೆಂದೊ, ವರ್ಣಕವೆಂದೊ ವರ್ಗೀಕರಿಸಬಹುದು. ಹಾಗಾಗಿ ನಮ್ಮಲ್ಲಿ ಕವಿಗಳನ್ನು ವಸ್ತುಕ ಕವಿ, ವರ್ಣಕ ಕವಿ ಎಂದು ಹಾಗೂ ಕಾವ್ಯಗಳನ್ನು ವಸ್ತುಕ, ವರ್ಣಕ ಕಾವ್ಯಗಳೆಂದು ವಿಂಗಡಿಸುವ ಪರಿಪಾಠವು ಉಂಟು. ಯಾವುದು ವಸ್ತುಕ? ಯಾವುದು ವರ್ಣಕ? ಎಂಬ ಬಗ್ಗೆ ನಮ್ಮ ಪರಂಪರೆಯಲ್ಲಿ ಒಮ್ಮತಾಭಿಪ್ರಾಯವಿಲ್ಲ. ಬೇರೆ ಬೇರೆ ಕಾಲಗಳಲ್ಲಿ ಈ ಭೇದಗಳಿಗೆ ಬೇರೆ ಬೇರೆ ಅರ್ಥವ್ಯಾಪ್ತಿ ಇದ್ದುದನ್ನು ಇತಿಹಾಸದ ಸಿಂಹಾವಲೋಕನದಿಂದ ಕಂಡುಕೊಳ್ಳಬಹುದು.[15]

1) ವಸ್ತು ಪ್ರಧಾನವಾದುದು ವಸ್ತುಕ, ವರ್ಣನಾ ಪ್ರಧಾನವಾದುದು ವರ್ಣಕ, 2) ಕಥನಕ್ಕೆ ಗಮನ ನೀಡುವುದು ವಸ್ತುಕ, ಅಷ್ಟಾದಶ ವರ್ಣನೆಗಳಿಗೆ ಗಮನ ನೀಡುವುದು ವರ್ಣಕ 3) ಚಂಪೂ ಮಾರ್ಗದ್ದು ವಸ್ತುಕ, ಕಂದ-ರಗಳೆ-ಷಟ್ಪದಿಗಳ ಮಾರ್ಗದ್ದು ವರ್ಣಕ, 4) ಪುರಾಣ ಮಾದರಿಯ ಕಥಾವಸ್ತುವಿನದು ವಸ್ತುಕ, ಹಾಡುಗಬ್ಬ-ಬಾಜನೆಗಬ್ಬಗಳದ್ದು ವರ್ಣಕ, 5) ಧಾರ್ಮಿಕ ಕಥನಗಳದ್ದು ವಸ್ತುಕ, ಲೌಕಿಕ ಕಥನಗಳದ್ದು ವರ್ಣಕ-ಹೀಗೆ ವಸ್ತುಕ ವರ್ಣಕಗಳ ಬಗ್ಗೆ ನಮ್ಮ ಕವಿಗಳಲ್ಲಿ ಹಲವು ನಂಬಿಕೆಗಳಿವೆ.

'ವರ್ಣಕಂ ಕತೆಯೊಳ್ ಒಡಂಬಡಂ ಪಡೆಯ ಪೇೞ್ವೊಡೆ ಪಂಪನೆ ಪೇೞ್ಗುಂ ಎಂದು ಪಂಡಿತರೇ ತಗುಳ್ದು ಬಿಚ್ಚಳಿಸೆ ಪೇಳಲೊಡರ್ಚಿದೆನೀ ಪ್ರಬಂಧಮಂ' (ವಿ.ವಿ. 1-11) ಎಂದು ಪಂಪ ಹೇಳುತ್ತಾನೆ. 'ವರ್ಣಕ ಕತೆಯೊಳ್ ಒಡಂಬಡಂ ಪಡೆಯೆ' ಎಂದರೆ ವರ್ಣಕವು ವಸ್ತುಕದೊಳಗೆ ಒಡಂಬಡಿಕೆಯಾಗುವಂತೆ ಎಂದು ಅರ್ಥ. ಈ ಎರಡೂ ಶೈಲಿಗಳು ಇವನ ಕಾವ್ಯದಲ್ಲಿ ಮಿಳಿತವಾಗಿ ಪ್ರಯೋಗವಾಗಿವೆ'' ಪಂಪನಷ್ಟೇ ಅಲ್ಲ ನಮ್ಮ ಬಹುಪಾಲು ಪ್ರಾಚೀನ ಮಹಾಕಾವ್ಯಗಳೆಲ್ಲವೂ ಕಥನ ಮತ್ತು ವರ್ಣನ ಶೈಲಿಗಳೆರಡನ್ನೂ ಬಳಸಿವೆ. ಅಥವಾ ವರ್ಣನದ ಮೂಲಕವೇ ಕಥನವಾಗಿವೆ. ವರ್ಣಕದ ಎಳೆಗಳು ಕೂಡಿ ಬೆಳೆದ ವಸ್ತುಕಗಳಾಗಿವೆ. ಹೀಗಾಗಿ ನಮ್ಮವರ ವಸ್ತುಕ ವರ್ಣಕ ಬಗೆಗಿನ ಜಿಜ್ಞಾಸೆಯು ಕಾವ್ಯತತ್ವದ ಜಿಜ್ಞಾಸೆಯಾಗಿ, ಕಾವ್ಯಪ್ರಕಾರದ ಜಿಜ್ಞಾಸೆಯಾಗಿ, ಕಾವ್ಯಶೈಲಿಯ ಜಿಜ್ಞಾಸೆಯಾಗಿ ಬೆಳೆದು ಬಂದಿದೆ. ಹಾಗಾಗಿ ಕಾವ್ಯಗಳಲ್ಲಿ ಅಂತರ್ಗತವಾಗಿರುವ ಈ ವಿಮರ್ಶಾ ವಿವೇಕಕ್ಕೆ ತತ್ವಜಿಜ್ಞಾಸೆಯೇ ತಾನು ಪ್ರಕಾರ ಜಿಜ್ಞಾಸೆಯೂ, ಶೈಲಿ ಜಿಜ್ಞಾಸೆಯೂ ಆಗುವ ಒಂದು ಚಹರೆ ಇದೆ.

### 1.18. ಲಕ್ಷಣ-ಲಕ್ಷ್ಯ ವಿಚಾರ

ಸಂಸ್ಕೃತ ಕಾವ್ಯಪರಂಪರೆ ಮತ್ತು ಮೀಮಾಂಸೆ ಎರಡನ್ನು ನಮ್ಮ ಕಾವ್ಯ ಕವಿಗಳು ಮತ್ತು ಶಾಸ್ತ್ರಕವಿಗಳು ಇಬ್ಬರೂ ಚೆನ್ನಾಗಿ ತಿಳಿದವರಾಗಿದ್ದರು. ಹಾಗಾಗಿ ಮೀಮಾಂಸೆ ಮಂಡಿಸಿದ ಲಕ್ಷಣಗಳನ್ನು ಅನುಸರಿಸುವ ಮತ್ತು ಕಾವ್ಯಗಳನ್ನೇ ಲಕ್ಷ್ಯಗಳನ್ನಾಗಿ ಸ್ವೀಕರಿಸುವ ಎರಡೂ ವರ್ತನೆಗಳನ್ನು ನಮ್ಮವರು ತೋರಿದ್ದಾರೆ. ಮೀಮಾಂಸೆಯ ಲಕ್ಷಣಗಳಿಗೆ, ಅಲ್ಲಿನ ಕಾವ್ಯ, ಶಾಸ್ತ್ರ ವಿಚಾರಗಳಿಗೆ ಕಾವ್ಯ ಪರಿಕರಗಳಿಗೆ ಸಾಕಷ್ಟು ಮಾನ್ಯತೆಯನ್ನು ಕೆಲವರು ಕೊಟ್ಟರೆ ಕೆಲವರು ಅವುಗಳನ್ನು ವಿರೋಧಿಸಿ ತಮ್ಮದೇ ಮೀಮಾಂಸೆ, ಲಕ್ಷಣಶಾಸ್ತ್ರ, ಕಾವ್ಯ ತತ್ವಗಳನ್ನು ಮಂಡಿಸಿದ್ದಾರೆ.

> ವಾಚಕ ವಾಚ್ಯ ವ್ಯಂಗ್ಯ ವ್ಯಂಜನ/ಸೂಚಿತ ಲಕ್ಷಣ ವಿವೇಕ
> ರ/ಸೋಚಿತ ಭಾವಾಲಂಕೃತಿ, ರೀತಿತ್ರಯ ಭೇಧಕ ಭೇದ್ಯ/ ಅಚರಿತೋಭಯ
> ಸಂಧಿ ಸಮಾಸ ವಿ/ವೇಚನೆಗಳ ಭೇಧಮನಿನಿಸರಿಯದೆ/ವಾಚಾಲತೆಯಿಂದುಸುರಿದ
> ದುಷ್ಕೃತಿಯಲ್ಲಿದು ಭಾವಿಪೊಡೆ (ಜ.ಕಾ. 1-26)

ಮೂರನೆ ಮಂಗರಸ ತನ್ನ ಕೃತಿಯನ್ನು ರಸಭರಿತ, ಧ್ವನಿಸಹಿತ, ಲಕ್ಷಣಪೂರ್ಣ ಕಾವ್ಯ ಎಂದು ಹೇಳುತ್ತಲೆ ದುಷ್ಕೃತಿ ಎಂದರೆ ಇವು ಯಾವೂ ಇಲ್ಲದಿರುವುದು ಎಂದೂ ಹೇಳುತ್ತಾನೆ. ಮೀಮಾಂಸೆಯ ರೀತಿ, ರಸ, ಧ್ವನಿ, ಅಲಂಕಾರ ಸಿದ್ಧಾಂತಗಳಿಗೆ ಅನುಗುಣವಾಗಿ ಸಂಧಿ ಸಮಾಸಗಳ ಎಚ್ಚರದಿಂದ ಛಂದಸ್ಸಿಗೆ ಕಟ್ಟುಬಿದ್ದು ಪಾಂಡಿತ್ಯದಿಂದ ಕಾವ್ಯ ರಚಿಸಿದವರೆಲ್ಲ ನಮ್ಮಲ್ಲಿ ಸಾಕಷ್ಟು ಮೂಲೆಗುಂಪಾಗಿದ್ದಾರೆ. ಆದರೂ ಲಕ್ಷಣಗಳಿಗೆ ಅನುಸಾರವಾಗಿ ಕಾವ್ಯ ಬರೆಯಬೇಕು ಎನ್ನುವ ತತ್ವವನ್ನು ನಮ್ಮ ಹಲವು ಕವಿಗಳು ಪ್ರತಿಪಾದಿಸಿದ್ದಾರೆ.

'ಪ್ರತಿಭಾ ಸಂಸ್ಕೃತಿಯಿಂ, ಅಳಂಕೃತಿಯಿಂ, ಅರ್ಥವ್ಯಕ್ತಿಯಿಂ ಸೂಕ್ತಮೀ ಕೃತಿ ಪುಣ್ಯಾಕೃತಿ' (ಸು.ಚ. 1-45) ಎಂದು ಅಲಂಕಾರ ಸಹಿತವೂ ಪ್ರತಿಭೆಯಿಂದ ಕೂಡಿರುವುದೂ ಅರ್ಥವ್ಯಕ್ತಿ ಉಳ್ಳುದೂ ಆದ ಪುಣ್ಯಕೃತಿ ನನ್ನದು ಎಂದು ಶಾಂತಿನಾಥ ಹೇಳಿಕೊಂಡಿದ್ದಾನೆ. ಮಹಾಕಾವ್ಯಗಳನ್ನು ಬರೆಯಹೊರಟ ನಮ್ಮ ಕವಿಗಳು ಅಲಂಕಾರ, ರಸ ರೀತಿ ಇತ್ಯಾದಿಗಳಿಗೆ ಸಾಕಷ್ಟು ಗಮನವನ್ನು ನೀಡಿದ್ದಾರೆ. ಗುಣ-ದೋಷ, ವಸ್ತುಕ-ವರ್ಣಕ, ದೇಸಿ-ಮಾರ್ಗ ಇವುಗಳ ಜಿಜ್ಞಾಸೆ ನಡೆಸಿದಂತೆಯೇ ಅಲಂಕಾರ, ರಸ, ರೀತಿ, ಪದ, ಅರ್ಥಗಳ ಬಗೆಗೂ ಜಿಜ್ಞಾಸೆ ನಡೆಸಿದ್ದಾರೆ. 'ಭಾವದುನ್ನತ ರಸಂ..ಎನ್ನ ಕಾವ್ಯರಸದೊಳ್.. ಪದ್ಯಂಗಳ್ ನವರಸನಿವದ್ಯಂಗಳ್.. ಕಾವ್ಯಂ ತಾನಿದು ನವರಸಸೇವ್ಯಂ.. ಸೌಖ್ಯಂ ಪ್ರಸನ್ನಂ ನವರಸವಿಭವಂ.. ರಸವತ್ಕಾವ್ಯಂ.. ಭಾವರಸದೊಳಾತ್ತ ಪ್ರಬಂಧಂ.. ನವರಸಂ ಅತಿಭಾವಾರ್ಥಂ..' (ಗಿ. ಕ. 1-೮ರಿಂದ 1-20) ಹೀಗೆ ಹರಿಹರ ಎಂಟು ಹತ್ತು ಪದ್ಯಗಳಲ್ಲಿ ಮತ್ತೆ ಮತ್ತೆ ರಸ ಭಾವಗಳನ್ನು ಪ್ರಸ್ತಾಪಿಸುತ್ತ ರಸಗಳೂ ಅವುಗಳಿಗೆ ಹೊಂದಿಕೊಂಡ ಭಾವಗಳೂ ಇದ್ದರೆ ಅದು ಶ್ರೇಷ್ಠ ಕಾವ್ಯ ಎಂದು ಹೇಳುತ್ತಾನೆ. ಕಾವ್ಯಂ ತಾನಿದು ನವರಸಸೇವ್ಯಂ ಎಂದು ಹೇಳುವ ಮೂಲಕ ನವರಸಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಾನೆ. ರಗಳೆಗಳ ತುಂಬ ಮೈದುಂಬಿ ಭಾವಾವೇಶದಿಂದ ಬರೆಯುವ ಹರಿಹರನಲ್ಲಿ ಭಾವ ಮತ್ತು ರಸಗಳು ಅವನ ಕಾವ್ಯದ ಆಚರಣೆಯಲ್ಲಿಯೂ ಪ್ರಧಾನ ಪಾತ್ರ ವಹಿಸಿವೆ. ತನ್ನ ತತ್ವರೂಪಿ ಮಾತುಗಳಿಂದ ಅಷ್ಟೇ ಅಲ್ಲ, ರಗಳೆಗಳನ್ನು ಬರೆದು ಆಚರಣೆಯ ಮೂಲಕವೂ ಹರಿಹರ ರಸಭಾವಗಳ ಪ್ರಾಮುಖ್ಯತೆ ಕಾವ್ಯ ಬರವಣಿಗೆಯಲ್ಲಿ ಎಷ್ಟು ಮಹತ್ತರವಾದದ್ದು ಎಂದು ಪ್ರತಿಪಾದಿಸಿದ್ದಾನೆ.

'ಯತಿ–ಮಾತ್ರೆ–ಪ್ರಾಸಾನ್ವಯ, ಸಂಧಿ–ಸಮಾಸ–ವಿಭಕ್ತಿಗಳ ಸ್ಥಿತಿ, ಕರ್ತೃ–ಕ್ರಿಯೆ–ಕಾರಕಗಳ ಸಮ್ಮತ ಸಂಬಂಧ ಇವೆಲ್ಲವುಗಳ ಇರುವಿಕೆ; ಕನ್ನಡ–ಸಂಸ್ಕೃತ ಎಂಬ ತೊಡಕು ಎಳ್ಳಷ್ಟು ಇಲ್ಲದಿರುವಿಕೆ..ಮೃದುತರ ಪದ, ವಾಚ್ಯ–ವ್ಯಂಗ್ಯ–ಲಕ್ಷ್ಯಾರ್ಥ, ಪ್ರಕರಣ–ಪ್ರಸಂಗೋಕ್ತ ರಸ, ರೀತಿ, ಭಾವ, ಅಲಂಕಾರ..ಕವಿಸಮಯ ಇವೆಲ್ಲವೂ ವಿರಾಜಿಸಲು ನಾನೀ ಕಾವ್ಯ ಹೇಳಿದೆನು' (ಕು.ರಾ.ಸಾಂ.11–111,112) ಎಂದು ನಂಜುಂಡಕವಿ ಹೇಳಿದರೆ, 'ಯತಿಗೆ ಅಳವಟ್ಟ, ಗುಣಸಹಿತವಾಗಿ ಬರೆಯಲ್ಪಟ್ಟ, ಚೆನ್ನಾಗಿ ಅಲಂಕಾರಗಳಿಗೆ ಅಳವಡಿಸಲ್ಪಟ್ಟ, ಮಾರ್ಗದಿಂದ ಎದುರುಗೊಂಡ, ರೀತಿಯಿಂದ ಆಳಲ್ಪಟ್ಟ, ರೂಪ–ರಸ–ಗಂಧಾದಿ ಧಾತುಗಳಿಂದ ಸ್ತುತಿಗೆ ಒಳಗಾದ, ಮಾತಿನ ಹರಿವು–ರಸಗಳ ಗಾನದಂತೆ ಇರುವ ಈ ಕೃತಿಯು ಹೊಸ ದೇಸೆಯಿಂದ ಶೋಭಿಸುತ್ತ ರಸಜ್ಞರನ್ನು ಸೋಲಿಸುವುದು ಆಶ್ಚರ್ಯವೇನೂ ಅಲ್ಲ' (ಲೀಲಾ.ಪ್ರ. 1–73) ಎಂದು ನೇಮಿಚಂದ್ರ ಹೇಳುತ್ತಾನೆ. ಇಬ್ಬರಲ್ಲೂ ಅಲಂಕಾರಶಾಸ್ತ್ರ, ಶಬ್ದಶಾಸ್ತ್ರ, ಛಂದೋಶಾಸ್ತ್ರ, ವ್ಯುತ್ಪತ್ತಿ, ಇವೆಲ್ಲವುಗಳಿಂದ ಕೂಡಿದ ಪಾಂಡಿತ್ಯವು ಕವಿಯೊಬ್ಬನಿಗೆ ಇರಲೇಬೇಕು ಎಂಬ ಭಾವವಿದೆ. 'ಯತಿವಿಲಂಘನದಿಂದರಿದಲ್ತೆ ಕನ್ನಡಂ' ಎಂದು ಶ್ರೀವಿಜಯ ಶತಮಾನಗಳ ಹಿಂದೆಯೇ ಹೇಳಿದರೂ ನೇಮಿ ಮತ್ತು ನಂಜುಂಡ ಇಬ್ಬರೂ ಯತಿಯನ್ನು ಬಿಟ್ಟಿಲ್ಲ. ಗುಣಸಹಿತವಾಗಿ ಬರೆಯುವುದು ಮತ್ತು ದೋಷಗಳ ಬಗ್ಗೆ ಎಚ್ಚರಿಕೆಯಿಂದ ಇರುವುದು ಹಾಗೂ ಹೊಸ ದೇಸಿಯನ್ನು ಬಳಸುವುದು ಈ ಮೂರನ್ನು ನಮ್ಮ ಬಹುಪಾಲು ಕವಿಗಳು ಹೇಳಿದ್ದಾರೆ. ಇವರೂ ಹೇಳುತ್ತಾರೆ. ಗುಣವರ್ಮನೂ ಇದೇ ರೀತಿಯ ಮಾತುಗಳನ್ನು ಆಡುತ್ತಾನೆ.

> ನವರಸಮಂ ನಿಮಿರ್ಚುವ, ಬೆಡಂಗನಮರ್ಚುವ, ದೋಷಮಂ ತಳ/ರ್ಚುವ
> ಗುಣಮಂ ಕಳಲ್ಚುವ, ಅಮರ್ದಿಂಪನೊಡರ್ಚುವ, ಬಂಧಮಂ ತೊಡ/ರ್ಚುವ
> ಕಿವಿವೊಕ್ಕಲರ್ಚುವ, ಎಳೆಗುಣ್ಪನೊಡರ್ಚುವ, ಕಾವ್ಯ ಸತ್ಕಳಾ/ರ್ಣವ
> ಮೃಗಲಕ್ಷ್ಮಲಕ್ಷಣ ವಚೋವಧುವಂ ಬುಧರೊಲ್ದು ವರ್ಣಿಕುಂ (ಪು.ಪು. 14–56)

ದೋಷಗಳನ್ನು ಕಳೆದು, ನವರಸಗಳನ್ನೂ ಹೆಚ್ಚಾಗಿ ಬೆಳೆಸಿ/ಬಳಸಬೇಕು ಎಂದು ಹೇಳುವ ಗುಣವರ್ಮ ಕಾವ್ಯವಧುವನ್ನು ಬುಧರು ಮೆಚ್ಚಬೇಕಾದರೆ ಅದರಲ್ಲಿ ಇನ್ನೂ ಏನೇನು ಇರಬೇಕು ಎಂದು ಹೇಳುತ್ತಾನೆ. ಮೀಮಾಂಸೆಯ ಕೆಲವು ಲಕ್ಷಣಗಳ ಜೊತೆಗೆ ಕಾವ್ಯಗಳಲ್ಲಿನ ಗುಣಗಳ ಬಗೆಗೂ ಹೇಳುತ್ತಾನೆ. ಬೆಡಂಗು, ಇಂಪು, ಬಂಧ, ಎಳೆಗುಣ್ಪು, ಸತ್ಕಳೆ ಮೊದಲಾದ ಈ ಗುಣಗಳು ನಮ್ಮ ಲಕ್ಷಣಶಾಸ್ತ್ರದ ಸಿದ್ಧಾಂತಗಳು ಬಣ್ಣಿಸದ, ಆದರೆ ಕಾವ್ಯಗಳು ಹೇಳುವ ಗುಣಗಳಾಗಿವೆ. ಇವೆಲ್ಲವು ಇದ್ದರೆ ಅಂತಹ ಕಾವ್ಯವನ್ನು ಬುಧರು ಮೆಚ್ಚುತ್ತಾರೆ. ತಮ್ಮ ಕೃತಿಗೆ ತಮಗೂ ಹಿಂದೆ ರಚಿತವಾಗಿರುವ ಕಾವ್ಯಗಳನ್ನೆ ಲಕ್ಷ್ಯಗಳನ್ನಾಗಿ ನಮ್ಮ ಹಲವಾರು ಕವಿಗಳು ಸ್ವೀಕರಿಸಿದ್ದಾರೆ.

ಲಕ್ಷಣ–ಲಕ್ಷ್ಯಗಳ ಬಗೆಗೆ ಬದ್ಧವಾಗದ ರೀತಿಯಲ್ಲಿಯೂ ಹಲವರು ಮಾತಾಡಿದ್ದಾರೆ. ವಚನಕಾರರಂತೂ ಮೀಮಾಂಸಾ ಪ್ರಣೀತ ತತ್ವಗಳನ್ನು ಕಟುವಾಗಿ ವಿರೋಧಿಸಿದ್ದಾರೆ. ವಸ್ತುಕ–ವರ್ಣಕ, ಅಷ್ಟಾದಶ ವರ್ಣನೆಗಳ ನಿಯಮ, ವ್ಯಾಕರಣ–ಛಂದಸ್ಸು ಇತ್ಯಾದಿ ಪರಿಕರಗಳು ಇವ್ಯಾವುವೂ ಕೂಡ ವಚನಕಾರರಿಗೆ ಬೇಕಾಗಲಿಲ್ಲ. ಮಹಾಕಾವ್ಯದ ರಚನಾವಿನ್ಯಾಸ–ತತ್ವಗಳನ್ನು ವಚನಕಾರರು ವಿರೋಧಿಸಿದ್ದಾರೆ. ಅವರ ಕಾವ್ಯದ ಸ್ವರೂಪವು ಮಹಾಕಾವ್ಯಕ್ಕಿಂತ ಸಂಪೂರ್ಣ ಭಿನ್ನವಾದದ್ದು.

> ವ್ಯಾಕರಣವನೋದಿದಲ್ಲಿ ಶಬ್ದ ಶುದ್ಧಿಯಲ್ಲದೆ/ಮನಶುದ್ಧವಾಗಿ ಜ್ಞಾನ ಶುದ್ಧಿಯಾಗದು
> ಛಂದಸ್ಸು ಸಾಧಿಸಿದಲ್ಲಿ ಕವಿತಾ ಶುದ್ಧಿಯಲ್ಲದೆ/ಕವಿತೆಯ ಸಾಧಿಸಿ ವ್ಯಾಸನಂತೆ ಚಿರಂಜೀವಿಯಾಗನು
> ಅಷ್ಟಾದಶ ಪುರಾಣವ ಸಾಧಿಸಿದಲ್ಲಿ ವಾಕ್ಶುದ್ಧಿಯಲ್ಲದೆ/..ದೇಹಸ್ವಭಾವ ಶುದ್ಧಿಯಾಗದು –ಸಿದ್ಧರಾಮ

ವ್ಯಾಕರಣ, ಛಂದಸ್ಸು, ಅಷ್ಟಾದಶ ವರ್ಣನಾ ವಿಧಾನಗಳೆಲ್ಲವನ್ನು ತಿಳಿದಾಕ್ಷಣ ಕವಿತೆ ರಚಿಸಲು ಸಾಧ್ಯವಿಲ್ಲ. ಇವುಗಳನ್ನೆಲ್ಲ ದಾಟಿದುದು ಕವಿತೆ. ಕವಿಯ ಶಬ್ದಪ್ರಯೋಗ, ವಾಕ್ ಅಂದರೆ ಮಾತಿನ ರೀತಿ ಶುದ್ಧವಾದರೆ ಮಾತ್ರ ಸಾಲದು ಮನವೂ ಶುದ್ಧವಾಗಬೇಕು, ದೇಹಸ್ವಭಾವವೂ ಶುದ್ಧವಾಗಬೇಕು. ಬರವಣಿಗೆ ಶುದ್ಧವಾಗಿದ್ದರೆ ಸಾಲದು ನಡತೆ ಶುದ್ಧವಾಗಿರಬೇಕು ಎನ್ನುವ ಸಿದ್ಧರಾಮ ನಿಜಕ್ಕೂ ವಿಮರ್ಶಿಸುತ್ತಿರುವುದು ಕಾವ್ಯದ ಬರವಣಿಗೆಯ ವಿಧಾನವನ್ನಲ್ಲ. ಕವಿಗಳ ಬದುಕಿನ ವಿಧಾನವನ್ನು. ಬದುಕು ಮತ್ತು ಬರವಣಿಗೆಯ ನಡುವಿನ ಲಕ್ಷಣ–ಲಕ್ಷ್ಯ ಸಂಬಂಧವನ್ನು. ನಮ್ಮ ವಚನಕಾರರೆಲ್ಲರಿಗೆ ಕಾವ್ಯವೇ ಲಕ್ಷಣ, ಬದುಕು ಅದಕ್ಕೆ ಲಕ್ಷ್ಯ.

### 1.19. ಲಕ್ಷಣ ವ್ಯಾಖ್ಯಾನ

ಕಾವ್ಯದ ಗುಣದೋಷಗಳನ್ನು ಕುರಿತು ಹೇಳುವಾಗ ಕಾವ್ಯದ ಒಳ್ಳೆಯ ಗುಣಲಕ್ಷಣಗಳು ಯಾವುವು ಎಂದು ಹೇಳುವ ಪರಿಪಾಠವು ನಮ್ಮಲ್ಲಿದೆ. ಹಾಗೇ ಹೇಳುವಾಗ ತಮ್ಮ ಇಡೀ ಕಾವ್ಯದಲ್ಲಿನ ಒಟ್ಟಾರೆ ಲಕ್ಷಣಗಳು ಯಾವುವು ಎಂದು ಪಟ್ಟಿ ಮಾಡುವ ಮತ್ತು ಆ ಮೂಲಕ ಸಾಮಾನ್ಯವಾಗಿ ಒಂದು ಒಳ್ಳೆಯ ಕಾವ್ಯದ ಲಕ್ಷಣಗಳು ಯಾವುವು ಎಂದು ತಾತ್ವೀಕರಿಸುವ ಎರಡೂ ಕೆಲಸಗಳನ್ನು ನಮ್ಮವರು ಮಾಡುತ್ತ ಬಂದಿದ್ದಾರೆ. ಮೀಮಾಂಸೆಯ ಲಕ್ಷಣಗಳಿಗೆ ತಕ್ಕ ಕಾವ್ಯವನ್ನು ರಚಿಸಬೇಕೆಂಬ ನಿಲುವಿಗಿಂತ ನಮ್ಮ ಕಾವ್ಯದ ಲಕ್ಷಣಗಳು ಯಾವುವು–ಎಂಥವು ಎಂದು ವ್ಯಾಖ್ಯಾನಿಸುವ ಪ್ರವೃತ್ತಿಯೇ ನಮ್ಮವರಲ್ಲಿ ಹೆಚ್ಚಾಗಿದೆ.

ತನ್ನ ವ್ಯಕ್ತಿತ್ವ ಮತ್ತು ಸ್ವಕಾವ್ಯ ಸ್ವರೂಪ ಹೇಳುವಾಗ 'ವಿದಿತಂ, ಪ್ರಾತೀತಕಂ, ಕೋಮಲಂ, ಅತಿಸುಭಗಂ, ಸುಂದರಂ, ಸೂಕ್ತಿಗರ್ಭಂ । ಮೃದುಸಂದರ್ಭಂ' (ಆ.ಪು. 1–26) ಹೀಗೆ ಕಾವ್ಯದಲ್ಲಿ ಎಂಥೆಂಥ ಲಕ್ಷಣಗಳು ಇರಬೇಕು ಎಂಬುದನ್ನು ಪಂಪ ಹೇಳುತ್ತಾನೆ. ಸರಿಸುಮಾರು ಇದೇ ರೀತಿಯ ಕಾವ್ಯ ಲಕ್ಷಣಗಳನ್ನು ಅಗ್ಗಳ ತನ್ನ ಚಂದ್ರಪ್ರಭ ಪುರಾಣದಲ್ಲಿ ಹೇಳುತ್ತಾನೆ. 'ನಾದಮಯವಾದ ಕಿವಿಗಿಂಪಾದ ಶಬ್ದ, ಆ ಶಬ್ದ ಸಂದರ್ಭಕ್ಕೆ ತಕ್ಕಂತೆ ಸವಿಯಾದ ಅರ್ಥ, ಅರ್ಥದಿಂದ ಹುಟ್ಟುವ ಒಳಿತಾದ ಭಾವ, ಆ ಭಾವದಿಂದ ಉಂಟಾಗುವ ನಾನಾ ರೀತಿಯ ರಸಗಳು ಇವೆಲ್ಲವೂ ಚಿತ್ತ ತುಂಬಿ ತುಳುಕಾಡುವಂತೆ ಕೃತಿಯನ್ನು ಒಪ್ಪವಾಗಿ ಹೇಳಬೇಕು' (ಚಂ.ಪು. 1–51) ಎಂದು ಹೇಳುತ್ತ, ಇದೇ ರೀತಿಯಲ್ಲಿ ನಾನು ಕೃತಿಯನ್ನು ಹೇಳಿದ್ದೇನೆ ಎನ್ನುತ್ತಾನೆ. ಈ ಮಾತುಗಳು ಸ್ವಕಾವ್ಯ ಸ್ವರೂಪ ನಿರ್ವಚನದ ಮಾತುಗಳೂ ಹೌದು. ಸುಕಾವ್ಯಲಕ್ಷಣ ವ್ಯಾಖ್ಯಾನದ ಮಾತುಗಳೂ ಹೌದು. ಹಾಗೆ ನೋಡಿದರೆ ನಮ್ಮ ಲಕ್ಷಣಗ್ರಂಥಗಳು ಹೇಳುವ ಕಾವ್ಯಲಕ್ಷಣಗಳಿಗೂ ಈ ಸ್ವಕಾವ್ಯಲಕ್ಷಣ ನಿರ್ವಚನಗಳು ನೀಡುವ ಕಾವ್ಯಲಕ್ಷಣಗಳಿಗೂ ಸಾಕಷ್ಟು ಅಂತರವಿದೆ. ಅತ್ಯಂತಿಕವಾಗಿ ಇವೆಲ್ಲವೂ ಕಾವ್ಯತತ್ವಗಳೇ ಆಗಿವೆ.

'ನವರಸ, ಅಲಂಕಾರ, ಜಾತಿ, ರೀತಿ, ಗಮಕಗುಣ, ಸೊಂಪು, ಇಂಪು, ನುಣ್ಪು, ಒಳ್ಪು, ಪ್ರಖರವಾದ ಭಾವಗಳು ಎಲ್ಲವು ನೆಲೆಗೊಂಡು ಕಾಣುವ ರಸವತ್ತಾದ ಗಾನದಂತಹ ಸುಂದರವಾದ ನನ್ನ ಕಾವ್ಯವನ್ನು.. ವಕ್ರಪದವಿನ್ಯಾಸ ಪ್ರಸಿದ್ಧರಾದ ಖಳರೆಂಬ ವಿಷಸರ್ಪಗಳೂ ಕೇಳಿಯೇ ಕೇಳುತ್ತವೆ' (ರಾ.ವಿ. 14–177). ರಾಜಶೇಖರ ಇಲ್ಲಿ ಒಳ್ಳೆಯ ಕಾವ್ಯದ ಲಕ್ಷಣಗಳು ಎಂಥವಾಗಿರಬೇಕು ಎನ್ನುವಾಗ ಅವು ವಿರೋಧಿಗಳನ್ನು ತಲೆದೂಗುವಂತೆ ಮಾಡಬಲ್ಲಂಥವಾಗಿರಬೇಕು ಎಂದು ಹೇಳುತ್ತಾನೆ. ನಮ್ಮ ಕವಿಗಳು ಕಾವ್ಯದ ಲಕ್ಷಣಗಳನ್ನು ಇಂಪು, ಸೊಂಪು, ಜಾತಿ, ರೀತಿ, ನುಣ್ಪು, ಒಳ್ಪು, ಸವಿ, ಮಾಧುರ್ಯ ಇತ್ಯಾದಿಯಾಗಿ ಹೇಳುತ್ತಾರೆಯೇ ವಿನಃ ಹಾಗೆಂದರೆ ಏನು ಎಂದು ವ್ಯಾಖ್ಯಾನ ನೀಡುವುದಿಲ್ಲ. ಅಥವಾ ಅವುಗಳಿಗೆ ಲಕ್ಷ್ಯಗಳನ್ನೇನೂ ಹೇಳುವುದಿಲ್ಲ. ಬರಿ ನಿರ್ವಚನ, ಲಾಕ್ಷಣೀಕರಣ ಅಷ್ಟೇ ಇವುಗಳ ಕೆಲಸ. ಕಾವ್ಯದ ಒಡಲಿನಲ್ಲಿ ಇವರು ಪೀಠಿಕೆಯಲ್ಲೂ ಹೇಳುವ ಲಕ್ಷಣಗಳಿಗೆ ತಕ್ಕಂತೆ ಲಕ್ಷ್ಯಗಳು ಇವೆಯೇ ಎಂದು ಓದುಗರಾದ ನಾವೇ ಕಂಡುಕೊಳ್ಳಬೇಕು ಅಷ್ಟೆ. ಹೇಳುವ ತತ್ವಕ್ಕೂ ಆಚರಿಸುವ ಆಚರಣೆಗೂ ಯಾವಾಗಲೂ ತಾಳಮೇಳ ಇರಲೇಬೇಕು ಎಂದೇನೂ ನಾವು ಭಾವಿಸಬೇಕಿಲ್ಲ ಕೂಡ. ಪೀಠಿಕೆಗಳ ತತ್ವಗಳಂತೆಯೇ ಒಡಲುಗಳು ಇವೆಯೇ ಎಂಬುದು ಪ್ರತ್ಯೇಕ ಅಧ್ಯಯನವಾದೀತು.

ಕಾವ್ಯಲಕ್ಷಣಗಳನ್ನು ಹೇಳುವಾಗ ನಮ್ಮ ಕವಿಗಳು ಸ್ವಕಾವ್ಯ ಲಕ್ಷಣಗಳನ್ನು ಹೇಳಿರುವಂತೆಯೇ ಅನ್ಯಕವಿ, ಅನ್ಯಕಾವ್ಯಲಕ್ಷಣಗಳನ್ನೂ ಹೇಳಿದ್ದಾರೆ. 'ಗುಣವರ್ಮನ ಜಾಣ್ನುಡಿ', 'ಪಂಪನಿಂಪು', 'ಪೊನ್ನನ ಬಗೆ' ಹೀಗೆ ಪೂರ್ವಕವಿಕಾವ್ಯಗಳ ಲಕ್ಷಣಗಳನ್ನು ಒಂದೊಂದೇ ಮಾತಿನ ಮೂಲಕ ನಿರ್ವಚಿಸಿದ್ದಾರೆ. (ಇದನ್ನು ವಿಸ್ತಾರವಾಗಿ ಬೇರೊಂದೆಡೆ ಚರ್ಚಿಸಲಾಗಿದೆ. ನೋಡಿ: ಪೂರ್ವಕವಿ ಸ್ಮರಣೆ)

### 1.20. ಫಲಶೃತಿ–ಪ್ರಯೋಜನ ಮೀಮಾಂಸೆ

ಸರಿಸುಮಾರು ನಮ್ಮ ಎಲ್ಲ ಕವಿಗಳೂ ಫಲಶೃತಿಗಳನ್ನು ಹೇಳಿದ್ದಾರೆ. ಫಲಶೃತಿಯು ನಮ್ಮ ಕಾವ್ಯಲಕ್ಷಣಗಳ ಒಂದು ಸಾಮಾನ್ಯ ಅಂಗ. ಫಲಶೃತಿಯನ್ನು ಹೇಳುವುದು ಒಂದು ಸಂಪ್ರದಾಯ ಎಂಬಂತೆ ನಮ್ಮ ಕವಿಗಳೆಲ್ಲ ಪಾಲಿಸುತ್ತ ಬಂದಿದ್ದಾರೆ. ಓದುಗ– ಕೇಳುಗರನ್ನು ಕಾವ್ಯದೆಡೆಗೆ ಸೆಳೆಯುವ ಒಂದು ತಂತ್ರವಾಗಿ ಇದು ಬಳಕೆಯಾಗಿದೆ. ಹಾಗೇ ಇದು ಕಾವ್ಯ ಪ್ರಯೋಜನ ಮೀಮಾಂಸೆ ಕೂಡ. ನಮ್ಮ ಕವಿಗಳು ಹೇಳುವ ಈ ಕಾವ್ಯ ಪ್ರಯೋಜನಗಳೆಲ್ಲ ಜನಕ್ಕೆ ನಿಜವಾಗಿಯೂ ಒದಗುತ್ತಿದ್ದವೋ ಎಂಬುದು ಬೇರೆ ಪ್ರಶ್ನೆ. ಆದರೆ ಈ ಪ್ರಯೋಜನೆಗಳೆಲ್ಲ ಒದಗುತ್ತವೆ ಎಂದು ನಮ್ಮವರು ನಂಬಿದ್ದರು ಮಾತ್ರ, 'ಭಾರತದಲ್ಲಿ ಒಂದೇ ಒಂದು

ಅಕ್ಷರವನ್ನು ಆದರದಿಂದ ಕೇಳಿದವರಿಗೆ ವೇದಪಾರಾಯಣದ ಫಲ, ಗಂಗಾದಿ ತೀರ್ಥಸ್ನಾನ ಫಲ, ಕೃಚ್ಛ್ರಾದಿ ತಪಸಿನ ಫಲ, ಜ್ಯೋತಿಷ್ಟೋಮ ಯಾಗಫಲ, ಮೇದಿನಿಯನು ಒಲಿದಿತ್ತ ಫಲ, ವಸ್ತ್ರಾದಿ ಕನ್ಯಾದಾನ ಫಲಗಳು ಒದಗುವವು' (ಗ.ಭಾ. 1–20, ಗಧಾಪರ್ವ 13–20) ಎಂದು ಕುಮಾರವ್ಯಾಸ ತನ್ನ ಕಾವ್ಯದಲ್ಲಿ ಎರಡೆರಡು ಕಡೆ ಹೇಳಿದ್ದಾನೆ.

ಕುಮಾರವ್ಯಾಸನ ಮಾತು ಲಕ್ಷ್ಮೀಶನ ಮಾತನ್ನು ಹೋಲುತ್ತದೆ ನೋಡಿ; 'ಉಪವನ ತಟಾಕ ಪ್ರತಿಷ್ಠೆ, ದೇವಾಲಯ ಪ್ರಪೆಗಳ ಸಕಲ ದಾನ, ಧರ್ಮೋಪಕಾರ, ವೇದ ಪುರಾಣದ ಓದಿನ ಫಲ, ಅಪರಿಮಿತವಾದ ಪುಣ್ಯಕ್ಷೇತ್ರವಾಸ, ತೀರ್ಥಸ್ನಾನದ ಫಲ, ಜಪ–ಹೋಮ–ಸುವ್ರತ–ಸಮಾಧಿಯೋಗ–ಧ್ಯಾನ–ತಪಗಳ ಫಲ, ಹರಿಹರಾರ್ಚನೆಯ ಸುಕೃತಗಳು ಜೈಮಿನಿಭಾರತದಲ್ಲಿನ ಒಂದು ಅಕ್ಷರವನ್ನು ಪ್ರೀತಿಯಿಂದ ಕೇಳಿದವರಿಗೆ ಒದಗುವವು.' (ಜೈ.ಬಾ. 34–43) ವೈದಿಕ ನಂಬಿಕೆಗಳ ಹಿನ್ನೆಲೆಯಿಂದ ಮಾತಾನಾಡುವ ಕುಮಾರವ್ಯಾಸ ಲಕ್ಷ್ಮೀಶರು ಇಲ್ಲಿ ಕಾವ್ಯದ ಲೌಕಿಕ ಮತ್ತು ಅಲೌಕಿಕವಾದ ಎರಡೂ ತೆರನ ಅನೇಕ ಪ್ರಯೋಜನಗಳು ಕಾವ್ಯ ಕೇಳಿಕೆಯಿಂದಲೇ ಲಭಿಸುತ್ತವೆ ಎಂದು ಹೇಳುತ್ತಾರೆ. ಯೋಗ, ಧ್ಯಾನ, ವಸ್ತ್ರದಾನ, ಕನ್ಯಾದಾನ, ಮೇದಿನಿಯ ದಾನ, ಉಪವನ–ತಟಾಕ ನಿರ್ಮಾಣ ಫಲ, ಪಕ್ಕಾ ಮೂರ್ತವಾದ ಫಲಗಳನ್ನು ತೋರುವ ಕ್ರಿಯೆಗಳಾದರೆ ವೇದಪಾರಾಯಣ ಫಲ, ತೀರ್ಥಸ್ನಾನ ಫಲ, ಪುಣ್ಯಕ್ಷೇತ್ರವಾಸ ಫಲ, ಅರ್ಚನೆಯ ಫಲ ಇತ್ಯಾದಿಗಳು ಅಮೂರ್ತ ಮತ್ತು ಅಲೌಕಿಕ ಫಲಗಳಾಗಿವೆ.

'..ಈ ಕಾವ್ಯವನ್ನು ಹೇಳುವವರಲ್ಲು ಕೇಳುವವರಲ್ಲು ಅಜ್ಞಾನವು ಇಲ್ಲವಾಗುವುದು. ಆತ್ಯಂತಿಕ ಸುಖವು ಕೈಗೂಡುವುದು' (ಜ.ವಿ. 18–112) 'ಭವ್ಯರೇ ನಿಮಗೊಂದು ಒಳ್ಳೆಯ ಕಥೆಯನ್ನು ಅತಿ ಮೃದುವಾಗಿ ಹೇಳುವೆನು ಕೇಳಿರಿ. ನೀವು ಕೇಳಿದುದಾದರೆ ಆತ್ಮಸುಖವು ಇಂದು ನಾಳೆ ನಾಡಿದ್ದರಲ್ಲಿ ಖಂಡಿತಾ ಒದಗುವುದು.' 'ಭರತೇಶವೈಭವವಿದು ಕೇಳಿರೋ ಅಡಿಗಡಿಗೂ ಸೌಭಾಗ್ಯವುಂಟಾಗುವುದು. ಶೋಭನವೂ(ಶುಭ) ಆಗುವುದು, ಇಂದ್ರಪದವಿಯು ದೊರೆಯುವುದು. ಕಟ್ಟಕಡೆಗೆ ಮೋಕ್ಷವೂ ದೊರೆಯುವುದು.' (ಭ.ವೈ. 1–11,12) 'ಚಂದ್ರೋದಯದಿಂದ ಕಮಲವನವು ಸಂಭ್ರಮಿಸುವಂತೆ ಯಶೋಧರ ಚರಿತೆ ಕಥಾಶ್ರವಣವೆಂಬ ಚಂದ್ರೋದಯದಿಂದ ಜನರಿಗೆ ಅಮಳ ದೃಷ್ಟಿಯು ಉಂಟಾಗುವುದು. ಈ ಕಥೆಯನ್ನು ಕೇಳಿ ಆಚರಿಸುವ ಜನಕ್ಕೆ ಕಷ್ಟಗಳೆಲ್ಲ ಪರಿಹಾರವಾಗುವುವು.' (ಯ.ಚ. 1–26) 'ಕಮಲದಲ್ಲಿ ಲಕ್ಷ್ಮೀಯು ಯಾವಾಗಲೂ ಇರುವುದಿಲ್ಲ. ಆದರೆ ಮುಖಕಮಲದಲ್ಲಿ ಇರುವಳು. ಉನ್ನತವಾದ ರುಚಿಯು ಅಮೃತಕ್ಕೂ ಕೂಡ ಯಾವಾಗಲೂ ಇರುವುದಿಲ್ಲ. ಆದರೆ ಇವರ ವಾಕ್ ಅಮೃತಕ್ಕೆ ಇರುತ್ತದೆ. ಸೌಖ್ಯವು ಯಾವಾಗಲೂ ದೇವತೆಗಳಿಗೆ ಮಾತ್ರವೇ ಮೀಸಲೇನೂ ಅಲ್ಲ. ಕಾವ್ಯವನ್ನು ಪ್ರೀತಿಯಿಂದ ಆಲಿಸುವವರಿಗೂ ಸೌಖ್ಯವು ಒದಗುತ್ತದೆ.' (ಆ.ನೇ.ಪು 1–32) 'ಮರೆತಾದರೂ ಜಿನನಾಮವನ್ನು ಸಂತೋಷದಿಂದ ಪಠಿಸುವವನು ಸ್ವಲ್ಪವೂ ದುಃಖವಿಲ್ಲದೆ ಅನಂತಸುಖವನ್ನು ಪಡೆಯುತ್ತಾನೆ ಎನ್ನುವುದಾದರೆ; ವಿಶೇಷ ಪುಣ್ಯಪ್ರದವಾದ ಜಿನನ ಚರಿತೆಯನ್ನು ಭಕ್ತಿಯಿಂದ ಕಾವ್ಯಮಾಡಿ ಹೇಳುವವನ ಕರ್ಮವು ಪರಿಹಾರವಾಗುವುದನ್ನು ಹಾಗೆ ಹೀಗೆ ಎನ್ನಲು ಬರುವುದೇ? (ಧರ್ಮಾ 1–54)

ಇಲ್ಲೆಲ್ಲ ಆತ್ಯಂತಿಕ ಸುಖ, ಆತ್ಮ ಸುಖ, ಮೋಕ್ಷ ಪದವಿ ಅಥವಾ ಮುಕ್ತಿ, ಅಮಲ ದೃಷ್ಟಿ, ದೇವತೆಗಳಿಗೆ ಒದಗಬಹುದಾದ ಅಮೃತ ಸುಖ, ಸ್ವರ್ಗ ಸುಖ, ಅನಂತ ಸುಖ, ಇಂತಹ ಮಾತುಗಳು ಹೇಳಲ್ಪಟ್ಟಿವೆ. ಕಾವ್ಯದ ರಸಾನಂದ, ವಿಚಾರ ವಿವೇಕ, ಧಾರ್ಮಿಕ ಭಾವ, ಲೌಕಿಕವಾದ ಆಚರಣೆ, ಒಟ್ಟಾರೆಯಾಗಿ ಇಂದ್ರಿಯ ಮೂಲದ ಅನುಭವ ಮತ್ತು ಅದರಿಂದ ರೂಪುಗೊಳ್ಳಬಹುದಾದ ಲೋಕ ನಡವಳಿಕೆ ಈ ಬಗ್ಗೆ ಫಲಶೃತಿಗಳು ಸಾಮಾನ್ಯವಾಗಿ ಹೇಳುತ್ತವೆ. ಆದರೆ ಈ ಮೇಲಿನ ಮಾತುಗಳು ಇವುಗಳನ್ನು ಮೀರಿದ ಇಂದ್ರಿಯಾತೀತ ಅನುಭವ ಮತ್ತು ಅಲೌಕಿಕ–ಆಧ್ಯಾತ್ಮಿಕ ಫಲಗಳ ಬಗ್ಗೆ ತಮ್ಮದೇ ವ್ಯಾಖ್ಯಾನ ಮಾಡುತ್ತಿವೆ. ಇಂದ್ರಪದವಿ ಹೊಂದುವುದೆಂದರೆ ಜೀವನ್ಮರಣಗಳ ಚಕ್ರದಿಂದ ಮುಕ್ತಿ ಹೊಂದಿ ತಾನೇ ದೈವ ಆಗಿಬಿಡುವುದು. ಮುಕ್ತಿ ಹೊಂದುವುದು, ಇಂದ್ರಪದವಿ ಪಡೆಯುವುದು, ದೇವತೆಗಳ ಸುಖಕ್ಕೆ ಸಮಾನವಾದ ಸೌಖ್ಯ ಪಡೆಯುವುದು, ಆತ್ಯಂತಿಕ ಸುಖ ಪಡೆಯುವುದು ಇವೆಲ್ಲವೂ ಒಂದೇ. ಈ ಲೋಕದ ಆಚೆಗಿನ ದೇವಲೋಕದ–ಅಲೌಕಿಕ ಬದುಕಿಗೆ ಸಲ್ಲುವುದು. ಇಂತಹ ಒಂದು ಶಕ್ತಿ ಕಾವ್ಯಕ್ಕೆ ಇದೆ ಎಂದು ನಮ್ಮವರು ನಂಬುತ್ತಾರೆ. ಕಾವ್ಯ ಫಲಶೃತಿ ಕೇವಲ ಓದುಗ ಕೇಳುಗರಿಗೆ ಮಾತ್ರವೇ ಅಲ್ಲ. ಅದು ಕವಿಗಳಿಗೂ ಅನ್ವಯಿಸುತ್ತದೆ. ನಯಸೇನ ಧರ್ಮಾಮೃತದಲ್ಲಿ ಕವಿಕರ್ಮಫಲವನ್ನು ಚರ್ಚಿಸುತ್ತಾನೆ. ಪಂಪ ಕೂಡ ಕವಿಕೇಂದ್ರಿತ ಫಲಶೃತಿ ಬಗ್ಗೆ ಹೇಳಿದ್ದಾನೆ. 'ಕವಿತೆಯಲ್ಲಿ ಆಸೆಪಡುವ ಫಲ ಯಾವುದೋ? ಪೂಜೆ ಭುವನಸ್ತುತವಾದ ನೆಗಳ್ತೆ, ಮುಕ್ತಿ

ಮುಂತಾದವು' (ಆ.ಪು 1-36) ಕವಿಯನ್ನು ಲೋಕಜನರು ಕೊಂಡಾಡುವ, ಪೂಜಿಸುವ ಕೀರ್ತಿ ಕಾವ್ಯದಿಂದ ಲಭಿಸುತ್ತದೆ. ಅಷ್ಟೇ ಅಲ್ಲ ಕೇಳುಗರಿಗೆ ಒದಗುವ ಮುಕ್ತಿ ಕವಿಗೂ ಒದಗುತ್ತದೆ.

ಯಾರ್‍ಯಾರಿಗೆ ಇಂಥ ಮುಕ್ತಿ ಒದಗುತ್ತದೆ? 'ಈ ಪ್ರಭುಲಿಂಗಲೀಲೆಯನ್ನು ನೋಡಿದರೆ, ಭಯಭಕ್ತಿಯಿಂದ ಕೊಂಡಾಡಿದರೆ, ರಾಗಬದ್ಧವಾಗಿ ಸೊಗಸಾಗಿ ಹಾಡಿದರೆ, ಕಿವಿಗೊಟ್ಟು ಕೇಳಿದರೆ, ತಿಳಿದು ಸಂತೋಷಪಟ್ಟರೆ ಅಂತಹವರು ಹುಟ್ಟು ಸಾವುಗಳಿಂದ ಬಿಡುಗಡೆ ಹೊಂದಿ ಮುಕ್ತಿ ಪಡೆಯುವರು' (ಪ್ರ.ಲಿಂ.ಲೀ. 25-24) ವಿಶೇಷವೆಂದರೆ ಚಾಮರಸನನ್ನೂ ಒಳಗೊಂಡ ಹಾಗೆ ನಮ್ಮ ಯಾವ ಕವಿಗಳೂ ಯಾರ್‍ಯಾರಿಗೆ ಮುಕ್ತಿ ದೊರೆಯುತ್ತದೆ ಎನ್ನುವಾಗ ವಿಮರ್ಶಕನನ್ನು ಮಾತ್ರ ಹೇಳುವುದಿಲ್ಲ. ಕಾವ್ಯವನ್ನು ಪರಿಶೀಲಿಸಿ ದೋಷ ಹಿಡಿದು ಹೇಳುವವನು ದುರ್ಜನ ಮಾತ್ರ. ಹೊಗಳುವವನು ಭಯ, ಭಕ್ತಿಯಿಂದ ಕೊಂಡಾಡುವವನು ಸಹೃದಯ. ಕಾವ್ಯದಿಂದ ಅವನಿಗೆ ಮಾತ್ರ ಮುಕ್ತಿ.

> ಪುದಿದಿರೆ ರಾಗಮ್ ಉರ್ಕೆ ಪೊಸವೇಟದಲಂಪುಗಳ್ ಎಲ್ಲಂ ಓದಿದರ್ಗೆ/ ಇದರ ಅನುಯಾಯಿಗಳ್ಗೆ
> ಎಸೆವ ಉದಾರಗುಣಂ ಸಕಲಾವನೀಶ್ವರ/ರ್ಗೆ ಅದಟಿನಳುರ್ಕೆ ಭೃತ್ಯನಿವಹಕ್ಕೆ ಚದುರ್ ಗಣಿಕಾಜನಕ್ಕೆ
> ಕು/ಂದದೆ ನೆಲೆಸಿರ್ಕೆಯೀ ಮಹೀತಳಕ್ಕೆ ಮದೀಯ ಕೃತಿಪ್ರಬಂಧದಿಂ (ವಿ.ವಿ. 14-63)

ಹೀಗೆ ಯಾರ್‍ಯಾರಿಗೆ ಏನೇನು ಲೌಕಿಕವಾದ ಫಲಗಳು ದೊರಕುತ್ತವೆಂದು ಪಂಪ ತನ್ನ ಒಂದು ಪದ್ಯದಲ್ಲಿ ಹೇಳಿದ್ದಾನೆ. ಸಾಮಾನ್ಯ ಓದುಗರು, ದೊರೆಗಳು, ಭೃತ್ಯ ಪರಿವಾರ, ಗಣಿಕಾಜನ ಇವರಿಗೆಲ್ಲ ಅವರವರಿಗೆ ಬೇಕಾದ ಲೌಕಿಕ ಫಲಗಳು ಕಾವ್ಯದಿಂದ ಲಭಿಸುತ್ತವೆ. ಪಂಪನಿಗಿಂತ ಬಿನ್ನವಾಗಿ ತನ್ನ ಉದ್ದೇಶಿತ ಓದುಗ ವರ್ಗಕ್ಕೆ ಏನು ಲಾಭ ಎಂಬುದನ್ನು ಸಂಚಿಯ ಹೊನ್ನಮ್ಮ ಹೇಳುತ್ತಾಳೆ. 'ಪತಿವ್ರತೆಯರ ನಡತೆ, ಸತೀಧರ್ಮ, ಪತಿಭಕ್ತಿ, ಚತುರತೆ, ಅತ್ತೆ ನಾದಿನಿಯರ ಜೊತೆ ಜಗಳವಾಡದೆ ಬಾಳುವ ಗುಣ, ಸವತಿಯರೊಡನೆ ಒಂದಾಗಿ ಬಾಳುವ ಗುಣ ಮೊದಲಾದುವು ಇದರಿಂದ ಒದಗುವವು' (ಹ.ಧ. 1-50ರಿಂದ 60) ಕಾವ್ಯವು ಈ ಬದುಕಿನ ಆಚೆಗೆ ಮುಕ್ತಿ, ಸ್ವರ್ಗಸುಖ, ಇಂದ್ರಪದವಿ ಇತ್ಯಾದಿಗಳನ್ನು ಕೊಡುತ್ತದೋ ಬಿಡುತ್ತದೋ ಬಲ್ಲವರಾರು? ಆದರೆ ಈ ಲೋಕದ ಬದುಕಿಗೆ ಬೇಕಾದ ಗುಣ-ತಾಕತ್ತುಗಳನ್ನು ಕಾವ್ಯ ಕೊಡುತ್ತವೋ? ಹೌದು ಎನ್ನುತ್ತಾರೆ ನಮ್ಮ ಕವಿಗಳು. ಈ ದೃಷ್ಟಿಯಿಂದ ಇಂದ್ರಿಯಬದ್ಧ ಮತ್ತು ಅತೀಂದ್ರಿಯ, ಲೌಕಿಕ ಮತ್ತು ಪಾರಮಾರ್ಥಿಕ ಈ ಎರಡೂ ರೀತಿಯ ಫಲಪ್ರಾಪ್ತಿಗಳನ್ನು ನಮ್ಮವರು ಚರ್ಚಿಸಿದ್ದಾರೆ. ಇದರ ವಿಸ್ತರಣೆಯಂತೆಯೇ ಪಾಪ ಪುಣ್ಯದ ಜಿಜ್ಞಾಸೆಯು ಬರುತ್ತದೆ. 'ಈ ಧರೆಯಲ್ಲಿ ಹರಿಶ್ಚಂದ್ರ ಚಾರಿತ್ರವನ್ನು ಕೇಳಿದ ನರರ ಏಳೇಳು ಜನ್ಮಗಳ ಪಾತಕವು ಸೂರ್ಯನ ಉದಯದ ಎದುರಿನ ಕತ್ತಲಿನಂತೆ ಕಳೆದು ಹೋಗುವುದು. (ಹ.ಕಾ.14-32) ಎಂದು ರಾಘವಾಂಕ ಹೇಳಿದರೆ 'ಈ ಜಿನಕತೆಯನ್ನು ಕೇಳಿದವರ ಪಾಪಬೀಜವು ನಿರ್ನಾಶನವಾಗುವುದು. ತೇಜಸ್ಸೂ ಪುಣ್ಯವೂ ಲಭಿಸುವುದು. ಆಮೇಲೆ ಅಪರಾಜಿತೇಶ್ವರನ ದರ್ಶನವೂ ಲಭಿಸುವುದು.' (ಭ.ವೈ. 1-125) ಎಂದು ರತ್ನಾಕರ ಹೇಳುತ್ತಾನೆ.

ಈ ಫಲಶೃತಿಗಳನ್ನು ಹೇಳುವಾಗ ತುಷ್ಟಿ, ಪುಷ್ಟಿ, ಸುಬುದ್ಧಿ, ಅನುಮಾನ ಪರಿಹಾರ, ಕಷ್ಟ ಪರಿಹಾರ ಇತ್ಯಾದಿ ಫಲಗಳನ್ನು ಕಾವ್ಯವೇ ಒದಗಿಸುವುದು ಎಂದು ಕೆಲವರು ಹೇಳಿದರೆ ಇನ್ನು ಕೆಲವರು ಇವುಗಳನ್ನೆಲ್ಲ ನಮ್ಮ ಇಷ್ಟದೇವಗಳು ಓದುಗರಿಗೆ ಒದಗಿಸಲಿ ಎಂದು ಕೇಳಿಕೊಳ್ಳುತ್ತಾರೆ. ಮುಕ್ತಿಯ ವಿಷಯದಲ್ಲೂ ಹಾಗೆಯೇ ಕೆಲವರು ಕಾವ್ಯದಿಂದ ಇದು ಒದಗುತ್ತದೆ ಎಂದು ಹೇಳಿದರೆ ಕೆಲವರು ಇಷ್ಟದೈವವು ಮುಕ್ತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸಿದ್ದಾರೆ.

> ಭುವನಸ್ತುತ್ಯ ಜಿನಸ್ತವಂಗಳೊಳಗೆ ಒಂದಂ ಚಿತ್ತದೊಳ್ ಮೆಚ್ಚಿ
> ಬೆ/ಚ್ಚವೊಲ್ ಎತ್ತಾನುಂ ಒರಲ್ದು ಚಿಂತಿಸಿದವಂಗಂ ಸಾರ್ವ ಪುಣ್ಯಾಸ್ರವಂ
> ಪವಣಿಲ್ಲ ಎಂದೊಡೆ ಮೇರೆಯಿಲ್ಲದ ಜಿನೋಕ್ತಾರ್ಥೋಕ್ತಿಯಂ
> ವ್ಯಕ್ತಮಾ/ಗೆ ವಲಂ ಭಕ್ತಿಯಿನ್ ಓತು ಪೇಳ್ವವನ ಪುಣ್ಯಪ್ರಾಪ್ತಿ ಸಾಮಾನ್ಯಮೇ? (ಸು.ಚ. 1-59)

ಅಸಾಮಾನ್ಯವಾದ ಪುಣ್ಯ ಸಂಪಾದನೆಯ ಆತ್ಯಂತಿಕವಾದ ಉದ್ದೇಶವೂ ಮುಕ್ತಿಯೇ ಆಗಿದೆ. ಹೀಗಾಗಿ ಹರಿಹರ, ರಾಘವಾಂಕ, ರತ್ನಾಕರ, ಕಮಲಭವ ಮೊದಲಾದ ಕವಿಗಳು ಧರ್ಮಾತೀತವಾಗಿ ಪಾಪ ಪುಣ್ಯ ಜಿಜ್ಞಾಸೆಯಲ್ಲಿ ತೊಡಗಿದ್ದಾರೆ. ಈ ಪಾಪ ಪುಣ್ಯ ಜಿಜ್ಞಾಸೆಯು ಮುಕ್ತಿಪ್ರಾಪ್ತಿಯ ಜಿಜ್ಞಾಸೆಯೇ ಆಗಿರುವುದರಿಂದ ಕಾವ್ಯಫಲಶೃತಿಯ ಒಂದು ಪ್ರಮುಖವಾದ ತತ್ವವು ಮುಕ್ತಿಪ್ರಾಪ್ತಿಯ ತತ್ವವೇ ಆಗಿದೆ.

### 1.20. 1. ಕನ್ನಡದ ಕುವಿಮರ್ಶಕದ್ವಯರು

ಕವಿಜಿಹ್ವಾಬಂಧನ ಬರೆದಿರುವ ಈಶ್ವರ ಕವಿ ಶುಭಾಶುಭ ಫಲಗಳನ್ನು ಹೇಳುವ ಬ್ರಾಹ್ಮಣ್ಯ ಬುದ್ಧಿಯ ಜ್ಯೋತಿಷಿಯಂತೆಯೆ ಮಾತನಾಡಿದ್ದಾನೆ. ಮೂರು ಅಧ್ಯಾಯಗಳಲ್ಲಿ ಛಂದಸ್ಸಿನ ವಿಚಾರಗಳನ್ನು ಹೇಳಿ ನಾಲ್ಕನೆ ಅಧ್ಯಾಯದಲ್ಲಿ ಜ್ಯೋತಿಷ್ಯ, ಕಾವ್ಯಮೀಮಾಂಸೆ, ವ್ಯಾಕರಣ, ಕಾಮ ವಿಚಾರ, ಮೋಹಗಳನ್ನು ಹೇಳಿದ್ದಾನೆ. ಇವಕ್ಕೂ ಛಂದಸ್ಸಿಗೂ ಏನು ಸಂಬಂಧವೋ ತಿಳಿಯದು. ಈ ಅಧ್ಯಾಯದ ಒಂದೇ ಒಂದು ಅಗ್ಗಳಿಕೆಯೆಂದರೆ ಮಾತ್ರಾಷಟ್ಪದಿಗಳ ಲಕ್ಷಣಗಳನ್ನು ಹೇಳಿರುವುದು. ಕವಿಜಿಹ್ವಾಬಂಧನ ಎನ್ನುವುದು ನಿಜವಾಗಿಯೂ ಕವಿಗಳ ನಾಲಿಗೆಯನ್ನು ಬಂಧಿಸುವ ನಿಯಮ. ನಿರ್ಬಂಧಗಳ ಮಾಟ-ಮಂತ್ರ ಧಾಟಿಯ ಕೃತಿಯೇ ಆಗಿದೆ. ಕನ್ನಡದ ಒಬ್ಬ ಫಲಜೋತಿಷಿ ಕುವಿಮರ್ಶಕನಂತೆ ಇವನು ಕಾಣುತ್ತಾನೆ. ಯಾವ ವರ್ಣ ಎಲ್ಲಿ ಬಳಸಿದರೆ ಯಾವ ಫಲ, ಯಾವ ಪದ ಯಾವ ಸ್ಥಾನದಲ್ಲಿ, ಯಾವ ವಿಭಕ್ತಿ ಯಾವ ಕಡೆ ಬಳಸಿದರೆ ಏನು ಫಲಗಳಾಗುತ್ತವೆ, ಹೇಗೆ ಬರೆದರೆ ಆಶ್ರಯದಾತ ದೊರೆಗೆ ಏನು ಕಂಟಕವಾಗುತ್ತದೆ ಎಂಬ ತಲೆಬುಡವಿಲ್ಲದ ಬೆದರಿಕೆಯ ವಿಧಿ-ನಿಷೇಧಗಳನ್ನು ಈತ ತನ್ನ ಕವಿಜಿಹ್ವಾಬಂಧನದಲ್ಲಿ ಹೇಳಿದ್ದಾನೆ. ಇವನನ್ನು ಪೂರ್ಣ ಅನುಸರಿಸಿದರೆ ಕವಿಯಾದವನು ನಿಜವಾಗಿಯೂ ಕೆಟ್ಟು ಕೆರ ಒಡಿದು ಹೋಗುತ್ತಾನೆ.

ಈ ಈಶ್ವರಕವಿಯಂತೆಯೆ ವೀರಭದ್ರಕವಿ ತನ್ನ ನಂದಿ ಛಂದೋರ್ಣವದಲ್ಲಿ ಕನ್ನಡ ವರ್ಣಮಾಲೆಯ ವರ್ಣಗಳನ್ನು ಐದು ವರ್ಗಗಳನ್ನಾಗಿ ಪವನ, ದಹನ, ಅವನಿ, ವಾರಿ, ಗಗನ ಹೀಗೆ ಪಂಚಭೂತಗಳಲ್ಲಿ ವರ್ಗೀಕರಿಸಿ, ಅವುಗಳಿಗೆ ಇರುವ ಫಲಗಳನ್ನು ಕ್ರಮವಾಗಿ ಮೃತಿ, ಮೋದ, ಸಂಪದ, ಕ್ಷೇಮ, ಶೋಕಗಳೆಂದಿದ್ದಾನೆ. ಈಶ್ವರಕವಿ ವರ್ಣಗಳನ್ನು ಚತುರ್ವರ್ಣ ಮತ್ತು ಪಂಚಮವರ್ಣಗಳಿಗೆ ಹಂಚಿ ಬ್ರಾಹ್ಮಣ್ಯಗುಣ ತೋರಿದರೆ ಈತ ಜ್ಯೋತಿಷ್ಯ ಫಲಗಳನ್ನು ಹೇಳಿದ್ದಾನೆ. ಅಲ್ಲದೆ ಅಕ್ಷರಗಳಿಗೆ ವರ್ಣಕೂಟ, ಗಣಕೂಟ, ರಾಶಿಕೂಟ, ರಾಶಿಫಲಗಳನ್ನೆಲ್ಲ ಹೇಳಿದ್ದಾನೆ! ಇವನೂ ಕೂಡ ಸ್ವಲ್ಪ ಜೋತಿಷಿಯ ಹಾಗೇ ವರ್ತಿಸುತ್ತಾನೆ. ಇವರಿಬ್ಬರೂ ಕನ್ನಡದ ಇಬ್ಬರು ಕುವಿಮರ್ಶಕದ್ವಯರು.

ಹೀಗೆ ನಮ್ಮವರು ಹತ್ತು ಹಲವು ರೂಪಗಳಲ್ಲಿ ತಮ್ಮದೇ ತತ್ವಗಳನ್ನು ಮಂಡಿಸಿದ್ದಾರೆ. ಹೀಗೆ ಮಂಡಿಸುವಾಗ ಇವುಗಳೆಲ್ಲವೂ ಅಭಿಪ್ರಾಯಗಳ ಮಟ್ಟದಲ್ಲಿ ಉಳಿದುಕೊಂಡಿವೆ. ಸಿದ್ಧಾಂತಗಳಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸುವ ಇರಾದೆ ನಮ್ಮವರಲ್ಲಿ ಇರಲಿಲ್ಲ. ಹಾಗೆ ಸಿದ್ಧಾಂತಗಳನ್ನು ಮಂಡಿಸುವುದೂ ಇವರ ಉದ್ದೇಶವಾಗಿರಲಿಲ್ಲ. ವಿಮರ್ಶೆಯ ಉದ್ದೇಶದಿಂದ ರಚಿತವಾದ ವಿಮರ್ಶೆ ಇವರದಲ್ಲ. ಆದರೆ ಇವರೆಲ್ಲರ ಅಭಿಪ್ರಾಯಗಳನ್ನು ಕ್ರೋಡೀಕರಿಸಿಕೊಂಡು, ಮರುಸಂಯೋಜಿಸಿಕೊಂಡು ಅವುಗಳ ಮೂಲಕ ಪ್ರತಿಪಾದಿತವಾಗಬಹುದಾದ ತಾತ್ವಿಕತೆ-ಸಿದ್ಧಾಂತಗಳನ್ನು ನಾವು ರೂಪಿಸಿಕೊಳ್ಳಬೇಕಿದೆ. ಪಂಥ ಮಾರ್ಗಗಳನ್ನು ಕಟ್ಟಿಕೊಳ್ಳಬೇಕಿದೆ.

### 2.ಆಚರಣೆಯ ತಾತ್ವೀಕರಣ

ಕಾವ್ಯಗಳನ್ನು ಹೇಗೆ ಬರೆಯಬೇಕು ಎಂಬ ನಿಯಮವನ್ನು ಅಜಮಾಸು ಹೇಳುವ ಹಲವು ಶಾಸ್ತ್ರಗಳು ನಮ್ಮಲ್ಲಿದ್ದವು. ವ್ಯಾಕರಣ, ಪದಕೋಶ, ಭಾಷಾಶಾಸ್ತ್ರ, ಮೀಮಾಂಸೆ, ಛಂದಸ್ಸು ಶಾಸ್ತ್ರ ಇವುಗಳೆಲ್ಲ ಇಂಥ ಕೆಲಸವನ್ನು ಮಾಡುತ್ತ ಬಂದಿವೆ. ಆದರೂ ಇವುಗಳಿಗೆ ಕಾವ್ಯಗಳನ್ನು ಮೌಲ್ಯಮಾಪನ ಮಾಡುವ, ನಿರ್ದೇಶಿಸಿ-ನಿಯಂತ್ರಿಸುವ ಶಕ್ತಿ ಇದ್ದಂತೆ ಕಾಣುವುದಿಲ್ಲ. ಇವುಗಳಲ್ಲಿ ಕಾವ್ಯಗಳು ಹೀಗೆ ಹೀಗೇ ಬರೆಯಲ್ಪಡಬೇಕು ಎಂಬ ಬಗ್ಗೆ ಅಲ್ಪ ಸ್ವಲ್ಪ ಮಾರ್ಗದರ್ಶಿ ಮಾತುಗಳು ಇರಬಹುದು ಅಷ್ಟೆ. ಆದಾಗ್ಯೂ ಕಾವ್ಯ ಪರಂಪರೆ ಮತ್ತು ಕಾವ್ಯವರ್ತಮಾನವನ್ನು ನೋಡಿ ಅನುಕರಿಸುವ, ಮರುಸೃಷ್ಟಿಸುವ(ಪುನರ್ಕಥಿಸುವ), ಮೀರುವ, ಭಿನ್ನ-ಹೊಸಮಾರ್ಗ ನಿರ್ಮಿಸುವ ಹಲವು ಪ್ರವೃತ್ತಿಗಳು ಬಹು ಕಾಲದಿಂದ ನಡೆದು ಬಂದಿವೆ. ಅಂದರೆ: ಕಾವ್ಯಗಳು ಹೇಗೆ ರಚನೆಯಾಗಬೇಕು ಎಂಬುವಕ್ಕೆ ಉತ್ತರಗಳನ್ನು, ರಚಿತವಾಗಿರುವ ಕಾವ್ಯಗಳನ್ನು ನೋಡಿ ಕಂಡುಕೊಳ್ಳುವ ಪರಿಪಾಠವೊಂದು ಬಹುಕಾಲದಿಂದ ನಡೆದು ಬಂದಿದೆ. ಮೀಮಾಂಸೆ-ಲಕ್ಷಣಶಾಸ್ತ್ರದ ಕಲಿಕೆಯಿಂದ ಕಾವ್ಯ ಕಟ್ಟುವುದಕ್ಕಿಂತ ಕಾವ್ಯ ಪರಂಪರೆಯ ತಿಳುವಳಿಕೆ, ಮತ್ತು ಬದುಕನ್ನು ಬರೆಯುವ ದರ್ದಿನಿಂದ ಕಾವ್ಯ ಕಟ್ಟಿರುವುದೇ ನಮ್ಮಲ್ಲಿ ಹೆಚ್ಚು.

## 2.1. ರೂಪ-ಶೈಲಿ ಮೀಮಾಂಸೆ: ಕಾವ್ಯವೆಂಬ ಹುಚ್ಚು

ಕಾವ್ಯ ಎಂಬುದು ಪ್ರಾಚೀನರಲ್ಲಿ ಒಂದು ಅಭಿವ್ಯಕ್ತಿರೂಪ. ಹಾಗೆ ಅದು ಒಂದು ಬರವಣಿಗೆಯ ವಿಧಾನ; ಅಥವಾ ಹಲವು ವಿಧಾನಗಳ ಮೊತ್ತ. ಎಲ್ಲ ರೀತಿಯ ವಸ್ತು-ಶಿಸ್ತುಗಳನ್ನು ಕಾವ್ಯರೂಪದಲ್ಲೇ ಹೇಳಬೇಕು ಎಂಬ ನಂಬಿಕೆ ಮತ್ತು ಆಚರಣೆಯೊಂದು ನಮ್ಮ ಪರಂಪರೆಯುದ್ದಕ್ಕು ಇದೆ. ಶೃಂಗಾರರಾಜನ ಕರ್ನಾಟಕ ಸಂಜೀವನ(1600) ಎಂಬ ನಿಘಂಟು, ಸೋಮೇಶ್ವರನ 'ಮಾನಸೋಲ್ಲಾಸ'(1130) ಎಂಬ ಛಂದೋಗ್ರಂಥ, ಮಂಗರಾಜನ 'ಖಗೇಂದ್ರಮಣಿ ದರ್ಪಣ'(1360) ಎಂಬ ವಿಷವೈದ್ಯ ಗ್ರಂಥ, ಮಂಗರಸನ 'ಸೂಪಶಾಸ್ತ್ರ'(1508) ಎಂಬ ಪಾಕಶಾಸ್ತ್ರ ಗ್ರಂಥ, ನರಸಿಂಹರಾಜನ 'ಗಣಿತಸಾರ'(1650) ಎಂಬ ಗಣಿತಶಾಸ್ತ್ರ ಗ್ರಂಥ, ಶ್ರೀಧರಾಚಾರ್ಯನ 'ಜಾತಕ ತಿಲಕ'(1049) ಎಂಬ ಜ್ಯೋತಿಷ್ಯ ಶಾಸ್ತ್ರ ಗ್ರಂಥ, ಕಲ್ಲರಸನ 'ಜನವಶ್ಯ'(1450) ಎಂಬ ಕಾಮಶಾಸ್ತ್ರ ಗ್ರಂಥ, ಚಾವುಂಡರಾಯನ 'ಲೋಕೋಪಕಾರ'(1025) ಎಂಬ ಜ್ಞಾನಕೋಶ, ರಾಮಾಮಾತ್ಯನ 'ಸ್ವರಮೇಳ ಕಳಾನಿಧಿ'(1550) ಎಂಬ ಸಂಗೀತಶಾಸ್ತ್ರ ಗ್ರಂಥ, ಸಿಂಹರಾಜನ 'ಚಿನ್ಮಯ ಚಿಂತಾಮಣಿ'(1650) ಎಂಬ ನೀತಿ ಶಾಸ್ತ್ರಗ್ರಂಥ ಹೀಗೆ ಯಾವುದೇ ಶಾಸ್ತ್ರ ಗ್ರಂಥವಿರಲಿ ಎಲ್ಲವನ್ನು ಕಾವ್ಯರೂಪದಲ್ಲೇ ಹೇಳಬೇಕು ಎಂಬ ಆಚರಣೆಯೊಂದು ನಮ್ಮ ಪರಂಪರೆಯುದ್ದಕ್ಕೂ ಇದೆ. ರೂಪಗಳನ್ನು ನೋಡಿದರೆ ನಮ್ಮ ಪ್ರಾಚೀನರಲ್ಲಿ  ನಿಘಂಟು, ಮಿಮಾಂಸೆ, ಕಾಮಶಾಸ್ತ್ರ, ಸೂಪಶಾಸ್ತ್ರ, ಸಂಗೀತ ಶಾಸ್ತ್ರ ಇತ್ಯಾದಿ ಎಲ್ಲವನ್ನೂ ಕಾವ್ಯರೂಪದಲ್ಲೆ ಹೇಳುವುದು ಒಂದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಕಾವ್ಯದಿಂದ ಆಚೆಗೆ ಹೋಗಿ ನಾಟಕವನ್ನು ರಚಿಸುವ ಯತ್ನವನ್ನು ಮಾಡಿರುವ ಸಿಂಗರಾರ್ಯ (ಅದೂ ಅನುವಾದ) ಒಬ್ಬನನ್ನು ಬಿಟ್ಟರೆ ಇನ್ನು ಮಿಕ್ಕವರೆಲ್ಲರೂ ಕಾವ್ಯದಲ್ಲೆ ಭಿನ್ನ ಪ್ರಯೋಗಗಳನ್ನು ಮಾಡುತ್ತ ಬಂದಿದ್ದಾರೆ.

ಬೇರೆ ಬೇರೆ ಛಂದಸ್ಸುಗಳಲ್ಲಿ, ಮಿಶ್ರ ಛಂದಸ್ಸುಗಳಲ್ಲಿ, ಛಂದೋಮುಕ್ತವಾಗಿ, ಭಿನ್ನ ಆಕೃತಿಗಳಲ್ಲಿ ಕಾವ್ಯ ಪ್ರಯೋಗಗಳನ್ನು ಮಾಡಿದ್ದಾರೆ. ಛಂದೋದೃಷ್ಟಿಯಿಂದ ನೋಡಿದರೆ ಚಂಪು, ಷಟ್ಪದಿ, ರಗಳೆ, ಕಂದ, ಸಾಂಗತ್ಯ, ತ್ರಿಪದಿ ಮೊದಲಾದ ಹಲವಾರು ಛಂದಸ್ಸುಗಳು ಕಾವ್ಯದ ಆಕೃತಿಮೀಮಾಂಸೆಯನ್ನು ರೂಪಿಸಿವೆ. ಕಾವ್ಯರೂಪಗಳ ದೃಷ್ಟಿಯಿಂದ ನೋಡಿದರೆ ಮಹಾಕಥನ ಕಾವ್ಯ, ಕಿರುಕಾವ್ಯ, ತ್ರಿವಿಧಿ, ಬಿಡಿ ತ್ರಿಪದಿ (ಸರ್ವಜ್ಞ), ವಚನ, ರಗಳೆ, ಸ್ವರವಚನ, ಕೀರ್ತನೆ, ತತ್ವಪದ, ಗದ್ಯಕಥನ (ವಡ್ಡಾರಾಧನೆ, ಪಂಚತಂತ್ರ, ಮುದ್ರಾಮಂಜೂಷ ಇತ್ಯಾದಿ) ಹೀಗೆ ಹಲವು ರೀತಿಯ ರೂಪಗಳ ಪ್ರಯೋಗಗಳು ನಮ್ಮ ರೂಪ ಮೀಮಾಂಸೆಯನ್ನು ರೂಪಿಸಿವೆ. ಈ ಎರಡೂ ದೃಷ್ಟಿಗಳಿಗಿಂತ ಭಿನ್ನವಾಗಿ ನಮ್ಮಲ್ಲಿ ವಿಶ್ವಕೋಶಗಳು, ಕಾವ್ಯಸಾರ, ಸೂಕ್ತಿಸುಧಾರ್ಣವದಂತಹ ಸಂಗ್ರಹ ಗ್ರಂಥಗಳು, ಶೂನ್ಯಸಂಪಾದನ ಗ್ರಂಥಗಳು ಹೀಗೆ ಭಿನ್ನ ಆಕೃತಿ ಮೀಮಾಂಸೆಯನ್ನು ಮಂಡಿಸುವ ರಚನೆಗಳೂ ಇವೆ. ಇವು ಕೂಡ ಕಾವ್ಯರೂಪದಲ್ಲೇ ರಚಿತವಾಗಿರುವ ರಚನೆಗಳು. ಇನ್ನು ಜಾನಪದ ಪರಂಪರೆಗೆ ಬಂದರಂತೂ ಅಲ್ಲಿ ಗೀಗೀಪದ, ಲಾವಣಿ, ಖಂಡಕಾವ್ಯ, ಮೌಖಿಕ ಮಹಾಕಥನಗಳು, ಗಾದೆ, ಒಗಟು (ಒಡಪು), ಯಕ್ಷಗಾನ, ಬಯಲಾಟ, ಕೋಲಾಟಪದ, ಸೋಬಾನೆಪದ ಹೀಗೆ ಅಸಂಖ್ಯಾತ ರೂಪ ಮೀಮಾಂಸೆಗಳಿವೆ. ಇವುಗಳ ಕ್ರೋಡೀಕರಣವೇ ಒಂದು ಪ್ರತ್ಯೇಕ ಅಧ್ಯಯನವಾದೀತು.

ನಿಘಂಟು, ಅಲಂಕಾರಶಾಸ್ತ್ರ, ವ್ಯಾಕರಣಶಾಸ್ತ್ರ, ಭಾಷಾವಿಚಾರ, ಛಂದಸ್ಸು ಹೀಗೆ ಎಲ್ಲ ಶಾಸ್ತ್ರಗಳಿಗು ಗದ್ಯ ಪದ್ಯ ಮಿಶ್ರಿತವಾದ ವಿವರಣೆ ಮತ್ತು ಲಕ್ಷ್ಯಕ್ಕಾಗಿ ಅಲ್ಲಲ್ಲಿ ಪದ್ಯಗಳನ್ನು ಉದಾಹರಿಸುವ ಸರಳ ಭಾಷೆ ಎಷ್ಟೇ ಅನುಕೂಲಕಾರಿ ಎಂದು ಚೆನ್ನಾಗಿ ತಿಳಿದಿದ್ದರೂ ನಮ್ಮವರಿಗೆ ಕವಿಗಳೆಂದು ಕರೆಸಿಕೊಳ್ಳುವ ಹುಚ್ಚು ಹಿಡಿದಿರುವಂತೆ ಕಾಣುತ್ತದೆ.  ಈ ಕವಿಗಳೆನಿಸಿಕೊಳ್ಳುವ ಹುಚ್ಚು ಶಿವಕೋಟಿ, ಚಾವುಂಡರಾಯ, ದುರ್ಗಸಿಂಹ, ಕೆಂಪುನಾರಾಯಣರನ್ನೂ ಬಿಟ್ಟಿಲ್ಲ. ವಚನಕಾರರು ಕೂಡ ಕಾವ್ಯದ ಸುಳಿಯಲ್ಲೆ ಸುತ್ತಿದರೇ ವಿನಾ ಅದರಾಚೆಗೆ ಹೋಗಲಿಲ್ಲ. ಅವರಾದರೂ ಸಾಮಾನ್ಯರ ಭಾಷೆಯಲ್ಲಿ ಅನುಭವಗಳನ್ನು ನಾವಿಂದು ಸಣ್ಣಕತೆ, ಪ್ರಬಂಧ, ಕಾದಂಬರಿಗಳಲ್ಲಿ ಬಳಸುವ ಭಾಷೆಯನ್ನು ಬಳಸಿ ಅವರದೇ ಪ್ರಕಾರಗಳನ್ನು ಬರೆಯಬಹುದಿತ್ತು. ಆದರೆ ಯಾರೂ ಬರೆದಿಲ್ಲ. ಕನಿಷ್ಟ ಪಕ್ಷ ಕಷ್ಟ ಸುಖ ಹೇಳಿಕೊಳ್ಳುವ ದಿನಚರಿ-ಆತ್ಮಚರಿಗಳನ್ನೂ ಬರೆದಿಲ್ಲ. ಬರೆದಿಲ್ಲವೋ, ಬರೆದಿದ್ದು ಅವು ದೊರಕಿಲ್ಲವೋ ಅಂತೂ ಇಲ್ಲ. ಒಬ್ಬರಾದ ಮೇಲೆ ಒಬ್ಬರು ಎಲ್ಲರೂ ಕಾವ್ಯಛಂದಸ್ಸಿಗೆ ತಮ್ಮ ತಮ್ಮ ಚಿಂತನೆ ಭಾವನೆ ಅನುಭವಗಳನ್ನು ಒಗ್ಗಿಸಿ ಹೇಳುವ ಹುಚ್ಚನ್ನೆ ಪುನರಾವರ್ತಿಸುತ್ತ ಬಂದಿದ್ದಾರೆ. ಇಡೀ ರಚಿತ ಪರಂಪರೆಯಲ್ಲಿ ಎಲ್ಲರಿಗೂ ಭಾಷೆ, ಕಾವ್ಯರೂಪದ ಆಚೆಗೆ ಕ್ರಾಂತಿಕಾರಕವಾಗಿ ವರ್ತಿಸುವ ಆಲೋಚನೆಯೇ ಬಂದಿಲ್ಲದಿರುವುದು ಸೋಜಿಗವಾಗಿದೆ! ಛಂದಸ್ಸು ಮತ್ತು ಪ್ರಾಸಗಳನ್ನು ತೊರೆಯುವ ನಿರ್ಧಾರಕ್ಕೆ ಬರಲು ನಮ್ಮವರು 19ನೇ ಶತಮಾನದಲ್ಲು ಹತ್ತಾರು ವರ್ಷಗಳ ಕಾಲ ಚರ್ಚಿಸಿದ್ದಾರೆ.

ವಚನಕಾರರನ್ನು ಕಂಡೂ ಕಂಡು ವಾಗ್ಯುದ್ಧಗಳನ್ನು ನಡೆಸಿದ್ದಾರೆ. ಸಂಸ್ಕೃತದ ಗ್ರಹದಿಂದ ಬಿಡಿಸಿಕೊಳ್ಳಲು ಇಂಗ್ಲಿಶಿನ ರಾಹುವೇ ಬರಬೇಕಾದುದು ನಮ್ಮ ಪುಣ್ಯವೋ, ದುರಂತವೋ, ಎರಡೂ ಹೌದೋ ತಿಳಿಯದಾಗಿದೆ. ಅಂದರೆ ಇಂದಿನ ರೀತಿಯಲ್ಲಿ ಅಂದಿನವರು ಬರೆಯಬೇಕಿತ್ತು ಎಂದಿಲ್ಲಿ ನಿರೀಕ್ಷಿಸುತ್ತಿಲ್ಲ. ಅವರು ಬರೆದಿರುವ ಕೃತಿಗಳಿಗಿಂತ ಬರೆಯಬಹುದಾಗಿದ್ದ ಕೃತಿಗಳ ಬಗೆಗೆ ಇಲ್ಲಿ ಚರ್ಚಿಸುವುದು ಉದ್ದೇಶವಲ್ಲ. ಇರುವ ಕೃತಿಗಳು ಬೇರೆ ರೀತಿ ಯಾಕೆ ಇಲ್ಲ? ಎಂಬುದೂ ಇಲ್ಲಿನ ಪ್ರಶ್ನೆಯಲ್ಲ. ಹಾಗೆ ಕೇಳಿದರೆ ಮೀನು ಯಾಕೆ ಹಾರುವುದಿಲ್ಲವಲ್ಲ ಎಂದು ಕೇಳಿದಂತೆಯೇ ಆಗುತ್ತದೆ. ಆಧುನಿಕ ವಿಮರ್ಶೆಯಲ್ಲಿ ಇಂತಹ ಪ್ರಶ್ನೆಗಳಿವೆ. ಇರಲಿ. ಆದರೆ ಅಂದಿನವರು ಭಾಷೆಯ ಮತ್ತು ಪ್ರಕಾರದ ವಿಚಾರದಲ್ಲಿ ಇನ್ನಷ್ಟು ಕ್ರಾಂತಿಕಾರಕವಾಗಬಹುದಿತ್ತಲ್ಲವೇ ಎಂಬುದಷ್ಟೆ ಇಲ್ಲಿನ ಪ್ರಶ್ನೆ.

ಕವಿರಾಜಮಾರ್ಗಕ್ಕೂ ಮುಂಚೆ ಲಕ್ಷಣ ಗ್ರಂಥಗಳು ಕನ್ನಡದಲ್ಲಿ ರಚನೆಯಾಗಿಲ್ಲ ಎಂಬುದನ್ನು ನಾವೆಲ್ಲ ನಂಬಿದ್ದೇವೆ. ಈ ನಂಬಿಕೆ ನಿಜವೇ ಹೌದು ಎನ್ನುವುದಾದರೆ ಕವಿರಾಜಮಾರ್ಗವು ಕನ್ನಡ ಸಾಹಿತ್ಯ ಪರಂಪರೆಗೆ ಒಂದು ಕೆಟ್ಟ ಅಡಿಪಾಯವನ್ನು ಹಾಕಿಕೊಟ್ಟಿತೆಂದೇ ಹೇಳಬೇಕು. ಅದೇಂದರೆ ಲಕ್ಷಣಶಾಸ್ತ್ರವನ್ನು ಕಾವ್ಯರೂಪದಲ್ಲೇ ಹೇಳಬೇಕು ಎಂಬ ಸಂಪ್ರದಾಯ. 'ನೆಲೆಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಂ' ಎಂದರೆ ಹಿಂದಿನ ಕಾವ್ಯಗಳೇ ಇಂದಿನವರ ಕಾವ್ಯ ರಚನೆಗೆ ಮಾದರಿಗಳು ಎಂದೂ, ಪೂರ್ವಕಾವ್ಯದ ಅನುಭವವನ್ನು ಹೊಂದಿರುವುದು ಕವಿಗಳ ತಿಳುವಳಿಕೆಯಲ್ಲಿ ಒಂದು ಮುಖ್ಯವಾದ ತಿಳುವಳಿಕೆ ಎಂದೂ ಶ್ರೀವಿಜಯ ಹೇಳುತ್ತಾನೆ. ಆ ಕಾಲದಲ್ಲಿದ್ದ ಸಂಪ್ರದಾಯವನ್ನು ಕಂಡೇ ಈತ ಈ ಮಾತುಗಳನ್ನು ಆಡಿರಬಹುದು. ಈ ಮಾತುಗಳನ್ನೇ ಆಧಾರವಾಗಿ ಹಿಡಿದು ಹೇಳುವುದಾದರೆ; ಕನ್ನಡದ ಲಾಕ್ಷಣಿಕರು ಸಂಸ್ಕೃತದಿಂದ ದುಷ್ಪರಿಣಾಮಕ್ಕೆ-ದುಷ್ಪ್ರಭಾವಕ್ಕೆ ಒಳಗಾಗುವುದರ ಜೊತೆಗೆ ಕವಿರಾಜಮಾರ್ಗದಿಂದಲೂ ದುಷ್ಪ್ರಭಾವಕ್ಕೆ ಒಳಗಾಗಿದ್ದಾರೆ. ಶ್ರೀವಿಜಯ ತಾನು ಕಾವ್ಯರೂಪದಲ್ಲಿ ಲಕ್ಷಣ ಗ್ರಂಥವನ್ನು ರಚಿಸುವ ಮೂಲಕ ಶಾಸ್ತ್ರಗಳನ್ನು ಕಾವ್ಯರೂಪದಲ್ಲೇ ಬರೆಯಬೇಕೆಂಬ ಸಂಪ್ರದಾಯವನ್ನು ಕನ್ನಡದಲ್ಲಿ ಮೊದಲು ಹುಟ್ಟುಹಾಕಿದ್ದಾನೆ. ಇವನು ತೋರಿದ ಮಾರ್ಗದಲ್ಲೇ ಆನಂತರದವರು ಕುರುಡಾಗಿ ನಡೆದಿದ್ದಾರೆ. ಈ ಕುರುಡು ಅನುಸರಣೆಯಲ್ಲಿ ಕಾವ್ಯದ ಹುಚ್ಚು ಎಂಥ ಅತಿರೇಕಕ್ಕೆ ಹೋಗಿದೆಯೆಂದರೆ ಲಕ್ಷಣವೂ ಲಕ್ಷ್ಯವೂ ಆಗಬಲ್ಲ ಕವಿತೆಯನ್ನು ಸ್ವತಃ ಬರೆಯುವ ಮಟ್ಟಕ್ಕೆ ಹೋಗಿದೆ. ನಮ್ಮ ಯಾವ ಛಂದೋ ಪಂಡಿತರೂ ಕೂಡ ಒಗ್ಗರಣೆಗೂ ಅನ್ಯಕವಿಗಳ ಕಾವ್ಯಭಾಗಗಳನ್ನು ಉದಾಹರಿಸಿಲ್ಲ. ಎಲ್ಲರೂ ಲಕ್ಷಣಗಳಲ್ಲೇ ಲಕ್ಷ್ಯಗಳನ್ನು ನಿರ್ಮಿಸಿದ್ದಾರೆ. ಇರುವ ಕಾವ್ಯಗಳನ್ನು ನೋಡಿ ಲಕ್ಷ್ಯಗಳಿಂದ ಲಕ್ಷಣಗಳನ್ನು ನಿರ್ಮಿಸುವ ತೊಡಕನ್ನಂತೂ ನಮ್ಮ ಯಾವ ಶಾಸ್ತ್ರ ಕವಿಗಳೂ ತೆಗೆದುಕೊಂಡಿಲ್ಲ. ಈ ಕಾವ್ಯರೂಪದ ಹುಚ್ಚನ್ನು ನಮ್ಮವರು ಶ್ರೀವಿಜಯನಿಂದ ಪಡೆದರೋ ಸಂಸ್ಕೃತದಿಂದಲೇ ಪಡೆದರೋ ಎಂಬ ಚರ್ಚೆ ಅಪ್ರಸ್ತುತ. ಕನ್ನಡಕ್ಕೆ ಲಕ್ಷಣಗ್ರಂಥದ ಓಂನಾಮ ಹಾಕಿಕೊಟ್ಟ ಶ್ರೀವಿಜಯನಾದರೂ ಮೊದಲಿಗೆ ಈ ಹುಚ್ಚಿನಿಂದ ಮಾರ್ಗಾಂತರ ಮಾಡಬಹುದಿತ್ತಲ್ಲ? ಹಾಗೆ ಮಾಡಲು ಅವನಿಗೆ ಇದ್ದ ಒತ್ತಡಗಳಾವುವು ಎಂಬುದು ಚರ್ಚಾರ್ಹ. ಆದರೂ ಮೊದಲಿಗೆ ಅವನು ಬಿದ್ದ ಜಾಡಿಗೇ ಎಲ್ಲರೂ ಬಿದ್ದಿದ್ದಾರೆ ಎಂಬುದು ಮಾತ್ರ ನಿಜ.

ಇದನ್ನೆ ಬೇರೆ ಮಾತುಗಳಲ್ಲಿ ಹೇಳುವುದಾದರೆ; ಕಾವ್ಯ ಎಂಬುದು ನಮ್ಮಲ್ಲಿ ಒಂದು ಸಾಹಿತ್ಯದ ರೂಪ ಮಾತ್ರ ಅಲ್ಲ. ಇದೊಂದು ಸಾಹಿತ್ಯ ಶೈಲಿಯಾಗಿ ನಮ್ಮಲ್ಲಿ ಜಾರಿಯಾಗಿದೆ. ಅಲ್ಲದೆ ಕಾವ್ಯ ಎಂಬುದು ಒಂದು ಬಾಷೆ. ರಾಮಾಯಣ, ಮಹಾಭಾರತಗಳು ಹೇಗೆ ನಮ್ಮಲ್ಲಿ ಎಲ್ಲವನ್ನೂ ಅಭಿವ್ಯಕ್ತಿಸಬಲ್ಲ ಭಾಷೆಗಳೋ ಹಾಗೆ ಕಾವ್ಯ ಕೂಡ ಎಲ್ಲವನ್ನೂ ಅಭಿವ್ಯಕ್ತಿಸಬಲ್ಲ ಒಂದು ಭಾಷೆ. ಅಮೂರ್ತವಾದ, ಬಹುರೂಪವಾದ ಒಂದು ಭಾಷೆ. ಇಂಥ ಕಾವ್ಯವೆಂಬ ಭಾಷೆಯಲ್ಲಿ ನಮ್ಮ ಎಲ್ಲ ಪ್ರಾಚೀನ ಸಾಹಿತ್ಯವೂ ಸಂಭವಿಸಿದೆ. ವಿಮರ್ಶೆ ಕೂಡ.

ಕವಿರಾಜಮಾರ್ಗದ ಒಟ್ಟು ಪದ್ಯ ಸಂಖ್ಯೆ 536. (ಪ್ರಕ್ಷಿಪ್ತಗಳನ್ನು ಬಿಟ್ಟು) ಇವುಗಳಲ್ಲಿ ಸುಮಾರು 230 ಪದ್ಯಗಳಿಗೆ ದಂಡಿಯ ಕಾವ್ಯಾದರ್ಶವೂ ಮತ್ತು ಸುಮಾರು 45 ಪದ್ಯಗಳಿಗೆ ಭಾಮಹನ ಕಾವ್ಯಾಲಂಕಾರವೂ ಆಕರಗಳು. ಇನ್ನುಳಿದ 261 ಪದ್ಯಗಳಲ್ಲಿ ಕೆಲವನ್ನು ಸಂಸ್ಕೃತ ಶ್ಲೋಕಗಳಿಂದ ಅರೆಬರೆಯಾಗಿಯೂ ಪೂರ್ಣವಾಗಿಯೂ ಅನುವಾದ ಮಾಡಿದ್ದಾನೆ. ಅನುವಾದ, ಸ್ವೀಕರಣ, ಸ್ವತಂತ್ರ ರಚನೆ ಹೀಗೆ ಒಟ್ಟಾರೆ ಮಿಶ್ರರೂಪಿ ಕಾವ್ಯವೊಂದನ್ನು ಈತ ಬರೆದು ಅನುವಾದ ಮತ್ತು ಪುನರ್ಲೇಖನಗಳಿಗೆ ಒಂದು ಎಗ್ಗಿಲ್ಲದ ಸಂಪ್ರದಾಯ ಹಾಕಿಕೊಟ್ಟಿದ್ದಾನೆ. ಆನಂತರದಲ್ಲಿ ಸಂಸ್ಕೃತ ಪ್ರಾಕೃತಗಳಿಂದ ನಮ್ಮವರು ಎಗ್ಗಿಲ್ಲದೆ ತೆಗೆದುಕೊಂಡು ತಮ್ಮದನ್ನಾಗಿ ಮಾಡಿಕೊಂಡು ಕೃತಿರಚನೆ ಮಾಡಿದ್ದಾರೆ. ಹಿಗಾಗಿ ಅನುವಾದ, ಪುನರ್ಕಥನ, ಹಾಗೂ

ಸ್ವತಂತ್ರ ಸೃಷ್ಟಿ ಈ ಮೂರನ್ನೂ ಬೆರೆಸಿದ ಒಂದು ಸಂಕರಸ್ಥಿತಿಯ ಕಾವ್ಯಸಂಪ್ರದಾಯವನ್ನು ಹಾಕಿಕೊಟ್ಟ ಕೀರ್ತಿಯೂ ಇವನಿಗೇ ಸಲ್ಲಬೇಕು. ಈ ಶಾಸ್ತ್ರಸಂಪ್ರದಾಯವನ್ನು ನಮ್ಮಲ್ಲಿ ಹಲವರು ವಿನಮ್ರರಾಗಿ ಅನುಸರಿಸುವುದನ್ನು ಉದ್ದಕ್ಕೂ ಕಾಣಬಹುದು. ಅನುವಾದ ಮತ್ತು ಪುನರ್ಕಥನ ಹಾಗೂ ಸ್ವತಂತ್ರಸೃಷ್ಟಿ ಎಂಬ ತ್ರಿವಳಿಗಳ ಸಂಕರರೂಪವೇ ನಮ್ಮ ಶಾಸ್ತ್ರಕಾವ್ಯಗಳ 'ನೀತಿನಿರಂತರ ಕ್ರಮ'ದ ಒಂದು ಪ್ರಧಾನ ಲಕ್ಷಣವಾಗಿದೆ. 'ನೆಲೆಸಿದ ಕಾವ್ಯಕ್ಕೆ ಕಾವ್ಯಂ ಲಕ್ಷಣಂ ಸತತಂ' ಎಂಬಂತೆ.

ವಡ್ಡಾರಾಧನೆಯ ಸ್ವರೂಪ ಬೇರೆಲ್ಲ ಕಾವ್ಯಗಳಿಗಿಂತ ಭಿನ್ನ. ಇದೊಂದು ಗದ್ಯ ಕಥನಕಾವ್ಯ. ಇಲ್ಲಿ ಪ್ರತಿಯೊಂದು ಕತೆಯ ಆರಂಭದಲ್ಲಿ ಒಂದೊಂದು ಪ್ರಾಕೃತ ಗಾಹೆಯೂ ಆಮೇಲೆ ಅದರ ಕನ್ನಡ ವ್ಯಾಖ್ಯಾನವೂ ನಂತರದಲ್ಲಿ ಕತೆಯೂ ಇವೆ. ಗಾಹೆಯು ಕಾವ್ಯರೂಪದ ಇಡಿ ಕತೆಯನ್ನು ಒಂದೇ ಮಾತಿನಲ್ಲಿ ಹೇಳುವ ನೀತಿಸಾರವಾದರೆ ಇದರ ಘಟನಾ ರೂಪಿ ವಿಸ್ತರಣೆಯೇ ಕತೆಯಾಗಿದೆ. ಗಾಹೆ ಮತ್ತು ಗಾಹೆಯ ಸಮರ್ಥನೆಯಾಗಿ ಬರುವ ಕಥೆಯ ಈ ಒಟ್ಟು ಸ್ವರೂಪವು ತನ್ನದೆ ಕೃತಿಸ್ವರೂಪ ತತ್ವವನ್ನು ಮಂಡಿಸುತ್ತಿದೆ. ನೀತಿತತ್ವ ಮತ್ತು ತತ್ವಗರ್ಭಿತ ಕಥನಗಳ ಸಂಯೋಜನೆ ಇದು. ಕೇವಲ ಆರಂಭದಲ್ಲಿ ಮಾತ್ರವಲ್ಲದೆ ಒಳಗೂ ಅಲ್ಲಲ್ಲಿ ಶಿವಕೋಟಿ ಶ್ಲೋಕ ಹಾಗು ಗಾಹೆಗಳನ್ನು ಬಳಸುತ್ತಾನೆ. ವಡ್ಡಾರಾಧನೆಯ ಆಕೃತಿ ಅಥವಾ ರಚನಾ ವಿನ್ಯಾಸವನ್ನು ಆನಂತರದ ಕೃತಿಕಾರರು ಹೆಚ್ಚಾಗಿ ಅನುಸರಿಸಿಲ್ಲ. ಅಲ್ಲದೆ ನಮ್ಮಲ್ಲಿ ಗದ್ಯಕಾವ್ಯಗಳೂ ಹೆಚ್ಚು ಹುಟ್ಟಲಿಲ್ಲ. ವಡ್ಡಾರಾಧನೆಯನ್ನು ಯಥಾರೀತಿ ಅನುಸರಿಸದಿದ್ದರೂ ಸರಿಸುಮಾರು ದುರ್ಗಸಿಂಹನು ಅದನ್ನು ಅನುಸರಿಸಿದ್ದಾನೆ. ಹತ್ತಾರು ಸಂಸ್ಕೃತ ಶ್ಲೋಕಗಳನ್ನು ಕಾವ್ಯದ ಮಧ್ಯೆ ಮಧ್ಯೆ ಬಳಸಿಕೊಂಡಿರುವ ಈತ ಅವುಗಳಿಗೆ ಟೀಕೆಯನ್ನೂ ಬರೆದಿದ್ದಾನೆ. ತತ್ವಮಂಡನೆ ಮತ್ತು ಕಥನಪ್ರಸಂಗಗಳ ಮೂಲಕ ಆ ತತ್ವದ ಸಮರ್ಥನೆಯ ಧಾಟಿಯನ್ನು ಅನುಸರಿಸಿದ್ದಾನೆ. ತತ್ವ ಪ್ರತಿಪಾದನೆಗಾಗಿ ಸಂಸ್ಕೃತ ಶ್ಲೋಕಗಳನ್ನು ಬಳಸಿಕೊಂಡಿರುವ ಇನ್ನೊಬ್ಬನೆಂದರೆ ಲಿಂಗಲೀಲಾವಿಲಾಸ ಚಾರಿತ್ರವನ್ನು ಸಂಯೋಜಿಸಿರುವ ಕಲ್ಲುಮಠದ ಪ್ರಭುದೇವ. ಆದರೆ ಈತನದು ಗದ್ಯಕಥನವಲ್ಲ. ವಚನ ಶ್ಲೋಕಗಳ ವ್ಯಾಖ್ಯಾನ-ಸಂಗ್ರಹಗ್ರಂಥ. ಇನ್ನೊಂದು ಗದ್ಯಗ್ರಂಥವಾದ ಮುದ್ರಾಮಂಜೂಷ ಈ ಎಲ್ಲ ಗದ್ಯಗ್ರಂಥಗಳಿಗಿಂತ ವಿಭಿನ್ನವಾಗಿದೆ.

ನಮ್ಮ ಪರಂಪರೆಯಲ್ಲಿನ ಭಿನ್ನ ಭಿನ್ನ ಕಾವ್ಯಗಳನ್ನು ಗಮನಿಸಿದರೆ; ಕಾವ್ಯರೂಪದ ಬಗೆಗೆ ಒಂದೊಂದು ಕಾಲಘಟ್ಟವೂ, ಒಬ್ಬೊಬ್ಬ ಕವಿಯೂ ಭಿನ್ನ ರೂಪ ಮೀಮಾಂಸೆಗಳನ್ನು ಮಂಡಿಸಿರುವಂತೆ ಕಾಣುತ್ತದೆ. ಹಾಗೇ ಪೂರ್ವಕವಿ ಮಾರ್ಗವನ್ನು ಅನುಸರಿಸಿರುವ ಮತ್ತು ಮೀರಿರುವ ನಡವಳಿಕೆಗಳೂ ಕಾಣುತ್ತವೆ. ಅನುಸರಿಸುವವರು ಮತ್ತು ಮೀರಿರುವವರು ಇಬ್ಬರಲ್ಲು ಭಿನ್ನ ರೂಪ ಮೀಮಾಂಸೆಗಳ ಮಂಡನೆಗಳೇ ಕಾಣುತ್ತವೆ. ನಮ್ಮ ಕಾವ್ಯ ಪರಂಪರೆಯಲ್ಲಿ ಆಯಾ ಪರಂಪರೆಗಳ ಅನುಸರಣೆ ಕಂಡರೂ ಅಲ್ಲಿ ಕುರುಡಾದ ಅನುಸರಣೆ ಕಾಣುವುದಿಲ್ಲ. ಉದಾ; ಪುರಂದರರ ಕೀರ್ತನೆಯ ಕಟ್ಟಾಣಿಕೆ ಮತ್ತು ಕನಕರ ಕೀರ್ತನೆಯ ಕಟ್ಟಾಣಿಕೆ ಮೇಲ್ನೋಟಕ್ಕೆ ಒಂದೇ ಅಲ್ಲ. ಅಷ್ಟೇ ಅಲ್ಲ ಒಬ್ಬನೇ ಕವಿಯಲ್ಲಿ ಭಿನ್ನ ರೂಪ ಮೀಮಾಂಸೆಗಳು ಪ್ರಕಟವಾಗಿರಬಹುದು.

ಆದಿಪುರಾಣ, ಹರಿಶ್ಚಂದ್ರಕಾವ್ಯ, ಗದುಗಿನ ಭಾರತ, ಭರತೇಶವೈಭವ ಮೊದಲಾದ ಕಾವ್ಯಗಳು ಸೂಚಿಸುವ ರೂಪ ಮೀಮಾಂಸೆಗೂ ವಚನ, ಕೀರ್ತನ, ಸ್ವರವಚನ, ತತ್ವಪದಗಳು ಸೂಚಿಸುವ ರೂಪಮೀಮಾಂಸೆಗೂ ದೊಡ್ಡ ಭಿನ್ನತೆಗಳಿವೆ. ಕಾವ್ಯದ ಆಕೃತಿಯ ಬಗ್ಗೆ ಮಹಾಕಾವ್ಯಗಳು ಸಾಮಾನ್ಯವಾಗಿ ಕೆಲವು ಸೂತ್ರಗಳನ್ನು ಅನುಸರಿಸುತ್ತವೆ. ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶ, ನಂಜುಂಡ, ಜನ್ನ, ಹರಿಹರ, ರಾಘವಾಂಕ ಇಂಥ ಹಲವಾರು ಕವಿಗಳು ತಮ್ಮ ಕಾವ್ಯಗಳ ಮೂಲಕವೇ ಕಾವ್ಯಗಳೆಂದರೆ ಹೀಗಿರಬೇಕು ಎಂಬ ತಮ್ಮದೇ ಆಕೃತಿ ಮೀಮಾಂಸೆಗಳನ್ನು ಮಂಡಿಸಿದ್ದಾರೆ. ನಾಯಕ, ನಾಯಿಕೆ, ಪೋಷಕ ಪಾತ್ರಗಳುಳ್ಳ ಮಹಾಕಥನಗಳನ್ನು ಕಾವ್ಯರೂಪದಲ್ಲಿ ಅಷ್ಟಾದಶ ವರ್ಣನೆಗಳ ಬಂಧದ ಮೂಲಕ ಕಟ್ಟಿಕೊಡಬೇಕು ಎಂಬುದು ಇವರ ಕಾವ್ಯ ರೂಪ ಅಥವಾ ಆಕೃತಿ ಮೀಮಾಂಸೆಯ ಮುಖ್ಯ ಪ್ರತಿಪಾದನೆಯಾಗಿದೆ. ಇಲ್ಲಿ ಕಂಡುಬರುವ ಇನ್ನು ಕೆಲವು ಅಂಶಗಳೆಂದರೆ;

1. ರಗಳೆ, ಷಟ್ಪದಿ, ಕಂದ, ಸಾಂಗತ್ಯ, ಚಂಪು ಹೀಗೆ ಯಾವುದಾದರೂ ಒಂದು ಅಥವಾ ಹೆಚ್ಚು ಛಂದೋರೂಪಗಳನ್ನು ಬಳಸಿ ಕಾವ್ಯ ರಚಿಸಬೇಕು. 2. ಒಂದು ನಿರ್ಧಿಷ್ಠವಾದ ಕಥೆ(ಮಹಾಕಥನ) ಇರಬೇಕು ಮತ್ತು ನಿರ್ಧಿಷ್ಠವಾದ ಆದಿ, ಅಂತ್ಯ, ಒಡಲುಗಳು ಇರಬೇಕು. 3. ಅಷ್ಟಾದಶವರ್ಣನೆಗಳನ್ನು ಬಳಸಬೇಕು ಆದರೆ ಎಲ್ಲ ವರ್ಣನೆಗಳ ಚಾಚೂ ತಪ್ಪದ ಅನುಸರಣೆ ಕಡ್ಡಾಯವಲ್ಲ. 4. ಕಾವ್ಯಕ್ಕೆ ಪೀಠಿಕೆ ಕಡ್ಡಾಯ. ಅಲ್ಲಿ

ಸಾಮಾನ್ಯವಾಗಿ ಕೃತಿ ರಚನೆಯ ಕಾಲ, ಹಿನ್ನೆಲೆ, ಪ್ರೇರಣೆ, ಪೂರ್ವಕವಿ ಸ್ಮರಣೆ, ಕುಕವಿನಿಂದೆ–ಸತ್ಕವಿ ಪ್ರಶಂಸೆ, ಪೂರ್ವಕಾವ್ಯ ವಿಶ್ಲೇಷಣೆ, ಸ್ವಕಾವ್ಯ ಸ್ವರೂಪ ವಿವರ, ಸ್ವಂತ ವಿಷಯಗಳ ನಿರೂಪಣೆ ಇತ್ಯಾದಿಗಳು ಇರಬಹುದು. 5. ಚರಿತ್ರೆ, ವರ್ತಮಾನ, ಪುರಾಣಗಳನ್ನೆಲ್ಲ ಬೇರೆ ಬೇರೆ ಅಲ್ಲದಂತೆ ಕಲಸಬೇಕು. 6. ಆಧ್ಯಾತ್ಮಿಕತೆ–ಲೌಕಿಕತೆಗಳು; ಯೋಗ–ಭೋಗಗಳು; ರಕ್ತಿ–ವಿರಕ್ತಿಗಳು ಕಥನದಲ್ಲಿ ಬೆರೆತಿರಬೇಕು. 7. ಚರಿತ್ರೆ–ಪುರಾಣ–ಪೂರ್ವಕಥನಗಳನ್ನು ಪುನರ್ಕಥಿಸಬಹುದು. ಹೀಗೆ ಹಲವು ಸಾಮಾನ್ಯ ತತ್ವಗಳನ್ನು ಮೇಲ್ಕಾಣಿಸಿದ ಪಂಪ ರನ್ನಾದಿಗಳು ತಮ್ಮ ಆಚರಣೆಗಳ ಮೂಲಕವೇ ಮಂಡಿಸಿದ್ದಾರೆ. ಆದರೆ: ವಚನ, ಕೀರ್ತನ, ಸ್ವರವಚನ, ತತ್ವಪದಗಳು ಮಂಡಿಸುವ ಆಕೃತಿ ಮೀಮಾಂಸೆ ಇದಕ್ಕಿಂತ ಭಿನ್ನವಾದುದು. ಮೇಲೆ ಹೇಳಿರುವ ಐದು ತತ್ವಗಳಲ್ಲಿ ಒಂದೂ ಇವುಗಳಲ್ಲಿಲ್ಲ. ಇವುಗಳ ಸ್ವರೂಪವೇ ಬೇರೆ. ಇವೆಲ್ಲ ಮುಕ್ತಕಗಳಾಗಿವೆ. ಸ್ವರವಚನ, ಕೀರ್ತನ, ತತ್ವಪದಗಳಲ್ಲಿ ಕೆಲವು ಸಾಮಾನ್ಯ ಲಕ್ಷಣಗಳು ಕಂಡುಬಂದರೆ, ವಚನಗಳಲ್ಲಿ ಇವುಗಳಿಗಿಂತ (ಕೀರ್ತನ, ತತ್ವಪದಗಳಿಗಿಂತ) ಭಿನ್ನವಾದ ರೂಪಮೀಮಾಂಸೆ ವ್ಯಕ್ತವಾಗುತ್ತದೆ. ಇಲ್ಲಿ ಮಹಾಕಥನವಿಲ್ಲ. ಅಷ್ಟಾದಶ ವರ್ಣನೆಗಳಿಲ್ಲ. ಪೀಠಿಕೆಯ ಪ್ರಶ್ನೆಯೇ ಇಲ್ಲ. ಇವುಗಳ ರಚನಾ ವಿನ್ಯಾಸವೇ ಬೇರೆ. ಇವುಗಳ ಬಂಧ, ವಿನ್ಯಾಸವೇ ಮುಕ್ತ ಛಂದಸ್ಸಿನ ರಚನೆಯನ್ನು ಪ್ರತಿಪಾದಿಸುವಂಥದ್ದು. (ಶ್ರೀವಿಜಯ ನಾಗವರ್ಮಾದಿಗಳು ತಮ್ಮ ಶಾಸ್ತ್ರಗಳಲ್ಲಿ ಹೇಳುವ ಕಾವ್ಯಭೇದಗಳು ಮತ್ತು ಕಾವ್ಯಸ್ವರೂಪ ವಿನ್ಯಾಸಗಳು ಇವುಗಳಿಗಿಂತ ಬಿನ್ನವಾಗಿವೆ.)

**2.2. ಕತೆ–ಕಾವ್ಯ**

ನಮ್ಮ ಮಹಾ ಕಾವ್ಯಗಳೆಲ್ಲ ಬಹುಪಾಲು ಕಥನಕಾವ್ಯಗಳು ಅಥವಾ ಕಾವ್ಯರೂಪಿ ಕಥನಗಳು. ಎಲ್ಲವನ್ನು ಕಾವ್ಯಗಳೆಂದು ಕರೆದರೂ ನಮ್ಮಲ್ಲಿನ ಎಲ್ಲ ಪ್ರಾಚೀನ ಕಾವ್ಯಗಳಲ್ಲಿ ಅಂತರ್ಗತವಾಗಿ ಒಂದು ಮಹಾಕತೆ ಇರುತ್ತದೆ. ರಗಳೆಯಾಗಲಿ ಇಲ್ಲವೆ ಹರಿಶ್ಚಂದ್ರ ಕಾವ್ಯವಾಗಲಿ ಪಂಪನ ಆದಿಪುರಾಣವಾಗಲಿ ಎಲ್ಲವೂ ಕಾವ್ಯರೂಪಿ ಕಥೆಗಳೇ ಆಗಿವೆ. ಕೆಲವು ಕಿರಿಕಥೆಗಳಾದರೆ ಕೆಲವು ಮಹಾಕಥೆಗಳು. ಈ ಕಥೆಗಳನ್ನು ಹೇಳಿರುವ ರೂಪ ಮಾತ್ರ ಕಾವ್ಯ ರೂಪ. ನಮ್ಮವರು ಶಾಸ್ತ್ರಗಳನ್ನು ಕಾವ್ಯರೂಪದಲ್ಲೇ ಹೇಳಿದ್ದಾರೆಯಾಗಿ ನಮ್ಮ ಒಟ್ಟಾರೆ ಪ್ರಾಚೀನ ಪರಂಪರೆಯನ್ನು ಕಥನಕಾವ್ಯಗಳು ಮತ್ತು ಶಾಸ್ತ್ರ ಕಾವ್ಯಗಳು ಎಂದು ಸ್ಥೂಲವಾಗಿ ಎರಡು ಭಾಗ ಮಾಡಬಹುದು. ಕಥನ ಕಾವ್ಯಗಳಲ್ಲಿ ಗದ್ಯಕಥನಗಳು ಮತ್ತು ಪದ್ಯಕಥನಗಳು ಎಂದು ಎರಡು ಬಗೆ. ಶಾಸ್ತ್ರಕಾವ್ಯಗಳನ್ನು ಸಾಹಿತ್ಯ ಶಾಸ್ತ್ರಕಾವ್ಯಗಳು ಮತ್ತು ಅನ್ಯಶಾಸ್ತ್ರಕಾವ್ಯಗಳು ಎಂದು ಎರಡು ಬಗೆ ಮಾಡಬಹುದು. ಆದರೆ ವಚನ ಕೀರ್ತನೆ, ತ್ರಿಪದಿಗಳು ಹಾಗಲ್ಲವೇ ಅಲ್ಲ. ಕಿರುಪ್ರಸಂಗ, ಘಟನೆಗಳನ್ನು ವಚನ ಕೀರ್ತನೆಗಳಲ್ಲಿ ಬಳಸಿಕೊಳ್ಳಲಾಗುತ್ತದೆ. ಆದರೂ ಅವನ್ನು ಕಥನಕಾವ್ಯಗಳೆಂದು ಕರೆಯಲಾಗುವುದಿಲ್ಲ. ಆಧುನಿಕವಾದ ಭಾವಗೀತೆಗಳು, ಮುಕ್ತ ಬಿಡಿ ಪದ್ಯಗಳಂತೆ ಇವು ಇವೆ. ಹೀಗಾಗಿ ಇವುಗಳನ್ನು ಮೂರನೇ ಭಾಗದಲ್ಲಿ ಬಿಡಿ ಕಾವ್ಯರಚನೆಗಳು ಎನ್ನಬಹುದು.

ಅಷ್ಟಕ, ಶತಕ, ತಾರಾವಳಿ, ಬೊಲ್ಲಿ, ಓವನಿಗೆ, ಒನಕೆವಾಡು, ಇಡುಕುಂಗಬ್ಬ, ಪಗರಣ, ರಗಳೆ, ವಚನ, ಸ್ವರವಚನ, ತ್ರಿವಿಧಿ, ಸ್ತೋತ್ರ, ಉಗಾಭೊಗ, ಸುಳಾದಿ, ಕೀರ್ತನೆ, ಸುವಾಲಿ, ಹರಿಕತೆ, ಶಿವಸಂಕಥಾವಿನೋದ, ಲಾವಣಿ, ದೇಶಿದುಂದುಮೆ, ಭಜನೆ, ಮಾದಪ್ಪನ ಕಥೆ, ಮಂಟೇದನ ಕಥೆ ಇಂತಹ ಕಥನಗಳು ಇತ್ಯಾದಿಯಾಗಿ ಪ್ರಾಚೀನ ಸಾಹಿತ್ಯ ರೂಪಗಳು ನೂರಾರು ಇವೆ. ಅವೆಲ್ಲವುಗಳು ಪ್ರಕಟಪಡಿಸುವ ಆಕೃತಿ ಮೀಮಾಂಸೆಗಳೂ ನೂರಾರು. ಅವನ್ನೆಲ್ಲ ಇಲ್ಲಿ ಚರ್ಚಿಸಿಲ್ಲ.

**2.3. ಕತಾವಸ್ತು ಮತ್ತು ಆಕಾರ**

'ಕತೆ ಪಿರಿದಾದೊಡಂ ಕತೆಯ ಮೈಗೆಡಲೀಯದೆ' ಕಾವ್ಯ ರಚಿಸಿದ್ದೇನೆ ಎಂದು ಪಂಪ ಹೇಳಿಕೊಂಡಿದ್ದಾನೆ. ಅಂದರೆ ವ್ಯಾಸನ ಕಥಾಸಾಗರವನ್ನು ಪಂಪ ಕಿರಿದಾದ ಗಾತ್ರದಲ್ಲಿ ಕೆಡದಂತೆ ಹಿಡಿದಿಟ್ಟಿದ್ದಾನೆ. ಕತೆಯ ಗಾತ್ರ ಮತ್ತು ಕೃತಿಯನ್ನು ಹೇಳುವ ಕ್ರಮ ಇವುಗಳ ನಡುವೆ ಅನ್ಯೋನ್ಯವಾದ ಸಂಬಂಧ ಇರುತ್ತದೆ. ವಸ್ತುವಿನ ಸ್ವರೂಪ ಮತ್ತು ಕಾವ್ಯಶೈಲಿಯ ನಡುವೆ ಸಂಬಂಧ ಇರುವಂತೆಯೇ ಕತೆಯ ಗಾತ್ರಕ್ಕು ಶೈಲಿಗು ಸಂಬಂಧ ಇದೆ. ಕತೆಯ ಗಾತ್ರ ದೊಡ್ಡದಾದ ಮಾತ್ರಕ್ಕೆ ಕಾವ್ಯ ಶ್ರೇಷ್ಠ ಎಂದಾಗುವುದಿಲ್ಲ. ಅದನ್ನು ಹೇಳುವ ಕ್ರಮ ಕೂಡ ಮುಖ್ಯ. ನಾಗಚಂದ್ರನ ಮಲ್ಲಿನಾಥಪುರಾಣ, ಆಂಡಯ್ಯನ ಕಬ್ಬಿಗರ ಕಾವಗಳು ಸಣ್ಣ ಕತೆಯನ್ನು ಮಹಾಕಾವ್ಯ ಮಾಡಿರುವ ಉದಾಹರಣೆಗಳು. ಜನ್ನನ ಯಶೋಧರ ಚರಿತೆ ಕೂಡ ಚಿಕ್ಕ ಕಾವ್ಯವೇ. ಅದೇ

ರತ್ನಾಕರವರ್ಣಿಯ ಭರತೇಶ ವೈಭವ ಬೃಹತ್ ಕಾವ್ಯ. ರತ್ನಾಕರ ತನ್ನ ಕಾವ್ಯವನ್ನು ವರ್ಣಕ-ಹಾಡುಗಬ್ಬ ಎಂದೇ ಕರೆದುಕೊಂಡು ವರ್ಣನೆಗಳಿಂದ ತನ್ನ ಕಾವ್ಯವನ್ನು 'ಮಹಾ' ಆಗಿ ರಚಿಸಿದ್ದಾನೆ. ಹೀಗಾಗಿ ನಮ್ಮಲ್ಲಿ ಹಿರಿದಾದ ಕತೆಯನ್ನು ಕುಗ್ಗಿಸಿ ಹೇಳುವ, ಕಿರಿದಾದ ಕತೆಯನ್ನು ಹಿಗ್ಗಿಸಿ ಹೇಳುವ, ದೊಡ್ಡ ಕತೆಯನ್ನು ಹಿರಿದಾಗಿಯೇ ವರ್ಣಿಸಿ ಹೇಳುವ ಈ ಮೂರೂ ಮಾದರಿಗಳಿವೆ.

ಕತಾವಸ್ತು ಎಂಥ ಆಕಾರದ್ದೇ ಆಗಿರಲಿ ಕವಿಯ ಕೈಚಳಕಕ್ಕೆ, ಸಂಕಲ್ಪಕ್ಕೆ ಅನುಗುಣವಾಗಿ ಅದು ಆಕೃತಿಯನ್ನು ಪಡೆಯುತ್ತಾ ಹೋಗುತ್ತದೆ. ವಸ್ತುಕ, ವರ್ಣಕ, ಓದುಗಬ್ಬ, ಹಾಡುಗಬ್ಬ ಇಂಥ ಪರಿಕಲ್ಪನೆಗಳು ನಮ್ಮವರ ಬರವಣಿಗೆಯ ಶೈಲಿಯನ್ನು ಆಗಾಗ ನಿಯಂತ್ರಿಸಿವೆಯಾದರೂ ಕೃತಿಯ ಆಕಾರವನ್ನು ಕಥಾವಸ್ತುವು ನಿಯಂತ್ರಿಸಿದೆ ಅನ್ನಿಸುವುದಿಲ್ಲ.

**2.4. ಉದ್ದೇಶ-ಬಳಕೆ**

ವಚನಗಳು ವಾಚನಕ್ಕೆ; ಸ್ವರವಚನಗಳು, ಕೀರ್ತನೆಗಳು, ತತ್ವಪದಗಳೆಲ್ಲ ಶ್ರವಣಕ್ಕೆಂದೆ ರಚಿತವಾದುವು. ಮಹಾಕಾವ್ಯಗಳಾದರೋ ಅಧ್ಯಯನ, ವಾಚನ, ಪಠಣ, ಪಾರಾಯಣ, ಗಮಕವಾಚನ, ವಾದಮಂಡನ, ಪೂಜನ ಇತ್ಯಾದಿ ಹಲವು ನೆಲೆಗಳಲ್ಲಿ ಅನುಸಂಧಾನಕ್ಕೆ ಗುರಿಯಾಗುತ್ತಿದ್ದವು. ಇವೆಲ್ಲ ಉದ್ದೇಶಗಳ ಹಿನ್ನೆಲೆಯಲ್ಲಿ ಅವು ರಚಿತವಾಗುತ್ತಿದ್ದವು. ಮೌಖಿಕ ಮಹಾಕಥನಗಳಿಗೆ ಬಂದರೆ ಅವು ಗಾಯನ, ಪ್ರದರ್ಶನ, ಆಚರಣೆ, ಪಾಲನೆ, ಇತ್ಯಾದಿ ಉದ್ದೇಶಗಳಿಗೆ ಸೃಷ್ಟಿಯಾಗುತ್ತಿದ್ದವು. ಕಥೆ ಮಾಡುವುದನ್ನೇ ವಂಶಪಾರಂಪರ್ಯ ವೃತ್ತಿಯಾಗಿ ಹೊತ್ತವರಿಂದ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುತ್ತಿದ್ದವು.

ವಚನಗಳನ್ನು ನೋಡಿದರೆ ವಾಚನ ತತ್ವವೂ; ಸ್ವರವಚನ, ಕೀರ್ತನೆ, ತತ್ವಪದಗಳನ್ನು ನೋಡಿದರೆ ಶ್ರವಣ-ಗಾಯನ ತತ್ವಗಳೂ ಅವುಗಳ ರಾಚನಿಕ ಸ್ವರೂಪದಲ್ಲಿ ಎದ್ದು ಕಾಣುತ್ತವೆ. ವಚನ ಎನ್ನುವುದು ಒಂದು ಕಾವ್ಯ ರಚನಾ ವಿನ್ಯಾಸ. ಹಾಗೇ ಕೀರ್ತನೆ, ಸ್ವರವಚನ, ತತ್ವಪದಗಳೆಲ್ಲ ಸ್ಥೂಲವಾಗಿ ಇನ್ನೊಂದು ರೀತಿಯ ಕಾವ್ಯ ವಿನ್ಯಾಸವನ್ನು ನಿರ್ದೇಶಿಸುತ್ತವೆ. ಇಂದು ವಿಮರ್ಶಕರಾಗಲಿ ಹಿರಿ ಕವಿಗಳಾಗಲಿ ಕಿರಿಯ ಕವಿಗಳಿಗೆ ಕಾವ್ಯ ರಚನೆಯ ಬಗೆಗೆ ಸಲಹೆ ಸೂಚನೆಗಳನ್ನು ಕೊಡುವಾಗ ಹಿಂದಿನ ಕವಿಗಳ ರಚನೆಗಳನ್ನು ಅಭ್ಯಾಸ ಮಾಡಲು ಸೂಚಿಸುವುದುಂಟು. ಪರಂಪರೆಯ ತಿಳುವಳಿಕೆ ಪಡೆಯಲು ಸೂಚಿಸುವುದುಂಟು. ಅಂದರೆ ಹಿಂದಿನವರ ರಚನೆಗಳು ಅಂದಂದಿನವರ ಮಾದರಿಗಳಾಗಿ ಕೆಲಸ ಮಾಡುತ್ತವೆ ಎಂದಾಯಿತು. ತಾತ್ವಿಕ ಗ್ರಂಥಗಳು ಹೇಳುವ ತತ್ವಗಳಿಗು ಕಾವ್ಯಗಳು ತೋರುವ ದಾರಿಗಳಿಗು ಬಹಳ ಅಂತರ ಇರುತ್ತದೆ. ಕಾವ್ಯ ಮೀಮಾಂಸೆಯನ್ನು ನೋಡಿ, ಓದಿ ನಮ್ಮವರು ಇಂದು ಕಾವ್ಯ ಬರೆಯುತ್ತಿಲ್ಲ. ಆದರೆ ವಚನಕಾರರ ಪ್ರತಿಮಾ ನಿರ್ಮಾಣ ಕೌಶಲ, ಮಹಾಕವಿಗಳ ರೂಪಕ ವಿಧಾನಗಳು, ಪದಪ್ರಯೋಗ ವಿಧಾನಗಳು, ಕಾವ್ಯ ಕಟ್ಟುವ ಬಗೆಗಳು ಹೀಗೆ ಅನೇಕ ನೆಲೆಯಲ್ಲಿ ಇಂದಿನ ಕವಿಗಳು (ಬರಹಗಾರರು) ಪರಂಪರೆಯಿಂದ ಕಲಿತಿರುವುದುಂಟು, ಕಲಿಯುತ್ತಿರುವುದುಂಟು. ಅಂದರೆ ಕಾವ್ಯರಚನೆಯ ಪರಿಕರಗಳನ್ನು ನಿರ್ಮಿಸಿಕೊಡುವ ಮತ್ತು ಕಾವ್ಯರಚನೆಯ ವಿಧಾನಗಳನ್ನು ತೋರುವ ಎರಡೂ ಕೆಲಸಗಳನ್ನು ನಮ್ಮ ಪರಂಪರೆಯ ಕಾವ್ಯಗಳು ತಾವು ಹೇಳುವ ತತ್ವಗಳಿಂದ ಅಷ್ಟೇ ಅಲ್ಲ ತಮ್ಮ ಸ್ವರೂಪದಿಂದಲೇ ಮಾಡುತ್ತ ಬಂದಿವೆ. 'ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನರಿಯಬಾರದು' ಎಂಬ ಪ್ರಜ್ಞೆ ನಮ್ಮ ಕಾವ್ಯಪರಂಪರೆಯುದ್ದಕ್ಕು ಹರಿಯುತ್ತ ಬಂದಿರುವುದು ಕೂಡ ಕಾಣುತ್ತದೆ. ಪರಂಪರೆಯನ್ನು ಅನುಸರಿಸುವಲ್ಲಿ ಮಾತ್ರವಲ್ಲ ಪರಂಪರೆಯನ್ನು ಮುರಿಯುವಲ್ಲಿ ಮತ್ತು ಹೊಸ ಪರಂಪರೆಗಳನ್ನು ಕಟ್ಟಿಕೊಳ್ಳುವಲ್ಲಿ ಕೂಡ ಈ ಪ್ರಜ್ಞೆ ಕೆಲಸ ಮಾಡಿದೆ.

ಶ್ರೀ ವಿಜಯನೇ 'ಪೂರ್ವಕಾವ್ಯ ರಚನೆಗಳಂ ತಾಂ ಮೊದಲೊಳ್ ಕಲ್ತಂಗಲ್ಲದೆ, ಪದದೊಳ್ ಜಾಣುಂ, ಬೆಡಂಗುಂ ಅಕ್ಕುಮೆ ಕೃತಿಯೊಳ್?' (1-9) ಎಂದು ಹೇಳಿದ್ದಾನೆ. ಪೂರ್ವಕಾವ್ಯ ರಚನೆಗಳನ್ನು ಕಾಣದೆ ಕಾವ್ಯ ರಚಿಸಿದರೆ ತಮಗೊಂದು ಮಾದರಿಯೇ ಇಲ್ಲವಾಗುತ್ತದೆ. ಶ್ರೀವಿಜಯನ ಈ ಮಾತನ್ನು ನಮ್ಮವರು ತಮ್ಮ ತಮ್ಮ ಧಾರ್ಮಿಕ ಸಾಹಿತ್ಯದ ಪರಂಪರೆಯನ್ನು ಅರಿಯುವ ಮೂಲಕ ಪಾಲಿಸುತ್ತ ಬಂದಿದ್ದಾರೆ. ಆದರೆ ಪೂರ್ವಕಾವ್ಯಗಳನ್ನು ನೋಡಿ, ಕಲಿತು, ಅನುಸರಿಸಿ ಬರೆದಿರುವಂತೆ ನಮ್ಮವರು ಕಾವ್ಯಮೀಮಾಂಸಾ ಕೃತಿಗಳನ್ನು ನೋಡಿ ಕಲಿತು ಬರೆದಿದ್ದಾರೆಯೇ? ನಮ್ಮ ಪ್ರಾಚೀನ ಕಾವ್ಯಗಳನ್ನು

ಅಭ್ಯಾಸ ಮಾಡಿದರೆ ಹಾಗನ್ನಿಸುವುದಿಲ್ಲ. ಶ್ರೀವಿಜಯನಿಂದ ಪಂಪ, ರನ್ನ, ಪೊನ್ನ, 1ನೆ ನಾಗವರ್ಮ, ಚಾವುಂಡರಾಯ, ದುರ್ಗಸಿಂಹ ಇವರ್ಯಾರೂ ಕಲಿತಂತೆ ಕಾಣುವುದಿಲ್ಲ. 2ನೆ ನಾಗವರ್ಮನಿಂದ ನಾಗಚಂದ್ರ, ನಯಸೇನ, ಕರ್ಣಪಾರ್ಯ ಇವರ್ಯಾರೂ ಕಲಿತು ಬರೆದಂತೆ ಕಾಣಿವುದಿಲ್ಲ. ಉದಯಾದಿತ್ಯ ಕವಿಕಾಮರಿಂದ ನೇಮಿಚಂದ್ರ, ರುದ್ರಭಟ್ಟ, ಆಚಣ್ಣ, ಅಗ್ಗಳಾದಿಗಳು ಏನನ್ನೂ ಕಲಿತಂತೆ ಕಾಣುವುದಿಲ್ಲ. ನಮ್ಮ ಕವಿಗಳೂ ಕೂಡ ತಂತಮ್ಮ ಪೂರ್ವಕವಿ ಸ್ಮರಣೆಗಳಲ್ಲಿ ತಾವು ಮೆಚ್ಚುವ-ಓದಿದ ಕವಿಗಳನ್ನು ನೆನೆಯುತ್ತಾರೆಯೇ ವಿನಾ ಶಾಸ್ತ್ರಕಾರರ ಶಾಸ್ತ್ರಗ್ರಂಥಗಳನ್ನು ಅಷ್ಟಾಗಿ ನೆನೆಯುವುದಿಲ್ಲ. ಕವಿಗಳಿಗೆ ಪೂರ್ವಕವಿಗಳು ಮಾತ್ರ ಸ್ಮರಣೀಯರಾದರ ಶಾಸ್ತ್ರಕಾರರಿಗೆ ಪೂರ್ವ ಶಾಸ್ತ್ರಕಾರರು ಮಾತ್ರ ಸ್ಮರಣೀಯರಾಗಿದ್ದಾರೆ. ಕೆಲವೊಮ್ಮೆ ಒಬ್ಬಿಬ್ಬರು ಕವಿಗಳನ್ನು ಶಾಸ್ತ್ರಕಾರರು ನೆನೆಯುತ್ತಾರಾದರೂ ಹಾಗೆ ತಮ್ಮ ಕಾವ್ಯ ಬರವಣಿಗೆಯನ್ನು ಕಟ್ಟಿಕೊಳ್ಳುವುದಕ್ಕಾಗಿ ಏನೂ ನೆನೆಯುವುದಿಲ್ಲ. ಲಕ್ಷ್ಮೀಶನಂತೂ ಗಂಟಾಘೋಷವಾಗಿ

ಧರೆಯೊಳಾ ರಾರಾಜಿಸುವ ಕನ್ನಡದ ನುಡಿಗಳ
ಬಗೆಯರಿದರ್ ಆವ ಲಕ್ಷಣದಿಂದೆ ಮುನ್ನ ಕ
ಬ್ಬಗಳನುಸುರಿದರದೇ ಲಕ್ಷ್ಯಮಲ್ಲದೆ ಪೆರತೆ
ನಗೆ ಸಲ್ಲದದರಿಂದೆ ಪೂರ್ವ ಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು (1-10: ಜೈಮಿನಿ ಭಾರತ)

ಎಂದು ಹೇಳಿದ್ದಾನೆ. ಮೀಮಾಂಸಕರು ಲಕ್ಷ ಲಕ್ಷ್ಯಗಳನ್ನು ಏನೇ ಹೇಳಿರಲಿ ನಮ್ಮ ಕವಿಗಳಿಗೆ ಮಾತ್ರ ಪೂರ್ವ ಕವಿಕಾವ್ಯಗಳೇ ಅಗತ್ಯವಾಗಿ ಗಮನಿಸಬೇಕಾದ ಲಕ್ಷ್ಯಗಳು. ಪರಂಪರೆಯನ್ನು ಅಲಕ್ಷ್ಯ ಮಾಡದೆ ತಮ್ಮ ಪೂರ್ವ ಕವಿಕೃತಿಗಳನ್ನು ಅಗತ್ಯವಾಗಿ ಗಮನಿಸಿ ತಿಳಿಯುವ ಪರಂಪರೆಯ ಪ್ರಜ್ಞೆಯೊಂದು ನಮ್ಮ ಬಹುತೇಕ ಎಲ್ಲ ಕಾವ್ಯಗಳಲ್ಲಿ ಪ್ರಕಟವಾಗಿದೆ. ಇಲ್ಲಿ ಇನ್ನೊಂದು ಮಾತು ಮುಖ್ಯ. ರಚಿತವಾದ ಕಾವ್ಯಗಳನ್ನು ಓದಿದ್ದರೂ ಅವುಗಳಿಂದ ಹೊರಡುವ ತತ್ವಗಳನ್ನು ಕ್ರೋಡೀಕರಿಸಿ ಹೇಳುವ ಗೋಜಿಗೆ ನಮ್ಮ ಯಾವ ಮೀಮಾಂಸಕರೂ ಹೋಗಲಿಲ್ಲ. ರಚಿತವಾಗಿರುವ ಕಾವ್ಯಗಳನ್ನು ಅನುಸರಿಸಿ ಮೀಮಾಂಸೆ ರೂಪಿಸುವ ಕೆಲಸಕ್ಕಿಂತ ಮೀಮಾಂಸೆಯ ಲಕ್ಷಣಗಳಿಗೆ ಲಕ್ಷ್ಯ ಪದ್ಯಗಳನ್ನು ನೀಡುವಾಗ ಆಕರಗಳನ್ನಾಗಿ ಕನ್ನಡ ಮಹಾಕಾವ್ಯಗಳನ್ನು ಬಳಸುವ ಕೆಲಸವನ್ನು ನಮ್ಮ ಮೀಮಾಂಸಕರು ಮಾಡಿದ್ದಾರೆ. ತಾವು ನಂಬುವ ಮೀಮಾಂಸೆಯ ಆಚೆಗೂ ರಚಿತವಾಗಿರುವ ಕಾವ್ಯಗಳನ್ನು-ಆ ಕಾವ್ಯಗಳ ಮೀಮಾಂಸೆಯನ್ನು ಈ ಜನ ಗಮನಿಸಲು ಹೋಗಿಲ್ಲ. ವಚನ, ಸ್ವರವಚನ, ಕೀರ್ತನೆ, ತತ್ವಪದ ಇವುಗಳನ್ನು ಕಾವ್ಯಗಳೆಂದು ಮೀಮಾಂಸಕರು ಪರಿಗಣಿಸಿಯೇ ಇಲ್ಲ. ಹಾಗಾಗಿ ಅವುಗಳ ಕುರಿತ ಲಕ್ಷಣಶಾಸ್ತ್ರ ಹುಟ್ಟಿಯೂ ಇಲ್ಲ. ಛಂದಸ್ಸು, ನಿಘಂಟು, ವ್ಯಾಕರಣ ಗ್ರಂಥಗಳೂ ಇವುಗಳನ್ನು ಪರಿಗಣಿಸಿಲ್ಲ. 1500ರಲ್ಲಿ ಕವಿಜಿಹ್ವಾಬಂಧನ ಬರೆದ ಈಶ್ವರಕವಿಯಾಗಲೀ 1650ರಲ್ಲಿ ಛಂದಸ್ಸಾರ ಬರೆದ ಗುಣಚಂದ್ರನಾಗಲೀ 1750ರಲ್ಲಿ ಕನ್ನಡ ಕುವಲಯಾನಂದ ಬರೆದ ಜಾಯೇಂದ್ರನಾಗಲೀ 1775ರಲ್ಲಿ ಷಟ್ಪ್ರತ್ಯಯ ಬರೆದ ಶಾಲ್ಯದ ಕೃಷ್ಣರಾಜನಾಗಲೀ 1846ರಲ್ಲಿ ನಂದಿಛಂದಸ್ಸು ಬರೆದ ವೀರಭದ್ರನಾಗಲೀ ಇವರ್ಯಾರೂ ಅದಾಗಲೇ ರಚನೆಯಾಗಿದ್ದ ವಚನ, ಕೀರ್ತನೆ, ಸ್ವರವಚನ, ತತ್ವಪದ ಇತ್ಯಾದಿಗಳ ಛಂದಸ್ಸಿನ ಬಗೆಗೆ, ಭಾಷಾ ಬಳಕೆಯ ಬಗೆಗೆ, ಆ ಕಾವ್ಯಗಳು ಪ್ರಕಟಿಸುವ ಕಾವ್ಯತತ್ವಗಳ ಬಗೆಗೆ ಏನೂ ಮಾತನಾಡುವುದಿಲ್ಲ. (ಜಾಯಗೌಂಡ ಮಾತ್ರ ಲಾವಣಿಗಳ ಲಕ್ಷಣಗಳನ್ನು ಚರ್ಚಿಸಿದ್ದಾನೆ) ಭಾಷಾ ಬಳಕೆಯ ಬಗೆಗೆ, ಭಾಷಾ ಬದಲಾವಣೆಯ ಬಗೆಗೆ ಮಾತನಾಡುವ ಕೇಶೀರಾಜನೂ ತನ್ನ ಶಬ್ದಮಣಿದರ್ಪಣ ರಚನೆಯ ಹೊತ್ತಿಗೆ ಸಾಕಷ್ಟು ಸಾಂಸ್ಕೃತಿಕ ಸಂಚಲನ ಉಂಟುಮಾಡಿದ್ದ ವಚನಗಳ ಭಾಷೆಯ ಬಗ್ಗೆ ಚಕಾರ ಎತ್ತುವುದಿಲ್ಲ. ಅಂದರೆ ಇವೆಲ್ಲ ಅವರಿಗೆ ಮೀಮಾಂಸೆ, ಶಬ್ದಶಾಸ್ತ್ರಗಳಿಗೆ ಹೊರಗು. ಧರ್ಮ ಮತ್ತು ಕಾವ್ಯಮೀಮಾಂಸೆಯ ನಡುವಿನ ಸಂಬಂಧ ಕೂಡ ಇಲ್ಲಿ ಗೋಜಲಾಗಿದೆ. 'ಮಾತೆಂಬುದು ಜ್ಯೋತಿರ್ಲಿಂಗ' ಎಂದ ಶರಣರ ಭಕ್ತಿ ಕಾವ್ಯ ಮೀಮಾಂಸೆ ನಮ್ಮ ಲಾಕ್ಷಣಿಕರನ್ನು ಎಷ್ಟು ಮಾತ್ರಕ್ಕೂ ಕಾಡದೆ ಇರುವುದು ಸೋಜಿಗದ ಸಂಗತಿಯಾಗಿದೆ.

ರಚಿತ ಸಾಹಿತ್ಯ ಆಧರಿಸಿ ಮೀಮಾಂಸೆಯನ್ನು ತಾತ್ವೀಕರಿಸುವ ಪದ್ಧತಿ ನಮ್ಮಲ್ಲಿ ಇಲ್ಲ. ಸಂಸ್ಕೃತ-ಕನ್ನಡ ಮಹಾಕಾವ್ಯ ಛಂದೋ ಪರಂಪರೆಯನ್ನು ಮಾತ್ರ, ಮೀಮಾಂಸಾ ಪರಂಪರೆಯನ್ನು ಮಾತ್ರ ನಮ್ಮ ಅಲಂಕಾರಶಾಸ್ತ್ರಕಾರರೂ ಪುನರ್‌ನಿರೂಪಿಸುತ್ತ ಬಂದಿದ್ದಾರೆ. ಷಟ್ಪದಿ, ಕಂದ, ಸಾಂಗತ್ಯ, ವೃತ್ತ-ಗದ್ಯ-ಕಂದಗಳ ಚಂಪುಗಳಲ್ಲಿ ರಚಿತವಾಗಿರುವ ಕನ್ನಡ ಕಾವ್ಯಗಳಲ್ಲಿನ ಅಲಂಕಾರ ಛಂದಸ್ಸು, ರಸ, ಧ್ವನಿ, ರೀತಿ, ಔಚಿತ್ಯಗಳನ್ನು ಅಲ್ಪ ಸ್ವಲ್ಪ ಗಮನಿಸಿ ಅಲಂಕಾರ ಗ್ರಂಥಗಳು ಚರ್ಚಿಸುತ್ತವೆ. ಹಾಗಾದರೆ ನಮ್ಮ ಪ್ರಾಚೀನ ಕವಿಗಳಿಗೆ ಅವರಿಗೂ ಹಿಂದೆ ರಚಿತವಾದ ಮೀಮಾಂಸಾ ಕಾವ್ಯಶಾಸ್ತ್ರ ಗ್ರಂಥಗಳು ತಿಳಿದಿರಲಿಲ್ಲವೇ? ಅವುಗಳಿಂದ

ಅವರು ಏನನ್ನೂ ಕಲಿಯಲಿಲ್ಲವೇ? ಹಾಗೇನಿಲ್ಲ. ಬಹುತೇಕರಿಗೆ ಶಾಸ್ತ್ರಗಳು ತಿಳಿದಿದ್ದವು. ಆದರೆ ಅವನ್ನು ಅವರು ಅಷ್ಟಾಗಿ ನಿಯಮಗಳಂತೆ ಅನುಸರಿಸಲಿಲ್ಲ. ಜ್ಞಾನ-ಪರಿಜ್ಞಾನವಾಗಿ ಪಡೆದರು ಅಷ್ಟೆ. 'ಪದದ ಪ್ರೌಢಿಯ ನವರಸಂಗಳ ಉದಿತವೆನುವನುಭಾವವ ಬೆದಕಲಾಗದು ಬಲ್ಲ ಪ್ರೌಢರುಮೀ ಕಥಾಂತರದಿ' ಎಂದು ಕುಮಾರವ್ಯಾಸನೇ ಹೇಳುತ್ತಾನೆ. ನಿಮ್ಮ ರಸಮೀಮಾಂಸೆಯನ್ನು ಈ ಕಾವ್ಯಕ್ಕೆ ಅನ್ವಯಿಸಬೇಡಿ ಎನ್ನುತ್ತಾನೆ. ಆದರೆ ಕನ್ನಡ ಕವಿಗಳ ಅಭಿಪ್ರಾಯ ಮತ್ತು ಕನ್ನಡ ಲಾಕ್ಷಣಿಕರ ಅಭಿಪ್ರಾಯಗಳೆರಡರ ಪರಿಶೀಲನೆಯಿಂದ ಕನ್ನಡದಲ್ಲಿ ಕಾವ್ಯತತ್ವದ ಅಥವಾ ಸೌಂದರ್ಯದ ಸಾಮಾನ್ಯ ಮೀಮಾಂಸೆಯ ಬದಲು ಕಾವ್ಯವಿಶೇಷಗಳ ಲಕ್ಷಣಗಳು ಮಾತ್ರ ಆದರಣೀಯವಾಗಿದ್ದ ಅಂಶ ಸ್ಪಷ್ಟವಾಗುತ್ತದೆ.. ಕವಿತ್ವದಲ್ಲಿ ಆಸಕ್ತಿಯಿದ್ದ ಕವಿಗಳಿಗೂ ಸಹೃದಯರಿಗೂ ಲಕ್ಷಣ ಲಕ್ಷ್ಯ ಸಮನ್ವಯವೇ ಹೆಚ್ಚು ಉಪಯೋಗಿಯೆಂದು ಪ್ರಾಚೀನರು ತಿಳಿದಿದ್ದರು.[17] ಪಂಪನಿಂದ ಹಿಡಿದು ಷಡಕ್ಷರಿಯವರೆಗೆ ಕನ್ನಡದ ಮಹಾಕವಿಗಳೆಲ್ಲರೂ-ಹರಿಹರ, ರಾಘವಾಂಕ, ನಾಗಚಂದ್ರ, ಗುಣವರ್ಮ, ಚೌಡರಾಜ ಇತ್ಯಾದಿ-ಪ್ರತಿಯೊಬ್ಬರೂ ತಪ್ಪದೇ ತಮ್ಮ ಕಾವ್ಯಗಳು 'ಸರಸ' ಹಾಗೂ 'ಸಾಲಂಕಾರ'ಗಳಾಗಿರುವ ವಿಷಯವನ್ನು ಎತ್ತಿ ಹೇಳಿದ್ದಾರೆ.[18] ಆದರೆ ರಸ, ಧ್ವನಿ, ಅಲಂಕಾರ, ಔಚಿತ್ಯ, ರೀತಿ, ಸ್ವಭಾವೋಕ್ತಿಗಳಿಗೆ ನಮ್ಮ ಲಾಕ್ಷಣಿಕರು ಇಂಥವರ ಗ್ರಂಥಗಳಿಂದ ಪದ್ಯಗಳನ್ನು ಲಕ್ಷ್ಯಗಳನ್ನಾಗಿ ಎತ್ತಿ ಕೊಡುವುದಕ್ಕಿಂತ ಸ್ವಂತಂತ್ರವಾಗಿ ಸೃಷ್ಟಿಸಿರುವುದೇ ಹೆಚ್ಚು. ನಮ್ಮ ಮೀಮಾಂಸೆಯು ಆಚರಣೆಯನ್ನು ತಾತ್ವೀಕರಿಸುವುದಕ್ಕಿಂತ ಸಿದ್ಧಾಂತಗಳನ್ನು ಲಕ್ಷಣೀಕರಿಸಿರುವುದೇ ಹೆಚ್ಚು. ನಮ್ಮವರು ಚರ್ಚಿಸಿರುವ ಮೀಮಾಂಸೆಯ ಸಿದ್ಧಾಂತಗಳು ಕವಿಗಳಿಗಿಂತ ಕಾವ್ಯ ವಿಶ್ಲೇಷಕ ವಿದ್ವಾಂಸರಿಗೆ ಹೆಚ್ಚು ಉಪಯೋಗಿಯಾಗಿವೆ.

**2.5. ಸಂವಾದರೂಪಿ ನಾಟ್ಯಮಯತೆ ಮತ್ತು ವರ್ಣನಾ ಮಾರ್ಗ**

ಸಂವಾದ ಗುಣವುಳ್ಳ ನಾಟ್ಯಮಯತೆಯನ್ನು ಮತ್ತು ವರ್ಣನಾ ವಿಧಾನವನ್ನು ನಮ್ಮ ಬಹುತೇಕ ಎಲ್ಲಾ ಕವಿಗಳು ಬಳಸಿದ್ದಾರೆ. ನಮ್ಮ ಹಳಗನ್ನಡ ಕಾವ್ಯಗಳಲ್ಲಿ ಅದರಲ್ಲೂ ಮುಖ್ಯವಾಗಿ ರನ್ನನ ಗದಾಯುದ್ಧ, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಕುಮಾರವ್ಯಾಸನ ಭಾರತಗಳಲ್ಲಿ ಅಪೂರ್ವವಾದ ಸಂವಾದರೂಪಿ ನಾಟ್ಯಮಯತೆ ಇದೆ. ನಮ್ಮ ಕೆಲವು ಕಥನಗಳಲ್ಲೆ ಸಂವಾದಗುಣ-ಪ್ರಸಂಗಗುಣಗಳು ಅಂತರ್ಗತವಾಗಿರುತ್ತವೆ. ಕಥನ ನಿರ್ವಹಣೆಯ ಸಂದರ್ಭದಲ್ಲಿ ಅವು ಪ್ರಕಟಗೊಳ್ಳಲೇ ಬೇಕು. ಹಾಗೆ ಸಂಭಾಷಣಾ ಪ್ರಸಂಗಗಳು ನಮ್ಮ ಹಲವಾರು ಕಾವ್ಯಗಳಲ್ಲಿ ನಿರ್ಮಾಣವಾಗಿವೆ. ಇಂತಹ ನಿರ್ಮಾಣಗಳಲ್ಲಿ ಕಥನದೊಳಗೆ ಚಿಕ್ಕಚಿಕ್ಕ ನಾಟಕಗಳು ಸಂಭವಿಸುತ್ತಿರುತ್ತವೆ. ನಮ್ಮ ಪ್ರಾಚೀನ ಕಾವ್ಯದ ಲಕ್ಷಣಗಳಲ್ಲಿ ಇಂತಹ ನಾಟ್ಯ ಸಂಭವಿ ಗುಣ ಕೂಡ ಒಂದು ಮುಖ್ಯವಾದ ಲಕ್ಷಣವಾಗಿದೆ. ತತ್ವಗಳನ್ನು ಹೇಳುವಾಗ ನಾಟ್ಯೀಕರಣದ ಬಗ್ಗೆ, ಸಂವಾದರೂಪಿ ನಾಟಕ ಗುಣದ ಬಗ್ಗೆ ಯಾವ ಶಾಸ್ತ್ರಕಾರರೂ ಅಷ್ಟಾಗಿ ಚರ್ಚಿಸುವುದಿಲ್ಲವಾದರೂ ಆಚರಣೆಯಲ್ಲಿ ನಮ್ಮ ಹಲವಾರು ಕವಿಗಳು ಇದನ್ನು ಪ್ರಕಟಪಡಿಸಿದ್ದಾರೆ. ಕನಕದಾಸ ರಾಮಧಾನ್ಯಚರಿತೆಯಲ್ಲಿ ರಾಗಿ ಮತ್ತು ವ್ರಿಹಿಗಳ ಸಂಭಾಷಣೆಯಿಂದ ಕಾವ್ಯವನ್ನು ಕಳೆ ಕಟ್ಟುವಂತೆ ರಚಿಸಿದ್ದಾನೆ. ರನ್ನನ ಗದಾಯುದ್ಧದ ನಾಟ್ಯಗುಣವನ್ನು ಕಂಡೇ ಬಿ.ಎಂ.ಶ್ರೀಯವರು ಗದಾಯುದ್ಧ ನಾಟಕಂ ಅನ್ನು ರಚಿಸಿದ್ದಾರೆ. ವಿಶೇಷವೆಂದರೆ ಸಂಭಾಷಣೆ ಅಥವಾ ಸಂವಾದರೂಪಿ ನಾಟ್ಯಮಯತೆ ಇರುವ ಕಾವ್ಯಭಾಗಗಳನ್ನು ಗಮಕ ವಾಚನಕ್ಕೆ ಹೆಚ್ಚು ಹೆಚ್ಚು ಬಳಸಲಾಗಿದೆ.

ಕಾವ್ಯದ ಭಾಗಗಳನ್ನು ಇಂದು ಕೂಡ ಪ್ರತ್ಯೇಕವಾಗಿ ವಾಚಿಸುವಾಗ ಅಭ್ಯಾಸ-ಅಧ್ಯಯನ ಮಾಡುವಾಗ ಅವುಗಳನ್ನು ಪ್ರಸಂಗಗಳೆಂದು ಗುರ್ತಿಸುವ ಪರಿಪಾಠವಿದೆ. ಕುಮಾರವ್ಯಾಸನ ಉತ್ತರಕುಮಾರ ಪ್ರಸಂಗ, ಪಂಪನ ವಜ್ರಜಂಘ ಶ್ರೀಮತಿಯರ ಪ್ರಸಂಗ, ನೀಲಾಂಜನೆಯ ನೃತ್ಯ ಪ್ರಸಂಗ, ಹರಿಶ್ಚಂದ್ರಕಾವ್ಯದ ಚಂದ್ರಮತಿಯ ಪ್ರಲಾಪ ಪ್ರಸಂಗ ಹೀಗೆ ಆಯ್ದ ಕೆಲವು ಕಾವ್ಯಭಾಗಗಳನ್ನು ನಾವು ಪ್ರಸಂಗಗಳೆಂದೇ ಕರೆಯುತ್ತೇವೆ. ಈ ಭಾಗಗಳ ವಾಚನ-ಅಭ್ಯಾಸ-ಪಠಣ ಸಂದರ್ಭಗಳಲ್ಲಿ ಕಾವ್ಯವು ಓದುಗರೊಂದಿಗೆ ಸಂವಾದಕ್ಕೆ ತೊಡಗುತ್ತದೆ. ಕಾವ್ಯದ ಒಳಗಿನ ಪಾತ್ರಗಳು ಸಂವಾದ ನಡೆಸುವುದರ ಜೊತೆಗೆ ಅದಕ್ಕಿಂತ ಭಿನ್ನವಾಗಿ ಓದುಗನ ಮನೋರಂಗಭೂಮಿಯಲ್ಲಿ ಓದುಗನನ್ನು ಕಾವ್ಯವು ಸಂವಾದಕ್ಕೆ ಸೆಳೆದುಕೊಳ್ಳುತ್ತದೆ. ಇಂತಹ ಪ್ರಸಂಗಗಳ ನಿರ್ವಹಣೆ ಕೂಡ ಕಾವ್ಯ ರಚನಾ ವಿನ್ಯಾಸವು ಹೇಗಿರಬೇಕು ಎಂಬ ತತ್ವವನ್ನು ಪ್ರತಿಪಾದಿಸುವ ಆಚರಣೆಯಾಗಿದೆ.

ಒಬ್ಬೊಬ್ಬ ಕವಿಯ ಕಾವ್ಯದಲ್ಲಿ ಇರುವ ಸಂವಾದ ರೂಪಿ ನಾಟ್ಯಮಯತೆ ಮತ್ತು ವರ್ಣನಾ ಮಾರ್ಗಗಳನ್ನು ಕ್ರೋಡೀಕರಿಸಿ ನವೀನ ರೀತಿಯ ಸಂವಾದ ಸೃಷ್ಟಿಯನ್ನು ಮಾಡಿರುವ ಪ್ರಯತ್ನಗಳೂ ನಮ್ಮಲ್ಲಿವೆ. ಇವುಗಳನ್ನು ಎರಡು ಬಗೆಯಾಗಿ ಗುರ್ತಿಸಿಕೊಳ್ಳಬಹುದು. 1) ಭಿನ್ನ ಕವಿಗಳ ವರ್ಣನಾ ಮಾರ್ಗಗಳನ್ನು ಕ್ರೋಡೀಕರಿಸಿ ಅವುಗಳಿಗೊಂದು ಸಂವಾದ ರೂಪಿ ನಾಟ್ಯಮಯತೆಯನ್ನು ತಂದು ಕೊಡುವುದು

ಒಂದು ಬಗೆ. ಇದನ್ನು ಮಲ್ಲಿಕಾರ್ಜುನ, ಮಲ್ಲಕವಿ, ಅಭಿನವವಾದಿ ವಿದ್ಯಾನಂದರ ಕಾವ್ಯಸಾರಗಳು ಮಾಡಿವೆ. ಇವರು ಬೇರೆ ಬೇರೆ ಕನ್ನಡ ಕಾವ್ಯಗಳು ಅಷ್ಟಾದಶವರ್ಣನೆಯ ಒಂದೊಂದು ಭಾಗಗಳನ್ನು ನಿರ್ವಹಿಸಿರುವ ರೀತಿಯನ್ನು ಗಮನಿಸಿ; ತಮಗೆ ಸೂಕ್ತ ಮತ್ತು ಶ್ರೇಷ್ಠವೆಂದು ಕಂಡು ಬಂದ ಪದ್ಯಗಳನ್ನು ಆರಿಸಿ; ಒಂದೊಂದು ವರ್ಣನೆಗೆ ಸಂಬಂಧಿಸಿದ ಪದ್ಯಗಳನ್ನು ಒಂದೊಂದು ಕಡೆ ಸಂಪಾದಿಸಿ ಕೊಟ್ಟಿದ್ದಾರೆ. ಹೀಗಾಗಿ ಯಾರ್‍ಯಾರೋ ಯಾವ್ಯಾವುದೋ ಬಿಡಿ ಕಾವ್ಯಗಳಲ್ಲಿ ಬರೆದ ವರ್ಣನಾ ಪದ್ಯಭಾಗಗಳಿಗೆ ಇಲ್ಲಿ ಒಂದು ವಿಶಿಷ್ಟವಾದ ಸಂವಾದಗುಣ ಪ್ರಾಪ್ತಿಯಾಗಿದೆ. 2) ವಚನಗಳಲ್ಲೇ ಅಂತರ್ಗತವಾಗಿರುವ ಸಂವಾದಗುಣವನ್ನು ಗುರ್ತಿಸಿ ಅವುಗಳನ್ನು ಆಯಾ ವಚನಕಾರರ ಸಂವಾದ ಕಥನವೊಂದು ಸಿದ್ಧವಾಗುವ ಹಾಗೆ ಸಂಪಾದಿಸಿಕೊಡುವುದು ಇನ್ನೊಂದು ಬಗೆ. ಇದನ್ನು ಎಲ್ಲ ಶೂನ್ಯ ಸಂಪಾದನಾಕಾರರೂ ಮಾಡಿದ್ದಾರೆ. ನಾಲ್ಕೂ ಶೂನ್ಯ ಸಂಪಾದನೆಗಳಲ್ಲಿ ಸಂವಾದರೂಪಿ ನಾಟ್ಯಮಯತೆಯೇ ಆ ಸಂಪಾದನೆಗಳ ಪ್ರಧಾನ ಶೈಲಿಯಾಗಿದೆ. ಅದ್ಭುತ ನಾಟಕೀಯತೆಯಿಂದ ತುಂಬಿದ ಒಂದು ಮಹಾನಾಟಕ ಆಗುವ ಎಲ್ಲ ಸಾಧ್ಯತೆಗಳೂ ಈ ಸಂಪಾದನೆಗಳಿವೆ. ಕಾವ್ಯಸಾರಗಳಾಗಲೀ, ಶೂನ್ಯಸಂಪಾದನೆಗಳಾಗಲೀ ಈ ಎರಡೂ ಯತ್ನಗಳು ಸಂಗ್ರಹ/ಸಂಪಾದನಾ ಗ್ರಂಥಗಳಾಗಿದ್ದರೂ ಇವು ಸ್ವತಂತ್ರ ಕಾವ್ಯಗಳಂತೆಯೇ ಸ್ವೀಕೃತವಾಗಿವೆ. ನಮಗಂತೂ ಇವು ಆಯ್ಕೆ ಮತ್ತು ಸಂಯೋಜನೆಯ ನೆಲೆಯಲ್ಲಿ ಕನ್ನಡ ಕಾವ್ಯಲೋಕದ ಕಾವ್ಯರೂಪಿ ವಿಮರ್ಶೆಗಳೇ ಆಗಿವೆ. (ಹೆಚ್ಚಿನ ವಿವರಗಳಿಗೆ ನೋಡಿ; ಸಂಗ್ರಹಗಳಲ್ಲಿ ಪ್ರಕಟವಾಗಿರುವ ತಾತ್ವಿಕತೆ)

## 2.6. ಸಾಂದರ್ಭೀಕರಣ ಮತ್ತು ಅಪಸಾಂದರ್ಭೀಕರಣ ಮಾದರಿ

ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ, ಮಲ್ಲಕವಿ ಮತ್ತು ಅಭಿನವ ವಾದಿ ವಿದ್ಯಾನಂದರ ಕಾವ್ಯಸಾರಗಳನ್ನು ನೋಡಿದರೆ ಅಲ್ಲಿ ವಚನ ರಗಳೆ ಷಟ್ಪದಿಗಳಿಗೆ ಸ್ಥಾನವಿಲ್ಲ. ಆದರೆ ಮಹಾಕಥನಗಳ ಬಿಡಿ ಬಿಡಿ ಪದ್ಯಗಳನ್ನು ಇವುಗಳಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಹಾಗೆ ಸಂಗ್ರಹಿಸಿರುವ ಸಾವಿರಾರು ಪದ್ಯಗಳಿಗೆ ಸಂದರ್ಭಾತೀತವಾದ ಸ್ವತಂತ್ರ ಬಿಡಿ ಪದ್ಯಗಳಾಗಿ ವರ್ತಿಸುವ ಗುಣ ಕೂಡ ಪ್ರಾಪ್ತವಾಗಿದೆ. ಮಹಾಕಥನಗಳಲ್ಲಿ ಇರುವಾಗ ಅವುಗಳ ಎಲ್ಲ ಒಂದೊಂದೂ ವೃತ್ತ, ಕಂದಗಳಿಗು ಈ ಗುಣ ಇರದಿರಬಹುದು. ಆದರೆ ಅನೇಕ ಪದ್ಯಗಳಿಗೆ ಸ್ವತಂತ್ರ, ಸಂದರ್ಭಾತೀತವಾಗಿ ವರ್ತಿಸುವ ಗುಣ ತಂತಾನೆ ಇರುತ್ತದೆ. ಮಲ್ಲಿಕಾರ್ಜುನ, ಮಲ್ಲಕವಿ, ಅಭಿನವ ವಾದಿ ವಿದ್ಯಾನಂದರು ತಮ್ಮ ಕಾವ್ಯ ಸಂಗ್ರಹಗಳಲ್ಲಿ ಬಿಡಿ ಪದ್ಯಗಳಿಗೆ ಇಂಥ ಸಂದರ್ಭಾತೀತವಾದ ಅಪಸಾಂದರ್ಭೀಕೃತ ಓದನ್ನು ಸೃಷ್ಟಿಸಿದ್ದಾರೆ. ನಮ್ಮ ಶೂನ್ಯಸಂಪಾದನಕಾರರು ಇದಕ್ಕೆ ಭಿನ್ನವೆಂಬಂತೆ ವಚನಗಳಿಗೆ ಒಂದು ಮಹಾಕಥನ ಸಂದರ್ಭವನ್ನು ಸೃಷ್ಟಿಸಿದ್ದಾರೆ. ಸಂವಾದ ರೂಪಿ ನಾಟ್ಯಮಯತೆಯ ಸೃಷ್ಟಿಯನ್ನು ಮಾಡಿರುವ ಶೂನ್ಯಸಂಪಾದನೆಕಾರರು ಆಯಾ ಸಂವಾದಗಳನ್ನಾಗಿ ವಚನಗಳನ್ನು ಕಟ್ಟುವಾಗ ಅವುಗಳಿಗೊಂದು ಸಂದರ್ಭವನ್ನು ಸೃಷ್ಟಿಸಿದ್ದಾರೆ. ಬಿಡಿ ಬಿಡಿಯಾದ ವಚನ ರಚನೆಗೆ ಕಾರಣ ಮತ್ತು ಸಂದರ್ಭಗಳು ಏನೇನಿದ್ದವೋ ಅವೆಲ್ಲವೂ ನಗಣ್ಯವಾಗಿ ಶೂನ್ಯಸಂಪಾದನೆಗಳಲ್ಲಿ ಸಂಪಾದಿತವಾಗಿರುವ ಎಲ್ಲ ವಚನಗಳಿಗೆ ಒಂದು ಮಹಾಕಥನ ಸಂದರ್ಭ ಸೃಷ್ಟಿಯಾಗಿದೆ. ಈ ಕ್ರಿಯೆಗಳನ್ನು ಸಾಹಿತ್ಯದ ಸಾಂದರ್ಭೀಕರಣ ಮತ್ತು ಅಪಸಾಂದರ್ಭೀಕರಣ ಕ್ರಿಯೆಗಳೆಂದು ಕರೆಯಬಹುದು.[19]

## 2.6.1 ತಾತ್ವೀಕರಣ, ವರ್ಗೀಕರಣ ಮಾದರಿ

ಕಾವ್ಯಸಾರ ಮತ್ತು ಶೂನ್ಯಸಂಪಾದನೆಗಳದ್ದು ಅಪಸಾಂದರ್ಭೀಕರಣ ಮತ್ತು ಸಾಂದರ್ಭೀಕರಣ ಮಾದರಿಯಾದರೆ ಕಲ್ಲುಮಠದ ಪ್ರಭುದೇವರದ್ದು ವಚನಗಳ ಸ್ಥಲಾನುರೂಪಿ ವರ್ಗೀಕರಣ ಮತ್ತು ತಾತ್ವೀಕರಣ ಮಾದರಿಯಾಗಿದೆ. ಕಲ್ಲುಮಠದ ಪ್ರಭುದೇವ ತನ್ನ ಲಿಂಗಲೀಲಾ ವಿಲಾಸ ಚಾರಿತ್ರದಲ್ಲಿ 729(770) ವಚನಗಳನ್ನು ಮತ್ತು 135 ಸಂಸ್ಕೃತ ಶ್ಲೋಕಗಳನ್ನು ಆಯ್ಕೆ ಮಾಡಿ 16 ಸ್ಥಲಗಳಿಗೆ ಅನುಗುಣವಾಗಿ ವರ್ಗೀಕರಿಸಿ ಅವುಗಳನ್ನು ಕಾವ್ಯರೂಪದಲ್ಲಿ ಸಂಯೋಜಿಸಿ ಕೊಟ್ಟಿದ್ದಾನೆ. ವಚನಗಳನ್ನು ಶೈವಾಗಮ ಎಂದು ಕರೆದು ಶಿವಾಚಾರಕ್ಕೆ ಅನುಕೂಲವಾಗುವಂತೆ ವಚನಗಳನ್ನು ವ್ಯಾಖ್ಯಾನಿಸಿದ್ದಾನೆ. ಸರಳವಾಗಿ ಅರ್ಥವಾಗುವ ವಚನಗಳಿಗೆ ಅರ್ಥವ್ಯಾಖ್ಯಾನ ಮಾಡದೆ ಅವುಗಳನ್ನು 'ಈ ವಚನಕ್ಕೆ ಕಾಣಬಂದರ್ಥ' ಎಂದು ಹೇಳಿ ಹಾಗೇ ಬಿಟ್ಟಿದ್ದಾನೆ. ಸಂಸ್ಕೃತ ಕನ್ನಡಗಳ ನಡುವೆ ಅಂಥ ಭೇದ ಕಾಣದ ಕಲ್ಲುಮಠದ ಪ್ರಭುದೇವ ಸಂಸ್ಕೃತ ಶ್ಲೋಕಗಳಿಗೆ ಆಕರಗಳನ್ನೇನೂ ನೀಡಿಲ್ಲ. ಹದಿನಾರು ಸ್ಥಲಗಳಿಗೆ ಹೊಂದುವಂತಹ ಶ್ಲೋಕಗಳನ್ನು ವಚನಗಳ ಜೊತೆ ಇಟ್ಟು ಶ್ಲೋಕಗಳಿಗೂ ವಚನಗಳಿಗೂ ಸಾಮ್ಯ ಮತ್ತು ಸಮಾನತೆಯನ್ನು ಕಲ್ಪಿಸಲು ಯತ್ನಿಸಿದ್ದಾನೆ. ಶೈವ ಸಿದ್ಧಾಂತ, ಶೈವ ವೈಚಾರಿಕತೆ, ಶೈವ ಧಾರ್ಮಿಕತೆಗಳ ಹಿನ್ನೆಲೆಯಿಂದ ವಚನಗಳನ್ನು ತಾತ್ವೀಕರಣ, ವರ್ಗೀಕರಣಕ್ಕೆ ಗುರಿಮಾಡಿರುವ ಒಂದು ವಿಶಿಷ್ಟವಾದ ಓದು ಇದಾಗಿದೆ. ವಚನಧರ್ಮವು ವೀರಶೈವ

ಧರ್ಮವಾಗಿ ಸಾಂಸ್ಥೀಕರಣಗೊಂಡ ಒಂದು ಪಲ್ಲಟಿತ ಸ್ಥಿತಿಯ ಸಾಹಿತ್ಯದ ಅನುಸಂಧಾನದ ಒಂದು ಮಾದರಿ(ವಿಮರ್ಶೆ)ಯು ಇಲ್ಲಿ ಪ್ರಕಟವಾಗಿದೆ. ಕಲ್ಲುಮಠದ ಪ್ರಭುದೇವನ ಈ ಪ್ರಯತ್ನವು ಶೂನ್ಯಸಂಪಾದನೆ-ಕಾವ್ಯಸಾರಗಳಿಗಿಂತ ಭಿನ್ನವಾದ ಒಂದು ಸಂಪಾದನೆ. ಇದು ಸಂಪಾದನಾರೂಪಿ ವಿಮರ್ಶೆಯೂ ಹೌದು, ಟೀಕು-ವ್ಯಾಖ್ಯಾನರೂಪಿ ವಿಮರ್ಶೆಯೂ ಹೌದು.

**2.7. ಚಂಪು-ನವೀನ ಚಂಪು**

ವಚನ ಒಂದು ಕಾವ್ಯ ರಚನಾ ವಿನ್ಯಾಸ ಹೇಗೋ ಹಾಗೆ ರಗಳೆ, ಕೀರ್ತನೆ, ಚಂಪುಗಳೆಲ್ಲ ಒಂದೊಂದು ಭಿನ್ನ ಕಾವ್ಯ ವಿನ್ಯಾಸಗಳು. ಚಂಪು ಒಂದು ಛಂದೋರೂಪ ಅಲ್ಲ. ಇದೊಂದು ಹಲವು ಛಂದಸ್ಸುಗಳು ಬೆರೆತ ಕಾವ್ಯ ಬರವಣಿಗೆಯ ವಿಧಾನ. ಕಾವ್ಯ ಬರವಣಿಗೆಯ ಶೈಲಿ. ಹಲವು ಛಂದೋರೂಪಗಳನ್ನು ಒಳಗೊಂಡ ಒಂದು ಸಂಯೋಜಿತ ಛಂದಸ್ಸು ಎಂದರೂ ಸರಿಯೆ. ಅಂದರೆ ಇದೊಂದು ಕಂದ, ವೃತ್ತ, ವಚನ(ಗದ್ಯ) ರಗಳೆ, ಏಳೆ, ಮುಂತಾದ ಛಂದಸ್ಸುಗಳು ಕೂಡಿದ ಒಂದು ಸಂಯುಕ್ತ ಕಾವ್ಯಕ್ರಮ. ನಮ್ಮ ಪ್ರಾಚೀನರ ಕಾವ್ಯಕೃತಿಯ ಪರಿಕಲ್ಪನೆಯಲ್ಲಿ ಚಂಪು ಒಂದು ಮುಖ್ಯ ಮತ್ತು ಬಹು ಬಳಕೆಗೆ ಗುರಿಯಾಗಿರುವ ಒಂದು ಕೃತಿ ಪರಿಕಲ್ಪನೆ ಕೂಡ. ಇದೊಂದು ಕಾವ್ಯ ಪ್ರಕಾರ ಅಥವಾ ರೂಪವೂ ಹೌದು. ಭಿನ್ನ ಛಂದಸ್ಸುಗಳ ಸಂಯುಕ್ತರೂಪವಾದ ಚಂಪೂ ಹೇಗೆಲ್ಲ ಕಾವ್ಯ ಕಟ್ಟುವ ಒಂದು ವಿಧಾನವಾಗಿ ಬಳಕೆಯಾಗಬಹುದು ಎಂಬುದಕ್ಕೆ ನಮ್ಮ ಶೂನ್ಯಸಂಪಾದನೆಗಳು ಉತ್ತಮ ಉದಾಹರಣೆಗಳು. ಮುಕ್ತ ಛಂದಸ್ಸಿನ ಭಿನ್ನ ಭಿನ್ನ ವಿನ್ಯಾಸಗಳಾದ ವಚನಗಳನ್ನು ಸಂವಾದ ರೂಪಿಯಾಗಿ ಜೋಡಿಸಿ ಅವುಗಳಿಗೆ ಬೇಕಾದ ಕನಿಷ್ಠ ಪ್ರಮಾಣದ ಗದ್ಯವನ್ನು ನಡುನಡುವೆ ಬಳಸಿ ಒಂದು ಹೊಸ ನವೀನ ಚಂಪು ಮಾದರಿಯನ್ನು ಶೂನ್ಯ ಸಂಪಾದನೆಗಳು ನಿರ್ಮಿಸಿವೆ. ಕಾವ್ಯ ಕಟ್ಟಾಣಿಕೆಯು ರೂಪಾಂತರಗೊಳ್ಳುತ್ತ ಹೊಸ ಕಟ್ಟಾಣಿಕೆ ಸೃಷ್ಟಿಯಾಗುವ ಪರಿ ಇದು. ನಮ್ಮ ಈ ಶೂನ್ಯ ಸಂಪಾದನೆಗಳ ಕಟ್ಟಾಣಿಕೆಯನ್ನು ಕರಪ್ಟೆಡ್ ಚಂಪು ಅಥವಾ 'ನವೀನ ಚಂಪು' ಎಂದೂ ಕರೆಯಬಹುದು. ಕರಪ್ಟೆಡ್ ಚಂಪುಗಿಂತ ನವೀನ ಚಂಪು ಎಂಬ ನಾಮಕರಣವೆ ಹೆಚ್ಚು ಸೂಕ್ತವಾದುದು.

**2.8. ಮರುಕಥನೀಕರಣ-ಸಾಹಿತ್ಯರೂಪಿ ವಿಮರ್ಶೆ**

ವಚನಕಾರರ, ಕೀರ್ತನಕಾರರ, ತತ್ವಪದಕಾರರ ಹಲವು ಪರಂಪರೆಗಳು ಸಂಸ್ಕೃತಲೋಕ, ಚರಿತ್ರೆ, ವರ್ತಮಾನ, ಜಾನಪದಗಳನ್ನು ತಮ್ಮದೇ ಭಿನ್ನ ಭಿನ್ನ ರೀತಿಗಳಲ್ಲಿ ಅನುಸಂಧಾನಕ್ಕೆ ಗುರಿಮಾಡಿವೆ. ಹರಿಹರ, ರಾಘವಪಂಡಿತ, ವೀರಶೈವ ಪುರಾಣಕಾರರ ಪರಂಪರೆಯೂ ತನ್ನದೇ ಭಿನ್ನ ಮಾದರಿಗಳಲ್ಲಿ ಇಂಥ ಅನುಸಂಧಾನಗಳನ್ನು ಮಾಡಿದೆ. ಇಂಥವರಲ್ಲೆಲ್ಲ ತಂತಮ್ಮ ಪರಂಪರೆಯ ವಿಮರ್ಶೆಯೆಂದರೆ, ಚರಿತ್ರೆಯ ವಿಮರ್ಶೆಯೆಂದರೆ ಅದು ಚರಿತ್ರೆಯ ವ್ಯಾಖ್ಯಾನವಾಗಲೀ, ವಿಶ್ಲೇಷಣೆಯಾಗಲೀ, ಗುಣದೋಷನಿರ್ಣಯ, ನ್ಯಾಯನಿರ್ಣಯ, ಮೌಲ್ಯಮಾಪನವಾಗಲೀ ಅಲ್ಲ. ಇವೆಲ್ಲಕ್ಕಿಂತ ಅದು ತಮಗೆ ವರ್ತಮಾನಕ್ಕೆ ಹೇಗೆ ಬೇಕೋ ಹಾಗೆ, ಎಷ್ಟು ಬೇಕೋ ಅಷ್ಟನ್ನು ಕಟ್ಟಿಕೊಳ್ಳುವ ಕ್ರಿಯೆ. ಈ ಕಟ್ಟಿಕೊಳ್ಳುವ ಕ್ರಿಯೆ ಕೂಡ ಪುನರ್ಲೇಖನ ಅಥವಾ ಮರುಕಥನ ಮಾದರಿಯದ್ದೇ ಆದರೂ; ವಿಮರ್ಶೆಯೇ ಆದರೂ; ಈ ವಿಮರ್ಶೆಯು ಆಧುನಿಕರ ಸಾಹಿತ್ಯ ವಿಮರ್ಶೆ ಅಲ್ಲ. ಹಲವು ರೀತಿಯ ಸಾಂಸ್ಕೃತಿಕ ಸಂಕಥನಗಳು ಸಾಂಸ್ಕೃತಿಕ ಅನುಸಂಧಾನಗಳು ಉಳ್ಳ ಕ್ರಿಯೆ ಇದು. ಸಾಹಿತ್ಯ ಮತ್ತು ಬದುಕುಗಳು ಅಭಿನ್ನವೆಂಬಂತೆ ಬೆರೆತ ಪರಂಪರೆಯನ್ನು ಸಾಹಿತ್ಯದ ಮೂಲಕವೇ ಮುಖಾಮುಖಿಯಾಗುವ ಅನುಸಂಧಾನ.

ಹರಿಹರನ, ರಾಘವಪಂಡಿತನ ಕೃತಿಗಳು ವಚನಕಾರರನ್ನು ಕುರಿತ ವಿಮರ್ಶೆಗಳೇ ಆಗಿವೆ. ಇವೆಲ್ಲ ಸಾಹಿತ್ಯರೂಪಿ ವಿಮರ್ಶೆಗಳು. ಈ ವಿಮರ್ಶೆಗಳಿಗೆ ವಚನಕಾರರನ್ನು ಮೌಲ್ಯಮಾಪನ ಮಾಡುವ ಅಹಂಕಾರವಿಲ್ಲ. ಬದಲಿಗೆ ತಮ್ಮ ಜನಸಮುದಾಯಗಳಿಗೆ ಬೇಕಾಗಬಹುದಾದ ರೀತಿಯಲ್ಲಿ ಅವರನ್ನು ಮರುಕಥಿಸುವ ಪ್ರಜ್ಞೆ ಇದೆ.

ಪಂಪ, ಲಕ್ಷ್ಮೀಶ, ಕುಮಾರವ್ಯಾಸ ಮುಂತಾದವರ ಕೃತಿಗಳು ಭಿನ್ನ ಭಿನ್ನ ರೀತಿಯ ಮರುಕಥನಗಳು. ನಾಗವರ್ಮನ ಕಾವ್ಯಾವಲೋಕನ, ಶ್ರೀವಿಜಯನ ಕವಿರಾಜಮಾರ್ಗ, ಜಾಯೇಂದ್ರನ ಕನ್ನಡ ಕುವಲಯಾನಂದ ಇಂಥ ಕೃತಿಗಳು ಪುನರ್ಲೇಖನಗಳು. ನಮ್ಮ ಸಾಹಿತ್ಯ ಪರಂಪರೆಯಲ್ಲಿ ಪುನರ್ಲೇಖನ ಮರುಕಥನಗಳ ಒಂದು ಪರಂಪರೆ ಇರುವುದನ್ನು ಕಾಣಬಹುದು. ಈ ರೀತಿಯ ರಚನೆಗಳು ಬರಿ ಸಂಸ್ಕೃತಕ್ಕೆ ಮಾತ್ರವೆ ನಿಷ್ಠವಾಗೇನೂ ಇಲ್ಲ. ಚರಿತ್ರೆ, ವರ್ತಮಾನ, ಜಾನಪದಗಳೆಲ್ಲವನ್ನು ಒಳಗೊಂಡಂತೆ ಸಂಸ್ಕೃತ ಪಠ್ಯಗಳನ್ನು ಅರಗಿಸಿಕೊಂಡು ಪುನರ್ಕಟ್ಟಿರುವ ರಚನೆಗಳಿವು. ಶ್ರೀವಿಜಯ, ನಾಗವರ್ಮ, ಪಂಪ, ಕುಮಾರವ್ಯಾಸ,

ಲಕ್ಷ್ಮೀಶಾದಿಗಳ ಪರಂಪರೆ ಮತ್ತು ವ್ಯಕ್ತಿಪ್ರತಿಭೆಯ ಪರಿಕಲ್ಪನೆಯೇ ಬೇರೆ. ನಮ್ಮ ಇಂಗ್ಲಿಷ್ ಶಿಕ್ಷಿತ ಆಧುನಿಕರ ಪರಂಪರೆ ಮತ್ತು ವ್ಯಕ್ತಿ ಪ್ರತಿಭೆಯ ಪರಿಕಲ್ಪನೆಯೇ ಬೇರೆ. ಕಾಪಿರೈಟನ್ನು ನಂಬುವ, ರಚನೆಗಳನ್ನು ವ್ಯಕ್ತಿಗಳ ಖಾಸಗಿ ಆಸ್ತಿಗಳೆಂದು ಭಾವಿಸುವ ಧೋರಣೆ ಆಧುನಿಕರಲ್ಲಿ ಹುಟ್ಟಿರಬಹುದು. ಆದರೆ ಪ್ರಾಚೀನರಲ್ಲಿ ಈ ಧೋರಣೆ ಇಲ್ಲ.

ಸ್ಥಳೀಯ ಭಾಷೆಯ ಮೂಲಕ ಪರಂಪರೆಯ ಪರಿಶೀಲನೆ, ಪರಿಷ್ಕರಣೆ ಮತ್ತು ಪುನರ್ ಕಟ್ಟುವಿಕೆಗಳು ಪಂಪ ಕುಮಾರವ್ಯಾಸಾದಿಗಳ ರಚನೆಗಳಲ್ಲಿ ಸಂಭವಿಸಿವೆ. ಹೀಗಾಗಿ ಸಂಸ್ಕೃತ ಕೃತಿಲೋಕ, ಚರಿತ್ರೆ, ವರ್ತಮಾನ, ಜಾನಪದಗಳ ವಿಮರ್ಶೆಗಳಾಗಿಯೂ ಇವರ ರಚನೆಗಳು ಸಂಭವಿಸಿವೆ. ಆಧುನಿಕ ಸಂದರ್ಭದಲ್ಲಿ ಬಿ.ಪುಟ್ಟಸ್ವಾಮಯ್ಯನವರು ವಚನಕಾಲದ ಕುರಿತು ಐದು ಕಾದಂಬರಿಗಳನ್ನು ಬರೆದಿದ್ದಾರೆ. ಇದು ಇಲ್ಲಿ ಕೊಟ್ಟಿರುವ ಒಂದು ಉದಾಹರಣೆ ಅಷ್ಟೆ. ಇಂಥ ನೂರಾರು ಉದಾಹರಣೆಗಳನ್ನು ಆಧುನಿಕ ಸಂದರ್ಭದಿಂದ ಎತ್ತಿ ಕೊಡಬಹುದು; ಅದಿಲ್ಲಿ ಅಪ್ರಸ್ತುತ. ಮರುಕಥನ ಪ್ರಜ್ಞೆಯ ರೂಪದಲ್ಲಿ ಪ್ರಕಟವಾಗುವ ಸಾಹಿತ್ಯ ರೂಪಿ ವಿಮರ್ಶೆಯು ನಮ್ಮಲ್ಲಿ ನಷ್ಟವಾಗಿ ಹೋಗಲಿಲ್ಲ. ಹಲವು ಪರಂಪರೆಗಳಲ್ಲಿ ಇಂದೂ ಜೀವಿಸುತ್ತ ಬಂದಿದೆ ಎಂದು ಹೇಳುವುದಷ್ಟೆ ಈ ಉದಾಹರಣೆಯ ಉದ್ದೇಶ

ಇಂಥ ಉದಾಹರಣೆಗಳನ್ನು ನೋಡಿದರೆ ಸಾಹಿತ್ಯ ಮತ್ತು ವಿಮರ್ಶೆ ಎಂಬ ಎರಡು ಭೇದಗಳು ಬೆರೆತು ಹೋಗುತ್ತವೆ. ಸಾಹಿತ್ಯ ರೂಪದಲ್ಲಿಯೇ ಸಾಹಿತ್ಯ ವಿಮರ್ಶೆಯೂ ಪ್ರಕಟವಾಗುವ ಬಗೆ ಇದು. ಕಾವ್ಯದಲ್ಲಿ, ಕಾವ್ಯದ ವೇಷದಲ್ಲಿ ಪ್ರಕಟವಾಗುವ ವಿಮರ್ಶೆ ಮತ್ತು ಸಾಹಿತ್ಯವಾಗಿಯೇ ಪ್ರಕಟವಾಗುವ ವಿಮರ್ಶೆ ಎರಡೂ ನಮ್ಮಲ್ಲಿವೆ. ವಿಮರ್ಶೆಯು ಸೃಜನಶೀಲವೋ ಸೃಜನೇತರವೋ ಎಂಬ ಪ್ರಶ್ನೆ ಇಲ್ಲಿ ಹುಟ್ಟುವುದಿಲ್ಲ. ಸಾಹಿತ್ಯಕ್ಕೆ ಸಾಹಿತ್ಯರೂಪದಲ್ಲಿಯೇ ವಿಮರ್ಶೆಯು ಹುಟ್ಟುತ್ತ ಬಂದಿರುವುದೂ ಕೂಡ ನಮ್ಮ ಪರಂಪರೆಯಲ್ಲಿದೆ. ಇದು ನಮ್ಮ ಪ್ರಾಚೀನ ವಿಮರ್ಶೆಯ ಬಹು ಮುಖ್ಯವಾದ ಒಂದು ಚಹರೆಯಾಗಿದೆ.

**2.9. ನಾಮಕರಣ ವಿನ್ಯಾಸ**

ಕಾವ್ಯಗಳಿಗೆ ಹೆಸರಿಡುವ ಬಗ್ಗೆ ನಮ್ಮ ಮೀಮಾಂಸಾ ಗ್ರಂಥಗಳಲ್ಲಿ ಎಲ್ಲೂ ಚರ್ಚೆ ನಡೆದಿಲ್ಲ. ಆದರೆ ಬರೆಯಲ್ಪಟ್ಟಿರುವ ಕಾವ್ಯಗಳಲ್ಲಿ ಕಾವ್ಯದ ನಾಮಕರಣದ ಬಗೆಗೆ ಸಾಕಷ್ಟು ಮಾದರಿಗಳ ಮಂಡನೆಯಿದೆ.

ವಿಕ್ರಮಾರ್ಜುನ ವಿಜಯ, ಸಾಹಸ ಭೀಮ ವಿಜಯ, ಕುಮಾರರಾಮನ ಸಾಂಗತ್ಯ, ಜಗನ್ನಾಥವಿಜಯ, ಗಿರಿಜಾಕಲ್ಯಾಣ, ಮಹದೇವಿಯಕ್ಕನ ರಗಳೆ, ಸಿದ್ಧರಾಮ ಚಾರಿತ್ರ್ಯ, ಹರಿಶ್ಚಂದ್ರ ಕಾವ್ಯ, ನಳಚರಿತ್ರೆ, ಭರತೇಶ ವೈಭವ, ಪ್ರಭುಲಿಂಗಲೀಲೆ, ರಾಮಾಶ್ವಮೇಧ ಹೀಗೆ ನಾಯಕಿ ನಾಯಕರ ಹೆಸರನ್ನು ಕಾವ್ಯಕ್ಕೆ ಇಡುವುದು ನಮ್ಮಲ್ಲಿ ಒಂದು ಸಾಮಾನ್ಯವಾದ ಸಂಪ್ರದಾಯ. ನಾಯಕ ನಾಯಕಿಯರ ಹೆಸರನ್ನು ಇಡುವಾಗ ಕಾವ್ಯದ ಮುಖ್ಯ ಪ್ರತಿಪಾದನೆಯನ್ನೂ, ಕಾವ್ಯದ ಸಾಮಾನ್ಯ ಸ್ವರೂಪವನ್ನೂ, ಕಾವ್ಯದ ಅಜಮಾಸು ವಸ್ತು ಸಾಮಗ್ರಿಯನ್ನೂ ನಿರ್ದೇಶಿಸುವಂತೆ ನಾಮಕರಣ ಮಾಡುವುದನ್ನು ರೂಡಿ ಆಗಿಸಿದಂತೆ ಕಾಣುತ್ತದೆ. ಭೀಮನ ವಿಜಯ, ಗಿರಿಜೆಯ ಕಲ್ಯಾಣ, ಸಿದ್ಧರಾಮನ ಚಾರಿತ್ರ್ಯ, ಭರತೇಶನ ವೈಭವ, ಪ್ರಭುವಿನ ಲಿಂಗಲೀಲೆ ಹೀಗೆ ಹೇಳುವಾಗ ಇಂಥ ರೂಡಿಯು ಎದ್ದು ಕಾಣುತ್ತದೆ.

ಹರಿಶ್ಚಂದ್ರ ಕಾವ್ಯ, ಚೋರಬಸವನ ಕಾವ್ಯ, ಜಯನೃಪ ಕಾವ್ಯ ಹೀಗೆ ಕಾವ್ಯಕ್ಕೆ ಕಾವ್ಯ ಎಂದು ಹೆಸರು ಇಡುವುದು ಇನ್ನೊಂದು ಸಾಮಾನ್ಯವಾದ ರೂಡಿ. ಆದರೆ ನಮ್ಮ ಕನ್ನಡಾಭಿಮಾನಿ ಆಂಡಯ್ಯ ಮಾತ್ರ ಕಬ್ಬಿಗರ ಕಾವ ಎಂದು ಹೆಸರಿಟ್ಟಿದ್ದಾನೆ. (ಮನ್ಮಥ ವಿಜಯ ಎಂಬುದು ಇದರ ಹೆಸರು) ಕಾವ್ಯಕ್ಕೆ ಕಾವ್ಯ ಎಂದು ಹೆಸರಿಡುವ ಪದ್ಧತಿಯನ್ನು ಹೆಚ್ಚು ಜನ ಅನುಸರಿಸಿದಂತೆ ಕಾಣುವುದಿಲ್ಲ. ಕಾವ್ಯ ಪದಕ್ಕೆ ಸಂವಾದಿಯಾಗಿ ಅಜನೃಪ ಚರಿತೆ, ಸೋಮನಾಥ ಚಾರಿತ್ರ್ಯ, ಕುಮಾರರಾಮನ ಕಥೆ, ನೇಮಿಜಿನೇಶ ಸಂಗತಿ, ವರ್ಧಮಾನ ಪುರಾಣ, ಲೀಲಾವತಿ ಪ್ರಬಂಧ, ಹೀಗೆ ಚರಿತೆ, ಚಾರಿತ್ರ್ಯ, ಕಥೆ, ಸಂಗತಿ, ಪುರಾಣ, ಪ್ರಬಂಧ ಇಂಥವುಗಳನ್ನು ಬಳಸಿದ್ದಾರೆ. ಇವುಗಳನ್ನು ನೋಡಿದರೆ ಕಾವ್ಯ ಪದಕ್ಕೆ ಪರ್ಯಾಯವಾಗಿ ಈ ಪದಗಳನ್ನು ಬಳಸಿರುವಂತೆ ಕಾಣುತ್ತದೆ. ಕಾವ್ಯಕ್ಕೆ ಪರ್ಯಾಯವಾಗಿ ಮಹಾಪ್ರಬಂಧ, ಪ್ರಕರಣ, ವಿಳಾಸ, ಲೀಲೆ ಇಂಥ ಪದಗಳನ್ನು ಬಳಸಿದ್ದಾರೆ. ಲಿಂಗಲೀಲಾವಿಲಾಸ ಚಾರಿತ್ರದ(ಅಮಲ ಬಸವ) ಹೆಸರು ಮಾತ್ರ

ವಿಶೇಷವಾಗಿದೆ. ಇಲ್ಲಿ ಲೀಲೆ, ವಿಲಾಸ, ಚಾರಿತ್ರ, ಮೂರೂ ಪದಗಳನ್ನು ಬಳಸಿ ವೀರಶೈವ ಪುರಾಣಗಳ ಮೂರು ಮುಖ್ಯ ಲಕ್ಷಣಗಳನ್ನೆ ಈ ಪದಗುಚ್ಛವು ಸಂಕೇತಿಸಿದೆ.

ಭೃಂಗಿದಂಡಕ, ವೀರಭದ್ರ ದಂಡಕ, ಬಸವರಾಜದೇವರ ರಗಳೆ, ಕಣ್ಣಪ್ಪನ ರಗಳೆ, ಹರಿಶ್ಚಂದ್ರ ಸಾಂಗತ್ಯ, ಕುಮಾರರಾಮ ಸಾಂಗತ್ಯ, ಬಸವ ಸ್ತೋತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಶಂಕರದೇವರ ಕಂದ, ಪ್ರಭುಲಿಂಗಕಂದ, ಪಂಪಾಶತಕ, ರಕ್ಷಾಶತಕ, ವಾದಿಗಜಾಂಕುಶ ತಾರಾವಳಿ, ಪ್ರಭುನಟನ ತಾರಾವಳಿ, ಬಸವೇಶ್ವರ ತಾರಾವಳಿ, ಮಡಿವಾಳಯ್ಯಗಳ ತಾರಾವಳಿ ಹೀಗೆ ಕೃತಿಗಳಿಗೆ ಆಯಾ ಕೃತಿಗಳಲ್ಲಿ ಬಳಸಿರುವ ಛಂದೋರೂಪಗಳನ್ನೇ ಹೆಸರನ್ನಾಗಿ ಇಡುವ ಪರಿಪಾಠವೂ ಇದೆ. ಇಂತಹ ಕಡೆ ಕಥನ ನಾಯಕ–ನಾಯಕಿಯರ ಹೆಸರುಗಳೇ ಪ್ರಧಾನವಾಗಿವೆ.

ಅಜಿತನಾಥಪುರಾಣ, ಆದಿಪುರಾಣ, ಶಾಂತಿಪುರಾಣ, ಮಲ್ಲಿನಾಥಪುರಾಣ, ನೇಮಿನಾಥಪುರಾಣ, ವರ್ಧಮಾನ ಪುರಾಣ, ಪಾರ್ಶ್ವನಾಥಪುರಾಣ, ಅನಂತನಾಥಪುರಾಣ, ಧರ್ಮನಾಥಪುರಾಣ ಹೀಗೆ ಜೈನ ತೀರ್ಥಂಕರರನ್ನು ಕುರಿತ ಬಹುತೇಕ ಕಾವ್ಯಗಳಿಗೆ ಅವರವರ ಹೆಸರುಗಳ ಜೊತೆಗೆ ಪುರಾಣ ಎಂದು ಹೆಸರಿಡಲಾಗಿದೆ. ವೀರಶೈವ ಕವಿಗಳೂ ಕೂಡ ಬಸವಪುರಾಣ, ಚೆನ್ನಬಸವಪುರಾಣ ಹೀಗೆ ಪುರಾಣ ಎಂಬ ಹೆಸರು ಇಟ್ಟಿದ್ದರೂ ಇವರಲ್ಲಿ ಚರಿತೆ ಅಥವಾ ಚಾರಿತ್ರ್ಯಗಳೆಂಬ ಹೆಸರುಗಳೇ ಜಾಸ್ತಿ. ಸಿದ್ಧರಾಮ ಚಾರಿತ್ರ್ಯ, ವೀರೇಶ ಚರಿತೆ, ಅಮಲಬಸವ ಚಾರಿತ್ರ್ಯ, ಹೀಗೆ ವೀರಶೈವರು ಚಾರಿತ್ರ್ಯ, ಚರಿತಗಳೆಂಬ ಹೆಸರನ್ನು ಹೆಚ್ಚಾಗಿ ಇಟ್ಟಿದ್ದಾರೆ. ಜೈನರಲ್ಲೂ ಪ್ರಭಂಜನ ಚರಿತೆ, ಯಶೋಧರ ಚರಿತೆ, ನೇಮಿನಾಥಚರಿತೆ, ಸುಕುಮಾರ ಚರಿತೆ ಎಂಬ ಹೆಸರುಗಳಿವೆ. ನಾಗಚಂದ್ರ ಒಬ್ಬ ಮಾತ್ರ ತನ್ನ ರಾಮಾಯಣ ಕೃತಿಗೆ ರಾಮಚಂದ್ರಚರಿತ ಪುರಾಣ ಎಂದು ಹೆಸರಿಸಿದ್ದಾನೆ. ಚರಿತ್ರೆ ಮತ್ತು ಪುರಾಣ ಎಂಬ ಎರಡೂ ಪದಗಳನ್ನು ಹೆಸರಿಗೆ ಇರಿಸಿರುವುದು ಇದೊಂದೇ ಕಾವ್ಯ.

ಜಿನಸೇನರು ಹೇಳುವ ಪುರಾಣ ಲಕ್ಷಣವನ್ನೆ ಪಂಪನೂ ತನ್ನ ಆದಿಪುರಾಣದಲ್ಲಿ ಹೇಳಿದ್ದಾನೆ.'ಆ ಪುರಾಣಕ್ಕಂ ಲೋಕಾಕಾರ ಕಥನಮುಂ, ದೇಶನಿವೇಶೋಪದೇಶಮುಂ, ನಗರ ಸಂಪತ್ಪರಿವರ್ಣನಮುಂ, ರಾಜ್ಯರಮಣೀಯಕಾ ಆಖ್ಯಾನಮುಂ, ತೀರ್ಥಮಹಿಮಾ ಸಮರ್ಥನಮುಂ, ಚತುರ್ಗತಿ ಸ್ವರೂಪ ನಿರೂಪಣಮುಂ, ತಪೋದಾನವ್ಯಾವರ್ಣನಮುಂ, ತತ್ಫಲಪ್ರಾಪ್ತಿ ಪ್ರಕಟನಮುಂ ಎಂದಿಂತವಯವಗಳೆಂಟಕ್ಕುಂ' (ಆ.ಪು. 1–42 ಗದ್ಯ) ಈ ರೀತಿಯ ಎಂಟೂ ಅವಯವಗಳ ಜೊತೆಗೆ ಆದಿಪುರಾಣದಲ್ಲಿ ಇನ್ನೂ ಹಲವಾರು ಅವಯವಗಳಿವೆ. ಜೈನಪುರಾಣದ ಪರಿಕಲ್ಪನೆಗೂ ವೀರಶೈವ ಪುರಾಣದ ಪರಿಕಲ್ಪನೆಗೂ, ವೈದಿಕ ಪುರಾಣದ ಪರಿಕಲ್ಪನೆಗು ಸಾಕಷ್ಟು ವ್ಯತ್ಯಾಸಗಳಿವೆ. ಆದರೆ ನಮ್ಮವರು ಕಾವ್ಯಗಳಿಗೆ ಪುರಾಣ, ಚಾರಿತ್ರಗಳೆಂದು ಹೆಸರಿಸುವಾಗ ಲೌಕಿಕವಾದ–ಚಾರಿತ್ರಿಕವಾದ–ವರ್ತಮಾನದ ಜನಕಥನಗಳನ್ನು ಚಾರಿತ್ರಗಳೆಂದೂ ಧಾರ್ಮಿಕವಾದ–ಚರಿತ್ರೆಯು ಪುರಾಣವಾಗಿ ಮಾರ್ಪಾಟಾದ–ಹಳೆಯ ಕಾಲದ ಕಥನಗಳನ್ನು ಪುರಾಣಗಳೆಂದೂ ಹೆಸರಿಸಿದ್ದಾರೆ. ಪುರಾಣವೆಂದರೆ ಪುರಾತನವಾದುದೂ ಹೌದು. ದೈವಿಕ–ಅಲೌಕಿಕವಾದುದೂ ಹೌದು.

ದೈವ–ಧರ್ಮಸಂಬಂಧಿ ಕಥನಗಳನ್ನು ಪುರಾಣ ಎಂಬ ಹೆಸರಿನಿಂದಲೂ ಲೋಕಸಂಬಂಧಿ ಕಥನಗಳನ್ನು ಚರಿತೆ, ಚಾರಿತ್ರ್ಯ ಎಂಬ ಹೆಸರುಗಳಿಂದಲೂ ನಮ್ಮವರು ಕರೆದಿದ್ದಾರೆ. ಜನ್ನನ ಯಶೋಧರ ಚರಿತೆ ಧಾರ್ಮಿಕ ಕಾವ್ಯವಾದರೂ ಅದು ದೊರೆ ಯಶೋಧರ ಮತ್ತು ರಾಣಿ ಅಮೃತಮತಿಯರ ಕಥನ. ಲೌಕಿಕ ಅಲೌಕಿಕಗಳು ಎರಡೂ ಇಲ್ಲಿ ಉಂಟಾದರೂ ಲೋಕನಡಾವಳಿಯ ಜಿಜ್ಞಾಸೆಗೆ ಇಲ್ಲಿ ಪ್ರಾಧಾನ್ಯ ಹೆಚ್ಚು. ಹಾಗಾಗಿ ಇದು ಚರಿತೆಯ ಕಥನ. ಅದೇ ಅನಂತನಾಥ ಪುರಾಣ ತೀರ್ಥಂಕರ ಕಥನ. ಹಾಗಾಗಿ ಅದು ಅನಂತನಾಥ ಚಾರಿತ್ರ ಅಲ್ಲ. ಅನಂತನಾಥ ಪುರಾಣ. ಇದೇ ಮಾದರಿ ನೇಮಿಚಂದ್ರನ ಲೀಲಾವತಿ ಮತ್ತು ನೇಮಿನಾಥ ಪುರಾಣದಲ್ಲಿಯೂ ಕಾಣುತ್ತದೆ. ಪುರಾಣ ಕಥನದಲ್ಲಿ ಚರಿತ್ರೆ–ಚಾರಿತ್ರ್ಯವೂ, ಚಾರಿತ್ರ್ಯ–ಚರಿತೆಗಳಲ್ಲಿ ಪುರಾಣಾಂಶವೂ ಇಲ್ಲವೆಂದಲ್ಲ. ನಮ್ಮ ಬಹುಪಾಲು ಕಾವ್ಯಗಳಲ್ಲಿ ಚರಿತೆ–ಪುರಾಣ–ಚಾರಿತ್ರ್ಯ–ವರ್ತಮಾನಗಳೆಲ್ಲ ಬೆರೆತುಹೋಗಿವೆ. ಚರಿತ್ರೆಯ ಪುರಾಣೀಕರಣವು ವೀರಶೈವ ಪುರಾಣಗಳ ಒಂದು ಮುಖ್ಯ ಲಕ್ಷಣವಾದರೆ ಪುರಾಣ–ಚರಿತ್ರೆ–ವರ್ತಮಾನಗಳ ಸಮನ್ವಯವು ಜೈನಪುರಾಣಗಳ ಒಂದು ಮುಖ್ಯ ಲಕ್ಷಣವಾಗಿದೆ.

ಸಾಂಸ್ಥಿಕ ಧರ್ಮದ ಪವಿತ್ರ ಮತ್ತು ಪ್ರಮಾಣ ಗ್ರಂಥವೊಂದಕ್ಕೆ ಪುರಾಣವೆಂದೂ, ಅಂಥದ್ದಲ್ಲದ ಲೋಕಸುಧಾರಕ ಅಥವಾ ಲೋಕನಾಯಕ ಕಥನಕ್ಕೆ ಚಾರಿತ್ರ್ಯ, ಕಥೆ, ರಗಳೆ, ಸಂಗತಿ, ವಿಜಯ ಇತ್ಯಾದಿ ಹೆಸರನ್ನೂ ಕೊಟ್ಟಿರುವಂತೆ ಕಾಣುತ್ತದೆ. ಕುಮಾರವ್ಯಾಸನ ಭಾರತ ಪುರಾಣ ಕಥನವಾದರೂ ಆತ ತನ್ನ ಗ್ರಂಥಕ್ಕೆ ಪುರಾಣವೆಂದು ಹೆಸರಿಸದೆ ಕಥಾಮಂಜರಿ ಎಂದೇ ಹೆಸರಿಸಿದ್ದಾನೆ. ಇದರರ್ಥ ನಮ್ಮ ಕಾವ್ಯಗಳ ನಾಮಕರಣ ವಿನ್ಯಾಸದಲ್ಲಿ ಕಡ್ಡಾಯವಾದ ನಿಯಮಗಳಿಲ್ಲ, ಇಲ್ಲಿನ ರೂಢಿಗಳೇನಿದ್ದರೂ ಕಡ್ಡಾಯ ನಿಯಮಗಳಲ್ಲ. ಅನುಕರಣೀಯ ಮಾದರಿಗಳು ಅಷ್ಟೆ.

ಬಸವರಾಜದೇವರ ರಗಳೆ, ಅಮಲಬಸವ ಚಾರಿತ್ರ್ಯ, ಬಸವಪುರಾಣ ಹೀಗೆ ಒಬ್ಬನೆ ವ್ಯಕ್ತಿಯ ಕಥನವು ಬೇರೆ ಬೇರೆ ಹೆಸರುಗಳಿಂದ ಬೇರೆ ಬೇರೆ ಕಾಲಗಳಲ್ಲಿ ಬರೆಯಲ್ಪಟ್ಟಿದೆ. ಚರಿತ್ರೆಯು ಪುರಾಣವಾಗಿರುವ ಹಾದಿ ಇಲ್ಲಿ ಎದ್ದು ಕಾಣುತ್ತದೆ. ನಮ್ಮಲ್ಲಿ ಲೌಕಿಕವಾದ ಬೇರುಗಳು ಹೆಚ್ಚಿಗೆ ಇದ್ದು ವ್ಯಕ್ತಿ ನಡಾವಳಿಗಳ, ಗುಣ-ನಡತೆಗಳ ಜಿಜ್ಞಾಸೆ ಹೆಚ್ಚು ಇರುವ ಕಥನಗಳಿಗೆ ಚರಿತ್ರೆ, ಚರಿತೆ, ಚರಿತ, ಚಾರಿತ್ರ್ಯ ಎಂದೂ, ಆಗಮಿಕವಾದ (ಅಲೌಕಿಕ-ಆಧ್ಯಾತ್ಮಿಕ) ಬೇರುಗಳು ಜಾಸ್ತಿ ಇದ್ದು ಸಮುದಾಯ ನಡಾವಳಿಯ ಜಿಜ್ಞಾಸೆ ಹೆಚ್ಚಿಗೆ ಇರುವ ಕಥನಗಳಿಗೆ ಪುರಾಣ ಎಂದೂ ಹೆಸರಿಸುವ ಪರಿಪಾಠ ಬೆಳೆದುಬಂದಿರಬಹುದು. ಪಂಪನು ಲೌಕಿಕ ಮತ್ತು ಆಗಮಿಕ ಎಂದು ಹೇಳುವ ಎರಡು ಭೇದಗಳೇ ಹೀಗೆ ಪುರಾಣ ಮತ್ತು ಚರಿತೆ ಎಂದು ನಾಮಕರಣಗೊಂಡಿರಬಹುದು. ಚಾರಿತ್ರ್ಯ ಮತ್ತು ಪುರಾಣ ಎಂಬ ಹೆಸರುಗಳಲ್ಲಿ ಧಾರ್ಮಿಕ ಮತ್ತು ಚಾರಿತ್ರಿಕ ಎಂಬ ಕಥನ ಪ್ರಭೇದಗಳ ಸೂಚನೆ ಎದ್ದು ಕಾಣುತ್ತದೆ.

ಕರ್ನಾಟಕ ಕಾದಂಬರಿ, ವಡ್ಡಾರಾಧಣಾ ಕರ್ಣಾಟ ಟೀಕಾ, ಕರ್ನಾಟಕ ಪಂಚತಂತ್ರ, ಕರ್ನಾಟಕ ಭಾಷಾಭೂಷಣ, ಕರ್ನಾಟಕ ಭಾರತ ಕಥಾಮಂಜರಿ, ಕರ್ನಾಟಕ ಶಬ್ದಮಂಜರಿ, ಕರ್ನಾಟಕ ಸಂಜೀವನ, ಕರ್ನಾಟಕ ಕುವಲಯಾನಂದ, ಕರ್ನಾಟಕ ಚಂದ್ರಾಲೋಕ ಹೀಗೆ ಅನೇಕ ಕಾವ್ಯಗಳ ಹೆಸರಿನಲ್ಲಿ ಕರ್ನಾಟಕ ಎಂಬುದು ಕಡ್ಡಾಯವಾಗಿ ಇದೆ. ಇಲ್ಲೆಲ್ಲ ಕರ್ನಾಟಕ ಶಬ್ದವು ಕನ್ನಡ ಎಂಬ ಪದಕ್ಕೆ ಪರ್ಯಾಯವಾಗಿ ಬಳಕೆಯಾಗಿದೆ. ಕನ್ನಡೇತರ ಭಾಷೆಯ(ಸಂಸ್ಕೃತದ) ಕೃತಿ ಪ್ರೇರಣೆಯಿಂದ ಹುಟ್ಟಿದ ಕನ್ನಡ ಕೃತಿಗಳಿಗೆ ಈ ರೀತಿ ಹೆಸರಿಡಲಾಗಿದೆ. ಕನ್ನಡ ಅವತರಣಿಕೆಗಳು, ಕನ್ನಡ ಓದುಗಳು, ಕನ್ನಡ ಸೃಷ್ಟಿಗಳು, ಕನ್ನಡದ ಪುನರ್ಕಥನಗಳು, ಕನ್ನಡ ಸಂದರ್ಭ-ಸಂಸ್ಕೃತಿಯ ಫಲಗಳು ಎಂಬ ಹಲವು ಗ್ರಹಿಕೆಗಳಲ್ಲಿ ಈ ರೀತಿಯ ನಾಮಕರಣ ಮಾಡುವುದು ನಮ್ಮಲ್ಲೊಂದು ಪ್ರವೃತ್ತಿಯಾಗಿದೆ. ಅನ್ಯಭಾಷಾ ಸ್ವೀಕೃತ, ರೂಪಾಂತರಿತ, ಪುನರ್ಕಥಿತ ಕೃತಿಗಳೆಲ್ಲಕ್ಕು ಈ ರೀತಿ ಹೆಸರಿಡುವ ಸಂಪ್ರದಾಯವನ್ನು ಕಡ್ಡಾಯವಾಗಿಯೇನೂ ಪಾಲಿಸಿಲ್ಲ. ಪೂರ್ವಪುರಾಣವನ್ನು ಆಧರಿಸಿ ಆದಿಪುರಾಣ ಬರೆದ ಪಂಪ ತನ್ನ ಕಾವ್ಯಕ್ಕೆ ಕರ್ನಾಟಕ ಪೂರ್ವಪುರಾಣ ಎಂದೇನೂ ಹೆಸರು ಇಟ್ಟಿಲ್ಲ. ಇಂಥ ಉದಾಹರಣೆಗಳು ಹಲವಾರಿವೆ. ಈಗಾಗಲೇ ಹೇಳಿರುವಂತೆ ಆಚರಣೆಯಲ್ಲಿನ ಪ್ರವೃತ್ತಿಗಳು, ರೂಢಿ, ಸಂಪ್ರದಾಯಗಳು ಕಟ್ಟುನಿಟ್ಟಾದ ನಿಯಮಗಳಾಗಿಲ್ಲ ಎಂಬುದು ಇಲ್ಲಿ ಗಮನಾರ್ಹ. ಅಲ್ಲದೆ ಪರಂಪರೆ ಎಂದರೆ ಅದಕ್ಕೆ ಒಂದು ಲೀನಿಯರ್ರಾದ ಸಂಬಂಧ ಯಾವತ್ತೂ ಇತ್ತು ಎಂದು ಕೂಡ ನಾವು ಭಾವಿಸಬೇಕಿಲ್ಲ.

ಪ್ರಾಚೀನ ಸಂದರ್ಭದಲ್ಲಿ ಮಹಾಕಾವ್ಯಗಳಿಗೆ ಮಾತ್ರ ಹೆಸರಿಡುವ ಪರಿಪಾಠ ರೂಢಿಯಲ್ಲಿತ್ತು. ಮಹಾಕಾವ್ಯ ಕೃತಿಗಳಿಗೆ ಹೆಸರಿಡುವಂತೆ ವಚನಗಳಿಗೆ, ಸರ್ವಜ್ಞನ ತ್ರಿಪದಿಗಳಿಗೆ, ಕೀರ್ತನೆಗಳಿಗೆ, ತತ್ವಪದಗಳಿಗೆ ಅಷ್ಟೇ ಯಾಕೆ ಅನೇಕ ಜಾನಪದ ಗೀತೆಗಳಿಗೆ ಹೆಸರಿಡುವ ಪರಿಪಾಠ ಇರಲಿಲ್ಲ.

ಎಲ್ಲ ಪುರಾಣಕ್ಕೆ ಹೆಸರುಂಟು ನಮ್ಮ ಪುರಾಣಕ್ಕೆ ಹೆಸರಿಲ್ಲ ನೋಡಯ್ಯಾ
ಲಿಂಗದ ಮಹತ್ವ ಹೇಳಿದಲ್ಲಿ ಲಿಂಗಪುರಾಣವೆನಿಸಿತ್ತು
ಷಣ್ಮುಖನ ಮಹಾತ್ಮ್ಯವ ಹೇಳಿದಲ್ಲಿ ಸ್ಕಂದಪುರಾಣವೆನಿಸಿತ್ತು
....................
ನಮ್ಮ ಪುರಾಣ ಹೆಸರಿಡಬೇಕೆಂದಡೆ
ನಿಶಬ್ದ ನಿರವಲಯ ಪುರಾಣ ತಾನೆಯಾಯಿತ್ತು ನೋಡಾ.. —ಸಿದ್ದರಾಮ

ವಚನಗಳ ರಚನಾಸ್ವರೂಪವೇ ನಾಮರಹಿತವಾದದ್ದು. ಅವುಗಳಲ್ಲಿ ಅಂಕಿತನಾಮಗಳಿವೆ. ಆ ಅಂಕಿತಗಳೇ ಅವುಗಳ ರಚನಕಾರರನ್ನು ಸೂಚಿಸುತ್ತವೆ. ಯಾರದೋ ಅಂಕಿತದಲ್ಲಿ ಇನ್ನಾರೋ ಬರೆದು ಸೇರಿಸಿದ ಪ್ರಕ್ಷಿಪ್ತಗಳೂ ವಚನಗಳಲ್ಲಿ ಸಾಕಷ್ಟಿವೆ. ಅಂತಹ ಪ್ರಕ್ಷಿಪ್ತಗಳಿಗೆ ಅವಕಾಶವಾಗುವಂತೆಯೆ ಅಂಕಿತ ರೂಢಿ ಇದೆ. (ಮಾತೆ ಮಹದೇವಿಯಂಥವರಿಗೆ

ಬೇರೆಯವರ ವಚನಗಳನ್ನೆ ಎತ್ತಿಹಾಕಿ ತನ್ನ ಅಂಕಿತ ಇಟ್ಟುಕೊಳ್ಳುವ ಚಾಳಿ ಬೆಳೆದಿದೆ!)

ಆಧುನಿಕ ಸಂದರ್ಭದಲ್ಲಿ ಬಿಡಿ ಕವಿತೆಗಳಿಗೆ ಹೆಸರಿಡುವ ಪದ್ಧತಿ ಬಂದಿದೆ. ಇತ್ತೀಚೆಗೆ ಹನಿಕವಿತೆಗಳಿಗು ಹೆಸರಿಡುವ ಪರಿಪಾಠ ಹೆಚ್ಚಾಗುತ್ತಿದೆ. ಹೆಸರಿಡುವುದಕ್ಕೆ ಬೇಕಾದ ಮೀಮಾಂಸೆಯೊಂದು ನಮ್ಮಲ್ಲಿ ಸೃಷ್ಟಿಯಾಗಿಲ್ಲ. ಇದರ ಅಗತ್ಯವೂ ಇಲ್ಲವೇನೊ.(?) ರೂಡಿಯೇ ನಮ್ಮನ್ನು ಮಾರ್ಗದರ್ಶಿಸುತ್ತ ಬಂದಿದೆ. ರೂಡಿಯೇ ನಮಗೆ ಹೊಸ ಮಾರ್ಗಗಳಿಗೆ ಕಾರಣವೂ ಆಗುತ್ತ ಬಂದಿದೆ. ಹೀಗಾಗಿ ರೂಡಿಯನ್ನು ನೋಡಿ ನಡೆಯುವುದೇ/ ಮೀರುವುದೇ ನಮ್ಮ ಆಚರಣೆಯ ಒಂದು ಚಹರೆ ಆಗಿದೆ ಎಂದು ಹೇಳಬಹುದು.

ಕನ್ನಡ ಆದ್ಯ ಲಕ್ಷಣಗ್ರಂಥದ ಹೆಸರು ಕವಿರಾಜಮಾರ್ಗ. ಅದುವರೆಗೆ ಯಾವ ಲಕ್ಷಣಗ್ರಂಥಗಳೂ ಇಲ್ಲದಿದ್ದುದರಿಂದ ಶ್ರೀವಿಜಯನಿಗೆ ಕವಿಗಳಿಗೆ ನಡೆಯಬೇಕಾದ ಒಂದು ರಾಜಮಾರ್ಗವನ್ನು ತೋರುವ ಅಗತ್ಯವಿತ್ತು. ಆದ್ದರಿಂದ ಆತ ತನ್ನ ಕಾವ್ಯಕ್ಕೆ ಕವಿರಾಜಮಾರ್ಗ ಎಂಬ ಹೆಸರನ್ನು ಇಟ್ಟ. ಕವಿಗಳು ಸಾಕಷ್ಟು ಕಾವ್ಯಗಳನ್ನು ಬರೆದಿದ್ದುದರಿಂದ ಅವುಗಳನ್ನು ಲಾಕ್ಷಣೀಕರಿಸುವ ಕೆಲಸ ಮಾಡುವುದಕ್ಕೆಂದೇ ನಾಗವರ್ಮ ತನ್ನ ಗ್ರಂಥಕ್ಕೆ ಕಾವ್ಯಾವಲೋಕನ ಎಂದು ಹೆಸರಿಟ್ಟ. ಆದರೆ ಮಾಧವಾಲಂಕಾರ, ಉದಯಾದಿತ್ಯಾಲಂಕಾರಗಳನ್ನು ಮಾಧವಕವಿ ಮತ್ತು ಉದಯಾದಿತ್ಯರ ಹೆಸರಿನಿಂದಲೇ ಗುರ್ತಿಸುತ್ತ ಬರಲಾಗಿದೆ. ಇನ್ನು ಈಶ್ವರ ಕವಿಯ ಛಂದೋಗ್ರಂಥ ಕವಿಜಿಹ್ವಾಬಂಧನವು ನಿಜವಾಗಿಯೂ ಕವಿಜಿಹ್ವಾಬಂಧನವೇ ಆಗಿದೆ. ತನ್ನ ವಸ್ತು ಮತ್ತು ಹೆಸರುಗಳು ಅನ್ವರ್ಥವೆಂಬಂತೆ ಇರುವ ಕಾವ್ಯ ಇದು. ಕವಿಗಳ ನಾಲಿಗೆಯನ್ನು ಹೇಗೆ ಹೇಗೆ ಬಂಧಿಸಬಹುದೆಂಬ ಎಲ್ಲ ಛಂದೋ ನಿಯಮಗಳನ್ನು ಇಲ್ಲಿ ಈಶ್ವರಕವಿ ವಿವರಿಸಿದ್ದಾನೆ.

ಶಾಲ್ಯದ ಕೃಷ್ಣರಾಜ ತನ್ನ ಅಲಂಕಾರಗ್ರಂಥಕ್ಕೆ ಶಾರದಾ ವಿಲಾಸವೆಂದು ಹೆಸರಿಟ್ಟಿದ್ದಾನೆ. ನಮ್ಮ ಶಾಸ್ತ್ರಕಾವ್ಯಗಳ ವಸ್ತುವಿಗೂ ಹೆಸರಿಗೂ ಸಂಬಂಧ ಕಾಣದ ವಿಲಕ್ಷಣ ನಾಮಕರಣವಿದು. ವೀರಭದ್ರ ಕವಿಯಾದರೋ ತನ್ನ ಗುರು ನಂದಿನಾಥನ ಮೇಲಿನ ಪ್ರೀತಿ ಮತ್ತು ಭಕ್ತಿಯ ಕಾರಣಕ್ಕೆ ತನ್ನ ಛಂದೋಗ್ರಂಥಕ್ಕೆ ನಂದಿಛಂದಸ್ಸೆಂದೇ ಹೆಸರಿಟ್ಟಿದ್ದಾನೆ. ಈ ಹೆಸರಿನಿಂದಲೆ ನಮ್ಮ ಹಲವು ವಿದ್ವಾಂಸರು ಇದು ನಂದಿ ಎಂಬ ಹೆಸರಿನವರು ಬರೆದ ಗ್ರಂಥವೆಂದು ಬಹುಕಾಲ ಭಾವಿಸಿದ್ದರು. ವೀರಭದ್ರನನ್ನು ಮೀರಿಸುವಂತೆ ತಿರುಮಲಾರ್ಯನು ತನ್ನ ಅಲಂಕಾರ ಗ್ರಂಥಕ್ಕೆ ಅಪ್ರತಿಮ ವೀರಚರಿತೆ ಎಂದು ಹೇಸರಿಟ್ಟಿದ್ದಾನೆ. ಅಳಿಯಲಿಂಗರಾಜ ತನ್ನ ಅಲಂಕಾರ ಗ್ರಂಥಕ್ಕೆ ನರಪತಿ ವಿಜಯ ಎಂದು ಹೆಸರಿಟ್ಟಿದ್ದಾನೆ. ರಾಜಭಕ್ತಿಯ ದ್ಯೋತಕ ಇದು.

ರನ್ನನ ಸಾಹಸ ಭೀಮ ವಿಜಯಕ್ಕೆ ಗದಾಯುದ್ಧ ಎಂಬ ಹೆಸರೂ ಇದೆ. ಕಬ್ಬಿಗರಕಾವಕ್ಕೆ ಮನ್ಮಥವಿಜಯ ಎಂಬ ಹೆಸರೂ ಇದೆ. ಹೀಗೆ ನಮ್ಮಲ್ಲಿ ಬಹುತೇಕ ಕಾವ್ಯಗಳಿಗೆ ಎರಡೆರಡು ಹೆಸರುಗಳಿವೆ. ಕೆಲವು ಕಾವ್ಯಗಳಿಗೆ ಕವಿಗಳೇ ಎರಡೆರಡು ಹೆಸರು ಇಟ್ಟಿದ್ದರೆ ಕೆಲವು ಕೃತಿಗಳನ್ನು ಬಳಕೆಯ ಅನುಕೂಲಕ್ಕೆ ತಮಗೆ ಬೇಕಾದಂತೆ ಓದುಗರು ನಾಮಕರಣ ಮಾಡಿಕೊಂಡಿದ್ದಾರೆ. ಉದಾಹರಣೆಗೆ ವಿಕ್ರಮಾರ್ಜುನ ವಿಜಯವನ್ನು ಪಂಪಭಾರತವೆಂದೂ, ಕರ್ನಾಟಕ ಭಾರತ ಕಥಾಮಂಜರಿಯನ್ನು ಕುಮಾರವ್ಯಾಸ ಭಾರತ ಅಥವಾ ಗದುಗಿನಭಾರತ ಎಂದೂ, ಉದಯಾದಿತ್ಯನ ಕಾವ್ಯಾಲಂಕಾರವನ್ನು ಉದಯಾದಿತ್ಯಾಲಂಕಾರವೆಂದೂ ಕರೆಯುವುದು ರೂಢಿಯಲ್ಲಿದೆ. ಕವಿಗಳು ತಮ್ಮ ಕಾವ್ಯಕ್ಕೆ ಏನೇ ಹೆಸರಿಡಲಿ ಓದುಗರು ಅವನ್ನು ಗುರ್ತಿಸುವುದು ತಮ್ಮ ಅನುಕೂಲಕ್ಕೆ ತಕ್ಕಂತೆ.

ತನ್ನ ನಿಘಂಟಿಗೆ ಶೃಂಗಾರರಾಜನು ಕರ್ನಾಟಕ ಸಂಜೀವನ ಎಂಬ ಹೆಸರಿಟ್ಟಿದ್ದರೆ ಸೂರ್ಯಕವಿಯು ಕವಿಕಂಠಹಾರ ಎಂಬ ಹೆಸರಿಟ್ಟಿದ್ದಾನೆ. ಕವಿಕಾಮನು ತನ್ನ ರಸಮೀಮಾಂಸೆಗೆ ಶೃಂಗಾರ ರತ್ನಾಕರ ಎಂದೂ ಸೋಮೇಶ್ವರ ಕವಿಯು ತನ್ನ ಛಂಧೋಗ್ರಂಥಕ್ಕೆ ಮಾನಸೋಲ್ಲಾಸ ಎಂದೂ ಹೆಸರಿಟ್ಟಿದ್ದಾರೆ. ಇವರು ಗ್ರಂಥಗಳಿಗೆ ಹೆಸರಿಡುವಲ್ಲಿ ಮಾತ್ರ ಕವಿತ್ವವನ್ನು ತೋರಿದ್ದಾರೆ. ಆದರೆ ಇವರ ಗ್ರಂಥಗಳು ಇವರು ಹೇಳುವ ಹೆಸರಿಗೆ ಅನ್ವರ್ಥವೆಂಬಂತೆ ಇಲ್ಲ. ಕವಿಕಾಮನನ್ನು ಓದಿದರೆ ಯಾವ ಶೃಂಗಾರವೂ ಸಿಕ್ಕುವುದಿಲ್ಲ. ಸೋಮೇಶ್ವರನನ್ನು ಓದಿದರೆ ಯಾವ ಮನೋಲ್ಲಾಸವೂ ಲಭಿಸುವುದಿಲ್ಲ. ಕಪ್ಪಗಿರುವವನಿಗೆ ಕೆಂಪಣ್ಣ ಎಂದು ಹೆಸರಿಡುವಂತೆ ಹೆಸರಿಡುವಲ್ಲಿ ಮಾತ್ರ ನಮ್ಮ ಕೆಲವರು ನಿಪುಣರೇ ಸರಿ.

ಪಂಪ ತನ್ನ ವಿಕ್ರಮಾರ್ಜುನ ವಿಜಯವನ್ನು ಸಮಸ್ತಭಾರತ ಎಂಬ ಹೆಸರಿನಿಂದಲೂ ಕರೆದುಕೊಂಡಿದ್ದಾನೆ. ನಾವಿಂದು ಅದನ್ನು ಪಂಪಭಾರತ ಎಂದೇ ಕರೆಯುತ್ತಿದ್ದೇವೆ. ಹಾಗೆಯೇ ನಾಗಚಂದ್ರನ ರಾಮಚಂದ್ರಚರಿತ ಪುರಾಣವನ್ನು ನಾವು ಪಂಪರಾಮಾಯಣ ಎಂದೇ ಕರೆಯುತ್ತೇವೆ. ಕುಮಾರವ್ಯಾಸ ತನ್ನ ಭಾರತವನ್ನು ಕರ್ನಾಟಕ ಭಾರತ ಕಥಾಮಂಜರಿ ಎಂದರೆ ನಾವು ಅದನ್ನು ಗದುಗಿನ ಭಾರತ ಎಂದು

ಕರೆಯುತ್ತೇವೆ. ರನ್ನನ ಅಜಿತತೀರ್ಥಕರ ಪುರಾಣತಿಲಕವನ್ನು ಹ್ರಸ್ವಗೊಳಿಸಿ ಅಜಿತಪುರಾಣ ಎಂದೇ ಕರೆಯುತ್ತೇವೆ. ಹೀಗೆ ಕೃತಿಗಳ ಅಂಕಿತನಾಮಗಳು ಒಂದು ರೀತಿಯಾದರೆ ಅವುಗಳ ರೂಢನಾಮಗಳು ಬೇರೆಯೇ ಆಗಿವೆ. ಕವಿಗಳು ತಮ್ಮ ಕೃತಿಗಳಿಗೆ ಏನೇ ಹೆಸರಿಡಲಿ ಅದನ್ನು ಓದುಗರು ತಮ್ಮ ಅನುಕೂಲಕ್ಕೆ ತಕ್ಕಂತೆ ಕರೆದುಕೊಳ್ಳುವುದು ನಮ್ಮಲ್ಲಿ ರೂಡಿಯಾಗಿದೆ. ನಮ್ಮ ಕವಿಗಳ ನಾಮಕರಣ ವಿನ್ಯಾಸವು ಬಹುರೂಪಿಯಾದುದು. ಕೆಲವು ತಮ್ಮ ವಸ್ತು-ಅಭಿವ್ಯಕ್ತಿ ಕ್ರಮಗಳಿಗೆ ಅನ್ವರ್ಥವೆಂಬಂತೆ ಇದ್ದರೆ ಕೆಲವು ಒಡಲಿಗೂ ತಲೆಗೂ ಸಂಬಂಧವಿಲ್ಲದಂತೆ ಇವೆ. ಬಹುಪಾಲು ಕಥನಗಳು ನಾಯಕ-ನಾಯಕಿ ಹೆಸರಿನಲ್ಲಿಯೂ, ಪುರಾಣ ಚರಿತೆಗಳು ಎಂಬಂತೆಯೂ ನಾಮಾಂಕಿತಗೊಂಡಿವೆ. ಕೆಲವರಿಗಂತೂ ಕೃತಿಗಳಿಗೆ ಹೆಸರಿಡುವುದಕ್ಕೇ ಬರುವುದಿಲ್ಲ. ಕೆಲವರಂತೂ ಸುಂದರವಾದ ಹೆಸರುಗಳನ್ನು ಇಟ್ಟಿದ್ದಾರೆ. ಆದರೆ ನಾಮಕರಣ ವಿನ್ಯಾಸವನ್ನು ನಮ್ಮ ಕವಿಗಳಾಗಲೀ ಶಾಸ್ತ್ರಕಾರರಾಗಲೀ ಚರ್ಚಿಸದಿರುವುದು ಸೋಜಿಗವಾಗಿದೆ.

## 2.10. ವರ್ಗೀಕರಣ ವಿನ್ಯಾಸ

ಕಾವ್ಯ, ಕಬ್ಬ, ಮಹಾಪ್ರಬಂಧ, ಪುರಾಣ, ಚರಿತೆ, ಇವುಗಳು ಸಾಮಾನ್ಯವಾಗಿ ಕಾವ್ಯಗಳಿಗೆ ಇಡುವ ಹೆಸರುಗಳು. ನಮ್ಮಲ್ಲಿ ನಾಮಕರಣ ವಿನ್ಯಾಸಕ್ಕೂ, ವರ್ಗೀಕರಣ ವಿನ್ಯಾಸಕ್ಕೂ ಒಂದು ಅನ್ಯೋನ್ಯ ಸಂಬಂಧ ಇದೆ. ಬೆದಂಡೆ, ಚತ್ತಾಣ, ಮಾರ್ಗ ದೇಸಿ, ವಸ್ತುಕ ವರ್ಣಕ, ಲೌಕಿಕ ಆಗಮಿಕ, ಚರಿತ್ರೆ ಪುರಾಣ ಇವುಗಳೆಲ್ಲ ನಾಮಕರಣ ವಿನ್ಯಾಸಗಳೂ ಹೌದು. ಹಾಗೆಯೆ ವರ್ಗೀಕರಣ ವಿನ್ಯಾಸಗಳೂ ಹೌದು. ಬರವಣಿಗೆಯ ಬಗೆಗಳನ್ನು ಸಮನ್ವಯಗೊಳಿಸಿ ಅನುಸರಿಸುವ ಪರಿಪಾಠ ಇರುವಂತೆಯೇ ವರ್ಗೀಕರಿಸಿ ಪರಿಭಾವಿಸುವ ಪರಿಪಾಠವೂ ನಮ್ಮಲ್ಲಿದೆ. ವಸ್ತುಕ ವರ್ಣಕ, ಬೆದಂಡೆ ಚತ್ತಾಣ, ಲೌಕಿಕ ಆಗಮಿಕ ಇಂತಹ ವರ್ಗೀಕರಣಗಳಲ್ಲಿ ತರತಮ ಶ್ರೇಣೀಕರಣ ಇಲ್ಲದಿದ್ದರೂ ಇವೆಲ್ಲವುಗಳಲ್ಲಿ ಸ್ತರವಿನ್ಯಾಸವಂತೂ ಇದೆ. ವಸ್ತುಕದ ಎದುರು ವರ್ಣಕ ಅಂತಹ ದೊಡ್ಡದಲ್ಲ. ಓದುಗಬ್ಬಕ್ಕಿಂತ ಬಾಜನೆಗಬ್ಬ ಅಂತಹ ದೊಡ್ಡದಲ್ಲ. ವಸ್ತುಕ ವರ್ಣಕ ಶೈಲಿಗಳನ್ನು ಅನುಸರಿಸಿ-ಅಷ್ಟಾದಶವರ್ಣನೆಗಳನ್ನು ಅನುಸರಿಸಿ ಬರೆದ ಮಹಾಕಾವ್ಯದ ಎದುರು ಬೆದಂಡೆ, ಚತ್ತಾಣ ಕಾವ್ಯಗಳು ಅಂತಹ ದೊಡ್ಡವೇನೂ ಅಲ್ಲ ಎಂಬ ಶ್ರೇಣೀಕೃತ ತಿಳುವಳಿಕೆಯು ನಮ್ಮ ಕವಿಗಳ ಕಾವ್ಯಕಲ್ಪನೆಯಲ್ಲಿ ಇದೆ. ಸಹೃದಯ ವರ್ಗಗಳಲ್ಲೂ ಈ ಶ್ರೇಣೀಕರಣ ಮುಂದುವರಿದಿರುವುದನ್ನು ಶಾಂತಿನಾಥನ ಸುಕುಮಾರ ಚರಿತೆಯ ಈ ಪದ್ಯ ತಿಳಿಸುತ್ತದೆ.

> ಬೀಣೆಯ ಕೊಳಲ ಬೆದಂಡೆಯ/ ಗಾಣರ ಬಳಿವಿಡಿದು ಸುಳಿದು ಕುಂದಿಂ ಕಥಕ/
> ಶ್ರೇಣಿಯೊಡನೆಳಸಿ ಬಳಸುವ/ ನಾಣಿಲಿಗಳನೀ ಬುಧಾಳಿ ತಾಳ್ ಪುಗಿಸುವುದೇ? (ಸು. ಚ. 2-24)

ಇಲ್ಲಿ ಶಾಂತಿನಾಥ ಗಾಣರು ಮತ್ತು ಕಥಕರೊಡನೆ ಇರುವ ನಾಚಿಕೆಗೆಟ್ಟವರು ಮತ್ತು ಬುಧಾಳಿ (ಪಂಡಿತವರ್ಗ) ಎಂಬ ಎರಡು ಸಹೃದಯ ವರ್ಗಗಳನ್ನು ಪ್ರಸ್ತಾಪಿಸುತ್ತ ಇವೆರಡೂ ವರ್ಗಗಳಲ್ಲಿ ಪಂಡಿತವರ್ಗವನ್ನು ಶ್ರೇಷ್ಠವೆಂದೂ ವೀಣೆ-ಕೊಳಲು-ಬೆದಂಡೆಗಳ ಜೊತೆ ಗಾನ ಕಥನ ಹಾಡುವವರ ಜೊತೆ ಇರುವ ಸಹೃದಯ ವರ್ಗ ಕೀಳೆಂದೂ ಕರೆಯುತ್ತಾನೆ. ಹೀಗೆ ಕಾವ್ಯಗಳನ್ನು ಮೇಲು ಕೀಳೆಂದು ಕಲ್ಪಿಸುವ; ಹಾಗೇ ಸಹೃದಯರನ್ನೂ ಮೇಲು ಕೀಳೆಂದು ವರ್ಗೀಕರಿಸುವ ಕುವಿಮರ್ಶೆಯೂ ನಮ್ಮವರಲ್ಲಿ ಇದೆ.

ನಮ್ಮಲ್ಲಿದ್ದ ಚತ್ತಾಣ, ಬೆದಂಡೆ, ಓವನಿಗೆ, ಒನಕೆವಾಡು, ಮೆಲ್ವಾಡು, ಮುಕ್ತಕ (ಇಡುಕುಂಗಬ್ಬ) ಬಾಜನೆಗಬ್ಬ, ಪಗರಣ ಹೀಗೆ ಅನೇಕ ರೀತಿಯ ಕಾವ್ಯದ ದೇಸಿ ಬಗೆಗಳನ್ನು ನಮ್ಮ ಕವಿಗಳು ತಮ್ಮ ಕಾವ್ಯಗಳಲ್ಲಿ ಉಲ್ಲೇಖಿಸಿದ್ದಾರೆ. ಪಗರಣದ ಉಲ್ಲೇಖವಂತೂ ವಡ್ಡಾರಾಧನೆ, ಕವಿರಾಜಮಾರ್ಗ, ಆದಿಪುರಾಣ, ಧರ್ಮಾಮೃತ, ಗದುಗಿನ ಭಾರತ, ತೊರವೆ ರಾಮಾಯಣ, ವರ್ಧಮಾನ ಪುರಾಣ, ಭರತೇಶ ವೈಭವ ಕುಮಾರರಾಮನ ಸಾಂಗತ್ಯ, ಬಸವ ವಚನ, ಪುರಂದರ ಕೀರ್ತನೆ ಹೀಗೆ ಹಲವು ಕಡೆ ಪ್ರಸ್ತಾಪವಾಗಿವೆ.[21] ಕಾವ್ಯಗಳನ್ನಲ್ಲದೆ ಕವಿಗಳನ್ನು ಸತ್ಕವಿ-ಕುಕವಿ, ಓದುಗರನ್ನು ದುರ್ಜನ-ಸುಜನರು, ಓದನ್ನೂ ಒಳ್ಳೆಯ ಓದು-ಕೆಟ್ಟ ಓದು ಹೀಗೆ ವರ್ಗೀಕರಿಸಿ ನೋಡುವ ಪರಿಪಾಠವೂ ನಮ್ಮವರಲ್ಲಿದೆ. (ಹೆಚ್ಚಿನ ವಿವರಗಳಿಗೆ ನೋಡಿ; ಕವಿ ಸಹೃದಯ ಮೀಮಾಂಸೆ)

> ವಸ್ತುಕ ವರ್ಣಕ ತ್ರಿಸ್ಥಾನದ ಮೇಲೆ ನುಡಿದ ನುಡಿಗಳು/ ಇತ್ತಿತ್ತಲಲ್ಲದೆ ಅತ್ತಲಾರು ಬಲ್ಲರು
> ಇವರೆತ್ತಲೆಂದರಿಯರು ಗಿಳಿವಿಂಡುಗೆಡೆವರು/ ನಿಮ್ಮನೆತ್ತ ಬಲ್ಲರು ಗುಹೇಶ್ವರಾ? —ಅಲ್ಲಮ

ನಮ್ಮ ಮಹಾಕವಿಗಳೆಲ್ಲ ಕಾವ್ಯದ ಲಕ್ಷಣಗಳ ಬಗೆಗೆ ತತ್ವ ಮತ್ತು ಆಚರಣೆ ಎರಡೂ ನೆಲೆಗಳಲ್ಲಿ ಬರೆದ

ಗಿಳಿಪಾಠ ಒಪ್ಪಿಸುತ್ತಿದ್ದಾರೆ. ಹಿಂದಿನವರನ್ನು ನೋಡಿ ತಮ್ಮ ಇಂದಿನ ಕಾವ್ಯ ಸ್ವರೂಪವನ್ನು ನಕಲು ಮಾಡುತ್ತಿದ್ದಾರೆ ಎಂದು ಅಲ್ಲಮ ಮೇಲಿನ ವಚನದಲ್ಲಿ ಕಟುವಾಗಿ ಟೀಕಿಸುತ್ತಾನೆ. ತಮ್ಮ ಪೂರ್ವ ಕಾವ್ಯ ಸಂಪ್ರದಾಯವನ್ನು (ವೇದ-ಉಪನಿಷತ್ತು-ಪುರಾಣ-ತರ್ಕಗಳನ್ನು ಒಳಗೊಂಡಂತೆ) ನಿರಾಕರಿಸುವ ವಚನಕಾರರ ಧೋರಣೆಯನ್ನು ನೋಡಿಯೇ ಮಲ್ಲಿಕಾರ್ಜುನ ತನ್ನ ಸೂಕ್ತಿ ಸುಧಾರ್ಣವದಲ್ಲಿ ವ್ಯಂಗ್ಯವಾಗಿ ಪ್ರತಿಕ್ರಿಯಿಸಿದ್ದಾನೆ.

> ಛಂದಮಿದಾವುದು ಎಂದೊಡೆ ಇರಿವರ್, ಪದಬಂಧದೊಳ್ ಈ ಪ್ರಯೋಗಮ್
> ಎಂತೆಂದೊಡೆ ಬಯ್ವರ್, ಆವ ಕವಿಮಾರ್ಗ೦ ಇದು ಎಂದೊಡೆ ಪೊಯ್ವರ್,
> ಅರ್ಥಮೇನ್ ಎಂದೊಡೆ ತೊಂಡುಭಂಡುಗೆಡೆದು ಉಟ್ಟುದನ್ ಇಕ್ಕುವರ್,
> ಆವ ನೀತಿ ಪೇಳ್ ಎಂದೊಡೆ ಕೊಲ್ವರ್ ಈಗಳಿನ ದೇಸಿಗೆ ಬಿಳ್ದ ಮಹಾಕವೀಶ್ವರರ್ (ಸೂ.ಸು. 1-35)

ಅಷ್ಟಾದಶವರ್ಣನೆ ಸಹಿತವಾದ ಕಾವ್ಯಸಂಪ್ರದಾಯವನ್ನು ಒಪ್ಪಿ, ನಂಬಿ ಸಂಗ್ರಹಗ್ರಂಥ ಮಾಡಿದ ಮಲ್ಲಿಕಾರ್ಜುನ ಅವುಗಳನ್ನು ನಂಬದ ದೇಸಿ ಕವಿಗಳನ್ನು ಮಹಾಕವೀಶ್ವರರ್ ಎಂದು ವ್ಯಂಗ್ಯವಾಗಿ ಜರೆದಿದ್ದಾನೆ. ಕಾವ್ಯ ರಚನಾ ವಿನ್ಯಾಸಕ್ಕೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳ ಸಂವಾದವೊಂದು ನಡೆದಿರುವುದಕ್ಕೆ ಈ ಪದ್ಯ ಸಾಕ್ಷಿ. ಅಷ್ಟಾದಶವರ್ಣನೆಗಳನ್ನು ವಸ್ತುಕ ಮಹಾಕಾವ್ಯಕ್ಕೆ ಸಾಮಾನ್ಯವಾಗಿ, ಅಗತ್ಯವಾಗಿ ಇರಬೇಕಾದ ಲಕ್ಷಣ ಎಂದು ನಮ್ಮ ಸಂಪ್ರದಾಯವು ಭಾವಿಸುತ್ತ ಬಂದಿದೆ. ಅದರೆ ನಮ್ಮಲ್ಲಿ ವಚನ, ಸ್ವರವಚನ, ತತ್ವಪದ, ಕೀರ್ತನೆ, ಸುಳಾದಿ, ಉಗಾಬೋಗ, ಸರ್ವಜ್ಞನ ತ್ರಿಪದಿಗಳು, ಬೆದಂಡೆ, ಚತ್ತಾಣ, ಮೆಲ್ವಾಡು, ಇಡುಕುಂಗಬ್ಬ, ಕಾಲಜ್ಞಾನ ಮುಂತಾದ ಕವಿತಾರೂಪಗಳಿಗೆ ಈ ಲಕ್ಷಣಗಳಲ್ಲಿ ಯಾವ ಉತ್ತರವೂ ಇಲ್ಲ. ಕನ್ನಡ ಪ್ರಾಚೀನ ಪರಂಪರೆಯಲ್ಲಿ ರಚಿತವಾಗಿರುವ ಲಕ್ಷಣಗ್ರಂಥಗಳು, ಛಂದೋಗ್ರಂಥಗಳು, ಶಬ್ದಶಾಸ್ತ್ರ, ಭಾಷಾಶಾಸ್ತ್ರ ಗ್ರಂಥಗಳು ಕೂಡ ಈ ಕಾವ್ಯ ರೂಪಗಳನ್ನು ಗಂಭೀರವಾಗಿ ಚರ್ಚಿಸಿಲ್ಲ. ಇವುಗಳ ಲಕ್ಷಣ, ಛಂದಸ್ಸು, ಕಾವ್ಯತತ್ವಗಳನ್ನೂ ಚರ್ಚಿಸಿಲ್ಲ. ಇರಿಯುವ, ಬಯ್ಯುವ ಹೊಡೆಯುವ, ಬಟ್ಟೆ ಬಿಚ್ಚಿ ಅವಮಾನ ಮಾಡುವ ಕೊನೆಗೆ ಕೊಂದೇ ಬಿಡುವಂತಹ ಪ್ರತಿಕ್ರಿಯೆಗಳನ್ನು ದೇಸಿಗೆ ಬಿದ್ದ ಕವಿಗಳು ತೋರುತ್ತಿದ್ದರು ಎಂಬುವುದು ಉತ್ಪ್ರೇಕ್ಷೆ ಎನ್ನಿಸಿದರೂ ಈ ಪ್ರತಿಕ್ರಿಯೆ ಒಂದು ದೊಡ್ಡ ಸಂಘರ್ಷವನ್ನಂತೂ ಸೂಚಿಸುತ್ತದೆ. ದುರಾದೃಷ್ಟವೆಂದರೆ ಈ ಸಂಘರ್ಷದ ಲಿಖಿತ ರೂಪಗಳು (ವಿಮರ್ಶೆಯ ಪಂಥಗಳು) ನಮಗೆ ಇಂದು ಸಿಗದೇ ಹೋಗಿವೆ. (ವರ್ಗೀಕರಣ ವಿನ್ಯಾಸದ ತಾತ್ವಿಕ ಮಂಡನೆಗೆ ನೋಡಿ; ಕಾವ್ಯಭೇದಗಳು)

**2.10.1. ಶಾಸ್ತ್ರಗಳು: ಓದುಗಳ ಚತುರಂಗ ರೂಪಗಳು**

ನಮ್ಮ ಪ್ರಾಚೀನ ಕೃತಿಗಳು ರಚಿತವಾಗಿರುವುದೇ ಕಾವ್ಯರೂಪದಲ್ಲಿ ಎಂಬುದನ್ನು ಈಗಾಗಲೇ ಗಮನಿಸಲಾಗಿದೆ. ಮೀಮಾಂಸೆ, ಅಲಂಕಾರ ಶಾಸ್ತ್ರಕಾರರು-ವ್ಯಾಖ್ಯಾನಕಾರರು(ವಿಮರ್ಶಕರು) ಕೂಡ ಕವಿಗಳೇ. ಹಾಗಾಗಿ ಕಾವ್ಯಶಾಸ್ತ್ರ, ಶಬ್ದಶಾಸ್ತ್ರಗಳೆಲ್ಲ ಕಾವ್ಯರೂಪದಲ್ಲೇ ಪ್ರಕಟ ಆಗಿರುವುದರಿಂದ ಅಲ್ಲಿರುವ ವಿಮರ್ಶೆಯೂ ಕಾವ್ಯರೂಪಿ ಆಗಿಯೇ ಪ್ರಕಟವಾಗಿದೆ. ಶಾಸ್ತ್ರಗ್ರಂಥಗಳ ಮೂಲಕ ಪ್ರಕಟವಾಗಿರುವ ವಿಮರ್ಶೆಯು 1) ಲಕ್ಷ್ಯ ಪದ್ಯಗಳ ಸಂಗ್ರಹ ರೂಪದಲ್ಲಿ 2) ಲಕ್ಷ್ಯಪದ್ಯಗಳ ಅನುವಾದ ರೂಪದಲ್ಲಿ 3) ಕಾವ್ಯಪರಂಪರೆ-ಶಾಸ್ತ್ರಪರಂಪರೆಗಳ ಅವಲೋಕನ, ವಿಶ್ಲೇಷಣೆ, ವರ್ಗೀಕರಣ, ವ್ಯಾಖ್ಯಾನ ರೂಪಗಳಲ್ಲಿ 4) ಕವಿ-ಕವಿವರ್ಗಗಳ ಉಲ್ಲೇಖ-ನಿರ್ವಚನ ರೂಪದಲ್ಲಿ 5) ನಿಯಮ, ಕ್ರಮಗಳ ನಿರೂಪಣೆಯ ರೂಪದಲ್ಲಿ; 6) ಕಾವ್ಯಪ್ರಯೋಗ ಕೋಶ ನಿರ್ಮಾಣ ರೂಪದಲ್ಲಿ 7)ಪರಿಕರ ನಿರ್ಮಾಣ ರೂಪದಲ್ಲಿ 8) ವಿಶ್ವಕೋಶ ರಚನಾ ರೂಪದಲ್ಲಿ 9)ಸೂಕ್ತಿ ಸಂಗ್ರಹ ರೂಪದಲ್ಲಿ 10)ತತ್ವ ಸಂಗ್ರಹ ರೂಪದಲ್ಲಿ 11) ಶೂನ್ಯಸಂಪಾದನಾ ರೂಪದಲ್ಲಿ 12) ಸಿದ್ಧಾಂತ, ಪ್ರಸ್ಥಾನರೂಪಿಯಾಗಿ ಕಾವ್ಯಶಾಶ್ತ್ರ, ಶಬ್ದಶಾಸ್ತ್ರ, ಅಲಂಕಾರಶಾಸ್ತ್ರ, ಭಾಷಾಶಾಸ್ತ್ರ ರೂಪಗಳಲ್ಲಿ ಹೀಗೆ ಹತ್ತು ಹಲವು ರೂಪಗಳಲ್ಲಿ ಪ್ರಕಟಗೊಂಡಿದೆ.

ತನ್ನ ಸಂಸ್ಕೃತ ಭಾಷೆಯ ಕನ್ನಡ ವ್ಯಾಕರಣ ಗ್ರಂಥ ಶಬ್ದಾನುಶಾಸನದಲ್ಲಿ ಭಟ್ಟಾಕಳಂಕನು ಕನ್ನಡ ಭಾಷೆಯ ಬಗೆಗೆ ಹೀಗೆ ಹೇಳಿದ್ದಾನೆ. "ಈ ಭಾಷೆ ಶಾಸ್ತ್ರ ನಿರೂಪಣೆಗೆ ಅತ್ಯಂತ ಉಪಯೋಗಿಯಾಗಿದೆ. ಇದರಲ್ಲಿ ತತ್ವಾರ್ಥ ಮಹಾಶಾಸ್ತ್ರಕ್ಕೆ ವ್ಯಾಖ್ಯಾನ ರೂಪದ 9600 ಗ್ರಂಥಪ್ರಮಾಣದ ಚೂಡಾಮಣಿಯೆಂಬ ಮಹಾಗ್ರಂಥವು ಶಬ್ದಾಗಮ, ಯುಕ್ತ್ಯಾಗಮ, ಪರಮಾಗಮ ವಿಷಯಗಳನ್ನೊಳಗೊಂಡ ಗ್ರಂಥಗಳೂ ಕಾವ್ಯ, ನಾಟಕ, ಅಲಂಕಾರ, ಕಲಾಶಾಸ್ತ್ರ ವಿಷಯಗಳನ್ನೊಳಗೊಂಡ ಅನೇಕಾನೇಕ ಗ್ರಂಥಗಳೂ ದೊರೆಯುವುವಾದ್ದರಿಂದ ಇದು ಮಹಾಜನರಿಂದ ಪರಿಗ್ರಾಹ್ಯವಾಗಿದೆ."[21] ಅಂದರೆ ಕನ್ನಡ ಭಾಷೆ, ಸಾಹಿತ್ಯದ ಹಿರಿಮೆಯನ್ನು ಸಂಸ್ಕೃತ ಜನರ ಎದುರಿಗೆ ಕಡಿಮೆಯದಲ್ಲವೆಂದು ಹೇಳುವ ಮಾತುಗಳಿವು. ಇಂಥ ಮಾತುಗಳು ಕೂಡ ಕನ್ನಡ

ಸಾಹಿತ್ಯ ಲೋಕದ ವಿಮರ್ಶೆಯೇ. ಆದರೆ ಇವನು ಹೇಳಿರುವಂತೆ ನಾಟಕ, ಕಲಾಶಾಸ್ತ್ರಗ್ರಂಥಗಳು ರಚನೆಯಾಗಿದ್ದರೂ ದೊರೆಯದಿರುವುದು ದುರಂತವೇ ಸರಿ.

'ಕನ್ನಡದೊಳೊಲ್ದು ಪೂರ್ವಾಚಾರ್ಯರ್ ದೇಸಿಯನೆ ನಿರಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್' (1–75) ಎಂಬ ಶ್ರೀವಿಜಯನ ಮಾತುಗಳಾಗಲೀ, 'ಯತಿವಿಲಂಘನದಿಂದರಿದಲ್ತೆ ಕನ್ನಡಂ' ಎಂಬ ಕೇಶೀರಾಜನ ಮಾತಾಗಲೀ ಕನ್ನಡ ಕಾವ್ಯ ಪರಂಪರೆಯ ವಿಮರ್ಶೆಯೇ ಆಗಿವೆ. ಛಂದಸ್ಸಿನ ವಿವೇಚನೆಯ ಸಂದರ್ಭದಲ್ಲಿ ಬರುವ ಮಾತುಗಳಿವು. ಕಾವ್ಯವನ್ನು ವಿಮರ್ಶೆ ಮಾಡುವ ಉದ್ದೇಶದಿಂದ ವಿಮರ್ಶೆಯು ಇಲ್ಲಿ ಸಂಭವಿಸಿಲ್ಲ. ಮೀಮಾಂಸೆ(ಅಲಂಕಾರ), ಛಂದಸ್ಸು, ವ್ಯಾಕರಣ, ನಿಂಘಟುರಚನೆ ಮೊದಲಾದ ಬೇರೆ ಬೇರೆ ಕಾರಣಗಳಿಗಾಗಿ ಪ್ರಸಂಗವಶಾತ್ ವಿಮರ್ಶೆಯು ಇಲ್ಲೆಲ್ಲ ಸಂಭವಿಸಿದೆ.

ದೋಸಮಿನಿತೆಂದು ಬಗೆದು/ದ್ಭಾಸಿಸಿ ತರಿಸಂದು ಕನ್ನಡಂಗಳೊಳೆಂದುಂ
ವಾಸುಗಿಯುಮರಿಯಲಾರದೆ/ಬೇಸರುಗುಂ ದೇಸಿ ಬೇರೆವೇರಪ್ಪುದರಿಂ (1–46 ಕವಿರಾಜಮಾರ್ಗ)
ನೆಲಸಿದ ಕಾವ್ಯಂ ಕಾವ್ಯ/ಕ್ಕೆ ಲಕ್ಷಣಂ ಸತತಮೆಂದೆ ಪಳಗನ್ನಡಮಂ
ಪೊಲಗೆಡಿಸಿ ನುಡಿವರಾಗಮ/ ಬಲಹೀನರ್ ದೇಸಿಯಲ್ಲದೆಂದರಿದಿರ್ದುಂ (1–48 ಕವಿರಾಜಮಾರ್ಗ)

ಆಗಮಬಲಹೀನರಾದ ಕವಿಗಳು ಕಾವ್ಯರಚನೆಗೆ ತೊಡಗಿ, ದೇಸಿ ಮಾರ್ಗಗಳ ಭೇದ ತಿಳಿಯದೆ ಹಳಗನ್ನಡವನ್ನು ಹೊಲಗೆಡಿಸಿ ನುಡಿಯುತ್ತಿದ್ದಾರೆ. ವಾಸುಕಿಯೂ ಕೂಡ ಈ ಕನ್ನಡ ಭೇದಗಳನ್ನು ಅರಿಯದೆ ಬೇಸರಗೊಂಡಿದ್ದಾನೆ ಎಂದು ಶ್ರೀವಿಜಯ ಹೇಳುವ ಮಾತುಗಳು ಕೂಡ ಆಗಿನ ಕನ್ನಡ ಕಾವ್ಯರಚನೆಯನ್ನು ಭಾಷಾಪ್ರಯೋಗದ ದೃಷ್ಟಿಯಿಂದ ವಿಮರ್ಶಿಸಿರುವ–ಮಾರ್ಗದರ್ಶಿಸಿರುವ ಮಾತುಗಳಿವು. ತನ್ನ ಕಾಲದ ಕಾವ್ಯರಚನಾ ವಿಧಾನದ ಅವ್ಯವಸ್ಥೆಯ ಬಗ್ಗೆ ಶ್ರೀವಿಜಯನಿಗೆ ಇಲ್ಲಿ ಆತಂಕವಿದೆ. ನಾಗವರ್ಮನು ಕರ್ನಾಟಕ ವಿಷಯ ಜಾತಿಗಳನ್ನು ವಿವರಿಸುವಾಗ, ವೃತ್ತಗಳ ಬಗೆಗೆ ಹೇಳುವಾಗ; ಆರು ವೃತ್ತಗಳನ್ನು ಖ್ಯಾತ ಕರ್ನಾಟಕಗಳೆಂದು ಹೇಳುತ್ತಾನೆ. ಕನ್ನಡ ಕಾವ್ಯದ ಇಡಿಯಾದ ಓದು ಇಲ್ಲದಿದ್ದರೆ ಇಂಥ ನಿರ್ಣಯಗಳನ್ನು ಕೊಡಲು ಬರುವುದಿಲ್ಲ. ಕನ್ನಡದಲ್ಲಿ ಹೆಚ್ಚು ಬಳಕೆಯಾಗಿರುವ ವೃತ್ತಗಳು ಇವು ಎಂಬ ಮಾತು ಛಂದೋದಾರಿಯಿಂದ ಕನ್ನಡ ಕಾವ್ಯವನ್ನು ಓದಿ ಕಂಡುಕೊಂಡ ಮಾತಾಗಿದೆ. ಯತಿಯ ಕುರಿತ ಶ್ರೀವಿಜಯನ ಮತ್ತು ಕೇಶೀರಾಜನ ಮಾತುಗಳೂ ಕೂಡ ಇಂಥ ಇಡಿ ಓದಿನ ಗ್ರಹಿಕೆಗಳೇ ಆಗಿವೆ.

ಶ್ರೀವಿಜಯನು ತನ್ನ ಕವಿರಾಜಮಾರ್ಗದಲ್ಲಿ ಪದ್ಯಕವಿಗಳು ಮತ್ತು ಗದ್ಯಕವಿಗಳ ಪರಂಪರೆಯನ್ನು ನೆನಪಿಸಿಕೊಳ್ಳುತ್ತ(1–22–29)ಗದ್ಯಾಶ್ರಮ ಪ್ರತೀತಿ, ಪದ್ಯಾಶ್ರಮ ಪ್ರತೀತಿಗಳನ್ನು ವಿವರಿಸುತ್ತಾನೆ. ಆಯಾ 'ಆಶ್ರಮ'(ಸ್ಕೂಲು)ಗಳಲ್ಲಿ ಖ್ಯಾತರಾದ ಕವಿಗಳ ಯಾದಿಯನ್ನು ಕೊಡುತ್ತಾನೆ. ಅಂದರೆ ಗದ್ಯ–ಪದ್ಯ ಕಾವ್ಯಮಾರ್ಗ(ಆಶ್ರಮ); ಕಾವ್ಯ ಪರಂಪರೆಗಳನ್ನು (ಸ್ಕೂಲ್ ಆಫ್ ಪೊಯೆಟ್ರಿ ಅಂಡ್ ಸ್ಕೂಲ್ ಆಫ್ ಪ್ರೋಸ್ ಎಂಬ ಅರ್ಥದಲ್ಲಿ) ಹೇಳಿದ್ದಾನೆ. ನಾಗವರ್ಮನು ತನ್ನ ಕಾವ್ಯಾವಲೋಕನದಲ್ಲಿ ಶಂಖವರ್ಮ, ಗುಣವರ್ಮ, ನಾಗವರ್ಮರುಗಳದ್ದೇ ಒಂದು 'ಅಧ್ವಾನ' ಅಂದರೆ ಮಾರ್ಗ ಸ್ಥಾಪಿತವಾಗಿರುವಂತೆ ಹೇಳುತ್ತಾನೆ. ಇದು ಬಹುಶಃ ವ್ಯಾಕರಣ ಪರಂಪರೆಯ ಕುರಿತ ಮಾತಿರಬಹುದು. ಇಂಥ ಕೆಲ ಮಾತುಗಳು ಸಾಹಿತ್ಯ ಪರಂಪರೆಯ ಇಡಿ ನೆಲೆಯ ಓದಿನ ಫಲಗಳಾಗಿಯೇ ಬಂದಿವೆ. ಕನ್ನಡಕ್ಕೆ ಅದರದ್ದೇ ಆದ ಗದ್ಯ, ಪದ್ಯ, ವ್ಯಾಕರಣ, ಮೀಮಂಸಾ(ಅಲಂಕಾರ) ಪರಂಪರೆಗಳು ಅದಾಗಲೇ ಬೆಳೆದು ಬಂದಿರುವುದರ ಇಂಥ ಅವಲೋಕನ, ಪರೀಕ್ಷೆ, ವ್ಯಾಖ್ಯಾನಗಳು ಪ್ರಾಚೀನ ಸಾಹಿತ್ಯದ ವಿಮರ್ಶೆಗಳೇ ಆಗಿವೆ.

ಇಡಿ ಓದು ಎಂದರೆ ತಮ್ಮ ಹಿಂದಿನ ಪರಂಪರೆಯ ಎಲ್ಲ ರಚಿತ ಕೃತಿಗಳನ್ನು ಕವಿಗಳು ಓದಿ ವಿಮರ್ಶಿಸುತ್ತಿದ್ದರು ಎಂದೇನೂ ಅರ್ಥವಲ್ಲ. ಅವರ ಓದಿಗೆ ದಕ್ಕಿದ ಪರಂಪರೆಯಷ್ಟನ್ನೆ ಗಮನಿಸಿ ಅವರವರು ತಮ್ಮ ಕಾವ್ಯ(ಶಾಸ್ತ್ರ)ಗಳನ್ನು ರಚಿಸಿದ್ದಾರೆ. ಶಬ್ದ ಸ್ಮೃತಿಯಲ್ಲಿ ನಾಗವರ್ಮನು ಶರ್ವವರ್ಮನ ಕಾತಂತ್ರವ್ಯಾಕರಣವನ್ನು ಅನುಸರಿಸಿದ್ದಾನಾದರೂ; ಶ್ರೀವಿಜಯನನ್ನು ಅನುಸರಿಸಿಲ್ಲ. ಕೇಶೀರಾಜನೂ, ಭಟ್ಟಾಕಲಂಕನೂ ಕವಿರಾಜಮಾರ್ಗದಿಂದ ಉದಾಹರಣೆಗಳನ್ನು ಎತ್ತಿಕೊಟ್ಟಿರುವಲ್ಲಿ; ನಾಗವರ್ಮನು ಅದರಿಂದ ಉದಾಹರಣೆಗಳನ್ನು ಕೊಡದಿರುವ ಮಾತು ಹಾಗಿರಲಿ, ಅದನ್ನು ನೋಡಿರುವ ಅಥವಾ ಅದನ್ನು ತನ್ನ ಗ್ರಂಥರಚನೆಗಾಗಿ ಬಳಸಿಕೊಂಡಿರುವ ಬಗೆಗೆ ಯಾವ ಸುಳಿವೂ ಇಲ್ಲ.[22] ದುರ್ಗಸಿಂಹನು 'ಶ್ರೀವಿಜಯರ್ ದೇವರ್ ಅವರನೇವಣ್ಣಿಪುದೋ' ಎಂದು ಉದ್ಗರಿಸಿದರೆ ನಾಗವರ್ಮನು ಶ್ರೀವಿಜಯನ ಹೆಸರನ್ನೇ ಎತ್ತುವುದಿಲ್ಲ.

ಆದರೆ ಕೇಶೀರಾಜ ಮಾತ್ರ ನಾಗವರ್ಮನ ವ್ಯಾಕರಣ ಅನುಸರಿಸಿಯೇ ಶಬ್ದಮಣಿದರ್ಪಣ ರಚಿಸಿದ್ದಾನೆ. ಹಾಗಾಗಿ ಭಿನ್ನ ಭಿನ್ನ ಕಾಲಘಟ್ಟಗಳ ಕಾವ್ಯ-ಶಾಸ್ತ್ರ ಪರಂಪರೆಗಳ ನಡುವೆ ಕನ್ನಡ ಪ್ರಾಚೀನ ಕಾಲದಲ್ಲಿ ಸಾತತ್ಯ-ಸಂಪರ್ಕ ನಿರಂತರ, ಇದ್ದಂತೆ ಕಾಣುವುದಿಲ್ಲ.

ದುರ್ಗಸಿಂಹನು ತನ್ನ ಕೃತಿಯಲ್ಲಿ 'ಶ್ರೀವಿಜಯರ ಕವಿಮಾರ್ಗಂ ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈದೀವಿಗೆಯುಮ್....' ಎಂದು ಹೇಳಿದ್ದಾನೆ. ಅಂದರೆ ನಮ್ಮ ಲಕ್ಷಣಗ್ರಂಥಗಳು ಕಾವ್ಯಗಳ ವಿಮರ್ಶೆಗಾಗಿ ಮಾತ್ರವೇ ಹುಟ್ಟಿದುವಲ್ಲ. ಅವು ಕವಿಗಳ ಕೈದೀವಿಗೆಗಳಂತೆ ಕಾವ್ಯರಚನೆಯ ಮಾರ್ಗದರ್ಶನಕ್ಕಾಗಿ ಹುಟ್ಟಿದ ಗ್ರಂಥಗಳು ಎಂದು ಈಗಾಗಲೇ ಹೇಳಲಾಗಿದೆ. ಅಂಥ ಕೆಲಸವನ್ನು ನಮ್ಮ ಪ್ರಾಚೀನ 'ಚತುರಂಗ'ಗಳು ಮಾಡುತ್ತ ಬಂದಿವೆ. ಅವುಗಳೆಂದರೆ ಅಲಂಕಾರ, ಛಂದಸ್ಸು, ವ್ಯಾಕರಣ, ಶಬ್ದಶಾಸ್ತ್ರ(ನಿಘಂಟು)ಗಳು.

ಕಾವ್ಯದ ರಚನೆಗೆ ಮತ್ತು ಕಾವ್ಯದ ಅಧ್ಯಯನಕ್ಕೆ ಅನುಕೂಲವಾಗಬಹುದಾದ ಸಹಾಯಕ ಸಾಮಗ್ರಿಯನ್ನು ನಿರ್ಮಿಸಿಕೊಡುವುದು ಛಂದಸ್ಸು, ನಿಘಂಟು, ವ್ಯಾಕರಣಾದಿ ಶಾಸ್ತ್ರಕಾರರ ಉದ್ದೇಶವಾಗಿತ್ತು. ಛಂದಸ್ಸು, ವ್ಯಾಕರಣಾದಿ ಶಾಸ್ತ್ರಕಾರರಿಗೆ ಕಾವ್ಯಗಳನ್ನು ಬಿಡಿಯಾಗಿಯಾಗಲೀ, ಕಾವ್ಯಪರಂಪರೆಗಳನ್ನು ಇಡಿಯಾಗಿಯಾಗಲೀ ವಿಮರ್ಶಿಸುವ ಉದ್ದೇಶಕ್ಕಾಗಿ ವಿಮರ್ಶಿಸುವ ರೂಡಿ ಇರಲಿಲ್ಲ. ಇದು ನಮ್ಮ ಪ್ರಾಗ್ವಿಮರ್ಶೆಯ ಲಕ್ಷಣ-ಸ್ವರೂಪ.

**2.11. ಕಾವ್ಯಪ್ರಯೋಗ ಕೋಶ ನಿರ್ಮಾಣ**

ಕವಿಗಳ ಪದಪ್ರಯೋಗಗಳಿಗೆ ಅರ್ಥಗಳನ್ನು ಕಾವ್ಯ ರೂಪದಲ್ಲಿಯೇ ಹೇಳುವ ಪರಿಪಾಠವೊಂದು ನಮ್ಮಲ್ಲಿದೆ. 'ಅಗುಂದಲೆಯೆಂದು ಪಿರಿದು, ಅರಿಲ್ ಎಂದು ನಕ್ಷತ್ರಂ, ಆರಡಿಯೆಂದು ತುಂಬಿ, ಕೊತ್ತಳಿಯೆಂದು ಕಾಗೆಗಳ ಮೊತ್ತಂ, ಸೈಪೆಂದು ಪುಣ್ಯಂ' ಹೀಗೆ ಶಬ್ದಮಣಿದರ್ಪಣದಲ್ಲಿ ಕೇಶೀರಾಜನು ಸುಮಾರು 250ರಷ್ಟು ಅಪರೂಪದ ಪದಗಳಿಗೆ ಅರ್ಥ ನೀಡಿದ್ದಾನೆ. ಕಾವ್ಯಗಳಲ್ಲಿ ಪ್ರಯೋಗವಾಗಿರುವ ಪದಗಳಿಗೆ ಕೊಟ್ಟಿರುವ ಪದಕೋಶವಿದು. ಹಳಗನ್ನಡ ಕಾವ್ಯಗಳನ್ನು ಓದಲು ಅಗತ್ಯವಾಗಿ ಬೇಕಾದ ಒಂದು ತಿಳುವಳಿಕೆಯೆಂದರೆ ಶಬ್ದಾರ್ಥಗಳ ತಿಳುವಳಿಕೆ. ನಿಂಘಟುಗಳು ಈ ತಿಳುವಳಿಕೆ ಇಲ್ಲದವರಿಗೆ ಸಹಾಯ ಮಾಡುತ್ತವೆ. ಆದರೆ ನಿಘಂಟುಗಳ ಅರ್ಥಕ್ಕೂ ಕಾವ್ಯಪ್ರಯೋಗದ ಅರ್ಥಕ್ಕೂ ಸದಾ ಸಾಮ್ಯ ಇರುತ್ತದೆ ಎಂದೇನೂ ಅಲ್ಲ. ಅಂಥ ಸಂದರ್ಭಗಳಲ್ಲಿ ಪ್ರಯೋಗಾರ್ಥ ಕೋಶಗಳು ನೆರವಿಗೆ ಬರುತ್ತವೆ. ನಮ್ಮ ಪ್ರಾಚೀನ ಶಾಸ್ತ್ರಕಾರರು ಇಂಥ ನೆರವನ್ನು ತಮ್ಮ ಗ್ರಂಥಗಳಲ್ಲಿ ಸೃಷ್ಟಿಸಿದ್ದಾರೆ. ಅಂಥವರಲ್ಲಿ ಕೇಶೀರಾಜನೂ ಒಬ್ಬ. ಸುಮಾರು 1600ರ ಕಾಲದಲ್ಲಿ ಕುಮಾರವ್ಯಾಸನ ಭಾರತದ ಶಬ್ದಗಳಿಗೆ ಅದರಲ್ಲೂ ದೇಶ್ಯ ಶಬ್ದಗಳಿಗೆ ಸಂಬಂಧಿಸಿದ ಅರ್ಥಗಳನ್ನು ತಿಳಿಸುವ 'ಭಾರತ ನಿಘಂಟು' ರಚನೆಯಾಗಿದೆ. ಇದರಲ್ಲಿ 67 ಕಂದ ಪದ್ಯಗಳಿದ್ದು ಇದರ ಕರ್ತೃ ಯಾರೆಂದು ತಿಳಿದು ಬಂದಿಲ್ಲ. ಇಂಥ ನಿಘಂಟುಗಳು ಕಾವ್ಯದ ಅಭ್ಯಾಸಕ್ಕೆ ಸಹಾಯಕ ಪರಿಕರಗಳಾಗಿ ಒದಗುತ್ತವೆ. ಇಂಥ ಸಹಾಯಕ ಪರಿಕರಗಳನ್ನು ನಿರ್ಮಿಸುತ್ತ ಕಾವ್ಯದ ಅಭ್ಯಾಸ, ಅಧ್ಯಯನ, ಮನನವನ್ನು ಸುಲಲಿತಗೊಳಿಸುವ ಕಾರ್ಯವನ್ನು ನಮ್ಮ ಪ್ರಾಚೀನ ವಿಮರ್ಶೆಯು ಮಾಡುತ್ತ ಬಂದಿದೆ. ಇಂತಹ ಕಾವ್ಯಪ್ರಯೋಗ ಕೋಶ ನಿರ್ಮಾಣ ಮಾರ್ಗ ನಮ್ಮ ಪ್ರಾಚೀನರ ಒಂದು ವಿಮರ್ಶಾ ರೂಪ ಎನ್ನಲು ಅಡ್ಡಿಯಿಲ್ಲ.

ಸಾಳ್ವ ಒಬ್ಬ ಉತ್ತಮ ವಿಮರ್ಶಕನ ಸಂವೇದನೆಗಳನ್ನು ಹೊಂದಿದ್ದಾನೆ. ರಸ ರತ್ನಾಕರದಲ್ಲಿ ಈತ ಅನೇಕ ಗ್ರಂಥಗಳ ವಿಷಯಗಳನ್ನು ಸಂಗ್ರಹಿಸಿ, ತಾನು ಇತರ ಲಾಕ್ಷಣಿಕರಿಗೆ ಋಣಿಯಾಗಿರುವುದನ್ನು ಮಾತ್ರವಲ್ಲದೆ, ಅಲ್ಲಲ್ಲಿ ಪ್ರತ್ಯೇಕವಾಗಿಯೂ 'ಕವಿಕಾಮನ ಮತಂ', 'ಇದು ನಾಗವರ್ಮನ ಮತಂ', 'ಹೇಮಚಂದ್ರ ಸೂರಿಯ ಮತದಿಂ', ಎಂದು ಮುಂತಾಗಿ ಒಪ್ಪಿಕೊಂಡಿರುವುದು ಮೆಚ್ಚತಕ್ಕ ಸಂಗತಿ. ಸಾಳ್ವನು ಕವಿಕಾಮನಿಗೆ ವಿಶೇಷವಾಗಿ ಋಣಿಯಾಗಿದ್ದರೂ ಅವನನ್ನು ಟೀಕಿಸಿರುವುದೂ ಉಂಟು. ಇತರರ ಅಭಿಪ್ರಾಯಗಳನ್ನು ತನ್ನವೆಂದು ತೋರುವಂತೆ ಮಾಡದೆ ಈತ ಒಪ್ಪಿಕೊಂಡಿದ್ದಾನೆ. ಅಲ್ಲದೆ ಅಗತ್ಯವಾದ ಕಡೆಗಳಲ್ಲಿ ಸೂತ್ರಗಳಿಗೆ ವೃತ್ತಿಗಳನ್ನು ಬರೆಯುವುದರ ಜೊತೆಗೆ 'ವಿಚಾರಂ' ಎಂಬ ವಿಭಾಗವನ್ನು ಕಲ್ಪಿಸಿಕೊಂಡು ಅದರಡಿಯಲ್ಲಿ ಅಭಿಪ್ರಾಯ ಭೇದಗಳನ್ನೂ, ವಿಷಯದ ತೊಡಕುಗಳನ್ನೂ ಚರ್ಚೆ ಮಾಡಿದ್ದಾನೆ. ಉದಾಹರಣೆಗೆ ರಸದ ಉತ್ಪತ್ತಿಯ ವಿಷಯದಲ್ಲಿ ನಾಗವರ್ಮನ ಸೂತ್ರವನ್ನೇ ಉದ್ಧರಿಸಿ 'ನಾಗವರ್ಮನಿಂತಪ್ಪುಗೆಯ್ದನದರ ವಿವರಮೆಂತೆಂದೊಡೆ' ಎಂದು ಭಾವ, ವಿಭಾವ, ಅನುಭಾವ, ಸಂಚಾರಿ ಭಾವಗಳ ಸ್ವರೂಪವನ್ನು ವಿವರಿಸುತ್ತಾನೆ.

ವ್ಯಭಿಚಾರಿ ಭಾವಗಳಲ್ಲಿ ಒಂದಾದ ಚಿಂತೆಯ ಕುರಿತು ಹೇಳುವಾಗ:

'ಧ್ಯಾನಮೆ ಚಿಂತೆ, ವಿಚಾರಂ, ಇದು ಸ್ಮೃತಿಯಿಂದ ವ್ಯತಿರಿಕ್ತಂ, ಅನುಭೂತ ವಸ್ತು ಸ್ಮರಣಮೇ ಸ್ಮೃತಿ, ಅದಂ ಬಿಡದೆ ಧ್ಯಾನಿಪುದು ಇಂತೆ, ವಿತರ್ಕದಿಂ ಚಿಂತೆ ಬೇರೆ. ಚಿಂತೆಯಿಂ ಬಳಿಕಾದೊಡಂ ಒರ್ಮೆ ವಿತರ್ಕಮಪ್ಪುದು. ವಿತರ್ಕದಿಂ ಬಳಿಕ್ಕಾದೊಡಂ ಒರ್ಮೆ ಚಿಂತೆಯಪ್ಪುದು.' ಇಲ್ಲಿ ಸ್ಮೃತಿ, ವಿತರ್ಕ(ವಿಚಾರ), ದ್ಯಾನ(ಚಿಂತೆ)ಗಳಿಗಿರುವ ಸೂಕ್ಷ ವ್ಯತ್ಯಾಸಗಳನ್ನು ಬಿಡಿಸಿ ತೋರಿಸಿದ್ದಾನೆ. ಸಾಳ್ವನ ಈ ಕ್ರಮ ಶಾಸ್ತ್ರ ಪದ್ಧತಿಗೆ ಅನುಗುಣವಾಗಿದ್ದು, ಅವನ ಸ್ವತಂತ್ರ ವಿಚಾರ, ವಿಮರ್ಶಾ ವಿಧಾನಕ್ಕೂ ದೃಷ್ಟಾಂತವಾಗಿದೆ. ಅಲ್ಲದೆ ಈತ ಪಂಪನ ಆದಿಪುರಾಣ, ರನ್ನನ ಗಧಾಯುದ್ಧ, ನಾಗವರ್ಮನ ಕಾವ್ಯಾವಲೋಕನಂ, ಶೃಂಗಾರ ರತ್ನಾಕರ, ರುದ್ರಭಟ್ಟನ ಜಗನ್ನಾಥ ವಿಜಯ, ನೇಮಿಚಂದ್ರನ ಲೀಲಾವತಿ ಇವೇ ಮುಂತಾದ ಕೃತಿಗಳಿಂದ ಲಕ್ಷ್ಯ ಪದ್ಯಗಳನ್ನು ಆಯ್ದುಕೊಳ್ಳುವಲ್ಲಿ ಸಾಳ್ವನ ಒಳ್ಳೆಯ ಕಾವ್ಯಾಭಿರುಚಿಯೂ ಕಂಡುಬರುತ್ತವೆ.[21]

## 2.12. ಪರಿಕರ ನಿರ್ಮಾಣ, ರಚನಾ ಮೀಮಾಂಸೆ, ವಾಚನ ಮೀಮಾಂಸೆ

ಕಾವ್ಯದ ಸ್ವರೂಪವು ವಿಮರ್ಶೆಯ ಸ್ವರೂಪವನ್ನು ನಿಯಂತ್ರಿಸುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಹಾಗೆಯೇ ಕಾವ್ಯದ ಪ್ರಯೋಜನ ಮತ್ತು ಕಾವ್ಯದ ಸಾಮಾಜಿಕ ಬಳಕೆ ಕೂಡ ವಿಮರ್ಶೆಯ ಸ್ವರೂಪವನ್ನು ನಿಯಂತ್ರಿಸುತ್ತದೆ. ನಮ್ಮ ಪ್ರಾಚೀನ ಪರಂಪರೆಯನ್ನು ನೋಡಿದರೆ ಇದು ನಿಜವೆನಿಸುತ್ತದೆ. ಕಾವ್ಯದ ರಚನೆಗೆ ಪರಿಕರಗಳನ್ನು ಸಿದ್ಧಪಡಿಸಿಕೊಡುವ ಕೆಲಸವನ್ನು ನಮ್ಮ ಮೀಮಾಂಸೆ ಮಾಡಿರುವಂತೆಯೇ ಕಾವ್ಯದ ಅಭ್ಯಾಸ–ಅಧ್ಯಯನಕ್ಕೆ ಕೂಡ ಪರಿಕರಗಳನ್ನು ನಿರ್ಮಿಸಿಕೊಟ್ಟಿದೆ. ರಚನೆಯ ಪರಿಕರಗಳ ನಿರ್ಮಾಣ ಹಾಗೂ ಅಧ್ಯಯನ ಪರಿಕರಗಳ ನಿರ್ಮಾಣ ಹೀಗೆ ಎರಡು ಮುಖ್ಯ ಕವಲುಗಳನ್ನಾಗಿ ನಮ್ಮ ಮೀಮಾಂಸಾ ಪರಂಪರೆಯನ್ನು ನೋಡಲು ಸಾಧ್ಯವಿದೆ. ಕವಿರಾಜಮಾರ್ಗ(860), ಕಾವ್ಯಾವಲೋಕನ(1050), ಛಂದೋನುಶಾಸನದಂತಹ(1100) ಗ್ರಂಥಗಳು ಕಾವ್ಯ ರಚನೆಯ ಪರಿಕರಗಳ ನಿರ್ಮಾಣಕ್ಕೆ ಹೆಚ್ಚು ಒತ್ತು ಕೊಟ್ಟರೆ ಅಭಿದಾನ ವಸ್ತುಕೋಶ(1050), ಅಭಿನವ ಮಂಗಾಭಿದಾನ(1398), ಕರ್ನಾಟಕ ಸಂಜೀವನ(1600) ಇಂಥ ಗ್ರಂಥಗಳು ಅಭ್ಯಾಸ–ಅಧ್ಯಯನ ಪರಿಕರಗಳ ನಿರ್ಮಾಣಕ್ಕೆ ಹೆಚ್ಚು ಒತ್ತು ನೀಡುತ್ತವೆ. ಒಟ್ಟಾರೆ ನಮ್ಮ ಮೀಮಾಂಸಾ ಗ್ರಂಥಗಳ ಒತ್ತು ಮುಖ್ಯವಾಗಿ ರಚನಾ ಮೀಮಾಂಸೆ ಮತ್ತು ವಾಚನ ಮೀಮಾಂಸೆಯ ಕಡೆಗಿನದು. ನಮ್ಮ ಅಲಂಕಾರ, ಲಕ್ಷಣ, ಧ್ವನಿ, ಛಂದಸ್ಸು, ಪದಕೋಶ, ವ್ಯಾಕರಣ ಗ್ರಂಥಗಳ ರಚನೆಯ ಹಿಂದೆ ಈ ಎರಡು ಮುಖ್ಯವಾದ ಉದ್ದೇಶಗಳು ಇದ್ದಂತೆ ಕಾಣುತ್ತದೆ. ನಮ್ಮ ಶಾಸ್ತ್ರಗ್ರಂಥಗಳು ಪ್ರತ್ಯಕ್ಷವಾಗಿ ಈ ಎರಡು ವಿಚಾರಗಳನ್ನು ಮಾತನಾಡಿದರೆ ಪರೋಕ್ಷವಾಗಿ ಶಾಸ್ತ್ರ ಗ್ರಂಥಗಳನ್ನು ಹೇಗೆ ಮತ್ತು ಯಾವ ಉದ್ದೇಶಕ್ಕೆ ರಚಿಸಬೇಕು ಎಂಬ ಶಾಸ್ತ್ರರಚನಾ ಮೀಮಾಂಸೆಯನ್ನೂ ಕಟ್ಟಿಕೊಡುತ್ತವೆ.

ಕಾವ್ಯದಿಂದ ಆಚೆ ಸಿಡಿದು ಸೈದ್ಧಾಂತಿಕವಾಗಿ ಪ್ರಸ್ಥಾನಗಳನ್ನು ಚರ್ಚಿಸುವ ಕೆಲಸಕ್ಕಿಂತ ನಮ್ಮಲ್ಲಿ ಕಾವ್ಯ ರಚನೆ ಮತ್ತು ಬಳಕೆಯ ಕೆಲಸಕ್ಕೆ ಮೀಮಾಂಸೆ ಹೆಚ್ಚು ಸೃಷ್ಟಿಯಾಗಿದೆ. ಹಾಗಾಗಿ ಕಾವ್ಯ ಪರಂಪರೆಗೂ ಮತ್ತು ಶಾಸ್ತ್ರ (ಮೀಮಾಂಸಾ)ಪರಂಪರೆಗೂ ಒಂತೆರನ ಪರಸ್ಪರ ಅಂತಃಸಂಬಂಧ–ಅಂತರ್‌ಪ್ರಭಾವ ಇದೆ. ನಮ್ಮ ಮೀಮಾಂಸಾ ಗ್ರಂಥಗಳು ಮೇಲ್ನೋಟಕ್ಕೆ ಸಂಸ್ಕೃತ ಮೀಮಾಂಸೆಯ ನಕಲುಗಳಾಗಿ ಕಾಣುತ್ತವಾದರೂ ಅವು ಆಂತರ್ಯದಲ್ಲಿ ಹಾಗಲ್ಲ. ಉಬಾಹರಣೆಗೆ ಎರಡನೆ ನಾಗವರ್ಮನ ಅಭಿದಾನ ವಸ್ತುಕೋಶವು ಹಲಾಯುಧನ ಸಂಸ್ಕೃತದ ಅಭಿದಾನ ರತ್ನಮಾಲಾ ಕೃತಿಯನ್ನು ಅನುಸರಿಸಿದ್ದರೂ ಕನ್ನಡ ಕಾವ್ಯಗಳಲ್ಲಿ ಬಳಕೆಯಾಗಬಹುದಾದ ಸಮಸಂಸ್ಕೃತ ಶಬ್ದಗಳಿಗೆ ಅರ್ಥಕೋಶ ಕಟ್ಟಿಕೊಡುವ ಕೃತಿಯಾಗಿದೆ. ಕನ್ನಡ ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ಇದೊಂದು ಸಹಾಯಕ ಪರಿಕರವಾಗಿ ಒದಗುತ್ತದೆ. ಹೀಗಾಗಿ ಕಾವ್ಯದ ರಚನೆ ಮತ್ತು ಬಳಕೆಯ ಪರಿಕರವಾಗಿ ಈ ಗ್ರಂಥ ಉಪಯುಕ್ತವಾದುದು. ಆದರೆ ಓದುಗರು ಇಂಥ ಕೃತಿಗಳನ್ನು ಬಳಸಿದರೇ ಎಂಬುದಕ್ಕೆ ಈಗ ಪುರಾವೆ ಇಲ್ಲ.

## 2.13. ಸಾರಸಂಗ್ರಹಗಳು–ವಿಮರ್ಶೆ

ಸಂಗ್ರಹಗಳು, ಸಂಕಲನಗಳು, ಸಂಪಾದನೆಗಳು ನಮ್ಮ ಸಾಹಿತ್ಯವನ್ನು ರಕ್ಷಿಸುವ, ಪೋಷಿಸುವ, ವಿಮರ್ಶಿಸುವ, ತಲುಪಿಸುವ ಕೆಲಸವನ್ನು ಮಾಡುತ್ತ ಬಂದಿವೆ. ಇಂಥ ಯತ್ನಗಳಲ್ಲಿ ಸಾರಸಂಗ್ರಹ ಒಂದು ಕವಲಾದರೆ, ವಚನ ಸಂಪಾದನೆ ಇನ್ನೊಂದು ಕವಲು. (ತತ್ವಗಳ ಕ್ರೋಢೀಕರಣ ಭಾಗದಲ್ಲು ಈ ಬಗ್ಗೆ ಚರ್ಚಿಸಲಾಗಿದೆ) ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವ(1250), ಮಲ್ಲ ಕವಿಯ ಕಾವ್ಯಸಾರ(1420), ಅಭಿನವ ವಾದಿ ವಿದ್ಯಾನಂದನ ಕಾವ್ಯಸಾರ(1533) ಇವು ಸಂಗ್ರಹ ಗ್ರಂಥಗಳು. ಹಳಗನ್ನಡದ ಕಾವ್ಯಗಳ

ವಿಸ್ತಾರವಾದ ಓದಿನಿಂದ ಈ ಗ್ರಂಥಗಳನ್ನು ಸಂಯೋಜಿಸಲಾಗಿದೆ. ಇವರ ಗ್ರಂಥಗಳು ಶುದ್ಧಾಂಗವಾಗಿ ವಿಮರ್ಶಾ ಗ್ರಂಥಗಳಲ್ಲ. ಕಾವ್ಯವನ್ನು ಓದಿ ಮೆಚ್ಚಿದ ಪದ್ಯಭಾಗಗಳ ಸಂಗ್ರಹಗಳಷ್ಟೆ. ಇಂಥ ಸಂಗ್ರಹಗಳನ್ನು ಶುದ್ಧಾಂಗವಾಗಿ ವಿಮರ್ಶೆ ಎಂದು ಕರೆಯಲಾಗದಿದ್ದರೂ ಕಾವ್ಯದ ಬಗೆಗಿನ ವಿಮರ್ಶಾವಿವೇಕ ಇಲ್ಲದೆ ಇಂಥ ಸಂಗ್ರಹಗಳು ಹುಟ್ಟಲು ಸಾಧ್ಯವಿಲ್ಲ. ಇಂಥ ಸಾಹಿತ್ಯದ ಅನುಸಂಧಾನವನ್ನು ನಮ್ಮ ಪ್ರಾಚೀನರಲ್ಲಿ ವಿಮರ್ಶನ ಪ್ರಜ್ಞೆಯು ಪ್ರಕಟವಾಗಿರುವ ಒಂದು ಬಗೆ ಎಂದು ಕರೆಯಲಡ್ಡಿಯಿಲ್ಲ. ಇಲ್ಲಿ ಕಾವ್ಯದ ಮೌಲ್ಯಮಾಪನಕ್ಕಿಂತ ತಮಗೆ ಮೆಚ್ಚುಗೆಯಾದ ಕಾವ್ಯದ ಭಾಗಗಳನ್ನು ಕ್ರೋಢೀಕರಿಸುವ ಪ್ರಜ್ಞೆ ಇದೆ. ಸಾಹಿತ್ಯವನ್ನು ತಮಗೆ ತಿಳಿದಂತೆ ಜನಮನದ ನಿತ್ಯ ಮನನಕ್ಕೆ ಒದಗಿಸಿಕೊಳ್ಳುವ/ಒದಗಿಸಿಕೊಡುವ ಒಂದು ವಿಧಾನ ಇದು. ಸಾಹಿತ್ಯವನ್ನು ವಿಮರ್ಶಿಸುವುದೆಂದರೆ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವುದು ಎಂಬ ಬಲವಾದ ತಿಳುವಳಿಕೆಯೊಂದು ಆಧುನಿಕ ಸಂದರ್ಭದಲ್ಲಿ ಬಂದಿದೆ. ಆದರೆ ಮಲ್ಲಿಕಾರ್ಜುನ, ಅಭಿನವವಾದಿ ವಿದ್ಯಾನಂದ, ಮಲ್ಲಕವಿ ಇಂಥವರು ಸಾಹಿತ್ಯವನ್ನು ಸಾರ ಸಂಗ್ರಹರೂಪಿಯಾಗಿ ಸಂಗ್ರಹಿಸಿ ಅಷ್ಟಾದಶವರ್ಣನೆಗಳಿಗೆ ಅನುಗುಣವಾಗಿ ಭಟ್ಟಿ ಇಳಿಸಿ ಅಥವಾ ಜರಡಿ ಹಿಡಿದು ಜನಕ್ಕೆ ನೀಡುವ ಕೆಲಸ ಮಾಡಿದ್ದಾರೆ. ಸಾಹಿತ್ಯವನ್ನು ಜನಕ್ಕೆ ಬಳಕೆಗೆ ನೀಡುವ ಕ್ರಮಗಳಲ್ಲಿ ಇದು ಒಂದು. ಸಾಹಿತ್ಯವನ್ನು ಗ್ರಹಿಕೆ, ಮನನ, ಬಳಕೆಗೆ ಸಾಧ್ಯವಾಗಿಸುವುದು ಮತ್ತು ನಡೆ ನುಡಿಯನ್ನು ಅದರ ಮೂಲಕ ರೂಪಿಸಿಕೊಳ್ಳುವುದು ಇಂಥ ವಿಮರ್ಶನ ಪ್ರಜ್ಞೆಯ ಹಿಂದಿರುವ ಒಂದು ಉದ್ದೇಶ. ವಿಮರ್ಶೆಯ ಸ್ವರೂಪ ಹೇಗಿರಬೇಕು ಮತ್ತು ವಿಮರ್ಶೆಯ ಕಾರ್ಯ ಏನಾಗಬೇಕು ಎಂಬ ಬಗ್ಗೆ ಆಚರಣೆಯ ಮೂಲಕವೇ ಸಂಗ್ರಹ, ಸಂಪಾದನೆಗಳು ನಮಗೆ ಕೈದೀವಿಗೆಗಳಾಗಿವೆ. ಶೂನ್ಯಸಂಪಾದನೆ, ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವ, ಅಭಿನವ ವಾದಿವಿದ್ಯಾನಂದ ಮತ್ತು ಮಲ್ಲಕವಿ ಇವರ ಕಾವ್ಯಸಾರಗಳು, ಕಾವ್ಯಾವಲೋಕನದ ಲಕ್ಷ್ಯಪದ್ಯಗಳು ಇವು ಒಂದು ಪರಿಮಿತಿಯಲ್ಲಿ ಸಹೃದಯರ ಸದಭಿರುಚಿಯನ್ನು ಪ್ರತಿಬಿಂಬಿಸುತ್ತವೆ. ಮಲ್ಲಿನಾಥ, ಆನಂದವರ್ಧನ, ಅಭಿನವಗುಪ್ತನಂಥ ವ್ಯಾಖ್ಯಾನಕಾರರು ಕನ್ನಡದಲ್ಲಿ ಹುಟ್ಟಿಕೊಳ್ಳಲಿಲ್ಲ. ವ್ಯಾಖ್ಯಾನವೂ ವಿಮರ್ಶೆಯ ಒಂದು ಮುಖವೇ[24]

ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ ಅದುವರೆಗಿನ ಕಾವ್ಯಗಳಿಂದ ಆಯ್ದ ಹದಿನೆಂಟು ವರ್ಣನೆಗಳಿಗೆ ಅನುಗುಣವಾಗಿ ಸಾರರೂಪಿಯಾದ ಭಾಗಗಳಿಂದ ಸಿದ್ದಗೊಂಡ ಕಾವ್ಯ. ಕಾವ್ಯಗಳ ಬೇರೆ ಬೇರೆ ಭಾಗಗಳನ್ನು ಕತ್ತರಿಸಿ ಸಂಯೋಜಿಸಿದ ಕಾವ್ಯ. ಪ್ರಾಚೀನ ಕಾವ್ಯಗಳ ವಿಮರ್ಶೆಯು ಪರೋಕ್ಷವಾಗಿ ಪ್ರಕಟಗೊಂಡಿರುವ ಕಾವ್ಯ. ವಿಮರ್ಶೆಯು ಸಂಗ್ರಹ ಮಾದರಿಯಲ್ಲಿ ಪ್ರಕಟವಾಗಿರುವ ಕಾವ್ಯ. ಮಲ್ಲಿಕಾರ್ಜುನನನ್ನು ಅನುಸರಿಸಿ ಮಲ್ಲಕವಿಯು ಕಾವ್ಯಸಾರ ಎಂಬ ತನ್ನದೆ ಆದ ಸಂಗ್ರಹ ಗ್ರಂಥವನ್ನು ಸಂಯೋಜಿಸಿದ್ದಾನೆ. ಮಲ್ಲಿಕಾರ್ಜುನನಾಗಲೀ ಮಲ್ಲಕವಿಯಾಗಲೀ ತಾವು ತಮ್ಮ ಆಕರಗಳನ್ನು ಪ್ರತಿ ಪದ್ಯಗಳಿಗೆ ನಮೂದಿಸಿಲ್ಲ. ಹೀಗಾಗಿ ಮಲ್ಲಿಕಾರ್ಜುನನ ಸುಮಾರು ಒಂದು ಸಾವಿರ ಪದ್ಯಗಳಿಗೆ, ಮಲ್ಲಕವಿಯ ಸುಮಾರು 2055 ಪದ್ಯಗಳಿಗೆ ಆಕರಗಳು ದೊರಕಿಲ್ಲ. ಪ್ರತಿ ಪದ್ಯಗಳಿಗು ಇವರು ಆಕರಗಳನ್ನು ನೀಡದೆ ಇರುವುದರ ಹಿಂದಿನ ಉದ್ದೇಶವು ತಮ್ಮ ಗ್ರಂಥವನ್ನು ಒಂದು ಸರ್ವಸುಂದರ ಸ್ವತಂತ್ರ ಕಾವ್ಯವನ್ನಾಗಿ ರೂಪಿಸುವುದು ಇರಬಹುದು. ಮಲ್ಲಿಕಾರ್ಜುನ, ಮಲ್ಲಕವಿ, ಅಭಿನವ ವಾದಿ ವಿದ್ಯಾನಂದ ಇವರ ಕಾವ್ಯಗಳಲ್ಲದೆ ಕಾವ್ಯಾವಲೋಕನ, ಕವಿರಾಜಮಾರ್ಗ, ಛಂದೋಂಬುಧಿ, ಭಾಷಾಭೂಷಣ, ಶಬ್ದಮಣಿ ದರ್ಪಣಂ ಇತ್ಯಾದಿ ಗ್ರಂಥಗಳಲ್ಲು ಅನೇಕ ಪದ್ಯಗಳು ಉದಾಹೃತವಾಗಿವೆ. ಈ ಪದ್ಯಗಳಲ್ಲು ಅನೇಕ ಪದ್ಯಗಳಿಗೆ ಆಕರ ಸಿಕ್ಕಿಲ್ಲ. ಆಧುನಿಕ ಸಂದರ್ಭದ ಕಾಪಿರೈಟಿನ ಯುಗದಲ್ಲಿ ನಾವಿಂದು ಆಕರಗಳನ್ನು ಹೇಳುವುದು ವಾಡಿಕೆಯಾಗಿದೆ. ಕೆಲವೊಮ್ಮೆ ಇದು ಕಾನೂನುಬದ್ಧ ಕೆಲಸವೂ ಆಗಿದೆ. ಆದರೆ ನಮ್ಮ ಪ್ರಾಚೀನರಿಗೆ ಇದೊಂದು ಅನುಸರಿಸಬೇಕಾದ ನಿಯಮವಾಗಿ ಎಂದೂ ಕಾಡಿಲ್ಲ.

ತನ್ನದು ಸಂಯೋಜಿತ ಗ್ರಂಥವೆಂದು ಮಲ್ಲಿಕಾರ್ಜುನ ಹೇಳಿಕೊಂಡರೆ, ಮಲ್ಲಕವಿಯು ತನ್ನದು ತಾನೇ ನಿರ್ಮಿಸಿದ ಮಹಾಪ್ರಬಂಧ ಎಂದು ಹೇಳಿಕೊಂಡಿದ್ದಾನೆ. ಶೂದ್ರಕನ 'ಕಾವ್ಯಸಾರಂ'ದಿಂದ ಮಲ್ಲಿಕಾರ್ಜುನ ಹನ್ನೊಂದು ಪದ್ಯಗಳನ್ನು ತೆಗೆದುಕೊಂಡಿದ್ದಾನೆ. ಗಿರಿಜಾ ಕಲ್ಯಾಣದಿಂದ 27 ಪದ್ಯಗಳನ್ನು ತೆಗೆದುಕೊಂಡಿದ್ದಾನೆ. ಆದರೆ ವಚನ, ರಗಳೆ ಷಟ್ಪದಿ ಕಾವ್ಯಗಳಿಂದ ಯಾವ ಪದ್ಯಗಳನ್ನೂ ಸ್ವೀಕರಿಸಿಲ್ಲ. ಗಿರಿಜಾಕಲ್ಯಾಣದಿಂದ ಪದ್ಯಗಳನ್ನು ಸ್ವೀಕರಿಸಿ ರಗಳೆಗಳಿಂದ, ರಾಘವಾಂಕನ ಷಟ್ಪದಿ ಕಾವ್ಯಗಳಿಂದ ಯಾವ ಪದ್ಯಗಳನ್ನೂ ಸ್ವೀಕರಿಸಿಲ್ಲವೆಂದರೆ ಇದಕ್ಕೆ ಕಾರಣವೇನಿರಬಹುದು? ಅಷ್ಟಾದಶ ವರ್ಣನೆಗೆ ಅನುಗುಣವಾಗಿ

ತನ್ನದೂ ಒಂದು ಕಾವ್ಯ ಎಂಬಂತೆ ಈತ ಸಂಗ್ರಹವನ್ನು ರಚಿಸಿದ್ದಾನೆ. ಹಾಗಾಗಿ ಈತ ಅಷ್ಟಾದಶ ವರ್ಣನೆಗೆ ಅನುಗುಣವಾಗಿ ರಚಿತವಾಗಿರುವ ಕಾವ್ಯಭಾಗಗಳನ್ನು ಮಾತ್ರ ಸ್ವೀಕರಿಸಿದ್ದಾನೆ. ಅಷ್ಟಾದಶ ವರ್ಣನೆಗೆ ಅನುಗುಣವಾಗಿ ಬರೆಯದಿರುವ ಪದ್ಯಗಳನ್ನು ಸ್ವೀಕರಿಸಿಲ್ಲ. ಆದರೆ ಷಟ್ಪದಿ ಕಾವ್ಯಗಳಿಂದ ಈತ ಪದ್ಯಗಳನ್ನು ಸ್ವೀಕರಿಸದೇ ಇರುವುದಕ್ಕೆ ಮಾತ್ರ ಕಾರಣಗಳಿಲ್ಲ. ಮಲ್ಲಿಕಾರ್ಜುನನನ್ನೆ ಅನುಸರಿಸಿ ಕಾವ್ಯಸಾರ ಎಂಬ ಸಂಗ್ರಹ ಗ್ರಂಥ ಸಿದ್ಧಪಡಿಸಿರುವ ಮಲ್ಲಕವಿಯಲ್ಲಿ ರನ್ನನ ಗದಾಯುದ್ಧ ಅಥವಾ ಸಾಹಸಭೀಮ ವಿಜಯದಿಂದ ಪದ್ಯಗಳು ಉದಾಹೃತವಾಗದೆ ಇರುವುದು ಕೂಡ ಆಶ್ಚರ್ಯಕರವಾಗಿದೆ. ಕವಿಸ್ತವಾವಸರದಲ್ಲಿ ಮೊದಲು ಆತನ ಹೆಸರಿದೆ. ಅವನ ಅಜಿತಪುರಾಣದಿಂದ ಪದ್ಯಗಳು ಉದಾಹೃತವಾಗಿವೆ. ಕಾವ್ಯಸಾರದ ಸಂಕಲನದ ಕಾಲಕ್ಕೆ ಗದಾಯುದ್ಧದ ಪರಿಚಯವಾಗಿರಲಿಲ್ಲವೆ? ಅಥವಾ ಅದರ ಪ್ರತಿಗಳು ಉಪಲಬ್ಧವಾಗಿರಲಿಲ್ಲವೆ? ಗ್ರಂಥವು ಸಂಯೋಜನಕಾರನ ಮೆಚ್ಚಿಗೆಯನ್ನು ಪಡೆದಿರಲಾರದೆಂಬುದು ಮಾತ್ರ ಅಸಂಭಾವ್ಯ.[25]

ಮಲ್ಲಿಕಾರ್ಜುನ ಲೀಲಾವತಿಯಿಂದ 204 ಪದ್ಯಗಳನ್ನು, ಜಗನ್ನಾಥ ವಿಜಯದಿಂದ 150 ಪದ್ಯಗಳನ್ನು ಸ್ವೀಕರಿಸಿದರೆ, ಮಲ್ಲಕವಿ ಲೀಲಾವತಿಯಿಂದ 262 ಪದ್ಯಗಳನ್ನು ಜಗನ್ನಾಥ ವಿಜಯದಿಂದ 236 ಪದ್ಯಗಳನ್ನು ತೆಗೆದುಕೊಂಡಿದ್ದಾನೆ. ಮಲ್ಲಿಕಾರ್ಜುನ ಅನಂತನಾಥ ಪುರಾಣದಿಂದ 203 ಪದ್ಯಗಳನ್ನು ತೆಗೆದುಕೊಂಡರೆ ಮಲ್ಲಕವಿ ಅನಂತನಾಥ ಪುರಾಣದಿಂದ ಕೇವಲ 68 ಪದ್ಯಗಳನ್ನು ಮಾತ್ರ ತೆಗೆದುಕೊಳ್ಳುತ್ತಾನೆ. ಮಲ್ಲಿಕಾರ್ಜುನ ಚಂದ್ರಪ್ರಭ ಪುರಾಣದಿಂದ 170 ಪದ್ಯಗಳನ್ನು ಸ್ವೀಕರಿಸಿದರೆ. ಮಲ್ಲಕವಿ 72 ಪದ್ಯಗಳನ್ನು ಮಾತ್ರ ಸ್ವೀಕರಿಸಿದ್ದಾನೆ. ಗಿರಿಜಾಕಲ್ಯಾಣದಿಂದ ಮಲ್ಲಿಕಾರ್ಜುನ 27 ಪದ್ಯಗಳನ್ನು ಮಾತ್ರ ತೆಗೆದುಕೊಂಡರೆ ಮಲ್ಲಕವಿ ಅಲ್ಲಿಂದ 172 ಪದ್ಯಗಳನ್ನು ತೆಗೆದುಕೊಂಡಿದ್ದಾನೆ. ಈ ವ್ಯತ್ಯಾಸಗಳಿಗೆ ಕಾರಣವೇನು?

ಮಲ್ಲಿಕಾರ್ಜುನ ಆದಿಪುರಾಣದಿಂದ 37 ಪದ್ಯಗಳನ್ನು, ವಿಕ್ರಮಾರ್ಜುನ ವಿಜಯದಿಂದ 30 ಪದ್ಯಗಳನ್ನು ಮಾತ್ರ ಸಂಕಲಿಸಿದ್ದಾನೆ. ನಮ್ಮ ಇಂದಿನ ವಿಮರ್ಶೆಯು ಯಾವ ಕಾವ್ಯಗಳನ್ನು ಉತ್ತಮವಾದುವೆಂದು ಹೆಚ್ಚಿನ ಅವಲೋಕನಕ್ಕೆ ಗುರಿಪಡಿಸಿದೆಯೋ ಆ ಕಾವ್ಯಗಳಿಗಿಂತ ಬೇರೆಯೇ ಆದ ಕಾವ್ಯಗಳ ಕಡೆ ಈತ ತನ್ನ ಗಮನ ಕೇಂದ್ರೀಕರಿಸಿದ್ದಾನೆ.[26] ಮಲ್ಲಿಕಾರ್ಜುನನ ಸಂಪಾದನೆಯನ್ನೆ ಮಲ್ಲಕವಿ ಅನುಸರಿಸಿದ್ದರೂ ತನಗೆ ಬೇಕಾದಂತೆ ಸಂಗ್ರಹವನ್ನು ಮಾರ್ಪಡಿಸಿದ್ದಾನೆ. ಸೂಕ್ತಿ ಸುಧಾರ್ಣವದಲ್ಲಿ ಒಟ್ಟು 2200 ಪದ್ಯಗಳಿದ್ದರೆ, ಮಲ್ಲಕವಿ ಅಲ್ಲಿಂದ ಕೇವಲ 730 ಪದ್ಯಗಳನ್ನು ಮಾತ್ರ ಸ್ವೀಕರಿಸಿ ಮಿಕ್ಕ ಘಟಕಗಳನ್ನು ತಾನೇ ಆಯ್ಕೆ ಮಾಡಿ ಒಟ್ಟು 3555 ಪದ್ಯಗಳನ್ನು ಸಂಕಲಿಸಿದ್ದಾನೆ. [27]

ಮಲ್ಲಕವಿಯ ಕಾವ್ಯಸಾರ ಬಹುಶಃ ಸಾಕಷ್ಟು ಜನರಿಂದ ಪರಿಷ್ಕಾರ ಮತ್ತು ಸೇರ್ಪಡೆಗಳಿಗೆ ಒಳಗಾಗುತ್ತ ಬಂದು ಅವನಲ್ಲಿ ಈ ಸ್ಥಿತಿಗೆ ತಲುಪಿರಬಹುದು. ಭಿನ್ನ ಸಂಪಾದಕರ ಕಾವ್ಯಾಭಿರುಚಿ, ಸಂವೇದನೆ, ಸಾಂಸ್ಕೃತಿಕ ಹಿನ್ನೆಲೆಗಳು ಇಂಥ ಸಾಂಪಾದನೆಗಳಿಗೆ ಕಾರಣವಾಗಿರಬಹುದು. ಈ ಸಂಪಾದನೆಗಳನ್ನು ಕೇವಲ ವ್ಯಕ್ತಿಗಳ ಸಂವೇದನೆಗಳನ್ನಾಗಿ ನೋಡದೆ ಕಾಲಮಾನದ ಸಂವೇದನೆಗಳನ್ನಾಗಿ ಕೂಡ ನೋಡಲು ಸಾಧ್ಯ. ಕಾವ್ಯಪಠ್ಯಗಳೊಂದಿಗೆ ಬೇರೆ ಬೇರೆ ಕಾಲವು, ಬೇರೆ ಬೇರೆ ಸಮುದಾಯವು ಅನುಸಂಧಾನ ನಡೆಸುತ್ತ ಬಂದ ಬಗೆಯನ್ನು ಸಂಕಲನಗಳ ಚರಿತ್ರೆಯಿಂದ ತಿಳಿಯಬಹುದು.

ಮಲ್ಲಿಕಾರ್ಜುನನ ಸಂಕಲನ ಕಾರ್ಯದಲ್ಲಿ ಆತನ ವಿವೇಕ, ವಿಚಾರಪರತೆ, ಅಭಿರುಚಿ ಮೊದಲಾದವು ಸ್ಪಷ್ಟವಾಗುತ್ತವೆ. ಅವನು ಆರಿಸಿರುವ ಪದ್ಯಗಳಲ್ಲಿ ಯಾವುದಾದರೂ ಒಂದು ಬಗೆಯ ಸೊಗಸಿರುತ್ತದೆ. ಶಬ್ದಾಲಂಕಾರ, ಅರ್ಥಾಲಂಕಾರ, ರಸಭಾವಗಳು, ಉಕ್ತಿವೈಚಿತ್ರ್ಯ, ವರ್ಣನಾ ವೈಖರಿ–ಹೀಗೆ ಒಂದೊಂದು ದೃಷ್ಟಿಯಿಂದ ಒಂದೊಂದು ಪದ್ಯವನ್ನು ಆರಿಸಿಕೊಂಡಿರುತ್ತಾನೆ. ಆತನಿಗೆ ವೈದರ್ಭಿ ಶೈಲಿಯಲ್ಲಿ ಹೆಚ್ಚು ಒಲವಿರುವ ಹಾಗೆ ಕಾಣುತ್ತದೆ. ಆದರೂ ಸೂಕ್ತಿ ಸುಧಾರ್ಣವವು ಪ್ರಕೃತಿವರ್ಣನಾ ದೃಷ್ಟಿಯನ್ನೇ–ಅಷ್ಟಾದಶವರ್ಣನೆಗಳನ್ನೆ–ಮುಖ್ಯವಾಗಿ ಇಟ್ಟುಕೊಂಡಿರುವುದರಿಂದ ಇದರಲ್ಲಿ ಸತ್ಕಾವ್ಯದ ಜೀವವಾದ ಭಾವಪ್ರದರ್ಶನಕ್ಕೆ, ಸನ್ನಿವೇಶಗಳ ಸೊಬಗಿಗೆ, ಕಥಾಸಂವಿಧಾನ ಚಾತುರ್ಯಕ್ಕೆ ಅವಕಾಶವಿಲ್ಲ. ಕಾವ್ಯಾವಲೋಕನದಲ್ಲಿ ಇರುವಂತೆ ಭಾವವ್ಯಂಜಕಗಳಾದ ಪದ್ಯಗಳು ಇದರಲ್ಲಿಲ್ಲ. ಆದುದರಿಂದ ಇದನ್ನು ಕನ್ನಡ ಸಾಹಿತ್ಯದ ಉತ್ತಮ ಭಾಗದ ಮಾದರಿ ಎಂಬುದಾಗಿ ಹೇಳಲು ಸಾಧ್ಯವಿಲ್ಲ.[28] ಆದರೆ ಅದುವರೆಗಿನ ಸಾಹಿತ್ಯದ ವರ್ಣನಾ ದೃಷ್ಟಿಯ ಒಂದು ಓದು ಇವನದು ಎನ್ನುವುದರಲ್ಲಿ ಎರಡು ಮಾತಿಲ್ಲ. ಒಂದೊಂದು

ಓದಿಗೂ ಅದರದೇ ಆದ ದೃಷ್ಟಿಕೋನ ಇದ್ದಾಗ; ಆ ದೃಷ್ಟಿಕೋನದ ಮಿತಿ ಸಹಜವಾಗಿಯೇ ಆಯಾ ಓದಿಗೆ ತಗಲಿಕೊಳ್ಳುತ್ತದೆ. ಇಲ್ಲೂ ಹೀಗೇ ಆಗಿದೆ.

**1.14. ಸಂಪಾದನೆಗಳು–ವಿಮರ್ಶೆ**

ಒಂದೊಂದು ಶೂನ್ಯಸಂಪಾದನೆಗಳನ್ನೂ ವಚನ ವಾಙ್ಮಯದ ಒಂದೊಂದು ಓದುಗಳು ಅಥವಾ ವ್ಯಾಖ್ಯಾನಗಳು ಎನ್ನಬಹುದು. ಯಾವುದೇ ವ್ಯಾಖ್ಯಾನಕಾರ ವ್ಯಾಖ್ಯಾನವನ್ನು ನಿಮಿತ್ತವಾಗಿಟ್ಟುಕೊಂಡು ತನ್ನ ಸಮಾಜ ಮತ್ತು ರಾಜಕೀಯ ಮದ್ಯಪ್ರವೇಶವನ್ನು ಮೂಲಪಠ್ಯದಲ್ಲಿ ಒಳಸೇರಿಸುವ ಪ್ರಯತ್ನ ಮಾಡುತ್ತಿರುತ್ತಾನೆ. ಹೀಗಾಗಿ ವ್ಯಾಖ್ಯಾನಕಾರರಿಗೆ ಮೂಲ ಪಠ್ಯದ ಮುಖಾಂತರವಾಗಿ ತಮ್ಮ ಮತ್ತು ಸಮಾಜದ ಸಂಬಂಧದ ಬಗ್ಗೆ ಸಂದೇಶ ತಿಳಿಸಲು ಸಾಧ್ಯವಾಗುತ್ತದೆ. ಯಾವ ಸಮಾಜ ಈ ಸಾಧ್ಯತೆಯನ್ನು ತಡೆಯುತ್ತದೆಯೊ ಅದು ಉಳಿಯುವುದಿಲ್ಲ. ಅದೊಂದು ಮೃತ ಸಮಾಜವಾಗಿಬಿಡುತ್ತದೆ.[29]

ವಚನಗಳ ಶೂನ್ಯ ಸಂಪಾದನೆಗಳಲ್ಲಿ ವೀರಶೈವ ತತ್ವ ಸಿದ್ಧಾಂತಗಳ ಅನ್ವಯೀಕರಣ, ಮತಮಾನ್ಯಗಳ ಸ್ಥಿರೀಕರಣ, ವೀರಶೈವ ಧರ್ಮದ ಜಂಗಮೀಕರಣ ಇತ್ಯಾದಿ ರಾಜಕಾರಣಗಳು ಕೆಲಸ ಮಾಡಿವೆಯಾದರೂ ವಚನಗಳ ಸಂಪಾದನಾ ಕಾರ್ಯ ನಡೆಯದೇ ಹೋಗಿದ್ದರೆ ಈಗಿನಷ್ಟು ವಚನಗಳು ನಮಗೆ ದೊರಕುತ್ತಿರಲಿಲ್ಲ. ಮುದ್ರಣ ತಂತ್ರಜ್ಞಾನ ಇಲ್ಲದ, ಆದರೆ ಧಾರ್ಮಿಕ ಮೇಲಾಟಗಳು ಜೋರಾಗಿದ್ದ ಕಾಲದಲ್ಲಿ ಇಂಥ ಸಂಪಾದನಾ ಕಾರ್ಯ ನಡೆದದ್ದು ಎಷ್ಟು ಉಪಯುಕ್ತವಾದದ್ದು ಎಂಬುದನ್ನು ವಿವರಿಸಿ ಹೇಳಬೇಕಿಲ್ಲ. ವಚನಶಾಸ್ತ್ರ/ಸಾಹಿತ್ಯದ ಸಂರಕ್ಷಣೆ, ಪೋಷಣೆ, ಜನ ನಡಾವಳಿಯ ರೂಪಣೆಗಾಗಿ ಚರಿತ್ರೆಯನ್ನು ವರ್ತಮಾನೀಕರಿಸುವ ಕೆಲಸಗಳು ವಚನ ಸಂಪಾದನೆಗಳಲ್ಲಿ ನಡೆದಿವೆ.

ವಚನಗಳನ್ನು ಸಂಗ್ರಹಿಸುವಾಗ, ಶೂನ್ಯಸಂಪಾದಿಸುವಾಗ ವಚನಗಳಲ್ಲಿ ವ್ಯಕ್ತವಾಗಿರುವ ತತ್ವ ಸಂದೇಶಗಳನ್ನು ಜನಕ್ಕೆ ತಲುಪಿಸುವ ಕೆಲಸ ನಡೆಯಿತೋ? ಅಥವಾ ವಚನಗಳ ಮಡೀಕರಣ, ವಚನಗಳಿಗೆ ಧರ್ಮದ ಅನ್ವಯೀಕರಣ ನಡೆಯಿತೋ? ವಚನಗಳು ಏನು ಹೇಳುತ್ತವೆ ಎಂಬುದನ್ನು ವಚನಗಳಿಂದ ಕಂಡರೋ ಅಥವಾ ತಮ ತಮಗೆ ಬೇಕಾದ್ದನ್ನು ವಚನಗಳಲ್ಲಿ ಕಂಡರೋ? ಇದೆಲ್ಲ ಚರ್ಚಾರ್ಹವಾದದ್ದು. ಆದರೆ ವಚನಗಳ ಅನುಸಂಧಾನದ ಹಿಂದೆ ಪ್ರಬಲ ಹಿತಾಸಕ್ತಿಗಳು ಕೆಲಸ ಮಾಡಿವೆ ಎಂಬುದು ಮಾತ್ರ ನಿಜ. ಈ ಹಿತಾಸಕ್ತಿಗಳು ಉಂಟಾಗಲು ಇದ್ದ ಸಾಂಸ್ಕೃತಿಕ ಒತ್ತಡಗಳೇನು? ಎಂಬುದು ಕೂಡ ಚರ್ಚಾರ್ಹವಾದದ್ದು. ಈ ಹಿತಾಸಕ್ತಿಗಳನ್ನೇ ನಾವು ವಿಮರ್ಶನ ಪ್ರಜ್ಞೆಗಳು ಎಂದು ಕರೆಯಲು ಅಡ್ಡಿಯಿಲ್ಲ.

ವಚನಕಾರರ ವಚನಗಳು ಮತ್ತು ಶೂನ್ಯಸಂಪಾದನಾ ಪಠ್ಯಗಳ ನಡುವೆ ಅರ್ಥ–ಪರಿಣಾಮಗಳಲ್ಲಿ ಸಾಕಷ್ಟು ಅಂತರ ಉಂಟಾಗಿದೆ ಎಂಬುದು ಮಾತ್ರ ಮೇಲ್ನೋಟಕ್ಕೇ ತಿಳಿಯುತ್ತದೆ. ಡಾ.ಎಲ್.ಬಸವರಾಜು ಅವರ ಶೂನ್ಯಸಂಪಾದನೆಯ ಸಂಪಾದಿತ ಆವೃತ್ತಿಯಲ್ಲಿನ 7ನೇ ಅನುಬಂಧವನ್ನು ನೋಡಿದರೆ ನಾಲ್ಕೂ ಶೂನ್ಯಸಂಪಾದನೆಗಳಲ್ಲಿ ಏನೇನು ವ್ಯತ್ಯಾಸಗಳಾಗಿವೆ ಎಂಬುದನ್ನು ಸ್ಥೂಲವಾಗಿ ತಿಳಿಯಬಹುದು. ವಚನಗಳ ಕ್ರಮವ್ಯತ್ಯಯ, ಸಂಖ್ಯಾವ್ಯತ್ಯಯಗಳನ್ನೂ ಸಮಗ್ರವಾಗಿ ತಿಳಿಯಬಹುದು.[30] ತಮ್ಮದೇ 'ಓದು'ಗಳನ್ನು ಪ್ರಸ್ತುತಪಡಿಸುವ ಯಾವುದೇ ಯತ್ನಗಳಲ್ಲಿ ಇಂತಹ ಅಂತರ ಉಂಟಾಗುವುದು ಸಾಮಾನ್ಯ. ಇಂಥ ಸಂಪಾದನಾ ಸಂಪ್ರದಾಯವನ್ನು ನಮ್ಮ ಪ್ರಾಚೀನ ವಿಮರ್ಶೆಯ ಒಂದು ಬಗೆ ಎಂದೇ ತಿಳಿಯಬಹುದು.

ಗೊಗ್ಗಯ್ಯನ ಪ್ರಸಂಗ ಮೊದಲಿಗೆ ಕಾಣಿಸಿಕೊಂಡಿರುವುದು ಚಾಮರಸನ ಪ್ರಭುಲಿಂಗಲೀಲೆಯಲ್ಲಿ. ಈ ಪ್ರಸಂಗ ಶಿವಗಣಪ್ರಸಾದಿ ಮತ್ತು ಹಲಗೆಯಾರ್ಯರ ಸಂಪಾದನೆಗಳಲ್ಲಿ ಇಲ್ಲ. ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಗೂಳೂರು ಸಿದ್ಧವೀರಣ್ಣರು ಇದನ್ನು ತಮ್ಮ ಸಂಪಾದನೆಗೆ ಸೇರಿಸಿಕೊಂಡಿದ್ದಾರೆ. ಹರಳಯ್ಯ ಮಧುವಯ್ಯರ ಘಟನೆಯನ್ನೂ ಇವರು ಸೇರಿಸಿದ್ದಾರೆ. ಆದರೆ ಈ ಘಟನೆ ಚಾಮರಸನಲ್ಲಿಲ್ಲ.[31] ಇವಲ್ಲದೆ ಮಹಲಿಂಗನ ಏಕೋತ್ತರ ಶತಸ್ಥಲ, ಜಕ್ಕಣಾರ್ಯನ ಏಕೋತ್ತರ ಶತಸ್ಥಲ, ಸಿದ್ದಲಿಂಗೇಶನ ಏಕೋತ್ತರ ಶತಸ್ಥಲ, ಚೆನ್ನಂಜೆದೇವನ ಮಿಶ್ರಸ್ತೋತ್ರದ ವಚನ, ಆಚಾರದ ವಚನ, ಬಸವಸ್ತೋತ್ರದ ವಚನಗಳು, ಕಲ್ಲು ಮಠದ ಪ್ರಭುದೇವನ ಲಿಂಗಲೀಲಾ ವಿಲಾಸ ಚಾರಿತ್ರ, ಶಿವಲಿಂಗದೇವನ ಶಿವಯೋಗ ಪ್ರದೀಪಿಕೆ, ಮಗ್ಗೆಯ ಮಾಯಿದೇವನ ಏಕೋತ್ತರ ಷಟ್ಸ್ಥಲ, ಕರಸ್ಥಲ ವೀರಣ್ಣೊಡೆಯನ ಕರಸ್ಥಲ ವಚನ, ಗುಬ್ಬಿಯ ಮಲ್ಲಣ್ಣನ ಗಣಭಾಷ್ಯ

ರತ್ನಮಾಲೆ ಮುಂತಾದ ಸಂಪಾದನೆಗಳೂ ಇವೆ. ಇವುಗಳನ್ನೆಲ್ಲ ನೋಡಿದರೆ ವಚನಗಳ ಅನುಸಂಧಾನಗಳಲ್ಲಿ ಪ್ರಧಾನವಾಗಿ ಮೂರು ಧಾರೆಗಳಿರುವಂತೆ ತೋರುತ್ತದೆ.

ಹರಿಹರ, ರಾಘವ ಪಂಡಿತ, ಚಾಮರಸ ಇಂಥವರ ಕಾವ್ಯಗಳ ಧಾರೆ, ಲಕ್ಕಣದಂಡೇಶ, ಸಿಂಗಿರಾಜ, ಮಹಲಿಂಗಾದಿಗಳ ಸಂಪಾದನೆ. ಟೀಕು ಕೃತಿಗಳ ಧಾರೆ, ಶಿವಗಣಪ್ರಸಾದಿ ಮಹದೇವಯ್ಯ, ಹಲಗೆಯಾರ‍್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣ ಇವರುಗಳ ಶೂನ್ಯ ಸಂಪಾದನೆಗಳ ಧಾರೆ. ಇಲ್ಲೆಲ್ಲ 1. ವಚನಗಳನ್ನು ಚರಿತ್ರೆಯ ಆಕರವನ್ನಾಗಿ ಬಳಸುವ 2. ರಗಳೆ, ಷಟ್ಪದಿ, ಕಂದ, ಸಾಂಗತ್ಯಾದಿ ಹೊಸ ಹೊಸ ಛಂದಸ್ಸುಗಳಿಗೆ ತಿರುಗಿಸುವ 3. ಪುರಾಣೀಕರಿಸುವ 4. ತತ್ವಜಿಜ್ಞಾಸೆ, ಜೀವನ ಮೀಮಾಂಸೆಗಳ ಚರ್ಚೆಗೆ ಬಳಸುವ 5. ಭಿನ್ನ ಭಿನ್ನ ಅರ್ಥವ್ಯಾಖ್ಯಾನಗಳಿಗೆ/ಟೀಕುಗಳಿಗೆ ಒಳಗು ಮಾಡುವ 6. ಧರ್ಮದ ಆಚಾರಕ್ಕೆ ವಿಚಾರ ಪಠ್ಯಗಳನ್ನಾಗಿ ಪ್ರಮಾಣೀಕರಿಸುವ 7. ಕಥಿಸುವ, ಮರುಕಥಿಸುವ 8. ವಚನಗಳಿಗೆ ಕಾಲ–ಸಂದರ್ಭಗಳನ್ನು ಕಟ್ಟಿಕೊಡುವ ಮತ್ತು ಅಪಸಾಂದರ್ಭೀಕರಿಸುವ ಇತ್ಯಾದಿಯಾಗಿ ಹಲವು ಕ್ರಿಯೆಗಳು ಇಲ್ಲಿ ಜರುಗಿವೆ. ಇವೆಲ್ಲವೂ ಕೂಡ ವಚನಗಳಿಗೆ ಹುಟ್ಟಿದ ವಿಮರ್ಶೆಯ ಬೇರೆ ಬೇರೆ ವಿನ್ಯಾಸಗಳೇ ಆಗಿವೆ. ಇಂತಹ ಮರುಕಥನ, ವ್ಯಾಖ್ಯಾನ, ಪುರಾಣಿಕರಣ, ಧಾರ್ಮೀಕರಣ ಇತ್ಯಾದಿಗಳು ನಮ್ಮ ವಿಮರ್ಶೆಯ ಚಹರೆಗಳೂ ರೂಪಗಳೂ ಕಾರ್ಯಗಳೂ ಆಗಿವೆ.

ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳಿಗೆ ಹೊಂದಿಸುವ, ವೀರಶೈವಧರ್ಮ–ಶಿವಾಚಾರಗಳಿಗೆ ವಚನಗಳನ್ನು ಅನ್ವಯಮಾಡುವ, ಪರಸ್ಪರರ ಭಿನ್ನತೆ–ಸಾಮ್ಯಗಳ ಮುಖಾಮುಖಿ ಮಾಡುವ ಮೂಲಕ ಸಾವಿರಾರು ಬಿಡಿ ಪಠ್ಯಗಳನ್ನು ಸಂಕಲಿಸಿ ಸಂವಾದರೂಪಿ ಮಹಾಪಠ್ಯವೊಂದನ್ನು ನಿರ್ಮಾಣ ಮಾಡುವ, ಆ ಮೂಲಕ ಧರ್ಮಕ್ಕೆ ಬೇಕಾದ ಪವಿತ್ರ (ಪ್ರಮಾಣ) ಗ್ರಂಥಗಳನ್ನು ನಿರ್ಮಾಣ ಮಾಡುವ ಕಾರ್ಯಗಳು ಇಲ್ಲಿ ಮುಖ್ಯವಾಗಿ ನಡೆದಿವೆ. ಇಲ್ಲಿನ ಸಂವಾದರೂಪಿ ಮಹಾಪಠ್ಯಗಳ ನಿರ್ಮಾಣದ ಮೇಲಿನ ಮೂರೂ ಧಾರೆಗಳಲ್ಲಿ ಕಥನೀಕರಣ, ಮರು ಕಥನೀಕರಣಗಳು ಆಯಾಚಿತವಾಗಿ ಸಂಭವಿಸಿವೆ. ನಾಲ್ಕೂ ಶೂನ್ಯಸಂಪಾದನಕಾರರು ವಚನಗಳನ್ನು ಸಂವಾದಪ್ರಸಂಗಗಳನ್ನಾಗಿ ಸಂಯೋಜಿಸಿ, ವಚನಗಳನ್ನು ಸಂದರ್ಭಗಳಿಗೆ ತಕ್ಕಂತೆ ಅಲ್ಪ ಸ್ವಲ್ಪ ತಿದ್ದಿ, ನಡುನಡುವೆ ಕಥನಕ್ಕೆ ಬೇಕಾಗುವಷ್ಟು ಗದ್ಯದ ಕೊಂಡಿಗಳನ್ನು ಸೇರಿಸಿ, ಒಟ್ಟಾರೆ ಒಂದು ಮಹಾ ಕಥಾಪ್ರಸಂಗವನ್ನು ನಿರ್ಮಿಸಿದ್ದಾರೆ. ಇಲ್ಲಿ ವ್ಯಕ್ತಿಗಳ, ಸಮುದಾಯದ ಬದುಕು, ಬರಹ(ವಚನ ಶಾಸ್ತ್ರ/ ಕಾವ್ಯ)ಗಳು ಬೇರೆಯಲ್ಲದಂತೆ ಬೆರೆತು ಹೋಗಿವೆ. ಲೋಕ ಮೀಮಾಂಸೆಯನ್ನು, ಜೀವನದರ್ಶನವನ್ನು ಕಟ್ಟಿಕೊಳ್ಳುವ ಕ್ರಿಯೆಗಳು ಇಲ್ಲಿ ನಿತ್ಯ ಬದುಕಿನಲ್ಲಿ ಕಾವ್ಯವನ್ನು ಬಳಸುವ ಕ್ರಿಯೆಗಳೂ ಆಗಿವೆ. ಶೂನ್ಯಸಂಪಾದನೆಗಳಲ್ಲಿನ ಸಾಹಿತ್ಯದ ಅನುಸಂಧಾನವೆಂದರೆ, ವಿಮರ್ಶಾ ಪ್ರಕ್ರಿಯೆ ಎಂದರೆ ಜೀವನ ವಿಧಾನದ ಹುಡುಕಾಟವೇ ಆಗಿದೆ.

ವಚನಗಳನ್ನು ತಿದ್ದುಪಡಿ ಮಾಡುವುದು, ಸಂಪಾದನೆಗಳನ್ನೂ ತಿದ್ದುಪಡಿ ಮಾಡುವುದು ಕಾಲಾನುಕ್ರಮದಲ್ಲಿ ನಡೆಯುತ್ತಲೇ ಬಂದಿದೆ. ವಚನಗಳಲ್ಲಿ ಕೆಲವನ್ನು ಮಾತ್ರ ಆರಿಸಿ ಸಂಪಾದಿಸುವುದು ಮಿಕ್ಕವನ್ನು ತಮ್ಮ ತಾತ್ವಿಕತೆಗೆ ಹೊಂದಿಸಲು ಅಗದೇ ಇರುವವನ್ನು ಬಿಟ್ಟುಬಿಡುವುದು ಕೂಡ ನಡೆಯುತ್ತಲೇ ಬಂದಿದೆ. ಸಾಮಾಜಿಕ, ಧಾರ್ಮಿಕ ಒತ್ತಡಗಳಿಗಾಗಿ, ವರ್ತಮಾನದ ಅಗತ್ಯಗಳಿಗಾಗಿ ಸಾಹಿತ್ಯವನ್ನು ಅನುಸಂಧಾನ ಮಾಡುವಾಗ ಇದೆಲ್ಲವೂ ಸಹಜ. ಆಧುನಿಕ ಕಾಪಿರೈಟಿನ ಕಾಲದಲ್ಲಿ ಇದೆಲ್ಲ ಅಸಹಜವೆಂಬಂತೆ, ಹಸ್ತಕ್ಷೇಪವೆಂಬಂತೆ ತೋರಿದರೂ ಆ ಕಾಲದ ಪಠ್ಯಗಳ ಸಾಮಾಜಿಕ ಬಳಕೆಯ ಪರಿ ಇದು. ವಚನಗಳ ವಿಮರ್ಶೆಯು ಸಾಹಿತ್ಯದ ಅನುಸಂಧಾನದಲ್ಲಿ ಪ್ರಕಟವಾಗಿರುವ ಬಗೆ ಇದು. (ಜೊತೆಗೆ ನೋಡಿ; ಪ್ರಕ್ಷಿಪ್ತಗಳು)

ಶೂನ್ಯ ಸಂಪಾದನೆಗಳನ್ನು ವಚನಗಳ ವಿಮರ್ಶೆ ಎಂದು ಭಾವಿಸಿದ ಕೂಡಲೇ ವಿಮರ್ಶೆಯ ಕಾರ್ಯ ಮತ್ತು ತಾತ್ವಿಕತೆಯ ಬಗೆಗೆ ಕೂಡ ಇವು ತಮ್ಮದೇ ಮಾದರಿಯನ್ನು ಪ್ರಕಟಿಸುತ್ತವೆ ಎನ್ನಿಸುತ್ತದೆ. ಸಾಹಿತ್ಯವನ್ನು ಬಾಳಿಗೆ ತಕ್ಕಂತೆ ಬಳಸುವುದು ಅಥವಾ ಸಾಹಿತ್ಯವನ್ನು ಬಾಳುವುದು ಮತ್ತು ಇತರರು ಬಾಳಲು ಸಾಹಿತ್ಯವನ್ನು ಒದಗಿಸುವುದು ವಿಮರ್ಶೆಯ ಕಾರ್ಯವೆಂಬಂತೆ ಇಲ್ಲಿ ಬಿಂಬಿತವಾಗಿದೆ. ಆದರೆ ಆ ಕಾಲದ ಶೂನ್ಯ ಸಂಪಾದನಕಾರರು ವಚನಗಳನ್ನು ಸಾಹಿತ್ಯ ರಚನೆಗಳೆಂದು ಭಾವಿಸಿದ್ದರೋ? ಇದು ಸ್ವಲ್ಪ ಅನುಮಾನಾಸ್ಪದವೇ. ಅನೇಕ ಶೈವ ಕವಿಗಳು ಹರಿಹರನನ್ನು ನೆನೆಯುತ್ತಾರಾದರೂ ಬಸವಣ್ಣ, ಅಲ್ಲಮರನ್ನು ನೆನೆಯುವುದಿಲ್ಲ. ಫ.ಗು.ಹಳಕಟ್ಟಿಯವರು ವಚನಶಾಸ್ತ್ರ ಸಾರ ಎಂಬ ಹೆಸರಿನಲ್ಲಿ (1926)ವಚನಗಳನ್ನು ಸಂಪಾದಿಸಿ ಪ್ರಕಟಿಸಿದರು. ಆದರೆ ಅವುಗಳನ್ನು ಕಾವ್ಯಗಳೆಂದು ಮಾನ್ಯ ಮಾಡಿದಂತೆ ಕಾಣುವುದಿಲ್ಲ.

ವಚನಗಳಲ್ಲಿ ಕಾವ್ಯ ಲಕ್ಷಣಗಳು ಇವೆ ಎಂದು ಎಂ.ಆರ್.ಶ್ರೀನಿವಾಸಮೂರ್ತಿಯವರು ವಚನಧರ್ಮಸಾರದಲ್ಲಿ (1944) ಚರ್ಚೆ ಆರಂಭಿಸಿದರು. ನಂತರ ಶಿ.ಶಿ.ಬಸವನಾಳರು ಬಸವಣ್ಣನವರ ಷಟ್ಸ್ಥಲದ ವಚನಗಳು(1954) ಎಂದು ಸಂಪಾದನೆ ಮಾಡುತ್ತ ಅವನ್ನು ಸಾಹಿತ್ಯವಾಗಿ ಓದಬೇಕೆಂದು ಪ್ರತಿಪಾದಿಸಿದರು.[32] ಆನಂತರದಲ್ಲಿ ಎಲ್.ಬಸವರಾಜು ಸಾಹಿತ್ಯಕ ಹಿನ್ನೆಲೆಯಿಂದ ಬರಿ ವೀರಶೈವರಿಗಷ್ಟೇ ಅಲ್ಲದೆ ಕನ್ನಡ ಸಾಹಿತ್ಯದ ಆಸಕ್ತರನ್ನು ಉದ್ದೇಶಿಸಿ ವಚನಗಳ ಸಂಪಾದನೆ ಮಾಡಿದರು. ಸಂಪಾದನೆಗಳು ಎಲ್ಲ ಕಾಲದಲ್ಲೂ ಒಂದೆ ಉದ್ದೇಶದಿಂದ ಮಾಡಲ್ಪಟ್ಟಿಲ್ಲ. ಹಾಗೆಯೇ ಸಾಹಿತ್ಯದ ಅನುಸಂಧಾನಗಳು ಸಂಪಾದನೆಗಳ ಮೂಲಕ ವ್ಯಕ್ತಮಾಡಿರುವ ವಿಚಾರಗಳು ಕೂಡ ಕಾಲದಿಂದ ಕಾಲಕ್ಕೆ ಭಿನ್ನವಾಗುತ್ತ ನಡೆದಿವೆ. ಸಾಹಿತ್ಯವನ್ನು ಅನುಸಂಧಾನ ಮಾಡುವ ದೃಷ್ಟಿಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿವೆ. ಭಿನ್ನ ಅನುಸಂಧಾನಗಳು ಸಾಹಿತ್ಯವನ್ನು ಭಿನ್ನ ಓದುಗಳಿಗೆ/ಬಳಕೆಗಳಿಗೆ ಗುರಿ ಮಾಡಿವೆ.

ವೈರುಧ್ಯಗಳಿರುವ ಪಠ್ಯ ಪರಂಪರೆಗಳನ್ನು ಏಕರೂಪೀಕರಣಕ್ಕೆ ಗುರಿಪಡಿಸುವ ಮತ್ತು ಒಂದು ಪ್ರಮಾಣೀಕೃತ ಆಚಾರವನ್ನು ನಿರ್ಮಿಸುವ ಕ್ರಿಯೆಯನ್ನು ಶ್ರೀವಿಜಯನ ಕವಿರಾಜಮಾರ್ಗದಲ್ಲಿಯೂ ಕಾಣಬಹುದು. ಪ್ರಮಾಣೀಕೃತ ಕವಿಮಾರ್ಗವೊಂದನ್ನು ಕವಿರಾಜಮಾರ್ಗವು ಕಟ್ಟಿಕೊಡುವ ಯತ್ನ ಮಾಡಿದರೆ, ಪ್ರಮಾಣೀಕೃತ ಧರ್ಮಮಾರ್ಗವೊಂದನ್ನು ಶೂನ್ಯ ಸಂಪಾದನೆಗಳು ಕಟ್ಟಿಕೊಡುವ ಯತ್ನ ಮಾಡಿವೆ. ಈ ದೃಷ್ಟಿಯಿಂದ ಶೂನ್ಯಸಂಪಾದನೆಗಳನ್ನು ಶೈವಧರ್ಮಮಾರ್ಗಗಳೆಂದು ಕರೆಯಲು ಅಡ್ಡಿಯಿಲ್ಲ.[33]

ಶಿವಲಿಂಗದೇವನ ಶಿವಯೋಗ ಪ್ರದೀಪಿಕೆಯಲ್ಲಿ ಪುರಾತನರ 73 ವಚನಗಳನ್ನು ಸ್ಥಲಗಳಿಗೆ ಅನುಗುಣವಾಗಿ ಸಂಕಲಿಸಲಾಗಿದೆ. ವಚನಗಳಲ್ಲಿನ ಬೆಡಗಿನ ಪದಗಳಿಗೆ ಅರ್ಥವ್ಯಾಖ್ಯಾನ ಬರೆಯಲಾಗಿದೆ. ಮಹಲಿಂಗನ ಏಕೋತ್ತರ ಶತಸ್ಥಲದಲ್ಲಿ ಪೂರ್ವಿಕರ 927 ವಚನಗಳು ಸಂಕಲಿತವಾಗಿವೆ. ಇವುಗಳ ಜೊತೆಗೆ 651 ಸ್ವರಪದಗಳಿವೆ. ಜಕ್ಕಣಾಚಾರ್ಯನು ತನ್ನ ಏಕೋತ್ತರ ಶತಸ್ಥಲದಲ್ಲಿ ವಚನಗಳನ್ನು ಕೈಬಿಟ್ಟು ಸ್ವರವಚನಗಳನ್ನು ಮಾತ್ರ ಸಂಕಲಿಸಿದ್ದಾನೆ. ಫ.ಗು.ಹಳಕಟ್ಟಿಯವರು ಅಚ್ಚು ಹಾಕಿಸಿರುವ ಸಿದ್ಧಲಿಂಗೇಶ್ವರನ ಏಕೋತ್ತರ ಶತಸ್ಥಲದಲ್ಲಿ ಒಂದೊಂದು ಸೂತ್ರ, ವಚನ, ಸ್ವರಪದ, ವೃತ್ತ ಮತ್ತು ಗದ್ಯಗಳನ್ನು ಹೆಣೆಯಲಾಗಿದೆ. ವಚನ ಮತ್ತು ಸ್ವರಪದಗಳನ್ನು ಸ್ಥಲಗಳಿಗೆ ಅನುಗುಣವಾಗಿ ಸಂಕಲಿಸಲಾಗಿದೆ. ಸಿದ್ಧಲಿಂಗೇಶ್ವರ ಪ್ರತಿಯೊಂದು ಸ್ಥಲಕ್ಕೂ ತಾನೇ ಒಂದೊಂದು ವೃತ್ತಗಳನ್ನು ರಚಿಸಿ ಒಟ್ಟು 101 ವೃತ್ತಗಳಿಂದ ಸ್ವತಂತ್ರರಚನೆ, ಸಂಗ್ರಹ, ಸಂಪಾದನೆ, ವ್ಯಾಖ್ಯಾನಗಳ ಮಿಶ್ರತಳಿಯೆಂಬಂತೆ ಕೃತಿಯನ್ನು ಸಿದ್ಧಪಡಿಸಿದ್ದಾನೆ.[34] ಸ್ವತಂತ್ರ ರಚನೆ–ವ್ಯಾಖ್ಯಾನ–ವಿಮರ್ಶೆ–ಸಂಪಾದನೆ–ಮರುಕಥನಗಳನ್ನು ಪ್ರತ್ಯೇಕವೆಂಬಂತೆ ಗ್ರಹಿಸದೆ ಅಖಂಡವಾಗಿ ನೋಡುವ; ಪಠ್ಯಗಳನ್ನು ಕೇವಲ ಸಾಹಿತ್ಯ ಪಠ್ಯಗಳೆಂದು ತಿಳಿಯದೆ ಆಚಾರ ಪಠ್ಯಗಳೆಂದು ತಿಳಿಯುವ; ಪಠ್ಯಗಳನ್ನು ಖಾಸಗಿ ಆಸ್ತಿಯೆಂದು ತಿಳಿಯದೆ ಸಾಮುದಾಯಿಕ ಸ್ವತ್ತಾಗಿ ಕಾಣುವ ದೃಷ್ಟಿಗಳು ಇಂತಹ ಅನುಸಂಧಾನಗಳಲ್ಲಿ ಇವೆ.

ಈ ಎಲ್ಲ ಏಕೋತ್ತರ ಶತಸ್ಥಲಗಳಲ್ಲೂ ಸ್ವರಪದ (ಸ್ವರವಚನ)ಗಳಿಗೆ ರಾಗ–ತಾಳಗಳನ್ನು ಶಾಸ್ತ್ರೀಯವಾಗಿ ನಿರ್ದೇಶಿಸಲಾಗಿದೆ. ಕೆಲವು ಕಡೆ ಬೆಡಗಿನ ಪದಗಳಿಗೆ ಅರ್ಥ ವ್ಯಾಖ್ಯಾನವನ್ನೂ ನೀಡಲಾಗಿದೆ. ರಾಗ ತಾಳಗಳ ನಿರ್ದೇಶನ ನೋಡಿದರೆ ಸ್ವರಪದಗಳನ್ನು ಶಾಸ್ತ್ರೀಯ ಸಂಗೀತದ ರಾಗಗಳಿಗೆ ಅನುಗುಣವಾಗಿ ಹಾಡುವ ಸಂಪ್ರದಾಯಕ್ಕೆ ಅನುಕೂಲವಾಗಲೆಂದು ಸಂಗ್ರಹಿಸಿ ಒದಗಿಸಿದ್ದಾರೆ ಎನಿಸುತ್ತದೆ. ಹಾಗಾಗಿ ಇವು ಸಾಹಿತ್ಯವನ್ನು ಬದುಕಿನಲ್ಲಿ ಬಳಸಲು ನಡೆಸಿರುವ ಯತ್ನಗಳಾಗಿವೆ. ರಾಗಬದ್ಧವಾಗಿ ಸ್ವರಪದ(ಹಾಡು)ಗಳನ್ನು ಬರೆದಿರುವ ಶಿವದಾಸ ವಾಗ್ಗೇಯಕಾರರಲ್ಲಿ ಅಲ್ಲಮ, ಅಕ್ಕ, ಬಸವ, ಸಕಲೇಶ ಮಾದರಸ, ಆದಯ್ಯ, ಬಹುರೂಪಿ ಚೌಡಯ್ಯರೆಲ್ಲ ಇದ್ದಾರೆ.[35] ಧರ್ಮಾಚಾರಗಳಲ್ಲಿ ಸಂಗೀತವೂ ಒಂದು ಆಚಾರವೇ. ಸಾಹಿತ್ಯ ಕೂಡ ಒಂದು ಆಚಾರ ಮಾರ್ಗವೇ. ಇವೆಲ್ಲವೂ ಧರ್ಮವೆಂಬ ಸಂಸ್ಥೆಯ ಭಿನ್ನ ಅಂಗಗಳೂ–ಪರಿಕರಗಳೂ ಹೌದು. ಇಲ್ಲಿ ಸ್ವರವಚನಗಳ ಅನುಸಂಧಾನದಲ್ಲಿ ಸಾಹಿತ್ಯ ಮತ್ತು ಸಂಗೀತಗಳೆರಡೂ ಅಂತರ್‌ಶಿಸ್ತೀಯ ಅನುಸಂಧಾನಕ್ಕೆ ಗುರಿಯಾಗಿವೆ. ವಿಮರ್ಶೆ ಎಂದರೆ ಅದು ಕೇವಲ ಸಾಹಿತ್ಯದ ಮೌಲ್ಯಮಾಪನ–ವಿಶ್ಲೇಷಣೆ–ವ್ಯಾಖ್ಯಾನ ಅಷ್ಟೇ ಅಲ್ಲ. ಅದೊಂದು ಸಾಂಸ್ಕೃತಿಕ ಆಚಾರ. ಅನುಸಂಧಾನ ಕೂಡ. ಇದು ನಮ್ಮ ಪ್ರಾಚೀನ ವಿಮರ್ಶೆಯ ಒಂದು ಬಹು ಮುಖ್ಯ ತಾತ್ವಿಕತೆಯೂ–ವಿನ್ಯಾಸವೂ ಆಗಿದೆ.

ಇನ್ನೊಂದು ಪ್ರಕಾರದ ಸಂಪಾದನೆ ನಮ್ಮಲ್ಲಿದೆ. ಅದೇ ನಾಂದ್ಯ ಸಂಗ್ರಹ. ಶೈವ ಕಾವ್ಯಗಳ ಆದಿ

ಅಂತ್ಯಗಳಲ್ಲಿರುವ ಶಿವಸ್ತೋತ್ರಗಳನ್ನು ಆಯಾ ವಚನಕಾರರ ಭಿನ್ನ ಕವಿಸ್ತೋತ್ರಗಳನ್ನು ಒಟ್ಟಿಗೆ ಸಂಗ್ರಹಿಸಿ ಹಲವರು ನೀಡಿದ್ದಾರೆ. ಬಸವಪುರಾಣ ನಾಂದ್ಯ, ಚೆನ್ನಬಸವಪುರಾಣ ನಾಂದ್ಯ, ಪ್ರಭುದೇವರ ಪುರಾಣದ ನಾಂದ್ಯ ಇಂತಹವು ಕೆಲವು ನಾಂದ್ಯ ಸಂಗ್ರಹಗಳು. ಈ ಸಂಪಾದನೆ-ಸಂಗ್ರಹಗಳನ್ನೆಲ್ಲ ವಿಮರ್ಶೆ ಎನ್ನಲು ಬರುತ್ತದೆಯೋ? ಹೌದು ಬರುತ್ತದೆ. ಸಾಹಿತ್ಯಕ್ಕೆ ಹುಟ್ಟುವ ಪ್ರತಿಕ್ರಿಯೆಗಳು ಅವು ಯಾವ ರೂಪದವೇ ಆಗಿರಲಿ, ಧಾರ್ಮಿಕ ವ್ಯಾಖ್ಯಾನವೇ ಆಗಿರಲಿ, ಆಚಾರಕ್ಕೆ ಬೇಕಾದ ಪಠ್ಯನಿರ್ಮಾಣವೇ ಆಗಿರಲಿ ಅದೂ ವಿಮರ್ಶೆಯೇ ಅಲ್ಲವೇ?

ಪಠ್ಯಗಳು ಪವಿತ್ರವೆಂದು ಭಾವಿಸಿದಾಗ ಅವುಗಳ ಬಗೆಗೆ ಚಿಕಿತ್ಸಕ ವಿಶ್ಲೇಷಣೆ ಹುಟ್ಟುವ ಬದಲು ಆರಾಧನೆ ಹುಟ್ಟುತ್ತದೆ. ಗೌರವ ಮತ್ತು ಪೂಜ್ಯ ಭಾವನೆ ಹುಟ್ಟುತ್ತದೆ. ಹಾಗಾಗಿ ವಿಚಾರ ಪಠ್ಯಗಳಿಂದ ಆಚಾರಗಳನ್ನು ರೂಪಿಸುವ ಮತ್ತು ಹಾಗೆ ರೂಪಿಸಿದ ಆಚಾರಗಳನ್ನು ಆರಾಧಕ ಭಾವದಿಂದ ಒಪ್ಪಿಕೊಳ್ಳುವ ಕ್ರಿಯೆ ಶೂನ್ಯ ಸಂಪಾದನೆಗಳಲ್ಲಿ ಕಾಣುತ್ತದೆ. ಈ ಹಿನ್ನೆಲೆಯಲ್ಲೆ ವಚನಗಳನ್ನು ವೇದಗಳಿಗೆ ಉಪನಿಷತ್ತುಗಳಿಗೆ ಹೋಲಿಸಲಾಗಿದೆ. ಕಲ್ಲುಮಠದ ಪ್ರಭುದೇವನೇ ತನ್ನ ಲಿಂಗಲೀಲಾವಿಲಾಸ ಚರಿತೆಯಲ್ಲಿ ವಚನಗಳನ್ನು 'ವಚನಾಗಮ' ಎಂದು ಕರೆದಿದ್ದಾನೆ. ಇಂಥ ಗ್ರಹಿಕೆ ನಮ್ಮ ವಿಮರ್ಶೆಯ ಪ್ರಾಗ್ರೂಪವೇ ಆಗಿದೆ. (ಆರಾಧನಾ ರೂಪದ ವಿಮರ್ಶೆ ಆಧುನಿಕ ಸಂದರ್ಭದಲ್ಲೂ ಸಾಕಷ್ಟು ಹುಟ್ಟಿಕೊಂಡಿರುವುದನ್ನು ನಾವು ಕಾಣಬಹುದು) ಪಠಣ, ಪಾರಾಯಣ, ನೋಂಪಿ, ಇಂಥ ಹಲವು ಆಚರಣೆಗಳು ಆರಾಧನರೂಪಿ ವಿಮರ್ಶೆಯ ವಿಸ್ತರಣೆಗಳೇ ಆಗಿವೆ.(ಪ್ರತ್ಯೇಕವಾಗಿ ಇವನ್ನು ಚರ್ಚಿಸಲಾಗಿದೆ)

ನಮ್ಮ ಪರಂಪರೆಯಲ್ಲಿ ಶೂನ್ಯ ಸಂಪಾದನೆಯಲ್ಲದೆ ಇನ್ನಿತರ ರೀತಿಯ ಸಂಪಾದನೆಗಳೂ ಅನೇಕ ಇದ್ದುವು. ಕಾವ್ಯಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುವ, ದಾನಮಾಡುವ (ಜೈನರ ಗ್ರಂಥದಾನ) ಪದ್ಧತಿಯಂತೆ ವಚನಗಳನ್ನು ಸಂಗ್ರಹಿಸಿ, ಸಂಪಾದಿಸಿ ಬರೆದಿಟ್ಟುಕೊಳ್ಳುವ ಸಂಪ್ರದಾಯವೂ ಇದ್ದಿತು. ಇಂಥ ಒಂದು ಓಲೆಯ ಸಂಪಾದನೆ ಶಾಂತವೀರಾರ್ಯ ನಿಶಾನಿಮಠ ಅವರಿಂದ ಆರ್.ನರಸಿಂಹಾಚಾರ್ಯರಿಗೆ ದೊರೆತಿದೆ. ಶ್ರೀಮಾನ್ ಶಾಂತವೀರಾರ್ಯರಿಗೆ ಅದೃಷ್ಟವಶಾತ್ ಸಿಕ್ಕಿದ ಒಂದು ಓಲೆಯ ಪುಸ್ತಕದಲ್ಲಿ ಅನೇಕ ವಚನಕಾರರ ಹೆಸರೂ ಅವರ ವಚನಗಳೂ ಆ ವಚನಗಳ ಸಂಖ್ಯೆಯೂ ಕೊಟ್ಟಿವೆ. ಈ ಪುಸ್ತಕವು 1747ರಲ್ಲಿ ಬರೆದುದು. ಇದರಲ್ಲಿ 3222 ವಚನಗಳಿವೆ. ಅವರು ಕೊಟ್ಟ ಈ ಪುಸ್ತಕದ ಪ್ರತಿಯ ಸಹಾಯದಿಂದ ವಚನಕಾರರ ವಿಷಯವಾಗಿ ಬಿದ್ದಿದ್ದ ತಪ್ಪುಗಳನ್ನು ತಿದ್ದುವುದಕ್ಕೂ ಹೊಸ ವಚನಕಾರರನ್ನು ಸೇರಿಸುವುದಕ್ಕೂ ಅನುಕೂಲವಾಯಿತು. ಆದರೂ ಇನ್ನೂ ಅನೇಕ ವಚನಕಾರರ ಹೆಸರು ತಿಳಿದಿಲ್ಲ.[38] ಎಂದು ಆರ್.ನರಸಿಂಹಾಚಾರ್ಯರು ತಮ್ಮ ಕವಿಚರಿತೆಯ ಪೀಠಿಕೆಯಲ್ಲಿ ಹೇಳಿದ್ದಾರೆ. ಇಲ್ಲಿ ಇನ್ನೊಂದು ಶಾಸ್ತ್ರಗ್ರಂಥ ಸಾಳ್ವನ ರಸರತ್ನಾಕರ ಉಲ್ಲೇಖಾರ್ಹ. ಸಂಗ್ರಹ ಕಾರ್ಯ-ಸ್ವತಂತ್ರ ರಚನೆಗಳ ಭೇದ ಅಳಿದುಹೋಗುವ ರಚನೆಗೆ ಸಾಳ್ವನ ರಸರತ್ನಾಕರ ಒಂದು ಉತ್ತಮ ಉದಾಹರಣೆ. ಇಲ್ಲಿ ಸಾಳ್ವ ಅವರಿವರಿಂದ ರಸಚರ್ಚೆಯನ್ನು ಸಂಗ್ರಹಿಸಿದ್ದರೂ ಆತ ಕೇವಲ ಸಂಗ್ರಹಕಾರ ಅಲ್ಲ. ಉತ್ತಮ ಮೀಮಾಂಸಕ/ವಿಮರ್ಶಕ. ಸ್ವತಂತ್ರ ಕಾವ್ಯ ರಚನೆ ಮತ್ತು ವಿಮರ್ಶೆಗಳು ಸಂಧಿಸಿರುವ ಕೃತಿ ಈತನದು.

### 2.14.1ಆಯ್ಕೆ ಮತ್ತು ಅಲಕ್ಷ್ಯದ ರಾಜಕಾರಣ

ಚೆನ್ನಂಜೆದೇವನ, ಜಕ್ಕಣಾರ್ಯನ, ಸಿದ್ಧಲಿಂಗೇಶನ, ಮಹಲಿಂಗನ, ಕಲ್ಲುಮಠದ ಪ್ರಭುದೇವನ ಸಂಗ್ರಹ-ಸಂಪಾದನೆಗಳು ಶರಣರ ಕೆಲವು ವಚನ ಸ್ವರಪದಗಳನ್ನು ಆಯ್ಕೆ ಮಾಡಿ, ಸಂಯೋಜಿಸಿವೆ. ಇನ್ನೂ ಎಷ್ಟೋ ವಚನ ಸ್ವರಪದಗಳನ್ನು ಆಯ್ಕೆ ಮಾಡದೆ ಬಿಟ್ಟಿವೆ. ಹಾಗೇ ಶೂನ್ಯ ಸಂಪಾದನೆಗಳು ಶರಣರ ಹಲವು ವಚನಗಳನ್ನು ಆಯ್ಕೆ ಮಾಡಿ ಸಂಯೋಜಿಸಿವೆ. ಇನ್ನೂ ಹಲವಾರು ವಚನಗಳನ್ನು ಆಯ್ಕೆ ಮಾಡದೆ ಬಿಟ್ಟಿವೆ. ಇವರೆಲ್ಲ ಪ್ರಾತಿನಿಧ್ಯಕ್ಕಾದರೂ ಒಂದೊಂದು ವಚನವನ್ನು ಆಯ್ಕೆ ಮಾಡದೆ ಬಿಟ್ಟಿರುವ ಅನೇಕ ವಚನಕಾರರೂ ಇದ್ದಾರೆ. ಈ ಆಯ್ಕೆ ಮತ್ತು ಅಲಕ್ಷ್ಯದ ಹಿಂದಿನ ರಾಜಕಾರಣ ಏನಿರಬಹುದು? ಈ ಎಲ್ಲ ಆಯ್ಕೆ ಮತ್ತು ಅಲಕ್ಷ್ಯದ ಮಾನದಂಡಗಳು ಏನು? ಏಕೋತ್ತರ ಶತಸ್ಥಲದ ಸಂಗ್ರಹಕಾರರಿಗೆ ವೀರಶೈವ ಧರ್ಮದ ಆಚಾರ, ತತ್ವಗಳಿಗಾಗಿ ಪಠ್ಯಗಳನ್ನು ರೂಪಿಸುವುದೇ ಪ್ರಮುಖ ಉದ್ದೇಶವಿದ್ದಂತೆ ಕಾಣುತ್ತದೆ. ಹಾಗಾಗಿ ವೀರಶೈವ ಧರ್ಮದ ತತ್ವ-ಸಿದ್ಧಾಂತ-ಸ್ಥಲಗಳಿಗೆ ಹೊಂದುವ ವಚನಗಳನ್ನು ಇವರು

ಆಯ್ಕೆ ಮಾಡಿ ಸಂಯೋಜಿಸಿದ್ದಾರೆ. ಮಿಕ್ಕವನ್ನು ಅಲಕ್ಷ್ಯ ಮಾಡಿದ್ದಾರೆ. ಈ ಆಯ್ಕೆ ಮತ್ತು ಅಲಕ್ಷ್ಯಗಳ ಹಿಂದಿನ ರಾಜಕಾರಣಗಳು ಏನೇ ಇರಲಿ, ಕಾಲಾನುಕಾಲಕ್ಕೆ ಆಯ್ಕೆ ಮತ್ತು ಸಂಯೋಜನೆಗಳ ಮಾನದಂಡಗಳಲ್ಲಿ ಏನೇ ವ್ಯತ್ಯಾಸಗಳಾಗುತ್ತ ಬಂದಿರಲಿ ಈ ಕ್ರಿಯೆ ಮಾತ್ರ ವಿಮರ್ಶೆಯಲ್ಲದೆ ಬೇರೆಯಲ್ಲ. ನಮ್ಮ ಸಂಪಾದನಾ ರೂಪಿ ವಿಮರ್ಶೆಯ ಪ್ರಾಗ್ರೂಪಗಳ ಒಂದು ಸಾಮಾನ್ಯ ಚಹರೆಯಾಗಿ ಆಯ್ಕೆ ಮತ್ತು ಅಲಕ್ಷ್ಯವು ಎದ್ದು ಕಾಣುತ್ತದೆ.

### 2.15. ಲಕ್ಷ್ಯ ಪದ್ಯ ಸಂಗ್ರಹ–ಅನುವಾದ

ಛಂದಸ್ಸು, ವ್ಯಾಕರಣ, ಭಾಷಾಶಾಸ್ತ್ರ, ಅಲಂಕಾರಶಾಸ್ತ್ರಾದಿ ಗ್ರಂಥಗಳಲ್ಲಿ ಲಕ್ಷ್ಯಪದ್ಯಗಳಾಗಿ ಉದಾಹರಣೆಗಳನ್ನು ನೀಡುವಾಗ ಕೆಲವರು ಸ್ವತಂತ್ರವಾದ ಲಕ್ಷ್ಯಪದ್ಯಗಳನ್ನು ರಚಿಸಿದ್ದರೆ, ಕೆಲವರು ಅನ್ಯಕವಿಗಳಿಂದ ಲಕ್ಷ್ಯಪದ್ಯಗಳನ್ನು ಎತ್ತಿ ಉದಾಹರಿಸಿದ್ದಾರೆ. ಕೆಲವರು ಅನ್ಯರಿಂದ ಬೇಕಾದೆಡೆ ಉದಾಹರಿಸಿ ಇನ್ನು ಕೆಲವೆಡೆ ಸ್ವತಂತ್ರ ಪದ್ಯಗಳನ್ನು ರಚಿಸಿದ್ದಾರೆ. ಕೆಲವೆಡೆ ಸಂಸ್ಕೃತದಿಂದ ಅನುವಾದಿಸಿಯೂ ಕೊಟ್ಟಿದ್ದಾರೆ. ಇತರೆ ಕವಿಗಳ ತಾವು ಮೆಚ್ಚಿದ–ಒಪ್ಪಿದ ಪದ್ಯಗಳನ್ನು ಸಂಗ್ರಹಿಸಿ ಲಕ್ಷ್ಯಗಳಾಗಿ ನೀಡುವ ಕ್ರಮದಲ್ಲಿಯೇ ಒಂದು ತೆರನ ವಿಮರ್ಶನ ಪ್ರಜ್ಞೆ ಪ್ರಕಟವಾಗಿದೆ. ಯಾರು ಯಾರಿಂದ, ಎಂಥ ಪದ್ಯಗಳನ್ನು, ಎಷ್ಟು ಎತ್ತಿಕೊಂಡು ಉದಾಹರಣೆ ನೀಡುತ್ತಾರೆ ಎಂಬುದೇ ಪರೋಕ್ಷವಾಗಿ ಆಯಾ ಕಾವ್ಯಗಳ ವಿಮರ್ಶೆಯೂ ಆಗುತ್ತದೆ.

ಕಟಕೋಪಾದ್ಯಾಯನಾಗಿದ್ದ ನಾಗವರ್ಮನು ಕಾವ್ಯವನ್ನು ಭೋದಿಸುವುದಕ್ಕಿಂತ ಕಾವ್ಯ ಪರಿಕರಗಳಾದ ವ್ಯಾಕರಣ, ಶಬ್ದಾರ್ಥಶಾಸ್ತ್ರ, ಅಲಂಕಾರ, ಛಂದಸ್ಸುಗಳನ್ನು ಭೋದಿಸುತ್ತಿದ್ದನೆಂದು ಕಾಣುತ್ತದೆ. ಹಾಗಾಗಿಯೇ ಈತ ಕಾವ್ಯಾವಲೋಕನ, ಅಭಿದಾನ ವಸ್ತುಕೋಶ, ಶಬ್ದಾನುಶಾಸನ, ಕರ್ನಾಟಕ ಭಾಷಾ ಭೂಷಣ ಗ್ರಂಥಗಳನ್ನು ರಚಿಸಿದ್ದಾನೆ. ನಾಗವರ್ಮ ತನ್ನ ಕಾವ್ಯಾವಲೋಕನದಲ್ಲಿ ಅನೇಕ ಲಕ್ಷ್ಯ ಪದ್ಯಗಳನ್ನು ಸಂಸ್ಕೃತದಿಂದ ಅನುವಾದಿಸಿ ಕೊಟ್ಟಿದ್ದಾನೆ. ಹಲವಾರು ಶಾಸನ ಪದ್ಯಗಳನ್ನೂ ಪೊನ್ನ, ಗುಣವರ್ಮ, ಶಂಖವರ್ಮರ ಕಾವ್ಯಗಳಿಂದ ಕೆಲವು ಪದ್ಯಗಳನ್ನು ಉದಾಹರಿಸಿದ್ದಾನೆ. ಅಲ್ಲದೆ ತನ್ನದೇ ವೀರವರ್ಧಮಾನ ಪುರಾಣದಿಂದ ಹಲವಾರು ಪದ್ಯಗಳನ್ನು ಎತ್ತಿ ಕೊಟ್ಟಿದ್ದಾನೆ. ಕರ್ನಾಟಕ ಭಾಷಾಭೂಷಣದಲ್ಲಿ ಪಂಪ, ನಯಸೇನರ ಹೆಸರುಗಳನ್ನು ಮಾತ್ರ ಉಲ್ಲೇಖಿಸಿದ್ದಾನೆ. ಇಲ್ಲಿ ಪೂರ್ವ ಕವಿಗಳ ಉದಾಹರಣೆಗಳನ್ನು ಹೆಚ್ಚಾಗಿ ಬಳಸಿಲ್ಲ. ನಾಗಚಂದ್ರ, ಗುಣವರ್ಮ ಹೀಗೆ ಕೆಲವೇ ಕವಿಗಳ ನಾಲ್ಕೈದು ಪದ್ಯಗಳನ್ನು ಮಾತ್ರ ಉದಾಹರಿಸಿದ್ದಾನೆ. ಪಂಪ–ರನ್ನಾದಿಗಳ ಕಾವ್ಯಗಳಿಂದ ಈತ ಪದ್ಯಗಳನ್ನು ಆರಿಸಿಕೊಳ್ಳದೆ ಇರುವುದು ಸೋಜಿಗವಾಗಿದೆ! (ಯಾಕೆ ಈತ ಹೀಗೆ ಮಾಡಿರಬಹುದು?) ತನ್ನ ಕಾವ್ಯಾವಲೋಕನದಲ್ಲಿ ದಕ್ಷಿಣೋತ್ತರ ಮಾರ್ಗಗಳನ್ನು ಪ್ರಸ್ತಾಪಿಸುತ್ತಾ ಕವಿರಾಜಮಾರ್ಗವನ್ನು ಈತ ಉಲ್ಲೇಖಿಸಿದ್ದಾನೆ. ಆದ್ದರಿಂದ ಇವನಿಗೆ ಕವಿರಾಜಮಾರ್ಗದ ಬಗ್ಗೆ ತಿಳಿದಿದೆ. ಆದರೆ ಆ ಕೃತಿಯ ಬಗೆಗೆ ತನ್ನದೇ ಆದ ನಿರ್ಣಯಗಳನ್ನು ಈತ ಕೊಡುವುದಿಲ್ಲ. ವ್ಯಾಕರಣ–ಅಲಂಕಾರ ಶಾಸ್ತ್ರಗಳೆರಡೂ ಬೆರೆತ ಕಾವ್ಯಶಾಸ್ತ್ರವನ್ನು ಈತ ತನ್ನ ಕಾವ್ಯಾವಲೋಕನದಲ್ಲಿ ನೀಡಿದ್ದಾನೆ. ಆದರೆ ತನ್ನ ಪೂರ್ವಿಕರ ಶಾಸ್ತ್ರಗ್ರಂಥಗಳನ್ನಾಗಲೀ ಕಾವ್ಯಗ್ರಂಥಗಳನ್ನಾಗಲೀ ಈತ ಗಂಭೀರವಾಗಿ ಅವಲೋಕಿಸಿಲ್ಲ. ಈ ರೀತಿಯ ಅಲಕ್ಷ್ಯವು ಇವನಲ್ಲಿ ಉದ್ದೇಶಪೂರ್ವಕವೂ ಅಲ್ಲ.

> ಗಜಗನ, ಗುಣನಂದಿಯ, ಮನ/ಸಿಜನ, ಅಸಗನ, ಚಂದ್ರಭಟ್ಟ, ಗುಣವರ್ಮ,
> ಶ್ರೀ/ವಿಜಯರ, ಪೊನ್ನನ, ಪಂಪನ/ಸುಜನೋತ್ತಂಸನ ಸುಮಾರ್ಗಮಿದರೊಳೆ ಲಕ್ಷ್ಯಂ

ಎಂದು ಕೇಶೀರಾಜ ತಾನು ಯಾರು ಯಾರಿಂದ ಉದಾಹರಣ ಪದ್ಯಗಳನ್ನು ಸಂಗ್ರಹಿಸಿದ್ದೇನೆಂದು ದೊಡ್ಡ ಪಟ್ಟಿಯನ್ನೇ ಕೊಡುತ್ತಾನೆ. ಹೀಗೆ ಇವರ ಉಲ್ಲೇಖ ಕೂಡ ಒಂದು ರೀತಿಯ ಬಹು ಮುಖ್ಯವಾದ ವಿಮರ್ಶನ ಪ್ರಜ್ಞೆಯ ಆಯ್ಕೆಯೇ ಆಗಿರುತ್ತದೆ. ಯಾರ್‍ಯಾರೋ ಕೆಲಸಕ್ಕೆ ಬಾರದ ಬಣಗು ಕವಿಗಳೆಲ್ಲ ಉಲ್ಲೇಖಾರ್ಹರಾಗಲು ಆಗುವುದಿಲ್ಲ. ಇಂಥ ಉಲ್ಲೇಖಗಳಿಂದ ಅನೇಕ ವೇಳೆ ಪರಂಪರೆಯ ಮೌಲ್ಯಮಾಪನವೂ, ನಡೆಯುತ್ತಿರುತ್ತದೆ. ಯಾರೆಲ್ಲಾ ನಿರಂತರ ಓದಿಗೆ ಅರ್ಹರೆಂಬ ಸೂಚನೆಯೂ ರವಾನೆಯಾಗುತ್ತಿರುತ್ತದೆ. ಕೇಶೀರಾಜನು ತನ್ನ ಮಾತಾಮಹನಾದ* ಮಲ್ಲಿಕಾರ್ಜುನನ ಕಾವ್ಯಸಾರವನ್ನು ಒಂದು ಆಕರ ಗ್ರಂಥವೆಂಬಂತೆ ಬಳಸಿದ್ದಾನೆ. ಆದರೆ ಆ ಬಗ್ಗೆ ಏನೂ ಹೇಳದೇ ಇರುವುದು ಸೋಜಿಗವಾಗಿದೆ! (ಹೀಗೆ ಇವನು ನೆನೆಯದಿರಲು ಕಾರಣವೇನಿರಬಹುದು?)

ಆಧುನಿಕ ಸಂದರ್ಭದಲ್ಲಂತೂ ಈ ಉಲ್ಲೇಖಗಳಿಂದ ಸಿಕ್ಕಿಲ್ಲದ ಕವಿ ಕೃತಿಗಳೆಷ್ಟೋ ಬೆಳಕಿಗೆ ಬಂದಿವೆ. ಶಬ್ದಮಣಿದರ್ಪಣದಲ್ಲಿನ ಪ್ರಯೋಗ ಲಕ್ಷ್ಯಗಳು ಸುಮಾರು 850. ಇವುಗಳಲ್ಲಿ ಸುಮಾರು 100 ಪ್ರಯೋಗಗಳು ಭಾರತಕ್ಕೆ ಸಂಬಂಧಿಸಿದುವು. ಪಂಪಭಾರತ, ರನ್ನನ ಗದಾಯುದ್ಧಗಳಲ್ಲಿ ಸುಮಾರು 25 ಪ್ರಯೋಗಗಳಿಗೆ ಆಕರಗಳು ದೊರೆಯುತ್ತವೆ. ಮಿಕ್ಕ 75 ಪ್ರಯೋಗಗಳಿಗೆ ಉಪಲಬ್ಧವಿದ್ದ ಕನ್ನಡದ ಯಾವ ಭಾರತದಲ್ಲಿಯೂ ಆಕರ ಸಿಗುವುದಿಲ್ಲ. ಕೇಶೀರಾಜನು ಇವುಗಳನ್ನು ಯಾವುದೋ ಅನುಪಲಬ್ಧ ಭಾರತದಿಂದ ಅಥವಾ ಭಾರತಗಳಿಂದ ಸ್ವೀಕರಿಸಿರಬೇಕು.[37] ಲಕ್ಷ್ಯಗಳನ್ನು ಸಂಗ್ರಹಿಸಿ ನೀಡುವ ಕೆಲಸವು ಅಪಾರವಾದ ಪಾಂಡಿತ್ಯ ಮತ್ತು ತಕ್ಕಮಟ್ಟಿಗಿನ ಸೃಜನಶೀಲತೆ ಎರಡನ್ನು ಬೇಡುವ ಕೆಲಸ. ಹಾಗಾಗಿ ಇಂಥ ವಿಮರ್ಶನ ಪ್ರಜ್ಞೆಯಲ್ಲಿ ವಿಸ್ತಾರವಾದ ಓದು ಮತ್ತು ಔಚಿತ್ಯ ಜ್ಞಾನಗಳೆರಡೂ ಕೆಲಸ ಮಾಡಿರುತ್ತವೆ.

ರಳ ಕುಳ ಕ್ಷಳಗಳ ವಿಚಾರದಲ್ಲಿ ಕೇಶೀರಾಜ ತನ್ನದೇ ನಿಯಮಗಳನ್ನು ಮಾಡಿದ. ರಳಾಂತ, ಕುಳಾಂತ, ನಿತ್ಯಲಾಂತಗಳ ಪಟ್ಟಿಯನ್ನೇ ನೀಡಿ ಇವುಗಳನ್ನು ಬದಲಾಯಿಸಬಾರದೆಂದು ನಿಯಮ ಹೇಳಿದ. ಆದರೆ ಕೇಶಿಯ ನಿಯಮಗಳು ನಂತರದಲ್ಲಿ ನಿಲ್ಲಲಿಲ್ಲ. ಶ್ರೀವಿಜಯನ ಕನ್ನಡಂಗಳ ಬಳಕೆ, ಅರಿಸಮಾಸ ನಿಷೇಧಗಳೂ ನಿಲ್ಲಲಿಲ್ಲ. ಕಾವ್ಯರಚನೆಯಲ್ಲಿ ಭಾಷಾಪ್ರಯೋಗದ ನಿಯಮಗಳನ್ನು ನಮ್ಮ ಶಾಸ್ತ್ರಕಾರರು ಏನೇ ಹೇಳಿದ್ದರೂ ಪ್ರಯೋಗದಲ್ಲಿ ಕಾವ್ಯಗಳು ಅವುಗಳಿಗೆ ಸೊಪ್ಪು ಹಾಕಿಲ್ಲ ಎಂಬುದು ಮಾತ್ರ ನಿಜ. (ನೋಡಿ; ಭಾಷಾ ಮೀಮಾಂಸೆ)

### 2.16. ಇತರ ಅನುಸಂಧಾನಗಳಲ್ಲಿ ಪ್ರಕಟವಾಗಿರುವ ತಾತ್ವಿಕತೆ

ಸಾಹಿತ್ಯ ರಚನೆಗೆ, ಸಂಗೀತಕ್ಕೆ, ದೇವರ ಪ್ರಾರ್ಥನೆಗೆ, ಕೀರ್ತನೆಗೆ, ಪಾರಾಯಣಕ್ಕೆ, ಹರಿಕತೆಗೆ, ನಾಟಕಕ್ಕೆ, ಯಕ್ಷಗಾನಗಳಿಗೆ, ತಾಳಮದ್ದಲೆಗಳಿಗೆ, ಕೇಳಿಕೆಗಳಿಗೆ, ಕೋಲಾಟಕ್ಕೆ, ನೃತ್ಯಕ್ಕೆ, ಚಿತ್ರಕಲೆಗೆ ಹೀಗೆ ಹಲವಾರು ಸಹಸಂಬಂಧಿ ಕಲೆಗಳಿಗೆ ಸಾಹಿತ್ಯವನ್ನು ಬಳಸುವುದುಂಟು. ಈ ಬಳಕೆಯನ್ನೇ ಇಲ್ಲಿ ಸಾಹಿತ್ಯದ ಭಿನ್ನ ಅನುಸಂಧಾನಗಳು ಎಂದು ಕರೆಯಲಾಗಿದೆ. ಸಾಹಿತ್ಯದ ಈ ಅನ್ಯ ಕಲೆಗಳ ಕಡೆಗಿನ ಚಲನೆಯನ್ನು ವಿಮರ್ಶೆಯ ಒಂದು ರೂಪವೆಂದೆ ಕರೆಯಬಹುದು. ಬದುಕಿನ ಭಿನ್ನ ಅಭಿವ್ಯಕ್ತಿಗಳಲ್ಲಿ ಸಾಹಿತ್ಯವನ್ನು ಒಂದಾಗಿ ಬಳಸುವುದೂ ಕೂಡ ವಿಮರ್ಶೆಯೇ ಅಲ್ಲವೇ? ಇಂಥ ವಿಮರ್ಶೆಯಿಂದ ಉಳುಬಾಳು ಕಂಡುಕೊಂಡ ಸಾಹಿತ್ಯ ನಿಜಕ್ಕೂ ಸತ್ವಯುತವಾಗಿ ಇರುತ್ತದೆ.

ನಮ್ಮ ವಡ್ಡಾರಾಧನೆಯ ಕತೆಗಳನ್ನು ನೋಂಪಿಯ ಕತೆಗಳೆಂದೇ ಕರೆಯಲಾಗಿದೆ. ನೋಂಪಿಯ ಆಚರಣೆಯಲ್ಲಿ ಈ ಕಥೆಗಳು ಬಳಕೆಯಾಗುತ್ತಿದ್ದವು. ಶರಣರ ಸ್ವರಪದಗಳನ್ನು ದಾಸರ ಕೀರ್ತನೆಗಳನ್ನು ಶಾಸ್ತ್ರೀಯ ಸಂಗೀತದ ರಾಗಗಳಿಗೆ ಹಾಡಲೂ ಆಗಬಹುದಾದಂತೆ ಬರೆಯಲಾಗಿದೆ. ಅವುಗಳನ್ನು ಹಾಡುವ ಸಂಪ್ರದಾಯವೂ ಇತ್ತು. ಇಂದೂ ಇದೆ. ಕುಮಾರವ್ಯಾಸ ಲಕ್ಷ್ಮೀಶರ ಅದೆಷ್ಟೋ ಮಾತುಗಳು ಮತ್ತು ಪ್ರಸಂಗಗಳು ಯಕ್ಷಗಾನಗಳಾಗಿ ರೂಪಾಂತರ ಹೊಂದಿವೆ. ಕೆಲವೇ ಕವಿಗಳ ಕೆಲವು ನಿರ್ದಿಷ್ಟವಾದ ಪ್ರಸಂಗಗಳು ಗಮಕಕ್ಕೆ ಮತ್ತೆ ಮತ್ತೆ ಗುರಿಯಾಗಿವೆ. ಯುಗಯುಗಾಂತರಗಳಲ್ಲಿ ಭಿನ್ನ ಮಾನದಂಡಗಳಿಂದ ಹಲವಾರು ಕಾವ್ಯಗಳು ಹಲವು ರೀತಿಯ ಸಂಪಾದನೆಗಳಿಗೆ ಗುರಿಯಾಗುತ್ತ ಬಂದಿವೆ. ಹಸ್ತಪ್ರತಿಗಳಲ್ಲಿ ಕಾವ್ಯಗಳು ರೇಖಾಚಿತ್ರ (ಇಲ್ಲಸ್ಟ್ರೇಶನ್ಸ್), ವರ್ಣಚಿತ್ರಗಳಿಗೆ ಕೂಡ ಸಾಮಗ್ರಿಯಾಗಿವೆ. ದೇಗುಲಗಳ ಶಿಲ್ಪಗಳ ಮೂಲಕ ಎಷ್ಟೋ ಮಹಾಕಾವ್ಯಗಳ ಕಥನ ಪ್ರಸಂಗಗಳು ಕೆತ್ತಲ್ಪಟ್ಟಿವೆ. ಹೀಗೆ ಹಲವಾರು ಸಹಸಂಬಂಧಿ ಕಲೆಗಳಿಗೆ ನಮ್ಮ ಸಾಹಿತ್ಯ ಕೃತಿಗಳು ಬಳಕೆಯಾಗಿವೆ. ಈ ಬಳಕೆ ಅಥವಾ ಚಲನೆಯನ್ನು ಕೂಡ ನಾವು ಜನಸಮುದಾಯಗಳು ಭಿನ್ನ ರೂಪಗಳಲ್ಲಿ, ಭಿನ್ನ ಕಾಲಗಳಲ್ಲಿ ಸಾಹಿತ್ಯವನ್ನು ವಿಮರ್ಶಿಸಿದ ಬಗೆಗಳೆಂದೇ ತಿಳಿಯಬಹುದಾಗಿದೆ. 1. ಯಾವ ಯಾವ ಕಾವ್ಯಗಳಿಗೆ ಯಾವ ಯಾವ ರೀತಿಯ ಚಿತ್ರಗಳು ಬರೆಯಲ್ಪಟ್ಟಿವೆ? ಅವು ಯಾಕೆ ಹಾಗೇ ಬರೆಯಲ್ಪಟ್ಟಿವೆ? 2. ಯಾವ ಯಾವ ಕಾವ್ಯಗಳು ಯಕ್ಷಗಾನಗಳಾಗಿವೆ? ಮಿಕ್ಕವು ಯಾಕೆ ಆಗಿಲ್ಲ? 3. ಯಾವ ಸ್ವರಪದಗಳು, ಕೀರ್ತನೆಗಳು ರಾಗನಿರ್ದೇಶನಕ್ಕೆ ಸ್ಥಲನಿರ್ದೇಶನಕ್ಕೆ ಗುರಿಯಾಗಿ ಸಂಪಾದಿತವಾಗಿವೆ? ಮಿಕ್ಕವು ಯಾಕೆ ಸಂಪಾದನೆ ಆಗಲಿಲ್ಲ? 4. ಯಾವ ಕಥನಗಳು ಶಿಲ್ಪಗಳಲ್ಲಿ ಕೆತ್ತನೆಯಾಗಿವೆ? 5. ಯಾವ ಕಾವ್ಯ-ಕಾವ್ಯಭಾಗಗಳು ಪಾರಾಯಣಕ್ಕೆ ಗುರಿಯಾಗಿವೆ? ಅವೇ ಯಾಕೆ ಗುರಿಯಾಗಿವೆ? ಯಾವ ಕಥನಗಳು ಹರಿಕಥೆಗಳಾಗಿವೆ? ಮತ್ತೆ ಮತ್ತೆ ಕೇಳಿಕೆಗೆ ಗುರಿಯಾಗಿರುವ ಕಥನಗಳು ಯಾವುವು? ಯಾಕೆ?.. ಹೀಗೆ ಇತ್ಯಾದಿಗಳೆಲ್ಲ ಪ್ರತ್ಯೇಕ ಅಧ್ಯಯನಗಳಾಗಬಲ್ಲವು. ಅವಕ್ಕಿಲ್ಲಿ ಅವಕಾಶವಿಲ್ಲ. ಇವುಗಳಲ್ಲಿ ಒಂದೆರಡನ್ನು ಇಲ್ಲಿ ಕ್ವಚಿತ್ತಾಗಿ ವಿವೇಚಿಸಲಾಗುವುದು.

**2.17. ಪಾರಾಯಣ ಅಧ್ಯಯನ..**

ಕಾವ್ಯವನ್ನು ಪಾರಾಯಣ, ವಾಚನ, ಕೀರ್ತನ, ಗಾಯನ, ಪಠಣ, ಭಜನೆ ಅಥವಾ ನೋಂಪಿಯಲ್ಲಿ ಬಳಸುವುದಕ್ಕು ವಿಮರ್ಶೆಗು ಏನು ಸಂಬಂಧ ಎನಿಸಬಹುದು. ಕಾವ್ಯವನ್ನು ಅಸಡ್ಡೆ ಮಾಡದೆ ಜೀವನದ ಬೇರೆ ಬೇರೆ ಪ್ರಸಂಗಗಳಲ್ಲಿ ಬಳಸುವುದಕ್ಕೆ ಎತ್ತಿಕೊಳ್ಳುವುದೆ ಕಾವ್ಯದ ವಿಮರ್ಶೆ. ಯಾವುದೇ ಕಾವ್ಯ ಮತ್ತೆ ಮತ್ತೆ ಓದಿಗೆ ವಾಚನಕ್ಕೆ ಅಥವಾ ಯಾವುದೇ ರೀತಿಯ ಬಳಕೆಗೆ ಗುರಿಯಾದರೆ ಅದು ಆ ಕಾವ್ಯದ ಶಕ್ತಿ-ಪ್ರಸ್ತುತತೆಯನ್ನು ತೋರಿಸುತ್ತದೆ. ಯಾವುದೆ ಕೃತಿಯನ್ನು ಅಸಡ್ಡೆಗೆ ಗುರಿ ಮಾಡುವುದು ಕೂಡ ಕಾವ್ಯದ ಸರಿಯಾದ ವಿಮರ್ಶೆಯೇ. ಕಾಲದ ಪರೀಕ್ಷೆಯಲ್ಲಿ ಗೆದ್ದು ಬರುವುದು ಯಾವುದೆ ಕೃತಿಗೆ ಒಂದು ಬಹುದೊಡ್ಡ ಸವಾಲು. ಕಾಲದ ಪರೀಕ್ಷೆಯಲ್ಲಿ ಗೆಲ್ಲುವುದು ಎಂದರೆ ಜನಬಳಕೆಗೆ ತಕ್ಕುದಾಗಿ ಇರುವುದು. ಇಲ್ಲವಾದರೆ ಕಾಲನ ಎದುರಿಗೆ ತಾನಾಗಿ ಇಲ್ಲವಾಗುವುದು. ಕಾವ್ಯದ ಅಸ್ತಿತ್ವದ ಪ್ರಶ್ನೆಗು, ಬಳಕೆಯ ಪ್ರಶ್ನೆಗು, ಕಾವ್ಯದ ಸತ್ವದ ಪ್ರಶ್ನೆಗು ನಮ್ಮ ಚರಿತ್ರೆಯಲ್ಲಿ ಬಹು ಮುಖ್ಯವಾದ ಸಂಬಂಧ ಇದೆ. ಹೀಗಾಗಿ ಪಾರಾಯಣ, ವಾಚನ, ಕೀರ್ತನ, ಗಾಯನ, ಪಠಣ, ಭಜನೆ ಅಥವಾ ನೋಂಪಿ ಇಂತಹ ಯಾವುದೆ ಬಳಕೆಗೆ ಕೃತಿಯೊಂದು ಸ್ವೀಕೃತವಾಗುವುದೆ ಆಯಾ ಕೃತಿಗಳ ವಿಮರ್ಶೆಯೂ ಆಗಿರುತ್ತದೆ. ಸಿಂಪಲ್ಲಾಗಿ ಹೇಳಬೇಕೆಂದರೆ ಎತ್ತಿಕೊಳ್ಳುವುದು ಇಲ್ಲವೆ ಬಿಸಾಡುವುದು ಅಥವಾ ಬಳಸುವುದು ಇಲ್ಲವೆ ಅಸಡ್ಡೆಗೆ ಗುರಿ ಮಾಡುವುದು ನಮ್ಮ ಪರಂಪರೆಯಲ್ಲಿ ರೂಢಿಗತವಾಗಿ ಬಂದಿರುವ ವಿಮರ್ಶೆಯ ಬಹು ಮುಖ್ಯ ಚಹರೆ. ಆಧುನಿಕ ಕಾಲದಲ್ಲು ಕೂಡ ನಾವು ಯಾವ ಯಾವ ಕೃತಿಗಳನ್ನು ಮತ್ತೆ ಮತ್ತೆ ಓದುತ್ತೇವೆ, ಬಳಸುತ್ತೇವೆ ಎಂಬುದೇ ಆಯಾ ಕೃತಿಗಳ ಶಕ್ತಿ, ಮಿತಿಗಳನ್ನು ಹೇಳುತ್ತಿರುತ್ತವೆ. ಹೀಗೆ ಪಠ್ಯಗಳು ಆಯ್ಕೆ ಮತ್ತು ಅಲಕ್ಷ್ಯಕ್ಕೆ ಗುರಿಯಾಗುವುದರ ಹಿಂದೆಯೂ ಅವುಗಳದ್ದೆ ಆದ ಅಧಿಕಾರ ರಾಜಕಾರಣ, ಜ್ಞಾನ ರಾಜಕಾರಣಾದಿ ಸಾಂಸ್ಕೃತಿಕ ರಾಜಕಾರಣಗಳು ಕೆಲಸ ಮಾಡಬಹುದು. ಏನೇ ಆದರೂ ಬಾಳಿಗೆ ಗುರಿಯಾಗುವ ಮತ್ತು ಬಾಳಲಾಗದ ಕೃತಿಗಳು ಆ ಮೂಲಕವೇ ತಕ್ಕಾದ ವಿಮರ್ಶೆಗೆ ಗುರಿಯಾಗುತ್ತವೆ ಎಂದೇ ಅರ್ಥ. ಆಯ್ಕೆ ಮತ್ತು ಅಲಕ್ಷದ ಹಿಂದಿನ ರಾಜಕಾರಣಗಳು ಏನಿರುತ್ತವೆ ಎಂಬ ಅಧ್ಯಯನವು ಪ್ರತ್ಯೇಕವಾದ ಒಂದು ಸಾಂಸ್ಕೃತಿಕ ಅನ್ವೇಷಣೆ ಆಗಬಲ್ಲುದು. ಇಲ್ಲಿ ತಾತ್ವೀಕರಣಕ್ಕೆ ಮಾತ್ರ ಗಮನ ಕೇಂದ್ರೀಕರಿಸಲಾಗಿದೆ.

ಒಂದೇ ಪುಸ್ತಕವನ್ನು ಮತ್ತೆ ಮತ್ತೆ ಓದುವುದಕ್ಕೆ ಪಾರಾಯಣ ಎಂದು ಹೆಸರು. ಇದು ಒಂದು ರೀತಿಯಲ್ಲಿ ಜಪದಂತೆ. ಜಪದಲ್ಲಿ ದೇವರ ಹೆಸರನ್ನು ನೂರೆಂಟು ಸಲ, ಸಾವಿರಾರು ಸಲ ಪುನರುಚ್ಚರಿಸುವರು. ಇದೇ ರೀತಿ ಪಾರಾಯಣವೆಂದರೆ ಒಂದೇ ಗ್ರಂಥ-ಭಾಗವನ್ನು ದಿನಾಲು ಓದುವುದು. ಎಷ್ಟೋ ಸಲ ಪಾರಾಯಣ ಮಾಡುವವರಿಗೆ ಗ್ರಂಥದ ಅರ್ಥ-ತತ್ವ ತಿಳಿದಿರಲೇಬೇಕೆಂಬ ನಿಯಮ ಏನೂ ಇಲ್ಲ. ಭಕ್ತಿಯಿಂದ ಮಾಡಿದ ಗ್ರಂಥ ಪಾರಾಯಣ ಸಂಶೋಧನೆ, ಅಧ್ಯಯನಗಳಿಗಿಂತ ಭಿನ್ನವಾದುದು. ಗ್ರಂಥವನ್ನು ಭಕ್ತಿ ಗೌರವಗಳಿಂದ, ಪೂಜ್ಯ ಭಾವನೆಯಿಂದ, ಪವಿತ್ರವೆಂಬ ಭಾವನೆಯಿಂದ ಆರಾಧಿಸುತ್ತ ಮತ್ತೆ ಮತ್ತೆ ಓದುವ ಪರಿಪಾಠವೇ ಪಾರಾಯಣ. ಅಧ್ಯಯನ ಮಾಡುವವರು ಅದನ್ನು ಅರ್ಥೈಸಲು, ವ್ಯಾಖ್ಯಾನಿಸಲು, ವಿಮರ್ಶಿಸಲು, ಶೋಧಿಸಲು, ಅನುಸರಿಸಲು ಪರಿಶೀಲಿಸುತ್ತಾರೆ. ತಿಳಿಯುವ, ಪರೀಕ್ಷಿಸುವ, ಅನುಸರಿಸುವ, ತಿಳಿಸುವ ಹಲವು ಕಾರ್ಯಗಳಿಗಾಗಿ ನಡೆಯುವ ಕಾವ್ಯಾಭ್ಯಾಸವೇ ಅಧ್ಯಯನ. ಈ ಅಧ್ಯಯನ ಮತ್ತು ಪಾರಾಯಣಗಳು ನಮ್ಮ ಪ್ರಾಚೀನ ವಿಮರ್ಶೆಯ ಎರಡು ಮುಖ್ಯ ಮುಖಗಳು. ಇವುಗಳಲ್ಲಿ ಒಂದು ನಂಬಿಕೆಯ ಮುಖವಾದರೆ ಇನ್ನೊಂದು ಬುದ್ಧಿಯ ಮುಖ[38]

ಎಮ್ಮ ವಚನದೊಂದು ಪಾರಾಯಣಕ್ಕೆ ವ್ಯಾಸನದೊಂದು ಪುರಾಣ ಸಮಬಾರದಯ್ಯ
ಎಮ್ಮ ವಚನದ ನೂರೆಂಟರಧ್ಯಯನಕ್ಕೆ ಶತರುದ್ರೀಯ ಯಾಗ ಸಮಬಾರದಯ್ಯ
ಎಮ್ಮ ವಚನದ ಸಾಸಿರ ಪಾರಾಯಣಕ್ಕೆ ಗಾಯತ್ರಿ ಲಕ್ಷ ಜಪ ಸಮಬಾರದಯ್ಯ -ಸಿದ್ಧರಾಮ

ಎಂದು ಸಿದ್ಧರಾಮ ಹೇಳುವ ಮಾತುಗಳನ್ನು ನೋಡಿದರೆ ವಚನಗಳನ್ನು ಜಪಿಸುವ, ಅಧ್ಯಯನ, ಪಾರಾಯಣ ಮಾಡುವ ಪರಂಪರೆ ಚಾಲ್ತಿಯಲ್ಲಿದ್ದುದು ಖಚಿತವಾಗುತ್ತದೆ. ವಚನಗಳ ಪಾರಾಯಣವಾಗಲೀ ಅಧ್ಯಯನವಾಗಲೀ ತುಂಬಾ ಗಂಭೀರವಾದ, ಪವಿತ್ರವಾದ ಕಾರ್ಯ. ಕಾವ್ಯಕ್ಕೆ ಅಪಚಾರವಾಗುವಂತೆ ಅಧ್ಯಯನ-ಪಾರಾಯಣಗಳನ್ನು ಹಗುರವಾಗಿ ಪರಿಗಣಿಸಲಾಗದು ಎಂಬ ಅಭಿಪ್ರಾಯವನ್ನು ಚೆನ್ನಬಸವಣ್ಣ ತನ್ನ ಒಂದು ವಚನದಲ್ಲಿ ಹೇಳುತ್ತಾನೆ.

ಅನುಭಾವವೆಂಬುದು ರಚ್ಚೆಯ ಮಾತೇ? / ಅನುಭಾವವೆಂಬುದು ಸಂತೆಯ ಸುದ್ದಿಯೇ?
ಅನುಭಾವವೆಂಬುದೇನು ಬೀದಿಯ ಪಸರವೇ? / ಏನೆಂಬೆ ಹೇಳಾ ಮಹಾಘನವ?

ಆನೆಯ ಮಾನದೊಳಗಿಕ್ಕಿದರಡಗೂದೇ? / ದರ್ಪಣದೊಳಗಡಗೂದಲ್ಲದೆ?
ಕಂಡಕಂಡಲ್ಲಿ ಗೋಷ್ಠಿ ನಿಂದ ನಿಂದಲ್ಲಿ ಅನುಭಾವ / ಬಂದ ಬಂದಲ್ಲಿ ಪ್ರಸಂಗವ ಮಾಡುವ
ನಿರ್ಬುದ್ಧಿ ನೀಚರ ಮೆಚ್ಚ ಚೆನ್ನಕೂಡಲಸಂಗಮದೇವ -ಚೆನ್ನಬಸವಣ್ಣ

ವಚನಗಳನ್ನು ಶಿವಕಥಾ ಪ್ರಸಂಗವೆಂಬಂತೆ ಮಾಡುವ; ಅನುಭಾವ ಗೋಷ್ಠಿಗಳಲ್ಲಿ ಚರ್ಚಿಸುವ 'ಮಹಾಘನ' ಕೆಲಸವನ್ನು ನಿಂದ ನಿಂದಲ್ಲಿ, ಬಂದ ಬಂದಲ್ಲಿ, ಬೀದಿ, ಸಂತೆಗಳಲ್ಲಿ ಮಾಡಲಾಗದು. ಮಹಾಕಾವ್ಯಗಳ ಪಾರಾಯಣ-ಅಧ್ಯಯನ-ಚರ್ಚೆಗಳಿಗೆ ಒಂದು ನಿರ್ಧಿಷ್ಟವಾದ ಆವರಣ ಇರುವುದಾದರೆ ವಚನಗಳ ಅನುಭಾವಕ್ಕೂ ಒಂದು ಆವರಣ ಬೇಕಲ್ಲವೆ? ಅಂಥ ಆವರಣವೊಂದು ಇಲ್ಲದೆ ವಚನಗಳನ್ನು ಚರ್ಚಿಸಲಾಗದು, ಕೀಳಾಗಿ ಕಾಣಬಾರದು ಎಂಬುದು ಚೆನ್ನಬಸವಣ್ಣನ ಅಭಿಪ್ರಾಯ. ಇಂಥ ಮಾತುಗಳು ಬಹುಶಃ ಮಹಾಕಾವ್ಯಗಳ ಅಧ್ಯಯನ-ಪಾರಾಯಣ ಮಾಡುವ ಕೆಲಸವನ್ನು ಮೇಲೆಂದೂ ವಚನಗಳ ಅಧ್ಯಯನ-ಪಾರಾಯಣವನ್ನು ಕೀಳೆಂದೂ ಆಗಿನ ಕಾಲದಲ್ಲಿ ಕಾಣುತ್ತಿದ್ದ ವಿದ್ವಾಂಸರ ವರ್ತನೆಗೆ ಹುಟ್ಟಿದ ಪ್ರತಿಕ್ರಿಯೆಗಳಾಗಿರಬಹುದು. ಇದೇನೇ ಆಗಲಿ ಸಾಹಿತ್ಯಗಳಲ್ಲಿ ಇರುವ ಕೀಳು ಮೇಲೆಂಬ ಸ್ತರವಿನ್ಯಾಸ, ಶ್ರೇಣೀಕರಣವನ್ನು ಒಡೆಯುವ ಕೆಲಸವನ್ನು ಇಂಥ ವಚನಗಳು ಮಾಡುತ್ತಿವೆ. ಜಾತಿ ಲಿಂಗ, ಧರ್ಮ, ಭಕ್ತಿ ಇತ್ಯಾದಿಗಳಲ್ಲಿನ ಸಾಮಾಜಿಕ ಅಸಮಾನತೆಯನ್ನು ನಿರಾಕರಿಸಿದ ಶರಣರು ಇಂತಹ ವಚನಗಳ ಮೂಲಕ ಸಾಹಿತ್ಯಗಳ ಶ್ರೇಣೀಕರಣವನ್ನೂ ನಿರಾಕರಿಸುತ್ತಿದ್ದಾರೆ. ಶ್ರೇಷ್ಠ-ಶ್ರೇಷ್ಠವಲ್ಲದ-ಸುಮಾರಾದ ಹೀಗೆ ಸಾಹಿತ್ಯಗಳ ಶ್ರೇಣೀಕರಣವನ್ನು ಮಾಡುವುದು ವಿಮರ್ಶೆಯ ಕಾರ್ಯಗಳಲ್ಲಿ ಒಂದು ಮುಖ್ಯವಾದ ಕಾರ್ಯ. ಈ ವಿಮರ್ಶೆಯ ಕಾರ್ಯವನ್ನು ಇಂತಹ ವಚನಗಳು ಮುರಿಯಲು ಯತ್ನಿಸುತ್ತವೆ. ರಚ್ಚೆಯ ಮಾತು ಮತ್ತು ಸಂತೆಯ ಸುದ್ದಿಗಳನ್ನು ಇಲ್ಲಿ ಸಿದ್ದರಾಮ ಹೋಲಿಕೆಗೆ ಎತ್ತಿಕೊಳ್ಳುತ್ತಾನೆ. ಬೀದಿವರೆಯ ಬೀರನ ಕತೆ, ಗೊರವರ ಡುಂಡುಚಿ, ಗಾಣರ ಕಥಕರ ಹಾಡುಗಳನ್ನು ಎತ್ತಿಕೊಂಡಿಲ್ಲ ಎಂಬುದು ಇಲ್ಲಿ ಗಮನಾರ್ಹ.

ವಿಮರ್ಶೆಯ ಕಾರ್ಯದಿಂದ ಹುಟ್ಟುವ ಮನಸ್ಥಿತಿಯನ್ನು ಅಂಬಿಗರ ಚೌಡಯ್ಯನ ವಚನವೊಂದು ಬಹು ಚೆನ್ನಾಗಿ ವಿಡಂಬಿಸುತ್ತದೆ.

ಓದಿಹೆನೆಂಬ ಒಡಲು, ಕಂಡಿಹೆನೆಂಬ ಬ್ರಾಂತು/ಸರ್ವರಿಗೆ ಹೇಳಿಹೆನೆಂಬ ತೇಜಸ್ಸು
ಇಂತಿವೆಲ್ಲವು ಇದಿರಿಗೆ ಹೇಳೆ/ತನ್ನ ಉದರದ ಕಕ್ಕುಲತೆಯಲ್ಲದೆ
ಆತ ಅರಿವಿಂಗೆ ಒಡಲಲ್ಲಾ ಎಂದನಂಬಿಗ ಚೌಡಯ್ಯ -ಅಂಬಿಗರ ಚೌಡಯ್ಯ

ಚೌಡಯ್ಯನ ಈ ಮಾತು ವಿದ್ವಾಂಸರಿಗೆ ಮಾತ್ರವೆ ಅನ್ವಯಿಸುವುದಲ್ಲ. ಕವಿಗಳಿಗೂ ಅನ್ವಯಿಸುತ್ತದೆ. ಕಾವ್ಯ ತತ್ವವನ್ನೂ ಈ ವಚನ ಹೇಳುತ್ತದೆ.[39] ಶಿವತತ್ವ ಚಿಂತಾಮಣಿಯನ್ನು ಬರೆದಿರುವ ಕೆಲವು ತಾಳೆಯೋಲೆ ಪ್ರತಿಗಳ ಸಂಧಿಗಳ ಆದಿಯಲ್ಲಿ ತಾಳ ರಾಗಗಳ ಹೆಸರುಗಳು ಕಂಡುಬರುತ್ತವೆ.[40] ಇದನ್ನು ನೋಡಿದರೆ ಈ ಕಾವ್ಯವನ್ನು ಹಾಡುವ ಪರಿಪಾಠ ಇದ್ದಿರಬಹುದು. ಇಲ್ಲಿ ಬಳಕೆಯಾಗಿರುವ ಸ್ವರವಚನಗಳು ಈ ಕಾವ್ಯವನ್ನು ಹಾಡಲು ತಕ್ಕಂತೆ ಮಾಡಿವೆ.

ಕರಮಳ್ಕರ್ತು ಸಮಸ್ತಭಾರತ ಕಥಾಸಂಬಂಧಮಂ ಬಾಜಿಸಲ್, ಬರೆಯಲ್, ಕೇಳಲ್,

ಒಡರ್ಚುವಂಗಂ ಇದರೊಳ್, ತನ್ನಿಷ್ಟವಪ್ಪನ್ನಂ ಉತ್ತರಂ ಅಕ್ಕುಂ.. (ವಿ.ವಿ. 14-65)

ತನ್ನ ಕಾವ್ಯ ವಿಕ್ರಮಾರ್ಜುನ ವಿಜಯದ ಫಲಶೃತಿಯನ್ನು ಕುರಿತು ಹೇಳುವಾಗ ಪಂಪ ಕೊನೆಯಲ್ಲಿ ತನ್ನ ಕಾವ್ಯವನ್ನು ಬಾಜಿಸಲು, ಬರೆಯಲು, ಕೇಳಲು, ಹೀಗೆ ಕಾವ್ಯದ ಹಲವು ಬಳಕೆಗಳನ್ನು ಹೇಳುತ್ತಾನೆ. ಕಾವ್ಯವನ್ನು ವಾಚಿಸುವ, ಕೇಳುವ, ಬಾಜಿಸುವ(ಹಾಡುವ), ಒಡರ್ಚುವ(ಅರ್ಥಜಿಜ್ಞಾಸೆ ನಡೆಸುವ) ಹೀಗೆ ಹಲವು ರೀತಿಯ ಅನುಸಂಧಾನಗಳು ನಮ್ಮ ಪ್ರಾಚೀನರಲ್ಲಿ ಇದ್ದುವು. ಇವು ಕೂಡ ಕಾವ್ಯಕ್ಕೆ ತೋರುವ ವಿಮರ್ಶೆಗಳೇ.

### 2.18. ಟೀಕುರೂಪಿ ವಿಮರ್ಶೆ

ಯಾವುದಾದರೂ ಒಂದು ಕೃತಿ, ಕೃತಿಭಾಗ, ಸೂತ್ರ, ಪದ್ಯ ಅಥವಾ ಶ್ಲೋಕಕ್ಕೆ ಅರ್ಥವಿವರಣೆ ನೀಡುವುದನ್ನು ಟೀಕು ಎನ್ನುತ್ತಾರೆ. ತಾತ್ಪರ್ಯ, ವ್ಯಾಖ್ಯಾನ, ವೃತ್ತಿ, ಟಿಪ್ಪಣಿ, ಭಾಷ್ಯ, ಸಾರ, ನಿರ್ಯುಕ್ತಿ, ಚೂರ್ಣಿ, ದೀಪಿಕೆ, ಪ್ರದೀಪಿಕೆ, ನಿರ್ವಚನ, ಪಂಚಿಕೆ ಇತ್ಯಾದಿ ಹೆಸರುಗಳಿಂದಲೂ ಇದನ್ನು ಕರೆಯುತ್ತಾರೆ.[41]

ಟೀಕು ಹಲವು ಬಗೆಗಳಲ್ಲಿ ಹಲವು ಕಾರಣಗಳಿಗೆ ರಚಿತವಾಗುತ್ತದೆ. 1. ಸಲೀಸಾಗಿ ಒಂದೇ ಓದಿಗೆ ಅರ್ಥವಾಗದ ಶ್ಲೋಕ, ಸೂತ್ರ, ಬೆಡಗಿನ ವಚನಗಳ ಅರ್ಥವಿವರಿಸಲು 2. ಒಂದಕ್ಕಿಂತ ಹೆಚ್ಚು ಅರ್ಥಸಾಧ್ಯತೆ, ತತ್ವ ಸಿದ್ಧಾಂತ, ಧ್ವನಿ, ಭಾವ ಸಾಧ್ಯತೆಗಳಿರಬಹುದಾದ ಕಾವ್ಯಭಾಗವನ್ನು ವಿವರಿಸಲು ಅಥವಾ ವ್ಯಾಖ್ಯಾನಿಸಲು 3. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಾರರೂಪಿಯಾಗಿ ತರ್ಜುಮೆ ಮಾಡಿ ಹೇಳಲು; ಒಂದು ಭಾಷೆಯಲ್ಲಿ ಇರುವುದನ್ನು ಇನ್ನೊಂದು ಭಾಷೆಯಲ್ಲಿ ಅರ್ಥ ಹೇಳಲು. 4. ಹಳಗನ್ನಡದಲ್ಲಿ ಇರುವುದನ್ನು ಹೊಸಗನ್ನಡದಲ್ಲಿ, ಕಾವ್ಯರೂಪದಲ್ಲಿ ಇರುವುದನ್ನು ಗದ್ಯರೂಪದಲ್ಲಿ, ಶ್ಲೋಕ ಗಾಹೆಗಳ ರೂಪದಲ್ಲಿ ಇರುವುದನ್ನು ಕಥನ ವ್ಯಾಖ್ಯಾನ ರೂಪದಲ್ಲಿ ಹೇಳಲು. 5. ವ್ಯಾಕರಣ, ಛಂದಸ್ಸು, ತತ್ವಜ್ಞಾನ ಇವುಗಳು ಕಾವ್ಯರೂಪದಲ್ಲಿದ್ದಾಗ ಅವನ್ನು ಬಿಡಿಸಿ ವಿವರಿಸಲು. 6. ವಿದ್ಯಾರ್ಥಿಗಳು ಅಭ್ಯಾಸಮಾಡುವುದಕ್ಕೆಂದು ಸರಳರೂಪದಲ್ಲಿ ಹೇಳಲು. 7. ಅಧ್ಯಯನದಿಂದಾಗಿಯೇ ಹುಟ್ಟುವ ಟಿಪ್ಪಣಿಗಳು. ಹೀಗೆ ಇತ್ಯಾದಿ..

ಗದ್ಯ, ಪದ್ಯ, ಮಿಶ್ರ ಹೀಗೆ ಮೂರು ರೂಪಗಳಲ್ಲಿ ಟೀಕು ಸಾಹಿತ್ಯವು ಸೃಷ್ಟಿಯಾಗಿದೆ. ಟೀಕು ಒಂದು ದ್ವಿಭಾಷಿಕ ಅನುಸಂಧಾನ ಕೂಡ. ಹಾಗಾಗಿಯೇ ಇದರಲ್ಲಿ ಅನುವಾದದ ಎಲ್ಲ ವರಸೆಗಳು ಬಳಕೆಯಾಗಿವೆ. ದ್ವಿಭಾಷಿಕ ಅನುಸಂಧಾನ ಎಂದರೆ ಅದು ಎರಡು ಭಿನ್ನ ಭಾಷೆಗಳ ನಡುವೆ ನಡೆಯುವ ಸೇತುವೆಯ ಕೆಲಸ ಹೇಗೋ ಹಾಗೆಯೇ ಒಂದೇ ಭಾಷೆಯ ಎರಡು ಬಿನ್ನ ಅವಸ್ಥೆಗಳ ನಡುವೆ ನಡೆಯುವ ಸೇತುವೆಯ ಕೆಲಸ ಕೂಡ. ಹಾಗೆಯೇ ಟೀಕು ಯಾವಾಗಲೂ ಕವಿ ಮತ್ತು ಓದುಗರ ನಡುವೆ ಮಧ್ಯವರ್ತಿಯಾಗಿ ಸದಾ ಬರಬೇಕಾದ ಪಂಡಿತನನ್ನು ತಪ್ಪಿಸಿ ಕೃತಿಯನ್ನು ನೇರವಾಗಿ ಜನಕ್ಕೆ ಕೊಡುವ ಕೆಲಸ.

ನಮ್ಮಲ್ಲಿ ರಚಿತವಾಗಿರುವ ಸಾಹಿತ್ಯವು ಎಲ್ಲರಿಗು ಅರ್ಥವಾಗಬಹುದಾದ ಸರಳವಾದ ಸಾಹಿತ್ಯವಲ್ಲ. ನಮ್ಮ ಸಾಹಿತ್ಯವು ಛಂದಸ್ಸಿನ ಕವಚದ ಒಳಗೆ ಅಡಗಿಕೊಂಡ ಸಾಹಿತ್ಯವಾಗಿದೆ. ಅಲ್ಲದೆ ನಮ್ಮ ಜ್ಞಾನವೆಲ್ಲವು ಕಾವ್ಯವೆಂಬ ಭಾಷೆಯಲ್ಲಿ ರಚಿತವಾಗಿರುವ ಸಾಹಿತ್ಯ. ಇಂತಹ ಸಾಹಿತ್ಯವು ಜನಗಳಿಗೆ ತಲುಪಬೇಕಾದರೆ ಛಂದಸ್ಸಿನ ಕವಚದಿಂದ ಅದನ್ನು ಹೊರತರಬೇಕಾದ ಮತ್ತು ಕಾವ್ಯವೆಂಬ ಭಾಷೆಯಿಂದ ಬಿಡುಗಡೆಗೊಳಿಸಬೇಕಾದ ಅಗತ್ಯವಿತ್ತು. ಹಾಗಾಗಿ ಟೀಕು, ವ್ಯಾಖ್ಯಾನ ತಾತ್ಪರ್ಯಗಳು ಇದಕ್ಕಾಗಿ ಸೃಷ್ಟಿಯಾದವು. ಅಂದರೆ ಇವು ನಮ್ಮ ಕಾವ್ಯಗಳನ್ನು ಛಂದಸ್ಸಿನ ಕೋಟೆಯಿಂದ ಬಿಡಿಸಿ, ಕಾವ್ಯವೆಂಬ ಭಾಷೆಯಿಂದ ಬಿಡಿಸಿ ಸಾಮಾನ್ಯರ ಕಡೆಗೆ ತೆಗೆದುಕೊಂಡು ಹೋದವು. ಛಂದಸ್ಸಿನ ಪರದೆ ಸರಿಸಿ ಹೂರಣವನ್ನು ತೆರೆದು ತೋರುವ ಒಂದು ರೀತಿಯ ಸಾಹಿತ್ಯದ ಅನಾವರಣ ಕಾರ್ಯವನ್ನು ಇವು ಮಾಡಿದವು. ಈ ಕಾರ್ಯವು ನಮ್ಮ ಪ್ರಾಚೀನ ವಿಮರ್ಶೆಯ ಕಾರ್ಯವೂ, ಲಕ್ಷಣವೂ ಆಗಿದೆ. ನಮ್ಮಲ್ಲಿ ಲಕ್ಷಣಶಾಸ್ತ್ರ, ವ್ಯಾಕರಣ, ನಿಘಂಟು ಮತ್ತು ಧರ್ಮಶಾಸ್ತ್ರ–ತತ್ವಶಾಸ್ತ್ರ ಗ್ರಂಥಗಳಿಗೆ ಅತಿ ಹೆಚ್ಚು ಟೀಕುಗಳು ರಚನೆಯಾಗಿವೆ. ದೇವಭಾಷೆಯಾದ ಸಂಸ್ಕೃತ ಭಾಷೆಯು ಜನಸಾಮಾನ್ಯರಿಂದ ದೂರವಾಗಿ ಪಂಡಿತರ ಸ್ವತ್ತಾಗಿದ್ದ ಭಾಷೆ. ಹೀಗಾಗಿ ಆ ಭಾಷೆಯಲ್ಲಿನ ವಿಚಾರಗಳನ್ನು ನಮ್ಮವರಿಗೆ ಕನ್ನಡದಲ್ಲಿ ತಿಳಿಸಿಕೊಡುವುದಕ್ಕಾಗಿ ಟೀಕುಗಳು ಸಂಭವಿಸಿವೆ. ಇಂತಹ ಸಂಭವಗಳಲ್ಲಿ ಆಯಾಚಿತವಾಗಿ ಅರ್ಥವ್ಯಾಖ್ಯಾನ, ತಮ್ಮದೇ ದೃಷ್ಟಿಕೋನದ ರಸ, ಭಾವ, ಧ್ವನಿಪೂರ್ಣ ವ್ಯಾಖ್ಯಾನಗಳು ಜರುಗಿವೆ. ಇವೆಲ್ಲ ವಿಮರ್ಶೆಯ ಅಂಗಗಳೇ.

ನಮ್ಮಲ್ಲಿ ವ್ಯಾಕರಣ, ಛಂದಸ್ಸು, ಅಲಂಕಾರ ಇಂತಹ ಶಿಸ್ತುಗಳು ಮತ್ತು ತತ್ವಜ್ಞಾನ ಮತ್ತು ಮತಾಚಾರಗಳ ಕೃತಿಗಳು ಜನಬಳಕೆಗೆ ಸಿದ್ಧಗೊಳ್ಳಲು ಟೀಕುಗಳು ತಯಾರಾಗುತ್ತಿದ್ದವು. ಹೀಗಾಗಿ ಇವುಗಳನ್ನು ಶಾಸ್ತ್ರಗಳ ಸಾಮಾನ್ಯರ ಆವೃತ್ತಿಗಳು ಎನ್ನಬಹುದು. ಕೆಲವೊಂದು ಗ್ರಂಥಗಳಿಗೆ ಹಲವು ಕಾಲಘಟ್ಟಗಳಲ್ಲಿ ಹಲವು ಟೀಕುಗಳು ಬಂದಿವೆ. ಶಬ್ದಮಣಿದರ್ಪಣಕ್ಕೆ ಎರಡು ಮೂರು ಟೀಕುಗಳು ಬಂದಿವೆ. ಸಂಸ್ಕೃತ ಮತ್ತು ವಚನ ವಾಙ್ಮಯಕ್ಕೆ ನಮ್ಮಲ್ಲಿ ಅತಿಹೆಚ್ಚಿನ ಟೀಕುಗಳು ಬಂದಿವೆ. ಅಲ್ಲಮನಿಗಂತು ಕಲ್ಲುಮಠದ ಪ್ರಭುದೇವ, ಜಕ್ಕಣಾರ್ಯ, ಕುಮಾರ ಬಂಕನಾಥ, ಪರ್ವತಯೋಗಿ, ಮರಿಬಸವಲಿಂಗದೇವ, ಚೆನ್ನಂಜೆದೇವ, ಸಿದ್ದಲಿಂಗೇಶ್ವರ, ಮಹಲಿಂಗದೇವ ಹೀಗೆ ಹಲವರು ಟೀಕುಗಳನ್ನು ಬರೆದಿದ್ದಾರೆ. ಇಂತಹ ಬಹು ಟೀಕುಗಳು ಜನರು ಅಯಾ ಕಾವ್ಯಗಳನ್ನು ಮತ್ತೆ ಮತ್ತೆ ಅನುಸಂಧಾನ ಮಾಡಿರುವ ಯತ್ನಗಳೇ ಆಗಿವೆ. ಇವೆಲ್ಲ ಆಯಾ ಕಾವ್ಯಗಳಿಗೆ ಸಂದ ವಿಮರ್ಶೆಗಳೇ ಹೌದು. ವಚನಗಳ ಸಂಗ್ರಹ, ಸಂಪಾದನೆ, ವ್ಯಾಖ್ಯಾನ ಮಾಡಿದ ನಮ್ಮವರು ಅವನ್ನು ಅರ್ಥವ್ಯಾಖ್ಯಾನಗಳಿಗೆ ಗುರಿಮಾಡುವುದರ ಜೊತೆಗೆ ಅವುಗಳನ್ನು ಷಟ್ಸ್ಥಲಗಳಿಗೆ ಅನುಗುಣವಾಗಿ ವಿಂಗಡಿಸಿ ಅವುಗಳಿಗೆ ವೀರಶೈವ ಸಿದ್ಧಾಂತೀಯ ಅರ್ಥಗಳನ್ನು ಆರೋಪಿಸುವ ಕೆಲಸವನ್ನೂ ಮಾಡುತ್ತ ಬಂದಿದ್ದಾರೆ. ಕೆಲವೊಮ್ಮೆ ಬೆಡಗಿನ ವಚನಗಳಿಗೆ ಅರ್ಥವ್ಯಾಖ್ಯಾನ ಮಾಡುವಾಗ ಕೂಡ ಟೀಕುಕಾರರು ಶಬ್ದಗಳ ಅರ್ಥಗಳನ್ನು ಹೇಳದೆ ಅವುಗಳಿಗೆ ಧಾರ್ಮಿಕ–ಆಧ್ಯಾತ್ಮಿಕ ಅರ್ಥಗಳನ್ನು ಹೇರುವುದು ಕಂಡುಬರುತ್ತದೆ.

ಪಠ್ಯಗಳನ್ನು ಕೇವಲ ಸಾಹಿತ್ಯಕ ಪಠ್ಯಗಳೆಂದು ನೋಡದೆ ಅವನ್ನು ಧಾರ್ಮಿಕ ನೆಲೆಯಲ್ಲಿ ಅನುಸಂಧಾನ ಮಾಡುವಾಗ ಇದು ಸಹಜ. ಚೆನ್ನಂಜೆದೇವ, ಸಿದ್ದಲಿಂಗೇಶ್ವರ, ಮಹಲಿಂಗದೇವ, ಜಕ್ಕಣಾರ್ಯ ಇವರುಗಳ ವ್ಯಾಖ್ಯಾನಗಳನ್ನು ನೋಡಿದರೆ ಇದು ಎದ್ದು ಕಾಣುತ್ತದೆ. ಕೆಲವು ವಚನಗಳಂತು ತಾವು ಸರಳವಾಗಿ ಏನನ್ನೋ ಹೇಳುತ್ತಿರುತ್ತವೆ. ಆದರೆ ಅವು ಹೇಳುವ ವಿಚಾರಗಳು ನಮ್ಮ ಕೆಲವು ಟೀಕಾಕಾರರಿಗೆ ಬೇಕಿರುವುದಿಲ್ಲ. ಇವರಿಗೆ ಇನ್ನೇನೋ ಹೇಳಬೇಕಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಟೀಕಾಕಾರರು ತಮ್ಮದೇ ವಿಚಾರಗಳನ್ನು ವಚನಗಳಿಗೆ ಹತ್ತಿಸುವುದುಂಟು. ಹೀಗೆ ಭಿನ್ನ ವ್ಯಾಖ್ಯಾನ ಸಾಧ್ಯತೆಗಳನ್ನು ತೋರುವ ಮತ್ತು ಅಪಓದುಗಳನ್ನು ಪ್ರಸ್ತುತಪಡಿಸುವ ಎರಡೂ ಕೆಲಸಗಳನ್ನು ನಮ್ಮ ಪ್ರಾಚೀನ ವಿಮರ್ಶೆಯು ಮಾಡಿದೆ.

### 2.18.1. ಟೀಕಾಚಾರ್ಯ ಕವಿಯಲ್ಲ

ಟೀಕಾಚಾರ್ಯ ಕವಿಸಮಾನನಲ್ಲ ಎಂಬುದು ನಮ್ಮವರ ಅಭಿಪ್ರಾಯ. ಟೀಕಾಚಾರ್ಯರು ಪಂಡಿತರೂ, ವಿದ್ವಾಂಸರೂ ಆಗಿದ್ದಾಗ್ಯೂ ಕೂಡ ನಮ್ಮಲ್ಲಿ ಅವರಿಗೆ ಕವಿಗಳೆಂಬ ಮಾನ್ಯತೆ ಇರಲಿಲ್ಲ. ಕೆಲವು ಕವಿಗಳು ಟೀಕಾಗ್ರಂಥಗಳನ್ನೂ ರಚಿಸಿದ್ದಾರೆಯಾದರೂ ಟೀಕು ಮತ್ತು ಕಾವ್ಯ ರಚನೆಗಳು ನಮ್ಮಲ್ಲಿ ಎರಡು ಭಿನ್ನವಾದ ಶಿಸ್ತುಗಳೆಂದೆ ಪರಿಗಣಿತವಾಗಿದ್ದವು. ಶಾಸ್ತ್ರಗಳನ್ನು ಬರೆಯುವವರು ಕವಿಗಳೆಂದೇ ಕರೆಸಿಕೊಳ್ಳುತ್ತಿದ್ದರು. ಮಹಾಕಾವ್ಯವೆಂದರೆ ಅತ್ಯಂತ ಶ್ರೇಷ್ಠವಾದ ಸೃಷ್ಟಿ ಎಂಬ ಅಭಿಪ್ರಾಯ ನಮ್ಮವರಲ್ಲಿ ಇದ್ದುದರಿಂದ ಅಂತಹ ಕಾವ್ಯಗಳ ರಚನೆ ಮಾಡುವ ಕವಿಗಳನ್ನು ದೊಡ್ಡವರೆಂದು ಪರಿಗಣಿಸುವ ಪರಿಪಾಠ ನಮ್ಮಲ್ಲಿತ್ತು.

ಕಾಳ್ಪುರಮಾಗೆ ಕಾವ್ಯರಸಮರ್ಥಮುಮಕ್ಕರಮುಂ ಪ್ರತೀತಿಯುಂ<br>
ಮಾಳ್ಪಿನೆಗಂ ಜಳಕ್ಕನಿರೆ ಪೇಳದೆ ಕೆಮ್ಮನೊಗಂಟುವೇಳ್ದು ಚಿಃ<br>
ನೋಳ್ಪುದೆ ಮುಯ್ಯನಾಕೃತಿಗೆ ಪಂಚಿಕೆವೇಳ್ವುದದರ್ಕೆ ಟಿಪ್ಪಣಂ<br>
ಬೇಳ್ಪುದು ಟೀಕುವೇಳ್ಪುದೆನೆ ಪೆಳ್ದವನುಂ ಕವಿಯೆಂಬ ಲೆಕ್ಕಮೇ? (ಕಾ.ಲೋ. ಲಕ್ಷ್ಯ-299)

ಹೀಗೆ ನಾಗವರ್ಮ ಪಂಚಿಕೆ, ಟಿಪ್ಪಣಿ, ಟೀಕು ಹೇಳುವವನೂ ಕೂಡ ಕವಿಯೆಂಬ ಲೆಕ್ಕವೇ? ಎಂದು ಹೇಳುತ್ತ ಕವಿಯ ಮಟ್ಟಕ್ಕೆ ಟೀಕಾಕಾರನನ್ನು ಪರಿಗಣಿಸುವ ಪರಿಪಾಠ ಇರಲಿಲ್ಲ ಎಂದು ಸೂಚಿಸಿದ್ದಾನೆ. ಟೀಕು, ಟಿಪ್ಪಣಿಗಳಲ್ಲಿ ಕಾವ್ಯದಲ್ಲಿ ಇರುವುದನ್ನೇ ಹೇಳುವುದರಿಂದ ಅವರನ್ನು ಕವಿಗಳೆಂದು ನಮ್ಮವರು ಪರಿಗಣಿಸುತ್ತಿರಲಿಲ್ಲ. ಬೇರೊಬ್ಬರು ಹೇಳಿದುದನ್ನೆ ಮತ್ತೆ ಹೇಳುವವನನ್ನು ಜಡನೆಂದೂ ಕುಕವಿಯೆಂದೂ ನಮ್ಮವರು ಜರೆಯುವುದರಿಂದ ಇಂತಹ ಟೀಕಾಕಾರರಿಗೆ ಕವಿಸಮಾನ ಸ್ಥಾನ ಇರಲಿಲ್ಲ.

### 2.18.2. ಶೈಕ್ಷಣಿಕ ಉದ್ದೇಶ ಮತ್ತು ಟೀಕು

ಪರಿಕರಶಾಸ್ತ್ರಗಳಾದ ಛಂದಸ್ಸು, ನಿಘಂಟು, ವ್ಯಾಕರಣ, ಲಕ್ಷಣ-ಮೀಮಾಂಸೆಗಳೆಲ್ಲವೂ ಕಾವ್ಯರೂಪದಲ್ಲೆ ಸೃಷ್ಟಿಯಾಗುತ್ತಿದ್ದವು. ಹಾಗಾಗಿ ಇವುಗಳನ್ನು ಅಭ್ಯಾಸ ಮಾಡುವ ವಿದ್ಯಾರ್ಥಿಗಳು ಇವುಗಳು ಹೇಳುವ ವಿಚಾರಗಳನ್ನು ತಿಳಿಯಲು ಇವುಗಳ ಕಾವ್ಯರೂಪವನ್ನು ಒಡೆದುಕೊಳ್ಳಬೇಕಾಗಿತ್ತು. ಹಾಗಾಗಿ ಶೈಕ್ಷಣಿಕ ಉದ್ದೇಶದಿಂದಲೂ ನಮ್ಮಲ್ಲಿ ಟೀಕುಗಳು ಸೃಷ್ಟಿಯಾಗಿವೆ. ಕಾವ್ಯಶಾಸ್ತ್ರವನ್ನು ಓದಿ ನಮ್ಮ ಜನ ಕಾವ್ಯಗಳನ್ನು ಬರೆದರೋ ಇಲ್ಲವೋ ತಿಳಿಯದು. ಅಂದರೆ ಕಾವ್ಯಮೀಮಾಂಸೆಯಿಂದ ನಮ್ಮಲ್ಲಿ ಕಾವ್ಯಗಳು ಸೃಷ್ಟಿಯಾದವೋ ಇಲ್ಲವೋ ಕಾವ್ಯಮೀಮಾಂಸೆಗಾಗಿ ಮಾತ್ರ ನಮ್ಮಲ್ಲಿ ಕಾವ್ಯಗಳು ಸೃಷ್ಟಿಯಾಗಿವೆ. ಶಾಸ್ತ್ರಸಾಹಿತ್ಯ ಮತ್ತು ಕಾವ್ಯಸಾಹಿತ್ಯ ಎಂದು ಲಿಪಿಕ ಪರಂಪರೆಯನ್ನು ಎರಡಾಗಿ ನೋಡುವ ಪರಿಪಾಟವು ನಮ್ಮಲ್ಲಿದೆ. ಆದರೆ ಶಾಸ್ತ್ರಸಾಹಿತ್ಯ ಕೂಡ ಕಾವ್ಯರೂಪಿ ಸಾಹಿತ್ಯವೇ ಆಗಿದೆ. ಇಂತಹ ಶಾಸ್ತ್ರ ಮತ್ತು ಕಾವ್ಯಗಳಿಗೆ ಟೀಕುಗಳು ಹುಟ್ಟುವ ಮೂಲಕವೇ ಪೂರ್ವ ಕಾವ್ಯ ಸ್ವರೂಪದ ಬಗೆಗೆ ಒಂದು ಸಿದ್ಧಾಂತವನ್ನು ಮಂಡಿಸಿವೆ. ಅದೆಂದರೆ ಗದ್ಯಸಿದ್ಧಾಂತ. ಅಂದರೆ ಕಾವ್ಯರೂಪ ಯಾವುದೇ ವಿಚಾರವನ್ನು ಹೇಳಿರಲಿ ಅದು ಮನನವಾಗುವುದು ಆ ರೂಪದಿಂದ ಬಿಡುಗಡೆಗೊಳ್ಳುವ ಮೂಲಕವೇ. ಕಾವ್ಯವು ಗದ್ಯ(ವಚನ-ಮಾತು) ಆಗಿ ಅನುವಾದಗೊಳ್ಳುವ ಮೂಲಕವೇ. ಅಧ್ಯಯನದ ಕ್ರಮವೇ ಇದು. ವಯಕ್ತಿಕವಾದ ಓದು ಮತ್ತು ಸಾಮುದಾಯಿಕವಾದ ವಾಚನ-ಪಾರಾಯಣಗಳಲ್ಲಿ ಕಾವ್ಯವು ಕಾವ್ಯವೇ ಆಗಿ ತಲುಪುತ್ತಿತ್ತೋ ಅಥವಾ ವಚನವಾಗಿ ಪರಿವರ್ತಿತವಾಗಿ ತಲುಪುತ್ತಿತ್ತೋ ಎಂಬುದು ಬಗೆಹರಿಯದ ಪ್ರಶ್ನೆ. ಆದರೆ ಶೈಕ್ಷಣಿಕ ಅಧ್ಯಯನಗಳಲ್ಲಿ ಮಾತ್ರ ಈ ರೂಪಾಂತರ ಸಾಮಾನ್ಯವಾಗಿ ನಡೆಯುತ್ತದೆ.

## 2.18.3. ಟೀಕು ಸ್ವತಂತ್ರ ಶಿಸ್ತು-ವೃತ್ತಿ

ಟೀಕುಗಳಲ್ಲಿ ಟುಪ್ಪೀಕು ಮತ್ತು ವಿಸ್ತಾರ ಟೀಕು ಎಂದು ಎರಡು ಟೀಕುಗಳಿವೆ. ಸಂಕ್ಷಿಪ್ತವಾದ ಟಿಪ್ಪಣಿರೂಪಿ ಟೀಕು ಟುಪ್ಪೀಕಾದರೆ ವಿಸ್ತೃತ ವ್ಯಾಖ್ಯಾನವು ವಿಸ್ತಾರ ಟೀಕು ಆಗಿದೆ. ಈ ಎರಡು ಬಗೆಗಳನ್ನು ಪ್ರತ್ಯೇಕವಾಗಿ ಕನ್ನಡದಲ್ಲಿ ಬೆಳೆಸಿಲ್ಲ. ಕಾಲಕಾಲದ ಅಗತ್ಯಗಳಿಗೆ ಅನುಗುಣವಾಗಿ ಟೀಕುಗಳು ನಮ್ಮಲ್ಲಿ ಬೆಳೆದು ಬಂದಿವೆ. ವಚನ ಸಾಹಿತ್ಯಕ್ಕೆ ಬಂದಿರುವ ಟೀಕುಗಳನ್ನು ಗಮಿಸಿದರೆ ಅಲ್ಲಿ ಶರಣರ ವಚನಗಳಿಗೆ ಬಂದಿರುವ ಟೀಕು ಮತ್ತು ಧಾರ್ಮಿಕ ಆಚರಣೆಯ ಗ್ರಂಥಗಳಿಗೆ ಬಂದಿರುವ ಟೀಕು ಎಂದು ಸ್ಥೂಲವಾಗಿ ಎರಡು ಬಗೆಗಳಿರುವುದು ಕಾಣುತ್ತದೆ. ಇಲ್ಲಿ ಎರಡನೇ ವರ್ಗದ ಟೀಕುಗಳ ಸಂಖ್ಯೆಯೇ ಹೆಚ್ಚು.

ಟೀಕು ರಚನೆಯು ಒಂದು ಸ್ವತಂತ್ರವಾದ ಅಧ್ಯಯನ ಶಿಸ್ತಾಗಿ ನಮ್ಮಲ್ಲಿ ಬೆಳೆದಿದೆ. ಸಂಪಾದನೆ ಮತ್ತು ಟೀಕುಗಳು ನಮ್ಮಲ್ಲಿ ಸಹಸಂಬಂಧಿ ಶಿಸ್ತುಗಳಾಗಿವೆ. ಸಂಪಾದನೆಯ ಬೋಳಬಸವ, ಸಂಪಾದನೆಯ ಸಿದ್ದವೀರ, ಸಂಪಾದನೆಯ ಗುರುಲಿಂಗ ಹೀಗೆ ಸಂಪಾದನಾ ಕಾರ್ಯದಿಂದಲೇ ವ್ಯಕ್ತಿಗಳನ್ನು ಗುರ್ತಿಸುವ ಪರಿಪಾಟವು ನಮ್ಮಲ್ಲಿ ಇರುವಂತೆ ಟೀಕಾಕಾರ್ಯದಿಂದ ವ್ಯಕ್ತಿಗಳನ್ನು ಗುರ್ತಿಸುವ ಪರಿಪಾಟವೂ ಇದೆ. ವಚನ ಟೀಕಾಕಾರರನ್ನು ಇದೇ ಹಿನ್ನೆಲೆಯಲ್ಲಿ ಟೀಕಾಚಾರ್ಯರೆಂದೇ ಕರೆಯಲಾಗುತ್ತದೆ. ಬಾಗಲಕೋಟೆಯ ಈಗಿನ ತೆಂಗಿನಮಠದ ನಿಜನಾಮ ಟೀಕಿನ ಮಠ. ಶ್ರೀ ರೇವಣಸಿದ್ದೇಶ್ವರ ಸ್ವಾಮಿಗಳು ಅನೇಕ ಕೃತಿಗಳಿಗೆ ಟೀಕು ಬರೆದು ಟೀಕಾಚಾರ್ಯರೆಂದೇ ಖ್ಯಾತರಾಗಿದ್ದವರು. ನರಗುಂದದ ವಿರಕ್ತಮಠವು ಟೀಕಾಮಠವಾಗಿತ್ತೆಂಬ ಜನವದಂತಿಯಿದೆ. ಆರೂಢ ಸಂಪ್ರದಾಯದ ಬಿಜಾಪುರದ ಷಣ್ಮುಖಸ್ವಾಮಿಗಳ ಮಠದಲ್ಲಿ ಹಲವಾರು ವ್ಯಾಖ್ಯಾನ ಕೃತಿಗಳ ಸಂಗ್ರಹವಿದ್ದು ಇದೂ ಕೂಡ ಟೀಕಿನ ಮಠವಿರಬೇಕೆಂದು ಊಹಿಸಲವಕಾಶವಿದೆ. ಸವದತ್ತಿ ತಾಲೂಕಿನ ಹಳ್ಳೂರಿನಲ್ಲಿ ಕಪ್ಪಿನ ನಂಜಯ್ಯನ ನಾಂದ್ಯ ನುಡಿ, ಗಿರಿಜಾಕಲ್ಯಾಣದ ನುಡಿ, ಚೇರಮಾಂಕನ ಕಾವ್ಯದ ನಾಂದ್ಯ ನುಡಿ ಮೊದಲಾದ ಪಲವು[42] ಟೀಕುಗಳು ದೊರಕಿವೆ. ಹಾಗಾಗಿ ಹಳ್ಳೂರಿನಲ್ಲಿ ಈ ಮೊದಲು ಟೀಕಿನ ಮಠವೊಂದು ಇದ್ದಿರಬೇಕು. ಶ್ರೀ ಚನ್ನಬಸವೇಶ್ವರನ ವಚನದ ಪುಸ್ತಕವನ್ನು ಪ್ರತಿ ಮಾಡಿದವನು ಟೀಕಿನ ಮಠದ ಸಂತತಿಯ ಅರ್ಚಲೇರಿ ವಿರಕ್ತ ಮಠದ ಸಿದ್ಧರಾಮಪ್ಪ ಎಂಬ ಹಸ್ತಪ್ರತಿಯಲ್ಲಿನ ಉಲ್ಲೇಖದಿಂದ ಕರ್ನಾಟಕದಲ್ಲಿ ಟೀಕಿನ ವಂಶಸ್ಥರಿರುವುದು ಸಾಬೀತಾಗುತ್ತದೆ.[43] ಹೀಗೆ ಟೀಕು ರಚನೆಯನ್ನೆ ವಿದ್ಯೆಯಾಗಿ ಕಲಿತು ತಲಾಂತರದಿಂದ ವೃತ್ತಿ ಮಾಡುತ್ತ ಬಂದಿರುವುದೂ ಕೂಡ ನಮ್ಮಲ್ಲಿದೆ. ಇದಕ್ಕಾಗಿ ಹಲವಾರು ಮಠಗಳು ಸಹಕಾರ ನೀಡಿವೆ. ಮಠಗಳ ಸಮಾಜಸೇವೆಯ ಹಲವು ಅಂಗಗಳಲ್ಲಿ ವಚನ-ವೀರಶೈವ ಧಾರ್ಮಿಕ ಸಾಹಿತ್ಯದ ಸಂರಕ್ಷಣೆ, ಪೋಷಣೆ ಮತ್ತು ಪ್ರಸರಣ ಕೂಡ ಇದ್ದುದರಿಂದ ವಚನಟೀಕೆ, ವಚನ ಸಂಪಾದನಾ ಕಾರ್ಯಗಳು ಸಮಾಜ ಸೇವೆಯೆಂಬಂತೆ ಮಠಗಳಲ್ಲಿ ನಡೆದು ಬಂದಿವೆ. ಹೊಟ್ಟೆಪಾಡಿನ ಉದ್ಯೋಗಗಳಾಗಿಯೂ ನಡೆದು ಬಂದಿವೆ. ಸಾಹಿತ್ಯವು ಬದುಕಿಗಾಗಿ ಮತ್ತು ಬದುಕಲಿಕ್ಕಾಗಿ ಇದೆ/ಇರಬೇಕು ಎಂಬ ತತ್ವವು ಇಂಥ ಬಳಕೆ-ಆಚರಣೆಗಳಿಂದ ಧೃಡಪಡುತ್ತದೆ.

## 2.18.4. ಗದ್ಯದ ಭಿನ್ನ ಬಗೆ; ಟೀಕಾ ಗದ್ಯ

ನಮ್ಮಲ್ಲಿ ಚಂಪೂ ಕೃತಿಗಳಲ್ಲಿ ಅಲ್ಲಲ್ಲಿ ಗದ್ಯ(ವಚನ) ಬರುತ್ತದೆ. ವಡ್ಡಾರಾಧನೆ ಪಂಚತಂತ್ರಗಳಲ್ಲಿ ಗದ್ಯ ಬರುತ್ತದೆ. ಮುದ್ರಾಮಂಜೂಷದಲ್ಲಿಯೂ ಬರುತ್ತದೆ. ಈ ಗದ್ಯಗಳೆಲ್ಲವು ಕಾವ್ಯಾತ್ಮಕ ಗದ್ಯಗಳೇ. ಆದರೆ ಟೀಕು, ವ್ಯಾಖ್ಯಾನಗಳಲ್ಲಿ ಬಳಕೆಯಾಗುವ ಗದ್ಯದ ಸ್ವರೂಪ ಬೇರೆ. ಇದನ್ನು ಟೀಕಾಗದ್ಯ ಅಥವಾ ವ್ಯಾಖ್ಯಾನ ಗದ್ಯ ಎಂದು ಕರೆಯಬಹುದು. ಟೀಕು ಟಿಪ್ಪಣಿ ವ್ಯಾಖ್ಯಾನ, ಪಂಚಿಕೆ ಚೂರ್ಣ, ಭಾಷ್ಯ ಇತ್ಯಾದಿಗಳಲ್ಲಿ ಬಳಕೆಯಾಗಿರುವ ಗದ್ಯ ಕೂಡ ಏಕರೂಪಿ ಅದುದಲ್ಲ. ಬಹುರೂಪಿಯಾದದ್ದು. ಆದರೂ ಎಲ್ಲ ಟೀಕು ಗದ್ಯಗಳಲ್ಲಿ ಒಂದು ಸಾಮ್ಯಾನ್ಯತೆಯನ್ನು ಕಾಣಬಹುದು. ಹಾಗಾಗಿ ಎಲ್ಲ ಬಹುರೂಪಿಯಾದ ಟೀಕುಗದ್ಯಗಳನ್ನು ಒಟ್ಟಾರೆಯಾಗಿ ಒಂದೇ ಹೆಸರಿನಿಂದ ಟೀಕಾಗದ್ಯ ಎಂದು ಕರೆಯುವುದು ಒಳಿತು.

ವಡ್ಡಾರಾಧನೆಯಲ್ಲಿರುವ ಗದ್ಯವು ಅನುವಾದದ ಭಾಷೆಯಂತೆ, ಟೀಕುಗದ್ಯದಂತೆ ಕಾಣುವುದೇ ಇಲ್ಲ. ಇದರ ಹೆಸರು ವಡ್ಡಾರಾಧನೆ ಅಲ್ಲ. ಆರಾಧನಾ ಕರ್ಣಾಟಟೀಕಾ, ಇದರ ಕರ್ತೃ ಭ್ರಾಜಿಷ್ಣು ಎಂದು ಹಂಪನಾ ಹೇಳುತ್ತಾರಾದರೂ ಈ ಗ್ರಂಥವನ್ನು ಟೀಕಾ ಗ್ರಂಥ ಎನ್ನಲು ಆಗುವುದಿಲ್ಲ. ಇದೊಂದು ಪುನರ್ಕಥನ. ಪಂಪ, ರನ್ನ, ಪೊನ್ನರು ತಮ್ಮ ಪುರಾಣಗಳನ್ನು ಚಂಪೂ ಪ್ರಕಾರದಲ್ಲಿ ಹೇಗೆ ಪುನರ್ಕಥಿಸಿದ್ದಾರೋ ಹಾಗೇ ಶಿವಕೋಟ್ಯಾಚಾರ್ಯನೂ ಬೃಹತ್ಕಥೆಯನ್ನು ಪುನರ್ಕಥಿಸಿದ್ದಾನೆ. ಹಾಗಾಗಿ ಇಲ್ಲಿನ ಗದ್ಯಕ್ಕೆ ಒಂದು ಸ್ವತಂತ್ರ ಅಸ್ತಿತ್ವ ಮತ್ತು ಸ್ವೋಪಜ್ಞತೆ ಇದೆ. ಇದನ್ನು ಟೀಕಾಗದ್ಯದ ಒಂದು ಮಾದರಿ ಎನ್ನಲು ಬಾರದು.

ಟೀಕು ರೂಪಿ ವಿಮರ್ಶೆಯು, ಸಂಸ್ಕೃತ, ಪ್ರಾಕೃತ, ಕನ್ನಡ ಈ ಮೂರು ಭಾಷೆಯ ಗ್ರಂಥಗಳಿಗೆ ನಮ್ಮಲ್ಲಿ ರಚನೆಯಾಗಿದೆ. ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಎಷ್ಟು ಸಾಹಿತ್ಯ ಕೃತಿಗಳು ರಚನೆಯಾಗಿರಬಹುದೋ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಟೀಕುಗಳು ರಚನೆಯಾಗಿವೆ. ಟೀಕುಗಳ ಭಿನ್ನ ಸ್ವರೂಪ, ಉದ್ದೇಶ, ಕಾರಣ, ಪರಿಣಾಮಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡಿದರೆ ಇದೆ ಒಂದು ಸಂಶೋಧನೆಯ ಅಧ್ಯಯನವಾಗುವಷ್ಟು ವ್ಯಾಪ್ತಿಯನ್ನು ಪಡೆದಿದೆ. ನಮ್ಮಲ್ಲಿ ರಚಿತವಾಗಿರುವ ಅನೇಕ ಟೀಕುಗಳು ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖವೂ ಆಗದೆ ಇವೆ. ಆಮೂಲಾಗ್ರ ಕ್ಷೇತ್ರಕಾರ್ಯದಿಂದ ಇವುಗಳನ್ನೆಲ್ಲ ಹೊರತಗೆದು ಅಧ್ಯಯನ ಮಾಡಿದರೆ ಟೀಕುರೂಪಿ ಕನ್ನಡ ವಿಮರ್ಶೆಯ ಒಂದು ಪಂಥವನ್ನೆ ತೆರೆದಂತೆ ಆಗುತ್ತದೆ. ಆಚರಣೆ, ಅನುಭವ, ವಿಚಾರ ಮತ್ತು ಜ್ಞಾನಗಳನ್ನು ಜನಕ್ಕೆ ತಲುಪಿಸುವ ಭಿನ್ನ ಮಾದರಿಗಳನ್ನು; ಸಾಹಿತ್ಯ ಕೃತಿಗಳಿಗೆ ನಮ್ಮ ಜನ ಕಾಲ ಕಾಲಕ್ಕೆ ಮುಖಾಮುಖಿಯಾದ ಭಿನ್ನ ಮಾರ್ಗಗಳನ್ನು ಇದರಿಂದ ತಿಳಿದುಕೊಳ್ಳಬಹುದಾಗಿದೆ. ಸಾಹಿತ್ಯ ಮತ್ತು ಸಮಾಜದ ನಡುವಿನ ಅನುಸಂಧಾನದ ಅನುಕ್ತ ಅಧ್ಯಾಯವೊಂದು ಇದರಿಂದ ತೆರೆದುಕೊಳ್ಳುತ್ತದೆ. ಸಾಹಿತ್ಯದ ಅನುಸಂಧಾನದ ಒಂದು ಪ್ರಧಾನವಾದ ವಿಧಾನವು ಈ ಟೀಕುವೇ ಆಗಿರುವುದರಿಂದ ಇದರ ಅಧ್ಯಯನವು ಕನ್ನಡ ಸಂಸ್ಕೃತಿ ಚರಿತ್ರೆಯ ರೂಪಣೆಯ ಒಂದು ಮಗ್ಗುಲನ್ನು ನಮಗೆ ತೆರೆದು ತೋರಬಲ್ಲುದಾಗಿದೆ. ಬರೀ ವಿಮರ್ಶಾ ಅಧ್ಯಯನಕ್ಕೆ ಸಂಬಂಧಿಸಿ ಹೇಳುವುದಾದರೆ ಟೀಕು ಪರಂಪರೆಯ ಆಮೂಲಾಗ್ರ ಅಧ್ಯಯನವು ನಮ್ಮ ಪ್ರಾಚೀನ ವಿಮರ್ಶಾ ಪರಂಪರೆಯ ಅನುಕ್ತ ಅಧ್ಯಾಯವೊಂದನ್ನು ಖಂಡಿತಾ ತೆರೆಯಬಲ್ಲದು.

**2.19. ಭಾಷಾಂತರ**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪದ್ಯದ ರೂಪ ಮತ್ತು ಛಂದಸ್ಸಿನಿಂದ ಕಥನವನ್ನು ಬಿಡುಗಡೆಗೊಳಿಸಿ ಸಾಹಿತ್ಯವನ್ನು ಗದ್ಯ ನಿರೂಪಣೆಗೆ ಮತ್ತು ಅರ್ಥವಿವರಣೆಗೆ ಒಗ್ಗಿಸುವ ಟೀಕಾ ಕ್ರಿಯೆ ಮತ್ತು ಸರಳೀಕರಣ ಕ್ರಿಯೆಗಳೆಲ್ಲವೂ ಭಾಷಾಂತರ ರೂಪಿ ವಿಮರ್ಶೆಗಳೇ ಆಗಿವೆ. ಒಂದು ಬಾಷೆಯಿಂದ ಬೇರೆ ಬೇರೆ ಭಾಷೆಗಳಿಗೆ ಅಲ್ಲದೆ ಒಂದೇ ಭಾಷೆಯ ಭಿನ್ನ ರೂಪ ಮತ್ತು ಅವಸ್ಥಾಂತರಗಳಿಗೆ ಕೂಡ ಕೃತಿಗಳು ಭಾಷಾಂತರ ಆಗುತ್ತಾ ಬಂದಿವೆ. ಅಂದರೆ ಕನ್ನಡದಿಂದ ಕನ್ನಡಗಳಿಗೆ ಮತ್ತು ಕನ್ನಡದಿಂದ ಅನ್ಯ ಬಾಷೆಗಳಿಗೆ ನಮ್ಮ ಚರಿತ್ರೆಯಲ್ಲಿ ಭಾಷಾಂತರಗಳು ನಡೆದಿವೆ, ಇವೆಲ್ಲವು ವಿಮರ್ಶೆಯ ಯತ್ನಗಳೆ.

ಪ್ರಭಾವ, ಸ್ಫೂರ್ತಿ, ಪ್ರೇರಣೆಗಳಿಂದ ಅನ್ಯ ಭಾಷೆಯ ಕಥನಗಳ್ನು ಕನ್ನಡದಲ್ಲಿ ಪುನರ್ಕಥಿಸಿರುವ ಒಂದು ಪರಂಪರೆಯೇ ಇದೆ. (ಅದನ್ನು ಬೇರೆಡೆ ಈಗಾಗಲೇ ಚರ್ಚಿಸಲಾಗಿದೆ) ಆದರೆ ಪುನರ್ಕಥನಗಳು ಇರುವಂತೆಯೇ ಬಾಷಾಂತರಗಳೂ ಇವೆ. ಕೆಲವನ್ನು ಉದಾಹರಣೆಗೆ ಕರ್ನಾಟಕ ಕಾದಂಬರಿ, ಕರ್ನಾಟಕ ಭಾರತ ಕಥಾಮಂಜರಿ ಇಂಥವನ್ನು ನಮ್ಮ ಕವಿಗಳೇ ಕನ್ನಡ ಅವತರಣಿಕೆಗಳು ಎಂದು ಹೇಳಿಕೊಂಡಿದ್ದರೂ ಅವನ್ನು ಭಾಷಾಂತರಗಳೆಂದು ಕರೆಯಲಾಗುವುದಿಲ್ಲ. ಅವೆಲ್ಲಾ ಪುನರ್ಕಥನಗಳು. ಆದರೆ ಕನ್ನಡ ಕುವಲಯಾನಂದ ಒಂದು ಭಾಷಾಂತರ ಕೃತಿ. ಅಪ್ಪಯ್ಯದೀಕ್ಷಿತರ ಕುವಲಯಾನಂದದ ಭಾಷಾಂತರ ಇದು. ಹಾಗೇ ಮಾಧವಕವಿಯ ಮಧವಾಲಂಕಾರ ದಂಡಿಯ ಕಾವ್ಯಾದರ್ಶದ ಭಾಷಾಂತರ. 'ಇದು ಕನ್ನಡದ ಪ್ರಥಮ ಭಾಷಾಂತರ ಕೃತಿ'[44](?)

ಭಾಷಾಂತರಗಳು ಕೂಡ ಒಂದು ತೆರನ ವಿಮರ್ಶೆಗಳೇ. ಮುದ್ರಣ ಸೌಕರ್ಯ ಇಲ್ಲದಿರುವ ಕಾಲದಲ್ಲಿ ಜನಬಳಕೆಗೆ ಕೃತಿಯ ಬೇಡಿಕೆ ಇಲ್ಲದಿದ್ದರೆ, ಜನ ಕೃತಿಯನ್ನು ಮೆಚ್ಚಿ ಆದರಿಸದಿದ್ದರೆ ಭಾಷಾಂತರಗಳು ಆಗುವುದಿಲ್ಲ. ಭಾಷಾಂತರಗಳು, ಮರುಕಥನಗಳು ಆಯಾ ಕೃತಿಯ ಮೌಲ್ಯವನ್ನು ಹೇಳುತ್ತವೆ. ಶಿವಯೋಗಿ ಶಿವಾಚಾರ್ಯನ ಸಿದ್ಧಾಂತ ಶಿಖಾಮಣಿ, ಚಾಮರಸನ ಪ್ರಭುಲಿಂಗಲೀಲೆ, ಮತ್ತು ನಿಜಗುಣ ಶಿವಯೋಗಿಯ ವಿವೇಕ ಚಿಂತಾಮಣಿಗಳು ಸುಮಾರು ಕ್ರಿ.ಶ. 1652ರಲ್ಲಿ ತಮಿಳಿಗೆ ಅನುವಾದಗೊಂಡಿವೆ. 1750ರ ಕಾಲದಲ್ಲಿ ಮೈಸೂರಿನ ನಂಜರಾಜಯ್ಯನು ವಿವೇಕ ಚಿಂತಾಮಣಿಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾನೆ. ಇದು ಮರಾಠಿಗೂ ಅನುವಾದವಾಗಿದೆ.[45]

ನಂಜರಾಜನ ಕಾಶೀಮಹಿಮಾರ್ಥದರ್ಪಣ, ಹಾಲಾಸ್ಯ ಮಹಾತ್ಮ್ಯಗಳು ತೆಲುಗಿಗೆ ಅನುವಾಗೊಂಡಿವೆ. ಸೋಮೇಶ್ವರನ ಶತಕವನ್ನು ರಾಘವೇಂದ್ರಾವ್ ಆಲಂಪುರಿ (ಜಜ್) ಉರ್ದುವಿಗೆ ಅನುವಾದಿಸಿದ್ದಾನೆ. ಮಹಲಿಂಗರಂಗನ ಅನುಭವಾಮೃತವು ತೆಲುಗು ಮತ್ತು ಸಂಸ್ಕೃತಗಳಿಗೆ ಅನುವಾದವಾಗಿದೆ. 14ನೇ ಶತಮಾನದಲ್ಲಿ ರಚಿತವಾದ ಮಲೆಯಾಳಿ ಲಕ್ಷಣಗ್ರಂಥ ಲೀಲಾತಿಲಕಂನ ಕತೃವಿಗೆ ಕವಿರಾಜಮಾರ್ಗ, ಕಾವ್ಯಾವಲೋಕನಗಳು ತಿಳಿದಿದ್ದವೆಂದು ವಿದ್ವಾಂಸರು ಚರ್ಚಿಸಿದ್ದಾರೆ. ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲೆ ಬಸವಪುರಾಣವನ್ನು

ಬರೆದಿದ್ದಾನೆ. ಅದನ್ನು ನಮ್ಮ ಭೀಮಕವಿ ಕನ್ನಡಕ್ಕೆ ಅನುವಾದಿಸಿದ್ದಾನೆ. ತನ್ನ ಬಸವಪುರಾಣದಲ್ಲಿ ಪಾಲ್ಕುರಿಕೆ ಸೋನಾಥನು ಅಲ್ಲಮನ ಕೆಲವು ವಚನಗಳನ್ನೂ ಅನುವಾದಿಸಿ ಅಳವಡಿಸಿಕೊಂಡಿದ್ದಾನೆ.[46] ಹೀಗೆ ನಮ್ಮ ಪರಂಪರೆಯುದ್ದಕ್ಕು ಅನ್ಯ ಭಾಷಾ ಸಾಹಿತ್ಯದೊಂದಿಗಿನ ಅನುಸಂಧಾನ-ಭಾಷಾಂತರ ಕ್ರಿಯೆಗಳು ನಡೆಯುತ್ತಲೇ ಬಂದಿವೆ. ನಮ್ಮ ಎಲ್ಲ ಕವಿಗಳೂ ಕನಿಷ್ಠ ದ್ವಿಭಾಷಾ ಪಂಡಿತರಾಗಿದ್ದಾರೆ. ಕೆಲವರು ಬಹುಭಾಷಾ ಪಂಡಿತರು.

**2.20. ದಂತಕತೆಗಳು**

ಕುಮಾರವ್ಯಾಸ, ಹರಿಹರ, ಚಾಮರಸ, ರಾಘವಾಂಕ, ನೇಮಿಚಂದ್ರ, ಕನಕದಾಸ ಮೊದಲಾದವರಿಗೆ ಸಂಬಂಧಿಸಿದಂತೆ ಹಲವಾರು ದಂತಕತೆಗಳಿವೆ. ಅವರವರ ಕಾವ್ಯಗಳಿಗೆ ಸಮಾಜದಲ್ಲಿ ಸಿಕ್ಕ ಪ್ರತಿಕ್ರಿಯೆ ರೂಪದ ವಿಮರ್ಶೆಗಳಿಗೆ ಈ ದಂತಕತೆಗಳು ಉದಾಹರಣೆಗಳಾಗಿವೆ. ಪ್ರಭುಲಿಂಗಲೀಲೆಯನ್ನು ನೂರೊಂದು ವಿರಕ್ತರು ಸೇರಿ ಆನೆಯ ಮೇಲಿಟ್ಟು ಮೆರವಣಿಗೆ ಮಾಡಿದ ಕತೆ, ಕುಮಾರವ್ಯಾಸನ ಹೆಂಡತಿ ಚಾಮರಸನ ತಂಗಿಯಾಗಿದ್ದಳು ಮತ್ತು ಅವಳು ತನ್ನ ಗಂಡನ ಕಾವ್ಯವಾದ ಗದುಗಿನ ಭಾರತವು ಎಲ್ಲಿ ಕಡಿಮೆಯಾಗುತ್ತದೋ ಎಂದು ತಿಳಿದು ಅಣ್ಣ ಚಾಮರಸನ ಪ್ರಭುಲಿಂಗಲೀಲೆಯನ್ನು ಸುಟ್ಟುಹಾಕಿದಳು ಎಂಬ ಕತೆ, ರಾಘವಾಂಕನು ಹರಿಶ್ಚಂದ್ರ ಕಾವ್ಯ ಬರೆದಾಗ ಹರಿಹರ ಕೆರದಿಂದ ಹೊಡೆದು ಆತನ ಹಲ್ಲುಗಳನ್ನು ಉದುರಿಸಿದ ಮತ್ತೆ ಆಮೇಲೆ ರಾಘವಾಂಕ ಶೈವ ಪಂಚಕಗಳನ್ನು ಬರೆದು ತನ್ನ ಉದುರಿಹೋಗಿದ್ದ ಹಲ್ಲುಗಳನ್ನು ಪಡೆದ ಎಂಬ ಕತೆ, ಹರಿಹರನು ರಗಳೆಗಳನ್ನು ಬರೆದ ಮೇಲೆ ಅವುಗಳನ್ನು ಓದಿದ ತಮಿಳಿನ ಒಬ್ಬ ಸುಂದರಿ ಅವನನ್ನು ಹುಡುಕಿಕೊಂಡು ಬಂದಿದ್ದಳು ಎಂಬ ಕಥೆ.[47] ನೇಮಿಚಂದ್ರನು ಕಾದಂಬರಿಯನ್ನು ಸುಡಿಸಿ ತನ್ನ ಲೀಲಾವತಿ ಪ್ರಬಂಧಕ್ಕೆ ಕಪ್ಪನ್ನು ಇಡಿಸಿದ ಎಂಬ ಕತೆ, ಹರಿಹರನನ್ನು ಎಲ್ಲರೂ ರಗಳೆಯ ಕವಿ ಎಂದು ತೆಗಳಿದಾಗ ಆತ ಗಿರಿಜಾಕಲ್ಯಾಣವನ್ನು ಬರೆದು ತಾನೂ ಮಹಾಕವಿ ಎಂದು ತೋರಿಸಿದ ಎಂಬ ಕತೆ, ರತ್ನಾಕರವರ್ಣಿಯು ಜೈನ ಧರ್ಮದಿಂದ ವೀರಶೈವ ಧರ್ಮಕ್ಕೆ ಮತಾಂತರಗೊಂಡು ಮತ್ತೆ ಜೈನ ಧರ್ಮಕ್ಕೆ ವಾಪಸು ಬಂದ ಎಂಬ ಕತೆ ಹೀಗೆ ಈ ಎಲ್ಲ ಕತೆಗಳೂ ನಿಜವೋ ಸುಳ್ಳೋ ಎಂಬುದು ಅಪ್ರಸ್ತುತ. ಆದರೆ ಕಾವ್ಯದ ಕುರಿತಾದ ವಿಮರ್ಶಾತ್ಮಕ ಪ್ರತಿಕ್ರಿಯೆಗಳೇ ಇವಾಗಿವೆ ಎಂಬುದು ಮಾತ್ರ ನಿಜ. ದಂತಕತೆಗಳಾದರೂ ಯಾಕೆ ಹುಟ್ಟುತ್ತವೆ ಮತ್ತು ಯಾಕೆ ಅವು ಕಾಲಾನಂತರದಲ್ಲಿ ಹಾದು ಬರುತ್ತವೆ? ನಮ್ಮಲ್ಲಿ ಎಲ್ಲವನ್ನು ಬರೆದು ದಾಖಲಿಸುವ ಪರಪಾಠ ಇಲ್ಲ. ಅದರಲ್ಲೂ ಕವಿಗಳ, ಪಂಡಿತರ, ದೊಡ್ಡವರ ನಿಜನಾಮಕ್ಕೆ ಧಕ್ಕೆಯಾಗುವಂತಹ ವಿವರಗಳಿದ್ದರೆ ಅವು ಬರೆಯಲ್ಪಡುವುದಕ್ಕಿಂತ ದಂತಕತೆಗಳಾಗಿ ಚಾಲ್ತಿಯಾಗುವುದೇ ಹೆಚ್ಚು. ಬೆಂಕಿಯಿಲ್ಲದೆ ಹೊಗೆ ಏಳುವುದು ಸಾಧ್ಯವಿಲ್ಲವಾದ್ದರಿಂದ ಈ ಕತೆಗಳ ಹಿಂದೆ ವಾಸ್ತವವೂ ಇರಬಹುದು. ನಮ್ಮ ಎಷ್ಟೋ ಕವಿ-ಸಾಹಿತ್ಯ ಸಂಬಂಧಿ ಪವಾಡಕತೆಗಳೂ ಕೂಡ ದಂತಕತೆಗಳಂತೆಯೇ ಸಾಹಿತ್ಯ ಪರಂಪರೆಯ ವಿಮರ್ಶೆಗಳಾಗಿವೆ. ತಮ್ಮ ಒಡಲಲ್ಲಿ ಇವು ಅನೇಕ ಚಾರಿತ್ರಿಕ ಮತ್ತು ಧ್ವನ್ಯಾತ್ಮಕ ಸಾಧ್ಯತೆಗಳನ್ನು ಬಚ್ಚಿಟ್ಟುಕೊಂಡಿರುತ್ತವೆ. ಇವು ವಾಸ್ತವಗಳ ಅನ್ಯೋಕ್ತಿಗಳೂ ಹೌದು. ಇವುಗಳ ಪ್ರತ್ಯೇಕವಾದ ಅಧ್ಯಯನವು ಸಾಹಿತ್ಯ ಮತ್ತು ವಿಮರ್ಶೆಯ ಸಂಬಂಧಗಳನ್ನು ಕೂಡ ತೆರೆಯಬಲ್ಲದು.

**2.21. ಪ್ರಕ್ಷಿಪ್ತಗಳು**

ಓಲೆಗರಿಗಳಲ್ಲಿ ಕಾವ್ಯಗಳನ್ನು ಬರೆದು ಸಂರಕ್ಷಿಸಿ ಇಟ್ಟುಕೊಳ್ಳುವ, ಪ್ರತಿಮಾಡಿ ತಲೆಮಾರಿನಿಂದ ತಲೆಮಾರಿಗೆ ರವಾನಿಸುವ ಪರಿಪಾಠವು ಚಾಲ್ತಿಯಲ್ಲಿದ್ದಾಗ ಕಾಲಾನಂತರದಲ್ಲಿ ಪ್ರತಿಕಾರರು ಕಾವ್ಯಗಳಲ್ಲಿ ಕಯ್ಯಾಡಿಸಿರುವುದುಂಟು. ಕೆಲವು ಪದ್ಯ, ಪದ್ಯಭಾಗ, ಪ್ರಸಂಗಗಳನ್ನು ಬರೆದು ಸೇರಿಸಿರುವುದುಂಟು. ಬೇರೊಬ್ಬರ ಅಂಕಿತದಲ್ಲಿ ತಾವೇ ಬರೆದಿರುವುದೂ ಉಂಟು. ಹರಿಹರನ ರಗಳೆಗಳಲ್ಲಿ ಹಲವಾರು ರಗಳೆಗಳೇ ಬೇರೆಯವರು ಬರೆದವು ಎಂಬ ಬಗ್ಗೆ ನಮ್ಮಲ್ಲಿ ಸಾಕಷ್ಟು ಸಂಶೋಧನೆಗಳೂ ನಡೆದಿವೆ. ಹಾಗೆ ನೋಡಿದರೆ ನಮ್ಮ ಕಾವ್ಯಗಳು ಕವಿಯ ಹಸ್ತಾಕ್ಷರದಿಂದ ರಚಿತವಾದ ಪ್ರತಿಗಳ ರೂಪದಲ್ಲಿ ನಮಗೆ ದೊರಕಿರುವುದು ತೀರಾ ಕಡಿಮೆ. ಕಾಲ ಕಾಲದಲ್ಲಿ ಅವರಿವರು ಬರೆದು ಪ್ರತಿಮಾಡುತ್ತ ಬಂದಾಗ ಪ್ರಕ್ಷಿಪ್ತಗಳಾಗುವುದು ಸಹಜ.

ಬಸವಣ್ಣ, ಸರ್ವಜ್ಞ, ಪುರಂದರ, ಕನಕ, ಹರಿಹರ ಇವರುಗಳ ಹೆಸರಿನಲ್ಲಿ-ಇವರುಗಳ ಶೈಲಿ ರೂಪಗಳನ್ನು ಅನುಕರಿಸಿ ಅನೇಕರು ಬರೆದಿದ್ದಾರೆ ಕೂಡ. ಕಾವ್ಯಗಳ ನಡುನಡುವೆ ಬರೆದು ಸೇರಿಸುವುದು ಪ್ರಕ್ಷಿಪ್ತದ ಒಂದು ರೂಪವಾದರೆ ಬೇರೊಬ್ಬರ ಹೆಸರಿನಲ್ಲಿ ಬರೆಯುವುದು ಇನ್ನೊಂದು ರೂಪ. ಹೀಗೆ ಪ್ರಕ್ಷಿಪ್ತಗಳೆಂದರೆ ಎರಡು ಬಗೆಗಳಿವೆ. ಕೆಲವೊಮ್ಮೆ ವಾಚಕರಿಗೆ ತಾವು ಜನಕ್ಕೆ ಏನನ್ನೋ ಹೇಳಬೇಕು ಎಂಬ ಅಭಿಲಾಷೆ ಇರುತ್ತದೆ. ಆದರೆ ಅದನ್ನು ಅನಾಮಧೇಯರಾದ ತಾವು ಹೇಳಿದರೆ ಅದಕ್ಕೆ ಮಾನ್ಯತೆ ಸಿಗುವುದಿಲ್ಲ

ಎಂಬುದೂ ಗೊತ್ತಿರುತ್ತದೆ. ಅಂತಹ ಸಂದರ್ಭಗಳಲ್ಲಿ ಇದನ್ನು ಅಲ್ಲಮ ಹೇಳಿದ, ಇದನ್ನು ಬಸವಣ್ಣ ಹೇಳಿದ ಎಂದರೆ ಜನ ಒಪ್ಪುತ್ತಾರೆ ಎಂಬುದು ಅವರಿಗೆ ಗೊತ್ತಿರುತ್ತದೆ. ಆಗ ಕುಶಲಿಗಳಾದ ವಾಚಕ ಮಹಾಶಯರು ದೊಡ್ಡವರಾದ ಯಾರೋ ಒಬ್ಬರ ಹೆಸರಿನಲ್ಲಿ ಬರೆಯುತ್ತಾರೆ. ಇಂಥ ಕಳ್ಳ-ಸುಳ್ಳ ಹೆಸರಿನ ಬರಹಗಳನ್ನು ಸಾಹಿತ್ಯಕ್ಕೆ ತೋರಿದ ವಿಮರ್ಶೆ ಎನ್ನಲು ಬರುವುದಿಲ್ಲ. ತಮ್ಮ ಅಭಿಪ್ರಾಯವನ್ನು ಇನ್ನೊಬ್ಬರ ಹೆಸರಿನಲ್ಲಿ ಸಮಾಜದ ಒಳಕ್ಕೆ ಚಲಾವಣೆಗೆ ಬಿಡುವ ಹುನ್ನಾರ ಇದಷ್ಟೆ. ಸರ್ವಜ್ಞನ ಹೆಸರಿನಲ್ಲಿ 'ಬರಿಗಾಲಲ್ಲಿ ನಡೆವವನ ಕರೆದು ಕೆರದಲ್ಲಿ ಹೊಡೆಯೆಂದ ಸರ್ವಜ್ಞ' ಎಂಬ ಪ್ರಕ್ಷಿಪ್ತವೊಂದು ಇದೆ. ಚಾರಣ ಪ್ರಜ್ಞೆಯ ಕವಿಯಾದ ಸರ್ವಜ್ಞ ಹೀಗೆ ಚಪ್ಪಲಿ ಇಲ್ಲದವರಿಗೆ ಅವಮಾನವಾಗುವಂತೆ ಬರೆದಿರಲಾರ. ಖಂಡಿತಾ ಯಾರೋ ಪ್ರಾಸಪ್ರಿಯ ಕುಕವಿಯೊಬ್ಬನ ಪ್ರಕ್ಷಿಪ್ತವಿದು. ಇಂತಹ ಪ್ರಕ್ಷಿಪ್ತಗಳನ್ನ ಸಾಹಿತ್ಯಕ್ಕೆ ತೋರಿದ ಪ್ರತಿಕ್ರಿಯೆ ಎನ್ನಲು ಬರುವುದಿಲ್ಲ. ಕೆಲವರಿಗೆ ದೊಡ್ಡದೊಡ್ಡವರ ಮಾತುಗಳನ್ನು ಕೋಟು ಮಾಡುವ ಚಟ ಇರುವಂತೆ ಕೆಲವರಿಗೆ ದೊಡ್ಡವರ ಹೆಸರಿನಲ್ಲಿ ಬರೆಯುವ ತೆವಲು ಇರುತ್ತದೆ. ಅಂತಹ ತೆವಲಿನ ರಚನೆಗಳನ್ನೆಲ್ಲ ಅವು ಪ್ರಕ್ಷಿಪ್ತಗಳು ಎಂಬ ಕಾರಣಕ್ಕೆ ವಿಮರ್ಶೆಗಳೆನ್ನಲು ಬರುವುದಿಲ್ಲ. ಆದರೆ ಕೆಲವು ಪ್ರಕ್ಷಿಪ್ತಗಳು ನಿಜಕ್ಕೂ ಸಾಹಿತ್ಯದ ಓದಿನ ಫಲವಾಗಿ ಹುಟ್ಟಿದ ಅಭಿಪ್ರಾಯಗಳೇ ಆಗಿರುತ್ತವೆ. ಅಂತಹ ಪ್ರಕ್ಷಿಪ್ತಗಳೆಲ್ಲ ವಿಮರ್ಶೆಗಳೇ. ಅವುಗಳನ್ನು ಸಾರಾಸಗಟಾಗಿ ನಿರಾಕರಿಸಲು ಬರುವುದಿಲ್ಲ. ಪ್ರಕ್ಷಿಪ್ತಗಳು ಯಾಕೆ ರಚನೆಯಾಗುತ್ತವೆ? ಮತ್ತು ಹಾಗೇ ಯಾಕೆ ಪ್ರಕ್ಷಿಪ್ತಗಳು ರಚನೆಯಾಗುತ್ತವೆ? ಇದಕ್ಕೆ ಕಾಲಕಾಲಕ್ಕೆ ಬೇರೆ ಬೇರೆ ಕಾರಣಗಳಿರುತ್ತವೆ. ಆದರೆ ಒಂದಂತೂ ನಿಜ ಜನರು ಕಾವ್ಯವನ್ನು ಮೆಚ್ಚಿ ಬಳಸಲು, ಮೆಚ್ಚದೇ ತಿದ್ದಲು ಯತ್ನಿಸಿದಾಗೆಲ್ಲ ಪ್ರಕ್ಷಿಪ್ತಗಳು ಸೃಷ್ಟಿಯಾಗಿವೆ. ಕಾವ್ಯವನ್ನು ಬಳಸುವುದು ಮತ್ತು ಬಳಸದೇ ಇರುವುದು ಕೂಡ ವಿಮರ್ಶೆಯೇ. ಹಾಗಾಗಿ ಬಹುಪಾಲು ರೀತಿಯ ಎಲ್ಲಾ ಕಾಲದ ಪ್ರಕ್ಷಿಪ್ತಗಳು ಕಾವ್ಯ ಪರಂಪರೆಗೆ ಜನ ತೋರಿದ ವಿಮರ್ಶೆಗಳೇ ಆಗಿವೆ.

ಒಂದು ಉದಾಹರಣೆ: 1ನೆ ನಾಗವರ್ಮನ ಛಂದೋಂಬುಧಿಯು ಮತ್ತೆ ಮತ್ತೆ ಪ್ರತಿ ಮಾಡಿಕೊಳ್ಳಲ್ಪಟ್ಟಿರುವ ಗ್ರಂಥ. ಪ್ರತಿಕಾರರು ತಮಗೆ ಸರಿ ಕಂಡ ಕಡೆಯಲ್ಲೆಲ್ಲ ಹೊಸ ಹೊಸ ಪದ್ಯಗಳನ್ನು ಸೇರಿಸುತ್ತ ಹೋಗಿದ್ದಾರೆ. ಛಂದೋಂಬುಧಿಯ ಮೊದಲ ಸಂಜ್ಞಾ ಪ್ರಕರಣದಲ್ಲಿ ನಾಗವರ್ಮನು ರಚಿಸಿದ 23 ಪದ್ಯಗಳಿದ್ದರೆ ಪ್ರಕ್ಷಿಪ್ತಗಳು 121 ಪದ್ಯಗಳಿವೆ. ಐದಾರು ಪಟ್ಟು ಹೆಚ್ಚಿಗೆ ಪ್ರಕ್ಷಿಪ್ತಗಳು ಸೇರಿಸಲ್ಪಟ್ಟಿವೆ. ಎಂದರೆ ಗ್ರಂಥವು ಮತ್ತೆ ಮತ್ತೆ ಮರುಪರೀಶೀಲನೆಗೆ ಗುರಿಯಾಗಿದೆ ಎಂದೇ ಅರ್ಥ. ಯಾವುದೇ ಲಕ್ಷಣಗ್ರಂಥ ಸರ್ವಮಾನ್ಯವೂ, ಪರಿಪೂರ್ಣವೂ ಆಗಿ ರಚಿಸಲ್ಪಡಲು ಸಾಧ್ಯವಿಲ್ಲ. ಅದರಲ್ಲಿ ಒಬ್ಬೊಬ್ಬರೂ ಒಂದೊಂದು ಕೊರತೆಯನ್ನು ಕಾಣುತ್ತಾರೆ. ಕೆಲವರು ಪ್ರತಿ ಗ್ರಂಥಗಳನ್ನೆ ಸ್ವತಂತ್ರವಾಗಿ ರಚಿಸಿದರೆ ಇನ್ನು ಕೆಲವರು ಪ್ರಕ್ಷಿಪ್ತಗಳನ್ನು ಸೇರಿಸುತ್ತಾರೆ. ಶಾಸ್ತ್ರ ಪ್ರಕ್ಷಿಪ್ತಗಳು ಕೂಡ ಬಿನ್ನ ಕಾಲದ, ಭಿನ್ನ ಅಭಿರುಚಿಯ, ಭಿನ್ನ ಸೈದ್ಧಾಂತಿಕತೆಯ ವಿಮರ್ಶೆಗಳು. ಕಾವ್ಯಕ್ಕೆ ಪ್ರವೇಶಿಸುವ ಪ್ರಕ್ಷಿಪ್ತಗಳು ಕಾವ್ಯ ವಿಮರ್ಶೆಗಳಾದರೆ; ಲಕ್ಷಣಶಾಸ್ತ್ರಕ್ಕೆ ಪ್ರವೇಶಿಸುವ ಪ್ರಕ್ಷಿಪ್ತಗಳು ಲಕ್ಷಣ ವಿಮರ್ಶೆಗಳಾಗಿವೆ. ನಾಗವರ್ಮನ ಛಂದೋಂಬುಧಿಯಲ್ಲಿನ ಒಂದು ಪ್ರಕ್ಷಿಪ್ತ ಪದ್ಯವು; 'ಒಳ್ಳೆಯ ಪದರಚನೆ, ಪರಿಪೂರ್ಣ ರಸೋಚಿತವಾದ ಅರ್ಥ, ಅರ್ಥ ಮತ್ತು ಔಚಿತ್ಯವುಳ್ಳ ಪುರಾಣ ಪದಪದ್ಧತಿ.. ಇತ್ಯಾದಿಗಳಿಂದ ನಾಗವರ್ಮನ ಕಾವ್ಯವು ಕಾಳಿದಾಸನನ್ನೆ ಮೀರಿಸಿತು.' (ಛಂದೋ. 3ನೆ ಪದ್ಯದ ಪ್ರಕ್ಷಿಪ್ತ) ಎಂದು ನಾಗವರ್ಮ ಬರೆದಂತೆಯೇ ಬರೆಯಲ್ಪಟ್ಟಿದೆ. ನಾಗವರ್ಮನ ಛಂದೋಂಬುಧಿಯನ್ನು ಸ್ತುತಿಸುವ ಸುಮಾರು ಹತ್ತಿಪ್ಪತ್ತು ಪ್ರಕ್ಷಿಪ್ತ ಪದ್ಯಗಳು ಇಲ್ಲಿ ಇವೆ. ಇವೆಲ್ಲವೂ ನಾಗವರ್ಮನ ಸ್ತುತಿರೂಪಿ ವಿಮರ್ಶೆಗಳೇ ಆಗಿವೆ.

ಪ್ರಕ್ಷಿಪ್ತಗಳನ್ನು ನಿರಾಕರಣೆಯ ನೆಲೆಯಲ್ಲಿ ಆಧುನಿಕರು ನೋಡುತ್ತ ಬಂದಿದ್ದಾರೆ. ಪಾಠಾಂತರಗಳ ವಿಷಯದಲ್ಲಿ ಮೂಲ ಪಾಠ, ಶುದ್ಧಪಾಠ, ಕವಿಪಾಠ, ಪ್ರಕ್ಷಿಪ್ತಪಾಠ ಎಂಬ ಬೇಧಗಳನ್ನು ಗ್ರಂಥ ಸಂಪಾದನೆಯಲ್ಲಿ ಸ್ವೀಕಾರಾರ್ಹ ಮತ್ತು ಅಸ್ವೀಕಾರಾರ್ಹ ಎಂದೇ ನೋಡುತ್ತ ಬಂದಿದ್ದಾರೆ. ಇಂತಹ ಪ್ರತಿಕ್ರಿಯೆಗಳ ಹಿಂದೆ ಕುಕವಿಗಳ ಕುಚೋದ್ಯಗಳನ್ನು ಇಲ್ಲವಾಗಿಸುವ ಪ್ರಯತ್ನವೇ ಹೆಚ್ಚಿಗೆ ಇದೆ. ಪ್ರಕ್ಷಿಪ್ತಗಳನ್ನು ನಿರಾಕರಿಸುವಾಗ ಪ್ರಕ್ಷಿಪ್ತಗಳ ಕಾರಣ, ಸಾಂಸ್ಕೃತಿಕ ಮಹತ್ವಗಳನ್ನು ಗಮನದಲ್ಲಿ ಇರಿಸಿಕೊಳ್ಳುವುದು ಒಳ್ಳೆಯದು. ಅವುಗಳನ್ನು ನಮ್ಮ ಕಾವ್ಯಗಳಿಗೆ ಜನ ಪ್ರತಿಕ್ರಿಯಿಸಿದ ಒಂದು ಬಗೆ ಎಂದು ನೋಡಿದರೆ ಅದರಿಂದ ನಮ್ಮ ವಿಮರ್ಶೆಯ ಪ್ರಾಗ್ರೂಪಗಳ ಪಾರ್ಶ್ವವೊಂದರ ದರ್ಶನವೇ ಆಗುತ್ತದೆ. ನಮ್ಮ ಸಾಂಸ್ಕೃತಿಕ ರಾಜಕಾರಣದ ಪಾರ್ಶ್ವವೊಂದರ ದರ್ಶನವೇ ಆಗುತ್ತದೆ.

## 2.22. ಇನ್ನಿತರ ಅನುಸಂಧಾನಗಳು

ಕೇಳಿಕೆ, ತಾಳಮದ್ದಲೆ, ಹರಿಕತೆ, ಶಿವಕತೆ, ಪುಣ್ಯಕಥಾ ಶ್ರವಣ, ವಿಚಾರಕ್ಕೆ ಹಾಕುವುದು, ನಾಟಕ, ಯಕ್ಷಗಾನ, ಗಮಕ ಇತ್ಯಾದಿಗಳನ್ನು ಇಲ್ಲಿ ಇತರ ಅನುಸಂಧಾನಗಳು ಎನ್ನಲಾಗಿದೆ. ಈ ಇತರ ಅನುಸಂಧಾನಗಳು ನಮ್ಮ ಸಮಾಜವು ಬೇರೆ ಬೇರೆ ರೂಪಗಳಲ್ಲಿ ಸಾಹಿತ್ಯಕ್ಕೆ ಸ್ಪಂದಿಸಿದ ಬಗೆಗಳೇ ಆಗಿವೆ. ಇವುಗಳು ನಮ್ಮ ಸಮಾಜದಲ್ಲಿನ ವಿಮರ್ಶೆಯ ಆಚರಣಾರೂಪದ ಬೇರೆ ಬೇರೆ ಬಗೆಗಳನ್ನು ಒಳಗೊಂಡಿವೆ. ಇವುಗಳ ಒಂದೊಂದರ ಅಧ್ಯಯನವೂ ಹಲವು ಸಂಶೋಧನಾ ಅಧ್ಯಯನಗಳ ವ್ಯಾಪ್ತಿ ಉಳ್ಳವಾದುದರಿಂದ ಇಲ್ಲಿ ಇವನ್ನು ಸವಿಸ್ತಾರವಾಗಿ ವಿಶ್ಲೇಷಿಸದೆ ಎಲ್ಲವನ್ನು ಒಟ್ಟಾಗಿ ಕೆಲವೇ ಮಾತುಗಳಲ್ಲಿ ವಿವರಿಸಿಕೊಳ್ಳಲು ಯತ್ನಿಸಲಾಗುವುದು.

ವಿಚಾರಕ್ಕೆ ಹಾಕುವ ಒಂದು ಆಚರಣೆಯನ್ನು ಬಿಟ್ಟರೆ, ಮೇಲಿನ ಮಿಕ್ಕ ಎಲ್ಲವೂ ಪ್ರದರ್ಶನ ಕಲೆಗಳೇ ಆಗಿವೆ. ಈ ಕಲೆಗಳಲ್ಲಿ ಕೆಲವು ಸಾಹಿತ್ಯವನ್ನು ಆಧರಿಸಿ ಹುಟ್ಟಿದ ಕಲೆಗಳಾಗಿದ್ದರೆ, ಕೆಲವು ಸಾಹಿತ್ಯವನ್ನು ಸಾಧನವಾಗಿ ಬಳಸುವ ಕಲೆಗಳಾಗಿವೆ. ಪ್ರದರ್ಶನ ಕಲೆಗಳು ಚರಿತ್ರೆ, ವರ್ತಮಾನ, ಭವಿಷ್ಯತ್ತುಗಳೆಲ್ಲವನ್ನು ಒಂದೇ ಘಳಿಗೆಯಲ್ಲಿ ಇರಿಸಿನೋಡಬಲ್ಲವು. ಹಾಗೇ ವ್ಯಕ್ತಿ, ಪಂಥ-ಸಮುದಾಯಗಳೆಲ್ಲವನ್ನು ಪ್ರತಿನಿಧಿಸಬಲ್ಲವು. ವಯಕ್ತಿಕ ವಿಚಾರ-ತತ್ವಜ್ಞಾನ-ಲೌಕಿಕತೆ ಪಾರಮಾರ್ಥಿಕತೆ ಎಲ್ಲವನ್ನು ಒಳಗೊಳ್ಳಬಲ್ಲವು. ರಂಜನೆಯನ್ನು ನೀಡುತ್ತಲೇ ವಿಚಾರಪ್ರಚೋದನೆಯನ್ನೂ, ಮೌಲ್ಯರೂಪಣೆಯನ್ನೂ ಮಾಡಬಲ್ಲವು. ಇಂತಹ ಮೌಲಿಕವಾದ ಕೆಲವೇ ಜಾನಪದ ಪ್ರದರ್ಶನ ಕಲೆಗಳಲ್ಲಿ ತಾಳಮದ್ದಳೆಯೂ ಒಂದು. ಇದೊಂದು ಸಂಗೀತ, ಅಭಿನಯ, ಗಮಕವಾಚನ, ಸೃಜನಶೀಲ ಕಥನ, ಆಶು ಕವಿತೆ, ಅರ್ಥಗಾರಿಕೆಯ ವೈಚಾರಿಕ ಚಿಂತನೆಗಳನ್ನೆಲ್ಲ ಒಳಗೊಂಡ ಕಲಾಪ್ರಕಾರ. ಹಾಗೇ ಪುರಾಣ-ಚರಿತ್ರೆ-ವರ್ತಮಾನಗಳನ್ನು ಒಟ್ಟೊಟ್ಟಿಗೆ ಭಿನ್ನವಲ್ಲದಂತೆ ಬೆರೆಸಿ ನೋಡುವ; ಒಂದರೊಳಗೆ ಇನ್ನೊಂದನ್ನು ಸಮನ್ವಯಗೊಳಿಸಿ ನೋಡುವ ಒಂದು ಆಚರಣೆ. ಈ ಮಾತುಗಳನ್ನು ಸರಿಸುಮಾರು ಹರಿಕತೆಗೂ ಅನ್ವಯಿಸಬಹುದು. ಹರಿಕತೆಯಲ್ಲಿ ಹಲವು ಪಾತ್ರಗಳನ್ನು ಒಬ್ಬನೇ ಮಾಡುತ್ತಾನಷ್ಟೆ. ಹರಿಕತೆಯಲ್ಲಿಯೂ ವಾದ್ಯಗಾರರು ಇರುತ್ತಾರೆ. ಇನ್ನು ಉತ್ತರ ಕರ್ನಾಟಕದ ಕಡೆಯ ಕೇಳಿಕೆ ಅಥವಾ ವಿಚಾರಕ್ಕೆ ಹಾಕುವುದು ಇವೆರಡಕ್ಕಿಂತ ಭಿನ್ನವಾದ ಒಂದು ಸಾಹಿತ್ಯದ ಅನುಸಂಧಾನ. ತಾಳಮದ್ದಳೆ, ಹರಿಕತೆ ಮತ್ತು ಕೇಳಿಕೆ ಈ ಮೂರರಲ್ಲೂ ಇರುವ ಒಂದು ಸಮಾನ ಅಂಶವೆಂದರೆ ಅದು ನೈತಿಕತೆಯ ಜಿಜ್ಞಾಸೆ ಮತ್ತು ಪುರಾಣಕಾವ್ಯ ಕಥನಗಳ ವರ್ತಮಾನೀಕರಣ ಪ್ರಜ್ಞೆ.

ಗಮಕವಾಚನ, ಅಥವಾ ಗಮಕವ್ಯಾಖ್ಯಾನ ಒಂದು ಸ್ವತಂತ್ರವಾದ ಕಲೆ ಮತ್ತು ಸಾಹಿತ್ಯದ ಅನುಸಂಧಾನ. ಇದು ಯಕ್ಷಗಾನ ಮತ್ತು ಹರಿಕಥಾ ಕಲೆಗಳಲ್ಲಿ ಬೆರೆತೂ ಕೂಡ ಇರುತ್ತದೆ. ಹರಿಕತೆ, ಗಮಕ, ತಾಳಮದ್ದಳೆ, ಈ ಮೂರರಲ್ಲೂ ಕಾವ್ಯದ ಅಥವಾ ಕಥನದ ವಿಮರ್ಶೆಯೇ ನಿತ್ಯವೂ ಅಭಿನಯವಾಗುತ್ತಿರುತ್ತದೆ. ಚಲನಶೀಲ ಪಠ್ಯಗಳು, ಉಪಪಠ್ಯಗಳು, ಪ್ರತಿಪಠ್ಯಗಳು ಇಲ್ಲಿ ನಿರ್ಮಾಣವಾಗುತ್ತಿರುತ್ತವೆ. ವಿಮರ್ಶೆಯು ಕೇವಲ ಕಾವ್ಯದ ಪರೀಕ್ಷೆ ಅಲ್ಲ. ಅದೊಂದು ಬದುಕಿನ ಜೊತೆಗಿನ ಸೃಜನಶೀಲ ಮಧ್ಯಪ್ರವೇಶಿಕೆ ಎಂದು ಭಾವಿಸುವುದಾದರೆ: ಹರಿಕತೆ ಗಮಕ ತಾಳಮದ್ದಳೆಗಳೆಲ್ಲವೂ ಇಂತಹ ಸೃಜನಶೀಲ ಮಧ್ಯಪ್ರವೇಶದ ಕಾರ್ಯವನ್ನು ಮಾಡುತ್ತಿರುತ್ತವೆ. ಈ ದೃಷ್ಟಿಯಿಂದ ಇವೆಲ್ಲವೂ ವಿಮರ್ಶೆಯ ಭಿನ್ನ ರೂಪಗಳೇ ಆಗಿವೆ. ಈ ಮಾತು ಕೇಳಿಕೆಗೂ ಅನ್ವಯಿಸುತ್ತದೆ.

ನಮ್ಮ ಪ್ರಾಚೀನ ಕಾವ್ಯಗಳನ್ನು ಕೇಳಿಕೆಗೆ, ಹರಿಕಥೆಗಳಿಗೆ, ಶಿವಸಂಕಥಾ ಪ್ರಸಂಗಗಳಿಗೆ, ತಾಳಮದ್ದಳೆಗಳಿಗೆ, ನಾಟಕಗಳಿಗೆ, ಯಕ್ಷಗಾನಗಳಿಗೆ ಬೇರೆ ಬೇರೆ ರೂಪಾಂತರಿತ ರೂಪಗಳಲ್ಲಿ ಬಳಸಿಕೊಂಡಿರುವುದುಂಟು.[18] ಕೆಲವೊಮ್ಮೆ ಪದ್ಯಗಳನ್ನು ಬಳಸಿದರೆ ಕೆಲವೊಮ್ಮೆ ಉಕ್ತಿರೀತಿಯನ್ನು, ಕೆಲವೊಮ್ಮೆ ಪ್ರಸಂಗಗಳನ್ನು, ಕೆಲವೊಮ್ಮೆ ಇಡಿಯಾಗಿ ಕಥನಗಳನ್ನು ಬಳಸಿರುವುದುಂಟು. ಹರಿಕಥೆ ಶಿವಕಥೆಗಳಿಗೆ ಕವಿ-ಮಹಾಪುರುಷರ ಜೀವನ ಕಥೆಗಳನ್ನೆ ಕಥನಗಳನ್ನಾಗಿ ಬಳಸುವುದುಂಟು. ಇಂಥ ಎಲ್ಲ ಬಳಕೆಗಳಲ್ಲಿ ಆಯ್ಕೆ, ಅಲಕ್ಷ್ಯ, ಪ್ರತಿಪಠ್ಯ, ಸಹಪಠ್ಯಾದಿಗಳ ನಿರ್ಮಾಣ, ಕಾವ್ಯದ ಗುಣ ದೋಷಗಳ ಗುರ್ತಿಸುವಿಕೆ, ವ್ಯಾಖ್ಯಾನ, ಅರ್ಥಗಾರಿಕೆ, ಟೀಕೆ, ಪ್ರಶಂಸೆ ಹೀಗೆ ಹಲವು ಕಾರ್ಯಗಳು ಜರುಗುತ್ತಿರುತ್ತವೆ. ಒಂದೊಂದು ಅನುಸಂಧಾನಗಳು ಮತ್ತೆ ಮತ್ತೆ

ನಡೆದಾಗಲೂ ಇವೆಲ್ಲ ಬಿನ್ನವಾಗಿ ಸಂಭವಿಸುತ್ತಿರುತ್ತವೆ. ಇಂತಹ ಕ್ರಿಯೆಗಳೆಲ್ಲವೂ ವಿಮರ್ಶೆಯ ಭಿನ್ನ ಅಭಿನಯಗಳೇ. ಹಾಗಾಗಿ ಈ ಎಲ್ಲ ಯಕ್ಷಗಾನ, ತಾಳಮದ್ದಲೆ, ಭಜನೆ, ಕೀರ್ತನೆ, ನಾಟಕ, ಗಮಕ, ಕೇಳಿಕೆ, ಹರಿಕತೆ ರೀತಿಯ ಸಾಹಿತ್ಯಕ ಅನುಸಂಧಾನಗಳು ವಿಮರ್ಶೆಯ ಭಿನ್ನ ರೂಪಗಳೇ ಆಗಿವೆ.

ಇಂತಹ ಬೇರೆ ಬೇರೆ ಕಲಾಪ್ರಕಾರಗಳಲ್ಲಿ, ಬೇರೆ ಬೇರೆ ಶಿಸ್ತುಗಳಲ್ಲಿ ನಮ್ಮ ರಚಿತ ಪರಂಪರೆಯು ಬಳಕೆಗೆ ಗುರಿಯಾಗಿರುವ ಮತ್ತು ಬದುಕಿನಲ್ಲಿ ಬಾಳಿಗೆ ಗುರಿಯಾಗಿರುವ ಒಂದೊಂದು ಕವಲುಗಳು ಹಲವಾರು ಸಂಶೋಧನಾ ಅಧ್ಯಯನಗಳಾಗಬಲ್ಲ ವ್ಯಾಪ್ತಿ ಉಳ್ಳವಾಗಿವೆ. ಹಾಗಾಗಿ ಅವೆಲ್ಲವನ್ನು ಇಲ್ಲಿ ವಿಸ್ತೃತವಾಗಿ ವಿಮರ್ಶಾ ಮಾದರಿಗಳ ಸಮೇತ ವಿವರಿಸಲು ಹೋಗಿಲ್ಲ. ಇವೆಲ್ಲವೂ ವಿಮರ್ಶೆಗಳೇ ಹೌದು ಮತ್ತು ವಿಮರ್ಶೆಯ ಭಿನ್ನ ಭಿನ್ನ ಅವತಾರಗಳಾಗಿವೆ ಎಂದು ಮಾತ್ರ ಇಲ್ಲಿ ಸೂಚಿಸಲಾಗಿದೆ.

**ಕೊನೆಗೆ ಮೊದಲು**

ಈ ಅಧ್ಯಾಯದ ಒಟ್ಟಾರೆ ಹರಿವಿನ ಕುರಿತಾಗಿ ಇತಿ-ವ್ಯಾಪ್ತಿಗಳ ಕುರಿತಾಗಿ ಒಂದೆರಡು ಮಾತುಗಳನ್ನು ಹೇಳಬಹುದು.

- ಮೀಮಾಂಸೆಯಲ್ಲಿ ರಸ, ಧ್ವನಿ, ಔಚಿತ್ಯ ಇತ್ಯಾದಿ ಮೀಮಾಂಸೆಯ ವಿಚಾರ ಮಂಡನೆಗಳು ಪ್ರತ್ಯೇಕ ಸಿದ್ಧಾಂತಗಳಾಗುವ ವ್ಯಾಪ್ತಿಯನ್ನು ಪಡೆದಿವೆ. ಹಾಗೆಯೇ ನಮ್ಮ ಕವಿಗಳ 1. ಸುಜನ-ದುರ್ಜನ, ಸತ್ಕವಿ-ಕುಕವಿ, 2. ಗುಣ-ದೋಷ, 3. ಓದುಗುಣ-ಕೇಳುಗುಣ, 4. ನಾಮಕರಣ-ವರ್ಗೀಕರಣ ಇತ್ಯಾದಿ ಮೀಮಾಂಸೆಯ ವಿಚಾರಗಳ ಮಂಡನೆ ಕೂಡಾ ಸಿದ್ಧಾಂತಗಳಾಗುವ ವ್ಯಾಪ್ತಿಯನ್ನು ಪಡೆದಿವೆ. ಇವುಗಳಲ್ಲದೆ ಈ ಅಧ್ಯಾಯದಲ್ಲಿ ಚರ್ಚಿತವಾಗಿರುವ ಇನ್ನು ಹಲವು ವಿಚಾರಗಳು ಅಭಿಪ್ರಾಯದ ಮಟ್ಟದಲ್ಲೇ ಉಳಿದುಕೊಂಡಿವೆ. ಸಿದ್ಧಾಂತಗಳ ವ್ಯಾಪ್ತಿಯುಳ್ಳ ವಿಚಾರಗಳನ್ನು ಸಿದ್ಧಾಂತಗಳನ್ನಾಗಿ ರೂಪಿಸಿ ಮಂಡಿಸುವ ಕೆಲಸ ಈ ಅಧ್ಯಾಯದಲ್ಲಿ ಕೆಲಮಟ್ಟಿಗೆ ಆಗಿದೆಯಾದರೂ ಇನ್ನೂ ಆಗಬೇಕಿದೆ. ಹೀಗಾಗಿ ಇದು ಈ ಅಧ್ಯಾಯದ ಒಂದು ಮುಖ್ಯ ಕೊರತೆಯಾಗಿದೆ
- ನಮ್ಮ ಪ್ರಾಚೀನ ವಿಮರ್ಶೆಯ ರೂಪಗಳು ಮತ್ತು ದೃಷ್ಟಿಗಳು ವೈವಿಧ್ಯಮಯವಾಗಿವೆ. ಆದಾಗ್ಯೂ ಅದರಲ್ಲಿ ಕೊರತೆಗಳಿವೆ. ತತ್ವದ ನೆಲೆಯಲ್ಲಿ ಕಾವ್ಯಮೀಮಾಂಸೆಯ ಸ್ವರೂಪವನ್ನು ನಾವು ಒಂದು ದೃಷ್ಟಿಯಿಂದ ಸಮರ್ಥಿಸಬಹುದು. ನಮ್ಮ ಪ್ರಾಚೀನ ಸಾಹಿತ್ಯದ ವಿನ್ಯಾಸವು ಪದ್ಯಕಾವ್ಯ, ಗದ್ಯಕಾವ್ಯ, ಶಾಸ್ತ್ರಕಾವ್ಯ ಎಂಬ ಮೂರು ಧಾರೆಗಳಲ್ಲಿ ಮುಖ್ಯವಾಗಿ ಸಂಭವಿಸಿದೆಯಾಗಿ (ಇನ್ನೂ ಅನೇಕ ಧಾರೆಗಳಿವೆ ಎಂಬುದು ಬೇರೆ ಮಾತು) ಆಗ ಕಾವ್ಯಮೀಮಾಂಸೆ ಮಾತ್ರ ಚಾಲ್ತಿಯಲ್ಲಿತ್ತು. ಅದೂ ಕಾವ್ಯವೆಂದರೆ ಒಟ್ಟಾರೆ ಸಾಹಿತ್ಯ ಎಂಬ ಅರ್ಥದಲ್ಲೇ ಚಾಲ್ತಿಯಲ್ಲಿತ್ತು. ಆದರೆ ಕಾವ್ಯಮೀಮಾಂಸೆಯು ಪದ್ಯಕಾವ್ಯಗಳನ್ನು ಮಾತ್ರ ಹೆಚ್ಚಾಗಿ ಕೇಂದ್ರೀಕರಿಸಿ; ಗದ್ಯಕಾವ್ಯ ಮತ್ತು ಶಾಸ್ತ್ರಕಾವ್ಯಗಳ ಕಡೆ ಅಷ್ಟು ಗಮನ ಹರಿಸಿದಂತೆ ಕಾಣುವುದಿಲ್ಲ. ಕಾವ್ಯ-ಶಾಸ್ತ್ರಗಳಲ್ಲಿ ವ್ಯಕ್ತವಾಗಿರುವ ತತ್ವಗಳು ಒಟ್ಟಾರೆ ಸಾಹಿತ್ಯದ ಓದು, ರಚನೆ, ಅನುಸಂಧಾನಗಳಿಗೆ ಸಂಬಂಧಿಸಿವೆಯಾದರೂ ಗದ್ಯ ಮತ್ತು ಶಾಸ್ತ್ರಕಾವ್ಯಗಳಿಗೆ ವಿಶಿಷ್ಟವಾದ ಮೀಮಾಂಸೆಯ ಕಡೆ ಪ್ರಾಚೀನರ ಗಮನ ಹೋದಂತೆ ಕಾಣುವುದಿಲ್ಲ. (ಇದು ಪರೋಕ್ಷವಾಗಿ ಮೀಮಾಂಸೆಯು ಕಾವ್ಯವೇ ಮುಖ್ಯ ಮಿಕ್ಕೆಲ್ಲವೂ ಅಮುಖ್ಯವೆಂದು ಕಂಡರಿಸುವ ಶ್ರೇಣಿ ತತ್ವವಾಗಿದೆ) ಕಾವ್ಯ ಪರಿಕರಗಳ ನಿರ್ಮಾಣಕ್ಕೆ ಯತ್ನಿಸಿದಷ್ಟು ತೀವ್ರವಾಗಿ ಶಾಸ್ತ್ರ ಪರಿಕರಗಳ ತತ್ವ ನಿರ್ಮಾಣಕ್ಕೆ ನಮ್ಮವರು ಯತ್ನಿಸಿಲ್ಲ. ಹಾಗಾಗಿ ಈ ಎರಡು ಧಾರೆಗಳಿಗೆ ಮೀಮಾಂಸೆ ಕಟ್ಟಿಕೊಳ್ಳಲು ನಾವು ಆಚರಣೆಯ ತಾತ್ವೀಕರಣಕ್ಕೇ ಮೊರೆಹೋಗಬೇಕಾಗಿದೆ. ಆದರೆ ಈ ಅಧ್ಯಯನದಲ್ಲಿ ಗದ್ಯಕಾವ್ಯ ಮತ್ತು ಶಾಸ್ತ್ರಕಾವ್ಯಗಳ ಆಮೂಲಾಗ್ರ ಆಚರಣೆಯ ತಾತ್ವೀಕರಣವನ್ನು ನಡೆಸಲು ಆಗಿಲ್ಲ. ಹಾಗಾಗಿ ಇದೊಂದು ಈ ಅಧ್ಯಯನದ ಕೊರತೆಯಾಗಿದೆ.
- ತತ್ವಗಳ ಕ್ರೋಡೀಕರಣ ಮತ್ತು ಆಚರಣೆಗಳ ತಾತ್ವಿಕತೆ ಎಂಬ ಎರಡು ನೆಲೆಗಳ ಈ ಅಧ್ಯಯನದಲ್ಲಿ ಲಿಪಿಕ ಪರಂಪರೆಯನ್ನು ಮಾತ್ರವೇ ಪರಿಗಣಿಸಲಾಗಿದೆ. ಜಾನಪದ ಸಾಹಿತ್ಯಗಳನ್ನು ಪರಿಗಣಿಸಿಲ್ಲ. ಆದರೆ ಮೌಖಿಕದಲ್ಲಿ ಇರುವ ಕೆಲವು ಸಾಹಿತ್ಯದ ಅನುಸಂಧಾನಗಳಾದ ಯಕ್ಷಗಾನ, ತಾಳಮದ್ದಳೆ, ಪಾರಾಯಣ, ಕೇಳಿಕೆ, ಹರಿಕಥೆ ಇತ್ಯಾದಿಗಳನ್ನು ಕ್ವಚಿತ್ತಾಗಿ ವಿವರಿಸಿಕೊಳ್ಳಲಾಗಿದೆ. ಹಾಗಾಗಿ ಅಸಮಗ್ರತೆಯೇ ಈ ಅಧ್ಯಯನದ ಲಕ್ಷಣ ಮತ್ತು ಅಥವಾ ಕೊರತೆಯಾಗಿದೆ.
- ಸಾರಸಂಗ್ರಹ-ಸಂಪಾದನೆಗಳ ಚರ್ಚೆಯಲ್ಲಿ ಕೀರ್ತನ ಸಾಹಿತ್ಯದ ಬಗೆಗೆ ಅಷ್ಟಾಗಿ ಗಮನ ಹರಿಸಿಲ್ಲ. ಹಾಗಾಗಿ ಇದು ಈ ಅಧ್ಯಯನದ ಒಂದು ಕೊರತೆಯಾಗಿದೆ.

- ಸತ್ಕವಿ–ಕುಕವಿ ನಿರ್ವಚನ, ಕಾವ್ಯತತ್ವ, ಕವಿ ಗುಣನಿರ್ವಚನ, ಓದುಗ–ಕವಿ ಮೀಮಾಂಸೆ ಇತ್ಯಾದಿಗಳನ್ನು ಮತ್ತು ಪ್ರಕ್ಷಿಪ್ತ, ದಂತಕಥೆ, ಟೀಕು, ಸಂಪಾದನೆ, ಹರಿಕಥೆ, ತಾಳಮದ್ದಳೆ, ಕೇಳಿಕೆ, ಗಮಕ ಇತ್ಯಾದಿಗಳನ್ನು ವಿಮರ್ಶೆಯ ಪ್ರಾಗ್ರೂಪಗಳು ಎಂದು ಇಲ್ಲಿ ಭಾವಿಸಲಾಗಿದೆ. ಆಚರಣೆ ಎನ್ನುವುದನ್ನು ಇಲ್ಲಿ ವಿಧಿ ಆಚರಣೆ ಎಂಬ ಅರ್ಥದಲ್ಲಿ ಬಳಸಿಲ್ಲ. ಪ್ರಾಕ್ಟೀಸ್ ಎಂಬ ಅರ್ಥದಲ್ಲಿ ಬಳಸಲಾಗಿದೆ.
- ಪ್ರಾಚೀನ ಕಾವ್ಯಗಳಲ್ಲಿ ಮತ್ತು ಶಾಸ್ತ್ರಗಳಲ್ಲಿ ಮತ್ತು ಇತರ ಸಾಹಿತ್ಯದ ಅನುಸಂಧಾನಗಳಲ್ಲಿ ಪ್ರಕಟಗೊಂಡಿರುವ ವಿಮರ್ಶೆಯನ್ನು ಕಟ್ಟಿಕೊಳ್ಳುವ ಮತ್ತು ಕ್ರೋಡೀಕರಿಸುವ ಉದ್ದೇಶ ಇರಿಸಿಕೊಳ್ಳಲಾಗಿದೆ. ಹಾಗೆ ಕಟ್ಟಿಕೊಂಡ ಮತ್ತು ಕ್ರೋಡೀಕರಿಸಿದ ವಿಮರ್ಶೆಯ ವಿನ್ಯಾಸ ಮತ್ತು ಅದರ ತಾತ್ವಿಕತೆಗಳನ್ನು ಗುರ್ತಿಸುವ ಉದ್ದೇಶ ಇರಿಸಿಕೊಳ್ಳಲಾಗಿದೆ. ಹಾಗೆ ಗುರ್ತಿಸಿಕೊಂಡ ವಿಮರ್ಶೆಯ ವಿನ್ಯಾಸವನ್ನು ಪರಿಕಲ್ಪಿಸಿ ಹೇಳುವ ಕ್ರಮವನ್ನು ಇಲ್ಲಿ ಅನುಸರಿಸಲಾಗಿದೆ.
- ಈ ವಿಮರ್ಶೆಯ ಪರಿಕಲ್ಪನೀಕರಣ ಕ್ರಮದಲ್ಲಿ ಪರೋಕ್ಷವಾಗಿ ವಿಮರ್ಶೆಯ ಕುರಿತಾದ ವಿಮರ್ಶೆಯು ಪ್ರಕಟಗೊಂಡಿರಬಹುದಾದರೂ ಈ ಅಧ್ಯಯನದಲ್ಲಿ ವಿಮರ್ಶೆಯ ವಿಮರ್ಶೆಯನ್ನು ಮಾಡುವುದು ಉದ್ದೇಶವಲ್ಲ. ಹಾಗೆಯೇ ವಿಮರ್ಶೆಯ ಪ್ರಾಗ್ರೂಪಗಳ ವಿನ್ಯಾಸವನ್ನು ಪರಿಕಲ್ಪಿಸಿ ಹೇಳುವಾಗ ಅನಗತ್ಯವಾಗಿ ಕನ್ನಡ ಮತ್ತು ಸಂಸ್ಕೃತ; ಕನ್ನಡ ಮತ್ತು ಇಂಗ್ಲಿಶುಗಳ ನಡುವೆ ತೌಲನಿಕವಾಗಿ ಟಿಪ್ಪಣಿಕೆ(ಕಾಮೆಂಟು) ಮಾಡುವುದನ್ನು ಉದ್ದೇಶಪೂರ್ವಕವಾಗಿ ನಿಯಂತ್ರಿಸಲಾಗಿದೆ. ಇಂತಹ ತೌಲನಿಕ ಟಿಪ್ಪಣಿಕೆಗಳ ಮೂಲಕ ತರತಮ ಶ್ರೇಣೀಕರಣವು ಬಾರದಂತೆ ತಡೆಯಲು ಇಲ್ಲಿ ಉದ್ದೇಶಿಸಲಾಗಿದೆ ಮತ್ತು ಪ್ರಯತ್ನಿಸಲಾಗಿದೆ.
- ಕನ್ನಡ ವಿಮರ್ಶೆಯ ಪ್ರಾಗ್ರೂಪಗಳನ್ನು ವಿವರಿಸಿಕೊಳ್ಳುವಾಗ ಯಾವ ಯಾವ ರೂಪಗಳಲ್ಲಿ ವಿಮರ್ಶೆಯು ಸಂಭವಿಸಿದೆ ಎಂದು ಇಲ್ಲಿ ನೋಡಲಾಗಿದೆ. ಯಾವ ಯಾವ ದೃಷ್ಟಿಗಳು, ವಿನ್ಯಾಸಗಳು ಇವೆ ಎಂದು ನೋಡಲು ಯತ್ನಿಸಲಾಗಿದೆ. ಏನು ಇದೆ ಮತ್ತು ಹೇಗೆ ಇದೆ ಹಾಗೂ ಅದರಲ್ಲಿ ಪ್ರಕಟವಾಗುತ್ತಿರುವ ತಾತ್ವಿಕತೆಗಳು ಎಂಥವು ಎಂದು ಮಾತ್ರವೇ ಇಲ್ಲಿ ವಿವರಿಸಿಕೊಳ್ಳಲು ಪರಿಕಲ್ಪಿಸಿಕೊಳ್ಳಲು ಯತ್ನಿಸಲಾಗಿದೆ. ವಿಮರ್ಶೆಯ ಪ್ರಾಗ್ರೂಪಗಳ ಸಂಭವದ ಹಿಂದಿನ ಕಾರಣಗಳು ಮತ್ತು ಮುಂದಿನ ಪರಿಣಾಮಗಳನ್ನು ಕುರಿತ ಕಾರಣ ಪರಿಣಾಮ ಮೀಮಾಂಸೆಯನ್ನು ಇಲ್ಲಿ ಕಟ್ಟಿಕೊಳ್ಳಲು ಯತ್ನಿಸಿಲ್ಲ. ಇದು ಈ ಅಧ್ಯಯನದ ಉದ್ದೇಶವೂ ಅಲ್ಲ.
- ಬಿಡಿ ಬಿಡಿಯಾದ ಮಾತುಗಳ ಉದಾಹರಣೆಯಿಂದ ತತ್ವಗಳನ್ನು ಕ್ರೋಡೀಕರಿಸಿ ಅನಂತರ ಅವುಗಳನ್ನು ಪರಿಕಲ್ಪಿಸಿ ಅವುಗಳ ವಿನ್ಯಾಸವನ್ನು ತತ್ವಗಳ ಕ್ರೋಡೀಕರಣ ಎಂಬ ಭಾಗದಲ್ಲಿ ಅಧ್ಯಯನ ಮಾಡಿರುವುದರಿಂದ ಇಲ್ಲಿನ ನಿಲುವುಗಳಿಗೆ ಅತಿವ್ಯಾಪ್ತವಾಗುವ, ಸಾಧಾರಣೀಕರಣವಾಗುವ ಮಿತಿ ಇರಬಹುದು.
- ಈ ಅಧ್ಯಾಯದಲ್ಲಿ ನಮ್ಮ ಅಲಂಕಾಶಾಸ್ತ್ರಕಾರರು ಮಂಡಿಸಿರುವ ರಸ, ಧ್ವನಿ, ಅಲಂಕಾರ, ಔಚಿತ್ಯಾದಿ ತತ್ವ ಸಿದ್ಧಾಂತ ವಿಚಾರಗಳನ್ನು ಚರ್ಚಿಸಿಲ್ಲ. ಹಾಗಾಗಿ ನಮ್ಮ ವಿಮರ್ಶೆಯ ಪ್ರಾಗ್ರೂಪಗಳ ತಲಸ್ಪರ್ಶಿ ಅಧ್ಯಯನ ಇದಲ್ಲ. ಸಮಗ್ರ ಅಧ್ಯಯನ ಇದಲ್ಲ. ಕೆಲವು ಮಾದರಿ ಪ್ರಾಗ್ರೂಪಗಳ ಚರ್ಚೆ ಇದಷ್ಟೆ.

***

## ಸಂಕ್ಷಿಪ್ತನಾಮಗಳ ವಿವರ

| | | | |
|---|---|---|---|
| 1. | ಕ.ರಾ.ಮಾ. | : ಕವಿರಾಜಮಾರ್ಗ(860)–ಶ್ರೀವಿಜಯ | (ಅಲಂಕಾರ) |
| 2. | ವಡ್ಡಾ. | : ವಡ್ಡಾರಾಧನೆ(920)–ಶಿವಕೋಟ್ಯಾಚಾರ್ಯ | (ಗದ್ಯಕಾವ್ಯ) |
| 3. | ಆ.ಪು. | : ಆದಿಪುರಾಣ(942)–ಪಂಪ | (ಪದ್ಯಕಾವ್ಯ) |
| 4. | ಕ.ಕಾ. | : ಕರ್ನಾಟಕ ಕಾದಂಬರಿ(950)–1ನೆ ನಾಗವರ್ಮ | (ಪದ್ಯಕಾವ್ಯ) |
| 5. | ವಿ.ವಿ. | : ವಿಕ್ರಮಾರ್ಜುನ ವಿಜಯ(959)–ಪಂಪ | (ಪದ್ಯಕಾವ್ಯ) |
| 6. | ಭು.ರಾ. | : ಭುವನೈಕ ರಾಮಾಭ್ಯುದಯ(960)–ಪೊನ್ನ | (ಪದ್ಯಕಾವ್ಯ) |
| 7. | ಶಾಂ.ಪು. | : ಶಾಂತಿಪುರಾಣ(965)–ಪೊನ್ನ | (ಪದ್ಯಕಾವ್ಯ) |
| 8. | ಚಾ.ಪು. | : ಚಾವುಂಡರಾಯ ಪುರಾಣ(978)–ಚಾವುಂಡರಾಯ | (ಪದ್ಯಕಾವ್ಯ) |
| 9. | ಛಂದೋ. | : ಛಂದೋಂಬುಧಿ(990)–1ನೆ ನಾಗವರ್ಮ | (ಛಂದಸ್ಸು) |
| 10. | ಅ.ಪು. | : ಅಜಿತಪುರಾಣ(993)–ರನ್ನ | (ಪದ್ಯಕಾವ್ಯ) |
| 11. | ಸಾ.ಭೀ.ವಿ. | : ಸಾಹಸಭೀಮ ವಿಜಯ(1008)–ರನ್ನ | (ಪದ್ಯಕಾವ್ಯ) |
| 12. | ಕ.ಪಂ.ತಂ. | : ಕರ್ನಾಟಕ ಪಂಚತಂತ್ರಂ(1030)–ದುರ್ಗಸಿಂಹ | (ಪದ್ಯಕಾವ್ಯ) |
| 13. | ಕ.ಭಾ.ಭೂ. | : ಕರ್ನಾಟಕ ಭಾಷಾಭೂಷಣ(1050)–2ನೆ ನಾಗವರ್ಮ | (ಭಾಷೆ–ವ್ಯಾಕರಣ) |
| 14. | ಕಾ.ಲೋ. | : ಕಾವ್ಯಾವಲೋಕನ(1050)–2ನೆ ನಾಗವರ್ಮ | (ಅಲಂಕಾರ) |
| 15. | ಅ.ವ. | : ಅಭಿದಾನ ವಸ್ತುಕೋಶ(1050)–2ನೆ ನಾಗವರ್ಮ | (ಸಮಸಂಸ್ಕೃತ ನಿಘಂಟು) |
| 16. | ವೀ.ವ.ಪು. | : ವೀರ ವರ್ಧಮಾನ ಪುರಾಣ(1050)–2ನೆ ನಾಗವರ್ಮ | (ಪದ್ಯಕಾವ್ಯ) |
| 17. | ಸು.ಚ. | : ಸುಕುಮಾರ ಚರಿತ(1060)–ಶಾಂತಿನಾಥ(ಅಸಮಗ್ರ) | (ಪದ್ಯಕಾವ್ಯ) |
| 18. | ಛಂದೋನು. | : ಛಂದೋನುಶಾಸನ(1100)–ಜಯಕೀರ್ತಿ | (ಛಂದಸ್ಸು) |
| 19. | ಮ.ಪು. | : ಮಲ್ಲಿನಾಥ ಪುರಾಣ(1100)–ನಾಗಚಂದ್ರ | (ಪದ್ಯಕಾವ್ಯ) |
| 20. | ರಾ.ಚ.ಪು. | : ರಾಮಚಂದ್ರಚರಿತ ಪುರಾಣ(1100)–ನಾಗಚಂದ್ರ | (ಪದ್ಯಕಾವ್ಯ) |
| 21. | ಧರ್ಮಾ. | : ಧರ್ಮಾಮೃತ(1112)–ನಯಸೇನ | (ಪದ್ಯಕಾವ್ಯ) |
| 22. | ನೇ.ಪು. | : ನೇಮಿನಾಥ ಪುರಾಣ(1140)–ಕರ್ಣಪಾರ್ಯ | (ಪದ್ಯಕಾವ್ಯ) |
| 23. | ಉದಯಾ. | : ಉದಯಾದಿತ್ಯಾಲಂಕಾರ(ಕಾವ್ಯಾಲಂಕಾರ)(1150)–ಉದಯಾದಿತ್ಯ | (ಅಲಂಕಾರ) |
| 24. | ಸ.ಪ. | : ಸಮಯ ಪರೀಕ್ಷೆ(1150)–ಬ್ರಹ್ಮಶಿವ | (ಪದ್ಯಕಾವ್ಯ) |
| 25. | ಲೀಲಾ.ಪ್ರ. | : ಲೀಲಾವತಿ ಪ್ರಬಂಧ(1170)–ನೇಮಿಚಂದ್ರ | (ಪದ್ಯಕಾವ್ಯ) |
| 26. | ಶೃಂ.ರ. | : ಶೃಂಗಾರ ರತ್ನಾಕರ(1175)–ಕವಿಕಾಮ | (ರಸಮೀಮಾಂಸೆ) |
| 27. | ಅ.ನೇ.ಪು. | : ಅರ್ಧನೇಮಿ ಪುರಾಣ(1180)–ನೇಮಿಚಂದ್ರ | (ಪದ್ಯಕಾವ್ಯ) |
| 28. | ಜ.ವಿ. | : ಜಗನ್ನಾಥ ವಿಜಯ(1180)–ರುದ್ರಭಟ್ಟ | (ಪದ್ಯಕಾವ್ಯ) |
| 29. | ಚಂ.ಪು. | : ಚಂದ್ರಪ್ರಭ ಪುರಾಣ(1189)–ಅಗ್ಗಳ | (ಪದ್ಯಕಾವ್ಯ) |
| 30. | ವ.ಪು. | : ವರ್ಧಮಾನ ಪುರಾಣ(1195)–ಆಚಣ್ಣ | (ಪದ್ಯಕಾವ್ಯ) |
| 31. | ಗಿ.ಕ. | : ಗಿರಿಜಾ ಕಲ್ಯಾಣ(1200)–ಹರಿಹರ | (ಪದ್ಯಕಾವ್ಯ) |
| 32. | ಹರಿ. | : ಹರಿವಂಶಾಭ್ಯುದಯ(1200)–ಬಂದುವರ್ಮ | (ಪದ್ಯಕಾವ್ಯ) |
| 33. | ಜೀ.ಸಂ. | : ಜೀವ ಸಂಭೋದನಂ(1200)–ಬಂಧುವರ್ಮ | (ಪದ್ಯಕಾವ್ಯ) |
| 34. | ಪಾ.ಪು. | : ಪಾರ್ಶ್ವನಾಥ ಪುರಾಣ(1204)–ಪಾರ್ಶ್ವಪಂಡಿತ | (ಪದ್ಯಕಾವ್ಯ) |
| 35. | ಯ.ಚ. | : ಯಶೋಧರ ಚರಿತೆ(1209)–ಜನ್ನ | (ಪದ್ಯಕಾವ್ಯ) |
| 36. | ಪು.ಪು. | : ಪುಷ್ಪದಂತ ಪುರಾಣ(1220)–2ನೆ ಗುಣವರ್ಮ | (ಪದ್ಯಕಾವ್ಯ) |
| 37. | ಹ.ಕಾ. | : ಹರಿಶ್ಚಂದ್ರ ಕಾವ್ಯ(1225)–ರಾಘವಾಂಕ | (ಪದ್ಯಕಾವ್ಯ) |
| 38. | ಸಿ.ಚಾ. | : ಸಿದ್ದರಾಮ ಚಾರಿತ್ರ(1225)–ರಾಘವಾಂಕ | (ಪದ್ಯಕಾವ್ಯ) |
| 39. | ಸೋ.ಚಾ. | : ಸೋಮನಾಥ ಚಾರಿತ್ರ(1225)–ರಾಘವಾಂಕ | (ಪದ್ಯಕಾವ್ಯ) |
| 40. | ಅನಂ.ಪು. | : ಅನಂತನಾಥ ಪುರಾಣ(1230)–ಜನ್ನ | (ಪದ್ಯಕಾವ್ಯ) |
| 41. | ಶಾಂತೀ.ಪು. | : ಶಾಂತೀಶ್ವರ ಪುರಾಣ(1235)–ಕಮಲಭವ | (ಪದ್ಯಕಾವ್ಯ) |
| 42. | ಸೂ.ಸು. | : ಸೂಕ್ತಿ ಸುಧಾರ್ಣವ(1250)–ಮಲ್ಲಿಕಾರ್ಜುನ | (ಪದ್ಯಕಾವ್ಯ) |
| 43. | ಕ.ಕಾ. | : ಕಬ್ಬಿಗರ ಕಾವ(1271)–ಆಂಡಯ್ಯ | (ಪದ್ಯಕಾವ್ಯ) |
| 44. | ಶ.ಮ.ದ. | : ಶಬ್ದಮಣಿ ದರ್ಪಣ(1300)–ಕೇಶೀರಾಜ | (ವ್ಯಾಕರಣ) |
| 45. | ಧರ್ಮ.ಪು. | : ಧರ್ಮನಾಥ ಪುರಾಣ(1352)–ಬಾಹುಬಲಿ ಪಂಡಿತ | (ಪದ್ಯಕಾವ್ಯ) |

46. ಧ.ಪು. : ಧರ್ಮನಾಥ ಪುರಾಣ(1385)–ಮಧುರ (ಪದ್ಯಕಾವ್ಯ)
47. ಬ.ಪು. : ಬಸವ ಪುರಾಣ(1400)–ಭೀಮಕವಿ (ಪದ್ಯಕಾವ್ಯ)
48. ಗ.ಭಾ. : ಗದುಗಿನ ಭಾರತ(1400)–ಕುಮಾರವ್ಯಾಸ (ಪದ್ಯಕಾವ್ಯ)
49. ಸೋ.ಶ. : ಸೋಮೇಶ್ವರ ಶತಕ(1400)–ಪುಲಿಗೆರೆಯ ಸೋಮನಾಥ (ಪದ್ಯಕಾವ್ಯ)
50. ಜ.ಕಾ. : ಜಯನೃಪ ಕಾವ್ಯ(1409)–3ನೆ ಮಂಗರಸ (ಪದ್ಯಕಾವ್ಯ)
51. ನೇ.ಜಿ.ಸಂ. : ನೇಮಿಜಿನೇಶ ಸಂಗತಿ(1409)–3ನೆ ಮಂಗರಸ (ಪದ್ಯಕಾವ್ಯ)
52. ಪ್ರ.ಚ. : ಪ್ರಭಂಜನ ಚರಿತೆ(1409)–3ನೆ ಮಂಗರಸ (ಪದ್ಯಕಾವ್ಯ)
53. ಸೊ.ಸೋ. : ಸೊಬಗಿನ ಸೋನೆ(1414)–ದೇಪರಾಜ (ಪದ್ಯಕಾವ್ಯ)
54. ಕಾ.ಸಾ. : ಕಾವ್ಯಸಾರ(1420)–ಮಲ್ಲಕವಿ (ಪದ್ಯಕಾವ್ಯ)
55. ಪ್ರ.ಲಿಂ.ಲೀ. : ಪ್ರಭುಲಿಂಗಲೀಲೆ(1430)–ಚಾಮರಸ (ಪದ್ಯಕಾವ್ಯ)
56. ನೇ.ಚ. : ನೇಮಿನಾಥ ಚರಿತೆ(ಸಾಳ್ವ ಭಾರತ)(1485)–ಸಾಳ್ವ ಕವಿ (ಪದ್ಯಕಾವ್ಯ)
57. ಮಾಧವಾ. : ಮಾಧವಾಲಂಕಾರ(1500)–ಮಾಧವ ಕವಿ (ಅಲಂಕಾರ,)
58. ಕ.ಜಿ.ಬ. : ಕವಿಜಿಹ್ವಾ ಬಂಧನ(1500)–ಈಶ್ವರ ಕವಿ (ಛಂದಸ್ಸು)
59. ವಿ.ಚಿಂ. : ವಿವೇಕ ಚಿಂತಾಮಣಿ(1500)–ನಿಜಗುಣ ಶಿವಯೋಗಿ (ವಿಶ್ವಕೋಶ)
60. ಮೋ.ತ. : ಮೋಹನ ತರಂಗಿಣಿ(1500)–ಕನಕದಾಸ (ಪದ್ಯಕಾವ್ಯ)
61. ನ.ಚ. : ನಳಚರಿತ್ರೆ(1500)–ಕನಕದಾಸ (ಪದ್ಯಕಾವ್ಯ)
62. ಹ.ಭ.ಸಾ. : ಹರಿಭಕ್ತಿಸಾರ(1500)–ಕನಕದಾಸ (ಪದ್ಯಕಾವ್ಯ)
63. ರಾ.ಧಾ.ಚ. : ರಾಮಧಾನ್ಯ ಚರಿತೆ(1500)–ಕನಕದಾಸ (ಪದ್ಯಕಾವ್ಯ)
64. ತೊ.ರಾ. : ತೊರವೆ ರಾಮಾಯಣ(1500)–ಕುಮಾರ ವಾಲ್ಮೀಕಿ (ಪದ್ಯಕಾವ್ಯ)
65. ತ್ರಿ.ಪು.ಚ. : ತ್ರಿಷಷ್ಟಿ ಪುರಾತನರ ಚರಿತ್ರೆ(1500)–ಸುರಂಗ ಕವಿ (ಪದ್ಯಕಾವ್ಯ)
66. ಕು.ರಾ.ಸಾಂ.: ಕುಮಾರರಾಮನ ಸಾಂಗತ್ಯ(1525)–ನಂಜುಂಡ ಕವಿ (ಪದ್ಯಕಾವ್ಯ)
67. ಕ.ಕೈ. : ಕಬ್ಬಿಗರ ಕೈಪಿಡಿ(1530)–ಲಿಂಗಮಂತ್ರಿ (ನಿಘಂಟು)
68. ಕಾ.ಸಾ.ಅ. : ಕಾವ್ಯಸಾರ(1533)–ಅಭಿನವ ವಾದಿ ವಿದ್ಯಾನಂದ (ಸಂಗ್ರಹ ಗ್ರಂಥ)
69. ರ.ರ. : ರಸ ರತ್ನಾಕರ(1550)–ಸಾಳ್ವ ಕವಿ (ರಸ ಮೀಮಾಂಸೆ)
70. ಶಾ.ವಿ. : ಶಾರದಾ ವಿಳಾಸ(1550)–ಸಾಳ್ವ ಕವಿ (ಧ್ವನಿ ಮಿಂಮಾಂಸೆ)
71. ಜೈ.ಭಾ. : ಜೈಮಿನಿ ಭಾರತ(1550)–ಲಕ್ಷ್ಮೀಶ (ಪದ್ಯಕಾವ್ಯ)
72. ಭ.ವೈ. : ಭರತೇಶ ವೈಭವ(1557)–ರತ್ನಾಕರವರ್ಣಿ (ಪದ್ಯಕಾವ್ಯ)
73. ಚೆ.ಬ.ಪು. : ಚೆನ್ನಬಸವ ಪುರಾಣ(1584)–ವಿರೂಪಾಕ್ಷ ಪಂಡಿತ (ಪದ್ಯಕಾವ್ಯ)
74. ಕ.ಸಂ. : ಕರ್ನಾಟಕ ಸಂಜೀವನ(1600)–ಶೃಂಗಾರ ರಾಜ (ನಿಘಂಟು)
75. ಅ.ವೀ.ಚ. : ಅಪ್ರತಿಮ ವೀರ ಚರಿತೆ(1645)–ತಿರುಮಲಾರ್ಯ (ಅಲಂಕಾರ)
76. ಛಂ.ಸಾ. : ಛಂದಸ್ಸಾರ(1650)–ಗುಣಚಂದ್ರ (ಛಂದಸ್ಸು)
77. ರಾ.ವಿ. : ರಾಜಶೇಖರ ವಿಳಾಸ(1655)–ಷಡಕ್ಷರದೇವ (ಪದ್ಯಕಾವ್ಯ)
78. ಶ.ಶಂ.ವಿ. : ಶಬರಶಂಕರ ವಿಳಾಸ(1655)–ಷಡಕ್ಷರದೇವ (ಪದ್ಯಕಾವ್ಯ)
79. ಅನು. : ಅನುಭವಾಮೃತ(1675)–ಮಹಲಿಂಗರಂಗ (ಪದ್ಯಕಾವ್ಯ)
80. ಹ.ಧ. : ಹದಿಬದೆಯ ಧರ್ಮ(1700)–ಸಂಚಿಯ ಹೊನ್ನಮ್ಮ (ಪದ್ಯಕಾವ್ಯ)
81. ಕುವ. : ಕುವಲಯಾನಂದ(1750)–ಜಾಯಗೌಂಡ (ಛಂದಸ್ಸು)
82. ಜ್ಞಾಸಿ. : ಜ್ಞಾನ ಸಿಂಧು(1750)–ಚಿದಾನಂದಾವಧೂತ (ವಿಶ್ವಕೋಶ)
83. ರಾ.ಕ. : ರಾಜಾವಳಿ ಕತೆ(1800)–ದೇವಚಂದ್ರ (ಪದ್ಯಕಾವ್ಯ)
84. ನಂ.ಛಂ. : ನಂದಿ ಛಂದಸ್ಸು(1846)–ವೀರಭದ್ರ ಕವಿ (ಛಂದಸ್ಸು)
85. ನ.ಪ.ವಿ. : ನರಪತಿ ವಿಜಯ(1867)–ಅಳಿಯ ಲಿಂಗರಾಜ (ಅಲಂಕಾರ)
86. ರಾಮಾ. : ರಾಮಾಶ್ವಮೇಧ(1880)–ಮುದ್ದಣ (ಪದ್ಯಕಾವ್ಯ)

## ಆಕರ ವಿವರ ಮತ್ತು ಟಿಪ್ಪಣಿಗಳು

1. ನೋಡಿ; ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ-ಎಂ.ವಿ.ಸೀತಾರಾಮಯ್ಯ, ಪ್ರಸಾರಾಂಗ, ಮೈಸೂರು ವಿ.ವಿ. 1974: ಪುಟ: 3-4. ಮತ್ತು ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ-ರಂ.ಶ್ರೀ ಮುಗಳಿ, ಪ್ರಸಾರಾಂಗ, ಮೈಸೂರು ವಿ.ವಿ. 1971
2. ನೋಡಿ, ಕನ್ನಡ ಕವಿಗಳ ಕಾವ್ಯ ಕಲ್ಪನೆ-ಕನ್ನಡ ಕಾವ್ಯ ತತ್ವ ಚಿಂತನೆ-ಜಿ.ಎಸ್.ಶಿವರುದ್ರಪ್ಪ, ಹೊನ್ನಾರು ಮಾಲೆ, ಕನ್ನಡ ವಿ.ವಿ. ಹಂಪಿ, ಪುಟ: 72-73
3. ಹೆಚ್ಚಿನ ವಿವರಗಳಿಗೆ ನೋಡಿ; ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ-ರಂ.ಶ್ರೀ. ಮುಗಳಿ, ಪ್ರಸಾರಾಂಗ, ಮೈಸೂರು ವಿ.ವಿ. 1971, ಪುಟ 1-43)
4. ನೋಡಿ: ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ-ಪೂರ್ವೋಕ್ತ: ಪುಟ 8-9
5. ವಿವೇಕ ಚಿಂತಾಮಣಿ-ಸಂ.ಉಮಾಪತಿ ಶಾಸ್ತ್ರಿ, ಮೂರು ಸಾವಿರ ಮಠ, ಹುಬ್ಬಳಿ, 1969, ಪುಟ-1 ಪೀಠಿಕೆ
6. ಇವನ ಧರ್ಮ ಕಾವ್ಯಧರ್ಮಗಳಿಗೆ ಬೇರೆಯದೇ ವ್ಯಾಖ್ಯಾನವನ್ನು ಮುಳಿಯ ಮತ್ತು ಎಂ.ವಿ.ಸೀ. ನೀಡಿದ್ದಾರೆ ನೋಡಿ; ನಾಡೋಜ ಪಂಪ; ಮುಳಿಯ ತಿಮ್ಮಪ್ಪಯ್ಯ, 1938, 222-224. ಮತ್ತು ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ-ಎಂ.ವೀ.ಸೀತಾರಾಮಯ್ಯ: ಪುಟ. 9-19
7. ಅಧ್ಯಯನ ಪಾರಾಯಣ-ಕೀರ್ತಿನಾಥ ಕುರ್ತಕೋಟಿ: ಮನೋಹರ ಗ್ರಂಥಮಾಲಾ, ಧಾರವಾಡ: 2003,ಪು.16
8. ಹೆಚ್ಚಿನ ವಿವರಗಳಿಗೆ ನೋಡಿ: ಉದಯಾದಿತ್ಯಾಲಂಕಾರಂ-ಸಂ.ಸಿ ಮಹಾದೇವಪ್ಪ, ಬೆಂಗಳೂರು ರಿಸರ್ಚ್ ಕಾರ್ನರ್: 1996: ಪುಟ 43ರಿಂದ 67. ತಿರುಮಲಾರ್ಯನು ತನ್ನ ಅಪ್ರತಿಮ ವೀರ ಚರಿತದಲ್ಲಿ ಮತ್ತು ಅಳಿಯ ಲಿಂಗರಾಜನು ತನ್ನ ನರಪತಿ ವಿಜಯದಲ್ಲಿ ಶಾಸ್ತ್ರಲಕ್ಷ್ಯಗಳಿಗೆ ತಮ್ಮ ದೊರೆಗಳನ್ನೇ ಸಮೀಕರಿಸಿದ್ದಾರೆ. ನರಹರಯ್ಯನು (1899) ತನ್ನ ಕುಲದೇವತೆಯಾದ ಲಕ್ಷ್ಮೀನರಸಿಂಹನನ್ನು ಸ್ತೋತ್ರ ಮಾಡುವ ಪದ್ಯಗಳನ್ನೇ ಲಕ್ಷ್ಯಗಳನ್ನಾಗಿ ರಚಿಸಿದ್ದಾನೆ. ಆ ಮೂಲಕ ಕುಲದೈವ ಸಮೀಕರಣವನ್ನು ಮಾಡಿದ್ದಾನೆ.
9. ಜೈನಕಾವ್ಯ ಮಾಲಿಕೆಯ ಪಂಪ ಸಂಪುಟ-1-ಸಂ.ಟಿ.ವಿ.ವೆಂಕಟಾಚಲಶಾಸ್ತ್ರಿ: ಕನ್ನಡ ವಿ.ವಿ. ಹಂಪಿ 2006, ಪುಟ-32 (ಪ್ರಸ್ತಾವನೆ)
10. ಹೆಚ್ಚಿನ ವಿವರಗಳಿಗೆ ನೋಡಿ; ಕನ್ನಡ ಕಾವ್ಯ ತತ್ವ ಚಿಂತನೆ-ಜಿ.ಎಸ್.ಶಿವರುದ್ರಪ್ಪ, ಹೊನ್ನಾರು ಮಾಲೆ, ಕನ್ನಡ ವಿ.ವಿ. ಹಂಪಿ, ಪುಟ: 61-64
11. ಹೆಚ್ಚಿನ ವಿವರಗಳಿಗೆ ನೋಡಿ: ದಕ್ಷಿಣೋತ್ತರ ಮಾರ್ಗ: ಕವಿರಾಜಮಾರ್ಗಂ-ಸಂ.ಎಂ.ವಿ.ಸೀತಾರಾಮಯ್ಯ: ಕರ್ನಾಟಕ ಸಂಘ; ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು, 1968: ಪುಟ-ಪೀಠಿಕೆ 64ರಿಂದ 67
12. ಸೋಜಿಗವೆಂದರೆ ನಾಗವರ್ಮ ತಾಳ ಮಾನಗಳ ಬಗ್ಗೆ ಏನೂ ಬರೆದಿಲ್ಲ.
13. ಹೆಚ್ಚಿನ ವಿವರಗಳಿಗೆ ನೋಡಿ; ಶಿವದಾಸ ಗೀತಾಂಜಲಿ-ಸಂ.ಎಲ್.ಬಸವರಾಜು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು, 1963
14. ಶಿವತತ್ವ ಚಿಂತಾಮಣಿ-ಸಂ.ಎಸ್.ಬಸಪ್ಪ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, 1960. ಪ್ರಸ್ತಾವನೆ: ಪುಟ73-74
15. ಹೆಚ್ಚಿನ ವಿವರಗಳಿಗೆ ನೋಡಿ: 1.ಕನ್ನಡದಲ್ಲಿ ಕಾವ್ಯತತ್ವ-ಡಾ.ಕೆ.ಕೃಷ್ಣಮೂರ್ತಿ; ಶಾರದಾ ಮಂದಿರ, ಮೈಸೂರು; 1964, ಪು.72-96. ಮತ್ತು 2.ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ-ಎಂ.ವಿ.ಸೀತಾರಾಮಯ್ಯ; ಪ್ರಸಾರಾಂಗ, ಮೈಸೂರು ವಿ.ವಿ.; 1974, ಪು. 20-26 ಮತ್ತು 56. ಮತ್ತು 3. ಕನ್ನಡ ಕೈಪಿಡಿ, ಸಂಪುಟ-1, ಸಂ. ಎ.ಆರ್.ಕೃ., ಮೈಸೂರು ವಿ.ವಿ.; ಪು. 220-223. ಮತ್ತು 4.ವಸ್ತುಕ ವರ್ಣಕ ವಾಙ್ಮಯ ತಪಸ್ಸು-ಕಡೆಂಗೋಡ್ಲು ಶಂಕರಭಟ್ಟ-ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ನಿಯಮಿತ, ಬೆಂಗಳೂರು; 1976, ಪು. 58-77. ಮತ್ತು
16. ಈ ಕುರಿತ ಪೂರಕ ವಿವರಗಳಿಗೆ ನೋಡಿ: ಅಧ್ಯಯನ ಪಾರಾಯಣ-ಕೀರ್ತಿನಾಥ ಕುರ್ತಕೋಟಿ, ಮನೋಹರ ಗ್ರಂಥಮಾಲಾ, ಧಾರವಾಡ: 2003, ಪು. 15, 16
17. ನೋಡಿ; ಕವಿರಾಜಮಾರ್ಗ-ಸಂ.ವಿ.ಸೀತಾರಾಮಯ್ಯ, ಐ.ಬಿ.ಎಚ್ ಪ್ರಕಾಶನ, 1973: ಪುಟ. 41

18. ಕನ್ನಡದಲ್ಲಿ ಕಾವ್ಯತತ್ವ-ಡಾ.ಕೆ.ಕೃಷ್ಣ ಮೂರ್ತಿ, ಶಾರದಾ ಮಂದಿರ ಪ್ರಕಾಶನ, ಮೈಸೂರು: 1964, ಪುಟ.27
19. ಇಲ್ಲಿ ಸಾಂದರ್ಭೀಕರಣ ಮತ್ತು ಅಪಸಾಂದರ್ಭೀಕರಣ ಎಂಬ ಪರಿಭಾಷೆಗಳನ್ನು ಭಿನ್ನ ನೆಲೆಯಲ್ಲಿ ಬಳಸಲಾಗಿದೆ. ಕಾವ್ಯಸೃಷ್ಟಿಗೆ ಒಂದೊಂದು ಸಂದರ್ಭಗಳು ಎಲ್ಲ ಕವಿಗಳಿಗು ಇರುತ್ತವೆ. ಈ ಸಂದರ್ಭಗಳನ್ನು ಸೃಷ್ಟಿ ಸಂದರ್ಭಗಳು ಎನ್ನಬಹುದು. ಇವುಗಳನ್ನು ಕಲ್ಪಿಸಿಕೊಳ್ಳುವ ಮತ್ತು ಬಿಡಿಸಿಕೊಳ್ಳುವ ಎರಡೂ ಕೆಲಸಗಳನ್ನು ಆಧುನಿಕ ವಿಮರ್ಶೆಯು ಮಾಡಿದೆ. ನಮ್ಮ ಶೂನ್ಯಸಂಪಾದನಕಾರರು ತಮಗೆ ಬೇಕಾದ ಹಾಗೆ ವಚನಗಳಿಗೆ ಸೃಷ್ಟಿ ಸಂದರ್ಭಗಳನ್ನು ಕಲ್ಪಿಸಿದ್ದಾರೆ. ಈ ಕ್ರಿಯೆಯನ್ನು ಇಲ್ಲಿ ಸಾಂದರ್ಭೀಕರಣ ಎನ್ನಲಾಗಿದೆ. ಅಲ್ಲದೆ ಮಾಹಾಕಾವ್ಯ ಕಥನಗಳಲ್ಲಿ ಎಲ್ಲ ಪದ್ಯಗಳಿಗು ಪಠ್ಯಸಂದರ್ಭಗಳು ಇರುತ್ತವೆ. ಹಲವು ಪಠ್ಯಗಳ ಹಲವು ಪದ್ಯಗಳನ್ನು ಆಯಾ ಪಠ್ಯ ಸಂದರ್ಭಗಳಿಂದ ಹೊರಗೆ ತೆಗೆದು ಜೋಡಿಸಿದಾಗ ಅವುಗಳಿಗೆ ಒಂದು ಹೊಸದೇ ಆದ ಪಠ್ಯಸಂದರ್ಭಕ್ಕಿಂತ ಭಿನ್ನ ಸಂದರ್ಭ ಸೃಷಿಯಾಗಿ ಆಕರ ಪಠ್ಯದ ಸಂದರ್ಭವು ಬಿಡುಗಡೆಯಾಗುತ್ತದೆ. ಇಂಥ ಕೆಲಸವನ್ನು ಮಲ್ಲಿಕಾರ್ಜುನ, ಮಲ್ಲಕವಿಗಳು ಮಾಡಿದ್ದಾರೆ. ಇದನ್ನು ಇಲ್ಲಿ ಅಪಸಾಂದರ್ಭೀಕರಣ ಎಂದು ಕರೆಯಲಾಗಿದೆ.
20. ಅದೇ; ಪುಟ. 08
21. ಹೆಚ್ಚಿನ ವಿವರಗಳಿಗೆ ನೋಡಿ: ಅಧ್ಯಯನ ಪಾರಾಯಣ-ಕೀರ್ತಿನಾಥ ಕುರ್ತಕೋಟಿ, ಮನೋಹರ ಗ್ರಂಥಮಾಲಾ, ಧಾರವಾಡ: 2003, ಪುಟ: 75-88
22. ಶಾಸ್ತ್ರ ಸಾಹಿತ್ಯ-ಎಂ.ವಿ.ಸೀತಾರಾಮಯ್ಯ, ಪ್ರಸಾರಾಂಗ ಬೆಂಗಳೂರು, ವಿ.ವಿ. 2000: ಪುಟ. 182
23. ಅದೇ; ಪುಟ. 162
24. ಕವಿರಾಜಮಾರ್ಗ ಕಂಡ ಅನುಪಲಬ್ದ ಭಾರತಗಳು-ಎಂ.ಎಂ.ಕಲಬುರ್ಗಿ: ಪ್ರಬುದ್ಧ ಕರ್ನಾಟಕ ಸಂ.54-41. 1973, ಪುಟ. 5
25. ಶಾಸ್ತ್ರ ಸಾಹಿತ್ಯ-ಎಂ.ವಿ.ಸೀತಾರಾಮಯ್ಯ, ಪ್ರಸಾರಾಂಗ, ಬೆಂಗಳೂರು ವಿ.ವಿ. 2000: ಪುಟ. 97-99
26. ಮಲ್ಲಕವಿ ಸಂಯೋಜಿತಂ ಕಾವ್ಯಸಾರಂ-ಸಂ.ಎನ್.ಅನಂತರಂಗಾಚಾರ್ಯ, ಕ.ಸಾ.ಪ. ಬೆಂಗಳೂರು: 1973, ಪೀಠಿಕೆ, ಪುಟ. 11
27. ತೌಲನಿಕವಾದ ಹೆಚ್ಚಿನ ವಿವರಗಳಿಗೆ ನೋಡಿ; ಮಲ್ಲಿಕಾರ್ಜುನ ಕವೀಶ್ವರ ಕವಿ ಸಂಯೋಜಿತಂ ಸೂಕ್ತಿಸುಧಾರ್ಣವಂ-ಸಂ.ಎನ್.ಅನಂತರಂಗಾಚಾರ್ಯ, ಓರಿಯೆಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್, ಮೈಸೂರು: 1947, ಅನುಬಂಧ-2
28. ತೌಲನಿಕವಾದ ಹೆಚ್ಚಿನ ವಿವರಗಳಿಗೆ ನೋಡಿ; ಮಲ್ಲಕವಿ ಸಂಯೋಜಿತಂ ಕಾವ್ಯಸಾರಂ-ಸಂ.ಎನ್.ಅನಂತರಂಗಾಚಾರ್ಯ, ಕ.ಸಾ.ಪ. ಬೆಂಗಳೂರು: 1973, ಪುಟ. 750-51
29. ತಮಿಳು ಕಾವ್ಯಮೀಮಾಂಸೆ-ಪ್ರೊ. ಕಾರ್ಲೋಸ್, ಅನು-ಸುಚಿತ್ರಲತಾ, ಎಲ್.ಜಿಮೀರಾ. 1993, ಅಕ್ಷರ ಪ್ರಕಾಶನ, ಪುಟ. 39
30. ನೋಡಿ; ಶಿವಗಣಪ್ರಸಾದಿ ಮಹದೇವಯ್ಯನ ಪ್ರಭುದೇವರ ಶೂನ್ಯಸಂಪಾದನೆ; ದ್ವಿ.ಮು.2004, ಶರಣಬಸವೇಶ್ವರ ವಿದ್ಯಾವರ್ಧಕ ಸಂಘ ಗುಲಬರ್ಗಾ: 7ನೇ ಅನುಬಂಧ: ಪುಟ. 358
31. ನೋಡಿ ಅದೇ. ಪುಟ. 358, ವಚನಗಳು ಬೇರೆ ಬೇರೆ ರೂಪಗಳಲ್ಲಿ ಕಾಲಾನಂತರದಲ್ಲಿ ರೂಪಾಂತರಕ್ಕೆ, ಸಂಪಾದನೆಗೆ, ಕಥನೀಕರಣಕ್ಕೆ, ವ್ಯಾಖ್ಯಾನಗಳಿಗೆ ಗುರಿಯಾಗಿರುವುದನ್ನು ಹೀಗೆ ಗುರ್ತಿಸಿಕೊಳ್ಳಬಹುದು; 1. ಹರಿಹರ ರಾಘವಾಂಕರ ರಗಳೆ ಷಟ್ಪದಿಗಳು; 2. ಲಕ್ಕಣ್ಣದಂಡೇಶ-ಶಿವತತ್ವ ಚಿಂತಾಮಣಿ, ನಿಜಗುಣ ಶಿವಯೋಗಿಯ ವಿವೇಕ ಚಿಂತಾಮಣಿ, (ಚಿದಾನಂದಾವಧೂತನ ತತ್ವ ಚಿಂತಾಮಣಿ); 3. ಸಿಂಗಿರಾಜ-ಅಮಲಬಸವ ಚಾರಿತ್ರ(ಇಲ್ಲಿನ ಕ್ರಿಯಾಸಂಪಾದನೆ ಮತ್ತು ಪ್ರಭುಸಂಪಾದನೆಗಳು); 4. ಶಿವಗಣಪ್ರಸಾದಿ ಮಹದೇವಯ್ಯನ ಶೂನ್ಯಸಂಪಾದನೆ; 5. ಮಹಲಿಂಗನ ವಚನ ಸಂಕಲನ (ಏಕೋತ್ತರ ಶತಸ್ಥಲ); 6. ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ; 7. ಹಲಗೆಯಾರ್ಯನ ಶೂನ್ಯಸಂಪಾದನೆ; 8. ಚಾಮರಸನ ಪ್ರಭುಲಿಂಗಲೀಲೆ (ಇದು ಹೆಚ್ಚು ಕಡಿಮೆ ಹಲಗೆಯಾರ್ಯನ ಸಂಪಾದನೆಯ ಪದ್ಯರೂಪ. ಇಲ್ಲಿ ಚಾಮರಸ ಅಲ್ಲಿಲ್ಲದ ಗೋರಕ್ಷ ಮತ್ತು ಗೊಗ್ಗಯ್ಯರ ಪ್ರಸಂಗಗಳನ್ನು ಅಧಿಕವಾಗಿ ಸೇರಿಸಿದ್ದಾನೆ.); 9. ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯ ಸಂಪಾದನೆ; 10. ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯ ಸಂಪಾದನೆ;
32. ಇಲ್ಲಿ ಯಾರೂ ಮುಖ್ಯರಲ್ಲ-ರಹಮತ್ ತರೀಕೆರೆ, ಪ್ರಸಾರಾಂಗ ಹಂಪಿ.ವಿ.ವಿ. 2005, ಪುಟ. 10

33. ನೋಡಿ; ಶೂನ್ಯ ಸಂಪಾದನೆಗಳು: ರಚನೆ ವಿನ್ಯಾಸ-ಒ.ಎಲ್.ನಾಗಭೂಷಣ ಸ್ವಾಮಿ, ಶೂನ್ಯ ಸಂಪಾದನೆಗಳು ಸಾಂಸ್ಕೃತಿಕ ಮುಖಾಮುಖಿ: ಸಂ. ಅಮರೇಶ ನುಗಡೋಣಿ, ಕನ್ನಡ ವಿ.ವಿ. ಹಂಪಿ. 2002, ಪುಟ. 76

34. ಹೆಚ್ಚಿನ ವಿವರಗಳಿಗೆ ನೋಡಿ ಸಿದ್ಧಲಿಂಗೇಶ್ವರನ ಏಕೋತ್ತರ ಶತಸ್ಥಲ-ಸಂ.ಫ.ಗು.ಹಳಕಟ್ಟಿ: ಸಿದ್ಧಲಿಂಗೇಶ್ವರ ಗ್ರಂಥಮಾಲಾ 14: ವಿಜಾಪುರ, ಅಚ್ಚಾದ ವರ್ಷ ನಮೂದಿಸಿಲ್ಲ.

35. ನೋಡಿ; ಶಿವದಾಸ ಗೀತಾಂಜಲಿ-ಸಂ.ಎಲ್.ಬಸವರಾಜು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, 1963 ಪುಟ. 117, 119

36. ಕವಿಚರಿತೆ ಸಂಪುಟ-1-ಆರ್.ನರಸಿಂಹಾಚಾರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2005: ಪುಟ.19

37. ಹೆಚ್ಚಿನ ವಿರಗಳಿಗೆ ನೋಡಿ: ಅಧ್ಯಯನ ಪಾರಾಯಣ-ಕೀರ್ತಿನಾಥ ಕುರ್ತಕೋಟಿ, ಮನೋಹರ ಗ್ರಂಥಮಾಲಾ, ಧಾರವಾಡ: 2003, ಪುಟ 123

38. ಅದೇ, ಪುಟ: 125

39. ವಿವರಗಳಿಗೆ ನೋಡಿ; ಕನ್ನಡ ಕಾವ್ಯಮೀಮಾಂಸೆ-ಡಾ.ವೀರಣ್ಣ ದಂಡೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2006 ಮತ್ತು ಕನ್ನಡ ಕಾವ್ಯ ಮೀಮಾಂಸೆ-ಡಾ.ಎಸ್.ಎಂ.ಹಿರೇಮಠ, ಅಶ್ವಿನಿ ಪ್ರಕಾಶನ, ಕಲ್ಬುರ್ಗಿ, 1999

40. ಶಿವತತ್ವ ಚಿಂತಾಮಣಿ-ಸಂ.ಉಮಾಪತಿ ಶಾಸ್ತ್ರಿ, ಮೂರು ಸಾವಿರ ಮಠ, ಹುಬ್ಬಳ್ಳಿ, 1969, ಪುಟ. 77-78

41. ವಿವರಗಳಿಗೆ-ಕನ್ನಡ ಟೀಕಾ ಸಾಹಿತ್ಯ-ಡಾ.ಕೆ.ರವೀಂದ್ರನಾಥ: ಕನ್ನಡ ವಿ.ವಿ.ಹಂಪಿ: 2006

42. ನಾಂದ್ಯಗಳು ಪ್ರತ್ಯೇಕ ಸಾಹಿತ್ಯ ರೂಪಗಳು? ನೋಡಿ: ಡಾ.ಎಲ್ ಬಸವರಾಜು ಅವರ ಶಿವದಾಸ ಗೀತಾಂಜಲಿ

43. ಕನ್ನಡ ಟೀಕಾ ಸಾಹಿತ್ಯ-ಡಾ.ಕೆ.ರವೀಂದ್ರನಾಥ: ಕನ್ನಡ ವಿ.ವಿ. ಹಂಪಿ: 2006: ಪುಟ. 19

44. ಕನ್ನಡದಲ್ಲಿ ಸಾಹಿತ್ಯ ವಿಮರ್ಶೆಯ ಉಗಮ ಮತ್ತು ಬೆಳವಣಿಗೆ-ಎಂ.ಜಿ.ಕೃಷ್ಣಮೂರ್ತಿ, ಸಾಕ್ಷಿ-39; ಅಕ್ಷರ ಪ್ರಕಾಶನ, ಜುಲೈ-1978, ಈ ಲೇಖನ ಮೊದಲಿಗೆ ಇಂಗ್ಲಿಶಿನಲ್ಲಿ ಬರೆದದ್ದು; ಅನು: ಜಿ.ಪಿ.ಬಸವರಾಜ್

45. ವಿವೇಕ ಚಿಂತಾಮಣಿ-ಉಮಾಪತಿ ಶಾಸ್ತ್ರಿ, ಮೂರು ಸಾವಿರ ಮಠ, ಹುಬ್ಬಳ್ಳಿ, 1969, ಪ್ರಸ್ತಾವನೆ, ಪುಟ. 102-104

46. ಈ ಉಲ್ಲೇಖ ಎಲ್.ಬಸವರಾಜು ಅವರ ಸಂದರ್ಶನದಲ್ಲಿದೆ. ನೋಡಿ: ಅದೇ. ಪುಟ. 128

47. ಕನ್ನಡ ಛಂದಸ್ಸಂಪುಟ-ಸಂ.ಎಲ್.ಬಸವರಾಜು, ಗೀತಾಬುಕ್ ಹೌಸ್, ಮೈಸೂರು, 1974:

48. ಹೆಚ್ಚಿನ ವಿವರಗಳಿಗೆ ನೋಡಿ: ಪ್ರಾತಿನಿಧಿಕ ಯಕ್ಷಗಾನ ಪ್ರಸಂಗಗಳು ಹಾಗೂ ಅಭಿಜಾತ ಕಾವ್ಯಗಳು-ಯಕ್ಷಗಾನ ತಾಳಮದ್ದಳೆ-ಮಾಧವ ಪೆರಾಜೆ: ಕನ್ನಡ ವಿ.ವಿ. ಹಂಪಿ: 2000: ಪುಟ 73ರಿಂದ 120. ಮತ್ತು ಗಮಕ ಕಲೆ-ಸಂ.ಎಂ.ರಾಘವೇಂದ್ರ ರಾವ್: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: 1974

## ಆಧುನಿಕ ವಿಮರ್ಶೆಯ ಸಂಭವ (ಸಂಭವಕಾಲೀನ ವಿಮರ್ಶೆ)

### ಪ್ರವೇಶ

ಆಧುನಿಕ ವಿಮರ್ಶೆಯ ಸಂಭವ ಎಂದರೆ, ಇದೇನೋ ಇದ್ದಕ್ಕಿದ್ದ ಹಾಗೆ ಉದ್ಭವಿಸಿದ ಒಂದು ವಿದ್ಯಮಾನ ಅಂತ ಅಲ್ಲ. ಇದರ ಉಂಟಾಗುವಿಕೆಯ ಕಾಲವನ್ನು ಯಾವುದೋ ಒಂದು ಇಸವಿಗೆ ತಗುಲಿಸಿ ಇದು ಹೀಗೆ ಹುಟ್ಟಿದೆ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಹಾಗೆಯೇ ಇದರ ಸಂಭವವನ್ನು ಒಂದು ಮಾತಿನಲ್ಲಿ ಸೂತ್ರಿಸಿ ಹೇಳಿಬಿಡಲಾಗುವುದಿಲ್ಲ. ಆಧುನಿಕ ವಿಮರ್ಶೆ ಎಂಬ ಪರಿಭಾಷೆಯೇ ಬಹು ಸಡಿಲವಾಗಿ ಕಟ್ಟಿಕೊಂಡಿರುವ ಒಂದು ಪರಿಭಾಷೆ. ಅಲ್ಲದೆ ವಿಮರ್ಶೆ ಪ್ರಕಾರವು ಇಂದೂ ಕೂಡ ಸಂಭವಿಸುತ್ತಿರುವ ಪ್ರಕಾರ. ಇದೊಂದು ಖಚಿತ ರೂಪವನ್ನು ಇನ್ನೂ ಪಡೆದುಕೊಳ್ಳುತ್ತಿರುವ ಪ್ರಕ್ರಿಯೆಯಲ್ಲಿನ ವಿಕಲ್ಪ. ಇಂಥ ಎಚ್ಚರವನ್ನು ಈ ಅಧ್ಯಾಯದ ನಿರ್ಮಾಣದಲ್ಲಿ ಇರಿಸಿಕೊಳ್ಳಲಾಗಿದೆ.

ಆಧುನಿಕ ವಿಮರ್ಶೆಯು ಸುಮಾರು 1800ರಿಂದ 1960ರವರೆಗಿನ ಕಾಲದಲ್ಲಿ ಸಂಭವಿಸುತ್ತ ಇತ್ತೆಂದು ಈ ಅಧ್ಯಯನದಲ್ಲಿ ಭಾವಿಸಲಾಗಿದೆ. ಹಾಗಾಗಿಯೇ ಈ ಕಾಲವನ್ನು ಆಧುನಿಕ ವಿಮರ್ಶೆಯ ಸಂಭವಕಾಲ ಎಂದು ಇಲ್ಲಿ ಕರೆಯಲಾಗಿದೆ. ಈ ಸಂಭವಕಾಲದ ವಿಮರ್ಶೆಯ ವಿನ್ಯಾಸ, ತಾತ್ವಿಕತೆ ಮತ್ತು ಇದರ ಹಿಂದಿನ ಗ್ರಹಿಕೆಗಳನ್ನು ಕಟ್ಟಿಕೊಳ್ಳುವ, ಯತ್ನವನ್ನು ಇಲ್ಲಿ ಮಾಡಲಾಗಿದೆ. ಆಧುನಿಕ ಕನ್ನಡ ವಿಮರ್ಶೆಯು ಸಂಭವಗೊಂಡ ಬಗೆಗಳ ಹುಡುಕಾಟ ಮತ್ತು ಆ ಬಗೆಗಳು ಹಾಗೇ ಸಂಭವಿಸಲು ಇದ್ದ ಕಾರಣಗಳು ಏನಿರಬಹುದೆಂಬ ಹುಡುಕಾಟ ಈ ಅಧ್ಯಾಯದ ಮುಖ್ಯ ಭೂಮಿಕೆ. ಮಿತ ವಿವರವುಳ್ಳ ಪರಿಕಲ್ಪನಾತ್ಮಕ ನೆಲೆಗಳಿಂದ ಈ ಅಧ್ಯಾಯವನ್ನು ಕಟ್ಟಲಾಗಿದೆ. ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆ ಹಾಗೂ ಕಾರಣಗಳನ್ನು ಬೇರ್ಪಡಿಸದೇ ಒಟ್ಟೊಟ್ಟಿಗೇ ಪರಿಶೀಲಿಸಲು ಇಲ್ಲಿ ಯತ್ನಿಸಲಾಗಿದೆ.

ಶಿಕ್ಷಣ ವ್ಯವಸ್ಥೆಯಲ್ಲಿ ಭಾಷೆಯ ಅಧ್ಯಯನ ಮತ್ತು ಐಚ್ಛಿಕವಾಗಿ ಸಾಹಿತ್ಯದ ಅಧ್ಯಯನಗಳು ವ್ಯವಸ್ಥಿತವಾಗಿ ರೂಪಗೊಳ್ಳತೊಡಗಿದ್ದ ಕಾಲದಲ್ಲಿ ಸಾಹಿತ್ಯ ವಿಮರ್ಶೆಯು ಒಂದು ಶೈಕ್ಷಣಿಕ ಅಗತ್ಯವಾಗಿ ನಮ್ಮಲ್ಲಿ ಸಂಭವಿಸತೊಡಗಿತು. ಹಾಗೆಯೇ ನಮ್ಮತನದ ಹುಡುಕಾಟ ಅಥವಾ ಐಡೆಂಟಿಟಿ ಪಾಲಿಟಿಕ್ಸ್, ರಾಷ್ಟ್ರ ನಿರ್ಮಾಣ ಪ್ರಜ್ಞೆ ಅಥವಾ ರಾಷ್ಟ್ರೀಯತೆಯ ರಾಜಕಾರಣ, ಪುನರುಜ್ಜೀವನ ಪ್ರಜ್ಞೆ ಅಥವಾ ಎನ್ಲೈಟನ್‌ಮೆಂಟ್ ಪ್ರಾಜೆಕ್ಟ್, ಓರಿಯೆಂಟಲ್ ಅಧ್ಯಯನಗಳು ಮತ್ತು ಅಲ್ಲಿನ ವೈಟ್‌ಮ್ಯಾನ್ಸ್ ಬರ್ಡನ್ ಧೋರಣೆ, ಹಾಗೆಯೇ ಮಾರ್ಕ್ಸ್‌ವಾದಿ, ಸುಧಾರಣಾವಾದಿ, ಉದಾರ ಮಾನವತಾವಾದಿ, ವಿಜ್ಞಾನವಾದಿ, ಆಧಾರವಾದಿ (ಪಾಸಿಟಿವಿಸ್ಟ್), ವಿಕಾಸವಾದಿ ಇತ್ಯಾದಿ ಧೋರಣೆಗಳು ಹಾಗೆಯೇ ಮುದ್ರಣ ತಂತ್ರಜ್ಞಾನ, ಇಂಗ್ಲಿಶ್ ಸಾಹಿತ್ಯ ಲೋಕದ ಗಾಳಿ, ಹಾಗೆಯೇ ಇವೆಲ್ಲವುಗಳಿಂದ ರೂಪಿತಗೊಂಡ ಕನ್ನಡದ ಭಿನ್ನ ಜ್ಞಾನಶಿಸ್ತುಗಳಾದ ಚರಿತ್ರೆ ರಚನಾಶಾಸ್ತ್ರ, ಶಾಸನಶಾಸ್ತ್ರ, ಸಂಪಾದನಾಶಾಸ್ತ್ರ, ಛಂದಸ್ಶಾಸ್ತ್ರ, ಸಂಶೋಧನಾಶಾಸ್ತ್ರ, ಕೋಶರಚನೆ, ಅನುವಾದ, ಪತ್ರಿಕೋದ್ಯಮ, ಪೌರ್ವಾತ್ಯ ಅಧ್ಯಯನ ಇತ್ಯಾದಿಗಳಿಂದ ಆಧುನಿಕ ವಿಮರ್ಶೆಯು ಸಂಭವಿಸಿತು–ರೂಪಗೊಂಡಿತು.

ಪಾಶ್ಚಾತ್ಯ ಸಾಹಿತ್ಯ ಮತ್ತು ವಿಮರ್ಶೆ, ಸಂಸ್ಕೃತ ಸಾಹಿತ್ಯ ಮತ್ತು ಮೀಮಾಂಸೆ, ಕನ್ನಡ ಸಾಹಿತ್ಯ ಪರಂಪರೆ ಮತ್ತು ಹೊಸ ಸಾಹಿತ್ಯ, ಸಮಾಜ ಮತ್ತು ಸಂಸ್ಕೃತಿ ಈ ಎಲ್ಲ ನೆಲೆಗಳ ಅನುಸಂಧಾನವಾಗಿ ಕನ್ನಡ ವಿಮರ್ಶೆಯು ಸಂಭವಿಸಿದೆ. ಈ ಸಂಭವಕಾಲದ ಎಲ್ಲ ವಿಮರ್ಶಕರೂ ಕೇವಲ ವಿಮರ್ಶಕರಲ್ಲ.

ಸಾಹಿತ್ಯದ ಇತರ ಪ್ರಕಾರಗಳಲ್ಲೂ ಬರವಣಿಗೆ ಮಾಡಿರುವ ಇವರು ಏಕಕಾಲಕ್ಕೆ ಕವಿಗಳೂ, ಪ್ರಬಂಧಕಾರರೂ, ನಾಟಕಕಾರರೂ, ಕತೆ–ಕಾದಂಬರಿಕಾರರೂ, ವಿಮರ್ಶಕರೂ ಆಗಿದ್ದಾರೆ. (ಒಂದೆರಡು ಅಪವಾದಗಳಿರಬಹುದು)

ಗ್ರಂಥಸಂಪಾದನೆ, ಪಾಠಪರಿಷ್ಕರಣೆ, ಸಂಗ್ರಹ, ಕಾಲನಿರ್ಣಯ, ಚರಿತ್ರೆರಚನೆ, ಪ್ರಭಾವ, ಸ್ವಂತಿಕೆಗಳ ವಿವರಣೆ, ಪರಸ್ಪರ ತುಲನೆ, ಅನುವಾದ, ಸಂಶೋಧನೆ ಇತ್ಯಾದಿ ಕಾರ್ಯಗಳಲ್ಲಿ ತೊಡಗಿದ್ದ ಆರಂಭದ ಸಾಹಿತ್ಯಾನುಸಂಧಾನವು 19ನೇ ಶತಮಾನದವರೆಗಿನ ಸಾಹಿತ್ಯ ಪರಂಪರೆಯ ವಿಮರ್ಶೆಯೇ ಆಗಿತ್ತು. ಹಳಗನ್ನಡ ಸಾಹಿತ್ಯ, ನಡುಗನ್ನಡ ಸಾಹಿತ್ಯ, ಹೊಸಗನ್ನಡ ಸಾಹಿತ್ಯ ಎಂಬ ವಿಂಗಡಣೆಯ ಜೊತೆಗೆ ಪ್ರಾಚೀನ ಸಾಹಿತ್ಯ ಆಧುನಿಕ ಸಾಹಿತ್ಯ ಎಂಬ ವಿಂಗಡಣೆಯೂ ಈ ಸಂಭವಕಾಲದಲ್ಲಿ ಚಾಲ್ತಿಗೆ ಬಂದಿತು. ಕನ್ನಡಿಗರ ಆಧುನಿಕ ವಿಮರ್ಶೆಯು ಆರಂಭಗೊಂಡಿದ್ದೇ ಪ್ರಾಚೀನ ಸಾಹಿತ್ಯದ ಪರಿಷ್ಕರಣ ಮತ್ತು ಮರು ನಿರ್ವಚನಗಳ ಮೂಲಕ. ಹಾಗಾಗಿ ವಿಮರ್ಶೆಯ ಮೊದಲ ಹಂತ ಎಂದರೆ ಪ್ರಾಚೀನ ಸಾಹಿತ್ಯದ ವಿಮರ್ಶೆ ಮಾತ್ರ. ಹೊಸಗನ್ನಡ ಸಾಹಿತ್ಯ ವಿಮರ್ಶೆ ಏನಿದ್ದರೂ ನಂತರದ ಹಂತ.

ಸುಮಾರು 1804ರ ಹೊತ್ತಿಗೆ ಜಾನ್ ಮೆಕೆರಲ್ ಕ್ಯಾನರೀಸ್ ಗ್ರ್ಯಾಮರ್ ಪ್ರಕಟಿಸಿದ್ದಾನೆ. ಡಬ್ಲ್ಯು ರೀವ್‌ನಿಂದ ಸಿದ್ಧಗೊಂಡ ಕರ್ನಾಟಕ ಅಂಡ್ ಇಂಗ್ಲಿಶ್ ಡಿಕ್ಷನರಿ ಪ್ರಕಟವಾಗಿದ್ದು ಸುಮಾರು 1810ರಲ್ಲಿ. 1817ರಲ್ಲಿ ವಿಲಿಯಂ ಕೇರಿ ತನ್ನ 'ಎ ಗ್ರಾಮರ್ ಆಫ್ ದಿ ಕರ್ನಾಟ ಲಾಂಗ್ವೇಜ್' ಅನ್ನು ಕಲ್ಕತ್ತದಿಂದ ಪ್ರಕಟಿಸಿದ್ದಾನೆ. ಮೆಕೆರಲ್ 1820ರಲ್ಲಿ 'ಎ ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೆಜ್' ಅನ್ನು ಮದ್ರಾಸಿನಿಂದ ಪ್ರಕಟಿಸಿದ್ದಾನೆ. ರಾಬರ್ಟ್ ಕಾಲ್ಡ್‌ವೆಲ್ಲನಿಂದ 'ಎ ಕಂಪ್ಯಾರೆಟಿವ್ ಗ್ರಾಮರ್ ಆಫ್ ದ್ರವಿಡಿಯನ್ ಲಾಂಗ್ವೇಜಸ್' 1826ರಲ್ಲಿ ಪ್ರಕಟವಾಗಿದೆ. ಸರಿಸುಮಾರು ಇದೇ ಕಾಲದಲ್ಲಿ ಜೆ.ಬುಚರ್ ತನ್ನ ಕನ್ನಡ ಇಂಗ್ಲಿಶ್ ಡಿಕ್ಷನರಿಯನ್ನು ಪ್ರಕಟಿಸಿದ್ದಾನೆ. ಇದರಲ್ಲಿ ಬುಚರ್ ಪ್ರಸ್ತಾವನೆಯಾಗಿ 'ಸಮ್ ರಿಮಾರ್ಕ್ಸ್ ಆನ್ ದಿ ಕನ್ನಡ ಲಾಂಗ್ವೇಜ್ ಎಂದು ಭಾಷಾ ವಿವೇಚನೆಯ ಕೆಲವು ಮಾತುಗಳನ್ನು ಬರೆದಿದ್ದಾನೆ. ಮೊದಮೊದಲಿಗೆ ಮುದ್ರಣ ರೂಪದಲ್ಲಿ ಪ್ರಕಟವಾದ ಕೆಲವು ಕನ್ನಡ ಕೃತಿಗಳಿವು. ಇವುಗಳ ನಂತರ ಇನ್ನೆರಡನ್ನು ನಾವಿಲ್ಲಿ ಗಮನಿಸಬೇಕು. 'ನಾಗವರ್ಮಾಸ್ ಪ್ರಸೋಡಿ' ಗ್ರಂಥಕ್ಕೆ ಕಿಟ್ಟೆಲ್ ಬರೆದ ಮುನ್ನುಡಿ ಆ್ಯನ್ ಎಸ್ಸೇ ಆನ್ ಕೆನರೀಸ್ ಲಿಟರೇಚರ್ ಮತ್ತು ಗಾಟ್‌ಫ್ರೈಡ್ ವೈಗಲ್ ಬರೆದ 'ಆನ್ ಕೆನರೀಸ್ ಲಿಟರೇಚರ್ ಅಂಡ್ ಲ್ಯಾಂಗ್ವೇಜ್' ಈ ಎರಡೂ ಮೊದಲ ಕನ್ನಡ ಸಾಹಿತ್ಯ ಚರಿತ್ರೆ ರಚನೆಯ ಐರೋಪ್ಯ ಯತ್ನಗಳಾಗಿವೆ. 1 ಸರಿಸುಮಾರು ಇದೇ ಕಾಲದಲ್ಲಿ ದೇವಚಂದ್ರನ 'ರಾಜಾವಳಿ ಕತೆ' ಪ್ರಕಟವಾಗಿದೆ. (ಈತನಿಗೆ ಪಾಶ್ಚಾತ್ಯ ವಿದ್ವಾಂಸರ ಪರಿಚಯವಿತ್ತು ಮತ್ತು ಈತ ಅವರಿಗೆ ಸಹಾಯ ಮಾಡಿದ್ದಾನೆ ಕೂಡ) ಸಂಭವಕಾಲದಲ್ಲಿ ಪ್ರಕಟವಾಗಿರುವ ಈ ಎಲ್ಲ ಕೃತಿಗಳಲ್ಲಿ ಕನ್ನಡ ವಿಮರ್ಶೆಯ ಮೊಳಕೆಗಳನ್ನು ನಾವು ಕಾಣಬಹುದು.

ಶಾಸನಗಳ ಮತ್ತು ಹಳಗನ್ನಡ ಪಠ್ಯಗಳ ಸಂಗ್ರಹ–ಸಂಪಾದನೆ, ಸಾಹಿತ್ಯಚರಿತ್ರೆ ರಚನೆ, ಅನುವಾದ, ವ್ಯಾಕರಣ, ನಿಘಂಟು, ಭಾಷಾಶಾಸ್ತ್ರೀಯ ಕೃತಿಗಳ ಮೂಲಕ ಕನ್ನಡ ವಿಮರ್ಶೆಯ ಸಂಭವ ಆಗಿದೆ. ಮೊದಲಿಗೆ ಸಾಹಿತ್ಯ ವಿಮರ್ಶೆಯ ಉದ್ದೇಶದಿಂದ ಏನೂ ವಿಮರ್ಶೆಯು ಸಂಭವಿಸಲಿಲ್ಲ. ಸ್ಥಳೀಯ ಸಂಸ್ಕೃತಿಗಳನ್ನು ಅಭ್ಯಾಸ ಮಾಡಿ ತಿಳಿದುಕೊಂಡರೆ; 1. ಸ್ಥಳೀಯರನ್ನು ಇನ್ನಷ್ಟು ಚೆನ್ನಾಗಿ ಆಳಬಹುದು. 2. ಸ್ಥಳೀಯರನ್ನು ತಮ್ಮ ಧರ್ಮಕ್ಕೆ ಮತಾಂತರಿಸುವುದು ಸುಲಭವಾಗಬಹುದು. 3. ತಮ್ಮ ಸೇವೆಗೆ ಸ್ಥಳೀಯರನ್ನು ಇನ್ನಷ್ಟು ವಿಧೇಯವಾಗಿ ಬಳಸಿಕೊಳ್ಳಬಹುದು. 4. ತಮ್ಮ ರೆವಿನ್ಯು ಹೆಚ್ಚಿಸಿಕೊಳ್ಳಬಹುದು 5. ಯುದ್ಧ ನೆಲೆಗಳಿಗೆ ಮತ್ತು ಸೈನಿಕ ಚಲನೆಗಳಿಗೆ ಸ್ಥಳೀಯ ಭೂಗೋಳ–ಸಂಸ್ಕೃತಿ ತಿಳಿಯಬಹುದು ಎಂದೆಲ್ಲ ಇಂಗ್ಲಿಶರು ಭಾವಿಸಿದ್ದರು. ಇದರಿಂದ ಕಂಪನಿ ಸರಕಾರ ಮತ್ತು ಮಿಶನರಿಗಳು ಸ್ಥಳೀಯ ಸಂಸ್ಕೃತಿಗಳನ್ನು ಅಭ್ಯಾಸ ಮಾಡಲು ತೊಡಗಿದರು ಎನ್‌ಲೈಟನ್ಮೆಂಟ್ ಪ್ರಾಜೆಕ್ಟಿನ ಮುಖವಾಡ ಹಾಕಿಕೊಂಡ ಇಂಥ ತೊಡಗುವಿಕೆಯ ಫಲವಾಗಿ ಭಾಷಾಂತರ, ಭಾಷಾ ಅಧ್ಯಯನ, ನಿಘಂಟು ರಚನೆ, ಶಾಸನ ಸಂಗ್ರಹ, ಹಳೆ ಪಠ್ಯಸಂಪಾದನೆ, ಭೂಗೋಳ ಶಾಸ್ತ್ರ ಅಧ್ಯಯನ (ಸಾಮಾಜಿಕ, ಸಾಂಸ್ಕೃತಿಕ, ಭೌಗೋಳಿಕ ನಕಾಶೆಗಳ ತಯಾರಿಕೆ), ಚರಿತ್ರೆ ರಚನೆ, ಔಪಚಾರಿಕ ಇಂಗ್ಲಿಶ್ ಶಿಕ್ಷಣ ಮತ್ತು ಅದಕ್ಕಾಗಿ ಪಠ್ಯರಚನೆ ಇವುಗಳು ಬೇರೆ ಬೇರೆ ಭೂಭಾಗಗಳಲ್ಲಿ ಬೇರೆ ಬೇರೆ ವ್ಯಕ್ತಿಗಳಿಂದ ನಡೆಯತೊಡಗಿದವು. ಮುದ್ರಣ ತಂತ್ರಜ್ಞಾನವು ಈ ಕಾಲದಲ್ಲಿ ಮೇಲಿನ ಕೆಲಸಕ್ಕೆ ವೇಗ ಮತ್ತು ವ್ಯಾಪಕತೆಯನ್ನು ತಂದುಕೊಟ್ಟಿತು. ಇದೆಲ್ಲವೂ ಇಂಗ್ಲಿಶರಿಗೆ ಅವರ ಸಾಮ್ರಾಜ್ಯಶಾಹಿಯ ವಿಸ್ತರಣೆಯೇ ಆಗಿತ್ತು. ಈ ವಿಸ್ತರಣೆಯ ಆಶಯದ ಬುಡದಲ್ಲಿ ವೈಟ್‌ಮ್ಯಾನ್ಸ್ ಬರ್ಡನ್ ಧೋರಣೆ, ಉದಾರ ಮಾನವತಾವಾದ, ಜನಾಂಗವಾದ ವ್ಯಕ್ತಿವಾದ ಮೊದಲಾದ ಇಸಮುಗಳು ಕೆಲಸ ಮಾಡುತ್ತಿದ್ದವು. ಇಂಥ ಶಾಸ್ತ್ರಗಳ ಸಂಭವದಲ್ಲಿ ವಿಮರ್ಶೆಯೂ ಒಂದಾಗಿ ಸಂಭವಿಸಿತು. ಕಾಲಕ್ರಮೇಣ ಇದಕ್ಕೆ ಪ್ರಕಾರದ

ಸ್ವತಂತ್ರ ಅಸ್ತಿತ್ವವೂ ಪ್ರಾಪ್ತವಾಯಿತು. ಸಾಹಿತ್ಯದ ಸಾಂಸ್ಕೃತಿಕ ಅನುಸಂಧಾನಗಳು ಈ ಕಾಲದಲ್ಲಿ ನಷ್ಟವಾಗಿರಲಿಲ್ಲ. ಮೈಸೂರು ರಾಜರ ಆಶ್ರಯದಲ್ಲಿ ಅನುವಾದಗಳು (ನಾಟಕ), ಟೀಕುರಚನೆಗಳು, ಸಂಗ್ರಹಗಳು, ಸಂಪಾದನೆಗಳು, ಸ್ವತಂತ್ರರಚನೆಗಳು ನಡೆಯುತ್ತಿದ್ದವು. ಇವುಗಳ ಜೊತೆಗೆ ಸಮಾಜದಲ್ಲಿ ಚದುರಿಕೊಂಡಂತೆ ವಿಚಾರಕ್ಕೆ ಹಾಕುವುದು ಇತ್ಯಾದಿ ಅನುಸಂಧಾನಗಳೂ ನಡೆಯುತ್ತಿದ್ದವು. ಸಾಹಿತ್ಯದ ಅನುಸಂಧಾನವು ಒಂದು ಸಾಂಸ್ಕೃತಿಕ ಆಚಾರವಾಗಿ ಸಮಾಜದಲ್ಲಿ ಚಾಲ್ತಿಯಲ್ಲಿ ಇರುವಂತೆಯೇ ಸಾಹಿತ್ಯ (ಪ್ರಕಾರವಾದಿ) ವಿಮರ್ಶೆಯು ಈ ಕಾಲದಲ್ಲಿ ಸಂಭವಿಸತೊಡಗಿತು. ಈ ಎರಡೂ ಮುಖಗಳು ಪರಸ್ಪರ ಹೆಣೆದುಕೊಳ್ಳದೆ; ವಿಮರ್ಶೆಯು ಅಕ್ಷರಸ್ಥರ ಸಾಹಿತ್ಯ ಪರಿಶೀಲನೆಯಾಗಿ ಬೆಳೆಯತೊಡಗಿತು.

ತಮ್ಮ ಸ್ವವನ್ನು ಶ್ರೇಷ್ಠವೆಂದು ಭಾವಿಸಿದ್ದ ಆಂಗ್ಲರು ತಮ್ಮದೇ ಚರಿತ್ರೆ ಪ್ರಜ್ಞೆಯ ಪಾಸಿಟಿವಿಸ್ಟ್ ದೃಷ್ಟಿಕೋನ, ಡಾರ್ವಿನ್ನನ ವಿಕಾಸವಾದಿ ದೃಷ್ಟಿಕೋನ, ನ್ಯೂಟೇನಿಯನ್ ಎಂಪಿರಿಸಿಸ್ಟ್ ದೃಷ್ಟಿಕೋನಗಳಿಂದ ಸ್ಥಳೀಯ ಸಂಸ್ಕೃತಿಯನ್ನು ಕಟ್ಟುತ್ತಿದ್ದರು. ಹೀಗಾಗಿ ಸ್ಥಳೀಯ ಓರಿಯೆಂಟಾಲಜಿಯ ದೇಹವು ಸ್ಥಳೀಯವಾಗಿದ್ದರೂ ಅದರ ಮನಸ್ಸು (ರಚನಾ ವಿಧಾನ) ಮಾತ್ರ ಪಶ್ಚಿಮದ್ದೇ ಆಗಿತ್ತು. ಆದುದರಿಂದಲೇ ನಮ್ಮ ಸಾಹಿತ್ಯಚರಿತ್ರೆ ರಚನಾಶಾಸ್ತ್ರ, ವ್ಯಾಕರಣ-ಭಾಷಾಶಾಸ್ತ್ರ, ಶಾಸನಶಾಸ್ತ್ರ, ಭೂಗೋಳಶಾಸ್ತ್ರ, ಪ್ರಾಚೀನ ಪಠ್ಯಗಳ ಗ್ರಂಥಸಂಪಾದನಾಶಾಸ್ತ್ರ, ಇತ್ಯಾದಿಗಳೆಲ್ಲವೂ ಆಧಾರವಾದಿ, ವಿಕಾಸವಾದಿ, ವಿಜ್ಞಾನವಾದಿ ದೃಷ್ಟಿಗಳಿಂದ ಆ ಕಾಲದಲ್ಲಿ ರೂಪಿತಗೊಳ್ಳುತ್ತಿದ್ದವು, ಇವುಗಳ ಮೂಲಕ ಪ್ರಕಟವಾಗಿರುವ ನಮ್ಮ ಸಂಭವಕಾಲೀನ ವಿಮರ್ಶೆ ಕೂಡ ಇಂಥ ದೃಷ್ಟಿಗಳಿಂದ ರೂಪಿತಗೊಂಡಿದೆ.

ಆಧುನಿಕ ವಿಮರ್ಶೆಯು (ಸಾಹಿತ್ಯ ಪ್ರಕಾರವಾಗಿ) ಸಂಭವಿಸಿರುವುದು ಮೊದಲು ಇಂಗ್ಲಿಶಿನಲ್ಲಿ ಆದರೆ ಇದು ಬರಿ ಇಂಗ್ಲಿಶಿಗರಿಂದ ಮಾತ್ರ ಸಂಭವಿಸಲಿಲ್ಲ. 'ಸಾಂಸ್ಕೃತಿಕ ಸ್ಥಳೀಯವನ್ನು ತಿಳಿಯುವ ಶಕ್ತಿ ಅವರಿಗೆ ಇರಲಿಲ್ಲ. ಅದಕ್ಕಾಗಿ ಅವರು ಸ್ಥಳಿಯರನ್ನೇ ಆಶ್ರಯಿಸಿದರು. ಸ್ಥಳೀಯರ ವಿದ್ವತ್ತು ಪರಿಶ್ರಮಗಳ ಸಹಾಯದಿಂದಲೇ ಇವೆಲ್ಲವನ್ನು ತಿಳಿಯುವ ಕೆಲಸ ಮಾಡಿದರು. (ಸ್ಥಳೀಯ ವಿದ್ವಾಂಸರನ್ನು ಇವರು ವಿದ್ವಾಂಸರೆಂದು ಪರಿಗಣಿಸುತ್ತಿರಲಿಲ್ಲ. ಮುನಿಷಿಗಳೆಂದು, ಸಹಾಯಕರೆಂದು ಪರಿಗಣಿಸುತ್ತಿದ್ದರು ಮತ್ತು ಅದಕ್ಕಾಗಿ ಇವರಿಗೆ ಕೂಲಿಯನ್ನೂ ಕೊಡುತ್ತಿದ್ದರು) ಹೀಗಾಗಿ ಸ್ಥಳೀಯರ ಪರಿಶ್ರಮ ಮತ್ತು ಇಂಗ್ಲಿಶಿಗರ ಹಿತಾಸಕ್ತಿಗಳ ಫಲವಾಗಿ ಸಂಭವಕಾಲೀನ ವಿಮರ್ಶೆ ಪ್ರಕಟವಾಯಿತು.

### 3.1. ಅನುವಾದಗಳ ಪೀಠಿಕೆ, ಮುನ್ನುಡಿ, ಪ್ರಸ್ತಾವನೆಗಳು

ಪ್ರಾಚೀನ ಗ್ರಂಥಗಳ ಸಂಪಾದನೆ, ನಿಘಂಟು ರಚನೆ, ಕೈಫಿಯತ್ತುಗಳ ಸಂಗ್ರಹ ಮತ್ತು ರಚನೆ, ಶಾಸನ ಸಂಗ್ರಹ ಮತ್ತು ವ್ಯಾಖ್ಯಾನಗಳ ಜೊತೆಜೊತೆಗೆ ಕನ್ನಡದಲ್ಲಿ ಅನುವಾದ ಕಾರ್ಯಗಳೂ ನಡೆಯುತ್ತಿದ್ದವು. ನಿಘಂಟುಗಳಿಗೆ, ಸಂಪಾದನೆಗಳಿಗೆ ಪೀಠಿಕೆ-ಪ್ರಸ್ತಾವನೆಗಳನ್ನು ಪಾಶ್ಚಾತ್ಯರು ಬರೆಯುವ ಮೂಲಕ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಪರಂಪರೆಯ ಮೌಲ್ಯಮಾಪನಕ್ಕೆ (ಪರೋಕ್ಷವಾಗಿ) ತೊಡಗಿದಂತೆ ನಮ್ಮವರೂ ತಮ್ಮ ತಮ್ಮ ಅನುವಾದ ಗ್ರಂಥಗಳಿಗೆ ತಮ್ಮದೇ ಪೀಠಿಕೆ-ಪ್ರಸ್ತಾವನೆಗಳನ್ನು ಬರೆಯುವ ಮೂಲಕ ನಮ್ಮ ಪರಂಪರೆ ಮತ್ತು ವರ್ತಮಾನದ ಮೌಲ್ಯಮಾಪನಕ್ಕೆ ತೊಡಗಿದರು. ಹೀಗೆ ಅನುವಾದ ಗ್ರಂಥಗಳ ಪೀಠಿಕೆ-ಮುನ್ನುಡಿ-ಪ್ರಸ್ತಾವನೆಗಳಲ್ಲಿ ಆಧುನಿಕ ವಿಮರ್ಶೆಯು ಸಂಭವಿಸಿತು. ಮೊದಲಿನ ಪಾಶ್ಚಾತ್ಯರ ಪೀಠಿಕೆ ಪ್ರಸ್ತಾವನೆಗಳಲ್ಲಿ ಸ್ಥಳೀಯವನ್ನು ಮೌಲ್ಯಮಾಪನ ಮಾಡುವುದಕ್ಕಿಂತ ತಿಳಿದುಕೊಳ್ಳುವ ಮತ್ತು ವ್ಯಾಖ್ಯಾನಿಸುವ ಆಕಾಂಕ್ಷೆ ಇದ್ದರೆ, ಅನುವಾದಗಳಿಗೆ ಬರೆದ ನಮ್ಮವರ ಪೀಠಿಕೆ-ಪ್ರಸ್ತಾವನೆಗಳಲ್ಲಿ ತಮ್ಮ ತಮ್ಮ ದಾರಿಗಳ ಹುಡುಕಾಟ ಮತ್ತು ಆತ್ಮಪರಿಶೀಲನೆ ಹಾಗೂ ಪರಂಪರೆಯ ಮೌಲ್ಯಮಾಪನ ಎಲ್ಲವೂ ಇದ್ದವು.

ಇಂಗ್ಲಿಶಿನಿಂದ ಮತ್ತು ದೇಶಭಾಷೆಗಳಿಂದ ನಮ್ಮವರಿಗೆ ಕವಿತೆ, ಕಾದಂಬರಿ, ನಾಟಕ ಇತ್ಯಾದಿಗಳನ್ನು ಅನುವಾದಿಸಿಕೊಳ್ಳುವಾಗ ಹಳೇ ಭಾಷೆ, ಛಂದಸ್ಸುಗಳ ಬಗೆಗೆ ಅನಾದರ ಹುಟ್ಟಿತ್ತು. ಸಾಹಿತ್ಯ ಪ್ರಕಾರದ ಸ್ವರೂಪ, ಛಂದೋರೂಪ, ಭಾಷಾ ಬಳಕೆಯ ವಿಧಾನ ಈ ಹಿನ್ನೆಲೆಯಲ್ಲಿ ಹಲವಾರು ಪ್ರಶ್ನೆಗಳು ಇವರಿಗೆ ಹುಟ್ಟಿದವು. ಮತ್ತು ಅನುವಾದವನ್ನು ಹೇಗೆ ಮಾಡಬೇಕು, ಯಾಕೆ ಮಾಡಬೇಕು; ಅನುವಾದದಲ್ಲಿ ಆಕರ ಭಾಷೆ, ಛಂದಸ್ಸು, ಸಂಸ್ಕೃತಿಗಳನ್ನು ನೇರವಾಗಿ ಅನುವಾದಿಸಬೇಕೋ ಅಥವಾ ಸ್ಥಳೀಯ ಭಾಷೆ, ಛಂದಸ್ಸು, ಸಂಸ್ಕೃತಿಗಳಿಗೆ ಅಳವಡಿಸಿ, ರೂಪಾಂತರಿಸಿ ಅನುವಾದಿಸಬೇಕೋ ಎಂಬ ಪ್ರಶ್ನೆಗಳೂ ಹುಟ್ಟಿದವು. ಇಂಥ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳುವಾಗ ನಮ್ಮವರು ತಮ್ಮದೇ ಕನ್ನಡ ವಿಮರ್ಶೆಯೊಂದನ್ನು ಪೀಠಿಕೆ, ಪ್ರಸ್ತಾವನೆ ಇತ್ಯಾದಿಗಳಲ್ಲಿ ನಿರ್ಮಿಸಿದರು. ಈ ವಿಮರ್ಶೆಯನ್ನು ಆಧುನಿಕ ಕನ್ನಡ ವಿಮರ್ಶೆಯ ಆದಿ ರೂಪಗಳಲ್ಲಿ

ಒಂದು ಎನ್ನಬಹುದು. ಇಲ್ಲಿ 1. ಭಾಷಾಂತರ ತತ್ವ 2. ವಿಮರ್ಶೆಯ ತತ್ವ 3. ಐಡೆಂಟಿಟಿಯ ಪ್ರಶ್ನೆಗಳು 4. ಸಾಹಿತ್ಯ ತತ್ವ 5. ಛಂದೋಚರ್ಚೆ ಇತ್ಯಾದಿಗಳೆಲ್ಲವೂ ಇದ್ದವು. ಇಂತಹ ವಿಮರ್ಶೆಯ ಒಂದೆರಡು ಮಾದರಿಗಳನ್ನು ಈ ಕೆಳಗೆ ನೀಡಲಾಗಿದೆ.

ಪ್ರತಾಪರುದ್ರ (1895) ಅನುವಾದಿತ ನಾಟಕಕ್ಕೆ ಬರೆದ ಮುನ್ನುಡಿಯಲ್ಲಿ ಎಂ.ಎಲ್.ಶ್ರೀಕಂಠೇಶಗೌಡರು "ಕಾಲುವೆಗಳಿಂದ ಗಂಟು ಹಾಕಲ್ಪಟ್ಟಿರುವ ಎರಡು ತಟಾಕಗಳಲ್ಲಿ ಹೆಚ್ಚು ನೀರಿರುವ ತಟಾಕದ ನೀರು ಮತ್ತೊಂದು ತಟಾಕಕ್ಕೆ ಹರಿಯುವಂತೆ ಸಂಸ್ಕೃತ ಶಬ್ದಗಳು ನಿರಂತರವಾಗಿ ಕನ್ನಡಕ್ಕೆ ಬರುತ್ತಲೇ ಇರುವವು. ಹೀಗಿರುವಲ್ಲಿ ಶಬ್ದಾತಿಶಯದಿಂದ ಔನ್ನತ್ಯಯ ಸ್ಥಿತಿಯಲ್ಲಿರುವ ಸಂಸ್ಕೃತವನ್ನು ಕನ್ನಡಿಸುವಲ್ಲಿ ಭಾಷಾಂತರಿತ ಗ್ರಂಥವು ನಿಸ್ಸಾರವ್ಯಾತಕ್ಕಾಗಬೇಕು? ಉನ್ನತ ಪ್ರದೇಶದಲ್ಲಿರುವ ತಟಾಕವು ಕಾಲುವೆಯಿಂದ ಗಂಟು ಹಾಕಲ್ಪಟ್ಟಿರುವ ಕೆಳಗಣ ತಟಾಕಕ್ಕಿಂತಲೂ ಎಷ್ಟು ದೊಡ್ಡದಾದರೂ ಎರಡು ತಟಾಕಗಳ ನೀರಿನಲ್ಲಿನ ಸಾರವು-ನೀರಿನ ಮಟ್ಟವು ಒಂದೇ ಸಮನಾಗಿರುವುದೇ ಹೊರ್ತು ಮತ್ತೆ ಹ್ಯಾಗಿದ್ದೀತು? ಮೇಲಣ ತಟಾಕದ ನೀರಿನ ಸಾರ ಮಾತ್ರವೇ ಅಲ್ಲದೆ ಕೆಳಗಣ ತಟಾಕದ ನೀರಿನಲ್ಲೇನಾದರೂ ಸಾರವಿದ್ದರೆ ಅದು ಇದ್ದುಕೊಂಡು ಮೇಲಣ ತಟಾಕದ ಸಾರಕ್ಕಿಂತಲೂ ಕೆಳಗಣ ತಟಾಕದ ಸಾರವು ಅತಿಶಯವಾಗಿರಬಹುದಷ್ಟೆ. ವ್ಯತ್ಯಾಸವೇನೆಂದರೆ ಒಂದರಲ್ಲಿ ನೀರು ಹೆಚ್ಚಾಗಿರುವುದು ಮತ್ತೊಂದರಲ್ಲಿ ನೀರು ಕಡಿಮೆಯಾಗಿರುವುದು. ಈ ಕಾರಣದಿಂದ ಸಂಸ್ಕೃತದಲ್ಲಿ ಕನ್ನಡಕ್ಕಿಂತಲೂ ಬಹಳವಾಗಿ ಗ್ರಂಥಗಳಿರಬೇಕೇ ಹೊರ್ತು ಕನ್ನಡಿಸಿದ ಗ್ರಂಥದಲ್ಲಿ ಸಂಸ್ಕೃತದ ಸಾರವಿಲ್ಲದೇ ಇರಲು ಕಾರಣವೇನೂ ಇಲ್ಲ."[3] ಎಂದು ಹೇಳಿದ್ದಾರೆ. ಇಲ್ಲಿ ಕನ್ನಡ ಸಂಸ್ಕೃತಗಳ ಸಂಬಂಧ ಹೇಗಿರಬೇಕು ಎಂಬ ವಿಚಾರಗಳಿವೆ. ಜೊತೆಗೆ ಶ್ರೀಕಂಠೇಶಗೌಡ ತನ್ನದೇ ಅನುವಾದ ತತ್ವವೊಂದನ್ನು ಪ್ರತಿಪಾದಿಸುತ್ತಿದ್ದಾನೆ. ಇದು ಪರೋಕ್ಷವಾಗಿ ಕನ್ನಡ ರಾಷ್ಟ್ರೀಯತೆ, ಕನ್ನಡ ಐಡೆಂಟಿಟಿಯ ಪ್ರಶ್ನೆ ಕೂಡ. ವಿಮರ್ಶೆಯು ಹೀಗೆ ಅನುವಾದಗಳ ಪೀಠಿಕೆಗಳಲ್ಲಿ ಸ್ವಸಮರ್ಥನೆ, 'ಸ್ವ'ದ ಅಸ್ಮಿತೆ ಮತ್ತು ತತ್ವ ಮಂಡನೆಗಳಿಗೆ ಕಾರಣವಾಗಿದೆ.

ಭಾಷಾಂತರ ವೈರಿ ಎಂದು ತನ್ನನ್ನು ತಾನು ಕರೆದುಕೊಂಡಿರುವ ಎ.ಬಿ.ಅಯಾಟ್ನಕಿರ್ಸನು (SRIKANTAYA-AYATNAKIRS) ಅಕಿಂಡರೇನ್ ಎಂಬ ಜೀವನ ಚರಿತ್ರೆಗೆ ಬರೆದ ಮುನ್ನುಡಿಯಲ್ಲಿ ಹೇಳಿಕೊಂಡಿರುವ ಮಾತುಗಳನ್ನು ನೋಡಿ; "ಚಂದ್ರಹಾಸ, ವಾಮದೇವ, ದಶರಥ ಎಂಬ ಪದಗಳಿಗೆ ಆಂಗ್ಲೇಯರು ಮೂನ್‌ಲೈಟ್, ಲೆಫ್ಟ್ ಗಾಡ್, ಟೆನ್ ಚಾರಿಯೇಟ್ ಎಂದು ಭಾಷಾಂತರ ಮಾಡುವುದಿಲ್ಲ. ಹೆಚ್ಚೇಕೆ ಆಂಗ್ಲೇಯರು ಗ್ರೀಕ್, ರೋಮನ್, ಪಾರ್ಸಿ, ಹಿಂದೂ ಗ್ರಂಥಗಳನ್ನು ಭಾಷಾಂತರ ಮಾಡಿರುವುದರಲ್ಲಿ ಅಂಕಿತ ನಾಮಗಳನ್ನು ಎಲ್ಲಿಯಾದರೂ ತಮ್ಮ ಮಾತೃಭಾಷೆಗೆ ಭಾಷಾಂತರ ಮಾಡಿದ್ದಾರೆಯೇ? ಹೋಮರ್, ಸೊಫೊಕ್ಲಿಸ್, ಈಸ್ಕಿಲಸ್, ಯೂರಿಪಿಡೀಸ್, ವರ್ಜಿಲ್, ಉಮರ್ ಖಯ್ಯಾಂ, ಕಾಳಿದಾಸ, ಭವಭೂತಿ ಎಂಬ ಕವಿಗಳ ಹೆಸರುಗಳನ್ನಾಗಲೀ ಅವರ ಕಾವ್ಯಗಳಲ್ಲಿ ಉಕ್ತವಾಗಿರುವ ಪಾತ್ರಗಳ ಹೆಸರುಗಳನ್ನಾಗಲೀ ಭಾಷಾಂತರ ಮಾಡಿದಾಗ ಜನರು ನಗಲಾರರೇ? ಥೇಸಿಯಸ್ ಎಂಬ ಪಾತ್ರಕ್ಕೆ ರಾಬರ್ಟ್ ಎಂದು ನಾಮಕರಣ ಮಾಡಿ ಒಲಂಪಿಯನ್ ಆಟಗಳನ್ನಾಡಿಸಬಹುದೇ? ಮಿಡ್ ಸಮ್ಮರ್ ನೈಟ್ಸ್ ಡ್ರೀಮ್‌ಗೂ ಪ್ರಮೀಳಾರ್ಜುನೀಯಕ್ಕೂ ಸಂಬಂಧವೇನು? ಸಿಂಬಲೈನ್ ಜಯಸಿಂಹರಾಜನೇ?.. ಉತ್ತಮನೆ? ಸ್ಯಾಂಡ್‌ಪೋರ್ಡ್ ಅಂಡ್ ಮರ್ಟನ್ ಮದನ ಕುಸುಮಾಕರರೇ? ಲೇಡಿ ಹಟ್ಟನ್ಸ್ ವಾರ್ಡ್ ಚಾರುಶಿಲೆಯೇ?.. ಆ್ಯಸ್ ಯು ಲೈಕ್ ಇಟ್ ಮನೋರಂಜನಿಯೇ? ಮರ್ಚೆಂಟ್ ಆಫ್ ವೆನಿಸ್ ಪಾಟಲೀಪರಿಣಯವೇ? ಎ ಸಿಲಿಕಾನ್ ಸಮ್ಮರ್ ಕನ್ಯಾವಿತಂತುವೇ? ಏನು ಆಭಾಸ! ಏನು ಮೌಢ್ಯ! ಎಂತಹ ಮೋಸ!! ಮೆಕ್‌ಬೆತ್‌ಗೆ ಪ್ರತಾಪರುದ್ರ ನಾಮವು ಸಹಜವಾಗುವದೆ? ನಿಮ್ಮ ಅಭಿಮತವು ಹಾಗೇ ಇದ್ದರೆ ನಾವು ಇನ್ನು ಮೇಲೆ ಆನೆಕಲ್ಲಿಗೆ ಎಲಿಫೆಂಟ್ ಸ್ಟೋನ್ ಎಂತಲೂ, ಕಲ್ಲಂಗಡಿ ಹಣ್ಣಿಗೆ ಸ್ಟೋನ್ ಬಜಾರ್ ಫ್ರೂಟ್ ಎಂತಲೂ ನೀಲಕಂಠ ಎಂಬುದಕ್ಕೆ ಬ್ಲೂ ನೆಕ್ ಎಂತಲೂ ರಾಮ ಎಂಬುದಕ್ಕೆ ರ್‍ಯಾಮ್ ಎಂತಲೂ ಬರೆಯಬೇಕೆಂದು ಆಂಗ್ಲೇಯ ಗ್ರಂಥಕರ್ತರಿಗೆ ತಿಳಿಸುವೆವು."[4]

"ಪಾಠಕರಿಗೆ ತಿಳಿದುಕೊಳ್ಳಲು ಅಸಾಧ್ಯವಾದೀತೆಂದು ಕನ್ನಡದಲ್ಲಿ ಶಬ್ದಬಾಹುಳ್ಯವಿಲ್ಲವೆಂದು ನೆಪಮಾಡಿಕೊಂಡು ಸುಳ್ಳನ್ನು ಬರೆದು ನಿಜವೆಂದು ಸಾಧಿಸಿ ನರಕಕ್ಕೀಡಾಗುವುದೇತಕ್ಕೆ? ರಾಮವರ್ಮ ಲೀಲಾವತಿಯನ್ನೋದಿಬಿಟ್ಟರೆ ರೋಮಿಯೋ ಅಂಡ್ ಜೂಲಿಯೆಟ್ ಓದಿದಂತಾಯಿತೇ? ಆಂಗ್ಲೇಯ ಸಮಾಜದ ನಡವಳಿಕೆ ತಿಳಿಯಿತೇ? ರೋಮನ್ ಜನರ ಸಂಪ್ರದಾಯವು ಗ್ರಾಹ್ಯವಾಯಿತೇ? ಆ ಕಥೆಯು ನಡೆದ ಕಾಲದಲ್ಲಿ ಇಟಲಿ ದೇಶದ ನಿವಾಸಿಗಳ ಸ್ಥಿತಿ ಹೇಗಿದ್ದಿತೆಂದು ತಿಳಿಯಿತೆ? ಮನೋರಂಜಿನಿಯನ್ನೋದಿದರೆ

ರೋಸಲೆಂಡ್ ಎಂಬ ಮ್ಲೇಚ್ಛ ಸ್ತ್ರೀಯ ಮತ್ತು ಅವಳ ಪ್ರಿಯತಮನಾದ... ನಡವಳಿಕೆಯ ಸ್ವಾರಸ್ಯವು ಗೊತ್ತಾಗುವದೇ? ಜಯಸಿಂಹರಾಜ ಚರಿತ್ರೆಯಿಂದ.. ಇಮೊಗೆನ್ ದಂಪತಿಗಳ ನೈಜ ಗುಣವು ಹೊರಡುವದೆ? ಹೇಮಚಂದ್ರರಾಜ ವಿಲಾಸಕ್ಕು ಷೇಕ್ಸ್‌ಪಿಯರ್‌ನ ಕಿಂಗಲಿಯರ್‌ಗೂ ಆನೆಗೂ ಆಡಿಗೂ ಇರುವಷ್ಟು ಸಂಬಂಧವಾದರೂ ಇದೆಯೇ? ಭಿಭಿತ್ಸರ ಸಾಧಿಕದಿಂದ ನಮ್ಮನ್ನು ದೂರಕ್ಕೆ ಓಡಿಸಿಬಿಡುವ ಪ್ರತಾಪರುದ್ರದೇವ ನಾಟಕದಿಂದ ಮೆಕ್‌ಬೆತ್‌ನ ನಿಜಾಂಶವನ್ನು ಕನ್ನಡಿಗರಾರಾದರೂ ಗ್ರಹಿಸಿರುವರೇ? ಹೇಮಲತವು ಹ್ಯಾಮ್ಲೆಟ್ ಭಾಷಾಂತರವೆಂದು ಹೇಳಿಕೊಳ್ಳುವುದಕ್ಕೆ ನಾಚಿಕೆಯಾಗುವುದಿಲ್ಲವೇ? ಈ ರೀತಿಯಲ್ಲಿ ಗ್ರಂಥ ಬರೆಯುವುದಕ್ಕಾರಂಭಿಸಿ ಮೇಲ್ಪಂಕ್ತಿಯನ್ನು ಹಾಕಿದ ಮಹಾತ್ಮನಿಗೆ ನಮಸ್ಕಾರ"

ಇಲ್ಲಿ ಎಂ.ಎಲ್.ಶ್ರೀಕಂಠೇಶಗೌಡ, ಎಂ.ಎಸ್.ಪುಟ್ಟಣ್ಣಾದಿಯಾಗಿ ಎಲ್ಲರ ಇಂಗ್ಲಿಶ್ ಭಾಷಾಂತರಗಳನ್ನು ಕಟುವಾಗಿ ವಿಮರ್ಶೆ ಮಾಡಲಾಗಿದೆ. ಅಲ್ಲದೆ ತನ್ನದೇ ಭಾಷಾಂತರ ತತ್ವ ಮತ್ತು ಕನ್ನಡವನ್ನು ವೃದ್ಧಿಪಡಿಸುವ ಕಾಳಜಿಯನ್ನು ವ್ಯಕ್ತಪಡಿಸಲಾಗಿದೆ. ಇಂತಹ ಅನೇಕ ಮುನ್ನುಡಿಗಳನ್ನು ಗಮನಿಸಿದರೆ ಕನ್ನಡ ವಿಮರ್ಶೆಯ ಆದಿಮ ಲಕ್ಷಣಗಳನ್ನು ಕಟ್ಟಿಕೊಳ್ಳಬಹುದಾಗಿದೆ. ಇವರ ಅನಂತರದಲ್ಲಿ ಎ.ಆರ್.ಕೃ, ಟಿ.ಎಸ್.ವೆಂಕಣ್ಣಯ್ಯ, ಎಂ.ಆರ್.ಶ್ರೀ, ಡಿ.ಎಲ್.ಎನ್, ತೀನಂಶ್ರೀ, ಆರ್.ನರಸಿಂಹಾಚಾರ್ಯ, ಗೋವಿಂದಪೈ, ಮುಳಿಯ, ಎಸ್.ವಿ.ರಂಗಣ್ಣ, ಮುಗಳಿ, ಮಾಸ್ತಿ, ಡಿವಿಜಿ, ಬೇಂದ್ರೆ, ಕುವೆಂಪು, ಪುತಿನ ಮುಂತಾದ ವಿಮರ್ಶಕರು ತಮ್ಮದೇ ದಾರಿಗಳನ್ನು ಈ ಇಂತಹ ಪೀಠಿಕೆ ಪ್ರಸ್ತಾವನೆಗಳ ಮೆಟ್ಟಿಲುಗಳನ್ನು ಹತ್ತುತ್ತಲೇ ಕಂಡುಕೊಂಡಿದ್ದಾರೆ.

ಗಳಗನಾಥರ ಸ್ವತಂತ್ರ ಕಾದಂಬರಿ 'ಪ್ರಬುದ್ಧ ಪದ್ಮನಯನೆ'ಯ (1898) ಮುನ್ನುಡಿಯಲ್ಲಿ ಗಳಗನಾಥರು "ಶಾಸ್ತ್ರೀಯ ವಿಷಯಗಳ, ಗಹನ ವಿಷಯಗಳ ಗ್ರಂಥಾವಲೋಕನವು ವಿದ್ವಾಂಸರಿಗೆ ಮಾತ್ರ ಸಾಧ್ಯವಾದುದು. ಸಾಧಾರಣ ಜನರಿಗೆ ಆ ಗ್ರಂಥಗಳು ದುರ್ಭೋದವಾಗಿ ಅವರ ಓದುವ ಲವಲವಿಕೆಯು ನಷ್ಟವಾಗುವ ಸಂಭವವುಂಟು. ಕಾರಣ ವಾಚನಾಭಿರುಚಿ ಇಲ್ಲದ ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಲಿಕ್ಕೂ, ಉದ್ಯೋಗಾತಿಶಯದಿಂದ ಶ್ರಾಂತರಾದವರಿಗೆ ವಿಶ್ರಾಂತಿಯಲ್ಲಿ ಆನಂದಗೊಳಿಸಲಿಕ್ಕೂ, ಮನೋರಂಜನವಾಗಿ ನೀತಿಬೋಧವಾಗುವುದಕ್ಕೂ ಉತ್ತಮ ಕಾದಂಬರಿಗಳು ಬೇಕೇ ಬೇಕು." "ಸತ್ಯತೆ ಹೃದಯನಿರ್ಮಲತೆಯ ಇವೆರಡೂ ಸಾಧನೆಗಳೇ ನಮಗೆ ಇಹ ಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು ಸರ್ವಪ್ರಯತ್ನವೂ ನಿರರ್ಥಕವೇ. ಇದನ್ನು ಸಹೃದಯಗೊಳಿಸುವುದೇ ಈ ಪುಸ್ತಕದ ಉದ್ದೇಶವು." ಎಂದು ತಿಳಿಸಿದ್ದಾರೆ. ಇಲ್ಲಿ ಕಾದಂಬರಿ ಪ್ರಕಾರದ ಅವಶ್ಯಕತೆ ಮತ್ತು ಎಂಥ ಕಾದಂಬರಿಯನ್ನು ಬರೆಯಬೇಕೆಂಬ ಕಾದಂಬರಿ ಪ್ರಕಾರ ತತ್ವ ಇತ್ಯಾದಿಗಳಿವೆ.

"ಕಾದಂಬರಿಗಳೆಂದರೆ ಕಡಿಮೆ ಯೋಗ್ಯತೆಯ ಗ್ರಂಥಗಳು, ಕಾದಂಬರಿಕಾರನೆಂದರೆ ಕಡಿಮೆ ಯೋಗ್ಯತೆಯ ಗ್ರಂಥಕಾರನು ಎಂಬ ತಿಳುವಳಿಕೆಯಿಂದ ನಾನು ಕಾದಂಬರಿಗಳನ್ನು ಬರೆದಿರುವದಿಲ್ಲ. ತಾತ್ವಿಕ ವಿಷಯಗಳೆಂಬ ಸಣ್ಣ ಕಹಿ ಗುಳಿಗೆಗಳನ್ನು ನವರಸಗಳ ಕಷಾಯದಲ್ಲಿ ಕುಡಿಸಿ ಸರ್ವಗ್ರಾಹ್ಯವಾಗುವಂತೆ ಪೌಷ್ಟಿಕ ರಸಾಯನವಾಗಿ ಮಾಡುವ ಘನವಾದ ಯೋಗ್ಯತೆಯು ಕಾದಂಬರಿಕಾರರಲ್ಲಿ ಅಲ್ಲದೆ ಮತ್ತೊಬ್ಬ ಲೇಖಕರಲ್ಲಿ ಇರಲಾರದೆಂಬ ಅಹಂಕಾರದಿಂದ ನಾನು ಕಾದಂಬರಿಗಳನ್ನು ಬರೆದಿದ್ದೇನೆ." ಹೀಗೆ ತಾವು ರಚಿಸುವ ಸಾಹಿತ್ಯಕ್ಕೆ ತಮ್ಮದೇ ಸಮರ್ಥನೆಯನ್ನು ಒದಗಿಸುವ ಸಾಹಿತ್ಯ ತತ್ವ ಕೂಡ ಈ ಕಾಲದಲ್ಲಿ ಸೃಷ್ಟಿಯಾಯಿತು. ಈ ಸಾಹಿತ್ಯ ತತ್ವವು ವಿಮರ್ಶೆಯೇ. ಸಂಭವಕಾಲದ ಅನಂತರದಲ್ಲಿ ಇದುವರೆಗೆ ಇಂಥ ಒಂದು ಪರಂಪರೆಯೇ ನಿರ್ಮಾಣ ಆಗಿರುವುದನ್ನು ಗುರ್ತಿಸಿಕೊಳ್ಳಬಹುದು. ಸಾಹಿತಿಗಳೇ ಬರೆದಿರುವ ಸಾಹಿತ್ಯ ಸಮರ್ಥನೆಗಳು ನಮ್ಮಲ್ಲಿ ಸಾಕಷ್ಟಿವೆ. ನಮ್ಮ ಪ್ರಾಚೀನರಲ್ಲು ಸ್ವಕಾವ್ಯ ಸ್ವರೂಪ ನಿರ್ವಚನ, ಸ್ವಕಾವ್ಯ ಸಮರ್ಥನಾ ಧಾಟಿಯ ಮಾತುಗಳು ಸಾಕಷ್ಟು ಪ್ರಕಟವಾಗಿವೆ.

### 3.2. ಬೋಧನೆ–ಶೈಕ್ಷಣಿಕತೆ

ಶಾಲೆ, ಕಾಲೇಜುಗಳಲ್ಲಿ ಬೋಧನೆಗೆ ಯಾವ ಯಾವ ಶಿಸ್ತುಗಳನ್ನು ಕಲಿಸಬೇಕು ಮತ್ತು ಹೇಗೆ ಭೋದಿಸಬೇಕು ಎಂಬ ಜಿಜ್ಞಾಸೆಯು ಆಧುನಿಕ ಶೈಕ್ಷಣಿಕ ವ್ಯವಸ್ಥೆಯೊಂದು ಆರಂಭವಾದ ಕಾಲದಿಂದ ಇಂದಿನವರೆಗೆ ನಿರಂತರ ನಡೆಯುತ್ತಲೇ ಬಂದಿದೆ. ಪಠ್ಯ ಮತ್ತು ಅಧ್ಯಯನ ಶಿಸ್ತುಗಳ ನಿರಂತರ ಪರಿಷ್ಕರಣೆ, ರೂಪಣೆಗಳು ನಡೆಯುತ್ತಲೇ ಬಂದಿವೆ. ಈ ಹಿನ್ನೆಲೆಯಲ್ಲಿ ಹಳಗನ್ನಡ ಪಠ್ಯಗಳ (ಶೈಕ್ಷಣಿಕ ಉದ್ದೇಶದ) ಸಂಪಾದನೆ–ಸಂಗ್ರಹಗಳು ಪರಿಣಾಮಕಾರಿ 'ತರಗತಿ ಬೋಧನೆಯ ಸಾಧ್ಯತೆ'ಯಿಂದ ಸಾಕಷ್ಟು ಬಾಧಿತವಾಗಿವೆ. ಅಂದರೆ ನಮ್ಮ ಸಂಭವಕಾಲದ ವಿಮರ್ಶೆಯು ಯಾವುದನ್ನು ಚೆನ್ನಾಗಿ ತರಗತಿಯಲ್ಲಿ ಭೋದಿಸಬಹುದೊ,

ತರಗತಿ ಬೋಧನೆಗೆ ತಕ್ಕ ಗಟ್ಟಿತನ ಯಾವ ಪಠ್ಯಗಳಲ್ಲಿ ಇದೆಯೋ ಅಂಥವನ್ನು ಆಯ್ದು ಕಟ್ಟುವ ಕೆಲಸವನ್ನು ಮಾಡುತ್ತ ಬಂದಿದೆ. ಇದಲ್ಲದೆ ವಸ್ತು ವಿಶ್ಲೇಷಣೆ, ವಿವರಣೆ, ಸಾರಸಂಗ್ರಹ, ಮೌಲ್ಯಾಧಾರಿತ ಭಾಗಗಳ ವರ್ಣನೆ ಮತ್ತು ವಿಶ್ಲೇಷಣೆಗಳು ಇಂಥ ಕಡೆ ಸ್ಟೂಡಿಯಸ್ಸಾದ ನೆಲೆಗಳಿಂದ ನಡೆದಿವೆ. ಹೀಗಾಗಿ ನಮ್ಮ ಸಂಭವಕಾಲದ ವಿಮರ್ಶೆಯ ಸ್ವರೂಪವು ಹೀಗೆ ಸಂಭವಗೊಳ್ಳಲು ಶೈಕ್ಷಣಿಕತೆ ಒಂದು ಮುಖ್ಯ ಕಾರಣವಾಗಿದೆ.

ಸಂಪಾದನಾ ಕಾರ್ಯಗಳಿಗೆ ಆರಂಭದಲ್ಲಿ ಶೈಕ್ಷಣಿಕವಾದ ಉದ್ದೇಶಗಳು ಇದ್ದವು. ಹೀಗಾಗಿ ಸಮಗ್ರ/ಸಂಗ್ರಹಿತ ಸಂಪಾದನೆಗಳಲ್ಲಿ ಪ್ರಕಟವಾಗಿರುವ ವಿಮರ್ಶೆಯು ಶೈಕಣಿಕ ಉದ್ದೇಶಗಳಿಂದ ಕೂಡ ನಿಯಂತ್ರಿತವಾಗಿದೆ. ಅಲ್ಲದೆ ಏನನ್ನು ಕಲಿಸಬೇಕು, ಎಷ್ಟನ್ನು ಕಲಿಸಬೇಕು ಎಂಬುದನ್ನು ನಿರ್ಧರಿಸುವುದರ ಹಿಂದೆ ವಸಾಹತುಶಾಹಿ ಮತ್ತು ಸ್ಥಳೀಯ ಪುರೋಹಿತಶಾಹಿ ಕೆಲಸ ಮಾಡಿದೆ. (ಪ್ರಾಚೀನ ಪಠ್ಯಗಳ ಸಂಪಾದನೆ/ಸಂಗ್ರಹದಲ್ಲಿ ಹೆಚ್ಚಾಗಿ ನೈತಿಕ ಎಚ್ಚರ, ಪಾಶ್ಚಾತ್ಯ ವಿದ್ವಾಂಸರ ವೈಜ್ಞಾನಿಕ ಮನೋಭಾವಗಳೇ ಮುಖ್ಯವಾಗಿ ಕೆಲಸ ಮಾಡಿರುವುದನ್ನು ಈಗಾಗಲೇ ವಿವರಿಸಿಕೊಳ್ಳಲಾಗಿದೆ) “ವಿಶ್ವವಿದ್ಯಾಲಯದಲ್ಲಿ ಕನ್ನಡವನ್ನು ಕುರಿತೋದುವವರಿಗೆ ಪಠ್ಯ ಪುಸ್ತಕವಾಗಿ ಮತ್ತು ಸರ್ಕಾರದ ಸೂಚನೆಗನುಸಾರವಾಗಿ ಉಪಯುಕ್ತವಾದ ಕಥನ ಕಾವ್ಯವನ್ನು ಮೂಡಿಸಬೇಕೆಂಬ ದೃಷ್ಟಿಯಿಂದ ಹಿತವಲ್ಲದ ಭಾಗಗಳನ್ನು ಬಿಟ್ಟು ವೈಪರೀತ್ಯಗಳನ್ನು ಕಡಿಮೆ ಮಾಡಿ ಅತಿಯಾಗಿರುವ ವಿವರಗಳನ್ನು ಸಂಕ್ಷೇಪಿಸಿದೆ”[1] ಎಂದು ಜೆ.ಸ್ಟೀವೆನ್ಸನ್ ತನ್ನ ಸೋಮೇಶ್ವರ ಶತಕ ಸಂಪಾದನೆಯ ಸಂದರ್ಭದಲ್ಲಿ ಹೇಳಿಕೊಂಡಿದ್ದಾನೆ. ಹಳೆ ಪಠ್ಯಗಳನ್ನು ಎಡಿಟ್ಟು ಮಾಡುವಾಗ ಪ್ರಕಟವಾಗಿರುವ ವಿಮರ್ಶೆ ಹೀಗೆ ಮುಖ್ಯವಾಗಿ ಶೈಕ್ಷಣಿಕ ಉದ್ದೇಶಗಳಿಂದ ನಿರ್ದೇಶಿತವಾಗಿರುವುದನ್ನು ಕಾಣಬಹುದು. ಈ ಶೈಕ್ಷಣಿಕ ಉದ್ದೇಶಗಳು ಬಹುಪಾಲು ಪಶ್ಚಿಮ ದೃಷ್ಟಿ ಮತ್ತು ಸ್ಥಳೀಯ ಪುರೋಹಿತಶಾಹಿ ದೃಷ್ಟಿಗಳಿಂದ ನಿರ್ದೇಶಿತವಾಗುತ್ತಿದ್ದವು ಎಂಬುವುದರಲ್ಲಿ ಎರಡು ಮಾತಿಲ್ಲ. ಈ ನಿಯಂತ್ರಣವು ಸರ್ಕಾರಿ ನಿಯಂತ್ರಣವೂ ಆಗಿತ್ತು ಕೂಡ.

### 3.3. ಪತ್ರಿಕೋದ್ಯಮ ಮತ್ತು ವಿಮರ್ಶೆ

ಪತ್ರಿಕೋದ್ಯಮಕ್ಕೂ ಸಂಭವಕಾಲೀನ ವಿಮರ್ಶೆಗೂ ಒಂದು ಅನ್ಯೋನ್ಯವಾದ ಸಂಬಂಧ ಇದೆ. ಮುದ್ರಣ ತಂತ್ರಜ್ಞಾನವು ಇಲ್ಲಿ ವ್ಯಾಪಕಗೊಳ್ಳುತ್ತಿದ್ದಂತೆ ಬೈಬಲ್ಲಿನ ಅನುವಾದಗಳು ಮತ್ತು ಶೈಕ್ಷಣಿಕ ಪಠ್ಯಗಳ ಜೊತೆಗೆ ಮೈಸೂರು ಒಡೆಯರ ವಲಯದ ಗ್ರಂಥಗಳು ಹಾಗೂ ಪ್ರಾಚೀನ ಗ್ರಂಥಗಳು ಸಂಪಾದಿತಗೊಂಡು ಮುದ್ರಣ ರೂಪ ಪಡೆಯತೊಡಗಿದವು. ಇವೆಲ್ಲವುಗಳ ಜೊತೆಜೊತೆಗೆ ಒಂದೊಂದಾಗಿ ಹಲವಾರು ಪತ್ರಿಕೆಗಳು ಜನ್ಮ ತಾಳಿದವು. ವಾಗ್ಭೂಷಣ, ವಿದ್ಯಾಬೋಧಿನಿ, ಸುಹಾಸಿನಿ, ಕಥಾಂಜಲಿ, ಸುರಭಿ, ರಾಷ್ಟ್ರಬಂಧು, ಜಯಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಶ್ರೀಕೃಷ್ಣ ಸೂಕ್ತಿ, ಜಯಂತಿ, ಜೀವನ, ಪ್ರಬುದ್ಧ ಕರ್ನಾಟಕ, ಸದ್ಬೋಧ ಚಂದ್ರಿಕೆ, ವಿದ್ಯಾದಾಯಿನಿ, ಮಧುರವಾಣಿ, ವಿದ್ಯೋದಯ ನಂದಿನಿ, ಹಿತೈಷಿಣಿ ಹೀಗೆ ಹಲವಾರು ಪತ್ರಿಕೆಗಳು ಹುಟ್ಟಿಕೊಂಡವು. ಇವುಗಳಲ್ಲಿ ಸಾಹಿತ್ಯದ ಜೊತೆಗೆ ವಿಮರ್ಶೆಯೂ ಪ್ರಕಟವಾಗತೊಡಗಿತು.

ಪಾಶ್ಚಾತ್ಯರ ವಿಮರ್ಶಾ ಬರವಣಿಗೆಗಳ ನಂತರ ನಮ್ಮವರ ಅನುವಾದಗಳ, ಸಂಪಾದನೆಗಳ ಮುನ್ನುಡಿ, ಪೀಠಿಕೆ, ಪ್ರಸ್ತಾವನೆಗಳಲ್ಲಿ ಮೊದಲಿಗೆ ವಿಮರ್ಶೆ ಪ್ರಕಟವಾಯಿತು. ಅನಂತರ ಸ್ವತಂತ್ರ ಸಾಹಿತ್ಯ ಕೃತಿ ರಚನೆಗಳ ಮುನ್ನುಡಿ, ಪೀಠಿಕೆಗಳಲ್ಲಿ ಇದು ಪ್ರಕಟವಾಯಿತು. ಇದರ ಜೊತೆಯಲ್ಲಿ ಸಾಹಿತ್ಯಚರಿತ್ರೆ ರಚನೆಗಳಲ್ಲು ವಿಮರ್ಶೆ ಕಾಣಿಸಿಕೊಂಡಿತು. ಇವೆಲ್ಲವುಗಳ ಮೌಲ್ಯಮಾಪನವೂ ಸೇರಿದಂತೆ ಭಿನ್ನ ಭಿನ್ನ ವಿಮರ್ಶೆಯು ಆಗ ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿತು. ಹಾಗೆ ನೋಡಿದರೆ ಸಂಭವಕಾಲೀನ ವಿಮರ್ಶೆಗೆ ಮೊದಲು ಒಂದು ನಿರ್ಧಿಷ್ಟವಾದ ರೂಪರೇಷೆ ಸಿಕ್ಕಿದ್ದೇ ಪತ್ರಿಕಾ ಬರವಣಿಗೆಗಳಲ್ಲಿ. ಕೃತಿ ಕೃತಿಕಾರರ ಕಾಲಚರ್ಚೆ, ಕವಿಕೃತಿಗಳ ಸ್ಥಾನ ನಿರ್ದೇಶನ, ಹೊಸ ಸಾಹಿತ್ಯದ ಸ್ವರೂಪ ಚರ್ಚೆ, ಸಾಹಿತ್ಯ ಚರಿತ್ರೆಗಳ ನಿಲುವುಗಳ ಮತ್ತು ನ್ಯೂನತೆಗಳ ಚರ್ಚೆ, ಮೀಮಾಂಸೆ ಮತ್ತು ಛಂದೋ ಚರ್ಚೆ, ಸಂಶೋಧನಾ ಬರವಣಿಗೆಗಳು ಇವೆಲ್ಲವುಗಳ ಜೊತೆಗೆ ಗ್ರಂಥವಿಮರ್ಶೆ ಕೂಡ ಪತ್ರಿಕೆಗಳ ಮೂಲಕ ಪ್ರಕಟವಾಯಿತು.

ವಿಮರ್ಶೆಯು ಒಂದು ಶಿಸ್ತಾಗಿ, ಸಾಹಿತ್ಯ ಪ್ರಕಾರವಾಗಿ ರೂಪುಗೊಳ್ಳುವಲ್ಲಿ ಪಾಶ್ಚಾತ್ಯ ವಿಮರ್ಶೆ ಮಾತ್ರ ಕಾರಣವಲ್ಲ. ನಮ್ಮ ಪತ್ರಿಕೆಗಳ ಪಾತ್ರ ಇಲ್ಲಿ ಬಹು ಮಹತ್ವವಾದುದು. ಮೊದಮೊದಲು ಗ್ರಂಥ ವಿಮರ್ಶೆ ಹೇಗಿತ್ತೆಂಬುದಕ್ಕೆ ಶ್ರೀಕೃಷ್ಣ ಸೂಕ್ತಿ ಪತ್ರಿಕೆಯ 1907ನೆ ಅಕ್ಟೋಬರ್ ಸಂಚಿಕೆಯು ಈ ರೀತಿ ತಿಳಿಸುತ್ತದೆ. “ಹಿಂದೆ ಇದ್ದವುಗಳನ್ನೆ ಗದ್ಯ ರೂಪವಾದುದನ್ನು ಪದ್ಯ ರೂಪವಾಗಿಯೂ, ಪದ್ಯವನ್ನು ವಚನವಾಗಿಯೂ, ಷಟ್ಪದಿಯನ್ನು ಚಂಪುವಾಗಿಯೂ, ಚಂಪುವನ್ನು ಷಟ್ಪದಿಯಾಗಿಯೂ ಬದಲಾಯಿಸಿ

ಬರೆಯುವುದೇ ರೂಡಿಯಲ್ಲಿ ಬಂದಿರುವುದಲ್ಲದೆ ಹೊಸ ಹೊಸ ವಿಷಯಗಳನ್ನು ತಿಳಿಸತಕ್ಕ ಗ್ರಂಥ ರಚನೆಯು ಕಡಿಮೆ." ಹಿತಬೋಧಿನಿ ಬಹು ಕಟುವಾಗಿ "ಪಾದಕ್ಕೆ ಇಷ್ಟು ಅಕ್ಷರ ಅಥವಾ ಮಾತ್ರೆಗಳಿದ್ದರೆ ಸರಿ ಎಂಬುದನ್ನು ಮಾತ್ರ ತಿಳಿದುಕೊಂಡು ಕವಿತ್ವವನ್ನು ಮಾಡಿರುವವರು, ತಮ್ಮ ಕವಿತ್ವದ ವಿಷಯದಲ್ಲಿ ಯಾರಾದರೂ ಪೂರ್ವಪಕ್ಷವನ್ನು ಮಾಡಿದರೆ ಏನು ಸಮಾಧಾನ ಹೇಳುವರೊ ತಿಳಿಯದು. ಯೋಗ್ಯತೆಯಿಲ್ಲದೆ ಬರಿ ಚಾಪಲ್ಯದಿಂದ ಛಂದಸ್ಸಿಗೆ ಸರಿಯಾಗಿ ಅಕ್ಷ ಕೂಡಿಸುವುದನ್ನು ಕಲಿತು; ಶಬ್ಧದೋಷ, ಅರ್ಥದೋಷ, ವಾಕ್ಯದೋಷಗಳಿಗೆ ಜನ್ಮಭೂಮಿ ಎನ್ನಿಸುವ ಶುಷ್ಕ ಕವಿತೆಯನ್ನು ಮಾಡಿ ವಿದ್ವಾಂಸರ ಹಾಸ್ಯಕ್ಕೆ ಪಾತ್ರರಾಗುವುದಕ್ಕಿಂತಲೂ ವಿಷಪಾನವನ್ನು ಮಾಡುವುದು ಉತ್ತಮವು" ಎಂದು ಹೇಳುತ್ತದೆ.

"ಇಂಗ್ಲಿಶ್ ಭಾಷೆಯಲ್ಲಿ ದೊರಕುವ ಪ್ರಪಂಚದ ಸಾಹಿತ್ಯ ಸಾರವನ್ನು ಕನ್ನಡಕ್ಕೆ ತಂದು ಒದಗಿಸಿಕೊಳ್ಳುವುದಲ್ಲದೆ, ಆ ಸಾಹಿತ್ಯವನ್ನೆಲ್ಲ ತುಲನಪೂರ್ವಕವಾಗಿ ವಿಮರ್ಶೆಮಾಡಿ, ನಮ್ಮ ಕವಿಗಳಲ್ಲಿರುವ ಗುಣದೋಷಗಳೇನು? ಸತ್ಕಾವ್ಯದ ಲಕ್ಷಣಗಳೇನು? ಎಂಬುದನ್ನು ನಿಷ್ಪಕ್ಷಪಾತ ಬುದ್ಧಿಯಿಂದ ವಿಚಾರ ಮಾಡಿಕೊಳ್ಳಬೇಕು" ಎಂಬ ಉದ್ದೇಶವು ಆರಂಭದ ಹಲವು ಪತ್ರಿಕೆಗಳದ್ದಾಗಿತ್ತು. ಕನ್ನಡ ಸಾಹಿತ್ಯ ವಿಮರ್ಶೆಯು ಇಂಗ್ಲಿಷಿನ ವಿಮರ್ಶೆಯನ್ನು ನೋಡಿ ಸಾಕಷ್ಟು ಕಲಿಯಿತು ಎಂಬುದಕ್ಕೆ ಈ ಉಲ್ಲೇಖ ಒಂದು ನಿದರ್ಶನ. ಆದರೆ ಕನ್ನಡ ಪತ್ರಿಕೆಗಳು ನಮ್ಮ ವಿಮರ್ಶೆಯು ಸಮೃದ್ಧಗೊಳ್ಳಲು ಮೊದಮೊದಲು ಬಹು ಅಮೂಲ್ಯ ಕೊಡುಗೆ ನೀಡಿದವು ಎಂಬುದೂ ಕೂಡ ಇಷ್ಟೇ ಮುಖ್ಯವಾದುದು. ಜಯಕರ್ನಾಟಕದಂತಹ ಪತ್ರಿಕೆ ಕನ್ನಡ ರಾಷ್ಟ್ರೀಯತೆ, ಕನ್ನಡ ಸಂಸ್ಕೃತಿ, ಸಾಹಿತ್ಯ, ಚರಿತ್ರೆ, ರಾಜಕೀಯ ಸಾಮಾಜಿಕ ಬದುಕು ಎಲ್ಲಕ್ಕೂ ಗಮನ ನೀಡಿದರೆ; ಪ್ರಬುದ್ಧ ಕರ್ನಟಕ ಸಾಹಿತ್ಯ ವಿಮರ್ಶೆಗೆ-ನಾಡುನುಡಿ ಏಳಿಗೆಗೆ ಹೆಚ್ಚು ಶ್ರಮಿಸಿತು.

1916ರಲ್ಲಿ ಆರಂಭವಾದ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ "ಭಾಷಾ ಸಾಹಿತ್ಯಗಳ ಅಪೂರ್ವ ಶೋಧನ ಕಾರ್ಯದಲ್ಲಿ ಯಥೋಚಿತವಾದ ಅನುಕೂಲವನ್ನುಂಟು ಮಾಡಿಕೊಡುವುದಕ್ಕೆ" ಹಾಗೂ "ಕರ್ನಾಟಕ ಏಕೀಕರಣಕ್ಕನುರೂಪವಾದ ವ್ಯಾಕರಣ ರಚನೆ, ಕೋಶ, ಪಾರಿಭಾಷಿಕ ಶಬ್ಧಗಳ ನಿರ್ಣಯ, ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ರೂಢವಾಗಿರುವ ವಾಕ್ಪ್ರಚಾರಗಳ ಮತ್ತು ನಾಣ್ಣುಡಿಗಳ ಸಂಗ್ರಹ, ಗದ್ಯರಚನಾಶಾಸ್ತ್ರದ ಅಧ್ಯಯನ, ಪದ್ಯದಲ್ಲಿ ಸುಧಾರಣೆ, ಕನ್ನಡ ಗ್ರಂಥ ಪರೀಕ್ಷಣ-ಮುಂತಾದ ವಿಷಯಗಳನ್ನು ಮಾತ್ರ ಕೈಗೊಂಡು ಕಾರ್ಯ ಮಾಡುವುದು" ಎಂಬ ಉದ್ದೇಶದೊಂದಿಗೆ ಆರಂಭವಾಗಿ ವಿಮರ್ಶೆಗೆ ತನ್ನದೇ ಕೊಡುಗೆಯನ್ನು ನೀಡಿತು. ತನ್ನ ಕಾರ್ಯವ್ಯಾಪ್ತಿಯಲ್ಲಿ 'ಗ್ರಂಥ ಪರೀಕ್ಷಣ' ಎಂಬ ರೂಪದಲ್ಲಿ ಈ ಪತ್ರಿಕೆ ವಿಮರ್ಶೆಗೆ ತನ್ನದೇ ಕಾಣಿಕೆಯನ್ನು ನೀಡಿದೆ. ಡಿ.ಎಲ್.ನರಸಿಂಹಾಚಾರ್ ನಿರಂತರವಾಗಿ ಈ ಪತ್ರಿಕೆಯಲ್ಲಿ ಮಾಡಿದ ಗ್ರಂಥವಿಮರ್ಶೆ ಇಲ್ಲಿ ಗಮನಾರ್ಹ.

### 3.3.1. ಪತ್ರಿಕೆಗಳು-ಗ್ರಂಥವಿಮರ್ಶೆ

ಆರಂಭದಲ್ಲಿ ಪ್ರಭುದ್ಧ ಕರ್ನಾಟಕ, ಜಯ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಇಂಥ ಪತ್ರಿಕೆಗಳು ತಮ್ಮದೇ ಆದ ಉದ್ದೇಶಗಳಿಂದ ಆರಂಭವಾಗಿ ಸಾಕಷ್ಟು ಕಾಲ ನಡೆದವು. ಇವೆಲ್ಲವುಗಳಲ್ಲಿ ಒಂದು ಖಾಯಂ ಕಾಲಮ್ಮೆಂದರೆ ಅದು ಪುಸ್ತಕ ಪರಿಚಯ ಅಥವಾ ಗ್ರಂಥ ವಿಮರ್ಶೆಯ ಕಾಲಮ್ಮು. ಈ ಕಾಲಮ್ಮುಗಳು ನಮ್ಮಲ್ಲಿ ಪ್ರಾಚೀನ ಸಾಹಿತ್ಯದ ಅನುಸಂಧಾನ ಮತ್ತು ಸಮಕಾಲೀನ ಸಾಹಿತ್ಯದ ಅನುಸಂಧಾನಗಳಲ್ಲಿ ಸ್ಪಷ್ಟವಾದ ಭಿನ್ನತೆಗಳು ಉಂಟಾಗುವುದಕ್ಕೆ ಕಾರಣವಾದವು. ಕೃತಿನಿಷ್ಠ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ಪ್ರಾಯೋಗಿಕ ವಿಮರ್ಶೆಯ ವಿಧಾನಗಳು ರೂಪಗೊಳ್ಳುವಲ್ಲಿ ಈ ಗ್ರಂಥ ವಿಮರ್ಶೆಗಳು ಸಾಕಷ್ಟು ಪ್ರಭಾವ ಬೀರಿದವು. ಹಾಗೆ ನೋಡಿದರೆ ಆಧುನಿಕ ಸಾಹಿತ್ಯ ವಿಮರ್ಶೆ ನಮ್ಮಲ್ಲಿ ಸಂಭವಿಸಿರುವ ಕೆಲವೇ ರೂಪಗಳಲ್ಲಿ ಒಂದು ಮುಖ್ಯವಾದ ರೂಪ ಈ ಗ್ರಂಥ ವಿಮರ್ಶೆ ಆಗಿದೆ.

"ವೃತ್ತ ಪತ್ರಿಕೆಗಳ ಬೆಳವಣಿಗೆಯಿಂದ ವಿಮರ್ಶೆ ಪರಿಚಿತ ವರ್ಗದಿಂದ ಪತ್ರಿಕೆಗಳಿಗೆ ಬರೆಯುವವರ ಕೈಗೆ ಬಂದಿತು. ಸಾಕಷ್ಟು ಪಾಂಡಿತ್ಯ, ಅನುಭವ ದೊರಕಿಸಿಕೊಳ್ಳದ ಜನರ ಕೈಗೆ ಕವಿಯ ಕೃತಿಗಳು ಸಿಕ್ಕಿದವು. ಕ್ರಿಯಾರಂಗದಲ್ಲಿ ತನ್ನ ಪ್ರತಿಭೆಯನ್ನು ಪಸರಿಸಲಾಗದ ಪತ್ರಿಕಾಕರ್ತ ವಿಮರ್ಶನಾ ರಂಗದಲ್ಲಿ ತನ್ನ

ಮುದ್ರೆಯೊತ್ತಲೆತ್ನಿಸಿದ. ಕವಿ ಅನೇಕ ವರ್ಷಗಳ ಸಾಧನೆಯಿಂದ, ಪ್ರಯತ್ನದಿಂದ, ಅಭ್ಯಾಸದಿಂದ, ಅಳವಡಿಸಿದ ಕೃತಿಯನ್ನು ವಿಮರ್ಶಕ ಒಂದೇ ಪೆಟ್ಟಿನಿಂದ ಹೊಡೆಯಲು ಯತ್ನಿಸಿದ. ಕವಿ ಪ್ರತಿಭೆಯಿಂದ ತನ್ನ ಪ್ರಭಾವ ಬೆಳೆಸಿದರೆ ವಿಮರ್ಶಕ ತನ್ನ ಕಟುಲೇಖನಿಯಿಂದ ಪ್ರಭಾವ ಬೆಳೆಸತೊಡಗಿದ."[13]

'ವೃತ್ತ ಪತ್ರಿಕೆಗಳ ಬೆಳವಣಿಗೆಯಿಂದ ವಿಮರ್ಶೆ ಪರಿಚಿತ ವರ್ಗದಿಂದ ಪತ್ರಿಕೆಗಳಿಗೆ ಬರೆಯುವವರ ಕೈಗೆ ಬಂದಿತು.' ಎಂಬ ಮಾತುಗಳಲ್ಲಿ ವಿಮರ್ಶೆಯ ಸೃಷ್ಟಿಯ ಕಾರಣ ಮತ್ತು ವಿಮರ್ಶೆಯ ಸ್ವರೂಪಗಳು ಪಲ್ಲಟವಾಗಿರುವುದನ್ನು ಗುರ್ತಿಸಲಾಗಿದೆ. ಇಂದಿನ ವಿಮರ್ಶೆ ಹೇಗಿದೆ? ಇಂಥ ಪ್ರಶ್ನೆಯನ್ನು ಸಂಭವಕಾಲದಲ್ಲಿ ಕೇಳಿಕೊಳ್ಳಲಾಗಿದೆ. ಕಾವ್ಯರಚನೆ ಮತ್ತು ವಿಮರ್ಶೆ ಇವುಗಳಲ್ಲಿ ವಿಮರ್ಶೆಯ ರಚನೆ ಸುಲಭವಾದುದು ಎಂಬ ಸೂಕ್ಷ್ಮ ತರತಮ ತಿಳುವಳಿಕೆ ಈ ಕಾಲದ ಹಲವು ಪತ್ರಿಕಾ ಬರಣಿಗೆಗಳಲ್ಲಿ ಇದ್ದಂತೆ ಕಾಣುತ್ತದೆ.

"ಹಿಂದಿನ ಕವಿಗಳು ಸುಕವಿವಂದನೆ ಕುಕವಿನಿಂದೆಯೆಂದು ತಮ್ಮ ವಿಮರ್ಶನಾ ನೈಪುಣ್ಯವನ್ನು ಹೊರತೋರುತ್ತಿದ್ದರು. ಇಂದಿನ ಪತ್ರಿಕೆಗಳಲ್ಲಿ ಬೇಕಾದವರ ಮನ್ನಣೆ ಬೇಡಾದವರ ಖಂಡನೆ ಮಾಡುವ ವ್ಯೂಹವನ್ನು ನಮ್ಮ ವಿಮರ್ಶಕರು ಇನ್ನೂ ದಾಟಿಲ್ಲ. ವಿಮರ್ಶಕರು ಗ್ರಂಥವನ್ನು ವಿಮರ್ಶಿಸುವುದರ ಬದಲು ತಮ್ಮ ದೃಷ್ಟಿಯನ್ನು ಕವಿಯು ಪ್ರತಿಪಾದಿಸಲಿಲ್ಲ ಎಂದು ಆಕ್ಷೇಪಿಸುತ್ತಾರೆ. ವಿಮರ್ಶಕನ ಸಂಬಂಧ ಯಾವಾಗಲೂ ತನ್ನ ಮುಂದಿರುವ ಜನತೆಯೊಂದಿಗೆ ಇರಬೇಕೇ ವಿನಾ ಕಪಿಯೊಂದಿಗಲ್ಲ... ಕೃತಿ ಹೊರಬಿದ್ದ ಮೇಲೆ ಅದರ ಕರ್ತೃವಿಗೆ ಏನು ಸಂಬಂಧ ಉಳಿದೀತು? ವಿಮರ್ಶಕರ ಬೆಳಕಿನಲ್ಲಿ ಅವನು ಅದನ್ನು ತಿದ್ದಲು ಆಗುವುದೇ? ತಿದ್ದಲು ಇಚ್ಛಿಸುವನೇ? ಎರಡೂ ಸಾಧ್ಯವಿಲ್ಲ. ಕವಿಯನ್ನು ತಿದ್ದಲು ಹೋಗುವ ವಿಮರ್ಶಕ ತನ್ನ ಉದ್ಯೋಗವನ್ನು ಮರೆತು ತನಗೆ ಸಂಬಂಧ ಪಡದ ಉದ್ಯಮಕ್ಕೆ ಕೈಹಾಕಿದಂತೆ ಆಗುತ್ತದೆ"[14] ಹೀಗೆ ಪತ್ರಿಕೆಗಳಲ್ಲಿ ವಿಮರ್ಶೆಯ ವಿಮರ್ಶೆ ಕೂಡ ಆ ಕಾಲದಲ್ಲೇ ಸೃಷ್ಟಿಯಾಗಿರುವುದನ್ನೂ ಕಾಣಬಹುದು. ಇಲ್ಲಿ ಒಂದು ಮಾತು ಮುಖ್ಯವಾದುದು. 'ವಿಮರ್ಶಕನ ಸಂಬಂಧ ಯಾವಾಗಲೂ ತನ್ನ ಮುಂದಿರುವ ಜನತೆಯೊಂದಿಗಿರಬೇಕೇ ವಿನಾ ಕವಿಯೊಂದಿಗಲ್ಲ.... ಕೃತಿ ಹೊರಬಿದ್ದ ಮೇಲೆ ಅದರ ಕರ್ತೃವಿಗೆ ಏನು ಸಂಬಂಧ ಉಳಿದೀತು?' ಇಂಥ ಪ್ರಶ್ನೆಗಳು ಕನ್ನಡ ವಿಮರ್ಶೆಯ ತತ್ವವನ್ನೂ ಆಚರಣೆಯ ಜೊತೆಜೊತೆಗೇ ಚರ್ಚಿಸುತ್ತಿದ್ದವು ಎಂಬುದನ್ನು ತಿಳಿಸುತ್ತವೆ. ಒಟ್ಟಾರೆಯಾಗಿ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ರೂಪಿಸುವಲ್ಲಿ ಹಾಗೂ ವಿಮರ್ಶೆಯ ಗುಣ ಗಾತ್ರಗಳನ್ನು ವೃದ್ಧಿಸುವಲ್ಲಿ ಪತ್ರಿಕೆಗಳು ಅಪಾರ ಕೊಡುಗೆ ನೀಡಿವೆ ಎಂಬುದರಲ್ಲಿ ಎರಡು ಮಾತಿಲ್ಲ.

### 3.4. ನಮ್ಮತನದ ಹುಡುಕಾಟ- ಐಡೆಂಟಿಟಿ ಪಾಲಿಟಿಕ್ಸ್

ನಮ್ಮತನದ ಹುಡುಕಾಟವೆನ್ನುವುದು ಒಂದು ನಿರಂತರವಾದ ಹುಡುಕಾಟ. ಸಂಭವಕಾಲದ ಎಲ್ಲ ಶಾಸ್ತ್ರಗಳ ಸಂಭವದಲ್ಲೂ ಈ ಐಡೆಂಟಿಟಿ ರಾಜಕಾರಣ ಅಂತಸ್ಥವಾಗಿ ಇರುವುದನ್ನು ಕಾಣಬಹುದು. ಆಧುನಿಕ ಕನ್ನಡ ರಾಷ್ಟ್ರೀಯತೆಯ ಬೇರುಗಳು ಈ ಸಂಭವಕಾಲದ ಶಾಸ್ತ್ರಗಳಲ್ಲಿ ಮೊಳಕೆಯೊಡೆಯುತ್ತಿವೆ ಕೂಡ. ಮೀಮಾಂಸೆ ಮತ್ತು ವಿಮರ್ಶೆಗಳು ಎರಡು ಭಿನ್ನ ಶಿಸ್ತುಗಳೆಂಬಂತೆ ರೂಪ ತಳೆದುದು ಈ ಕಾಲದಲ್ಲೇ. ಆದರೂ ಅವುಗಳಲ್ಲಿ 'ನಮ್ಮದು' ಯಾವುದು 'ಅನ್ಯ' ಯಾವುದು ಎಂಬ ಹುಡುಕಾಟ ನಿರಂತರವಾಗಿ ಇನ್ನೂ ನಡೆದೇ ಇದೆ. ಈ ಹುಡುಕಾಟದ ಜೊತೆಜೊತೆಗೆ ವಿಮರ್ಶೆ ಮತ್ತು ಮೀಮಾಂಸೆಗಳನ್ನು ಬೆಸೆದು ಕಾವ್ಯ ಮೀಮಾಂಸೆ–ಸಾಹಿತ್ಯ ವಿಮರ್ಶೆಗಳ ಏಕೀಕೃತ ರೂಪವಾದ ಸಾಹಿತ್ಯ ಮೀಮಾಂಸೆಯನ್ನು ಕಟ್ಟುವ ಯತ್ನಗಳೂ ನಡೆದಿದೆ. (ರಹಮತ್ ತರೀಕೆರೆ ಅವರ ಮಾತು ತಲೆಯೆತ್ತುವ ಬಗೆ ಪುಸ್ತಕ ಇದಕ್ಕೆ ಉದಾ.) ಇದು ಬರಿ ಹೊಸ ಪರಿಭಾಷೆಯ ಬಳಕೆಯಷ್ಟೆ ಅಲ್ಲ ಕನ್ನಡ ಸಾಹಿತ್ಯ ಮತ್ತು ಕನ್ನಡ ವಿಮರ್ಶೆಗಳಲ್ಲಿ ಪ್ರಕಟವಾಗಿರುವ ಮೀಮಾಂಸೆಯನ್ನು ಶೋಧಿಸಿ ಕಟ್ಟಿ ಕೊಳ್ಳುವ ಯತ್ನ ಕೂಡ.

ನಮ್ಮದು ಮತ್ತು ನಮ್ಮದಲ್ಲದ್ದು ಎಂದು ಪ್ರತಿಯೊಂದನ್ನು ಬೇರ್ಪಡಿಸುವ ಕೆಲಸ (ಸಂಸ್ಕೃತಿಯ ಯಾವುದೇ ಅಂಗಗಳಲ್ಲಿ) ವಿಮರ್ಶೆಯಲ್ಲಿ ನಡೆಸುವುದು ಅಷ್ಟು ಸಲೀಸಾದುದಲ್ಲ. ಸಾಧುವೂ ಅಲ್ಲ. ತತ್ವ ಸಿದ್ಧಾಂತಗಳನ್ನು, ಜಿಜ್ಞಾಸೆಗಳನ್ನು ಇಂಗ್ಲಿಷ್ ಅಥವಾ ಕನ್ನಡದಾಚೆಯಿಂದ ಅನುವಾದಿಸಿಕೊಂಡಿರುವುದನ್ನು ಬಿಟ್ಟರೆ ಮಿಕ್ಕಂತೆ ಕನ್ನಡದಲ್ಲಿ ಪ್ರಕಟವಾಗಿರುವ ವಿಮರ್ಶೆಯೆಲ್ಲವೂ ಕನ್ನಡದ್ದೇ ಎಂದು ನಾವು ತಿಳಿಯಬೇಕಾಗಿದೆ. ಕನ್ನಡ ಭಾಷೆಯಲ್ಲಿ ಸಂಭವಿಸಿರುವ ಕನ್ನಡ ವಿಮರ್ಶೆಯೆಲ್ಲ ಕನ್ನಡದ್ದೇ.

### 3.5. ಕೋಶರಚನೆ–ನಿಘಂಟುಶಾಸ್ತ್ರ

ಪಾಶ್ಚಾತ್ಯರು ನಿಘಂಟು ರಚನಾಶಾಸ್ತ್ರ, ಶಬ್ದಕೋಶ ರಚನೆಗಳನ್ನು ದೇಶೀ ಶಿಕ್ಷಿತ ವಿದ್ವಾಂಸರ ಸಹಾಯದಿಂದ 1815ರಿಂದ ಈಚೆಗೆ (1817:ರೀವ್) ಕನ್ನಡದಲ್ಲಿ ಬೆಳೆಸಿದರು. ತಮ್ಮ ಉಪಯೋಗಕ್ಕೆ ಅದರಲ್ಲೂ ಬೈಬಲ್ಲಿನ ಅನುವಾದ ಮತ್ತು ಮತಪ್ರಚಾರಗಳಿಗೆ ಇಲ್ಲಿನ ಭಾಷೆಯನ್ನು ತಿಳಿಯುವುದು, ಬಳಸುವುದು ಅವರಿಗೆ ಅಗತ್ಯವಾಗಿತ್ತು. ಅಲ್ಲದೆ ಇಲ್ಲಿನ ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಇಂಗ್ಲಿಷ್ ಎರಡೂ ಕಲಿತು ತಮಗೆ ಸಹಾಯ ಮಾಡಬಲ್ಲ ಶಿಕ್ಷಿತರನ್ನು ಉತ್ಪಾದಿಸುವುದು ಅವರ ಉದ್ದೇಶವಾಗಿತ್ತು. ಇಂಥ ಶಿಕ್ಷಣಕ್ಕೆ ಬೇಕಾದ ಕನ್ನಡ ಇಂಗ್ಲಿಷ್ ಕೋಶ ಮತ್ತು ಭಾಷಾ ಪಠ್ಯಗಳನ್ನು ಸಿದ್ಧ ಪಡಿಸಲು ನಮ್ಮವರ ಮೂಲಕ ಬ್ರಿಟಿಷ್ ವಿದ್ವಾಂಸರು ಹಳಗನ್ನಡ ಕೋಶ ಮತ್ತು ಹಳಗನ್ನಡ ಪಠ್ಯಗಳನ್ನು ಹೆಚ್ಚಾಗಿ ಆಧರಿಸಿದರು. ಹೀಗಾಗಿ ನಂತರದಲ್ಲಿ ಈ ಶಾಸ್ತ್ರದ ವಿಸ್ತರಣೆಯಂತೆ ಬೆಳೆದ ಭಾಷಾಚರಿತ್ರೆಯಲ್ಲಿ ಕನ್ನಡ ಭಾಷಾ ಚರಿತ್ರೆ ಎಂದರೆ ಗ್ರಂಥಸ್ಥ ಭಾಷೆಯ ಚರಿತ್ರೆ; ಕನ್ನಡ ಭಾಷೆಯ ಅವಸ್ಥಾಂತರಗಳೆಂದರೆ ಗ್ರಂಥಸ್ಥ ಭಾಷೆಯ ಅವಸ್ಥಾಂತರ ಎಂಬ ಹ್ಯಾಂಗೋವರಿಗೆ ನಾವು ಒಳಗಾದೆವು. ಒಟ್ಟಾರೆ ಗ್ರಂಥಸ್ಥ ಭಾಷೆಯ ಹುಡುಕಾಟವೊಂದು ನಮ್ಮ ಕ್ರಿಯೆಯಾಯಿತು. (ಅದೂ ಲೀನಿಯರ್ರಾಗಿ ವಿಕಾಸಗೊಂಡ 'ಒಂದು' ಭಾಷೆಯ ಚರಿತ್ರೆ ನಿರೂಪಣೆಯನ್ನು ಇಲ್ಲಿ ಹೆಚ್ಚಾಗಿ ಮಾಡಲಾಯಿತು.) ಹಳಗನ್ನಡ ಪಠ್ಯಗಳ ಪರಿಷ್ಕರಣೆ ಮತ್ತು ಪ್ರಕಟಣೆ ಹಾಗೂ ಅವುಗಳ ಶೈಕ್ಷಣೀಕರಣದಿಂದಾಗಿ ಕೂಡ ಈ ಕ್ರಿಯೆಗೆ ಹೆಚ್ಚಿನ ಒತ್ತು ಬಿದ್ದಿತು.

ಹಳಗನ್ನಡ ಸಾಹಿತ್ಯ–ಶಾಸ್ತ್ರ ಪಠ್ಯಗಳನ್ನು ಶಬ್ದಕೋಶ–ನಿಘಂಟುಗಳಿಗೆ ಬಳಸಿಕೊಳ್ಳುವ ಕೆಲಸವು ಶಿಕ್ಷಣದಲ್ಲಿ ಅವುಗಳನ್ನು ಸಹಾಯಕ ಸಾಮಗ್ರಿಗಳಂತೆ ಬಳಸುವ ಉದ್ದೇಶದಿಂದ ಆಯಿತು. ಶಿಕ್ಷಣ ವ್ಯವಸ್ಥೆಯಲ್ಲಿ ಈ ರೀತಿಯ ಬಳಕೆಯು ಪರೋಕ್ಷವಾಗಿ ಆಧುನಿಕ ವಿಮರ್ಶೆಯು ಆವಿರ್ಭವವಾಗಲು ಕೂಡ ಸಹಾಯಕವಾಯಿತು. ಇದನ್ನೇ ಬೇರೊಂದು ರೀತಿ ಹೇಳುವುದಾದರೆ ವಿಮರ್ಶೆಯನ್ನು ಜನ ಸಮುದಾಯದಿಂದ ಎತ್ತಿ ಶಿಕ್ಷಿತ ಸಮುದಾಯದ ಚಟುವಟಿಕೆಯನ್ನಾಗಿ ತಂದು ನಿಲ್ಲಿಸಿದ ಕೆಲಸವನ್ನು ನಿಘಂಟು ರಚನಾಶಾಸ್ತ್ರ ಕೂಡ ಮಾಡಿತು. ಆಧುನಿಕ ಸಂದರ್ಭದಲ್ಲಿ ಆಗ 'ವಿಮರ್ಶೆಯ ಶೈಕ್ಷಣೀಕರಣ' ಪ್ರಕ್ರಿಯೆಗೆ ನಿಘಂಟು ರಚನಾಶಾಸ್ತ್ರ ಸಾಗಿ ಬಂದ ಹಾದಿ ಕೂಡ ತನ್ನದೇ ಕೊಡುಗೆ ನೀಡಿದೆ.

### 3.6. ಗ್ರಂಥ ಸಂಪಾದನೆ–ಪಠ್ಯವಿಮರ್ಶೆ

ಹಳಗನ್ನಡ ಗ್ರಂಥ ಸಂಪಾದನಾ ಕಾರ್ಯವು ಒಂದು ಅಧ್ಯಯನ ಶಿಸ್ತಾಗಿ ರೂಪಗೊಳ್ಳುವ ಕಾಲದಲ್ಲಿ ಗ್ರಂಥ ಸಂಪಾದನಾ ಶಾಸ್ತ್ರದೊಂದಿಗೆ ವಿಮರ್ಶೆ ಸದಾ ಜಾಗೃತವಾಗಿತ್ತು. ಗ್ರಂಥ ಸಂಪಾದನೆಯಲ್ಲಿ ಪೀಠಿಕೆ, ಪ್ರಸ್ತಾವನೆ, ಅಡಿಟಿಪ್ಪಣಿ, ಮುನ್ನುಡಿ, ಸಂಗ್ರಹ(ಆಯ್ಕೆ–ಅಲಕ್ಷ್ಯ)ಗಳ ರೂಪದಲ್ಲಿ ಸಾಹಿತ್ಯ ವಿಮರ್ಶೆ ಇಲ್ಲಿ ಸಂಭವವಾಯಿತು. ಪೀಠಿಕೆ, ಪ್ರಸ್ತಾವನೆ, ಮುನ್ನುಡಿಗಳು ಕೃತಿಯನ್ನು ಮೊದಲಿಗೆ ಅರ್ಥಮಾಡಿಕೊಳ್ಳುವ, ಪರಿಚಯಿಸುವ, ಕೃತಿ–ಕೃತಿಕಾರನ ಚಾರಿತ್ರಿಕ, ಮತೀಯ ವಿವರಗಳನ್ನು 'ಸಂಶೋಧಿಸುವ' ಉದ್ದೇಶದಿಂದ ಕೂಡಿದ್ದವು. ಆನಂತರ ಇವುಗಳಿಗೆ ಮೌಲ್ಯಮಾಪನದ, ವಿಶ್ಲೇಷಣೆ–ವಿವರಣೆಯ ಸ್ವರೂಪಗಳು ಪ್ರಾಪ್ತವಾದವು. ಸ್ವತಃ ಗ್ರಂಥಸಂಪಾದನೆ ಕಾರ್ಯವನ್ನೆ 'ಪಠ್ಯವಿಮರ್ಶೆ' ಎಂದು ಭಾವಿಸಬಹುದಾಗಿದೆ. ಇದು ಪಠ್ಯದ ಅನುಸಂಧಾನ ಆಗಿರುವುದರಿಂದ ಹೀಗೆ ಕರೆಯಲು ಅಡ್ಡಿಯಿಲ್ಲ.

#### 3.6.1. ಮುನ್ನುಡಿ, ಪ್ರಸ್ತಾವನೆ, ಪೀಠಿಕೆ, ಟಿಪ್ಪಣಿ, ಅಡಿಟಿಪ್ಪಣಿಗಳು

ಸಂಪಾದಿಸಿ, ಪಾಠ ಪರಿಷ್ಕರಿಸಿ ಮುದ್ರಿಸುವಾಗ ನಮ್ಮಲ್ಲಿ ಆ ಗ್ರಂಥಗಳಿಗೆ ಮುನ್ನುಡಿ, ಪ್ರಸ್ತಾವನೆ, ಪೀಠಿಕೆಗಳನ್ನು ರಚಿಸಿಕೊಡುವುದು ಒಂದು ಜವಾಬ್ದಾರಿ ಎಂಬಂತೆ ನಿರ್ವಹಣೆಯಾಗುತ್ತ ಬಂದಿದೆ. ಹಾಗೆಯೆ ಪಾಠ, ಅರ್ಥ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಟಿಪ್ಪಣಿ, ಅಡಿಟಿಪ್ಪಣಿಗಳನ್ನು ಕೊಡುವುದನ್ನು ಒಂದು ರೂಢಿ ಎಂಬಂತೆ ಪಾಲಿಸುತ್ತ ಬರಲಾಗಿದೆ. ಈ ಕೆಲಸ ಬಹುಪಾಲು ಕೃತಿ ಸಂಖ್ಯೆ, ಕೃತಿ ಕಾಲ, ಕೃತಿಕಾರನ ಕುಲ, ಕಾಲ, ಮತವಿಚಾರ ಇತ್ಯಾದಿಗಳನ್ನು ಕಟ್ಟಿಕೊಳ್ಳುವ ಅಥವಾ ನಿರ್ಣಯಿಸುವ ಕೆಲಸವೇ ಆಗಿರುತ್ತಿತ್ತು. ಇಂಥ ಕೆಲಸವು ಮುನ್ನುಡಿ, ಪ್ರಸ್ತಾವನೆ, ಪೀಠಿಕೆ ಮುಂತಾದ ಹೆಸರಿನಲ್ಲಿ ನಿರ್ದೇಶಿತವಾಗಿದೆ. ನಮ್ಮಲ್ಲಿ ಕೃತಿವಿಮರ್ಶೆ ಪ್ರಕಟವಾದ ಆರಂಭದ ವಿಮರ್ಶಾ ರೂಪಗಳಲ್ಲಿ ಇವು ಕೆಲವು. ಈ ಮುನ್ನುಡಿ, ಪ್ರಸ್ತಾವನೆ, ಪೀಠಿಕೆ ರೂಪದ ಬರವಣಿಗೆಯೇ ಆನಂತರದಲ್ಲಿ ವಿಮರ್ಶೆಯ ಒಂದು ಮುಖ್ಯ ಮಾರ್ಗವಾಗಿ ಬೆಳೆದಿದೆ. ಆರಂಭದಲ್ಲಿ ಹಳಗನ್ನಡ ಗ್ರಂಥಸಂಪಾದನೆ, ಸಂಶೋಧನೆಗಳಿಗೆ ಸೀಮಿತವಾಗಿದ್ದ ಈ ಮಾರ್ಗ ಆನಂತರ ಹೊಸಗನ್ನಡಕ್ಕೂ ತನ್ನ ಮಯ್ಯನ್ನು ಚಾಚಿದೆ. ಹೊಸಗನ್ನಡ ಕೃತಿಗಳಿಗೆ ಮುನ್ನುಡಿ, ಬೆನ್ನುಡಿಗಳನ್ನು ಅನ್ಯರಿಂದ

ಬರೆಸುವ ಬಗ್ಗೆ, ಯಾಕೆ ಈ ಮುನ್ನುಡಿಗಳನ್ನು ಬರೆಸಬೇಕು? ಈ ಮುನ್ನುಡಿಗಳು ಹೇಗಿರಬೇಕು? ಎಂಬ ಬಗ್ಗೆ ಸಾಕಷ್ಟು ಜಿಜ್ಞಾಸೆ ನಡೆದಿದೆ. ಪುತಿನರ 'ಹಣತೆ' ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಮಾಸ್ತಿಯವರು 1933ರಲ್ಲಿ "ಅನೇಕ ವೇಳೆ ಕವಿಗೆ ಜನದ ಮುಂದೆ ಬಂದು ನಿಲ್ಲುವಾಗ ತನಗೆ ಬೇಕಾದವರ ಕೈಯನ್ನು ಹಿಡಿದು ಬರುವುದು ಸುಖವೆಂದು ಕಾಣುತ್ತದೆ. ಕೃಷ್ಣನನ್ನು ನೋಡ ಹೋದ ರಾಧೆ ಜೊತೆಗೆ ಸಖಿಯನ್ನು ಕರೆದೊಯ್ದಳು. ಆ ಸಖಿ ವಯಸ್ಸಿನಲ್ಲಿ ರಾಧೆಗಿಂತ ಸ್ವಲ್ಪ ಹಿರಿಯಳೆಂದು ನನ್ನ ಊಹೆ. ನಮ್ಮ ಹೊಸ ಕವಿತೆಯ ಸಂಕೋಚವನ್ನು ನಿವಾರಿಸುವುದಕ್ಕೆ ನನ್ನಂಥವನ ಮುನ್ನುಡಿ ಎಂಬ ಇಂಥ ನೆಪ ಒಂದು ಸದ್ಯದಲ್ಲಿ ಅವಶ್ಯಕವಾಗಿದೆ."[15] ಎಂದು ಹೇಳಿದ್ದಾರೆ.

ಹೊಸಗನ್ನಡ ಕೃತಿಗಳಲ್ಲಿ ಕವಿತಾ ಸಂಕಲನಗಳಿಗೆ ಮಾತ್ರ ಅನ್ಯರಿಂದ ಮುನ್ನುಡಿ ಬೆನ್ನುಡಿ ಬರೆಸುವ ಪರಿಪಾಠ ವ್ಯಾಪಕವಾಗಿ ಒಂದು ಶಿಷ್ಟಾಚಾರ ಎಂಬಂತೆ ಸಂಭವ ಕಾಲಕ್ಕೆ ಚಾಲ್ತಿಗೆ ಬಂದಿದೆ. ಕಾವ್ಯವನ್ನುಳಿದು ಮಿಕ್ಕ ನಾಟಕ, ಕತೆ, ಕಾದಂಬರಿ, ಪ್ರಬಂಧ, ಆತ್ಮಚರಿತ್ರೆ, ವಿಮರ್ಶಾ ಸಂಕಲನ ಇವುಗಳಿಗೆಲ್ಲ ಬರೆಸುವ ಪರಿಪಾಠ ಮೊದಮೊದಲು ಇರಲಿಲ್ಲ.[16] ಲೇಖಕರೇ ಕೆಲ ಮಾತು ಬರೆಯುತ್ತಿದ್ದರು. ಆದರೆ ಕ್ರಮೇಣ ಇತರ ಪ್ರಕಾರಗಳಿಗೂ ಮುನ್ನುಡಿ, ಬೆನ್ನುಡಿ ಬರೆಸುವ ಪರಿಪಾಠ ಆನಂತರ ಬೆಳೆಯಿತು. ಈಗಂತೂ ಇದೊಂದು ವಿಮರ್ಶಾ ಮಾರ್ಗವಾಗಿ ಬೆಳೆದು ನಿಂತಿದೆ.

### 3.7. ವಿವರಣೆ–ಸಂಶೋಧನೆ–ದರ್ಶನ

ಪಠ್ಯ ಸಂಪಾದನೆಯನ್ನು ನಮ್ಮವರು ಹೇಗೆ ಸಂಶೋಧನೆ ಎಂದು ಕರೆದರೋ ಹಾಗೇ ನಾಡು ನುಡಿ ಚರಿತ್ರೆ, ಸಂಸ್ಕೃತಿಯನ್ನು ಕಟ್ಟಿ ವ್ಯಾಖ್ಯಾನಿಸುವ ಕೆಲಸವನ್ನೂ ಸಂಶೋಧನೆ ಎಂದೇ ಕರೆದರು. (ಶಂಬಾ ಅವರ ಕೆಲಸವನ್ನು ಸಂಸ್ಕೃತಿ ಸಂಶೋಧನೆ ಎಂದೂ ಡಿ.ಎಲ್.ಎನ್. ಅವರ ಕೆಲಸವನ್ನು ಸಾಹಿತ್ಯಕ ಸಂಶೋಧನೆ ಎಂದೂ ಈಗಾಗಲೇ ಗುರ್ತಿಸಲಾಗಿದೆ) ಆದರೆ ಚರಿತ್ರೆರಚನೆ, ನಿಘಂಟುರಚನೆ, ಶಾಸನಶಾಸ್ತ್ರ, ಗ್ರಂಥಸಂಪಾದನಾಶಾಸ್ತ್ರ ಇವೆಲ್ಲವೂ ರೂಪಗೊಳ್ಳುತ್ತಿದ್ದ ಕಾಲದಲ್ಲಿ ಸಂಶೋಧನೆ ಎಂಬುದು ಈ ಎಲ್ಲ ವಲಯಗಳಲ್ಲೂ ಒಂದು ಪ್ರಮುಖ ದೃಷ್ಟಿಕೋನವಾಗಿ, ಮಾರ್ಗವಾಗಿ ಜಾಗ್ರತವಾಗಿತ್ತು. ಈ ಎಲ್ಲ ಕಡೆ ಸಂಶೋಧನೆಯು ವಿಮರ್ಶೆಯ ಒಂದು ಲಕ್ಷಣವಾಗಿ ಪ್ರಕಟವಾಗಿದೆ ಕೂಡ. ವಿಮರ್ಶೆಯನ್ನು ವರ್ಗೀಕರಿಸುವಾಗ ಇಂಥ ಲಕ್ಷಣವುಳ್ಳದ್ದನ್ನು ಸಂಶೋಧನಾ ವಿಮರ್ಶೆ ಎಂದೇ ಕೆಲವರು ಗುರ್ತಿಸಿದ್ದಾರೆ. ಇಂಥ ಸಂಶೋಧನೆ ಮತ್ತು ವಿಮರ್ಶೆಗಳ ಮಿಶ್ರತಳಿ ಮಾದರಿಯಾಗಿ ತೀ.ನಂ.ಶ್ರೀಯವರ ಸಮಾಲೋಕನ ಗ್ರಂಥದ ಲೇಖನಗಳನ್ನು ನೋಡಬಹುದು. (ಆದರೆ ಸುಮಾರು 1940ರ ದಶಕದ ನಂತರದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಮಾತ್ರ ಈ ಪರಿಭಾಷೆ ಅನ್ವಯವಾಗತೊಡಗಿತು)

ವಿಮರ್ಶಾ ಶಿಸ್ತಿಗೆ ಗ್ರಂಥ ಸಂಪಾದನಾಶಾಸ್ತ್ರದ ಒಂದು ಮುಖ್ಯ ಕೊಡುಗೆ ಈ ಸಂಶೋಧನಾ ವಿಮರ್ಶೆ. ಇಂಥದ್ದೇ ಇನ್ನೊಂದು ಕೊಡುಗೆ ಎಂದರೆ ವಿವರಣಾತ್ಮಕ ವಿಮರ್ಶೆ. ಹಳಗನ್ನಡ ಗ್ರಂಥಸಂಪಾದನೆಯಲ್ಲಿ ಪ್ರಕಟವಾಗಿರುವ ವಿಮರ್ಶೆಯ ಸಿಂಹಪಾಲು ಈ ರೀತಿಯ ಪರಿಚಯಾತ್ಮಕ ಧಾಟಿಯ ವರ್ಣನಾತ್ಮಕ (ವಿವರಣಾತ್ಮಕ) ವಿಮರ್ಶೆಯೇ ಆಗಿದೆ. ಇಂಥ ಲಕ್ಷಣವನ್ನು ಗಮನಿಸಿಯೇ ಸಂಶೋಧನಾತ್ಮಕ, ವರ್ಣನಾತ್ಮಕ, ದರ್ಶನಾತ್ಮಕ ಎಂದು ವಿಮರ್ಶೆಯನ್ನು ಕುವೆಂಪು ಮೂರು ಬಗೆಯಲ್ಲಿ ವರ್ಗೀಕರಿಸಿ ಹೇಳಿದ್ದಾರೆ. ಆದರೆ ಈ ಕಾಲದಲ್ಲಿ ಸಂಶೋಧನಾತ್ಮಕ, ವಿವರಣಾತ್ಮಕ ವಿಮರ್ಶೆಗಳು ಬೆಳೆದಂತೆ ದರ್ಶನಾತ್ಮಕ ವಿಮರ್ಶೆ ಅಷ್ಟಾಗಿ ಬೆಳೆಯಲಿಲ್ಲ. (ಜೊತೆಗೆ ನೋಡಿ: ದರ್ಶನ ಮೀಮಾಂಸೆ)

### 3.8. ಪ್ರಾಚೀನತೆಯ ಶೋಧ

ಸಾಹಿತ್ಯ ಚರಿತ್ರೆ ರಚನೆ ಮತ್ತು ಸಂಶೋಧನೆಗಳೆರಡೂ ನಮ್ಮ ಪರಂಪರೆಯ ಪ್ರಾಚೀನತೆಯನ್ನು ಶೋಧಿಸಲು ಸಾಕಷ್ಟು ಪ್ರಯತ್ನಿಸಿವೆ. ಕರ್ನಾಟಕ ಸಾಹಿತ್ಯ ಚರಿತ್ರೆ ಬರೆಯುವಾಗ ಕನ್ನಡ ಲಿಪಿಕ ಭಾಷೆಯ ಪ್ರಾಚೀನತೆ ಮತ್ತು ಸಾಹಿತ್ಯದ ಪ್ರಾಚೀನತೆಯ ಚರ್ಚೆಯನ್ನು ಒಂದು ಅಗತ್ಯ ರಿಚುವಲ್ಲೆಂಬಂತೆ ಮಾಡುತ್ತ ಬರಲಾಗಿದೆ. ಸಂಭವಕಾಲೀನ ವಿಮರ್ಶೆಯಲ್ಲಿ ಲಿಪಿಕ ಭಾಷೆ ಮತ್ತು ಸಾಹಿತ್ಯದ ಪ್ರಾಚೀನತೆಯನ್ನು ನಿರ್ಧರಿಸುವ ಬಹು ದೊಡ್ಡ ಸಂವಾದವೊಂದು ಏರ್ಪಟ್ಟಿದೆ. ಕರ್ನಾಟಕ ನಾಡು ಮತ್ತು ಕನ್ನಡ ಭಾಷೆಯ (ಪದಗಳ) ಅತ್ಯಂತ ಹಳೆಯ ಉಲ್ಲೇಖಗಳನ್ನು ಅನ್ಯಭಾಷಾ ರಚನೆಗಳಲ್ಲಿ ಹುಡುಕುವ ಪ್ರವೃತ್ತಿಯೊಂದು ಈ ಸಂಭವಕಾಲೀನ ವಿಮರ್ಶೆಯಲ್ಲಿ ಜರುಗಿದೆ. ಎಷ್ಟೆಷ್ಟು ಹಳೆಯ ಕಾಲಕ್ಕೆ ನಮ್ಮ ನಾಡು ನುಡಿಯ ಹಳಮೆ ಹೋಗುತ್ತದೋ ಅಷ್ಟಷ್ಟು ನಮ್ಮ ಹೆಮ್ಮೆ ಹೆಚ್ಚುತ್ತದೆ ಎಂಬ ತಿಳುವಳಿಕೆ ಈ ಹುಡುಕಾಟದ ಹಿಂದೆ ಇರುವಂತೆ ಕಾಣುತ್ತದೆ.

ಆರ್ಯ-ದ್ರಾವಿಡ ಚರ್ಚೆ, ನಾಗರೀಕತೆಗಳ ಇತಿಹಾಸ, ರಾಜಕೀಯ ಇತಿಹಾಸ, ಜನಾಂಗೀಯ ಇತಿಹಾಸಗಳೆಲ್ಲವೂ ಈ ಚರ್ಚೆಯಲ್ಲಿ ಪ್ರಾಸಂಗಿಕವಾಗಿ ಬಂದು ಹೋಗಿವೆ.

### 3.9. ಸಾಹಿತ್ಯ ಚರಿತ್ರೆ ರಚನಾಶಾಸ್ತ್ರ

ಸಾಹಿತ್ಯ ಚರಿತ್ರೆ ರಚನಾಶಾಸ್ತ್ರವು ಆಧುನಿಕ ವಿಮರ್ಶೆಯ ವಿನ್ಯಾಸದಲ್ಲಿ ತನ್ನದೇ ಪಾತ್ರವನ್ನು ವಹಿಸಿದೆ. ಆಧುನಿಕ ವಿಮರ್ಶೆಯು ಪ್ರಕಟಗೊಂಡ ಹಲವು ಬಗೆಗಳಲ್ಲಿ ಚರಿತ್ರೆ ರಚನೆಯ ಮಾರ್ಗವೂ ಒಂದು. ಆಂಗ್ಲರ ಚರಿತ್ರೆ ಕಲ್ಪನೆಯಿಂದ, ಓರಿಯೆಂಟಾಲಜಿಸ್ಟರ ಪಾಸಿಟಿವಿಸ್ಟ್ ದೃಷ್ಟಿಕೋನದಿಂದ ಸಾಕಷ್ಟು ಪ್ರಭಾವಿತಗೊಂಡಂತೆ ನಮ್ಮ ಈ ರಚನಾಶಾಸ್ತ್ರವು ನಿರ್ಮಾಣಗೊಂಡಿದೆ. ಇದರಿಂದಾಗಿ 1. ಸಾಹಿತ್ಯ ಚರಿತ್ರೆ ರಚನಾಶಾಸ್ತ್ರವು ಕನ್ನಡ ಸಾಹಿತ್ಯ ಪರಂಪರೆಯನ್ನು ವಿಕಾಸಶೀಲ ನೆಲೆಯಲ್ಲಿ ನಿರೂಪಿಸಲು ಯತ್ನಿಸಿದೆ. 2. ಇದು ಒಂದು ಏಕರೂಪಿ ಪರಂಪರೆಯನ್ನು ಕಟ್ಟುವ ಯತ್ನವಾಡಿದೆ. ಬಹುರೂಪಿ ಪರಂಪರೆಗಳನ್ನು ಗಮನಿಸಿಲ್ಲ. 3. ಇಲ್ಲಿ ಬಳಕೆಯಾಗಿರುವ ವಿಮರ್ಶೆ ಸರಿಸುಮಾರು ಗುಣಗ್ರಾಹಿಯಾಗಿದೆ. 4. ಕೃತಿಯ ಕಾಲ-ಚಾರಿತ್ರಿಕ ಅಂಶಗಳಿಗೆ ಹೆಚ್ಚು ಮಹತ್ವ ನೀಡಿ ಇತರೆ ವಿಚಾರಗಳನ್ನು ಕಡೆಗಣಿಸಿದೆ 5. ಕೃತಿ-ಕೃತಿಕಾರನ ವಯಕ್ತಿಕ ವಿವರ ಮತ್ತು ಧಾರ್ಮಿಕ ವಿಚಾರಗಳು ಪ್ರಾಮುಖ್ಯತೆಯನ್ನು ಪಡೆದಿವೆ. 6. ಕೃತಿಯನ್ನು ಕಾಲ-ಧರ್ಮಗಳಿಗೆ ಬದ್ಧವಾಗಿ ನಿರ್ವಚಿಸುವ ಕೆಲಸ ಬಹುವಾಗಿ ನಡೆದಿದೆ. 7. ಶೈಲಿ-ಛಂದಸ್ಸುಗಳ ನೆಲೆಯಲ್ಲಿ ಕೃತಿಗಳನ್ನು ವಿವೇಚಿಸಲಾಗಿದೆ. 8. ನೈತಿಕ ನೆಲೆಯಲ್ಲಿ ಕೃತಿಗಳನ್ನು ವಿವೇಚಿಸಲಾಗಿದೆ. 9. ಸಾರ್ವಕಾಲೀನ/ಸಾರ್ವತ್ರಿಕ ಸಾಹಿತ್ಯ ಭಾಗಗಳ ಹುಡುಕಾಟ; ಅಧ್ಯಯನದ ಅನುಕೂಲಕ್ಕಾಗಿ ವಿಭಾಗೀಕರಣ ಮಾಡುವ ನಾಮಕರಣ ಮಾಡುವ ಕಾರ್ಯಗಳದ್ದೇ ಒಂದು ಚರಿತ್ರೆ ಈ ರಚನಾಶಾಸ್ತ್ರದಲ್ಲಿ ಸಿಗುತ್ತದೆ. ಇವೆಲ್ಲವೂ ಚರಿತ್ರೆ ರಚನಾಶಾಸ್ತ್ರದಲ್ಲಿ ವ್ಯಕ್ತವಾಗಿರುವ ವಿಮರ್ಶೆಯ ಲಕ್ಷಣಗಳು ಮತ್ತು ಮಿತಿಗಳು.

#### 3.9.1. ವಿಭಾಗೀಕರಣ-ನಾಮಕರಣ ಮಾರ್ಗ

ಸಾಹಿತ್ಯ ಚರಿತ್ರೆ ರಚನಾಶಾಸ್ತ್ರದಿಂದ ನಮ್ಮ ವಿಮರ್ಶೆಗೆ ಒದಗಿರುವ ಹಲವು ಅನುಕೂಲ ಅಥವಾ ಮಿತಿಗಳಲ್ಲಿ ಈ ವಿಭಾಗೀಕರಣ-ನಾಮಕರಣವೂ ಒಂದು. ಇದೊಂದು ಅಧ್ಯಯನದ ಅನುಕೂಲಕ್ಕಾಗಿ ಸೃಷ್ಟಿಯಾಗಿರುವ ಅಧ್ಯಯನ ವಿಧಾನ ಮತ್ತು ಮಿತಿ ಎಂಬುದನ್ನು ಈಗಾಗಲೇ ಚರ್ಚಿಸಲಾಗಿದೆ. ವರ್ಗೀಕೃತ ತುಲನೆಯು ಸಾಮಾನ್ಯವಾಗಿ ಶ್ರೇಣೀಕರಣವನ್ನು ಮಾಡುವುದರಿಂದ ವರ್ಗೀಕರಣ ವಿಧಾನವು ನಮ್ಮ ವಿಮರ್ಶೆಯಲ್ಲಿ ದೊಡ್ಡವರು-ಚಿಕ್ಕವರು, ಮುಖ್ಯರು ಅಮುಖ್ಯರು-ಅಲ್ಪ ಮುಖ್ಯರು ಇತ್ಯಾದಿ ನಂಬಿಕೆಗಳು ಉಂಟಾಗಲು ಕಾರಣವಾಗಿದೆ. ಇದಕ್ಕೆ ಎಷ್ಟೇ ಮಿತಿಗಳಿದ್ದರೂ ಈ ವಿಭಾಗೀಕರಣ-ನಾಮಕರಣವು ನಮ್ಮ ವಿಮರ್ಶೆಯ ಆದಿಪ್ರಾಚೀನ-ನಿತ್ಯನವೀನ ಲಕ್ಷಣಗಳಲ್ಲಿ ಒಂದಾಗಿದೆ.

#### 3.9.2. ಸಾತತ್ಯ-ವಿಕಾಸ

ಸಂಭವಕಾಲವು ಸಮಾಜವನ್ನು ಸರಳರೇಖಾತ್ಮಕವಾಗಿ, ಊರ್ಧ್ವಮುಖಿ ಬೆಳವಣಿಗೆಯ, ವಿಕಾಸ ಶೀಲ ನಡೆಯ ಪರಸ್ಪರ ಸಂಬಂಧವುಳ್ಳ ಒಂದೇ ಧಾರೆಯಾಗಿ, ಸರಳರೇಖಾತ್ಮಕವಾಗಿ ಗ್ರಹಿಸಿತ್ತು. ಸಾಹಿತ್ಯ ಚರಿತ್ರೆಯ ಕಟ್ಟುವಿಕೆಯಲ್ಲಿ ಇಂಥ ಧೋರಣೆ ಪ್ರಧಾನವಾಗಿರುವುದನ್ನು ಕಾಣಬಹುದು. ನದಿಯ ಹರಿವಿಗೆ ಸಾಹಿತ್ಯ ಪರಂಪರೆಯನ್ನು ನಮ್ಮವರು ಹೋಲಿಸಿರುವುದನ್ನು (ಬಿ.ಎಂ.ಶ್ರೀ) ನೋಡಿದರೆ ಇದು ತಿಳಿಯುತ್ತದೆ. ಸ್ವತಂತ್ರ ಸಮುದಾಯ, ಸ್ವತಂತ್ರ ಕಾಲಘಟ್ಟ, ದ್ವೀಪತನದ ಅಸ್ತಿತ್ವದ ಬಗೆಗೇ ಈ ಕಾಲದ ವಿಮರ್ಶೆಗೆ ಅನುಮಾನಗಳಿದ್ದಂತೆ ತೋರುತ್ತದೆ. ಇವತ್ತು ನಮ್ಮ ಪರಂಪರೆ ನೋಡಿದರೆ ಕುಮಾರವ್ಯಾಸ ವಚನಗಳನ್ನು ಓದಿರುವ ಬಗ್ಗೆ ಯಾವ ಸುಳಿವುಗಳೂ ಸಿಗುವುದಿಲ್ಲ. ಮುದ್ದಣನಿಗೆ ತತ್ವ ಪದಗಳ ತಿಳುವಳಿಕೆ ಇದ್ದಂತೆಯೇ ತೋರುವುದಿಲ್ಲ ಆದಾಗ್ಯೂ ನಮ್ಮ ಸಾಹಿತ್ಯ ಚರಿತ್ರೆ ರಚನಾಶಾಸ್ತ್ರವು ಪರಂಪರೆಯನ್ನು ವಿಕಾಸಶೀಲವೆಂದೇ ಭಾವಿಸುತ್ತದೆ. ಒಬ್ಬೊಬ್ಬರಿಗೂ ಅವರದೇ ಆದ ಒಂದೊಂದು ಪರಂಪರೆಗಳಿರಬಹುದು; ಒಬ್ಬೊಬ್ಬರಿಗೂ ಹಲವು ಪರಂಪರೆಗಳ ಅರಿವು ಇರಬಹುದು. ಕೆಲವರಿಗೆ ಪರಂಪರೆಯ ಅರಿವಿದ್ದೂ ಆ ಬಗ್ಗೆ ಆಸಕ್ತಿ ಇಲ್ಲದಿರಬಹುದು ಎಂಬ ಬಗ್ಗೆ ಈ ಸಂಭವಕಾಲೀನ ವಿಮರ್ಶೆ ಗಮನ ನೀಡಿದಂತೆ ಕಾಣುವುದಿಲ್ಲ. ಏಕರೂಪಿ ಪರಂಪರೆಯ ಕಲ್ಪನೆ ಮತ್ತು ಪರಂಪರೆಯ ರೇಖಾತ್ಮಕ ವಿಕಾಸದ ಕಲ್ಪನೆಯನ್ನೇ ಈ ವಿಮರ್ಶೆ ನಂಬಿದಂತೆ ಕಾಣುತ್ತದೆ.

### 3.9.3. ಏಕರೂಪಿ ಪರಂಪರೆ

ನಮ್ಮಲ್ಲಿ ಹತ್ತು ಹಲವು ರೀತಿಯ ಪರಂಪರೆಗಳು ನಿರ್ಮಾಣವಾಗಿರುವುದು ಪೌರ್ವಾತ್ಯ ಅಧ್ಯಯನ, ಸಬಾಲ್ಟ್ರನ್ ಅಧ್ಯಯನ, ಪ್ರಾಚ್ಯ ಅಧ್ಯಯನ, ಸ್ತ್ರೀವಾದಿ ಅಧ್ಯಯನ, ತೌಲನಿಕ ಅಧ್ಯಯನ, ನವಚಾರಿತ್ರಿಕವಾದ, ಮೌಖಿಕ ಇತಿಹಾಸ ಅಧ್ಯಯನ, ಜಾನಪದ ಅಧ್ಯಯನ, ಸಿಮಿಯಾಟಿಕ್ಸ್ ಇತ್ಯಾದಿ ಇತ್ಯಾದಿಗಳಿಂದ ಇಂದು ದೃಢಪಟ್ಟಿದೆ. ಆದರೆ ಸಂಭವಕಾಲದಲ್ಲಿ ಪೌರ್ವಾತ್ಯ ಅಧ್ಯಯನವೇ ಯಜಮಾನಿಕೆ ನಡೆಸಿದೆ. ಗ್ರಂಥಸಂಪಾದನೆ, ಚರಿತ್ರೆ ರಚನೆಗಳೇ ಪ್ರಧಾನವಾಗಿದ್ದ ಆ ಕಾಲದಲ್ಲಿ ನಮ್ಮ ವಿಮರ್ಶೆಗೆ ರಚಿತ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹಲವು ಪರಂಪರೆಗಳು, ಹಲವು ಚರಿತ್ರೆಗಳು ಇರಬಹುದೆಂಬ; ಇದ್ದರೂ ಅವನ್ನೆಲ್ಲ ಮಾನ್ಯ ಮಾಡಬೇಕೆಂಬ ತಿಳುವಳಿಕೆಯೇ ಇರಲಿಲ್ಲ. ಆಗೆಲ್ಲ ಒಂದು ಚರಿತ್ರೆಯನ್ನು, ಒಂದು ಪರಂಪರೆಯನ್ನು ಕಟ್ಟುವ ದೃಷ್ಟಿಯೇ ಪ್ರಧಾನವಾಗಿತ್ತು. ಹೆಚ್ಚೆಂದರೆ ಪರಂಪರೆಯನ್ನು ಭಿನ್ನ ದೃಷ್ಟಿಗಳಿಂದ ಅಧ್ಯಯನಕ್ಕಾಗಿ ವಿಭಾಗೀಕರಿಸಿ ವ್ಯಾಖ್ಯಾನಿಸುವ ಪರಿಪಾಟವಿತ್ತಷ್ಟೆ.[17]

### 3.9.4. ಚರಿತ್ರೆ ಪಂಥ

ಸಾಹಿತ್ಯ ಚರಿತ್ರೆ ರಚನಾಶಾಸ್ತ್ರವು ನಮ್ಮಲ್ಲಿ ಅನೇಕ ವಿಮರ್ಶಾ ವಿಧಾನಗಳನ್ನು ಬಳಸಿಕೊಂಡಿದೆ. ಹಾಗೇ ಹಲವಾರು ವಿಮರ್ಶಾ ವಿಧಾನಗಳ ಬೆಳವಣಿಗೆಗೂ ದಾರಿ ಮಾಡಿಕೊಟ್ಟಿದೆ. ಕವಿಯೊಬ್ಬನ ಸಮಗ್ರ ಅಧ್ಯಯನ, ಕವಿಯೊಬ್ಬನ ದೃಷ್ಟಿ-ಸಂವೇದನೆಗಳ ಚಾರಿತ್ರಿಕ ವಿಕಾಸದ ಅಭ್ಯಾಸ, ಪ್ರಕಾರವೊಂದರ ಚಾರಿತ್ರಿಕ ಅಧ್ಯಯನ, ಕಾಲಘಟ್ಟ, ಸಮವೇದನೆ, ಚಳುವಳಿ ಇತ್ಯಾದಿ ನೆಲೆಯ ಚಾರಿತ್ರಿಕ ಅಧ್ಯಯನ ಹೀಗೆ ಭಿನ್ನ ವಿಮರ್ಶಾ ವಿಧಾನಗಳು ಚರಿತ್ರೆ ರಚನೆಯಿಂದ ಪ್ರೇರಿತಗೊಂಡು ಬೆಳೆದಿವೆ. ಪಾಶ್ಚಾತ್ಯ ಗಂಭೀರ ನಾಟಕಗಳು(ಎಸ್.ವಿ.ರಂಗಣ್ಣ). ಆಧುನಿಕ ಕನ್ನಡ ನಾಟಕ(ಕೆ.ಮರಳಸಿದ್ದಪ್ಪ), ಕನ್ನಡ ಕಾದಂಬರಿಯ ಬೆಳವಣಿಗೆ(ಆಮೂರ), ನಡೆದು ಬಂದ ದಾರಿ(ಕುರ್ತುಕೋಟಿ), ಯುಗಧರ್ಮ ಮತ್ತು ಸಾಹಿತ್ಯ ದರ್ಶನ(ಕುರ್ತುಕೋಟಿ), ಕನ್ನಡ ಸಾಹಿತ್ಯ ವಿಮರ್ಶೆಯ ಉಗಮ ಮತ್ತು ಬೆಳವಣಿಗೆ(ಎಂ.ಜಿ.ಕೆ), ಶತಮಾನದ ಸಾಹಿತ್ಯ(ಜಿ.ಎಚ್.ನಾಯಕ) ಹೊಸಗನ್ನಡ ಸಾಹಿತ್ಯದ ಅರುಣೋದಯ(ಶ್ರೀನಿವಾಸ ಹಾವನೂರ) ಹೀಗೆ ಇಂಥ ಚರಿತ್ರೆ ಮಾದರಿಯ ಒಂದು ವಿಮರ್ಶಾ ಪಂಥವನ್ನೇ ನಾವು ಕನ್ನಡದಲ್ಲಿ ಗುರ್ತಿಸಬಹುದು. ಇದರ ಬೇರುಗಳು ಸೃಷ್ಟಿಯಾದುದು ರೈಸ್-ಆರ್.ನರಸಿಂಹಾಚಾರ್ ಇಂಥವರ ಕಾಲದಲ್ಲಿ.

### 3.9.5. ವರ್ತಮಾನೀಕರಣ, ಸಾರ್ವತ್ರೀಕರಣ

ಸಾಹಿತ್ಯ ಪರಂಪರೆಯ ಶೋಧ ಮಾತ್ರವೇ ಚರಿತ್ರೆಯನ್ನು ಕಟ್ಟುವ ಕೆಲಸದಲ್ಲಿ ನಡೆಯುತ್ತಿರಲಿಲ್ಲ. ಅದನ್ನು ಸೋಸಿ, ವರ್ತಮಾನಕ್ಕೆ ಏನು, ಎಷ್ಟು ಬೇಕೋ ಅದನ್ನು ಸಂಗ್ರಹಿಸಿ ಕಟ್ಟಿಕೊಳ್ಳುವ ಕೆಲಸ ಕೂಡ ನಡೆಯುತ್ತಿತ್ತು. ಇಲ್ಲಿ ಏನು, ಎಷ್ಟು, ಎಂಥ ಪರಂಪರೆ ಬೇಕು ಎಂಬ ಸೋಸುಪ್ರಜ್ಞೆಯ ಹಿಂದೆ ಇದ್ದ ಧೋರಣೆಗಳು ಮಾತ್ರ ಓರಿಯೆಂಟ್ ಅಧ್ಯಯನದಿಂದ ಪಡಕೊಂಡ ಧೋರಣೆಗಳೇ ಆಗಿದ್ದವು. ಸಾಹಿತ್ಯ ಕೃತಿಗಳನ್ನು ಚಾರಿತ್ರಿಕವಾಗಿ ಕಾಲ, ದೇಶ ಬದ್ಧವಾಗಿ 'ಸಂಶೋಧಿಸಿ' ಕೊಳ್ಳುವ ಕೆಲಸವು ಏಕಕಾಲಕ್ಕೆ ಅದನ್ನು ವರ್ತಮಾನಕ್ಕೆ ಪ್ರಸ್ತುತಗೊಳಿಸಿಕೊಳ್ಳುವ ಮತ್ತು ಕಾಲ, ದೇಶ, ಮತಗಳಿಂದ ಬಿಡಿಸಿ ಸಾರ್ವತ್ರೀಕರಿಸಿ, ಸಾರ್ವಕಾಲೀನಗೊಳಿಸಿಕೊಳ್ಳುವ ಕೆಲಸವೂ ಆಗಿತ್ತು.

ಚರಿತ್ರೆಯನ್ನು ವರ್ತಮಾನಕ್ಕೆ ಬೇಕಾದಂತೆ ಕಟ್ಟಿಕೊಳ್ಳುವಾಗ ಸಾಹಿತ್ಯ ಚರಿತ್ರೆಯ ಸಮಗ್ರ ರಚನೆಯ ಜೊತೆಜೊತೆಗೆ ಸಮೀಕ್ಷೆಗಳು ಮತ್ತು ಸಂಕ್ಷಿಪ್ತ ಚರಿತ್ರೆಯ ರಚನೆಗಳೂ ನಡೆದವು. ತಮ್ಮದೇ ಶ್ರೇಷ್ಠತೆಯ ಮಾನದಂಡಗಳು. ಸ್ಥಾನನಿರ್ಣಯ ಮತ್ತು ಗುಣ ದೋಷ ನಿರ್ಣಯ ಮಾನದಂಡಗಳ ಮೂಲಕ ಚರಿತ್ರೆ ರಚನೆಯ ವಿಮರ್ಶೆಯು ಕವಿಗಳನ್ನು ಆಯ್ದು ಚರ್ಚಿಸುವ ಪರಿಪಾಠವನ್ನು ಬೆಳೆಸಿತು. ಕೆಲವೊಮ್ಮೆ ಈ ಧೋರಣೆಯು ಬಿಡಿ ಬಿಡಿಯಾದ ವಿಮರ್ಶೆಗೂ ವಿಸ್ತರಣೆಯಾಯಿತು. 'ಉತ್ತಮ' ಕಾವ್ಯಭಾಗಗಳ, ಪಾತ್ರಗಳ, ಸನ್ನಿವೇಶಗಳ ಚರ್ಚೆಯಾಗಿ ವಿಮರ್ಶಾ ಲೇಖನಗಳು ಉತ್ಪಾದನೆಯಾಗತೊಡಗಿದವು. ಹೀಗಾಗಿ ವಿಮರ್ಶೆಯಲ್ಲಿ ಆಯ್ಕೆ ಮತ್ತು ಅಲಕ್ಷ್ಯಗಳ ರಾಜಕಾರಣವೊಂದು ಸೃಷ್ಟಿಯಾಯಿತು.(ಜೊತೆಗೆ ನೋಡಿ: ಶ್ರೇಷ್ಠತೆಯ ಪ್ರಜ್ಞೆ)

### 3.9.6. ಸಮೀಕ್ಷೆ

ಚರಿತ್ರೆ ರಚನೆಯು ವಿಮರ್ಶೆಯಲ್ಲಿ ಉಂಟುಮಾಡಿದ ಒಂದು ವಿಮರ್ಶಾ ಪಂಥ ಸಮೀಕ್ಷೆ. ವರದಿ, ಉಲ್ಲೇಖಗಳೇ ಪ್ರಧಾನವಾದ ಪರಿಚಯಾತ್ಮಕ ಕ್ರಮ ಇದು. ವಿಶ್ಲೇಷಣೆ, ಮೌಲ್ಯನಿರ್ಣಯ, ಸ್ಥಾನ ನಿರ್ಣಯಗಳು ಇಂಥ ಕಡೆ ಇರುತ್ತವಾದರೂ ಅದರ ಪ್ರಮಾಣ ಕಡಿಮೆ. ಆರ್.ನರಸಿಂಹಾಚಾರ್ಯರ ಕವಿಚರಿತೆ, ರಂ.ಶ್ರೀ.ಮುಗಳಿಯವರ ಸಾಹಿತ್ಯ ಚರಿತ್ರೆ ಇದಕ್ಕೆ ಉತ್ತಮ ಉದಾಹರಣೆ. "ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮುಗಳಿಯವರು ಮಾಡಿರುವ ಆಧುನಿಕ ಕನ್ನಡ ಸಾಹಿತ್ಯದ ಮೌಲ್ಯಮಾಪನ ನಿರಾಶಾದಾಯಕವಾದುದಾಗಿದೆ. ಸಹೃದಯತ್ವವಿಲ್ಲ ಎನ್ನುವ ಕಾರಣಕ್ಕಾಗಿ ಅಲ್ಲ. ಕೇವಲ ವಿಮರ್ಶಾತ್ಮಕ ಪಟ್ಟಿ ಎಂಬ ಕಾರಣದಿಂದ. ಆಧುನಿಕ ಕನ್ನಡ ಬರಹಗಾರರನ್ನು ಕುರಿತ ಅವರ ಅಭಿಪ್ರಾಯಗಳು ವಿಶ್ಲೇಷಣೆಯ ಬೆಂಬಲ ಪಡೆದುಕೊಳ್ಳುವುದಿಲ್ಲ. ವಿಶ್ಲೇಷಣೆಯಿಂದ ಸಮರ್ಥಿಸಲ್ಪಡದ ಅಭಿಪ್ರಾಯಗಳನ್ನು ಅವರು ವ್ಯಕ್ತಮಾಡುವುದರಿಂದ ಬುದ್ಧಿವಂತ ಓದುಗ ತಾಳ್ಮೆ ಕಳೆದುಕೊಳ್ಳುತ್ತಾನೆ. ಬುದ್ಧಿವಂತನಲ್ಲದ ಓದುಗ ಆಧುನಿಕ ಕನ್ನಡ ಸಾಹಿತ್ಯದ 'ಉನ್ನತ ಶಿಖರ'ಗಳ ಪರಿಚಯ ಪಡೆದ ಭ್ರಮೆ ಹೊಂದುತ್ತಾನೆ"[15] ಆರ್.ನರಸಿಂಹಾಚಾರ್ಯರ ಕವಿಚರಿತೆಯಂತೂ ವ್ಯಾಪ್ತಿಯಲ್ಲಿ ದೊಡ್ಡದಾಗಿರುವುದರಿಂದ ಬರಿ ಉಲ್ಲೇಖ ಮತ್ತು ಸ್ಯಾಂಪಲ್ಲುಗಳ ನೀಡಿಕೆಗಷ್ಟೇ ಸೀಮಿತವಾಗುತ್ತದೆ. ಕೆಲವೊಮ್ಮೆ ಬೃಹತ್ ಶ್ಮಶಾನದಲ್ಲಿ ಗೋರಿಗಳನ್ನು ಒಂದೊಂದಾಗಿ ಪರಿಚಯಿಸುವ ನಿರ್ಲಿಪ್ತತನವೇ ಇಲ್ಲಿ ಪ್ರಧಾನವಾಗಿ ಜೀವಂತಿಕೆಯೇ ಇಲ್ಲದಂತೆ ಭಾಸವಾಗುತ್ತದೆ.

### 3.10. ರಾಷ್ಟ್ರೀಯತೆ ಮತ್ತು ವಿಮರ್ಶೆ

ಸಂಭವಕಾಲದಲ್ಲಿ ಛಂದಸ್ಸು, ವ್ಯಾಕರಣ, ನಿಘಂಟು(ಕೋಶ)ರಚನಾಶಾಸ್ತ್ರ ಎಲ್ಲವೂ ಶೈಕ್ಷಣಿಕ ಉದ್ದೇಶಗಳಿಗಷ್ಟೆ ಅಲ್ಲದೆ ನಮ್ಮಲ್ಲಿ ರಾಷ್ಟ್ರೀಯ ಪ್ರಜ್ಞೆಯ ವಿಸ್ತರಣೆಯಾಗಿಯೂ ರೂಪಗೊಂಡಿವೆ. ನಾವು ಮತ್ತು ಅನ್ಯ ಎಂಬ (ಪೂರ್ವ ಮತ್ತು ಪಶ್ಚಿಮ ಎಂಬ ಅರ್ಥದಲ್ಲಿ) ಇಡೀ ಜಗತ್ತನ್ನು ಎರಡಾಗಿ ನೋಡುವ ದೃಷ್ಟಿಕೋನವೊಂದು ಓರಿಯಂಟಾಲಜಿಯಿಂದಲೇ ನಮ್ಮವರಿಗೆ ಪ್ರಾಪ್ತವಾಗಿತ್ತಾದ್ದರಿಂದ ನಮ್ಮತನದ ಚಹರೆಗಳಾದ ಸಾಹಿತ್ಯ ಸಂಸ್ಕೃತಿಗಳನ್ನು ಕಟ್ಟಿಕೊಳ್ಳುವ ಎಚ್ಚರವೊಂದು ರಾಷ್ಟ್ರೀಯತೆಯಿಂದ ನಮ್ಮಲ್ಲಿ ಜಾಗ್ರತಗೊಂಡಿತ್ತು. ಭಾರತ ರಾಷ್ಟ್ರೀಯತೆ ಮತ್ತು ಕನ್ನಡ ರಾಷ್ಟ್ರೀಯತೆಗಳಲ್ಲಿ ಸ್ಪಷ್ಟವಾದ ಹೈರಾರ್ಕಿ ನಿರ್ಮಾಣವಾಗಿ ಕನ್ನಡ ರಾಷ್ಟ್ರೀಯತೆಯು ಅಧೀನ, ಪ್ರಾದೇಶಿಕ, ಉಪ ರಾಷ್ಟ್ರೀಯತೆ ಎಂದಾಗಿ ನಿರ್ವಚಿತಗೊಂಡಿತ್ತು. ಕನ್ನಡ ಪರಂಪರೆಯ ಕಟ್ಟಾಣಿಕೆಯು ಭಾರತೀಯ ಪರಂಪರೆಯ 'ತನುಜಾತೆ' ರೂಪಿ ಎಂಬ ತಿಳುವಳಿಕೆ ಸ್ಪಷ್ಟವಾಗಿತ್ತು. ಹೀಗಾಗಿ ಈ ಅಸಮಾನ ರಾಷ್ಟ್ರೀಯತೆಯ ಐಡಿಯಾಲಜಿ ನಮ್ಮ ಮೀಮಾಂಸೆ ಮತ್ತು ವಿಮರ್ಶೆಗಳನ್ನು ಪ್ರಭಾವಿಸದೆ ಇರಲಿಲ್ಲ. (ರಾಷ್ಟ್ರೀಯತೆಯ ಐಡಿಯಾಲಜಿಯು ಏಕರೂಪವಾಗಿರಲಿಲ್ಲ ಎಂಬುದು ಬೇರೆ ಮಾತು) ಸಮಾಜೋ ಸಾಂಸ್ಕೃತಿಕ ಐಡಿಯಾಲಜಿಗಳಿಗೂ ಸಾಹಿತ್ಯಕ ಐಡಿಯಾಲಜಿಗಳಿಗೂ ವ್ಯತ್ಯಾಸ ಎಂದಿಗೂ ಇರುವುದಿಲ್ಲ ಅಲ್ಲವೇ? ಹೀಗಾಗಿ ಅಸಮಾನ ರಾಷ್ಟ್ರೀಯತೆಯ ಪರಿಕಲ್ಪನೆಯ ಫಲವಾಗಿಯೇ ಕನ್ನಡದಲ್ಲಿ ಭಾರತೀಯ ಕಾವ್ಯ ಮೀಮಾಂಸೆ ಹುಟ್ಟಿಕೊಂಡಿತು.

ಸಂಸ್ಕೃತ ಕಾವ್ಯ ಮೀಮಾಂಸೆಯನ್ನೇ ಭಾರತೀಯ ಕಾವ್ಯಮೀಮಾಂಸೆ ಎಂದು ಗ್ರಹಿಸಿದ; ಅದನ್ನೇ ಕನ್ನಡ ಕಾವ್ಯ ಮೀಮಾಂಸೆಯ ಅಧ್ಯಯನಶಿಸ್ತಾಗಿ ಸ್ವೀಕರಿಸಿದ ಚಟುವಟಿಕೆಗಳು ಬಹುಕಾಲ ನಡೆದವು. ವ್ಯಾಕರಣ ವಿಚಾರಕ್ಕೆ ಶಬ್ದಮಣಿದರ್ಪಣಕ್ಕೆ ಅನೇಕ ವರ್ಷಗಳ ಕಾಲ ಜೋತು ಬಿದ್ದ ನಾವುಗಳು ಮೀಮಾಂಸೆಗೆ ತೀ.ನಂ.ಶ್ರೀಯವರ ಭಾರತೀಯ ಕಾವ್ಯ ಮೀಮಾಂಸೆಯನ್ನೇ ಏಕೈಕ ಪ್ರಮಾಣಗ್ರಂಥವಾಗಿ ಜಪಿಸಿದೆವು. ಇವೆರಡೂ ಸಂಸ್ಕೃತದ ಪಡಿಯಚ್ಚುಗಳೆಂಬುದು ನಮಗೆಲ್ಲ ಗೊತ್ತಿದೆ. (ಜೊತೆಗೆ ನೋಡಿ: ಪ್ರಮಾಣೀಕರಣ) ಅಲ್ಲಲ್ಲಿ ಜಿ.ಎಸ್.ಶಿವರುದ್ರಪ್ಪ, ಕೆ.ಕೃಷ್ಣಮೂರ್ತಿ ಇವರ ಕಾವ್ಯತತ್ವ ವಿಚಾರಗಳು ಚರ್ಚೆಯಾದರೂ ಅವುಗಳಿಗೆ ಮೀಮಾಂಸಾ ಸಿದ್ಧಾಂತಗಳ ಕೊಟ್ಟಣದಲ್ಲಿ ಪ್ರಾಶಸ್ತ್ಯ ಸಿಗಲಿಲ್ಲ. ಕನ್ನಡ ಕಾವ್ಯ ಮೀಮಾಂಸೆಯನ್ನು, ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪ್ರಕಟವಾಗಿರುವ ವಿಮರ್ಶೆಯನ್ನು ನಾವು ಈಗೀಗ ಕ್ರೋಡೀಕರಿಸಿ ರೂಪಿಸಿಕೊಳ್ಳತೊಡಗಿದ್ದೇವೆ. ದೇಸಿ ಮತ್ತು ಶಿಷ್ಟ ಈ ಎರಡೂ ನೆಲೆಯಲ್ಲಿ ದ್ರಾವಿಡ ಕಾವ್ಯ ಮೀಮಾಂಸೆ/ ಕನ್ನಡದ್ದೇ ಕಾವ್ಯ ಮೀಮಾಂಸೆ, ಕನ್ನಡದ್ದೇ ವ್ಯಾಕರಣಗಳ ಹುಡುಕಾಟ ನಡೆಯುತ್ತಿರುವ ಇವತ್ತಿನ ಆಧುನಿಕೋತ್ತರ ಕಾಲದಲ್ಲಿ ಕೇವಲ ಏಳೆಂಟು ದಶಕಗಳ ಹಿಂದೆ ವಸಾಹತುಶಾಹಿ ವಿರೋಧಿ ರಾಷ್ಟ್ರೀಯತೆಯೇ ನಮ್ಮ ಮೀಮಾಂಸೆಯನ್ನು ರೂಪಿಸಿರುವುದನ್ನು ಹಿಂತಿರುಗಿ ನೋಡಿದರೆ ಕಾಣಬಹುದು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಂಡ ನಾವು ಆ ಸಾಹಿತ್ಯ ಕೃತಿಗಳನ್ನು ಅಭ್ಯಾಸಮಾಡಿ ಅವುಗಳಿಂದಲೆ ವಿಮರ್ಶಾ ಪರಿಕರ-ಮಾನದಂಡಗಳನ್ನು ರೂಪಿಸಿಕೊಳ್ಳುವ ಎಚ್ಚರವನ್ನು ಬಹುದಿನಗಳ ಕಾಲ ಮೂಡಿಸಿಕೊಳ್ಳಲಿಲ್ಲ. ಹಾಗೇ ಹಿಂದೆ ಮೀಮಾಂಸೆಯ ವಿಚಾರದಲ್ಲಿ ಹೇಗೆ ಕಡತರಲು ಸಂಸ್ಕೃತಕ್ಕೆ ಕನ್ನಡ ಲಾಕ್ಷಣಿಕರು ಜೋತುಬಿದ್ದರೋ ಹಾಗೆ ಆಧುನಿಕ ವಿಮರ್ಶೆಯ ಸಂದರ್ಭದಲ್ಲಿ ಸಂಸ್ಕೃತ ಮತ್ತು ಇಂಗ್ಲಿಶ್ ಎರಡಕ್ಕೂ ನಮ್ಮವರು ಜೋತುಬಿದ್ದರು. ವಿಮರ್ಶೆಯ ವಿಚಾರದಲ್ಲಿ ಪರಂಪರೆಯನ್ನು ಕಟ್ಟಿಕೊಳ್ಳುವ; ವಿಮರ್ಶಾ ಚರಿತ್ರೆ ರಚಿಸುವ ಯತ್ನಗಳೇ ನಡೆಯಲಿಲ್ಲ. ಅದೆಲ್ಲವೂ ಕಾವ್ಯಮೀಮಾಂಸೆಯ (ಸಂಸ್ಕೃತ+ಭಾರತೀಯ) ಕ್ರೋಡೀಕರಣದಲ್ಲಿ ಅವಜ್ಞೆಗೆ ಗುರಿಯಾಯಿತು. ಬಹುಕಾಲ ಪ್ರಾಚೀನರಲ್ಲಿ ವಿಮರ್ಶೆ ಇರಲಿಲ್ಲ ಎಂದೇ ನಾವು ನಂಬಿದೆವು. ಮೀಮಾಂಸೆಯೂ ವಿಮರ್ಶೆಯೂ ಪರಸ್ಪರ ಬೇರೆಯಾದ ಚಟುವಟಿಕೆ/ಶಿಸ್ತುಗಳು ಎಂದೂ ನಂಬಿದೆವು.

ನಮ್ಮ ಆಧುನಿಕ ವಿಮರ್ಶೆಯನ್ನು ರೂಪಿಸಿದ ಹಲವಾರು ಚಿಂತನೆ(ಐಡಿಯಾಲಜಿ)ಗಳಲ್ಲಿ ರಾಷ್ಟ್ರೀಯವಾದವೂ ಒಂದು. ಎಲ್ಲ ಭಾರತೀಯರೂ ಒಂದೇ ಎಂಬ ಭಾವ ಮತ್ತು ನಮ್ಮ ಸಂಸ್ಕೃತಿ ಪರಂಪರೆ ಯಾರಿಗೂ ಕಡಿಮೆಯಾದುದಲ್ಲ ಎಂಬ ಭಾವಗಳು ನಮ್ಮ ಪರಂಪರೆಯನ್ನು ಅಭಿಮಾನದಿಂದ ಮರುರಚಿಸಿಕೊಳ್ಳುವ ಪ್ರಚೋದನೆಯನ್ನು ನೀಡಿದವು. ಇದು ನಮ್ಮದು, ಈ ಕೆಲಸವನ್ನು ನಾವು ನಮ್ಮ ಆತ್ಮಾಭಿಮಾನ ವೃದ್ಧಿಗಾಗಿ ಮಾಡಲೇಬೇಕು ಎಂಬ ರಾಷ್ಟ್ರೀಯ ಪ್ರಜ್ಞೆಯು ಸಾಹಿತ್ಯ ಚರಿತ್ರೆ ರಚನೆ, ಶಾಸನಗಳ ಸಂಶೋಧನೆ, ಗ್ರಂಥ ಸಂಪಾದನೆ ಮೊದಲಾದ ಶಾಸ್ತ್ರಗಳನ್ನು ಕೈಗೆತ್ತಿಕೊಂಡ ದೇಶೀ ವಿದ್ವಾಂಸರನ್ನು ಹುರಿದುಂಬಿಸಿತು. ಆದರೆ ಇದೇ ಶಾಸ್ತ್ರಗಳನ್ನು ಕೈಗೆತ್ತಿಕೊಂಡ ಪಾಶ್ಚಾತ್ಯ ವಿದ್ವಾಂಸರಿಗೆ ಇವೆಲ್ಲವೂ ಬರಿ ಅಧ್ಯಯನ ಶಿಸ್ತುಗಳಾಗಿದ್ದವು. ಅಥವಾ ಧರ್ಮಪ್ರಚಾರ, ಆಡಳಿತಾತ್ಮಕ ಅನುಕೂಲಕ್ಕಾಗಿ ಅಭ್ಯಾಸ ಮಾಡಬೇಕಾದ ವಲಯಗಳಾಗಿದ್ದವು. ಕೆಲವರಲ್ಲಂತೂ ಕತ್ತಲ ಕೂಪದಲ್ಲಿ ಬಿದ್ದಿರುವ ಅನಾಗರಿಕ ಸಂಸ್ಕೃತಿಗಳನ್ನು ಉದ್ಧರಿಸುವ ವೈಟ್‌ಮ್ಯಾನ್ಸ್ ಬರ್ಡನ್ (ಬಿಳಿಯರ ಹೊರೆ) ಧೋರಣೆಯ ಮಾರ್ಗಗಳಾಗಿದ್ದವು. ಆದರೆ ನಮ್ಮವರಿಗೆ ಈ ಶಾಸ್ತ್ರಗಳು ರಾಷ್ಟ್ರಾಭಿಮಾನದ ಸಂಕೇತಗಳಾಗಿದ್ದವು. ಬಹುಶಃ ಇದರಿಂದಾಗಿಯೇ ಏನೋ ಈ ಶಾಸ್ತ್ರಗಳ ಮೂಲಕ ರೂಪಿತಗೊಂಡಿರುವ ವಿಮರ್ಶೆಯಲ್ಲಿ ಬಹುಪಾಲು ಭಾಗವು ಪ್ರಶಂಸಾ ಧಾಟಿ, ಗುಣಗ್ರಹಣ, ವರ್ಣನಾತ್ಮಕ, ರಸ-ಧ್ವನಿ ನಿರ್ದೇಶಿತ ಮತ್ತು ಸಂಶೋಧನಾತ್ಮಕ ಧಾಟಿಗಳನ್ನು ಹಿಡಿದಿದೆ.

### 3.10.1. ಸಾಹಿತ್ಯ ಪ್ರಚಾರ-ವಿಮರ್ಶೆ

ರಾಷ್ಟ್ರೀಯತೆಯ ಹಲವು ಪ್ರಚೋದನೆಗಳಲ್ಲಿ ಸಾಹಿತ್ಯ ಪರಂಪರೆಯ ಮರುರಚನೆ ಎಷ್ಟು ಮುಖ್ಯವಾದದ್ದೋ ಆ ಮರು ರಚಿಸಿಕೊಂಡ ಸಾಹಿತ್ಯ ಪರಂಪರೆಯ ಪ್ರಚಾರ ಕಾರ್ಯ ಕೂಡ ಅಷ್ಟೇ ಮುಖ್ಯವಾದದ್ದು. ವಿಶ್ವವಿದ್ಯಾಲಯಗಳು, ಕರ್ನಾಟಕ ಸಂಘ, ವಿದ್ಯಾವರ್ಧಕ ಸಂಘ, ಸಾಹಿತ್ಯ ಪರಿಷತ್ತು, ಇಂಥ ಸಂಸ್ಥೆಗಳು ಪತ್ರಿಕೆಗಳ ಮೂಲಕ, ಪ್ರಸಾರಾಂಗಗಳ ಮೂಲಕ, ಪ್ರಚಾರೋಪನ್ಯಾಸಗಳ ಮೂಲಕ ಸಾಹಿತ್ಯವನ್ನು ಪ್ರಚಾರ ಮಾಡುವ ಕೆಲಸವನ್ನು ಭರದಿಂದ ಕೈಗೊಂಡವು. ಸಾಹಿತ್ಯವನ್ನು ಜನಗಳಿಗೆ ತಲುಪಿಸಬೇಕು, ಪರಿಚಯಿಸಬೇಕು ಎಂಬ ಉದ್ದೇಶದಿಂದ ಈ ಚಟುವಟಿಕೆಗಳು ನಡೆದದ್ದರಿಂದ ಈ ಚಟುವಟಿಕೆಗಳಲ್ಲಿ ವ್ಯಕ್ತವಾಗಿರುವ ವಿಮರ್ಶೆ ತನ್ನದೇ ಇತಿಮಿತಿಗಳನ್ನು ಪಡೆದುಕೊಂಡಿತು. ಪ್ರಚಾರೋದ್ದೇಶದ ವಿಮರ್ಶೆಯು ಕನ್ನಡ ರಾಷ್ಟ್ರೀಯತೆಯ ಪ್ರಜ್ಞೆಯಿಂದ ರೂಪಿತಗೊಂಡಿದ್ದು; ಇದು ಕೃತಿಗಳ ಗುಣ ಶಕ್ತಿಗಳನ್ನು ವೈಭವೀಕರಿಸುವ ಕೆಲಸವನ್ನೇ ಹೆಚ್ಚು ಹೆಚ್ಚು ಮಾಡಿತು. ನಮ್ಮ ಸಾಹಿತ್ಯ ಪರಂಪರೆಯಲ್ಲಿ ತಿಳಿಯಬೇಕಾದದ್ದು ಬೇಕಾದಷ್ಟಿದೆ. ನಮ್ಮ ಜನಪದರು ಇದನ್ನೆಲ್ಲ ತಿಳಿಯಬೇಕು. ಅವರಿಗೆ ನಾವೂ ಇದರಲ್ಲಿನ ಮೌಲ್ಯಗಳನ್ನೆಲ್ಲ ತಿಳಿಸಬೇಕು. ಸಾಹಿತ್ಯದ ಅಭಿರುಚಿಯನ್ನು ಹುಟ್ಟಿಸಬೇಕು ಎಂಬ ತಿಳುವಳಿಕೆಯಿಂದ ಇಂತಹ ಚಟುವಟಿಕೆಗಳು ನಡೆದವು. ಹಾಗಾಗಿಯೇ ವಿಶ್ವವಿದ್ಯಾಲಯಗಳ ಪ್ರಕಟಣಾ ವಿಭಾಗಗಳಿಗೆ ನಮ್ಮಲ್ಲಿ ಪ್ರಸಾರಾಂಗ ಎಂಬ ಹೆಸರನ್ನು ಇಡಲಾಯ್ತು. ಸಾಹಿತ್ಯಗಳನ್ನು ಶಿಷ್ಟ ಮತ್ತು ಜನಪದ ಎಂದು ಬೇಧ ಮಾಡಿ ನೋಡುವ ಪರಿಪಾಟವೂ ಇದೇ ಕಾಲದಲ್ಲಿ ರೂಪತಳೆಯಿತು.

### 3.10.2. ರಾಷ್ಟ್ರ ನಿರ್ಮಾಣದ ಆಕಾಂಕ್ಷೆ-ಏಕೀಕರಣ

ಸುಧಾರಣವಾದಿ ಮನೋಧರ್ಮದಿಂದಾಗಿ ಸಾಹಿತ್ಯದ ಚರಿತ್ರೆರಚನೆಯಲ್ಲಿ ಸಾಹಿತ್ಯವನ್ನು ವೈಜ್ಞಾನಿಕ, ವೈಚಾರಿಕ, ಧರ್ಮನಿರಪೇಕ್ಷ ಮೌಲ್ಯಗಳ ಹಿನ್ನಲೆಯಲ್ಲಿ ಸಂಗ್ರಹಿಸಿಕೊಳ್ಳುವ ಪರಿಪಾಟವೊಂದು ಈ ಕಾಲದಲ್ಲಿ ರೂಢಿಯಾಯಿತಷ್ಟೆ. ಸಮಗ್ರ ಸಾಹಿತ್ಯ ಚರಿತ್ರೆಯನ್ನು ಜನಸಮುದಾಯದಲ್ಲಿ ಪ್ರಸಾರ ಮಾಡುವುದಕ್ಕಿಂತ

ಆಯ್ದ ಕವಿಕೃತಿಗಳನ್ನು ಅದರಲ್ಲು ಆಯ್ದ ಕೃತಿ ಭಾಗಗಳನ್ನು-ಮೌಲ್ಯಗಳನ್ನು ಜನರಿಗೆ ಪ್ರಸರಿಸುವ ಕೆಲಸ ಜರುಗಿತು. ಇಂಥ ಸಂಗ್ರಹ, ಆಯ್ಕೆ, ಪ್ರಸಾರ ಮತ್ತು ಅಲಕ್ಷ್ಯಗಳಲ್ಲಿ ಕೆಲಸ ಮಾಡಿರುವ ವಿಮರ್ಶನ ಪ್ರಜ್ಞೆಯನ್ನು ವಿಜ್ಞಾನವಾದ, ವಿಚಾರವಾದ, ಉದಾರ ಮಾನವತಾವಾದ, ಧರ್ಮನಿರಪೇಕ್ಷ, ಜಾತ್ಯಾತೀತ, ಪ್ರಜಾಪ್ರಭುತ್ವೀಯ ದೃಷ್ಟಿ ಕೋನಗಳು ರೂಪಿಸಿವೆ. ನಿಜ. ಆದರೆ ಇವೆಲ್ಲವುಗಳ ಹಿಂದೆ ಇದ್ದ ಉದ್ದೇಶ ಮಾತ್ರ ರಾಷ್ಟ್ರ ನಿರ್ಮಾಣ. ಹಲವಾರು (ಬಹುಮುಖಿ) ರಾಷ್ಟ್ರೀಯತೆಯ ಪರಿಕಲ್ಪನೆಗಳು ನಮ್ಮ ರಾಷ್ಟ್ರವು ಹೇಗೆ ಕಟ್ಟಲ್ಪಡಬೇಕು, ನಮ್ಮ ಸಂಸ್ಕೃತಿ ಹೇಗೆ ಕಟ್ಟಲ್ಪಡಬೇಕು ಎಂಬುದನ್ನು ನಿರ್ಧರಿಸಿವೆ.

ವಿಮರ್ಶೆಯ ಸ್ವರೂಪವು ಸಂಭವಿಸುವ ಹಿಂದೆ ಕೆಲಸ ಮಾಡಿರುವ ಈ ರಾಷ್ಟ್ರನಿರ್ಮಾಣ ಪ್ರಜ್ಞೆಯು ಗಾಂಧೀಜಿಯುವರ ಸ್ವರಾಜ್ಯದ ಕಲ್ಪನೆ ಹಾಗೂ ರಾಮರಾಜ್ಯದ ಕಲ್ಪನೆಗಳಿಂದ ಪ್ರಭಾವಿತಗೊಂಡಿದೆ. ಸುಸಂಸ್ಕೃತ ನಾಡನ್ನು, ಸರ್ವೋದಯ ನಾಡನ್ನು ನಾವು ಕಟ್ಟಿಕೊಳ್ಳಬೇಕೆಂಬ ನಿರ್ಮಾಣದ ಆಕಾಂಕ್ಷೆ ನಮ್ಮ ಕುವೆಂಪು, ಡಿವಿಜಿ, ಮಾಸ್ತಿ, ತೀ.ನಂ.ಶ್ರೀ.ಯವರ ವಿಮರ್ಶೆಗಳಲ್ಲಿ ಕೆಲಸ ಮಾಡಿರುವುದನ್ನು ಗಮನಿಸಬಹುದು. ಉತ್ತಮ ರಾಷ್ಟ್ರ ಕಟ್ಟಲು ಉತ್ತಮ ಸಾಹಿತ್ಯದ ಅಗತ್ಯವಿದೆ ಎಂಬ ಚಿಂತನೆ ಡಿವಿಜಿಯವರ ಸಾಹಿತ್ಯಶಕ್ತಿ ಪುಸ್ತಕದಲ್ಲಿ ಪ್ರಕಟವಾಗಿದೆ. ಹಾಗೇ ಸಂಸ್ಕೃತಿಯನ್ನು ಕಟ್ಟುವ ಅಂಗವಾಗಿ ನಮ್ಮದೇ ಕಾವ್ಯ ಮೀಮಾಂಸೆಯನ್ನು ಕಟ್ಟಿಕೊಳ್ಳುವ ಪ್ರಯತ್ನವನ್ನು ತೀನಂಶ್ರೀಯವರಲ್ಲಿ ಕಾಣಬಹುದು. ರಾಷ್ಟ್ರೀಯತೆಯಿಂದ, ಧರ್ಮನಿರಪೇಕ್ಷೀಕರಣ ಚಿಂತನೆಯಿಂದ, ಸಾರ್ವಕಾಲಿಕ ಮೀಮಾಂಸಾ ತತ್ವಗಳ ಅನ್ವೇಷಣ ಪ್ರಜ್ಞೆಯಿಂದ ಪ್ರೇರಿತವಾದ ದೃಷ್ಟಿಕೋನಗಳು ಭಾರತೀಯ ಕಾವ್ಯ ಮೀಮಾಂಸೆ ಕೃತಿಯಲ್ಲಿ ಕೆಲಸ ಮಾಡಿವೆ.

ರಾಷ್ಟ್ರನಿರ್ಮಾಣದ ಆಕಾಂಕ್ಷೆಯು ಪ್ರಕಟಗೊಂಡಿರುವ ಒಂದು ಬಗೆ ನಾಳಿನ ನಾಡನ್ನು ಕಟ್ಟುವುದು. ಆದರೆ ಇದೇ ಆಕಾಂಕ್ಷೆಯು ನೆನ್ನೆಯ ನಾಡನ್ನು ಮರುಕಟ್ಟಿಕೊಳ್ಳುವ ಬಗೆಯಾಗಿಯೂ ಪ್ರಕಟವಾಗಿದೆ. ಕಡೆಂಗೋಡ್ಲು ಅವರ ಕನ್ನಡ ನುಡಿಯ ಏಳಿಗೆ ಮತ್ತು ಬಿ.ಎಂ.ಶ್ರೀಯವರ ಕನ್ನಡ ಮಾತು ತಲೆಯೆತ್ತುವ ಬಗೆ ಇಂಥ ಕಡೆ ನಾಳಿನ ಕರ್ನಾಟಕ ಕಟ್ಟುವ ಚಿಂತನೆ ಇದ್ದರೆ, ಶಂಬಾ ಅವರ ಕಂನುಡಿಯ ಹುಟ್ಟು ಇಂಥ ಕಡೆ ನೆನ್ನೆಯ ಕರ್ನಾಟಕವನ್ನು ಕಟ್ಟುವ ಚಿಂತನೆ ಇದೆ. (ನೆನ್ನೆಯ ಚರಿತ್ರೆ ಕಟ್ಟಿರುವುದೂ ಕೂಡ ಭವಿಷ್ಯದ ಕನಸಿಗಾಗಿಯೇ) ಆರ್.ನರಸಿಂಹಾಚಾರ್ಯರ ಮತ್ತು ಮುಗಳಿಯವರ ಸಾಹಿತ್ಯ ಚರಿತ್ರೆ ರಚನೆ, ಶಂಬಾರ ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಗೋವಿಂದ ಪೈಯವರ ಭಾಷೆ-ಸಾಹಿತ್ಯಗಳ ಹಳಮೆಯನ್ನು ಗುರ್ತಿಸುವ ಕೆಲಸ, ಆಲೂರ ವೆಂಕಟರಾಯರ ಕರ್ನಾಟಕ ಗತವೈಭವದ ವಿಚಾರ, ಇವೆಲ್ಲಾ ಕರ್ನಾಟಕತ್ವ ಅಥವಾ ಕರ್ನಾಟಕ ಸಂಸ್ಕೃತಿ ಚರಿತ್ರೆಯನ್ನು ಕಟ್ಟಿಕೊಳ್ಳುವ ಆಕಾಂಕ್ಷೆಗಳ ಬೇರೆ ಬೇರೆ ರೂಪಗಳೇ ಆಗಿವೆ. ಇಂಥ ಎಲ್ಲ ರೂಪಗಳಿಂದ ನಮ್ಮ ಸಂಭವಕಾಲದ ವಿಮರ್ಶಾ ಸಂಸ್ಕೃತಿ ಪ್ರಭಾವಿತಗೊಂಡಿದೆ ಮತ್ತು ರೂಪಿತಗೊಂಡಿದೆ.

ಆದರೆ ಸಾಹಿತ್ಯ ಪರಂಪರೆಯನ್ನು ಕಟ್ಟಿಕೊಳ್ಳುವ ಮತ್ತು ಪುನರ್ಕಟ್ಟಿಕೊಳ್ಳುವ ಕ್ರಿಯೆಯಲ್ಲಿ ಗಾಂಧೀಜಿಯುವರ ಸ್ವರಾಜ್ಯ-ಗ್ರಾಮಸ್ವರಾಜ್ಯ ಕಲ್ಪನೆಯು ಅಷ್ಟಾಗಿ ಸ್ವಂತಿಕೆಯ ಪ್ರಶ್ನೆಗಳನ್ನು ಬಡಿದೆಬ್ಬಿಸಿದಂತೆ ಕಾಣುವುದಿಲ್ಲ. ಕನ್ನಡಕ್ಕೆ ಕನ್ನಡದ್ದೇ ಆದ ವ್ಯಾಕರಣ, ಕನ್ನಡದ್ದೇ ಆದ ಸಾಹಿತ್ಯ ಮೀಮಾಂಸೆ, ವೈಚಾರಿಕತೆಗಳನ್ನು ಕಟ್ಟಿಕೊಳ್ಳುವ ಪ್ರಜ್ಞೆಯೊಂದು ಇತ್ತೀಚೆಗಷ್ಟೇ ಬೆಳೆದಿದೆ. ಹಾಗೆ ನೋಡಿದರೆ ಶುದ್ಧಾಂಗವಾಗಿ ಇದು ಕನ್ನಡದ್ದೇ ಎಂದು ಹೇಳಬಹುದಾದ ವ್ಯಾಕರಣದ ಪೂರ್ಣ ಸ್ವರಾಜ್ಯ, ವಿಮರ್ಶೆ, ವೈಚಾರಿಕತೆಗಳ ಪೂರ್ಣ ಸ್ವರಾಜ್ಯವೊಂದು ಇರಲಿಕ್ಕೆ ಸಾಧ್ಯವಿಲ್ಲ. ಇದೊಂದು ವಿಕಲ್ಪ. ಅಂಥದ್ದೊಂದು ಸ್ಥಿತಿಯನ್ನು ನಿರ್ಮಿಸಲೂ ಸಾಧ್ಯವಿಲ್ಲ. ಆದಾಗ್ಯೂ ಇಂಥ ಪ್ರಯತ್ನಗಳು ನಡೆಯುತ್ತಿವೆ. ಆದರೆ ಈ ಪ್ರಯತ್ನಗಳು ಆರಂಭದಲ್ಲಿ ಪ್ರಭಾವಗಳ-ಭಿನ್ನ ಅನುಸಂಧಾನಗಳ ಜೀರ್ಣಫಲ ಎಂಬಂತೆಯೇ ನಡೆದಿವೆ ಮಾತ್ರ.[13] ಆಂಡಯ್ಯ ವ್ಯಕ್ತಿತ್ವ ಮತ್ತು ಬಿ.ಎಂ.ಶ್ರೀ ವ್ಯಕ್ತಿತ್ವಗಳೆಲ್ಲ ನಮ್ಮಲ್ಲಿ ಬೆರೆತುಹೋಗಿವೆ. ಪ್ರಭಾವಗಳ ಅನ್ವೇಷಣೆ, ಮೂಲಗಳ ಅನ್ವೇಷಣೆ(ಮೂಲವ್ಯಾಧಿ?)ಗಳಿಗೂ ಶುದ್ಧತೆ-ಸ್ವಂತಿಕೆಯ ಅನ್ವೇಷಣೆ, ನಮ್ಮ-ಅನ್ಯವೆಂಬ ವಿಂಗಡಣೆಗಳಿಗೂ ಅಂಥ ವ್ಯತ್ಯಾಸವೇನಿಲ್ಲ.

### 3.11. ಸಮನ್ವಯತೆ-ಸಂವಾದ ಗುಣ

ಅತ್ತ ತೀರಾ ಭಜನೆಯೂ ಆಗದ ಇತ್ತ ತೀರಾ ಕಟುನಿಂದೆಯೂ ಆಗದ ಸಮನ್ವಯ ಸ್ಥಿತಿಯೊಂದನ್ನು ಸಾಧಿಸಬೇಕೆಂಬ ಧೋರಣೆ ನಮ್ಮ ವಿಮರ್ಶೆಯಲ್ಲಿ ಪ್ರಕಟವಾಗಿರುವುದನ್ನು ಕಾಣಬಹುದು. ಹಾಗೇ ಯಾವುದೋ ಕಾಲದಲ್ಲಿ ಯಾರೋ ಬರೆದ ವಿಮರ್ಶೆಗೆ ಇನ್ಯಾರೋ ಇನ್ನೆಲ್ಲೋ ಉತ್ತರ ಕೊಟ್ಟಿರುವ ಸಂವಾದ ಗುಣವು ಇಲ್ಲಿ ಸಾಕಷ್ಟಿದೆ.

ವಿಪರೀತ ಪ್ರಶಂಸೆ ಮಾಡುವುದು. ಮತ್ತು ವಿಪರೀತ ವಸ್ತುನಿಷ್ಠವಾಗಿ ಕಟುವಿಮರ್ಶೆಯನ್ನು ಪ್ರಕಟಿಸುವುದು ಇವೆರಡರ ಬಗೆಗೂ ನಮ್ಮಲ್ಲಿ ಆತ್ಮವಿಮರ್ಶೆ ಇದೆ. ರಂಗಣ್ಣನವರ 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಲೇಖನದ ಮುದ್ದಣನ ಕುರಿತ ನಿಷ್ಠುರ ಅಭಿಪ್ರಾಯದ ಜೊತೆಗೆ ಅ.ನ.ಕೃ. ಅವರ 'ವಿಮರ್ಶಕನ ಹಾದಿ' ಪ್ರಬಂಧವನ್ನು ಇಟ್ಟು ನೋಡಬಹುದು. "ಕಟು ವಿಮರ್ಶೆಗೆ ಹೊರಡುವ ವಿಮರ್ಶಕ ತನ್ನ ಅಧಿಕಾರವೇನೆಂಬುದನ್ನು ತಾನೇ ಕೇಳಿಕೊಳ್ಳಬೇಕು. ಕೈಗೆ ಸಿಕ್ಕಿದ ಗಡಿಯಾರವನ್ನು ಅಂಬೆಗಾಲಿಕ್ಕುವ ಮಗು ಕೂಡ ಬಿಚ್ಚಿ, ಹರಿದು, ಚೂರು ಚೂರು ಮಾಡಿಬಿಡಬಹುದು. ಆದರೆ ಅದನ್ನು ಮತ್ತೆ ಕೂಡಿಸುವುದಕ್ಕೆ ಪ್ರತಿಭೆ ಬೇಕು."[20] ಕಟುವಿಮರ್ಶೆಯ ಬಗೆಗೆ "ಕಟುವಾಗಿ ಬರೆದು ಕವಿಯ ಮನಸ್ಸಿಗೆ ಕಿರುಕುಳ ಕೊಟ್ಟೆನೆಂದು ತೃಪ್ತಿಪಟ್ಟುಕೊಳ್ಳುವ ವಿಮರ್ಶಕ ಸರಸ್ವತೀ ದ್ರೋಹ ಮಾಡುತ್ತಿದ್ದಾನೆಂಬುದನ್ನು ಮರೆಯಬಾರದು. ಕಾವ್ಯಪ್ರಪಂಚದಲ್ಲಿ ಕಟು ವಿಮರ್ಶೆಯನ್ನು ಜೀರ್ಣಿಸಿಕೊಳ್ಳಬಲ್ಲ ವಾಲ್ಟ್ ವಿಟ್‌ಮನ್‌ಗಳಿಗಿಂತ ಷೆಲ್ಲಿಗಳೆ ಅಧಿಕರಾಗಿದ್ದಾರೆ. ವಿನಾಕಾರಣ ಕವಿಯ ಕ್ರಿಯಾಶಕ್ತಿಯ ಮೇಲೆ ಆಘಾತ ಮಾಡುವ ವೃತ್ತಿ ಪಶುವೃತ್ತಿ"[21] ಎಂದು ಕಟುವಾಗಿಯೇ ಅ.ನ.ಕೃ. ವಿಮರ್ಶೆಯ ಸ್ವರೂಪ ಹೇಗಿರಬೇಕೆಂಬ ಬಗ್ಗೆ ಹೇಳುತ್ತಾರೆ.

### 3.12. ಶ್ರೇಷ್ಠತೆಯ ಪ್ರಜ್ಞೆ

ನವೋದಯ ಪೂರ್ವವೋ, ನವೋದಯದ ಆರಂಭಕಾಲವೋ, ಪುನರುಜ್ಜೀವನ ಕಾಲವೋ, ಸ್ವಾತಂತ್ರ್ಯಪೂರ್ವ ಕಾಲವೋ ಇಪ್ಪತ್ತನೆಯ ಶತಮಾನದ ಮುಂಜಾವವೋ, ಹೊಸಗನ್ನಡದ ಅರುಣೋದಯವೋ ಏನಾದರು ಕರೆಯಲಿ; ಈ ಸಂಭವಕಾಲದ ವಿಮರ್ಶೆಯ ಒಂದು ಮುಖ್ಯ ಚಹರೆ ಎಂದರೆ ಅದು ಶ್ರೇಷ್ಠತೆಯ ಪ್ರಜ್ಞೆ. ಶ್ರೇಷ್ಠ ಕೃತಿ, ಶ್ರೇಷ್ಠ ಕವಿ, ಶ್ರೇಷ್ಠ ಕೃತಿಭಾಗ ಹೀಗೆ ಶ್ರೇಷ್ಠವೆಂದು ತಮಗೆ ಕಂಡ ಸಾಹಿತ್ಯ ಭಾಗ-ಸಾಹಿತ್ಯಗಳನ್ನು ಈ ಕಾಲದ ವಿಮರ್ಶೆ ಅನುಸಂಧಾನಕ್ಕೆ ಎತ್ತಿ ಕೊಂಡಿದೆ. ಶ್ರೇಷ್ಠತೆಯೆಂಬುದು ವ್ಯಸನವೆಂಬಷ್ಟರ ಮಟ್ಟಿಗೆ ಇವತ್ತಿಗೂ ನಮ್ಮ ವಿಮರ್ಶೆಯಲ್ಲಿ ಇದು ಚಾಲ್ತಿಯಲ್ಲಿ ಇರುತ್ತ ಬಂದಿದೆ. ಶ್ರೇಷ್ಠತೆ ಎಂದರೆ ಏನು? ಶ್ರೇಷ್ಠತೆಯ ನಿರ್ವಚನ ಹೇಗೆ ಬದಲಾಗುತ್ತ ಬಂದಿದೆ? (ಆ ಕಲ್ಪನೆಯ ಹಿಂದಿನ ಸಾಂಸ್ಕೃತಿಕ ರಾಜಕಾರಣವೇನು?) ಶ್ರೇಷ್ಠತೆಯ ಮಾನದಂಡಗಳು ಹೇಗೆ ಕಾಲಕಾಲಕ್ಕೆ ಬದಲಾಗುತ್ತ ಬಂದಿವೆ. ಸಾಮಾಜಿಕ ಸ್ತರವಿನ್ಯಾಸಕ್ಕೂ ಶ್ರೇಷ್ಠತೆಗೂ ಯಾವಸಂಬಂಧವಿದೆ ಎಂಬ ಚರ್ಚೆ ಇಲ್ಲಿ ಅಪ್ರಸ್ತುತ. ಆದರೆ ವಿಮರ್ಶೆಯನ್ನು ಪ್ರಭಾವಿಸಿದ, ರೂಪಿಸಿದ ಅನೇಕ ಪ್ರಜ್ಞೆಗಳಲ್ಲಿ ಈ ಶ್ರೇಷ್ಠತೆಯ ಪ್ರಜ್ಞೆಯೂ ಒಂದು ಎಂಬುದು ನಿರ್ವಿವಾದ. ಸಂಪಾದನೆ, ಸಂಗ್ರಹ ಕಾರ್ಯಗಳಲ್ಲಿ ಇದು ಎದ್ದು ಕಂಡರೆ; ಚರಿತ್ರರಚನೆಯಲ್ಲಿ ಇದು ಅಂತರ್ಗತವಾಗಿದೆ.

ಮುಗಳಿಯವರ ಸಾಹಿತ್ಯ ಚರಿತ್ರೆ ನೋಡಿದರೂ ಸಾಕು ಅವರು ಎಲ್ಲರ ಬಗೆಗೆ ಬರೆದಿಲ್ಲ. ತಮಗೆ ಗಟ್ಟಿ ಕಾಳುಗಳೆಂದು ಕಂಡು ಬಂದ; ಮುಖ್ಯರು, ಶ್ರೇಷ್ಠರು ಅನಿಸಿದ ಕವಿಗಳನ್ನು ಆರಿಸಿಕೊಂಡು ಚರಿತ್ರೆ ಬರೆದಿದ್ದಾರೆ ಎನ್ನುವುದು ಎದ್ದು ಕಾಣುತ್ತದೆ. ಹಾಗಾಗಿ ಅದೊಂದು ಆಯ್ದ ಸಾಹಿತ್ಯ ಚರಿತ್ರೆ. ಅಪೂರ್ಣವಾದರು ಸಮಗ್ರವೆಂದು ಭಾವಿಸಲಾಗಿರುವ, ನಮಗೆ ಇಷ್ಟೇ ಸಾಕೆಂದು ತಿಳಿಯಲಾಗಿರುವ ಚರಿತ್ರೆ. ಇಂಥ ಆಯ್ದ ಚರಿತ್ರೆಗಳಲ್ಲಿನ ವಿಮರ್ಶೆಯನ್ನು ಶ್ರೇಷ್ಠತೆಯ ಪ್ರಶ್ನೆ ನಿಯಂತ್ರಿಸಿದೆ. ಯಾವ ಮಾನದಂಡಗಳು ಈ ಶ್ರೇಷ್ಠತೆಯ ಕಲ್ಪನೆಯನ್ನು ರೂಪಿಸಿರಬಹುದು? ಹೊಸ ರೀತಿಯ ಛಂದೋಪ್ರಯೋಗ, ಹೊಸರೀತಿಯ ಭಾಷಾಬಳಕೆ, ಮಾರ್ಗನಿರ್ಮಾಪಕ ಅಥವಾ ಪರಂಪರೆಯ ನಿರ್ಮಾಪಕ ಶಕ್ತಿ, ಮೀಮಾಂಸಾ ಪರಿಕರಗಳ ಮೂಲಕ ಪರೀಕ್ಷೆಯಲ್ಲಿ ಗೆದ್ದು ಬರಬಹುದಾದ ಶಕ್ತಿ, ಸಾರ್ವಕಾಲಿಕತೆ, ಧರ್ಮನಿರಪೇಕ್ಷತೆ, ವೈಚಾರಿಕತೆ, ಭಾವಸಮೃದ್ಧಿ, ವರ್ಣನೆ-ಕಥನಗಳ ಬಳಕೆಯ ಸೂಕ್ತ ಔಚಿತ್ಯಪ್ರಜ್ಞೆ ಇತ್ಯಾದಿ ಇತ್ಯಾದಿಗಳು ಶ್ರೇಷ್ಠತೆಯ ಮಾನದಂಡಗಳಾಗಿ ಬಳಕೆಯಾಗಿವೆಯಾದರೂ ಇವು ಆಧುನಿಕ ಸಂದರ್ಭದಲ್ಲಿ ಮುನ್ನೆಲೆಗೆ ಬಂದ ಮಾನದಂಡಗಳಾಗಿವೆ.

ಇದಕ್ಕೂ ಹಿಂದೆ ಕುಮಾರವ್ಯಾಸನಾಗಲೀ ಬಸವನಾಗಲೀ ಪಂಪನಾಗಲೀ ಆಯಾ ಧರ್ಮದವರಿಗೆ ಮಾತ್ರವೇ ಹೆಚ್ಚು ಶ್ರೇಷರಾಗಿ ಕಂಡಿರುವುದಕ್ಕೆ ಕಾರಣವೇನು? ಬೇಂದ್ರೆಯಂಥವರು ಭಕ್ತಕವಿಗಳು ಮತ್ತು ಸಾಹಿತ್ಯ ಕವಿಗಳು ಎಂದು ಇದೇ ಕವಿ ಸಮೂಹವನ್ನು ವಿಭಜಿಸಿ; ಭಕ್ತಕವಿಗಳು ಶ್ರೇಷ್ಠರು ಎನ್ನುವುದರ ಹಿಂದಿನ ಕಾರಣವೇನು? ನವೋದಯದ ಸಂದರ್ಭದಲ್ಲಿ ಸಾಹಿತ್ಯವು ಯಾರಿಗೆ ರಚಿತವಾಗಿದೆ? ಯಾಕೆ ರಚಿತವಾಗಿದೆ? ಎಂಬ ವಿಚಾರ ಗೌಣವಾಗಿ ಹೇಗೆ ರಚಿತವಾಗಿದೆ ಎಂಬುದೆ ಶ್ರೇಷ್ಠತೆ ನಿರ್ಧರಿಸುವ ಮಾನದಂಡವಾಗಲು ಕಾರಣವೇನು? (ಉದಾ: ಕುರ್ತಕೋಟಿ ಅಂತಹವರಲ್ಲಿ) ಇವೆಲ್ಲ ವಿಮರ್ಶೆಯ ಹಿಂದಿನ ಸಾಂಸ್ಕೃತಿಕ ರಾಜಕಾರಣಗಳಲ್ಲದೆ ಬೇರೆ ಅಲ್ಲ. ಇಂಥ ಹಲವು ರಾಜಕಾರಣಗಳು ನಮ್ಮ ವಿಮರ್ಶೆಯನ್ನು ರೂಪಿಸಿವೆ. ರೂಪಿಸುತ್ತಿವೆ.

**3.12.1. ಪ್ರಮಾಣೀಕರಣ**

ಸಾಹಿತ್ಯ ಪರಂಪರೆಯಲ್ಲಿ ಮುಖ್ಯವಾಗಿ ಇವರನ್ನು ಗಮನಿಸಬೇಕು ಎಂಬಂತೆ ಅಥವಾ ಇಂಥಿಂಥವರನ್ನು ಗಮನಿಸಿದರೆ ಸಾಕು ಎಂಬಂತೆ ಚರಿತ್ರೆಯನ್ನು ಕಟ್ಟಿಕೊಳ್ಳುವ ಹಿಂದೆ ಶ್ರೇಷ್ಠತೆಯ ಪ್ರಶ್ನೆ ಅಡಗಿದೆಯೆಂದು ಈಗಾಗಲೇ ಚರ್ಚಿಸಲಾಗಿದೆ. ಆದರೆ ಇದರ ಪರಿಣಾಮ ಏನಾಗಿದೆಯೆಂದರೆ. ನಿರ್ದಿಷ್ಟ ಪರಂಪರೆಯೊಂದರ ಪ್ರಮಾಣೀಕರಣ ಇದರಿಂದ ಉಂಟಾಗಿದೆ. ಇದು ಮಾತ್ರ ನಮ್ಮೆಲ್ಲರ ಪರಂಪರೆ; ಇದು ನಮ್ಮ ಹೆಮ್ಮೆ, ಇದನ್ನು ಯಾರೂ ನಿರ್ಲಕ್ಷಿಸಬಾರದು, ಮರೆಯಬಾರದು ಎಂಬ ನಿರ್ದೇಶನ ಈ ಪ್ರಮಾಣೀಕರಣದಿಂದ ಒದಗಿದೆ. ಆದರೆ ಈ ಪರಂಪರೆ ನಿರ್ಮಾಣವಾಗಿರುವುದೇ ಏಕರೂಪಿ ತತ್ವದ ಮೇಲೆ. ಹಲವು ವಿಸ್ಮೃತಿ-ಅಲಕ್ಷ್ಯಗಳ ಮೇಲೆ.

ಮೊದಲಿನ ಗ್ರಂಥ ಸಂಪಾದನೆ-ಸಂಗ್ರಹಗಳನ್ನು, ಭಾರತೀಯ ಕಾವ್ಯಮೀಮಾಂಸೆಯಂತಹ ಕೃತಿಗಳನ್ನು, ವ್ಯಾಕರಣ ರಚನೆಗಳನ್ನು, ಶಿಕ್ಷಣ ಪಠ್ಯಗಳನ್ನು, ಸಾಹಿತ್ಯ ಚರಿತ್ರೆಗಳನ್ನು ನೋಡಿದರೆ ಪಠ್ಯಗಳ (ಪಾಠಗಳ) ಏಕರೂಪೀಕರಣ, ಮೀಮಾಂಸೆಗಳ ಏಕರೂಪೀಕರಣ, ವ್ಯಾಕರಣಗಳ ಏಕರೂಪೀಕರಣ, ಒಂದು ಪ್ರಮಾಣ ಕನ್ನಡ ಭಾಷೆಯ ರೂಪಣೆ, ಒಂದೇ ಸಾಹಿತ್ಯ ಪರಂಪರೆಯ ಕಲ್ಪನೆ ಹೀಗೆ ಹಲವು ನೆಲೆಗಳಲ್ಲಿ ಆಯ್ಕೆ ಮತ್ತು ಅಲಕ್ಷ್ಯಗಳ ರಾಜಕಾರಣ ಕೆಲಸ ಮಾಡಿರುವುದನ್ನು ಕಾಣಬಹುದು. ಸಮಾಜವನ್ನು ಏಕಚಕ್ರಾಧಿಪತ್ಯಕ್ಕೆ ಒಳಪಡಿಸುವಾಗ-ಏಕರೂಪಿ ಶಿಕ್ಷಣ ವ್ಯವಸ್ಥೆಯನ್ನು ಜಾರಿ ಮಾಡಬೇಕಾದಾಗ ಇಂತಹ ಪ್ರಮಾಣೀಕರಣಗಳು ನಡೆಯುತ್ತವೆ. ಇದು ಅನಿವಾರ್ಯವಾಗಿತ್ತೇ? ಇದರಿಂದ ಆದ ಪರಿಣಾಮಗಳೇನು? ಅಡ್ಡಪರಿಣಾಮಗಳೇನು? ಇಲ್ಲಿ ಜ್ಞಾನ ಮತ್ತು ಅಧಿಕಾರಗಳ ನಡುವಿನ ಸಂಬಂಧ ಹೇಗೆ ಅಧಿಕಾರಕ್ಕಾಗಿ ದುಡಿಯುತ್ತದೆ? ಇವೆಲ್ಲ ಕೂಲಂಕುಶವಾಗಿ ಚರ್ಚಿಸಬೇಕಾದ ಪ್ರಶ್ನೆಗಳು.

**3.13. ದೇಶ ಒಂದೆ-ಭಾಷೆ ಒಂದೆ**

ಭಾಷೆ ಬೇರೆ, ದೇಶ ಒಂದೆ ನಾವು ಭಾರತೀಯರು ಎಂಬ ಭಾವ 'ಭಾರತೀಯ' ರಾಷ್ಟ್ರಕಲ್ಪನೆಯಲ್ಲಿ ಇದ್ದರೆ, ಕರ್ನಾಟಕ ರಾಷ್ಟ್ರಕಲ್ಪನೆಯಲ್ಲಿ ದೇಶ ಒಂದೇ ಭಾಷೆ ಒಂದೇ ಎಂಬ ಭಾವ ತಲೆದೋರಿದೆ. ಕನ್ನಡ ರಾಷ್ಟ್ರೀಯತೆಯ ತುಡಿತವು ಇಲ್ಲಿನ ಹಲವು ಬರಹಗನ್ನಡಗಳನ್ನು ಒಂದು ಬರಹಗನ್ನಡವಾಗಿ ರೂಪಿಸಲು ಮತ್ತು ಅಂಥ ಪ್ರಮಾಣಕನ್ನಡವನ್ನು ರೂಪಿಸಲು ತನ್ನದೇ ದಾರಿಗಳಲ್ಲಿ ಯತ್ನಿಸಿದೆ. ಮೊದಮೊದಲು ಅಚ್ಚು ಮೊಳೆಗಳನ್ನು ರೂಪಿಸಲು, ಇಲ್ಲಿನ ಭಾಷೆಯನ್ನು ಕಲಿತು ಆ ಮೂಲಕ ಧರ್ಮ ಪ್ರಚಾರ ಮಾಡಲು ಒಂದು ಬರಹ ಭಾಷೆಯ ಅಗತ್ಯವನ್ನು ಮನಗಂಡ ಕ್ರೈಸ್ತ ವಿದ್ವಾಂಸರು ಸ್ಥಳೀಯ ಪಂಡಿತರ ಒಡಗೂಡಿ ಒಂದು ವರ್ಣಮಾಲೆ, ಒಂದು ಮಾನಕ ಬರಹಗನ್ನಡವನ್ನು ರೂಪಿಸಲು ಶ್ರಮಿಸಿದ್ದಾರೆ. ಶಿಕ್ಷಣ ಕನ್ನಡವಾಗಿ ಅದು ಅನಂತರ ರೂಪಗೊಂಡಿದ್ದು ಈಗ ಇತಿಹಾಸ. ಕನ್ನಡ ವಿಮರ್ಶೆ ಕೂಡ ಎಲ್ಲ ಆಡುನುಡಿಗಳನ್ನು ಆದಷ್ಟು ಪಕ್ಕಕ್ಕೆ ಸರಿಸಿ ಒಂದೇ ಮಾನಕ ಕನ್ನಡವನ್ನು ರೂಪಿಸಿಕೊಂಡಿದೆ. (ಸಾಹಿತ್ಯದಲ್ಲಿದು ಸಾಧ್ಯವಾಗಲಿಲ್ಲ) ಪರಿಭಾಷೆಗಳ ಕಗ್ಗಾಡೆ ವಿಮರ್ಶೆಯಲ್ಲಿ ಸೃಷ್ಟಿಯಾದರೂ ವಿಮರ್ಶೆಯ ಭಾಷೆ ಮಾತ್ರ ಶಿಕ್ಷಣ ಕನ್ನಡವೇ ಆಗಿ ಪ್ರಮಾಣೀಕರಣಕ್ಕೆ ಗುರಿಯಾಗಿದೆ. ಇದನ್ನೊಂದು ಮನ್ನಣೆ ನೀಡಿದ ಭಾಷೆಯಾಗಿ ವಿಶ್ವವಿದ್ಯಾಲಯ ವಿದ್ವಾಂಸರು ಬಳಸಿ ಮಾನ್ಯಗೊಳಿಸಿದ್ದಾರೆ. ಎ.ಆರ್.ಕೃ. ವಿಮರ್ಶೆಯ ಭಾಷೆ, ಮಾಸ್ತಿ ವಿಮರ್ಶೆಯ ಭಾಷೆ, ಕಡೆಂಗೋಡ್ಲು, ಬಿ.ಎಂ.ಶ್ರೀ, ಮುಳಿಯರ ವಿಮರ್ಶೆಯ ಭಾಷೆ ಹೀಗೆ

ಹಲವು ವಿಮರ್ಶಕರ ಭಾಷೆಗಳು ಅಷ್ಟೇನೂ ಭಿನ್ನವಾಗಿರದೇ ಒಂದೇ ಪ್ರಮಾಣ ಕನ್ನಡವನ್ನು ತಮ್ಮ ಭಾಷೆಯಾಗಿ ರೂಡಿಸಿಕೊಂಡಿರುವುದನ್ನು ಕಾಣಬಹುದು. ಶೈಲಿಯಲ್ಲಿ ವ್ಯಕ್ತಿವಿಶಿಷ್ಟತೆ ಇರುವುದನ್ನು ಅಲ್ಲಗಳೆಯುವಂತಿಲ್ಲ. ಆದರೂ ಇವರೆಲ್ಲ ಬಳಸುವ ಪ್ರಮಾಣಕನ್ನಡ ಒಂದೇ ಕನ್ನಡವಾಗಿದೆ.

ಆದರೆ ಇವರಿಗೂ ಮುಂಚಿನ ಸಂಭವಕಾಲದಲ್ಲಿ ಸಮಾನತೆಗಳಿಗಿಂತ ಭಿನ್ನತೆಗಳು ಹೆಚ್ಚಾಗಿ ಕಾಣುತ್ತವೆ. ಹಿರಣ್ಯಗರ್ಭನ (1873) ಭಾಷೆಗೂ, ಕವಿಚರಿತೆಯ ಆರ್.ನರಸಿಂಹಾಚರ್ (1898) ಭಾಷೆಗೂ ಸಾಕಷ್ಟು ಅಂತರವಿದೆ. ಹಾಗೇ ದೇವಚಂದ್ರನ ಭಾಷೆಗೂ, ಎಂ.ಎಲ್.ಶ್ರೀಕಂಠೇಶಗೌಡರ ಭಾಷೆಗೂ, ಎಂ.ಎ.ರಾಮಾನುಜ ಐಯ್ಯಂಗಾರರ ಭಾಷೆಗೂ, ಮಾಸ್ತಿಯವರ ಭಾಷೆಗೂ, ಕುವೆಂಪು ಅವರ ವಿಮರ್ಶೆಯ ಭಾಷೆಗೂ ಸಾಕಷ್ಟು ವ್ಯತ್ಯಾಸ ಇದೆ. ತದನಂತರದಲ್ಲಿ ಮಾತ್ರವೆ ಬಹುರೂಪತೆಗಳಿಗಿಂತ ಏಕರೂಪತೆಯ ಲಕ್ಷಣಗಳು ಹೆಚ್ಚಾಗಲು ತೊಡಗಿವೆ. ವಿಮರ್ಶೆಯು ಕುವೆಂಪು, ಪು.ತಿ.ನ ಇಂತಹ ಒಂದೆರಡು ಅಪವಾದಗಳನ್ನು ಬಿಟ್ಟರೆ ಅನಂತರದಲ್ಲಿ ಒಂದು ಪ್ರಮಾಣ ಭಾಷೆಯನ್ನು ತನ್ನ ಭಾಷೆಯಾಗಿ ರೂಪಿಸಿಕೊಳ್ಳುವ ಕಡೆಗೆ ಚಲಿಸಿದಂತೆ ಸ್ಪಷ್ಟವಾಗಿ ಕಾಣುತ್ತದೆ.[22]

ದೇಸೆ ಬೇರೆ ಬೇರೆಯಾಗಿ ಇರುವುದರಿಂದ ಸಾವಿರ ನಾಲಿಗೆಯುಳ್ಳ ವಾಸುಕಿಯು ಕೂಡ ಬೇಸರಗೊಂಡಿದ್ದಾನೆ ಎಂದು ಅಸಂಖ್ಯ ಕನ್ನಡ ಭಾಷಾ ಪ್ರಭೇಧಗಳ ಬಗ್ಗೆ ಶ್ರೀವಿಜಯನೇ ಹೇಳಿದ್ದಾನೆ. ಅವನ ಕಾಲದಿಂದಲೂ ಒಂದು ಪ್ರಮಾಣ ಕನ್ನಡವನ್ನು ಸಾಹಿತ್ಯಭಾಷೆಯಾಗಿ ರೂಪಿಸುವ; ಒಂದು ಪ್ರಮಾಣ ಸಾಹಿತ್ಯ ಭಾಷೆಯನ್ನು ಕಟ್ಟಿಕೊಳ್ಳುವ ಪ್ರಜ್ಞೆ ನಮ್ಮ ಪರಂಪರೆಯುದ್ದಕ್ಕು ಅಂತರ್ಗತವಾಗಿ ಚಲಿಸುತ್ತ ಬಂದಿದೆ. ಆದರೆ ಅದು ಎಂದಿಗೂ ಘಟಿಸಿಲ್ಲ ಎಂಬುದು ಮಾತ್ರ ನಿಜ. ಸಂಸ್ಕೃತ ಕನ್ನಡ ಬೆರಕೆಯ ಬಗ್ಗೆ, ಬರಿ ಕನ್ನಡ ಮಾತ್ರವನ್ನೆ ಬಳಸುವ ಬಗ್ಗೆ, ಲಲಿತವಹ ಕನ್ನಡವನ್ನು ಬಳಸುವ ಬಗ್ಗೆ, ಪದ್ಯಂ ವದ್ಯಂ ಗದ್ಯಂ ಹೃದ್ಯಂ ಎಂದು ಪದ್ಯ ಗದ್ಯ ರೂಪಗಳ ಬಗ್ಗೆ ಹೀಗೆ ಹಲವು ತೆರನ ಸಂವಾದಗಳು ನಮ್ಮ ಪರಂಪರೆಯಲ್ಲಿ ನಡೆದಿವೆ. ಹಲವು ತೆರನ ಅವಸ್ಥಾಂತರಗಳಿಗೆ; ರೂಪ-ಸ್ಥಿತಿಗಳಿಗೆ; ಬೇಧಗಳಿಗೆ ನಮ್ಮ ಸಾಹಿತ್ಯ ಭಾಷೆಯು ಗುರಿಯಾಗುತ್ತಾ ಬಂದಿದೆ. ಆಧುನಿಕ ಸಂದರ್ಭದಲ್ಲು ಒಂದು ಸಾಹಿತ್ಯ ಕನ್ನಡ ಎನ್ನುವುದು ಇಲ್ಲ. ಆದರೆ ವಿಮರ್ಶೆಯ ಭಾಷೆಯಲ್ಲಿ ಸಾಹಿತ್ಯದಷ್ಟು ಬಹುಳತೆ ಕಾಣುವುದಿಲ್ಲ ಎಂಬುದು ಮಾತ್ರ ನಿಜ.

### 3.14. ಅನುಸಂಧಾನಗಳ-ಜೀರ್ಣಫಲ

ಅನುವಾದಗಳಲ್ಲದ ಆದರೆ 'ಜೀರ್ಣಫಲ' ರೂಪಿಗಳೆಂದು ಕರೆಯಬಹುದಾದ ಹಲವು ಮಾದರಿಯ ಕೃತಿಗಳು ನಮ್ಮಲ್ಲಿ ರಚಿತವಾಗಿವೆ. ಅರವಿಂದರ ವಿಚಾರಗಳು ಎಂಬ ಬೇಂದ್ರೆಯವರ ಲೇಖನ, ಮಾಸ್ತಿಯವರ ವಿಮರ್ಶೆಯ ಕಾರ್ಯ, ಇನಾಂದರರ ಪಾಶ್ಚಾತ್ಯ ಕಾವ್ಯ ಮೀಮಾಂಸೆ, ಕುವೆಂಪು ಅವರ ರಾಮಾಯಣದರ್ಶನಂ, ತೀನಂಶ್ರೀಯವರ ಭಾರತೀಯ ಕಾವ್ಯ ಮಿಮಾಂಸೆ, ಶ್ರೀಯವರ ಅಶ್ವತ್ಥಾಮನ್ ಹೀಗೆ ಹಲವು ಬರಹಗಳನ್ನು ಗಮನಿಸಿದರೆ ಇವನ್ನು ಅನುವಾದಗಳೆಂದು ಹೇಳಲಾಗುವುದಿಲ್ಲ. ಆದರೆ ಇವನ್ನು ಹಲತೆರನ ಅನುಸಂಧಾನಗಳ ಜೀರ್ಣಫಲಗಳು ಎನ್ನಬಹುದು. ಇವು ಸ್ವತಂತ್ರ ದೃಷ್ಟಿಗಳೇ ಹೌದು. ಅದರೂ ಇವುಗಳ ಹಿನ್ನೆಲೆಯಲ್ಲಿ ಅನ್ಯ ಅನುಸಂಧಾನಗಳು ಕೆಲಸ ಮಾಡಿರುವುದನ್ನು ತಳ್ಳಿ ಹಾಕಲಾಗುವುದಿಲ್ಲ. ವಿಮರ್ಶೆಯ ಮಾತ್ರ ಹಲವು ಬಗೆಯ ಅನುಸಂಧಾನಗಳ ಜೀರ್ಣಫಲವೇ ಆಗಿದೆ. ಎಂಬುದರಲ್ಲಿ ಸಂದೇಹವಿಲ್ಲ. ಭಾರತೀಯ ಕಾವ್ಯ ಮೀಮಾಂಸೆಯಲ್ಲಿನ ಧ್ವನಿತತ್ವದ ಚರ್ಚೆ ಹೇಗೆಲ್ಲಾ ಕನ್ನಡ ವಿಮರ್ಶೆಯ ಪರಂಪರೆಯನ್ನು ಪ್ರಭಾವಿಸಿದೆಯೆಂದು ತಿಳಿಯಲು, ಅಂತಹ ಪರಿಶೀಲನೆಗೆ ತೊಡಗಲು ನೋಡಿ 'ಧ್ವನಿತತ್ವ ಮತ್ತು ಕನ್ನಡ ವಿಮರ್ಶೆ' ಲೇಖನ.[23]

ಸಂಭವಕಾಲದ ಹಲವು ಸಾಹಿತ್ಯ ಸಂಬಂಧಿ ಜ್ಞಾನ ಶಾಖೆಗಳು ರೂಪಗೊಳ್ಳುವ ಹಿಂದೆ ಹಲವು ರೀತಿಯ ಪ್ರೇರಣೆ-ಪ್ರಭಾವ-ಸ್ಫೂರ್ತಿಗಳು ಇವೆ. ಇವನ್ನೆಲ್ಲ ಕ್ರೋಢೀಕರಿಸಿ ನಮ್ಮದೇ ಸ್ವೀಕಾರ ಸಿದ್ಧಾಂತಗಳನ್ನು ಇಂದು ಕಟ್ಟಿಕೊಳ್ಳಬೇಕಾದ ಅಗತ್ಯವಿದೆ. ಕನ್ನಡವು ಏನೇನನ್ನು

ಹೇಗೆಲ್ಲ ಸ್ವೀಕರಿಸಿ ಬೆಳೆಯುತ್ತ ಬಂದಿದೆ ಎಂಬ ಸ್ವೀಕರಣೆಗಳ ಅಧ್ಯಯನವೇ ಒಂದು ಪ್ರತ್ಯೇಕ ಅಧ್ಯಯನ ವಲಯ ಆಗುವಷ್ಟು ವ್ಯಾಪ್ತಿ ಈ ವಲಯಕ್ಕಿದೆ. ಆದರೆ ಈ ನಿಟ್ಟಿನಲ್ಲಿ ತಾತ್ವೀಕರಣ–ಸೈದ್ಧಾಂತೀಕರಣಗಳು ನಮ್ಮಲ್ಲಿ ಆಗಿಲ್ಲ. ಬಿಡಿ ಚರ್ಚೆಗಳು ನಡೆದಿವೆ ಅಷ್ಟೆ. ನಮ್ಮ ಸಂಭವಕಾಲದ ವಿಮರ್ಶೆಯು ಸಂಸ್ಕೃತ ಪರಂಪರೆ, ಕನ್ನಡ ಪರಂಪರೆ, ಇಂಗ್ಲಿಶ್ ಲೋಕಗಳ ಅನುಸಂಧಾನಗಳ ಜೀರ್ಣಫಲ ಎಂಬ ಕಲ್ಪಿತವೊಂದನ್ನು (ಹೈಪಾತೀಸೀಸೊಂದನ್ನು) ಸದ್ಯಕ್ಕೆ ನಂಬಬಹುದೆಂದು ಕಾಣುತ್ತದೆ.[4]

### 3.14.1. ವಿಚಾರವಾದ–ವಿಜ್ಞಾನವಾದ–ವಿಮರ್ಶೆ

ಆಧುನಿಕ ವಿಮರ್ಶೆಯು ಪ್ರಾಚೀನ ಸಾಹಿತ್ಯದ ಅನುಸಂಧಾನವಾಗಿ ಪ್ರಕಟವಾಗುತ್ತಿದ್ದಾಗ ಅದು ಪರಂಪರೆಯನ್ನು ಬೆಲೆ ಕಟ್ಟುವುದಕ್ಕಿಂತ ಪರಂಪರೆಯ ಗುಣಲಕ್ಷಣಗಳನ್ನು ದೊಡ್ಡದು ಮಾಡಿ ಹೇಳಿಕೊಳ್ಳಬೇಕಾದ ಅನಿವಾರ್ಯಕ್ಕೆ ಸಿಲುಕಿತ್ತು. ನಮಗೆ ಚರಿತ್ರೆಯ ಪ್ರಜ್ಞೆಯಿಲ್ಲವೆಂದು ಪಾಶ್ಚಾತ್ಯ ಓರಿಯೆಂಟಲ್ ಅಧ್ಯಯನವು ಆರೋಪ ಮಾಡಿತ್ತು. ಅಲ್ಲದೆ ಪುನರುಜ್ಜೀವನ ಯುಗೀನ ಪ್ರಭಾವಗಳು ನಮ್ಮಲ್ಲಿ ವಿಚಾರಪ್ರಜ್ಞೆ, ವಿಜ್ಞಾನ ಮನೋಭಾವ ಇಲ್ಲ ಎಂಬ ಕೀಳರಿಮೆಯನ್ನು ಮೂಡಿಸಿದ್ದವು. ಜೊತೆಗೆ ನಮ್ಮ ಸಾಹಿತ್ಯಸಂಸ್ಕೃತಿ ಪರಂಪರೆ ಪೂರ್ತಿ ಮತಧರ್ಮಗಳ ಮೇಲಾಟಗಳಿಂದ ಕೂಡಿದೆ ಎಂದು ನಾವೇ ಭಾವಿಸುವ ಹಾಗೆ ಆ ಮೂಲಕ ನಮ್ಮ ಪರಂಪರೆ ಬಗ್ಗೆ ನಾವೇ ಕೀಳರಿಮೆ ಮೂಡಿಸಿಕೊಳ್ಳುವ ಹಾಗೆ ಓರಿಯೆಂಟ್ ಅಧ್ಯಯನವು ನಮ್ಮನ್ನು ತಯಾರು ಮಾಡಿತ್ತು. ಹೀಗಾಗಿ ನಮ್ಮಲ್ಲಿಯೆ ನಮ್ಮ ಸಾಹಿತ್ಯ ಪರಂಪರೆ ಅಪ್ರಸ್ತುತವಾಗುವ ಭಯವಿತ್ತು. ಆ ಕಾರಣದಿಂದ ನಮ್ಮ ಪ್ರಾಚೀನ ಸಾಹಿತ್ಯದ ಅನುಸಂಧಾನವು ಸಂಗ್ರಹ ಕಾರ್ಯದ  ಮೂಲಕ ವೈಚಾರಿಕ, ನೈತಿಕ ದೃಷ್ಟಿಗಳಿಂದ ಪಠ್ಯಗಳನ್ನು ಪರಿಷ್ಕರಿಸತೊಡಗಿತು. ಪಾಶ್ಚಾತ್ಯ ವಿಚಾರವಾದ ಮತ್ತು ವಿಜ್ಞಾನವಾದಗಳು ತಾವು ಮಾತ್ರವೆ ಶ್ರೇಷ್ಠ. ವೈಚಾರಿಕತೆ, ವೈಜ್ಞಾನಿಕತೆ ಇಲ್ಲದ ಚಿಂತನೆಗಳು ಕೀಳು (ಎಂಪಿರಿಸಿಸ್ಟ್, ಪಾಸಿಟಿವಿಸ್ಟ್ ಆದ ಧೋರಣೆಗಳೇ ಭಾರತೀಯರಲ್ಲಿ ಇಲ್ಲ) ಎಂಬ ಯಜಮಾನೀಯ ದೃಷ್ಟಿಕೋನವೊಂದನ್ನು ನಮ್ಮಲ್ಲಿ ಬಿತ್ತಿದ್ದರಿಂದ ನಮ್ಮ ಸಂಭವಕಾಲದ ವಿಮರ್ಶೆ ಅನಿವಾರ್ಯವೋ ಎಂಬಂತೆ ವೈಚಾರಿಕ, ನೈತಿಕ ದೃಷ್ಟಿಗಳನ್ನು ರೂಢಿಸಿಕೊಂಡಿತು. ಪರತತ್ವ, ಪರವಿಚಾರಗಳ ಜೊತೆ ಸಹಬಾಳ್ವೆ ನಡೆಸುತ್ತ ಬಂದ ನಮ್ಮ ಸಾಹಿತ್ಯ ಪರಂಪರೆಯನ್ನು ಈ ನೆಲದ ಉತ್ಪನ್ನವಾಗಿ ಗ್ರಹಿಸದೆ ವಿಜ್ಞಾನವಾದಿ, ವಿಚಾರವಾದಿ ದೃಷ್ಟಿಗಳಿಂದ ಸಾಹಿತ್ಯವನ್ನು ನೋಡುವ ಸ್ವಭಾವ ಇಂದಿಗೂ ನಮ್ಮ ವಿಮರ್ಶೆಯಲ್ಲಿ ರಕ್ತಗತವಾಗಿ ಬೆರೆತು ಹೋಗಿದೆ. ಇದಕ್ಕೆ ಕುವೆಂಪು ಆದಿಯಾಗಿ ಆಧುನಿಕ ಲೇಖಕರೆಲ್ಲರೂ ನೀರೆರೆದಿದ್ದಾರೆ ಕೂಡ. ಕುವೆಂಪು, ಬೇಂದ್ರೆ ಅವರ ವಿಜ್ಞಾನಸೂರ್ಯ, ವಿಜ್ಞಾನ ದೀವಿಗೆ ಕಲ್ಪನೆಗಳು; ಡಿ.ವಿ.ಜಿ.ಅವರ ವಿಜ್ಞಾನಿ ಮತ್ತು ಕವಿಗಳಿಬ್ಬರೂ ಗಂಡಬೇರುಂಡದಂತೆ ಒಂದೇ ದೇಹ ಎರಡು ಮುಖಗಳು ಎಂಬ ಕಲ್ಪನೆಗಳನ್ನು ಈ ಹಿನ್ನೆಲೆಯಲ್ಲೇ ನೋಡಬಹುದು.

ಶೈಲಿ, ರಸ, ರೀತಿ, ಔಚಿತ್ಯ, ಧ್ವನಿ ಇತ್ಯಾದಿ ಮೀಮಾಂಸಾ ತತ್ವ ಪ್ರಧಾನವಾದ ಪ್ರಾಚೀನ ಸಾಹಿತ್ಯದ ಮುಖಾಮುಖಿ ಒಂದು ಕಡೆಯಿಂದ ಹೆಚ್ಚು ಹೆಚ್ಚಾಗಿ ನಡೆಯಲು ನಮ್ಮ ವಿಮರ್ಶೆಯ ಆಳದಲ್ಲಿ ಅಡಗಿರುವ ಧರ್ಮನಿರಪೇಕ್ಷ ದೃಷ್ಟಿಯೇ ಕಾರಣ. ಸಾಂಸ್ಕೃತಿಕ ವಿಚಾರಗಳಿಗಿಂತ ಸೈದ್ಧಾಂತಿಕ  ವಿಚಾರಗಳು ಹೆಚ್ಚು ಮುಖ್ಯವಾದದ್ದು ವಿಜ್ಞಾನವಾದಿ ಪ್ರಭಾವವೇ ಆಗಿದೆ. ರಾಷ್ಟ್ರೀಯತಾವಾದ, ಉದಾರ ಮಾನವತಾವಾದ, ಸುಧಾರಣಾವಾದ, ಆಧುನೀಕರಣ, ಪುನರುಜ್ಜೀವನ ಪ್ರಜ್ಞೆ, ವಿಜ್ಞಾನವಾದ, ವಿಚಾರವಾದ, ಸರ್ವೋದಯ, ಪೌರ್ವಾತ್ಯ ಅಧ್ಯಯನ ಹೀಗೆ ಹತ್ತು ಹಲವು ವಾದಗಳು, ಪ್ರಜ್ಞೆಗಳು, ಧೋರಣೆಗಳು ಆಧುನಿಕ ಸಂಸ್ಕೃತಿಯನ್ನು ಪ್ರಭಾವಿಸಿವೆ. ಈ ಪ್ರಭಾವಗಳಿಗೆ ಇಡೀ ಸಂಸ್ಕೃತಿಯೇ ಒಳಗಾಗಿರುವುದರಿಂದ ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗಳು ಇದರಿಂದ ಹೊರತಾಗಲಿಲ್ಲ. ಸಂಭವಕಾಲೀನ ಕನ್ನಡ ವಿಮರ್ಶೆಯನ್ನು ರೂಪಿಸಿರುವ ಹಲವು ವಿಚಾರಗಳಲ್ಲಿ ಇವು ಕೆಲವು.

### 3.14.2. ಧರ್ಮನಿರಪೇಕ್ಷೀಕರಣ

ವಿಜ್ಞಾನವಾದ, ವಿಚಾರವಾದ, ಸುಧಾರಣಾವಾದ, ರಾಷ್ಟ್ರೀಯತಾವಾದಗಳ ಪ್ರಭಾವದಿಂದಾಗಿ ಆಧುನಿಕ ಕನ್ನಡ ವಿಮರ್ಶೆಯು ಪಡೆದುಕೊಂಡ ಒಂದು ಮುಖ್ಯ ದೃಷ್ಟಿ ಧರ್ಮನಿರಪೇಕ್ಷೀಕರಣ. ವೈಚಾರಿಕ, ನೈತಿಕ ನೆಲೆಗಳಿಂದ ನಿಯಂತ್ರಿತವಾದ ಈ ಕಾಲದ ಬಹುಪಾಲು ವಿಮರ್ಶೆ ಧರ್ಮನಿರಪೇಕ್ಷ, ಮತಾತೀತ , ರಸನಿಷ್ಠ ಕಾವ್ಯಭಾಗಗಳನ್ನು ಶ್ರೇಷ್ಠ ಮತ್ತು ಅಧ್ಯಯನ ಯೋಗ್ಯ ಎಂದು ಭಾವಿಸಿತು. ಹಾಗೆ ಭಾವಿಸಿ ಅಂತಹ ರಸಘಟ್ಟದ ಭಾಗಗಳನ್ನು ಮಾತ್ರ ಸಂಗ್ರಹಿಸಿ, ಎಡಿಟ್ಟು ಮಾಡಿ ಹಲವಾರು ಸಂಪಾದನಾ(ಸಂಗ್ರಹ) ಕೃತಿಗಳನ್ನು ಪ್ರಕಟಿಸಿತು. ವಚನಗಳು, ಕೀರ್ತನೆಗಳು, ಕುಮಾರವ್ಯಾಸ ಭಾರತ, ಹರಿಶ್ಚಂದ್ರ ಕಾವ್ಯ ಇವುಗಳೆಲ್ಲವೂ

ಧರ್ಮನಿರಪೇಕ್ಷೀಕರಣಕ್ಕೆ ಒಳಗಾದವು. ಮಠಗಳು, ಆಶ್ರಮಗಳು, ಧಾರ್ಮಿಕ ಸಂಸ್ಥೆಗಳಲ್ಲಿ ರಕ್ಷಣೆಗೆ, ಆಚರಣೆಗೆ ಗುರಿಯಾಗಿದ್ದ ಸಾಹಿತ್ಯಗಳು ಅಕಾಡೆಮಿಕ್ ವಲಯಗಳಲ್ಲಿ ಪಠ್ಯಾನುಸಂಧಾನಕ್ಕೆ ಗುರಿಯಾಗತೊಡಗಿದವು.

ಆದಿಪುರಾಣದ ಕುರಿತ ತಮ್ಮ ಲೇಖನದಲ್ಲಿ ತೀನಂಶ್ರೀ ಧರ್ಮದ ಕಸವನ್ನು ತೆಗೆದುಹಾಕಿದರೆ ಮಿಕ್ಕಂತೆ ಅದು ಶ್ರೇಷ್ಠ ಕಾವ್ಯ ಎಂದು ಬರೆದರು. ವಚನಗಳಿಗೇ ಒಂದು ಸಾರ್ವತ್ರಿಕ ಮಾನವಧರ್ಮ ಇದೆ ಎಂದು ಎಂ.ಆರ್.ಶ್ರೀನಿವಾಸಮೂರ್ತಿ, ಹಳಕಟ್ಟಿ ಆ ಹಿನ್ನೆಲೆಯಲ್ಲಿ ವಚನ ಸಂಪಾದನೆ ಮಾಡಿದರು. ಚರಿತ್ರೆ ರಚನೆಯಲ್ಲಿನ ವಿಭಾಗೀಕರಣದ ಚರಿತ್ರೆ ನೋಡಿದರೆ ಬಸವಯುಗ-ವೀರಶೈವಯುಗ-ನಡುಗನ್ನಡ ಯುಗ, ಜೈನಯುಗ-ಪಂಪಯುಗ-ಹಳಗನ್ನಡ ಯುಗ ಇತ್ಯಾದಿಯಾದ ವಿಭಾಗೀಕರಣಗಳನ್ನು ನೋಡಿದರೆ ಈ ಕರ್ಷಣಗಳು ಚೆನ್ನಾಗಿ ಅಲ್ಲಿ ಕಾಣುತ್ತವೆ. ವಿಂಗಡಣೆ, ವ್ಯಾಖ್ಯಾನ, ಪರಿಷ್ಕರಣೆ, ಸಂಗ್ರಹ, ಶ್ರೇಷ್ಠತೆಯ ಪ್ರಶ್ನೆ ಹೀಗೆ ಹಲವು ಬಗೆಗಳಲ್ಲಿ ಈ ಕರ್ಷಣವು ಪ್ರಕಟವಾಗಿದೆ. ಧರ್ಮಬದ್ಧ ವ್ಯಾಖ್ಯಾನ, ಧರ್ಮನಿರಪೇಕ್ಷ ವಾಖ್ಯಾನಗಳೆರಡೂ ಇಲ್ಲಿ ಇದ್ದರೂ ಅವುಗಳಲ್ಲಿ ಧರ್ಮ ನಿರಪೇಕ್ಷತೆಯ ಕಡೆಗೆ ಹೆಚ್ಚು ಒಲವಿರುವುದನ್ನು ಕಾಣಬಹುದು.

### 3.14.3. ಎನ್‌ಲೈಟನ್‌ಮೆಂಟ್ ದೃಷ್ಟಿ-ವೈಟ್‌ಮ್ಯಾನ್ಸ್ ಬರ್ಡನ್ ಧೋರಣೆ

ಸಾಮಾನ್ಯರ ಸಮಾಜ ಮೌಢ್ಯದಿಂದ ತುಂಬಿದೆ, ಅದನ್ನು ನಾವು ತಿಳುವಳಿಕೆ ನೀಡಿ ಆಧುನೀಕರಿಸಬೇಕಾಗಿದೆ. ಇಡೀ ಸ್ಥಳೀಯ (ನೇಟಿವ್) ಸಮುದಾಯ ಅಜ್ಞಾನ, ಅಂಧಕಾರಗಳಿಂದ ತುಂಬಿದೆ. ಅದನ್ನು ವಿಜ್ಞಾನದ ದೀವಿಗೆಯಿಂದ ಬೆಳಗಬೇಕಾಗಿದೆ. ಅಂಥ ಜನರನ್ನು ಎಚ್ಚರಿಸಬೇಕಾದ ಹೊಣೆ (ಬರ್ಡನ್ ಅಲ್ಲ ರೆಸ್ಪಾನ್ಸಿಬಲಿಟಿ) ನಮ್ಮ ಮೇಲಿದೆ ಎಂಬ ತಿಳುವಳಿಕೆ ನಮ್ಮವರಿಗೂ ಇದ್ದಂತೆ ಕಾಣುತ್ತದೆ. ಈ ಧೋರಣೆಯು ಪರಂಪರೆಯ ಪರಿಷ್ಕರಣ ಮತ್ತು ಪ್ರಚಾರಗಳಲ್ಲಿ ಕೆಲಸ ಮಾಡಿದೆ. ವಿಮರ್ಶೆಯಲ್ಲಿ ಈ ಧೋರಣೆಯು ವಿಶ್ಲೇಷಣೆ ವ್ಯಾಖ್ಯಾನಗಳಿಗಿಂತ ವಿವರಣೆಯ ಕಡೆಗೆ ಹೊರಳಲು ಕಾರಣವಾಗಿದೆ. ಸಾಹಿತ್ಯ ಪ್ರಚಾರ ಕಾರ್ಯದಲ್ಲೂ ಸರಿಸುಮಾರು ಇದೇ ಧೋರಣೆ ಕೆಲಸ ಮಾಡಿದೆ. ಸಾಹಿತ್ಯ ತತ್ವ, ವಿಮರ್ಶಾ ಕಾರ್ಯಗಳ, ವಿಮರ್ಶಾ ತತ್ವಗಳ ನಿರ್ಮಾಣದಲ್ಲೂ ಈ ಧೋರಣೆ ಕೆಲಸ ಮಾಡಿರುವುದನ್ನು ಕಾಣಬಹುದು.

### 3.14.4. ಜಾನಪದ-ಶಿಷ್ಟ/ವಿದ್ಯಾವಂತ-ಅವಿದ್ಯಾವಂತ

ನಾಡು ಕಟ್ಟುವ, ಸಂಸ್ಕೃತಿಯನ್ನು ಪುನರುಜ್ಜೀವಿಸುವ ಕೆಲಸವನ್ನು ಕೈಗೆತ್ತಿಗೊಂಡ ಬರಹಗಾರರಲ್ಲಿ ನಾವೆಲ್ಲರು ಒಂದಾಗಿ ಇರಬೇಕು ಎಂಬ ಭಾವನಾತ್ಮಕ ಏಕತೆಯ ಭಾವ ಇದ್ದ ಹಾಗೆಯೇ ಇಡೀ ಸಮಾಜವನ್ನು ವಿದ್ಯಾವಂತ-ಅವಿದ್ಯಾವಂತ ಎಂಬ ಎರಡು ತರತಮ ಬೌದ್ಧಿಕ ವರ್ಗಗಳಾಗಿ ನೋಡುವ ದೃಷ್ಟಿಯೂ ಇದೆ. ಇದೇ ತರತಮ ದೃಷ್ಟಿ ಸಾಹಿತ್ಯ ವಲಯದಲ್ಲೂ ಬೇರೊಂದು ರೀತಿಯಲ್ಲಿ ಇದೆ. ಸಾಹಿತ್ಯವನ್ನು ಶಿಷ್ಟ ಸಾಹಿತ್ಯ ಮತ್ತು ಜಾನಪದ ಸಾಹಿತ್ಯವೆಂದು ನೋಡುವ ದೃಷ್ಟಿ ಇದು. ವಿಮರ್ಶೆಯಲ್ಲಿ ಸ್ಪಷ್ಟವಾಗಿ ಈ ಎರಡಕ್ಕೂ ಭಿನ್ನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದ. ಇದನ್ನೇ ಕೇಶವಶರ್ಮರು "ನವೋದಯದ ವಿಮರ್ಶೆಯಲ್ಲಿ 'ಕೃತಿ ಮತ್ತು ಸಹೃದಯ' ಎನ್ನುವ ಪ್ರಶ್ನೆಯನ್ನು 'ರಸಾನುಭವ' ದ ಹಿನ್ನೆಲೆಯಲ್ಲಿ ಗ್ರಹಿಸಿದರೆ ಅದಕ್ಕೊಂದು ರೀತಿಯ ಅರ್ಥ ಮಾತ್ರವೇ ದೊರೆಯುತ್ತದೆ. ಬುದ್ಧಿ ಜೀವಿವರ್ಗವೊಂದು ತನಗೆ ಬೇಕಾದ ರೀತಿಯಲ್ಲಿ ಭಾರತೀಯ ಕಾವ್ಯಮೀಮಾಂಸೆಗೆ ಪ್ರತಿಕ್ರಿಯಿಸುವ ವಿಧಾನವನ್ನು ರೂಪಿಸಿಕೊಂಡರೆ ಅಲ್ಲಿ 'ಏಕಮುಖ' ವಾದ ಓದು ಮಾತ್ರ ಸಿದ್ಧವಾಗುತ್ತದೆ. ಕನ್ನಡ ಜಾನಪದ ಕಾವ್ಯಗಳ ಚರ್ಚೆಯಲ್ಲಿ ಯಾವತ್ತಾದರೂ ಈ 'ರಸಸಿದ್ಧಾಂತ' ಸಹೃದಯ ಸಿದ್ಧಾಂತದ ಪರಿಕಲ್ಪನೆಗಳು ಮೂಡಿಬಂದಿವೆಯೇ? ನವೋದಯದ ವಿಮರ್ಶಕರು ಅನೇಕ ಸಂದರ್ಭಗಳಲ್ಲಿ ಜಾನಪದದ ಬಗೆಗೆ ಬರೆದ ಅನೇಕ ಲೇಖನಗಳಲ್ಲಿ ಶಿಷ್ಟ ಮತ್ತು ಜಾನಪದವೆಂಬ ವರ್ಗೀಕರಣವಿದ್ದು ಎರಡೂ ಪ್ರಸ್ಥಾನಗಳ ಬಗೆಗೆ ಬೇರೆ ಬೇರೆ ರೀತಿಯ ಸಾಹಿತ್ಯದ ವಿಮರ್ಶೆಯ ಪರಿಕರವನ್ನು ಬಳಸಿಕೊಂಡರು"[25] ಎಂದು ಹೇಳಿದ್ದಾರೆ.

### 3.14.5. ಪಾಂಡಿತ್ಯ-ವ್ಯುತ್ಪತ್ತಿ

ಅಕ್ಷರಸ್ಥ, ಅನಕ್ಷರಸ್ಥ ಎಂದು ಇಡೀ ಸಮಾಜವನ್ನು ಶಿಕ್ಷಣ ವ್ಯವಸ್ಥೆಯು ವಿಂಗಡಿಸಿ ಶ್ರೇಣೀಕರಿಸಿದುದು ಪುನರುಜ್ಜೀವನ ಯುಗದ ಒಂದು ಮುಖ್ಯ ವಿದ್ಯಮಾನ. ಹೊಸ ಅಸಮಾನ ವರ್ಗೀಕರಣವನ್ನು ಶಿಕ್ಷಣ ವ್ಯವಸ್ಥೆಯು ಜಾರಿಗೊಳಿಸಿದ್ದರಿಂದ ಸಾಹಿತ್ಯವನ್ನು ಕೇಳುವ, ನೋಡುವ, ಹಾಡುವ ಮುಂತಾದ ಬಹುಮುಖಿ

ಅನುಸಂಧಾನಗಳು ವಿಮರ್ಶೆಯಲ್ಲಿ ಪ್ರಾಶಸ್ತ್ಯ ಕಳೆದುಕೊಂಡದ್ದು ಈಗ ಇತಿಹಾಸ. ವಿಮರ್ಶೆ ಎಂದರೆ ವ್ಯಾಸಂಗಪೂರ್ಣ ವಿಶ್ಲೇಷಣೆ ಎಂಬ ಪಶ್ಚಿಮ ಪ್ರಣೀತ ನಿರ್ವಚನ ಸಾರ್ವತ್ರಿಕವಾಗಿದೆ. ಸಾಹಿತ್ಯದ ಬಹುಮುಖಿ ಅನುಸಂಧಾನಗಳಿಗೂ ಮತ್ತು ವಿಮರ್ಶೆಗೂ ನಡುವೆ ಕಂದರ ಹೆಚ್ಚಾಗುತ್ತ: ವಿಮರ್ಶಕ ಆಗುವವನಿಗೆ ಅಗಾಧವಾದ ಪಾಂಡಿತ್ಯ ಇರಬೇಕು; ಅವನು ಸಾಮಾನ್ಯರಿಗಿಂತ ಸಾಕಷ್ಟು ಭಿನ್ನವಾದ ಬೌದ್ಧಿಕ ಉನ್ನತಿಯನ್ನು ಹೊಂದಿರಬೇಕು; ಪ್ರಾಮಾಣಿಕವಾಗಿ, ಖಚಿತವಾಗಿ, ವಸ್ತುನಿಷ್ಠವಾಗಿ, ತರ್ಕಬದ್ಧವಾಗಿ ವಿಮರ್ಶೆ ಬರೆಯಬೇಕು ಎಂಬಂತಹ ನಂಬಿಕೆಗಳು ರೂಡಿಗೆ ಬಂದಂತೆ ಈ ಕಾಲದ ವಿಮರ್ಶೆಯನ್ನು ನೋಡಿದರೆ ತಿಳಿಯುತ್ತದೆ.

ಡಿ.ಎಲ್.ನರಸಿಂಹಾಚಾರ್, ಎ.ಆರ್.ಕೃ, ಎಸ್.ವಿ.ರಂಗಣ್ಣ, ತೀ.ನಂ.ಶ್ರೀಕಂಠಯ್ಯ, ವೀ.ಸೀ. ಇಂಥವರ ಬರವಣಿಗೆ ನೋಡಿದರೆ ಸಾಕು ಇವರೆಲ್ಲ ಪ್ರಕಾಂಡ ಪಂಡಿತರು ಎಂಬುದು ವ್ಯಕ್ತವಾಗುತ್ತದೆ. ಇವರಲ್ಲಿ ಕಲ್ಪನೆಗಳಿಲ್ಲದ, ಆಧಾರ-ನಿದರ್ಶನಗಳ ಸಮೇತ ಸಾಬೀತು ಮಾಡಬಹುದಾದ ಬೌದ್ಧಿಕ ವ್ಯಾಪಾರ ಎಂಬ ತಿಳುವಳಿಕೆಯಿಂದ ವಿಮರ್ಶೆ ಹುಟ್ಟಿ ಬೆಳೆದಂತೆ ಕಾಣುತ್ತದೆ. ವಿಮರ್ಶೆಯು ಸೃಜನಶೀಲವೋ ಸೃಜನೇತರವೋ ಎಂಬಂತಹ ಚರ್ಚೆಯೊಂದು ಚಾಲನೆಯಾಗಲು ಇಂತಹ ಬರವಣಿಗೆ-ಧೋರಣೆಗಳೇ ಕಾರಣವಾಗಿರಬಹುದು. ಹಳೆ ಕಾವ್ಯಮೀಮಾಂಸೆಗಳು, ಕೃತಿಪರೀಕ್ಷೆ ಹಾಗೂ ರಾಜಾಶ್ರಿತ ಪಂಡಿತವರ್ಗಗಳ 'ಗೋಟ್ಟಿ'ಗಳು ಕೂಡ ಇಂಥದೇ ರೀತಿಯಲ್ಲಿ ಸಾಹಿತ್ಯದ ಜೊತೆಗೆ ಅನುಸಂಧಾನ ನಡೆಸುತ್ತ ಪಂಡಿತ ಪಾಮರ ಬೇಧವನ್ನು ನಿತ್ಯ ಜಾರಿಯಲ್ಲಿ ಇರಿಸಿದಂತೆ ಆಧುನಿಕ ಕಾಲದಲ್ಲೂ ಆದುದು ಚರಿತ್ರೆಯ ಮರುಕಳಿಕೆಯಾಗಿದೆ. (ವಾಚನ, ಕೀರ್ತನೆ, ಅಧ್ಯಯನ, ಪಾರಾಯಣ ಮೊದಲಾದ ಚರ್ಚೆಗಳಿಗೆ ನೋಡಿ: ಎರಡನೆ ಅಧ್ಯಾಯ) ಈ ಕಾಲದಲ್ಲಿ ಸಾಹಿತ್ಯದ ಬಹುಮುಖಿ ಅನುಸಂಧಾನಗಳ ಬದಲಿಗೆ ವಿಶ್ಲೇಷಣೆ; ದೋಷನಿರ್ಣಯ; ಸ್ಥಾನ ನಿರ್ಣಯ; ವಸ್ತು-ಆಶಯಗಳ ಬಗೆಗೆ ತೀರ್ಪು ನೀಡುವ ನ್ಯಾಯ ನಿರ್ಣಯ ಧಾಟಿಗಳು ವಿಮರ್ಶೆಗೆ ತಗಲಿಕೊಂಡುವು. ಸಾಹಿತ್ಯದ ಪಾಂಡಿತ್ಯಪೂರ್ಣವಾದ ವಿಶ್ಲೇಷಕ ಶಕ್ತಿ ಇಲ್ಲದ ಸಾಹಿತ್ಯದ ಅನುಸಂಧಾನವು ವಿಮರ್ಶೆ ಅಲ್ಲ ಎಂಬ ನಂಬಿಕೆಯು ವ್ಯಾಪಕವಾಗಿ ಶಿಕ್ಷಿತ ವಲಯದಲ್ಲಿ ಈ ಕಾಲದಲ್ಲಿ ಬೆಳೆಯುತ್ತ ಬಂದಿತು. ವಿಮರ್ಶೆಯ ಉದ್ದೇಶ, ಕಾರ್ಯ, ಸ್ವರೂಪ, ವಿಧಾನ, ತಾತ್ವಿಕತೆಗಳಲ್ಲಿ ಪರಂಪರೆಗಿಂತ ಭಿನ್ನವಾದ ಪಲ್ಲಟಗಳು ಈ ಕಾಲದಲ್ಲಿ ಸಂಭವಿಸಿದವು. ಸಂಭವಕಾಲದಲ್ಲಿ ವಿಮರ್ಶೆಯಲ್ಲಿ ಆದ ಬಹು ಗುರುತರವಾದ ಬದಲಾವಣೆ ಇದು.

ನಮ್ಮ ಪ್ರಾಚೀನರಲ್ಲಿ ವಿಮರ್ಶೆಯು ಇರಲಿಲ್ಲ ಎಂಬ ನಂಬಿಕೆಯೊಂದು ಈ ಕಾಲದಲ್ಲಿ ಚಾಲ್ತಿಗೆ ಬಂದಿತು. ಆಧುನಿಕ ವಿಮರ್ಶೆಯ ಕಾರ್ಯ-ಸ್ವರೂಪ-ವಿಧಾನಗಳನ್ನೆ ಅಂತಿಮವೆಂದು ಭಾವಿಸಿ ಸಂಭವಕಾಲೀನರು ನಮ್ಮ ವಿಮರ್ಶೆಯ ಪ್ರಾಗ್ರೂಪಗಳನ್ನು, ಸಾಹಿತ್ಯದ ಅನುಸಂಧಾನಗಳನ್ನು ತಮ್ಮದೇ ಆದ 'ವಿಮರ್ಶೆ' ಕಲ್ಪನೆಯ ಆಚೆಗೆ ಇಟ್ಟರು. ಮಾಸ್ತಿಯವರು ವಿಮಶೆಯ ಕಾರ್ಯ ಎಂಬ ತಮ್ಮ ಬರಹದಲ್ಲಿ ಪ್ರಾಚೀನರಲ್ಲಿ ವಿಮರ್ಶೆಯು ಇರಲಿಲ್ಲ ಎಂದು ನಂಬಿ ಹಾಗೆ ಇರದುದಕ್ಕೆ ಕಾರಣಗಳೇನು ಎಂದು ಅನ್ವೇಷಿಸಿದ್ದಾರೆ. ಇದನ್ನೇ ಮುಂದುವರಿಸಿದಂತೆ ಜಿ.ಎಸ್.ಶಿವರುದ್ರಪ್ಪನವರೂ ಕೂಡ ತಮ್ಮ ಕಾವ್ಯಾರ್ಥ ಚಿಂತನದಲ್ಲಿ ಈ ಬಗ್ಗೆ ಇನ್ನಷ್ಟು ಚರ್ಚೆ ನಡೆಸಿದ್ದಾರೆ. ಕಾರಣಗಳನ್ನು ಅನ್ವೇಷಿಸುವ ಕಾರಣ ಮೀಮಾಂಸೆಯನ್ನು ಕಟ್ಟಿದ್ದಾರೆ.

### 3.15. ಪರಂಪರೆಯ ಪ್ರಶಂಸೆ ಮತ್ತು ನಿಷ್ಠುರ ವಸ್ತುನಿಷ್ಠತೆ

ಸಂಭವಕಾಲದಲ್ಲಿ ನಿರ್ವಸಾಹತೀಕರಣ ಪ್ರಜ್ಞೆ ಮತ್ತು ಅನ್ಯಗಾಳಿ ಬೆಳಕುಗಳನ್ನು ಹೀರಿ ಸತ್ವಶಾಲಿಯಾಗುವ ಹಂಬಲವು ಆತ್ಮರತಿ ಮತ್ತು ಆತ್ಮವಿಮರ್ಶೆಗಳ ರೂಪದಲ್ಲಿ ಪ್ರಕಟಗೊಂಡಿತು. ಸಾಹಿತ್ಯ ವಿಮರ್ಶೆಯಲ್ಲಿ ಈ ಎರಡೂ ರೂಪಗಳು ಸಹಬಾಳ್ವೆ ನಡೆಸಿರುವುದನ್ನು ಕಾಣಬಹುದು. ಒಂದೇ ವ್ಯಕ್ತಿಯಲ್ಲಿ ಈ ಎರಡೂ ರೂಪಗಳು ಕಾಣಿಸಿಕೊಂಡಾಗ ಇವುಗಳ ಮಿಳಿತ ರೂಪವು ಪರಿಷ್ಕರಣ ಪ್ರಜ್ಞೆಯಾಗಿ ಕುವೆಂಪು ಅವರಲ್ಲಿ ಪ್ರಕಟಗೊಂಡರೆ ದೇಸಿ ಪುನರುತ್ಥಾನ ಪ್ರಜ್ಞೆಯಾಗಿ ಬೇಂದ್ರೆಯವರಲ್ಲಿ ಪ್ರಕಟಗೊಂಡಿದೆ. ಬಿ.ಎಂ.ಶ್ರೀ ಮಾಸ್ತಿ ಅಂಥವರ ವಿಮರ್ಶೆಯಲ್ಲಿ ಸ್ವೀಕರಣ ಪ್ರಜ್ಞೆಯಾಗಿ ಪ್ರಕಟಗೊಂಡಿದೆ. ಅನ್ಯಸ್ವೀಕರಣವು ಆತ್ಮವಿಮರ್ಶೆಯಂತೆಯೂ ನಿರ್ವಸಾಹತೀಕರಣವು ಆತ್ಮರತಿಯಂತೆಯೂ ಪ್ರಕಟಗೊಂಡಿರುವುದು ಮೇಲ್ನೋಟಕ್ಕೆ ಕಾಣುತ್ತದಾದರೂ ಇದೊಂದು ಸರ್ವಸಾಮಾನ್ಯ ವಿನ್ಯಾಸವೆಂದು ನಾವು ತಿಳಿಯಬೇಕಿಲ್ಲ. ಆದರೆ ಎಸ್.ವಿ.ರಂಗಣ್ಣನವರಲ್ಲಿ ನಿರ್ವಸಾಹತೀಕರಣದ ಯಾವ ಲಕ್ಷಣಗಳೂ ಕಾಣಿಸಿಕೊಳ್ಳುವುದಿಲ್ಲ. ಆದರೂ

ಆತ್ಮವಿಮರ್ಶೆ ಮಾತ್ರ ಹೆಚ್ಚು ಪ್ರಕಟವಾಗಿದೆ. ಭಾರತೀಯ ಕಾವ್ಯಮೀಮಾಂಸಾ ಮಾದರಿಗೆ ತಮ್ಮದೇ ಶೈಲಿ ಸಿದ್ಧಾಂತ ಮಾದರಿಯೊಂದನ್ನು ಕಾಣಿಕೆಯಾಗಿ ನೀಡಿರುವ ಎಸ್.ವಿ.ರಂಗಣ್ಣ ಕೃತಿನಿಷ್ಠ ವಿಮರ್ಶೆಯ ಅತ್ಯುತ್ತಮ ವಿಮರ್ಶಾ ಮಾದರಿಯನ್ನು ತಮ್ಮ ಬರವಣಿಗೆಯಲ್ಲಿ ರೂಪಿಸಿದ್ದಾರೆ. ಹೊನ್ನಶೂಲ ಪುಸ್ತಕದ 'ಪ್ರಶಂಸೆ ಸಾಕೋ ಪರೀಕ್ಷೆ ಬೇಕೋ' ಲೇಖನದಲ್ಲಿ ಮತ್ತು ಕಾಳಿದಾಸನ ಕುರಿತ ಕವಿಕುಲಗುರು ಲೇಖನದಲ್ಲಿ ನಮ್ಮ ವಿಮರ್ಶೆಯು ಹೆಚ್ಚು ವಸ್ತುನಿಷ್ಠವಾಗಿ ಇರಬೇಕಾಗಿರುವ ಬಗ್ಗೆ ಎಚ್ಚರ ನೀಡುತ್ತಾರೆ. 30ರ ದಶಕದಲ್ಲಿ ವಿ.ಸೀ ಬರೆದ ಕವಿಕಾವ್ಯದೃಷ್ಟಿ, ಕಲಾಪ್ರಪಂಚ ಇಂಥ ಲೇಖನಗಳಲ್ಲಿ 'ಸಾಹಿತ್ಯ ವಿಮರ್ಶೆಯಲ್ಲಿ ಅರ್ಥ ಮತ್ತು ಮೌಲ್ಯ' ಇಂಥ (1961) ಕೃತಿಯಲ್ಲಿ; ಕೃತಿಯನ್ನು ಅರ್ಥಮಾಡಿಕೊಳ್ಳುವುದು–ಅನುಭವಿಸುವುದು–ವ್ಯಾಖ್ಯಾನಿಸುವುದು–ಬೆಲೆಕಟ್ಟುವುದು–ಮೌಲ್ಯಮಾಪನ ಮಾಡುವುದು ಹೀಗೆ ವಿಮರ್ಶೆಯು ಬೆಳೆಯಬೇಕಾದ ನೆಲೆಗಳನ್ನು ಗುರ್ತಿಸಿದ್ದಾರೆ.

"19ನೆಯ ಶತಮಾನದ ಅಂತ್ಯ ಮತ್ತು 20ನೆಯ ಸತಮಾನದ ಆರಂಭದ ಕಾಲ ಧರ್ಮವನ್ನು ಭಾರತ ತನ್ನನ್ನು ತಾನು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದ ಸ್ವಯಂ ಜಾಗೃತಿಯ ಕಾಲಘಟ್ಟವೆಂದು ಗುರುತಿಸಬಹುದು....ಭಾರತದ ದೀರ್ಘ ಇತಿಹಾಸ, ಸಂಸ್ಕೃತಿಗಳ ಸ್ಮೃತಿಯ ಬಗ್ಗೆ ಸ್ವಯಂಪ್ರಜ್ಞೆಯುಳ್ಳ ಚಿಂತಕರ, ಸಾಹಿತಿಗಳ ಒಂದು ವರ್ಗ ಭಾರತವನ್ನು ರೋಮಾಂಚನದಿಂದ, ವಿಸ್ಮಯದಿಂದ ಆತ್ಮರತಿಯಿಂದ ನೋಡುತ್ತಿದ್ದರೆ, ಜತೆಜತೆಗೇ ಇನ್ನೊಂದು ವರ್ಗ ಭಾರತವನ್ನು ಹಸಿವು, ರೋಗ, ಅಜ್ಞಾನ, ಧಾರ್ಮಿಕ ಅಂಧಶ್ರದ್ಧೆಗಳ ಕೂಪವೆಂದು ಗುರುತಿಸುತ್ತಾ ಅಸಹ್ಯಪಟ್ಟುಕೊಂಡು ಆತ್ಮಾವಹೇಳನದ ಮೂಲಕ ನೋಡುತ್ತಿತ್ತು....ಆತ್ಮರತಿ, ಆತ್ಮಾವಹೇಳನಗಳನ್ನು ಜತೆಜತೆಗೇ ಗ್ರಹಿಸುವ ರೀತಿಯನ್ನು ಆ ಕಾಲದ ಪ್ರಮುಖ ಚಿಂತಕರಲ್ಲಿ, ಸಾಹಿತಿಗಳಲ್ಲಿ ನಾವು ಗಮನಿಸಬಹುದು"[27] ಹೀಗಾಗಿ ಈ ಕಾಲದ ವಿಮರ್ಶೆಯು ಪ್ರಶಂಸೆಯ ಜೊತೆಗೆ ನಿಷ್ಠುರ ವಸ್ತುನಿಷ್ಠತೆಯನ್ನು ಮೈಗೂಡಿಸಿಕೊಳ್ಳುವ ಹಂಬಲವನ್ನು ಪ್ರಕಟಿಸಿದ ಕಾಲವಾಗಿದೆ.

### 3.16. ವಿಧಾನ–ಪರಿಕರ–ಪರಿಕಲ್ಪನೆಗಳ ಹುಡುಕಾಟ

ಹೊಸ ಸಾಹಿತ್ಯ ಸೃಷ್ಟಿಯ ವಿಧಾನ ಮತ್ತು ಪರಿಕರಗಳ ಹುಡುಕಾಟ ಈ ಕಾಲಮಾನದಲ್ಲಿ ತೀವ್ರವಾಗಿ ನಡೆಯಿತು. ಹಾಗೇ ವಿಮರ್ಶೆಯ ತತ್ವ, ಪರಿಕರಗಳ ಮತ್ತು ಪರಿಕಲ್ಪನೆಗಳ ಹುಡುಕಾಟ ಕೂಡ ಈ ಕಾಲದ ವಿಮರ್ಶೆ ಮತ್ತು ಸಾಹಿತ್ಯಗಳಲ್ಲಿನ ಒಂದು ಮುಖ್ಯ ಚಹರೆಯಾಗಿತ್ತು. 1. ಕುವೆಂಪು ಅವರ ಭಾಷಾ ರೂಪಗಳ ಹುಡುಕಾಟ, ವಿಮರ್ಶಾ ಪರಿಕಲ್ಪನೆಗಳ ಹುಡುಕಾಟ. 2. ಮಾಸ್ತಿಯವರ ವಿಮರ್ಶೆಯ ಕಾರ್ಯದ ಚರ್ಚೆ, ಸಾಹಿತ್ಯ ತತ್ವಗಳ ಚರ್ಚೆ. 3. ಡಿ.ವಿ.ಜಿ.ಯವರ ಜೀವನ ಸೌಂದರ್ಯ ಮತ್ತು ಸಾಹಿತ್ಯ, ಸಾಹಿತ್ಯ ಶಕ್ತಿ. 4. ಶ್ರೀಯವರ ಹೊಸ ಸಾಹಿತ್ಯ ರೂಪಗಳ ಹುಡುಕಾಟ. 5. ಬೇಂದ್ರೆಯವರ ಹೊಸ ರಸಗಳ ಚರ್ಚೆ ಹಾಗೂ ಅವಿದ್ಧ ಮತ್ತು ಸುಕುಮಾರ ನಾಟಕಗಳ ಪರಿಕಲ್ಪನೆ. 6. ರಂಗಣ್ಣ ಅವರ ಶೈಲಿ, ಪಾಶ್ಚಾತ್ಯ ಗಂಭೀರ ನಾಟಕಗಳು ಮತ್ತು ಕಾಳಿದಾಸನ ನಾಟಕಗಳ ವಿಮರ್ಶೆಯ ಸಂದರ್ಭದಲ್ಲಿ ಬಳಸಿದ ಕೃತಿನಿಷ್ಠ ವಿಧಾನಗಳ ಅನ್ವೇಷಣೆ. 7. ತೀ.ನಂ.ಶ್ರೀಯವರ ಧ್ವನಿ, ರಸ, ಔಚಿತ್ಯಾದಿಗಳ ಚರ್ಚೆ, ಕನ್ನಡದಲ್ಲಿ ಹೊಸಮಟ್ಟುಗಳ ಅವಶ್ಯಕತೆ (1931) ಹೊಸ ಛಂದಸ್ಸಿನ ಲಯಗಳು (1931) ಹೀಗೆ ಎಲ್ಲವೂ ಆಧುನಿಕ ವಿಧಾನ, ಪರಿಕರ, ಪರಿಕಲ್ಪನೆಗಳ ಹುಡುಕಾಟವೇ ಆಗಿವೆ.[28]

ಹೊಸ ಸಾಹಿತ್ಯ ಹೇಗಿರಬೇಕೆಂಬ ತತ್ವಚರ್ಚೆ ಮತ್ತು ಅಂಥ ಹೊಸ ಸಾಹಿತ್ಯ ಪರಂಪರೆಯ ನಿರ್ಮಾಣ ಕಾರ್ಯ, ಹೊಸ ವಿಮರ್ಶೆಯು ಹೇಗಿರಬೇಕೆಂಬ ತತ್ವ ಚರ್ಚೆ ಮತ್ತು ಅಂಥ ಹೊಸ ವಿಮರ್ಶೆಯ ಸೃಷ್ಟಿ ಕಾರ್ಯ, ಹೀಗೆ ಈ ಎರಡೂ ಕಾರ್ಯಗಳು ಮತ್ತು ನಿಲುವುಗಳು ನವೋದಯ ಕಾಲದ ಬಹುತೇಕ ಎಲ್ಲಾ ಪ್ರಮುಖ ಲೇಖಕರಲ್ಲೂ ಕಂಡುಬರುತ್ತವೆ. ಮೊದಲನೆಯದು ಸೃಜನಶೀಲ ಕೃತಿಗಳಲ್ಲಿಯೂ, ಎರಡನೆಯದು ಚಿಂತನಶೀಲ ಕೃತಿಗಳಲ್ಲಿಯೂ ಹೆಚ್ಚಾಗಿ ಕಂಡುಬರುತ್ತದೆ. ಹಾಗೇ ಈ ಎರಡೂ ಕಾರ್ಯಗಳೂ ಎರಡೂ ರೀತಿಯ ಬರಹಗಳಲ್ಲಿ ಬೆರೆತು ನಡೆದಿರುವುದೂ ಉಂಟು. ರಂ.ಶ್ರೀ ಮುಗಳಿಯವರ ಸರಸ್ವತಿ ತತ್ವ, ಕಡೆಂಗೋಡ್ಲು ಅವರ ಕವಿಕಾವ್ಯ ತತ್ವ ಮೀಮಾಂಸೆ, ಕೆ.ಕೃಷ್ಣಮೂರ್ತಿ, ಜಿ.ಎಸ್.ಶಿವರುದ್ರಪ್ಪನವರಲ್ಲಿ ಕಾವ್ಯತತ್ವ ಚರ್ಚೆಯಾಗಿ ಬೆಳೆದು ಇಂಥ ವಿಮರ್ಶೆಯ ಮಾರ್ಗವೊಂದು ನಿರ್ಮಾಣವಾಗಬಹುದಾದ ಲಕ್ಷಣಗಳು ನಮ್ಮಲ್ಲಿ ತಲೆದೋರಿವೆ. ಆಧುನಿಕ ಕವಿತೆಯ ಮೂಲಕ ಕಾವ್ಯತತ್ವ ಪ್ರಕಟವಾಗಿರುವ ಬಗೆಯನ್ನೇ ಒಂದು ಪ್ರತ್ಯೇಕ ಅಧ್ಯಯನವಾಗಿ

ನಡೆಸುವಷ್ಟು ಈ ಕಾವ್ಯರೂಪಿ ಕಾವ್ಯತತ್ವ ಮಂಡನೆ ನಮ್ಮಲ್ಲಿ ಬೃಹದಾಕಾರವಾಗಿ ಬೆಳೆದಿದೆ ಕೂಡ. ಅಷ್ಟೇ ಅಲ್ಲ ಆಧುನಿಕ ಸಂದರ್ಭದಲ್ಲಿ ಎಲ್ಲ ಪ್ರಕಾರಗಳಿಗೂ ಪ್ರಕಾರತತ್ವಗಳು ಪ್ರಕಟವಾಗಿವೆ ಕೂಡ.

**3.17. ಪರಿಕರ ವಿಮರ್ಶೆ**

ಹೊಸ ವಿಮರ್ಶಾ ಪರಿಕರಗಳ ಶೋಧವು ನಡೆದಷ್ಟೇ ತೀವ್ರವಾಗಿ ಸಾಹಿತ್ಯ ಪರಿಕರಗಳ ಕುರಿತ ವಿಮರ್ಶೆಯೂ ಈ ಕಾಲದಲ್ಲಿ ಭರಾಟೆಯಿಂದ ನಡೆದಿದೆ. ರಂಗಣ್ಣನವರ ಶೈಲಿ, ತೀನಂಶ್ರೀಯವರ ವಾಸ್ತವವಾದದ ಪರೀಕ್ಷೆ ಹಾಗೂ ಛಂದಸ್ಸಿನ ಕುರಿತಾದ ನಿಖರವಾದ ವಿವೇಚನೆಗಳು ಹೀಗೆ ಇದಕ್ಕೆ ಹಲವು ಉದಾರಣೆಗಳನ್ನು ನೀಡಬಹುದು. 1. ಕಾವ್ಯದ ಧ್ವನಿಶಕ್ತಿ, ರಸಾನುಭವಗಳ ಹಿನ್ನೆಲೆಯಲ್ಲಿ ಪ್ರಾಚೀನ ಸಾಹಿತ್ಯವನ್ನು ವಿಮರ್ಶಿಸುವ ಜೊತೆ ಜೊತೆಗೆ 2. ಹೊಸಛಂದೋ ಪ್ರಕಾರಗಳ ವಿಮರ್ಶೆಯು 3. ಹಳೇ ಛಂದಸ್ಸುಗಳ ನಿರ್ವಚನ-ವ್ಯಾಖ್ಯಾನವೂ ಆ ಮೂಲಕ 4. ಛಂದಸ್ಸು ಶಾಸ್ತ್ರವೊಂದನ್ನು ಅಧ್ಯಯನ ಶಿಸ್ತಾಗಿ ರೂಪಿಸುವ ಕೆಲಸವೂ ಹಾಗೇ 5. ಕನ್ನಡ-ಸಂಸ್ಕೃತ-ಇಂಗ್ಲಿಷ್ ಛಂದಸ್ಸುಗಳ ವಿಂಗಡಣಾ ಕಾರ್ಯವೂ ಜೋರಾಗಿ ಈ ಕಾಲದಲ್ಲಿ ನಡೆದಿದೆ. ಒಟ್ಟಾರೆ ಛಂದಸ್ಸಿನ ಕುರಿತಾದ ಚರ್ಚೆ ಈ ಕಾಲದ ವಿಮರ್ಶೆಯ ಒಂದು ಬಹುಮುಖ್ಯವಾದ ಅಂಗವಾಗಿತ್ತು. (ಆದರೆ ಇಂದಿನ ವಿಮರ್ಶೆಯಲ್ಲಿ ಇದು ಹಿನ್ನೆಲೆಗೆ ಸರಿದಿದೆ)

ಕಾವ್ಯಶಾಸ್ತ್ರ ಪರಿಭಾಷೆ, ಛಂದಸ್ಸು, ಅಲಂಕಾರ, ಮೀಮಾಂಸೆ, ಭಾಷೆ, ವ್ಯಾಕರಣ ಹೀಗೆ ಹಲವು ಅಧ್ಯಯನ ವಲಯಗಳಿಗೆ ಸಂಬಂಧಿಸಿದ ವಿಚಾರಗಳನ್ನು ಒಂದೇ ಕಡೆ ನಿರ್ವಚಿಸಿಕೊಳ್ಳುವ ಕಾರ್ಯ ಕೂಡ ಶೈಕ್ಷಣಿಕ ಅಗತ್ಯವಾಗಿ ಈ ಕಾಲದಲ್ಲಿ ಸಂಭವಿಸಿದೆ. ಕನ್ನಡ ಕೈಪಿಡಿಗಳ ರಚನೆ ಇದಕ್ಕೆ ಉದಾಹರಣೆ. ಇದನ್ನು ಕೈಪಿಡಿ ರೂಪಿ ವಿಮರ್ಶಾ ಮಾರ್ಗ ಎಂದರೂ ನಡೆಯುತ್ತದೆ. ಇದು ಆಧುನಿಕ ವಿಮರ್ಶೆಯ ಆದಿ ಲಕ್ಷಣಗಳಲ್ಲೊಂದು. ಇವತ್ತಿಗೂ ಈ ಮಾರ್ಗದಲ್ಲಿ ಶಿಕ್ಷಣ ವ್ಯವಸ್ಥೆಯಲ್ಲಿ ಹಲವು ಕೃತಿಗಳು ರಚನೆಯಾಗುತ್ತಿವೆ.

**3.17.1. ಸಾಹಿತ್ಯ ತತ್ವ ಮತ್ತು ವಿಮರ್ಶೆಯ ತತ್ವ**

ಹೊಸ ಸಾಹಿತ್ಯದ ಸ್ವರೂಪ, ಹೊಸ ವಿಮರ್ಶೆಯ ಸ್ವರೂಪ ಹೇಗಿರಬೇಕೆಂಬ ಬಗ್ಗೆ ಹಲವಾರು ಜನ ತಮ್ಮದೆ ಚಿಂತನೆಗಳನ್ನು ಮಂಡಿಸಿದ್ದಾರೆ. ಕನ್ನಡ ಸಂಸ್ಕೃತ ಅಭಿಜಾತ ಪರಂಪರೆ, ಎನ್ಲೈಟನ್‌ಮೆಂಟ್ ಜ್ಞಾನಶಾಸ್ತ್ರ, ಇಂಗ್ಲಿಶ್ ಸಾಹಿತ್ಯ ಲೋಕ ಇವೆಲ್ಲವುಗಳಿಂದ ಹೊಸ ಸಾಹಿತ್ಯದ ಪುನರುಜ್ಜೀವನ ಸಂಭವಿಸಬೇಕೆಂದು ಬಯಸಿ ಕಾರ್ಯಶೀಲರಾಗಿದ್ದಾರೆ. 'ಕನ್ನಡ ಭಾಷೆಯು ಇಂಗ್ಲಿಶ್ ಭಾಷೆಯಂತೆ ಬೆಳೆಯಬೇಕು. ಕನ್ನಡ ಸಾಹಿತ್ಯವು ಇಂಗ್ಲಿಶ್ ಸಾಹಿತ್ಯದಂತೆ ಬೆಳೆಯಬೇಕು' ಎಂಬ ಬಿ.ಎಂ.ಶ್ರೀ ಮಾದರಿ ಕನಸಿನಂತೆ ಕನ್ನಡವನ್ನು ಕಟ್ಟಲು ಹಲವು ಜನ ಯತ್ನಿಸಿದ್ದಾರೆ. ಷೇಕ್ಸ್‌ಪಿಯರ್, ಬ್ರಾಡ್ಲೆ, ಮ್ಯಾಥ್ಯೂ ಆರ್ನಾಲ್ಡ್, ಐ.ಎ.ರಿಚರ್ಡ್ಸ್, ಎಫ್.ಆರ್.ಲೀವಿಸ್ ಇಂಥವರ ಸಾಹಿತ್ಯ ಮತ್ತು ಚಿಂತನೆಗಳು ನಮ್ಮವರನ್ನು ಪ್ರಭಾವಿಸಿವೆ. ಕುವೆಂಪು, ಬಿ.ಎಂ.ಶ್ರೀ, ತಿ.ನಂ.ಶ್ರೀ, ಮಾಸ್ತಿ, ಎ.ಆರ್.ಕೃ ಮೊದಲಾದ ಮುಖ್ಯ ಆಧುನಿಕ ವಿಮರ್ಶಕರೆಲ್ಲರು ಒಂದಲ್ಲ ಒಂದು ರೀತಿಯಲ್ಲಿ ತಮ್ಮದೆ ಆದ ಸಾಹಿತ್ಯ ತತ್ವವನ್ನು, ವಿಮರ್ಶಾ ತತ್ವವನ್ನು ಸೃಷ್ಟಿಸಿದ್ದಾರೆ. ಹೀಗಾಗಿ ಹೊಸ ಸಾಹಿತ್ಯವು, ವಿಮರ್ಶೆಯು ಹೇಗಿರಬೇಕೆಂಬ ಜಿಜ್ಞಾಸೆ ಆಧುನಿಕ ವಿಮರ್ಶೆಯ ಒಂದು ಮುಖ್ಯ ಭಾಗವಾಗಿದೆ.

1. ಸಾಹಿತ್ಯ ತತ್ವದ ಚರ್ಚೆಯಲ್ಲಿ ಪ್ರಕಟವಾಗುವ ತತ್ವಕ್ಕೂ ಮತ್ತು ಸಾಹಿತ್ಯ ಸೃಷ್ಟಿಯಲ್ಲಿ ಪ್ರಕಟವಾಗುವ ತತ್ವಕ್ಕೂ ಕೆಲವೊಮ್ಮೆ ಅಂತರ ಇರುವುದು ಉಂಟು. ಹಾಗೆಯೇ 2. ವಿಮರ್ಶೆಯ ತತ್ವ ಚರ್ಚೆಯಲ್ಲಿ ಪ್ರಕಟವಾಗುವ ತತ್ವಕ್ಕೂ ಸ್ವತಃ ವಿಮರ್ಶಾ ಕೃತಿ(ಲೇಖನ)ಗಳು ಬಳಸುವ ತತ್ವಗಳಿಗೂ ವ್ಯತ್ಯಾಸವಿರುವ ಸಾಧ್ಯತೆ ಇದೆ. 3. ಅದೇ ರೀತಿ ವಿಮರ್ಶೆ-ಮೀಮಾಂಸೆ ಬರಹಗಳಲ್ಲಿ ಪ್ರತಿಪಾದಿಸುವ ತತ್ವಕ್ಕೂ ಮತ್ತು ಆಚಾರಕ್ಕೂ ವ್ಯತ್ಯಾಸಗಳಿರುವ ಸಾಧ್ಯತೆಗಳಿವೆ. ಉದಾ: "ಕುವೆಂಪು ಅವರ ಸಾಹಿತ್ಯ ತತ್ವಗಳು ಅವರದೇ ಪ್ರಾಯೋಗಿಕ ನೆಲೆಯಲ್ಲಿ ಸಫಲವಾಗಲಿಲ್ಲ........ಪ್ರತಿಕೃತಿ ದೃಷ್ಟಿಯ ಅಭಿವ್ಯಕ್ತಿ ಪ್ರಥಮದರ್ಜೆಯದಲ್ಲವೆಂದು ಇವರು ವಾದಿಸುತ್ತಾರಾದರೂ ಇವರ ಕಥಾಸಾಹಿತ್ಯ ಈ ವಾದವನ್ನು ನಿರಾಕರಿಸುತ್ತದೆ." ಹಾಗೆಯೇ "ವಿಮರ್ಶಕನೊಬ್ಬ ಪೂರ್ವನಿಶ್ಚಿತ ತಾತ್ವಿಕ ಚೌಕಟ್ಟಿನೊಂದಿಗೆ ಕೃತಿಯನ್ನು ಪ್ರವೇಶಿಸುವುದನ್ನು ಕುವೆಂಪು ಒಪ್ಪುವುದಿಲ್ಲ. ಆದರೆ ಸ್ವತಃ ತಮ್ಮ ವಿಮರ್ಶೆಗಳಲ್ಲಿ ಇವರು ಇದೇ ಕೆಲಸವನ್ನು ಮಾಡಿದ್ದಾರೆ." ಇದೇ ರೀತಿ ಮಾಸ್ತಿಯವರ 'ವಿಮರ್ಶೆಯ ಕಾರ್ಯ' ಕೃತಿಯ ತಾತ್ವಿಕತೆಗೂ ಮತ್ತು ಅವರ ಕತೆಗಳಲ್ಲಿ ಬಿಂಬಿತವಾಗುವ ಸಾಹಿತ್ಯ ತತ್ವಕ್ಕೂ ಇರುವ ಸಂಬಂಧ ನೋಡಿದರೂ ಈ ಅಂಶ ಸ್ಪಷ್ಟವಾಗುತ್ತದೆ. ತೀ.ನಂ.ಶ್ರೀ ಭಾರತೀಯ ಕಾವ್ಯಮೀಮಾಂಸೆ ಸಿದ್ಧಾಂತಗಳನ್ನು ತಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಬಳಸುತ್ತಾರಾ ಎಂದು ನೋಡಿದರೂ

ಇದು ಸ್ಪಷ್ಟವಾಗುತ್ತದೆ. ಇದರ ಅರ್ಥ ಆಧುನಿಕ ವಿಮರ್ಶೆಯು ಸಂಭವಗೊಳ್ಳುತ್ತಿದ್ದ ಕಾಲದ ವಿಮರ್ಶಾತತ್ವಗಳಿಗೂ ವಿಮರ್ಶೆಯ ಆಚರಣೆಗೂ ಹಾಗೇ ವಿಮರ್ಶಾತತ್ವ ಮತ್ತು ಸಾಹಿತ್ಯಗಳಿಗೂ ಮತ್ತು ಸಾಹಿತ್ಯ ರಚನೆಗೂ ಒಂದಕ್ಕೊಂದಕ್ಕೆ ಸಂಬಂಧವೇ ಇರಲಿಲ್ಲ ಎಂದೇನೂ ಅಲ್ಲ. ಈ ರೀತಿಯ ಒಡಕುಗಳು ಕೂಡ ಇಲ್ಲಿ ಇದ್ದವು ಎಂಬುದು ಮಾತ್ರ ನಿಜ.

ತೀ.ನಂ.ಶ್ರೀ.ಯವರ ಭಾರತೀಯ ಕಾವ್ಯಮೀಮಾಂಸೆ(1959), ಇನಾಂದಾರರ ಪಾಶ್ಚಾತ್ಯ ಕಾವ್ಯಮೀಮಾಂಸೆ(1982), ತಿಪ್ಪೇರುದ್ರಸ್ವಾಮಿಯವರ ತೌಲನಿಕ ಕಾವ್ಯಮೀಮಾಂಸೆ(1985), ಶಿವರುದ್ರಪ್ಪನವರ ಕಾವ್ಯಾರ್ಥ ಚಿಂತನ(1983) ಇಂತಹ ಕೃತಿಗಳಲ್ಲಿ ಬಾರತೀಯ, ಪಾಶ್ಚಾತ್ಯ, ಕನ್ನಡ ಮೀಮಾಂಸಾ ಮಾರ್ಗಗಳ ಚಾರಿತ್ರಿಕ ಮತ್ತು ತೌಲನಿಕ ಚರ್ಚೆಗಳು ನಡೆದಿವೆ. ಮೀಮಾಂಸೆಯ ಸಿದ್ಧಾಂತಗಳು ಮತ್ತು ಪರಿಭಾಷೆಗಳನ್ನು ಉದಾಹರಣೆಗಳ ಮೂಲಕ ಶೈಕ್ಷಣಿಕ ನೆಲೆಗಟ್ಟಿನಲ್ಲಿ ನಿರ್ವಚಿಸಿಕೊಳ್ಳುವ, ವಿವರಿಸಿಕೊಳ್ಳುವ ಯತ್ನಗಳು ಇಲ್ಲಿ ನಡೆದಿವೆ. ಸಾಹಿತ್ಯದ ತತ್ವ, ವಿಮರ್ಶೆಯ ತತ್ವ, ಕಾವ್ಯತತ್ವಾದಿ ಪ್ರಕಾರ ತತ್ವಗಳನ್ನು ಒಳಗೊಂಡಂತೆ ಕನ್ನಡದ್ದೇ ಆದ ಸಾಹಿತ್ಯ ಮೀಮಾಂಸೆಯನ್ನು ಕ್ರೋಡೀಕರಿಸಿಕೊಳ್ಳುವ; ಜೊತೆಗೆ ದ್ರಾವಿಡ ಹಾಗೂ ಜನಪದ ಕಾವ್ಯಮೀಮಾಂಸೆಗಳನ್ನು ಕ್ರೋಡೀಕರಿಸಿಕೊಳ್ಳುವ ಯತ್ನಗಳು ಇತ್ತೀಚೆಗೆ ನಡೆಯುತ್ತಿವೆ. ಈ ರೀತಿಯ ಮೀಮಾಂಸೆಯ ಮಾರ್ಗವು ಒಂದು ಕನ್ನಡದಲ್ಲಿ ಸ್ವತಂತ್ರ ಪಂಥವಾಗಿ ಬೆಳೆಯುವ ಲಕ್ಷಣ ಕಾಣುತ್ತಿದೆ.

### 3.17.2. ಪಾರಿಭಾಷೆಯ ಕಗ್ಗಾಡು

ಹೊಸದೊಂದು ಶಿಸ್ತು ರೂಪಗೊಳ್ಳುವಾಗ ವಿಧಾನ-ಪರಿಕರಗಳ-ಪರಿಕಲ್ಪನೆಗಳ ಹುಡುಕಾಟದಂತೆಯೇ ಪರಿಭಾಷೆಗಳ ಶೋಧವೂ ನಡೆಯುತ್ತಿರುತ್ತದೆ. ಸಂಭವಕಾಲದಲ್ಲಿ ವಿಮರ್ಶೆಯ ಪರಿಭಾಷೆಗಳನ್ನು ಎಲ್ಲ ಸಾಧ್ಯ-ಸಾಧು ದಿಕ್ಕುಗಳಿಂದಲೂ ಶೋಧಿಸಿಕೊಳ್ಳಲಾಗಿದೆ. ಪಾರಿಭಾಷಿಕ ಪ್ರಮಾಣಗಳಿಗಾಗಿ ತುಡಿಯುವ ಮತ್ತು ಪ್ರಮಾಣಗಳನ್ನು ಮೀರುವ ಯತ್ನಗಳೂ ನಡೆದಿವೆ. ಸಾಹಿತ್ಯ ಸೃಷ್ಟಿಯಲ್ಲಿ ಅನುವಾದಿತ ಸ್ವೀಕರಣ, ತತ್ಸಮ ಸ್ವೀಕರಣ, ತದ್ಭವ ಸ್ವೀಕರಣ, ಅಳವಡಿಕೆಗಳು, ನವೀನ ಸೃಷ್ಟಿಗಳು ಹೇಗೆ ನಡೆದವೋ ಹಾಗೆ ವಿಮರ್ಶೆಯ ಪರಿಭಾಷೆಯಲ್ಲೂ ಇವೆಲ್ಲ ನಡೆದಿವೆ.

ಭವನಿಮಜ್ಜನ ಚಾತುರ್ಯ, ಲಘಿಮಾಕೌಶಲ, ಮಹೋಪಮೆ, ದರ್ಶನವಿಮರ್ಶೆ, ಭೂಮಾನುಭೂತಿ, ದರ್ಶನ ಧ್ವನಿ ಇಂಥವು ನವೀನ ಸೃಷ್ಟಿಗಳಾದರೆ ದುರಂತ ವಸ್ತುವಿನ್ಯಾಸ, ಮಾನಸಿಕ ದೂರ, ವಾಸ್ತವವಾದ, ರಮ್ಯವಾದ ಇಂಥವು ಸ್ವೀಕರಣಗಳಾಗಿವೆ. ಕೆಲವು ಪರಿಭಾಷೆಗಳನ್ನು ಇವು ಹೀಗೇ ಎಂದು ನಿರ್ದಿಷ್ಟವಾಗಿ ವರ್ಗೀಕರಿಸಲು ಬರುವುದಿಲ್ಲ. ಹಲವರಲ್ಲಿ ಹಲವು ಕಾಲಗಳಲ್ಲಿ ಒಂದೇ ಪರಿಭಾಷೆ ಬಳಕೆಯಾಗಿರುವುದೂ ಉಂಟು. ಒಂದೇ ವಿಚಾರಕ್ಕೆ ಭಿನ್ನ ಪರಿಭಾಷೆಗಳನ್ನು ಬಳಸಿರುವುದೂ ಉಂಟು. ಹೀಗಾಗಿ ಪರಿಭಾಷೆಗಳ ಕಗ್ಗಾಡೊಂದೇ ನಮ್ಮಲ್ಲಿ ನಿರ್ಮಾಣವಾಗಿದೆ. ಅದನ್ನು ಪ್ರವೇಶಿಸುವ ಹೊಸ ವಿದ್ಯಾರ್ಥಿಗಳಿಗೆ ತಾವೇ ಅಲ್ಲಿ ಕಳೆದುಹೋದಂತಹ ಅನುಭವವೂ ಆಗಬಹುದು. (ಈ ಮಾತು ಈ ಅಧ್ಯಯನಕ್ಕೂ ಅನ್ವಯಿಸಬಹುದಾ?) ಅಲ್ಲದೆ ಪಂಥಗಳ ವಿಚಾರದಲ್ಲೂ ಇದು ನಿಜ. ಅಂದರೆ ಅಂತರ್‌ಶಿಸ್ತೀಯ ಅಧ್ಯಯನ(ಸಮಾಜಶಾಸ್ತ್ರ, ಮನಶ್ಶಾಸ್ತ್ರ, ತತ್ವಶಾಸ್ತ್ರ, ಚರಿತ್ರೆ, ಭಾಷಾಶಾಸ್ತ್ರ ಇತ್ಯಾದಿಗಳ ಮೂಲಕ) ಚಾರಿತ್ರಿಕ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ಅಭಿಜಾತ ವಿಮರ್ಶೆ, ರೂಪನಿಷ್ಠ ವಿಮರ್ಶೆ, ರಸನಿಷ್ಠ ವಿಮರ್ಶೆ, ಕೃತಿನಿಷ್ಠ, ಪ್ರಕಾರನಿಷ್ಠ, ಲೇಖಕ ಕೇಂದ್ರಿತ, ಪಾತ್ರ ಕೇಂದ್ರಿತ, ಲಿಂಗಾಧಾರಿತ, ತೌಲನಿಕ ವಿಮರ್ಶೆಗಳು ಹೀಗೆ ವಿಮರ್ಶೆಗಳ ಪಂಥ, ದೃಷ್ಟಿ, ವಿಧಾನಗಳ ಕಗ್ಗಾಡೇ ಸೃಷ್ಟಿಯಾಗಿದೆ. ವಿಮರ್ಶೆಯ ತತ್ವ, ಸ್ವರೂಪ, ಕಾರ್ಯದ ಕುರಿತ ಬರವಣಿಗೆಯೂ ನಡೆದಿದೆ. ಆದರೆ ಇವನ್ನೆಲ್ಲ ನಿರ್ಧಿಷ್ಟವಾದ ಚೌಕಟ್ಟುಗಳಿಗೆ ಒಳಪಡಿಸುವ; ಸೈದ್ಧಾಂತೀಕರಿಸುವ; ಪಂಥೀಕರಿಸುವ ಕಾರ್ಯ ಈ ಕಾಲದಲ್ಲಿ ಜರುಗಲಿಲ್ಲ. ಹಾಗಾಗಿ ವಿಮರ್ಶಾ ದೃಷ್ಟಿ, ಪಂಥಗಳ ಕಗ್ಗಾಡೊಂದೇ ಈ ಸಂಭವಕಾಲದಲ್ಲಿ ಸೃಷ್ಟಿಯಾಗಿದೆ; ಆಗುತ್ತಿದೆ.

### 3.18. ವಿಮರ್ಶಾ ದಾರಿಗಳ ಹರಿದ ಬಲೆ

ನದಿಯಂತೆ ಚರಿತ್ರೆಯು ಹರಿದಿದೆ ಎಂದು ನಮ್ಮ ಸಂಭವಕಾಲೀನ ವಿದ್ವಾಂಸರು ಭಾವಿಸಿರುವುದುಂಟು. ಹಾಗೆ ವಿಮರ್ಶೆಯನ್ನು ನೋಡುವ ಸಾಧ್ಯತೆ ಇದೆಯಾದರೂ ವಸ್ತುಸ್ಥಿತಿ ಹಾಗಿಲ್ಲ. ನಮ್ಮಲ್ಲಿ ಪರಿಭಾಷೆಗಳ

ಕಗ್ಗಾಡು ಸೃಷ್ಟಿಯಾಗಿರುವಂತೆಯೇ ಮಾರ್ಗಗಳ ಹರಕಲು ಬಲೆಯೊಂದು ಕೂಡ ಸೃಷ್ಟಿಯಾಗಿದೆ. ಕೆಲವೊಮ್ಮೆ ಯಾವ ದಾರಿಗಳು ಎಲ್ಲಿಗೆ ತಲುಪುತ್ತವೆ ಎಂದು ನಡೆದು ಅನುಭವ ಇರುವವರಿಗೆ ತಿಳಿದಿರುತ್ತದೆ. ಆದರೆ ಹೊಸಬರು ನಡೆಯವಾಗ ದಾರಿ ಕರೆದುಕೊಂಡು ಹೋದತ್ತ ಹೋಗಬೇಕಾಗುತ್ತದೆ. ಆನೆಗಳಿಗಾದರೆ ಅವು ನಡೆದದ್ದೇ ದಾರಿ. ಆದರೆ ಇತರೆ ಜೀವಿಗಳಿಗೆ ದಾರಿ ಹೋದತ್ತಲೇ ಹೋಗಬೇಕಾಗಬಹುದು. ದಾರಿಗಳು ನದಿಗಳಂತೆ ಹರಿದರೆ ಎಲ್ಲೋ ಒಂದು ಕಡೆ ಎಲ್ಲರೂ ಸಂಧಿಸುತ್ತಾರೆ ಸರಿ. ದಾರಿಗಳು ಹರಕಲು ಬಲೆಯಂತೆ ಹೆಣಕೊಂಡಿದ್ದರೆ ಯಾವ ದಾರಿ ಎಲ್ಲಿಗೆ ಒಯ್ಯುತ್ತದೆ? ಯಾವುದು ಯಾವ ದಾರಿ? ಯಾವ ದಾರಿಯ ಸ್ವರೂಪ ಏನೆಂದು ತಿಳಿಯಲಾಗುವುದಿಲ್ಲ. ಅಲ್ಲದೆ ದಾರಿಗಳೇ ದಾರಿ ತಪ್ಪಿಸುವ ಸಾಧ್ಯತೆಯೂ ಇರುತ್ತದೆ. ದಿಕ್ಕು ತಪ್ಪುವ ಮತ್ತು ತಪ್ಪು ದಾರಿಗಳಲ್ಲಿ ದಿಕ್ಕು ಕಾಣದೇ ಹೋಗುವ ಸಾಧ್ಯತೆಯೂ ಇರುತ್ತದೆ.

ನಮ್ಮಲ್ಲಿ ಅಭಿಜಾತ ವಿಮರ್ಶೆ, ರಮ್ಯವಿಮರ್ಶೆ, ವಿವರಣಾತ್ಮಕ ವಿಮರ್ಶೆ, ವಿಶ್ಲೇಷಣಾತ್ಮಕ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ, ರಸನಿಷ್ಠ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಹೊರ ವಿಮರ್ಶೆ, ಒಳ ವಿಮರ್ಶೆ, ಕೃತಿನಿಷ್ಠ ವಿಮರ್ಶೆ, ರೂಪನಿಷ್ಠ ವಿಮರ್ಶೆ, ಇತ್ಯಾದಿ ಇತ್ಯಾದಿ ಆಚಾರದಲ್ಲಿರುವ ಆದರೆ ನಿರ್ವಚನಗೊಳ್ಳದ ಅನೇಕ ಮಾರ್ಗಗಳಿವೆ. ಇವೆಲ್ಲ ಪರಸ್ಪರ ಹೆಣೆದುಕೊಂಡ ಆದರೆ ಹರಕಲಾದ ಬಲೆಯಂತೆ ನಮ್ಮಲ್ಲಿ ಆಚರಣೆಯಲ್ಲಿ ಇವೆ. ಈ ಹೆಣಿಗೆಯ ಆರಂಭ ಆದುದೂ ಸಂಭವಕಾಲದಲ್ಲೇ. ನಮ್ಮಲ್ಲಿ ಆಚರಣೆಯಲ್ಲಿ ಬಳಕೆಯಾಗಿರುವ ವಿಮರ್ಶೆಯ ಪರಿಭಾಷೆಗಳು ಮತ್ತು ಮಾರ್ಗಗಳನ್ನು ಆಚರಣೆಯ ಅಭ್ಯಾಸದ ಮೂಲಕವೇ ಕ್ರೋಡೀಕರಿಸಿ ಕಟ್ಟಿಕೊಳ್ಳುವ ಅಗತ್ಯವಿದೆ.

### 3.19. ಛಂದೋ ಚರ್ಚೆ ಮತ್ತು ವಿಮರ್ಶಾ ವಿವೇಕ

'ಸಂಭವ ಕಾಲ'ದ ಹಲವು ವಿಮರ್ಶಾ ರೀತಿಗಳಲ್ಲಿ ಹೊಸ ಛಂದೋ ಪ್ರಕಾರಗಳ ಚರ್ಚೆ ಕೂಡ ಮುಖ್ಯವಾದದ್ದು. ಇಂಗ್ಲಿಶಿನ ಸಾನೆಟ್, ಭಾವಗೀತೆ, ಪ್ರಗಾಥ, ಕಥನಕವನ ಮಾದರಿಗಳನ್ನು ಕನ್ನಡ ಸ್ವೀಕರಿಸಿತ್ತಾದರೂ ತನ್ನದೇ ಆದ ರೀತಿಯಲ್ಲಿ ಅವುಗಳನ್ನು ರೂಪಾಂತರಿಸಿಕೊಂಡಿತು. ರಗಳೆ, ಕಂದ, ಷಟ್ಪದಿ, ಕೀರ್ತನ, ವಚನ, ಸ್ವರವಚನ, ತತ್ವಪದ, ಲಾವಣಿ, ದೇವರನಾಮ ಇತ್ಯಾದಿಗಳ ರೂಪಾಂತರಿತ ರೂಪಗಳನ್ನು ಆವಿಷ್ಕರಿಸಿಕೊಂಡಿತು. ಹೊಸ ಛಂದಸ್ಸಿನ ಸ್ವರೂಪ ಹೇಗಿರಬೇಕು? ಹೊಸ ಕವಿತೆಯಲ್ಲಿ ಪ್ರಾಸ, ನಾದಾದಿ ವಿಚಾರಗಳು ಎಷ್ಟರಮಟ್ಟಿಗೆ ಇರಬೇಕು? ಹೊಸ ರೀತಿಯ ಛಂದೋರೂಪಗಳನ್ನು ಹೇಗೆ ರೂಪಿಸಿಕೊಳ್ಳಬೇಕು? ಇದರಿಂದ ಉಂಟಾಗುವ ಲಾಭ ಹಾನಿಗಳೆಷ್ಟು? ಎಂಬ ದೊಡ್ಡ ಚರ್ಚೆಯೇ ಸಂಭವಕಾಲದಲ್ಲಿ ಜರುಗಿತು. ಮೇವುಂಡಿ ಮಲ್ಲಾರಿ ಅವರ ಜಯಕರ್ನಾಟಕದ ಬರಹಗಳು, ತೀ.ನಂ.ಶ್ರೀ.ಯವರ 'ಕನ್ನಡದಲ್ಲಿ ಹೊಸ ಮಟ್ಟುಗಳಿಗಿರುವ ಅವಶ್ಯಕತೆ'(1931), 'ಹೊಸ ಛಂದಸ್ಸಿನ ಲಯಗಳು'(1931) ಇಂಥವು ಇದಕ್ಕೆ ಉದಾಹರಣೆ. ಈ ರೀತಿಯ ಛಂದೋಮೀಮಾಂಸೆ ನಮ್ಮ ಸಂಭವಕಾಲದ ವಿಮರ್ಶೆಯ ಒಂದು ಭಾಗವೇ ಆಗಿದೆ.

ಇದಲ್ಲದೆ ಹೊಸ ಸಾಹಿತ್ಯ ಪ್ರಕಾರಗಳೆ ಈ ಕಾಲದಲ್ಲಿ ಸಂಭವಿಸುತ್ತ ಇದ್ದವಾದ್ದರಿಂದ ಆಯಾ ಪ್ರಕಾರಗಳ ಸ್ವರೂಪ ವಿನ್ಯಾಸಕ್ಕೆ ಸಂಬಂಧಿಸಿದ ಚರ್ಚೆಗಳು ಈ ಕಾಲದ ವಿಮರ್ಶೆಯಲ್ಲಿ ಸಾಕಷ್ಟು ನಡೆದಿವೆ. ಕಾದಂಬರಿ ಉಪನ್ಯಾಸ, ನಾವೆಲ, ವಚನಗದ್ಯ, ವಚನ ಪ್ರಬಂಧ ಮೊದಲಾದ ಹಲವಾರು ಪರಿಭಾಷೆಗಳು ಕಾದಂಬರಿ ಪ್ರಕಾರಕ್ಕೆ ಆ ಕಾಲದ ವಿಮರ್ಶೆಯಲ್ಲಿ ಸೂಚಿತವಾಗಿವೆ. ಇಲ್ಲಿ ಪ್ರಬಂಧ, ವಿಮರ್ಶೆ, ಮಹಾಕಾವ್ಯ ಇತ್ಯಾದಿ ಪ್ರಕಾರಗಳ ಪ್ರಕಾರತತ್ವ ವಿಚಾರಗಳು ಸಾಕಷ್ಟು ಚರ್ಚೆಯಾಗಿವೆ. ಇಂತದ್ದನ್ನು ಪ್ರಕಾರ ಮೀಮಾಂಸೆಯ ಜಿಜ್ಞಾಸೆ ಎಂದು ಕರೆಯಬಹುದು.

#### 3.19.1. ಪಾಶ್ಚಾತ್ಯ ಮಾದರಿಗಳ ಪರೀಕ್ಷೆ-ಪ್ರಯೋಗ

ಇಂಗ್ಲಿಶ್ ಮತ್ತು ಗ್ರೀಕ್ ದುರಂತ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿಕೊಂಡ ನಮ್ಮವರು ಅದೇ ಮಾದರಿಯ ವಸ್ತು ವಿನ್ಯಾಸವನ್ನು ನಮ್ಮ ಪ್ರಾಚೀನ ಸಾಹಿತ್ಯದಲ್ಲಿಯೂ ಹುಡುಕುವ ಯತ್ನ ಮಾಡಿದರು. ನಾಟಕೀಯ ಪ್ರಜ್ಞೆಯ ಹುಡುಕಾಟದ ಜೊತೆಗೆ ದುರಂತನಾಯಕ ವಸ್ತು ವಿನ್ಯಾಸದ ಹುಡುಕಾಟವನ್ನೂ ನಡೆಸಿದರು. ರನ್ನನ ದುರ್ಯೋಧನ, ಪಂಪನ ಕರ್ಣ, ನಾಗಚಂದ್ರನ ರಾವಣರನ್ನು ದುರಂತ ನಾಯಕ

ಕಲ್ಪನೆಯ ಮೂಲಕ ಹಲವರು ನೋಡಿದರು. ಅಶ್ವತ್ಥಾಮನ್, ರಕ್ತಾಕ್ಷಿ, ಪ್ರತಾಪರುದ್ರದೇವ ರೀತಿಯ ನಾಟಕಗಳೂ ರಚಿತವಾದವು. (ವಿಮರ್ಶೆ-ಸಾಹಿತ್ಯಗಳು ಇಂಥಲ್ಲಿ ಕಲಸಿಕೊಳ್ಳುತ್ತವೆ) ಅಲ್ಲದೆ ವಿಮರ್ಶೆಯ ಕಾರ್ಯದಲ್ಲಿ ಮಾಸ್ತಿ, ವಿಮರ್ಶೆಯ ವಸ್ತುನಿಷ್ಠತೆಯಲ್ಲಿ ಎಸ್.ವಿ.ರಂಗಣ್ಣನವರು, ಇಂಗ್ಲಿಶಿನ ವಿಮರ್ಶಾ ತತ್ವಗಳನ್ನು ಕನ್ನಡದಲ್ಲಿ ಪ್ರಯೋಗಿಸಿ ನೋಡಿದರು. ಸಾಹಿತ್ಯ ರಚನಾ ತತ್ವದಲ್ಲೂ ಹಲವರಲ್ಲಿ ಈ ಪ್ರಯೋಗ ಕಾಣಬಹುದು.

### 3.20. ತೌಲನಿಕತೆ

ನಮ್ಮ ಬಹುಪಾಲು ಎಲ್ಲ ವಿಮರ್ಶಕರಲ್ಲು ತೌಲನಿಕತೆ ಒಂದು ವಿಮರ್ಶೆಯ ದೃಷ್ಟಿಕೋನವಾಗಿ ಮತ್ತು ವಿಮರ್ಶೆಯ ವಿಧಾನವಾಗಿ ಎರಡು ರೀತಿಯಲ್ಲು ಬಳಕೆಯಾಗಿದೆ. ಪರಂಪರೆಯಲ್ಲೇ ಇರಬಹುದಾದ ವಸ್ತು, ಪಾತ್ರ, ಶೈಲಿ ಸಾಮ್ಯ ಕೇಂದ್ರಿತವಾಗಿ ತುಲನೆ ಮಾಡುವ ದೃಷ್ಟಿಕೋನವೊಂದು ಸಂಭವಕಾಲೀನ ವಿಮರ್ಶೆಯಲ್ಲಿ ಕಾಣಿಸಿಕೊಂಡಿದೆ. ಇದು ಪಶ್ಚಿಮದ(ಇಂಗ್ಲಿಶಿನ) ಮತ್ತು ಕನ್ನಡದ ನಡುವಿನ ತುಲನೆಯಾಗಿಯೂ ಸಾಕಷ್ಟು ಚಾಚಿಕೊಂಡಿದೆ. ಇಂಗ್ಲಿಶ್ ವಿದ್ಯಾಭ್ಯಾಸ, ಇಂಗ್ಲಿಶ್ ಸಾಹಿತ್ಯ ಸಂಪರ್ಕ, ಅನುವಾದಗಳು ಇದಕ್ಕೆ ನೀರೆರೆದಿವೆ. ದುರಂತ ಕಲ್ಪನೆಯ ಪಾಶ್ಚಾತ್ಯ ಮಾದರಿಗಳ ಹುಡುಕಾಟವು ಇಂಥ ತೌಲನಿಕತೆಯ ಪರಿಣಾಮವೇ ಆಗಿದೆ. ಕಾವ್ಯತತ್ವ ಕಾವ್ಯಮೀಮಾಂಸೆಗಳ ವಿಚಾರದಲ್ಲೂ ನಮ್ಮಲ್ಲಿ ತೌಲನಿಕ ಕಾವ್ಯಮೀಮಾಂಸೆಯ ದೊಡ್ಡ ಬೆಳೆಯೇ ನಿರ್ಮಾಣವಾಗಿದೆ. ಉದಾಹರಣೆಗೆ ಎಸ್.ವಿ.ರಂಗಣ್ಣನವರ ಕರ್ಣಪಾತ್ರದ ತೊಡಕು ಲೇಖನ (ಹೊನ್ನಶೂಲ) ಸಂಭವಕಾಲದ ಒಂದು ತೌಲನಿಕ ಅಧ್ಯಯನವಾಗಿದೆ. ವ್ಯಾಸ, ಭಾಸ, ಪಂಪ, ಕುಮಾರವ್ಯಾಸ. ಮೂರನೆಯ ಮಂಗರಸ, ಬ್ರಹ್ಮಣಾಂಕರ ಕರ್ಣರನ್ನು ತೌಲನಿಕವಾಗಿ ಇಲ್ಲಿ ಅಭ್ಯಾಸಕ್ಕೆ ಗುರಿಪಡಿಸಲಾಗಿದೆ. ಹಾಗೇ ಕವಿಕುಲಗುರು ಎಂಬ ಲೇಖನದಲ್ಲಿ ವಿಶ್ವಕವಿಗಳ ಜೊತೆ ಕಾಳಿದಾಸನನ್ನೂ ಇಟ್ಟು ತೂಗಿ ನೋಡುವ ಪ್ರಯತ್ನವಿದೆ. ಇಂಥ ಅನೇಕ ತೌಲನಿಕ ವಿಮರ್ಶೆಗಳ ಉದಾಹರಣೆಯನ್ನು ಹಲವರಿಂದ ಎತ್ತಿ ಕೊಡಬಹುದು.

ತೌಲನಿಕತೆಯಲ್ಲಿ ಅವಳಿ (ಬೈನರಿ) ವೈರುದ್ಯಗಳ ತುಲನೆ ಒಂದು ಮುಖ್ಯವಾದ ಮಾದರಿ. ಸಂಭವಕಾಲದಲ್ಲಿ ಜರುಗಿದ ಬಹುಪಾಲು ಎಲ್ಲ ಅವಳಿ ತೌಲನಿಕತೆಗಳೂ ಅಂತಿಮವಾಗಿ ತರತಮ ಶ್ರೇಣೀಕರಣಗಳನ್ನು ನಿರ್ಮಿಸುವ ಕಡೆಗೇ ಚಲಿಸಿವೆ. ಸ್ಥಳೀಯ- ಭಾರತೀಯ, ಕನ್ನಡ-ಸಂಸ್ಕೃತ, ಕನ್ನಡ-ಇಂಗ್ಲೀಶ್, ಆಧುನಿಕ-ಪ್ರಾಚೀನ, ಹೊಸಗನ್ನಡ-ಹಳಗನ್ನಡ, ಇಂಥವುಗಳ ನಡುವೆ ನಡೆದಿರುವ ತೌಲನಿಕ ಅಧ್ಯಯನಗಳು ಭಿನ್ನತೆಗಳ ನೆಲೆಯಿಂದಲೋ, ವಿಶೇಷತೆಗಳ ನೆಲೆಯಿಂದಲೋ, ಸಾಮ್ಯತೆಗಳ ನೆಲೆಯಿಂದಲೋ ಚಲಿಸಿರುವುದು ತುಂಬಾ ಕಡಿಮೆ. ಅಸಮಾನ ಸ್ತರವಿನ್ಯಾಸವನ್ನು ನಿರ್ಮಿಸುವ ಕಡೆಗೇ ಈ ತೌಲನಿಕ ವಿಮರ್ಶೆಯು ಚಲಿಸಿರುವಂತೆ ಕಾಣುತ್ತದೆ.

(ಎಲ್ಲ ವೈರುದ್ಯಗಳೂ ಅವಳಿ ವೈರುದ್ಯಗಳೇ ಆಗಿರುವುದಿಲ್ಲ. ಕೆಲವೊಮ್ಮೆ ಅವಳಿ ವೈರುದ್ಯಗಳಂತೆ ಕಾಣುವ ಜೋಡಿಗಳು ಪೂರಕ ಜೋಡಿಗಳೂ, ಸಮಾನ ಭಿನ್ನತೆಗಳೂ ಆಗಿರಬಹುದು. ತರತಮ ನೆಲೆ ಮತ್ತು ಭಿನ್ನತೆಗಳ ನೆಲೆಗಳನ್ನು ಎರಡು ಬೈನರಿ ವೈರುದ್ಯಗಳಂತೆ ಎನೂ ಭಾವಿಸಬೇಕಿಲ್ಲ. ಇವು ಎರಡು ಭಿನ್ನ ನೆಲೆಗಳಷ್ಟೆ. ಇವುಗಳಲ್ಲಿ ತರತಮ ನೆಲೆಯನ್ನು ಕನಿಷ್ಟವೆಂದೂ, ತಪ್ಪಾದುದೆಂದೂ, ಭಿನ್ನತೆಗಳ ನೆಲೆಯನ್ನು ಶ್ರೇಷ್ಠವೆಂದೂ, ಸರಿಯಾದುದೆಂದೂ ಭಾವಿಸಬೇಕಿಲ್ಲ.)

#### 3.20.1. ಸ್ವ ಮತ್ತು ಅನ್ಯ

ವಿಮರ್ಶೆಯಲ್ಲಿ ಅದರಲ್ಲೂ ಮುಖ್ಯವಾಗಿ ತೌಲನಿಕ ವಿಧಾನದಲ್ಲಿ ಕನ್ನಡವನ್ನು ಅನ್ಯದೊಂದಿಗೆ ತೂಗಿ ನೋಡುವಾಗ ಕನ್ನಡದ ಒಳಗೆ ಹಲವು ರೀತಿಯ ವೈರುಧ್ಯಗಳಿದ್ದರೂ ಅವೆಲ್ಲವನ್ನು ಒಂದೇ 'ಸ್ವ' ಆಗಿ ಕಲ್ಪಿಸಿಕೊಳ್ಳಲಾಗಿದೆ. ಹಲವು ರೀತಿಯ ಸ್ವಗಳನ್ನು ಒಂದೇ ಸ್ವ ಆಗಿ ಕಾಣುವ ವಿಮರ್ಶೆಯು ಅನ್ಯವನ್ನು ಇಂಗ್ಲಿಶ್ ಮತ್ತು ಸಂಸ್ಕೃತ ಎಂದು ಎರಡಾಗಿ ಕಲ್ಪಿಸಿಕೊಂಡಿದೆ. ಪ್ರಾಚೀನ ಸಾಹಿತ್ಯದ ಅನುಸಂಧಾನದಲ್ಲಿ ಹಲವು ಅನ್ಯಗಳಿದ್ದರೂ ಸಂಸ್ಕೃತವನ್ನು ಮಾತ್ರವೇ ಏಕೈಕ ಅನ್ಯವನ್ನಾಗಿ ಕಲ್ಪಿಸಿಕೊಂಡಿರುವ ನಮ್ಮ ವಿಮರ್ಶೆ ಆಧುನಿಕ ಸಂದರ್ಭದಲ್ಲಿ ಸಂಸ್ಕೃತದ ಜೊತೆಗೆ ಇಂಗ್ಲಿಶನ್ನು ಇನ್ನೊಂದು ಅನ್ಯವಾಗಿ ಗ್ರಹಿಸಿದೆ. ವಿಮರ್ಶೆಯು ಪ್ರಧಾನವಾಗಿ ಭಾಷೆಯ ಮೂಲಕ ಅನುಸಂಧಾನಕ್ಕೆ ಹೆಚ್ಚು ಸೀಮಿತಗೊಂಡಿದ್ದರಿಂದ ಅದರಲ್ಲೂ ಲಿಪಿಕ ಪಠ್ಯಗಳಿಗೆ ತನ್ನನ್ನು ಹೆಚ್ಚು ಸೀಮಿತಗೊಳಿಸಿಕೊಂಡದ್ದರಿಂದ ಇಂಥ ಸ್ವ ಮತ್ತು ಅನ್ಯಗಳು ನಿರ್ಮಾಣಗೊಂಡಿವೆ. ಬ್ರಾಹ್ಮಣ-ಬ್ರಾಹ್ಮಣೇತರ, ಹಿಂದೂ-ಮುಸ್ಲಿಂ-ಕ್ರೆಸ್ತ, ಭಾರತೀಯ-ವಿದೇಶೀಯ, ಪೌರ್ವಾತ್ಯ-ಪಾಶ್ಚಿಮಾತ್ಯ ಇಂಥ ಕಡೆ ಕೂಡ ಹಲವು ಅನ್ಯಗಳು ಮತ್ತು ಹಲವು ಸ್ವಗಳು ಒಂದೊಂದೇ ಅನ್ಯ ಸ್ವಗಳಾಗಿ (ಏಕರೂಪಿಯಾಗಿ)

ಕಲ್ಪಿತಗೊಂಡಿವೆ. ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಇವು ನಮ್ಮ ಅನನ್ಯತೆಯ ಚಹರೆಗಳಾಗಿಯೂ ಕೆಲಸ ಮಾಡುತ್ತ; ಕೆಲವೊಂದು ಸಂದರ್ಭಗಳ ರಾಜಕಾರಣಕ್ಕೆ ತಕ್ಕಂತೆ ಕೆಲವೊಂದು ಚಹರೆಗಳು ಮಾತ್ರವೇ ಮುನ್ನೆಲೆಗೆ ಬರುತ್ತ; ಮಿಕ್ಕವು ಹಿನ್ನೆಲೆಗೆ ಸರಿಯುತ್ತ ಬಂದಿವೆ. (ಐಡೆಂಟಿಟಿ ರಾಜಕಾರಣ ಚರ್ಚೆ ಇದನ್ನು ಸರಿಯಾಗಿ ಗ್ರಹಿಸಬಲ್ಲುದು)

### 3.21. ದರ್ಶನ ಮೀಮಾಂಸೆ

ಮಹೋಪಮೆ, ಭವ್ಯತೆ, ಪ್ರತಿಮಾದೃಷ್ಟಿ, ಪೂರ್ಣದೃಷ್ಟಿ, ದರ್ಶನ, ಭೂಮಾನುಭೂತಿ ಇಂಥ ಹಲವಾರು ಮೀಮಾಂಸೆಯ ಪರಿಕಲ್ಪನೆಗಳನ್ನು ನೀಡಿದ ಕುವೆಂಪು ತಮ್ಮದೇ ಆದ ದಾರ್ಶನಿಕ ಕಾವ್ಯ ಮೀಮಾಂಸೆಯೊಂದನ್ನು ಕನ್ನಡಕ್ಕೆ ನೀಡಿದ್ದಾರೆ. ಪಾಶ್ಚಾತ್ಯ ಮೀಮಾಂಸೆ ಮತ್ತು ವಿಮರ್ಶೆ ಹಾಗೂ ಭಾರತೀಯ ಕಾವ್ಯ ಮೀಮಾಂಸೆಗಳನ್ನು ಕಸಿ ಮಾಡಿ ಅದಕ್ಕೆ ಯೋಗ ವಿಜ್ಞಾನ, ತತ್ವಜ್ಞಾನ ಇತ್ಯಾದಿಗಳಿಂದ ಪ್ರೇರಣೆ ಪಡೆದು ತಮ್ಮದೇ ಆದ ದರ್ಶನ ದೃಷ್ಟಿಯ ಮೀಮಾಂಸೆಯೊಂದನ್ನು ರೂಪಿಸಿದ್ದಾರೆ.[31] 'ಬುದ್ಧಿಪೂರ್ವಕ, ಹೃದಯ ತೃಪ್ತಿಕರ ವಿಚಾರಸಮ್ಮತವಾದ ಸತ್ಯ ಸ್ವರೂಪ ಮೀಮಾಂಸೆ'ಯನ್ನು ಪ್ರಯೋಗಿಸಿದ್ದಾರೆ. ಹೀಗೆ ಸಂಭವಕಾಲೀನ ವಿಮರ್ಶೆಯು ಬರೀ ಪಶ್ಚಿಮದ ಪ್ರಭಾವಗಳಿಂದ ಮಾತ್ರ ಸಿದ್ಧವಾಗಿಲ್ಲ. ಅದು ಪೂರ್ವ ಮತ್ತು ಪಶ್ಚಿಮಗಳ ಹಲವು ಜ್ಞಾನ ಶಾಖೆಗಳ ದೃಷ್ಟಿ ಧೋರಣೆಗಳನ್ನು ಹೀರಿ ಸಂಕರಗೊಂಡ ಸ್ಥಿತಿ. ಸಂಕರತೆಯೇ ಆದರ ಪ್ರಧಾನ ಲಕ್ಷಣ. ಅದರಲ್ಲಿ ಕನ್ನಡತನ, ಭಾರತೀಯತೆ, ಇಂಗ್ಲಿಶ್ ಜಗತ್ತುಗಳೆಲ್ಲಾ ವಿಂಗಡಿಸಲಾಗದಂತೆ ಬೆರೆತಿವೆ.

### 3.22. ಕೃತಿ-ಕರ್ತೃ-ರಸಕೇಂದ್ರಿತ ವಿಮರ್ಶೆಗಳು

ಕೃತಿಗಳನ್ನು ಸಂಪಾದಿಸಿ ಪೀಠಿಕೆ, ಪ್ರಸ್ತಾವನೆಗಳಲ್ಲಿ ವಿವರಿಸುವ, ಮೆಚ್ಚುವ, ಮುಖ್ಯ ಕಾವ್ಯಭಾಗಗಳನ್ನು ಉಲ್ಲೇಖಿಸಿ ವಿಶ್ಲೇಷಿಸುವ ಪರಿಪಾಠವು ಆಧುನಿಕ ಕೃತಿಗಳ ಮುನ್ನುಡಿ, ಮೊದಲ ನುಡಿಗಳಲ್ಲಿ ಹಾರೈಕೆ, ಹರಕೆ, ಪ್ರೋತ್ಸಾಹ, ಸಮರ್ಥನೆ, ಗುಣಗ್ರಹಣ, ಇತ್ಯಾದಿಗಳಿಗಿಂತ ಭಿನ್ನವಾದ ವಿಮರ್ಶೆಗಳಿಗೆ ತೆರೆದುಕೊಂಡಿತು. ಒಂದು ಉದಾ: ನೀಡುವುದಾದರೆ: ಎ.ಆರ್.ಕೃ, ಮಾಡಿದ 'ಪ್ರಣಯವಾರ್ತಾ' ಕಾದಂಬರಿಯ ವಿಮರ್ಶೆ ಇಂಥ ಭಿನ್ನ ವಿಮರ್ಶೆಗೆ ಒಂದು ಮಾದರಿ. ವಿಮರ್ಶೆಯು ಇಲ್ಲಿ ಪ್ರಕಾರ ವಿಶ್ಲೇಷಣೆಗೆ ತನ್ನ ಸ್ವರೂಪವನ್ನು ಬದಲಿಸಿಕೊಂಡಂತೆ ಕಾಣುತ್ತದೆ. ಕೃತಿನಿಷ್ಠತೆಯು ವಸ್ತುನಿಷ್ಠತೆಯ ಕಡೆಗೆ ಚಲಿಸಿದಂತೆ ಕಾಣುತ್ತದೆ. ಹಾಗೇ ಕೈಲಾಸಂ ಅವರ ಟೊಳ್ಳು ಗಟ್ಟಿ, ಮಾಸ್ತಿಯವರ ಕತೆಗಳ ಕುರಿತ ಎ.ಆರ್.ಕೃ. ವಿಮರ್ಶೆಯಲ್ಲಿ ತೌಲನಿಕತೆ, ಹಾಗೂ ವಾಸ್ತವಾದದ ಚರ್ಚೆಗಳು ಬರುತ್ತವೆ. ಇಲ್ಲೆಲ್ಲ ವಿಮರ್ಶೆಯು ನಿರ್ಣಯಗಳನ್ನು ನೀಡುವ ಕಡೆಗೆ ಚಲಿಸಿದೆ. ಎ.ಆರ್.ಕೃ ಮಾಸ್ತಿಯವರ ಕತೆಗಳನ್ನು 'ಬೆಣ್ಣೆಯಿಂದ ಮಾಡಿದ ಸಿಂಹಗಳು' ಎಂದು ಕರೆಯುತ್ತಾರೆ. ಎಸ್.ವಿ.ರಂಗಣ್ಣ ಅವರ ಕಾಳಿದಾಸನ ನಾಟಕಗಳ ವಿಮರ್ಶೆ (1969) ವೀ.ಸೀ.ಅವರ ವಾಲ್ಮೀಕಿ ರಾಮಾಯಣ (1977) ಎ.ಎನ್.ಮೂರ್ತಿರಾಯರ ಸೀತಾ ಪರಿತ್ಯಾಗ ಪ್ರಸಂಗ(1977) ಇಂಥ ಕೃತಿಗಳಲ್ಲಿ ಕೃತಿ ವಿಮರ್ಶೆಯ ಬಿಡಿ ಮತ್ತು ಇಡಿ ಮಾದರಿಗಳನ್ನು ಕಾಣಬಹುದು. ಇಲ್ಲಿ ಕೃತಿ, ಕೃತಿಕಾರರ ಪರಂಪರೆ-ಪ್ರಕಾರಗಳ ಪ್ರತ್ಯೇಕ ಚರ್ಚೆ ಮತ್ತು ಪರಸ್ಪರ ಅಂತಃಸಂಬಂಧಗಳ ಚರ್ಚೆಗಳೆರಡೂ ಇವೆ.

ಮುಳಿಯರ ನಾಡೋಜ ಪಂಪ; ಎ.ಆರ್.ಕೃ ಅವರ ಬಂಕಿಮಚಂದ್ರ, ಭಾಸಕವಿ; ಎಂ.ಆರ್.ಶ್ರೀ ಅವರ ಷಡಕ್ಷರಕವಿಯ ಸ್ಥಾನ ನಿರ್ದೇಶನ ಇತ್ಯಾದಿ ಕೃತಿಗಳಲ್ಲಿ ಪ್ರಧಾನವಾಗಿ ಕರ್ತೃಕೇಂದ್ರಿತ ವಿಮರ್ಶೆಯನ್ನು ಗುರ್ತಿಸಿಕೊಳ್ಳಬಹುದು. ಹಾಗೇ ಕುವೆಂಪು ಅವರ ಭೂಮಾನುಭೂತಿ, ರಸಯಾತ್ರೆ, ಕಾವ್ಯವಿಹಾರ, ಭವ್ಯತೆ ಇಂಥ ಪರಿಭಾಷೆಗಳಲ್ಲಿ, ಪುತಿನರವರ ಬಹುಪಾಲು ಎಲ್ಲ ವಿಮರ್ಶೆಗಳಲ್ಲಿ, ಎಸ್.ವಿ.ರಂಗಣ್ಣ, ತೀನಂಶ್ರೀ, ವೆಂಕಣ್ಣಯ್ಯ, ಕುರ್ತಕೋಟಿಯವರ ಕೆಲವು ವಿಮರ್ಶೆಗಳಲ್ಲಿ ರಸನಿಷ್ಠ ವಿಮರ್ಶಾ ಧಾರೆಯನ್ನು ಗುರ್ತಿಸಬಹುದು.

### 3.23. ವರ್ಗೀಕರಣ, ಲಕ್ಷಣ ನಿರ್ವಚನ, ಪ್ರಶಸ್ತಿ ವಾಚನ..

ಶಾಸ್ತ್ರಕವಿ, ಕಾವ್ಯಕವಿ, ಉಭಯಕವಿ ಹೀಗೆ ಕವಿಗಳನ್ನು ವರ್ಗೀಕರಿಸುವುದು ಮತ್ತು ಗುಣವರ್ಮನೈಸಿರಿ, ಪಂಪನೋಜೆ, ಪೊನ್ನನ ಪೊಸ ದೇಸೆ, ರನ್ನನ ಗುಣೋನ್ನತಿ ಹೀಗೆ ಒಂದೊಂದು ಮಾತಿನಲ್ಲಿ ಕವಿಲಕ್ಷಣವನ್ನು ನಿರ್ವಚಿಸುವುದು ಪ್ರಾಚೀನ ಗ್ರಂಥಗಳಲ್ಲಿ ನಡೆಯುತ್ತ ಬಂದಂತೆ ಸಂಭವಕಾಲೀನ ವಿಮರ್ಶೆಯಲ್ಲೂ ನಡೆದಿದೆ. ತನ್ನ ವಿಶ್ವಕೃತಿ ಪರೀಕ್ಷಣದಲ್ಲಿ ಹಿರಣ್ಯಗರ್ಭ ಕವಿಗಳನ್ನು ಐದು ರೀತಿಯಾಗಿ ವರ್ಗೀಕರಿಸುತ್ತಾನೆ ಮತ್ತು ಅವರ ಲಕ್ಷಣಗಳನ್ನು ಹೇಳಿದ್ದಾನೆ. ಹಾಗೇ ಸಂಭವಕಾಲದಲ್ಲಿ ಕವಿಗಳನ್ನು ಒಂದೊಂದು ಮಾತುಗಳಲ್ಲಿ

ನಿರ್ವಚಿಸಲು ರೂಪಕ ಸಾಮ್ರಾಜ್ಯ ಚಕ್ರವರ್ತಿ, ಉಪಮಾಲೋಲ, ಆದಿಕವಿ ಇತ್ಯಾದಿ ಮಾತುಗಳನ್ನೂ ಬಳಸಲಾಗಿದೆ. ಇಂಥ ಪದಪ್ರಯೋಗಗಳ ಜೊತೆಗೆ ಕವಿ, ಕೃತಿಗಳ ಸ್ಥಾನ ನಿರ್ದೇಶನದ ಕೆಲಸವೂ ನಡೆದಿದೆ. ಮುಗಳಿಯವರ ಸಾಹಿತ್ಯ ಚರಿತ್ರೆಯಿಂದಲೇ ಎಂ.ವಿ.ಸೀಯವರು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. "ಪಂಪನು ಮಹಾಕವಿಯೆಂಬುದು ಎಂದಿಗೂ ವಾದಗ್ರಸ್ಥವಾಗಿಲ್ಲ. (ಪುಟ-101) ಗದಾಯುದ್ಧವು ಪಂಪಭಾರತಕ್ಕಿಂತ ಗಾತ್ರದಲ್ಲಿ ಸಣ್ಣದಾದರೂ ಅದರಂತೆ ಮಹಾಕೃತಿಯೆಂದು ಮೆರೆದಿದೆ. (ಪುಟ-104) ಪಂಪರಾಮಾಯಣ ಮಹಾಕಾವ್ಯದ ಸತ್ವವುಳ್ಳ ಸತ್ಕಾವ್ಯ. (ಪುಟ-131) ನಯಸೇನ ನಿರುಪಮ ಸಹಜ ಕವಿ. ಹರಿಹರನ ಗಿರಿಜಾಕಲ್ಯಾಣವು ಮಹಾಕವಿಯ ಸತ್ಕಾವ್ಯ, ಮಹಾಕಾವ್ಯವಲ್ಲ. (ಪುಟ-179) ಬಸವರಾಜದೇವರ ರಗಳೆ ಹರಿಹರನ ಶ್ರೇಷ್ಠ ಕೃತಿ; ಅಲ್ಪಗಾತ್ರದಲ್ಲಿರುವ ಮಹಾಕೃತಿ. (ಪುಟ-180) ಹರಿಶ್ಚಂದ್ರ ಕಾವ್ಯ ರಾಘವಾಂಕನ ಮಹಾಕೃತಿ. (ಪುಟ-189) ವೀರೇಶ ಚರಿತೆ ಮೇಲ್ತರಗತಿಯ ಕಾವ್ಯ. (ಪುಟ-189) ಜನ್ನನ ಯಶೋಧರ ಚರಿತೆ ಮಹಾಕೃತಿ. (ಪುಟ-212) ಕುಮಾರವ್ಯಾಸ ಭಾರತವು ಮಹಾಕವಿಯ ಮಹಾಕೃತಿ ಎಂಬುದೀಗ ಒಪ್ಪಿದ ಮಾತಾಗಿದೆ. (ಪುಟ-270) (ಪುಟ-286)"[32]

ಇದೇ ರೀತಿ ಪ್ರಶಸ್ತಿವಾಚನದ ಧಾಟಿಯಲ್ಲಿ ಕವಿ, ಕೃತಿಗಳನ್ನು ವಿಮರ್ಶಿಸಿರುವುದೂ ಉಂಟು. ಇದಕ್ಕೂ ಎಂ.ವಿ.ಸೀ ಅವರ ಮಾತುಗಳನ್ನೇ ಉದಾಹರಣೆಯಾಗಿ ನೋಡಬಹುದು. "ಕವಿ ನಾಗರಾಜ ಪಂಪನನ್ನು 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ' ಎಂದು ಹೊಗಳಿದನು. ಇದರ ಪ್ರತಿಧ್ವನಿಯನ್ನು 'ಕನ್ನಡಕ್ಕೊಬ್ಬನೆ ಕೈಲಾಸಂ, ಎಂಬ ಪ್ರಶಸ್ತಿಯಲ್ಲಿ ಕಾಣಬಹುದು. ತೀನಂಶ್ರೀಯವರು ಪಂಪ ಕನ್ನಡದ ಕಾಳಿದಾಸ ಎಂದಿದ್ದಾರೆ. ಎಂ.ವೀ.ಸೀ ದೇ.ಜವರೇಗೌಡರನ್ನು ಕನ್ನಡದ ಬಾಸ್ವೆಲ್ ಎಂದಿದ್ದಾರೆ. ಕಾದಂಬರೀ ಸಾರ್ವಭೌಮ, ವಚನ ಪಿತಾಮಹ, ರಸ ಋಷಿ, ಗಾರುಡಿಗ, ಅಭಿನವ ಕಾಳಿದಾಸ, ಇತ್ಯಾದಿ ಪ್ರಶಸ್ತಿವಾಚಕಗಳು ವಿಮರ್ಶಕರಿಂದ ಪ್ರಯೋಗವಾಗಿ ಜನಪ್ರಿಯವಾಗಿವೆ. ನಾಡೋಜ ಪಂಪ, ಕನ್ನಡದ ಆಸ್ತಿ, ಕನ್ನಡದ ಆಶ್ವಿನೀ ದೇವತೆಗಳು ಇಂಥ ಮಾತುಗಳೂ ರೂಡಿಗೆ ಬಂದಿವೆ. ಒಬ್ಬ ಕವಿಯ ವಿಷಯದಲ್ಲಿ ನಮ್ಮ ಹೃತ್ಪೂರ್ವಕವಾದ ಮೆಚ್ಚಿಗೆಯನ್ನು, ಅಭಿಮಾನವನ್ನು ತಿಳಿಸುವಾಗ ಹೀಗಲ್ಲದೆ ಬೇರೆಯ ರೀತಿಯಲ್ಲಿ ತಿಳಿಸುವುದು ಬಹುಶಃ ಸಾಧ್ಯವಾಗಲಾರದು."[33] ಇಂಥ ಪದಪ್ರಯೋಗ ಮತ್ತು ಭಾಷಾ ಬಳಕೆ ಸಂಭವಕಾಲೀನ ವಿಮರ್ಶೆಯ ಒಂದು ಲಕ್ಷಣವಾಗಿದೆ.

### 3.24. ವ್ಯಕ್ತಿಪ್ರಧಾನತೆ

ಧರ್ಮ, ಕಾಲ, ದೇಶಗಳ ಆಚೆಗೆ ಕೃತಿಗಳನ್ನು ಚರ್ಚಿಸುವ ಜೊತೆ ಜೊತೆಯಲ್ಲೆ ಕೃತಿಯ ಕಾಲ. ಕೃತಿಕಾರನ ಕಾಲ ಮತ್ತು ಕೃತಿಕಾರನ ಜಾತಿ, ಧರ್ಮಗಳ ಕುರಿತ ಚರ್ಚೆಯು ಸಾಹಿತ್ಯ ಚರಿತ್ರೆ ಮತ್ತು ಸಂಶೋಧನೆಗಳಲ್ಲಿ ನಿಲ್ಲದೆ ನಡೆದಿದೆ. ಆದರೂ ಕಾಲ, ದೇಶ, ಧರ್ಮಗಳಿಂದ ಕೃತಿಯನ್ನು ಬಿಡುಗಡೆಗೊಳಿಸಿ ತನ್ನದೇ ಮಾನದಂಡಗಳಿಂದ ಕೃತಿ ಪರಿಚಯ-ಕೃತಿ ಪರೀಕ್ಷೆಗೆ ತೊಡಗಿದ ವಿಮರ್ಶೆಯು ಕೃತಿಯನ್ನು ಕೃತಿಕಾರನಿಂದ ಬಿಡುಗಡೆ ಮಾಡಲಿಲ್ಲ. ಬಿಡುಗಡೆಯ ಪ್ರಶ್ನೆ ಹಾಗಿರಲಿ; ಆಧುನಿಕ ವಿಮರ್ಶೆಯು ಸಾಹಿತ್ಯದ ಕೃತಿ, ಕಾಲ, ಧರ್ಮಗಳ ಕೇಂದ್ರವನ್ನು ಪಲ್ಲಟಿಸಿ ಕೃತಿಕಾರನ ಕೇಂದ್ರವನ್ನೇ ಮುಖ್ಯವಾಗಿ ಸ್ಥಾಪಿಸಿತು. ಕಾಲ, ಧರ್ಮಗಳು ಅಷ್ಟೇ ಅಲ್ಲ, ಕೃತಿಯೂ ಕೂಡ ಹಿನ್ನೆಲೆಗೆ ಸರಿದು ಕೃತಿಕಾರನೆ ಮುನ್ನೆಲೆಗೆ ಬಂದದ್ದು ಆಧುನಿಕ ವಿಮರ್ಶೆಯ ಒಂದು ಮುಖ್ಯ ಪಲ್ಲಟವಾಗಿದೆ. ಓದುಗ ಕೇಂದ್ರಿತ, ಸಮಾಜ ಕೇಂದ್ರಿತ ದೃಷ್ಟಿಗಿಂತ ಲೇಖಕ ಕೇಂದ್ರಿತ ದೃಷ್ಟಿ 'ಸಂಭವಕಾಲ'ದ ಮುಖ್ಯ ದೃಷ್ಟಿಯಾಗಿದೆ.

ಲೇಖಕನೇ ವಿಮರ್ಶೆಯಲ್ಲಿ ಪ್ರಧಾನವಾದದ್ದು ಸರಿಯೋ ತಪ್ಪೋ ಎಂಬುದು ಬೇರೆ ಚರ್ಚೆ. ಆದರೆ ಹೀಗೆ ಆಗಲು ಕಾರಣವೇನಿರಬಹುದು? ಎನ್ಲೈಟನ್ಮೆಂಟ್ ಕಾಲದ ಪುನರುಜ್ಜೀವಿತ ಬದುಕಿನಲ್ಲಿ ದೇವರು, ಧರ್ಮ, ಸಮುದಾಯ ಶಕ್ತಿ, ಸ್ವರ್ಗ-ನರಕ ಎಲ್ಲವೂ ನಿರಾಕರಣೆಗೆ ಗುರಿಯಾದವು. ಆಗ ಮನುಷ್ಯನೇ ಶ್ರೇಷ್ಠ, ಅವನೇ ಸೃಷ್ಟಿ-ಸ್ಥಿತಿ-ಲಯಕರ್ತ ಎಂಬ ನಂಬಿಕೆಯೊಂದು ಬೆಳೆಯತೊಡಗಿತು. ಇಂಥ ವ್ಯಕ್ತಿವಾದವೇ ವಿಜೃಂಭಿಸಿತೊಡಗಿದ್ದ ವೈಜ್ಞಾನಿಕ-ವೈಚಾರಿಕ-ಮಾನವತಾವಾದಿ ಕಾಲಧರ್ಮವು ವಿಮರ್ಶೆಯಲ್ಲಿಯೂ ವ್ಯಕ್ತಿವಾದವು ತಲೆ ಹಾಕಲು ಬಹುಶಃ ಕಾರಣವಾಗಿರಬಹುದು. ಇಡೀ ಲೋಕದ ಮುಖ್ಯ ಘಟಕ ವ್ಯಕ್ತಿ ಎಂಬ ವ್ಯಕ್ತಿವಾದದ ದೃಷ್ಟಿಯು ಸಾಹಿತ್ಯದ ಅನುಸಂಧಾನಗಳಲ್ಲಿ ವ್ಯಕ್ತಿಯನ್ನೆ ಮುಖ್ಯವಾಗಿ ಭಾವಿಸುವಂತೆ ಮಾಡಿರಬಹುದು. ರಮ್ಯಕಾವ್ಯದಲ್ಲಿ ಪ್ರಕೃತಿ ಅಥವಾ ದೈವವೇ ಪರಮೋನ್ನತ

ಶಕ್ತಿ ಎಂಬ ತಿಳುವಳಿಕೆ ಇದ್ದರೂ ಎನ್ಲೈಟನ್ಮೆಂಟ್ ಯುಗವು ವ್ಯಕ್ತಿಯನ್ನು ಪ್ರಧಾನ ಶಕ್ತಿಯಾಗಿ ಸ್ವೀಕರಿಸಿದ ಭಾವವೇ ಸಂಭವಕಾಲೀನ ವಿಮರ್ಶೆಯಲ್ಲು ಸ್ವೀಕೃತವಾಗಿದೆ. (ಆನಂತರದಲ್ಲಿ ಇದು ಕಡಿಮೆಯಾದರೂ ಇಗೀಗ ಮತ್ತೆ ಹೆಚ್ಚಾಗಿದೆ)

**3.25. ಪಾತ್ರ ಮತ್ತು ಪ್ರಕಾರಗಳ ಶ್ರೇಣೀಕರಣ**

'ಸಂಭವ ಕಾಲ'ದಲ್ಲಿ ಅನೇಕ ಪ್ರಕಾರಗಳು ಸಂಭವಿಸಿವೆ, ಸಮಾಜವನ್ನು ವರ್ಗೀಕರಿಸಿ ಶ್ರೇಣೀಕರಿಸುವ ದೃಷ್ಟಿಯು ಈ ಸಾಹಿತ್ಯ ಪ್ರಕಾರಗಳನ್ನೆಲ್ಲ ಶ್ರೇಣೀಕರಿಸಿ ನೋಡಲು ಪ್ರೇರಿಸಿರಬಹುದು. ಹೀಗಾಗಿ ವಿಮರ್ಶೆಯಲ್ಲಿ ನಿರುದ್ದಿಶ್ಯವಾಗಿ ಲೇಖಕರ ಮತ್ತು ಲಿಖಿತ ಪ್ರಕಾರಗಳ ಶ್ರೇಣೀಕರಣವು ನಿರ್ವಹಣೆಯಾಗಿದೆ. ಕಾವ್ಯವು ಶ್ರೇಷ್ಠವೆಂದು ಇತರ ಪ್ರಕಾರಗಳು ಕನಿಷ್ಠವೆಂದು; ಕವಿಯ ದೊಡ್ಡವನು, ಪ್ರತಿಭೆ ದೊಡ್ಡದು, ವಿಮರ್ಶಕ ಚಿಕ್ಕವನು, ಪಾಂಡಿತ್ಯ ಚಿಕ್ಕದು ಎಂದು ತಳಬುಡವಿಲ್ಲದ ಶ್ರೇಣೀಕರಣವನ್ನು ಸಾಹಿತ್ಯದ ಅನುಸಂಧಾನದಲ್ಲಿ ಸೃಷ್ಟಿಸಿಕೊಳ್ಳಲಾಗಿದೆ. ನ್ಯಾಯಾಧೀಶನಂತೆ ವರ್ತಿಸುವ ವಿಮರ್ಶಕ ಮತ್ತು ಸೃಷ್ಟಿಕರ್ತರಂತೆ ವರ್ತಿಸುವ ಕವಿಗಳ ನಡುವೆ ತಮ್ಮ ಸ್ಥಾನಮಾನ ಕುರಿತ ಸಂಘರ್ಷವು ಸಾಹಿತ್ಯ ಮತ್ತು ವಿಮರ್ಶೆ ಎರಡಲ್ಲೂ ನಡೆಯುತ್ತಲೇ ಬಂದಿದೆ. ಸ್ತರವಿನ್ಯಾಸ ನಿರ್ಮಾಣ ಕಾರ್ಯವು ವಿಮರ್ಶೆಯ ತತ್ವದಲ್ಲಿ ಎಲ್ಲೂ ಹೇಳಲ್ಪಟ್ಟಿಲ್ಲ. ಇದನ್ನೊಂದು ವಿಮರ್ಶೆಯ ಕಾರ್ಯ ಎಂದು ನಮ್ಮವರು ಭಾವಿಸದಿದ್ದರೂ; ಆಚರಣೆಯಲ್ಲಿ ಇದೊಂದು ವಿಮರ್ಶೆಯ ಕಾರ್ಯವೆಂಬಂತೆ ಪಾಲಿತವಾಗಿದೆ.

**3.26. ಪರಿಭಾಷೆಯ ಬಹುಳತೆ**

ಒಂದೇ ಪರಿಭಾಷೆ ಬಳಸಬಹುದಾದ ಕಡೆ ಹಲವು ರೀತಿಯ ಪರಿಭಾಷೆಗಳನ್ನು ಬಳಸಿರುವುದು ಈ ಕಾಲದ ಒಂದು ಲಕ್ಷಣ. ಉದಾ:ಗೆ ರಸಪ್ರಸ್ಥಾನ, ರಸಪ್ರಕರಣ, ರಸ ಸಿದ್ಧಾಂತ, ರಸವಿಚಾರ, ಇಂಥ ಪದಗಳನ್ನು ಸರಿಸುಮಾರು ಒಂದೇ ಅರ್ಥದಲ್ಲಿ ಬಳಸಿದ್ದಾರೆ. ಒಬ್ಬೊಬ್ಬರು ಒಂದೊಂದು ಪರಿಭಾಷೆ ಬಳಸುವುದೂ ಒಬ್ಬರೇ ಹಲವಾರು ರೀತಿ ಪರಿಭಾಷೆ ಬಳಸುವುದೂ ಇದೆ. ಸೈದ್ಧಾಂತಿಕ ಖಚಿತತೆ, ಪರಿಭಾಷೆಯ ಏಕಸೂತ್ರತೆ ಇಲ್ಲದಿರುವುದೇ ಈ ವಿಮರ್ಶೆಯ ಲಕ್ಷಣ. ಇದು ಯಾಕೆ ಹೀಗೆ? ಇದೊಂದು ರೂಪಗೊಳ್ಳುತ್ತಿರುವ ಪ್ರಕಾರ ಆದ್ದರಿಂದ ಇಂಥ ಘಟ್ಟಗಳಲ್ಲಿ ಈ ಲಕ್ಷಣ ಸಾಮಾನ್ಯ.

**3.27. ನಿಲುವುಗಳ ಭಿನ್ನತೆ–ನಿಲ್ದಾಣಗಳ ಬದಲಿಕೆ**

ಒಬ್ಬನೇ ವಿಮರ್ಶಕ ತದ್ವಿರುದ್ಧವೆಂದು ಕಾಣಬಹುದಾದ, ಭಿನ್ನವೆಂದು ಕಾಣಬಹುದಾದ, ನಿಲುವು, ದೃಷ್ಟಿಗಳನ್ನು ಪ್ರತಿಪಾದಿಸುವುದು ಸಂಭವಕಾಲೀನ ವಿಮರ್ಶೆಯಲ್ಲಿ ಸರ್ವೇಸಾಮಾನ್ಯವಾಗಿವೆ. ಭಿನ್ನ ನಿಲ್ದಾಣಗಳಲ್ಲಿ ನಿಂತು ಭಿನ್ನ ನಿಲುವುಗಳನ್ನು ಭಿನ್ನ ಭಿನ್ನ ಸಂದರ್ಭಗಳಲ್ಲಿ ತಳೆಯುವುದೂ ಸಾಮಾನ್ಯವಾಗಿದೆ. ಹಾಗೇ ತನ್ನ ನಿಲುವುಗಳನ್ನು ತಾನೇ ಮುರಿದು ಭಿನ್ನ ನಿಲುವುಗಳನ್ನು ಪ್ರತಿಪಾದಿಸುವ ಸಂದರ್ಭಮುಖಿ ವಿಮರ್ಶೆಯೂ ಇಲ್ಲಿ ಸಾಮಾನ್ಯವಾಗಿದೆ. ಇದು ಬಹುಪಾಲು ಎಲ್ಲ ವಿಮರ್ಶಕರ ವಿಮರ್ಶೆಯಲ್ಲು ಕಂಡು ಬರುವ ವಿದ್ಯಮಾನ. ಒಂದು ಉದಾಹರಣೆಯನ್ನು ಮಾತ್ರ ಇಲ್ಲಿ ನಿದರ್ಶನಕ್ಕಾಗಿ ನೀಡಲಾಗುವುದು. "ಪ್ರಾಚೀನ ಗ್ರಂಥಗಳ ವಿಮರ್ಶೆಯ ಸಮಯದಲ್ಲಿ ಆ ಕಾಲದ ರಸಿಕರ, ವಿದ್ವಜ್ಜನರ ದೃಷ್ಟಿ, ರೀತಿ, ಅಭಿರುಚಿಗಳು ಯಾವ ರೀತಿಯಾಗಿದ್ದವು ಎಂಬುದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅದರ ಪರೀಕ್ಷಣವನ್ನು ನಡೆಸಬೇಕು. ಈಚಿನ ವಿಮರ್ಶೆಗಾರರ ಮೌಲ್ಯಗಳನ್ನೂ ತೂಕಗಳನ್ನೂ ಆ ಕಾರ್ಯಕ್ಕೆ ಪ್ರಯೋಗಿಸಿ ಅವುಗಳ ಯೋಗ್ಯತೆಗಳನ್ನು ನಿರ್ಣಯಿಸುವುದು ಅನ್ಯಾಯವಾಗಬಲ್ಲುದು" "ನಮ್ಮ ಕಾಲದ ವಿಮರ್ಶೆ ನಮ್ಮ ಕಾಲದ ಬೆಲೆಗಳನ್ನು ನಿವೇದಿಸಲಿ; ಬೆಳೆಸಲಿ. ನಮ್ಮ ವಿಮರ್ಶೆ ನಮ್ಮ ಕಾಲದ ವಿಮರ್ಶೆಗಳನ್ನು ರೂಢಿಸಿ, ಶುಚಿಗೊಳಿಸಿ ಸ್ಥಾಪಿಸಲಿ"

ಒಂದೊಂದು ಪ್ರಕಾರಕ್ಕೆ ಕೃತಿಗೆ, ದೃಷ್ಟಿಕೋನಗಳಿಗೆ ವಿಮರ್ಶೆಯ ನಿಲುವುಗಳನ್ನು ರೂಪಿಸುವ ಶಕ್ತಿ ಇರುತ್ತದೆ. ಹಾಗೇ ಭಿನ್ನ ಸಂದರ್ಭಗಳಲ್ಲಿ ಬರೆದ ವಿಮರ್ಶೆ ತನ್ನ ಸಾಂದರ್ಭಿಕತೆಯಿಂದಲೂ, ವಿಮರ್ಶಕನ ದೃಷ್ಟಿ ಧೋರಣೆಗಳಲ್ಲಾದ ಪಲ್ಲಟಗಳಿಂದಲೂ ರೂಪ ಪಡೆಯುತ್ತಿರುತ್ತದೆ. ಹಾಗಾಗಿ ಪರಸ್ಪರ ದ್ವಂದ್ವವೆಂದು ಕಾಣುವ, ವಿರೋಧಿಯೆಂದು, ಪೂರಕವೆಂದು, ಭಿನ್ನವೆಂದು ಕಾಣುವ ನಿಲುವುಗಳು ಸಂಭವಿಸುವ ಸಾಧ್ಯತೆ ಇರುತ್ತದೆ. ಇದು ವಿಮರ್ಶೆಯ ದೌರ್ಬಲ್ಯವಲ್ಲ. ಲಕ್ಷಣ. 'ನೂರು ಮರ ನೂರ ಸ್ವರ' ಎನ್ನುವುದು ಭಿನ್ನ ಭಿನ್ನ ವಿಮರ್ಶಕರಿಗೇ ಅನ್ವಯವಾಗುತ್ತದೆ ಎಂದೇನೂ ಅಲ್ಲ. ಒಬ್ಬನೇ ವಿಮರ್ಶಕನ ಭಿನ್ನ ನಿರ್ಮಿತಿಗಳಿಗೂ ಅನ್ವಯವಾಗಬಹುದು.

**3.28. ವ್ಯಾಖ್ಯಾನ-ಟೀಕು-ವಚನಗದ್ಯ-ವಿಶ್ವಕೋಶ**

ಸಂಭವಕಾಲದಲ್ಲಿ ಆಧುನಿಕ ವಿಮರ್ಶೆಯು ಸಂಭವಿಸಿತು ಎಂದರೆ ಪ್ರಾಚೀನ ವಿಮರ್ಶೆಯ ಬೇರುಗಳೆಲ್ಲ ನಷ್ಟವಾದವು ಎಂದೇನೂ ಅಲ್ಲ. (ಪ್ರಾಗ್ರೂಪಗಳ ವಿವರಗಳಿಗೆ ನೋಡಿ; ಮೊದಲ ಬಾಗ) ಕೆಲವು ಪ್ರಾಗ್ರೂಪಗಳು ಇಲ್ಲವಾಗಿರಬಹುದು. ಆದರೆ ಹಲವು ಹಾಗೇ ಉಳಿದಿವೆ ಮತ್ತು ಹಲವು ರೂಪಾಂತರಗೊಂಡಿವೆ ಕೂಡ. ಟೀಕು, ವ್ಯಾಖ್ಯಾನ, ವಚನಗದ್ಯ, ಅಧ್ಯಯನ, ಪಾರಾಯಣ, ವಾಚನ, ಕೇಳಿಕೆ ಮೊದಲಾದುವು ಹಿಂದಿಗಿಂತಲು ಸಮೃದ್ಧವಾಗಿಯೇ ಸಂಭವಕಾಲದಲ್ಲಿ ಪ್ರಕಟವಾಗಿವೆ. 1840ರ ದಶಕದಲ್ಲಿ ಮೈಸೂರಿನ ಮುದ್ರಣಾಲಯದಿಂದ ಮುಮ್ಮಡಿಯವರ ವಲಯದ ಹಲವಾರು ಗ್ರಂಥಗಳು ಪ್ರಕಟವಾದುವು. ಇವುಗಳಲ್ಲಿ ಬಹುಪಾಲು ಟೀಕೆ, ವಚನಗದ್ಯ, ವ್ಯಾಖ್ಯಾನಗಳೇ ಆಗಿವೆ. ಆದರೆ ಇಂಥವುಗಳ ಬಗ್ಗೆ ನಮ್ಮ ವಿದ್ಯಾವಂತ ವಿಮರ್ಶಕರು ಹೆಚ್ಚಿನ ಮಾನ್ಯತೆ ನೀಡಿಲ್ಲ.

ದೇವಚಂದ್ರನ ರಾಜಾವಳಿ ಕತೆ, ಮತ್ತು ಹಿರಣ್ಯಗರ್ಭನ ವಿಶ್ವಕೃತಿ ಪರೀಕ್ಷಣಂ(1873) ಕೃತಿಗಳು ಆಧುನಿಕ ವಿಮರ್ಶೆ ಮತ್ತು ವಿಮರ್ಶೆಯ ಪ್ರಾಗ್ರೂಪಗಳು ಹಾಗೂ ಕಾವ್ಯಪರಂಪರೆಗಳು ಪರಸ್ಪರ ಒಂದರೊಳಗೊಂದು ಹೆಣೆದುಕೊಂಡ ರಚನೆಗಳಾಗಿವೆ. ಕಾವ್ಯ ವಿಮರ್ಶೆ, ವ್ಯಾಖ್ಯಾನ ಪ್ರಕಾರಗಳು ಹೆಣೆದುಕೊಂಡ ಸಂಭವಕಾಲೀನ ಕೃತಿಗಳಿವು. ಪ್ರಕಾರಗಳು ಕಲಸಿಕೊಂಡ ಮತ್ತು ಅಪ್ರಕಾರರೂಪಿಯಾದ ರಚನೆಗಳ ಸಂಭವವೂ ಇಲ್ಲಿನ ವಿಮರ್ಶೆಯ ಒಂದು ಲಕ್ಷಣವಾಗಿದೆ.

ಕಿಟ್ಟೆಲನ ಗಾಥಾಮೃತ ಕಲಶ(1875), ನಿಜಗುಣ ಶಿವಯೋಗಿಯ ವಿವೇಕ ಚಿಂತಾಮಣಿ(1884), ಗಂಗಾಧರ ಮಡಿವಾಳೇಶ್ವರ ತುರಮರಿಯವರ ಶಬ್ದಮಣಿದರ್ಪಣ ವ್ಯಾಖ್ಯಾನ(1886), ಕಾದಂಬರಿಯ ಗದ್ಯರೂಪವಾದ ಕಾದಂಬರಿ 'ವಚನಗದ್ಯ'(1876), ಎಂ.ಎಸ್.ಪುಟ್ಟಣ್ಣ ಮತ್ತು ಶ್ರೀನಿವಾಸ ಐಯ್ಯಂಗಾರರ ನೀತಿಚಿಂತಾಮಣಿ(1884) ಮುಂತಾದ ಕೃತಿಗಳು ಸಂಭವಕಾಲದಲ್ಲಿ ಸಂಗ್ರಹ, ವಿಶ್ವಕೋಶ ರಚನೆ, ವ್ಯಾಖ್ಯಾನ, ಟೀಕು, ವಚನಗದ್ಯಗಳ ರೂಪದಲ್ಲಿ ಪ್ರಕಟವಾದ ವಿಮರ್ಶೆಯ ವಿನ್ಯಾಸಗಳಿಗೆ ಕೆಲವು ಉದಾಹರಣೆಗಳಾಗಿವೆ.

**3.29. ಕೊನೆಗೆ ಮೊದಲು**

ಸರಿಸುಮಾರು 1800ರಿಂದ 1925ರವರೆಗೆ ವಿಮರ್ಶೆಯ ವಲಯಗಳನ್ನು ನೋಡುತ್ತ ಬಂದರೆ; ಈ ಸಂಭವಕಾಲೀನ ವಿಮರ್ಶೆಯು ಹಲವಾರು ವಿನ್ಯಾಸಗಳನ್ನು ಪಡೆದಿರುವಂತೆ ಕಾಣುತ್ತದೆ. 1. ನಿಘಂಟು ರಚನೆ, ಸಂಪಾದನೆ, ಸಂಗ್ರಹಗಳಿಗೆ, ಪಾಶ್ಚಾತ್ಯ ವಿದ್ವಾಂಸರು ಬರೆದ ಪೀಠಿಕೆ, ಪ್ರಸ್ತಾವನೆಗಳು ಸಂಭವಕಾಲೀನ ಕನ್ನಡ ವಿಮರ್ಶೆಯುಲ್ಲಿ ಒಂದು ವಿನ್ಯಾಸವಾದರೆ, 2. ಇದೇ ನೆಲೆಯ ಸ್ಥಳೀಯರ ಯತ್ನಗಳು ಇನ್ನೊಂದು ವಿನ್ಯಾಸವಾಗಿ ಬರುತ್ತವೆ. 3. ಅನುವಾದಕರ ಪೀಠಿಕೆ-ಪ್ರಸ್ತಾವನೆಗಳು ಮತ್ತೊಂದು ವಿನ್ಯಾಸವಾಗಿ ಬರುತ್ತವೆ. 4. ಟೀಕು, ವಚನಗದ್ಯ, ವ್ಯಾಖ್ಯಾನಗಳು ಮಗದೊಂದು ರೀತಿಯ ವಿನ್ಯಾಸಗಳಾಗಿ ಬರುತ್ತವೆ. ಇವಲ್ಲದೆ 5. ಮೊದ ಮೊದಲ ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷ ಭಾಷಣಗಳು ಕೂಡ ವಿಮರ್ಶೆಯ ಲಕ್ಷಣಗಳನ್ನು ಒಳಗೊಂಡಿವೆ. 6. ಸಾಹಿತ್ಯವನ್ನು ವಿಶ್ಲೇಷಿಸುವ, ಬೆಲೆಕಟ್ಟುವ, ಕವಿಯಸ್ಥಾನ ನಿರ್ಣಯ ಮಾಡುವ ವಿಮರ್ಶೆಗಳು ಆನಂತರದಲ್ಲಿ ಮತ್ತೊಂದು ವಿನ್ಯಾಸವಾಗಿ ಬರುತ್ತವೆ. 7. ಚರಿತ್ರೆರಚನೆಯ ವಿನ್ಯಾಸ 8. ಗ್ರಂಥಪರೀಕ್ಷೆ-ಪುಸ್ತಕ ವಿಮರ್ಶೆಯ ವಿನ್ಯಾಸ ಹೀಗೆ ಇಲ್ಲಿ ಹತ್ತಾರು ವಿನ್ಯಾಸಗಳು ಸಂಭವಿಸಿವೆ. ಇಲ್ಲಿನ ಮೊದಲ ಐದು ವಿನ್ಯಾಸಗಳೂ ವಿಮರ್ಶೆಯ ವಿನ್ಯಾಸಗಳಲ್ಲ.

ವಿಮರ್ಶೆಯ ಉದ್ದೇಶಕ್ಕಾಗಿ ಸೃಷ್ಟಿಯಾದ ವಿಮರ್ಶೆಯ ವಿನ್ಯಾಸವು ಪ್ರಬುದ್ಧವೂ, ಸ್ವತಂತ್ರ ಪ್ರಕಾರರೂಪಿಯೂ ಆಗಿ ಸೃಷ್ಟಿಯಾಗಿರುವುದು ಸರಿಸುಮಾರು 1860 ಆನಂತರದಲ್ಲಿ. ಇದು ಹೊಸ ಸಾಹಿತ್ಯದ ಸ್ವರೂಪ ಚರ್ಚೆ, ಛಂದೋ ಚರ್ಚೆ, ವಿಮರ್ಶಾ ತತ್ವ ಚರ್ಚೆ, ಕೃತಿ ಪರೀಕ್ಷೆ, ಕವಿಸ್ಥಾನ ನಿರ್ಣಯ ಇತ್ಯಾದಿ ಹಲವು ರೂಪಗಳಲ್ಲಿ ಸಂಭವಿಸಿದೆ. ಆನಂತರದಲ್ಲಿ ತಾನೂ ಅನೇಕ ವಿನ್ಯಾಸಗಳನ್ನು ಪಡೆಯುತ್ತ ಬೆಳೆದಿದೆ. ಹಾಗಾಗಿಯೇ ಇದನ್ನು ಒಂದು ಹೆಸರಿಟ್ಟು ಕರೆಯಲಾಗುವುದಿಲ್ಲ. ಈ ಕಾಲದ ಬಹುಪಾಲು ವಿಮರ್ಶೆಯು ವಿಮರ್ಶೆಯ ಉದ್ದೇಶಕ್ಕಾಗಿಯೇ ಸೃಷ್ಟಿಯಾದ ವಿಮರ್ಶೆಯಾಗಿದೆ. ಈ ವಿಮರ್ಶೆಯು ಇವತ್ತಿನವರೆಗೆ ತನ್ನ ಭಿನ್ನ ಅನುಸಂಧಾನಗಳ ಮೂಲಕ ಭಿನ್ನ ಮಾರ್ಗಗಳನ್ನು ಶೋಧಿಸುತ್ತ ಬರುತ್ತಿದೆ.

ಸಾಹಿತ್ಯರೂಪಿ, ಅಭಿನಂದನ ರೂಪಿ, ಅಧ್ಯಯನ(ಸಂಶೋಧನ) ರೂಪಿ, ಸರಳೀಕರಣರೂಪಿ, ಒಡನಾಟರೂಪಿ, ಸೂಕ್ತಿರೂಪಿ, ಸಮೀಕ್ಷಾರೂಪಿ ಹೀಗೆ ಹಲವು ರೂಪಗಳಲ್ಲಿ ಸ್ತ್ರೀವಾದಿ, ತೌಲನಿಕ, ವಿವರಣಾತ್ಮಕ, ಚಾರಿತ್ರಿಕ, ರೂಪನಿಷ್ಠ, ಪ್ರಾಯೋಗಿಕ(ಅನ್ವಯಿಕ), ಅಂತರ್‌ಶಿಸ್ತೀಯ, ಮಾರ್ಕ್ಸ್‌ವಾದಿ ಹೀಗೆ ಹಲವು ಪಂಥಗಳಲ್ಲಿ ಪರಿಕರದೃಷ್ಟಿ, ಪ್ರಕಾರದೃಷ್ಟಿ, ಕೃತಿದೃಷ್ಟಿ, ನೈತಿಕ ದೃಷ್ಟಿ, ನಾನು ನುಡಿ ಚಿಂತಾ ದೃಷ್ಟಿ, ವೈಚಾರಿಕ ದೃಷ್ಟಿ, ನಿರ್ವಸಾಹತೀಕರಣ–ಜಾಗತೀಕರಣ–ಸಂಸ್ಕೃತಿ ಅಧ್ಯಯನ, ಪ್ರೇರಣೆ–ಪ್ರಭಾವಗಳ ಅಧ್ಯಯನ, ಅಲಕ್ಷಿತ ನೆಲೆ, ಚಾರಿತ್ರಿಕ ದೃಷ್ಟಿ ಇತ್ಯಾದಿ ದೃಷ್ಟಿ–ಧೋರಣೆಗಳಲ್ಲಿ ಆಧುನಿಕ ವಿಮರ್ಶೆಯು ಬೆಳೆಯುತ್ತಲಿದೆ. ಇವುಗಳ ಜೊತೆಗೆ ಸಾಹಿತ್ಯ ಚರಿತ್ರೆ ರಚನೆ–ಅಧ್ಯಯನಗಳೂ ವಿಮರ್ಶೆಯ ವರ್ಗೀಕರಣ–ಅಧ್ಯಯನಗಳನ್ನು ಪ್ರಭಾವಿಸುತ್ತಿರುವುದರಿಂದ ವಿಮರ್ಶೆಯ ವಿಮರ್ಶೆ ಅಂದರೆ ಪಿಮರ್ಶೆಯೂ ಕೂಡ ವಿಮರ್ಶೆಯ ಒಂದು ಕವಲಾಗಿಯೇ ಬೆಳೆಯುತ್ತಿದೆ. ವಿಮರ್ಶೆಯು ಈಗೀಗಷ್ಟೆ ಅಲ್ಲ; ನಮ್ಮ ಅನಾದಿಯಿಂದಲೂ ಕೇವಲ ಅಕಾಡೆಮಿಕ್ಕಾದ ಅಥವಾ ಪಂಡಿತಮಾನ್ಯ ಚಟುವಟಿಕೆ ಮಾತ್ರವಾಗಿ ಇರದೆ ಸಾಂಸ್ಕೃತಿಕ ಅನುಸಂಧಾನವಾಗಿ ಆಗುತ್ತ ಬರುತ್ತಿದೆ. ಮೊದಲಿನಿಂದ ಇಂದಿನವರೆಗೆ ನಮ್ಮ ವಿಮರ್ಶೆಯು ವೃದ್ಧಿಯಾಗುತ್ತ ಬಂದಿದೆ ಎಂದರೆ ರೇಖಾತ್ಮಕವಾದ ವಿಕಾಸವನ್ನು ಹೊಂದಿದೆ ಎಂದೇನೂ ಅರ್ಥವಲ್ಲ. ಅನೇಕ ಏಳು ಬೀಳುಗಳನ್ನು ಕಾಣುತ್ತ, ಪಾಶ್ಚಾತ್ಯ ಮತ್ತು ಇತರ ಜಾಗತಿಕ ತತ್ವ, ಸಿದ್ಧಾಂತಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತ, ಸ್ವತಂತ್ರ ಚಿಂತನೆಯಿಂದಲೂ, ಪರಂಪರೆಯ ಬೇರುಗಳಿಂದಲೂ ಬೆಳೆಯುತ್ತ, ಹಲವು ವಿನ್ಯಾಸಗಳ ಒಂದು ಜಗತ್ತಾಗಿ ಇರುತ್ತ ಇದೆ. ಹಲವು ವಿನ್ಯಾಸಗಳು ಇದ್ದರೂ ಒಂದಕ್ಕೆ ಒಂದು ಡಿಕ್ಕಿ ಹೊಡೆಯದಂತೆ ಸಹಬಾಳ್ವೆಯಿಂದ ಬಹುರೂಪಿ ಆಗಿಯೂ, ಸಂಕರರೂಪಿ ಆಗಿಯೂ ಐಕಮತಿಯಿಂದ ಇದೆ. ಇನ್ನೂ ವೃದ್ಧಿಯಾಗುತ್ತಿದೆ. ಹಾಗೆ ಯಾವ ಶಿಸ್ತೂ ಮುಗಿದುಹೋಗುವದಿಲ್ಲ. ಆಗುತ್ತಿರುತ್ತದೆ. ಕೆಲವೊಮ್ಮೆ ರೂಪಾಂತರ ಆಗಬಹುದಷ್ಟೆ. ನಮ್ಮ ವಿಮರ್ಶೆ ಕೂಡ ಇನ್ನೂ ಆಗುತ್ತಿದೆ. ರೂಪಾಂತರಗಳಿಗೂ ಒಳಗಾಗುತ್ತ ಬಂದಿದೆ. ಬರುತ್ತಿದೆ.

ಸಂಭವಕಾಲದಲ್ಲಿ ಸೃಷ್ಟಿಯಾದ ವಿಮರ್ಶೆ ಅನಂತರದ ಕಾಲದಲ್ಲಿ ಆಗಿನ ಎಲ್ಲ ಲಕ್ಷಣಗಳನ್ನು ಮೈಗೂಡಿಸಿಕೊಂಡು ಬೆಳೆದಿದೆಯೇ ಎಂದು ನೋಡುವುದು ಮುಂದಿನ ಅಧ್ಯಾಯಗಳ ಉದ್ದೇಶವಲ್ಲ. ಕುವೆಂಪು ಕುರಿತ ವಿಮರ್ಶೆಯನ್ನು ಆಧುನಿಕ ವಿಮರ್ಶೆಯ ಅಂಗಾಂಶವಾಗಿ ಪರಿಗಣಿಸಿ, ಅದರ ವಿನ್ಯಾಸ ಹೇಗಿದೆ ಮತ್ತು ಅದರ ತಾತ್ವಿಕತೆಗಳೇನು ಎಂದು ಪರಿಶೀಲಿಸುವುದು; ಮತ್ತು ಆ ಮೂಲಕ ಕನ್ನಡ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ತಿಳಿಯಲು ಯತ್ನಿಸುವುದು ಇನ್ನು ಮುಂದಿನ ಅಧ್ಯಾಯಗಳ ಉದ್ದೇಶವಾಗಿದೆ.

***

**ಸಂಭವಕಾಲದ ನಮ್ಮ ವಿಮರ್ಶೆಯ ವಿನ್ಯಾಸಗಳ ಒಂದು ಸ್ಥೂಲ ನೋಟವನ್ನು ಪಡೆಯಲು ಈ ಕೆಳಗೆ ಕೆಲ 'ವಿಮರ್ಶಾ' ಕೃತಿ ಮತ್ತು ಲೇಖನಗಳನ್ನು ನೀಡಲಾಗಿದೆ: ಗಮನಿಸಿ;**

? ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ–ಕರ್ನಲ್ ವಿಲ್ಕ್ಸ್

? ಸಮ್ ರಿಮಾರ್ಕ್ಸ್ ಆನ್ ಕನ್ನಡ ಲಾಂಗ್ವೇಜ್–ಬುಚರ್, ಇದು ಇವನ ಇಂಗ್ಲಿಶ್ ನಿಘಂಟಿಗೆ ಬರೆದ ಮುನ್ನುಡಿ.

1800 ಪ್ರಭುನಾಟಕ (ಅಲ್ಲಮನ ಕುರಿತ ಯಕ್ಷಗಾನ)–ಸಕ್ಕರಿ ಶಾಂತ

1800 ದೇವಾಂಗ ಮತಪ್ರಕಾಶಿಕೆಗೆ ಕಾಡಸಿದ್ದಪ್ಪ ಬರೆದಿರುವ ವ್ಯಾಖ್ಯಾನ

1804 ಕೆನರೀಸ್ ಗ್ರಾಮರ್–ಜಾನ್ ಮೆಕೆರಲ್

1810 (1817)ಕರ್ನಾಟಕ ಆಂಡ್ ಇಂಗ್ಲಿಶ್ ಡಿಕ್ಷನರಿ–ಡಬ್ಲ್ಯು.ರೀವ್ ಇಲ್ಲಿನ ಮುನ್ನುಡಿ

1811 ಬೈಬಲ್ ಅನುವಾದ–ಹ್ಯಾಂಡ್ಸ್

1816 (1906)–ಹಿಂದು ಮ್ಯಾನರ್ಸ್, ಕಸ್ಟಮ್ಸ್ ಅಂಡ್ ಸೆರಮನಿಸ್–ಅಬೆ ದೂಬಾಯಿ

1817 ಎ ಗ್ರಾಮರ್ ಆಫ್ ಕರ್ನಾಟ ಲಾಂಗ್ವೇಜ್–ವಿಲಿಯಂ ಕೇರಿ

1827 ಬೈಬಲ್ ಅನುವಾದ–ವಿಲಿಯಂ ಕೇರಿ

1838 ಹೊಸಗನ್ನಡ ನುಡಿಗನ್ನಡಿ–ಬಿ.ಕೃಷ್ಣಮಾಚಾರಿ, ಶ್ರೀರಂಗಪಟ್ಟಣ

1840 ಮುಮ್ಮಡಿಯವರ ಗ್ರಂಥಗಳು

1846 ಆನ್ ಕ್ಯಾನರೀಸ್ ಲಾಂಗ್ವೇಜ್ ಅಂಡ್ ಲಿಟರೇಚರ್–ಗಾಟ್ಫ್ರೆಡ್ ವೈಗಲ್(ಜರ್ಮನ್), ಇದರ ಇಂಗ್ಲಿಶ್ ಅನುವಾದ ಕರೆನ್ ಸ್ಕೆರರ್

1848 ಮುಯ್ಯದ ಪದ–ಪ್ರಾಣೇಶ ವಿಠ್ಠಲ (ದಾಸರ ಹಾಡುಗಳ 70 ಪುಟಗಳ ಸಂಗ್ರಹ)

1851 ಕಥಾಸಾಗರ–ಮಾನವಿ ವೀರಪ್ಪ, ಇದೊಂದು ಕಥಾಸಂಕಲನವಾಗಿದ್ದು ಇದಕ್ಕೆ ಮುನ್ನುಡಿ ಇದೆ.
1864 ವಿವೇಕ ಚಿಂತಾಮಣಿ–ಸಂ.ಸಿದ್ಧಾಂತಿ ಶಿವಶಂಕರಶಾಸ್ತ್ರಿ
1866 ಶಬ್ದಮಣಿ ದರ್ಪಣ ವ್ಯಾಖ್ಯಾನ–ಗಂಗಾಧರ ಮಡಿವಾಳೇಶ್ವರ ತುರಮರಿ
1868 ಪ್ರಾಕ್ಕಾವ್ಯ ಮಾಲಿಕೆ–ಜಿ.ವುರ್ತ್, ಬಾಸೆಲ್ ಮಿಶನ್, (ಇಂಗ್ಲಿಶಿನಲ್ಲಿ ಪಠ್ಯಗಳ ಸಾರಾಂಶ ಇದೆ. ಪೀಠಿಕೆ ಇದೆ)
1869 ಶಬ್ಧಮಂಜರಿ–ಗಂಗಾಧರ ಮಡಿವಾಳೇಶ್ವರ ತುರಮರಿ, ಮುನ್ನುಡಿ
1869 ಶಾಕುಂತಲ ಅನುವಾದ–ಚುರಮುರಿ ಶೇಷಗಿರಿರಾಯ, ಮುನ್ನುಡಿ
1872 ಕನ್ನಡ ಗ್ರಾಮರ್–ಕಿಟೆಲ್
1873 ವಿಶ್ವಕೃತಿ ಪರೀಕ್ಷಣಂ–ಹಿರಣ್ಯಗರ್ಭ, ಪ್ರಾಚೀನ ಜೈನ ಕಾವ್ಯಗಳ ವಿಮರ್ಶೆ
1873 ಮುದ್ರಾಮಂಜೂಷ–ಸಂ.ಜೆ.ಸ್ಟೀವನ್ಸನ್, ಪ್ರಸ್ತಾವನೆ
1874 ಅನ್ ಎಸ್ಸೇ ಆನ್ ಕ್ಯಾನರೀಸ್ ಲಿಟರೇಚರ್–ಕಿಟೆಲ್, ನಾಗವರ್ಮಾಶಸ್ ಪ್ರಸೋಡಿಗೆ ಬರೆದ ಮುನ್ನುಡಿ
1875 ಗಾಥಾಮೃತ ಕಲಶ–ಕಿಟೆಲ್ (ಗಾದೆಗಳ ಸಂಗ್ರಹ)
1876 ಕನ್ನಡ ಕಾದಂಬರಿ ಸರಳಾನುವಾದ–ಗಂಗಾಧರ ಮಡಿವಾಳೇಶ್ವರ ತುರಮರಿ, (ಪ್ರಕಟಣೆ–1901) ಪೀಠಿಕೆ
1876 ಉಷಾಹರಣ ನಾಟಕ–ಸಕ್ಕರಿ ಬಾಳಾಚಾರ್ಯ, ಪೀಠಿಕೆ
1877 ರಾಮಚಂದ್ರಚರಿತಪುರಾಣ ಸಂಪಾದನೆ–ಬಿ.ಎಲ್.ರೈಸ್, (ಪೂರ್ಣ ಕೃತಿಯ ವಿಮರ್ಶೆ ಇದೆ)
1879 ಮೈಸೂರಿನ ಶಾಸನಗಳು–ಫ್ಲೀಟ್
1881 ಜಯಸಿಂಹರಾಜ ಚರಿತ್ರೆ (ಸಿಂಬಲೈನ್ ಅನುವಾದ)–ಎಂ.ಎಸ್.ಪುಟ್ಟಣ್ಣ, ಪೀಠಿಕೆ
1882 ದಿ ಪೊಯೆಟ್ ಪಂಪ–ಇ.ಪಿ.ರೈಸ್, ಇಂಗ್ಲೆಂಡಿನ ನಿಯತಕಾಲಿಕವೊಂದಕ್ಕೆ ಬರೆದ ಲೇಖನ
1882 ನಾಗವರ್ಮನ ಕರ್ನಾಟಕ ಭಾಷಾಭೂಷಣಕ್ಕೆ ಬರೆದ ಮುನ್ನುಡಿ–ಬಿ.ಎಲ್.ರೈಸ್
1884 ವಿವೇಕ ಚಿಂತಾಮಣಿ–ನಿಜಗುಣ ಶಿವಯೋಗಿ
1884 ಕನ್ನಡ ಲಿಟರೇಚರ್–ಇ.ಪಿ.ರೈಸ್, ಹೆರಿಟೇಜ್ ಆಫ್ ಇಂಡಿಯಾ ಗ್ರಂಥಮಾಲಿಕೆಯಲ್ಲಿ ಬರೆದ ಲೇಖನ
1884 ನೀತಿ ಚಿಂತಾಮಣಿ–ಸಂ.ಎಂ.ಎಸ್.ಪುಟ್ಟಣ್ಣ ಮತ್ತು ಎಂ.ಬಿ.ಶ್ರೀನಿವಾಸ ಐಯ್ಯಂಗಾರ್: ಪುರಾಣ, ಇತಿಹಾಸಗಳಿಂದ ಆಯ್ದ 165 ಕತೆಗಳ ಸಂಗ್ರಹ ಮತ್ತು ಪೀಠಿಕೆ
1885 ಮಾಲವಿಕಾಗ್ನಿ ಮಿತ್ರ ಅನುವಾದ–ಧೋಂಡೋ ನರಸಿಂಹ ಮುಳಬಾಗಲ, (ಮುನ್ನುಡಿ)
1885 ದುರ್ಗೇಶ ನಂದಿನಿ–ಅನು.ಬಿ.ವೆಂಕಟಾಚಾರ್ಯ (ಪ್ರಸ್ತಾವನೆ)
1887 ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ–ಸಂಸ (ಮುನ್ನುಡಿ)
1888 ಪ್ರಾಚೀನ ನಾಟ್ಯ ಕಥಾವರ್ಣನ–ಸಂಸ
1889 ಮರ್ಯಾದೆ ರಾಮಣ್ಣನ ಕಥೆಗಳು–ಸಂ.ಮಾಲೂರು ಎಸ್.ಕೃಷ್ಣಯ್ಯ
1899 ಶ್ರವಣಬೆಳಗೊಳದ ಶಾಸನಗಳು–ಫ್ಲೀಟ್
1890 ವಿಮರ್ಶೆಯ ಒರೆಗಲ್ಲು–ಬಸವಪ್ಪ ಶಾಸ್ತ್ರೀ, ತಮ್ಮ ಭರ್ತೃಹರಿಯ ಸುಭಾಷಿತ ಅನುವಾದಕ್ಕೆ ಬರೆದ ಪ್ರತಿಕ್ರಿಯೆ
1892 ಚಂಡಮಾರುತ–ಟೆಂಪೆಸ್ಟ್ ಕತಾರೂಪ–ಬಿ.ಸುಬ್ಬರಾವ್
1893 ಮಿತ್ರವಿಂದಾ ಗೋವಿಂದ–ಅನು.ಸಿಂಗರಾರ್ಯ
1895 ಪುರಂದರ ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು–ಹೊನ್ನಾಳಿ ಭೀಮದಾಸ (10 ಪುಟಗಳ ಪೀಠಿಕೆ ಇದೆ)
1895 ಪ್ರತಾಪರುದ್ರ–ಅನು.ಎಂ.ಎಲ್ ಶ್ರೀಕಂಠೇಶಗೌಡ, ಮುನ್ನುಡಿ
1895 ಕವಿಚಕ್ರವರ್ತಿ ರನ್ನನ ಜೀವನ ಚರಿತ್ರೆ, ಗ್ರಂಥವಿಮರ್ಶೆ ಇತ್ಯಾದಿ–ಎಂ.ಎ.ರಾಮಾನುಜ ಐಯ್ಯಂಗಾರ್
1898 ಪ್ರಬುದ್ಧ ಪದ್ಮನಯನೆ–ಗಳಗನಾಥ, ಸ್ವತಂತ್ರ ಕಾದಂಬರಿ: ಇದರ ಮುನ್ನುಡಿ
1899 ಇಂದಿರಾಬಾಯಿ–ಗುಲ್ವಾಡಿ ವೆಂಕಟರಾಯ, ಪ್ರಸ್ತಾವನೆ
1901 ಶೇಷರಾಮಾಯಣಂ ಪೀಠಿಕೆ–ಸೋಸಲೆ ಅಯ್ಯಾಶಾಸ್ತ್ರಿ
1904 ಪ್ರಬಂಧಾವಳಿ–ಎಂ.ಎ.ರಾಮಾನುಜ ಐಯ್ಯಂಗಾರ್
1905 ಕನ್ನಡ ಒಂದನೆಯ ಪುಸ್ತಕ–ಎಂ.ಆರ್.ಶ್ರೀನಿವಾಸಮೂರ್ತಿ
1907 ಕರ್ನಾಟಕ ಕವಿಚರಿತೆ–3 ಮೊದಲ ಸಂಪುಟ–ಆರ್.ನರಸಿಂಹಾಚಾರ್, ಮೊದಲ ಸಂಪುಟದ ಕಾರ್ಯಾರಂಭ 1894
1908 ಕವಿಸಮಯಂ–ಎಂ.ಎ.ರಾಮಾನುಜ ಐಯ್ಯಂಗಾರ್ (ವಿಮರ್ಶಾಗ್ರಂಥ)
1909 ಇಂದಿರಾ ಕಾದಂಬರಿಗೆ ಬರೆದ ಮುನ್ನುಡಿ, ಗಳಗನಾಥ
1910 ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ–ಎಂ.ಎಸ್.ಪುಟ್ಟಣ್ಣ
1911 ನೀತಿಮಂಜರಿ–2–ಆರ್.ನರಸಿಂಹಾಚಾರ್, ತಮಿಳಿನ ಕುರುಳ್ ಅನುವಾದ. (ಮೊದಲ ಭಾಗದ ವಿಮರ್ಶೆ ಇದರ ಕೊನೆಯಲ್ಲಿದೆ)

1912 (1913, 1914)–ಕನ್ನಡ ಮಾದರಿ ಉಪನ್ಯಾಸಗಳು–ಶಾರದಾ ಪ್ರೆಸ್, ಬೆಂಗಳೂರು
1913 ಜಿನಭಜನ ಸಾರ–ಸಂ.ಎರ್ತೂರ ಶಾಂತಿರಾಜ ಶಾಸ್ತ್ರಿ (ಜೈನರ ಹಾಡುಗಳ ಸಂಗ್ರಹ ಗ್ರಂಥ)
1913 ಕವಿಕಾರ್ಯ ಪ್ರಶಂಸೆ–ಎಂ.ಎ.ರಾಮಾನುಜ ಐಯ್ಯಂಗಾರ್
1915 ಅಕಿಂಡರೇನ್‌ಗೆ ಅಯಾಟ್ಲಕಿರ್ಸ್ ಬರೆದ ಮುನ್ನುಡಿ (ಶ್ರೀಕಂಠಯ್ಯ, ಹೆಸರು ಹಿಂದು ಮುಂದಾಗಿದೆ)
1915 ಕನ್ನಡ ಲೇಖನ ಲಕ್ಷಣ–ಎಂ.ಎಸ್.ಪುಟ್ಟಣ್ಣ
1916 ಮೊದಲ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ–ಎಚ್.ವಿ.ನಂಜುಂಡಯ್ಯ
1917 ಕರ್ನಾಟಕ ಗತವೈಭವ–ಆಲೂರ ವೆಂಕಟರಾಯ
1917 ನಂಜನಗೂಡು ತಿರುಮಲಾಂಬಾ ಕಾದಂಬರಿಗಳು–ಮಾಸ್ತಿ
1918 ಕನ್ನಡ ಕವಿತೆಯ ಭವಿತವ್ಯ–ಹಟ್ಟಿಯಂಗಡಿ ನಾರಾಯಣರಾಯ
1919 ಕವಿಚರಿತೆ ಸಂಪುಟ 2–ಆರ್.ನರಸಿಂಹಾಚಾರ್
1919 ಪ್ರಾಸ ವಿಚಾರವು–ಮ.ಪ್ರ.ಪೂಜಾರ, (ವಾಗ್ಭೂಷಣ)
1919 ಕವಿತಾವರ್ಧನ–ಹಟ್ಟಿಯಂಗಡಿ ನಾರಾಯಣರಾಯ, ಮುನ್ನುಡಿ
1919 ಪ್ರಾಸ ನಿರಾಸ–ಕೇಶವಶರ್ಮ ಗಲಗಲಿ (ವಾಗ್ಭೂಷಣ)
1919 ಕನ್ನಡ ಐತಿಹಾಸಿಕ ಕಾದಂಬರಿಗಳು–ಎ.ಆರ್.ಕೃಷ್ಣಶಾಸ್ತ್ರಿ
1919 ಇಂಗ್ಲಿಶ್ ಗೀತೆಗಳು–ಬಿ.ಎಂ.ಶ್ರೀಕಂಠಯ್ಯ, ಮುನ್ನುಡಿ, ಪ್ರಕಟಣೆ 1926
1920 ಮೈಸೂರು ಚರಿತ್ರೆಯ ಮೇಲೆ ಕಾದಂಬರಿ ರಚಿಸಲು ಇರತಕ್ಕ ಸಾಮಗ್ರಿಗಳು–ಎ.ಆರ್.ಕೃಷ್ಣಶಾಸ್ತ್ರಿ
1920 ತಿರುಮಲಾಂಬಾ ಕಾದಂಬರಿ ಮುನ್ನುಡಿ
1920 ಸಾಹಿತ್ಯ ಮತ್ತು ಜನಜೀವನ–ಡಿ.ವಿ.ಜಿ.
1920 ರಾಮಾಶ್ವಮೇಧ ಸಾರಸಂಗ್ರಹ–ಮ.ಪ್ರ.ಪೂಜಾರ
1920 ನಾಟಕ ಕಲೆ–ಆತ್ಮರಾಮಶಾಸ್ತ್ರಿ ಓಡ್ಲಮನೆ
1921 ಎಳನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ–ಪುಟ್ಟಣ್ಣ ಚೆಟ್ಟಿ
1921 ಕ್ಯಾನರೀಸ್ ಪ್ರೋಸ್, ಕತಾಸಂಗ್ರಹ–ಡೇನಿಯಲ್ ಸ್ಯಾಂಡರ್‌ಸನ್, ಮುನ್ನುಡಿ
1922 ಕರ್ನಾಟಕ ಸಾಹಿತ್ಯದಲ್ಲಿ ಷಡಕ್ಷರಿಯ ಸ್ಥಾನ ನಿರ್ದೇಶನ–ಎಂ.ಆರ್.ಶ್ರೀನಿವಾಸಮೂರ್ತಿ
1922 ನಮಗೆ ಬೇಕಾದ ಕಾವ್ಯ–ಬೇಂದ್ರೆ
1922 ಸಾಹಿತ್ಯ–ಮಾಸ್ತಿ
1924 ಸರ್ವಜ್ಞನ ವಚನಗಳು–ಉತ್ತಂಗಿ ಚನ್ನಪ್ಪ, ಪೀಠಿಕೆ
1924 ವಿಮರ್ಶೆಯ ಕಾರ್ಯ–ಮಾಸ್ತಿ
1925 ಹನ್ನೊಂದನೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ–ಬೆನಗಲ್ ರಾಮರಾಯ
1925 ವಿಮರ್ಶೆ 1–ಮಾಸ್ತಿ
1928 ರನ್ನಕವಿ ಪ್ರಶಸ್ತಿ–ವಿವಿಧ ಲೇಖಕರು

## ಅಡಿಟಿಪ್ಪಣಿಗಳು

1. ಹೆಚ್ಚಿನ ವಿವರಗಳಿಗೆ ನೋಡಿ: ಹೊಸಗನ್ನಡ ಅರುಣೋದಯ: ಶ್ರೀನಿವಾಸ ಹಾವನೂರ, ಕನ್ನಡ ಪುಸ್ತಕ ಪ್ರಾಧಿಕಾರ, 2000: ಬೆಂಗಳೂರು
2. ಹತ್ತೊಂಬತ್ತನೆ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ–ಎ.ಎಸ್.ಜಯರಾಂ: 1983: ಕ.ಸಾ.ಪ. ಬೆಂಗಳೂರು, ಪುಟ 137
3. ವಸಾಹತುಶಾಹಿ ಮತ್ತು ಭಾಷಾಂತರ–ವಿ.ಬಿ.ತಾರಕೇಶ್ವರ, 2006: ಕನ್ನಡ ವಿ.ವಿ.ಹಂಪಿ. ಪುಟ 129.
4. ಅದೇ ಪುಟ: 146, 147
5. ಅದೇ ಪುಟ: 157, 158
6. ಇಂದಿರಾಬಾಯಿ(1899) ಪೀಠಿಕೆ, ಗುಲ್ವಾಡಿ ವೆಂಕಟರಾಯ: ಪುಟ 3–4, ಶತಮಾನದ ಸಾಹಿತ್ಯ ವಿಮರ್ಶೆ–ಸಂ.ಎಚ್.ಎಸ್.ರಾಘವೇಂದ್ರ ರಾವ್, 2001: ಸಾಹಿತ್ಯ ಅಕಾಡೆಮಿ, ಬೆಂಗಳೂರು
7. ಅದೇ, ಪುಟ 4, 'ಸದ್ಗುರು ಪ್ರಭಾವ'–ಗಳಗನಾಥ, ಮುನ್ನುಡಿ.
8. ನವೋದಯ ಕನ್ನಡ ವಿಮರ್ಶಾ ಸಾಹಿತ್ಯದ ಸ್ವರೂಪ: ಒಂದು ಅಧ್ಯಯನ–ಸುಜಾತ, 2007, ಪುಟ–48
9. ಹಿತಬೋಧಿನಿ ಪತ್ರಿಕೆ, 1986
10. ಪ್ರಬುದ್ಧ ಕರ್ನಾಟಕ, ಸಂಪುಟ 1, ಸಂಚಿಕೆ 1–1919. ಪುಟ: 5–6
11. ಕ.ಸಾ.ಪ.ಪ. ಸಂಚಿಕೆ: 1–1–1916, ಪುಟ: 3
12. ಅದೇ: ಸಂಪುಟ; 4, ಸಂಚಿಕೆ; 2–3, 1919, ಪುಟ: 133

13. ಅದೇ: ಪುಟ–198
14. ಅದೇ: ಪುಟ–209
15. ಸಮಗ್ರ ಕಾವ್ಯ–ಪು.ತಿ.ನರಸಿಂಹಾಚಾರ್, ಪು.ತಿ.ನ. ಟ್ರಸ್ಟ್, ಬೆಂಗಳೂರು, 2004: ಪುಟ: 928
16. ಅಪವಾದಗಳುಂಟು. ಉದಾಹರಣೆ: ಕುವೆಂಪು ರಕ್ತಾಕ್ಷಿಗೆ ಎ.ಆರ್.ಕೃ. ಮುನ್ನುಡಿ
17. ಹೆಚ್ಚಿನ ವಿವರಗಳಿಗೆ ನೋಡಿ ಮೊದಲ ಕಟ್ಟಿನ ಗದ್ಯ–ಎಚ್.ಎಸ್.ಶಿವಪ್ರಕಾಶ್, ಅಭಿನವ ಪ್ರಕಾಶನ, ಬೆಂಗಳೂರು, ಪುಟ–107ಮತ್ತು141
18. ಕೃತಿ ಸಂಸ್ಕೃತಿ–ಎಂ.ಜಿ.ಕೃಷಮೂರ್ತಿ, ಋಜುವಾತು ಪ್ರಕಾಶನ, ಮೈಸೂರು, 1994: ಪುಟ 300
19. ಈ ಕುರಿತ ವಿವರಗಳಿಗೆ ನೋಡಿ: ಸಂಸ್ಕೃತಿ ಕಥನ–ಡಿ.ಆರ್. ನಾಗರಾಜ, ಕನ್ನಡ ಪುಸ್ತಕ ಪ್ರಾದಿಕಾರ. 2002: ಪುಟ, 19–23
20. ಸಹೃದಯ ಸಂವಾದ–ಸಂ ಎಸ್.ವಿದ್ಯಾಶಂಕರ, ಜಿ.ಎಂ.ಹೆಗಡೆ, ಪ್ರಿಯದರ್ಶಿನಿ ಪ್ರಕಾಶನ, ಬೆಮಗಳೂರು, 2005: ಪುಟ–199
21. ಅದೇ, ಪುಟ–198
22. ಇದರ ಇನ್ನಷ್ಟು ಚರ್ಚೆಗೆ ನೋಡಿ: ವಿಮರ್ಶೆಯ ಭಾಷೆ ಪರಿಭಾಷೆ–ಎಂ.ವೀ.ಸೀ: ಕನ್ನಡ ವಿಮರ್ಶೆಯ ನೆಲೆ ಬೆಲೆ–ಸಂ.ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿ.ವಿ. 1975
23. ಧ್ವನಿತತ್ವ ಮತ್ತು ಕನ್ನಡ ವಿಮರ್ಶೆ–ಡಾ.ಕೆ.ವಿ.ನಾರಾಯಣ, ಸಾಹಿತ್ಯ ವಿಮರ್ಶೆ–ಸಂ.ಜಿ.ಎಂ.ಹೆಗಡೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1998, ಪುಟ 1
24. ಇದನ್ನೊಂದು ಸಿದ್ಧಾಂತವನ್ನಾಗಿ ಮಂಡಿಸಲು ಇನ್ನಷ್ಟು ಸಾಧಾರಪೂರ್ವಕ ಅಧ್ಯಯನ ಅಗತ್ಯ. ಈ ಅಧ್ಯಾಯವು ಅಜಮಾಸು ಇಂತಹ ಯತ್ನವೊಂದನ್ನು ಪರೋಕ್ಷವಾಗಿ ಮಾಡುತ್ತಿದೆ.
25. ಸಾಹಿತ್ಯ ವಿಮರ್ಶೆ ಮತ್ತು ರಾಜಕಾರಣ–ಕೆ.ಕೇಶವಶರ್ಮ, ಸಾಹಿತ್ಯ ವಿಮರ್ಶೆ–ಸಂ.ಪಂಡಿತಾರಾಧ್ಯ, 1999, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1998, ಪುಟ 42
26. ಹೆಚ್ಚಿನ ವಿವರಗಳಿಗೆ ನೋಡಿ: ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ: ಡಾ.ಎಚ್.ಎಸ್.ಶ್ರೀಮತಿ, ಅಜಂತ ಪ್ರಕಾಶನ, ಹೊಸಪೇಟೆ, 1993: ಪುಟ: 3–6
27. ಸಾಹಿತ್ಯ ಸಮ್ಮುಖ–ನಿ.ಮುರಾರಿ ಬಲ್ಲಾಳ, ಕರ್ನಾಟಕ ಸಂಘ, ಪುತ್ತೂರು, 2001, ಪುಟ 44–46
28. ಜೊತೆಗೆ ನೋಡಿ: ಮಾತು ಸೋತ ಭಾರತ–ಯು.ಆರ್.ಅನಂತಮೂರ್ತಿ, ಅಭಿನವ ಪ್ರಕಾಶನ, ಬೆಂಗಳೂರು, 2007: ಪುಟ 162–163
29. 'ಮಾಸ್ತಿಯವರ ಸಾಹಿತ್ಯ 1924, ಕೃತಿ ಬಹುಶಃ ಆಧುನಿಕ ಕನ್ನಡದಲ್ಲಿ ಪ್ರಕಟವಾದ ಸಾಹಿತ್ಯ ಮೀಮಾಂಸೆಯನ್ನು ಕುರಿತ ಪ್ರಥಮ ಗ್ರಂಥವಾಗಿದೆ' ವಿವರಗಳಿಗೆ ನೋಡಿ: ಕೃತಿ ಸಂಸ್ಕೃತಿ, ಎಂ.ಜಿ.ಕೆ, ಪೂರ್ವೋಕ್ತ, ಪು:295
30. ಬೇರು ಕಾಂಡ ಚಿಗುರು–ಕೆ.ವಿ.ನಾರಾಯಣ, ವಿವೇಕ ಪ್ರಕಾಶನ, ಬೆಂಗಳೂರು, 1997, ಪುಟ 85
31. ಕುವೆಂಪು ಸಮಗ್ರ ಗದ್ಯ, ಸಂಪುಟ 2–ಸಂ.ಕೆ.ಸಿ.ಶಿವಾರೆಡ್ಡಿ, ಕನ್ನಡ ವಿ.ವಿ. ಹಂಪಿ, 2001, ಪುಟ 491
32. ವಿಮರ್ಶೆಯ ಭಾಷೆ ಪರಿಭಾಷೆ–ಎಂ.ವೀ.ಸೀ: ಕನ್ನಡ ವಿಮರ್ಶೆಯ ನೆಲೆ ಬೆಲೆ–ಪೂರ್ವೋಕ್ತ
33. ಅದೇ ಪುಟ 71
34. ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ–ವೀ.ಸೀ, 1971, ಪುಟ 65
35. ಅದೇ, ಪುಟ: 92

ಅಧ್ಯಾಯ–ನಾಲ್ಕು

# ಕನ್ನಡ ವಿಮರ್ಶಾ ಸಂಸ್ಕೃತಿ: ಕುವೆಂಪು ಸಾಹಿತ್ಯ ಕುರಿತ ವಿಮರ್ಶೆ*

4.1. ಪ್ರವೇಶ: ಆಚರಣೆಯಿಂದ ತತ್ವದೆಡೆಗೆ

4.2. ವರ್ಗೀಕರಣ–ನಾಮಕರಣ ವಿಧಾನ

4.3. ವಿಮರ್ಶೆಯ ರೂಪಗಳು, ದೃಷ್ಟಿಗಳು, ಪಂಥಗಳು ಎಂದರೇನು?

4.4. ವಿವಿಮರ್ಶೆಯ** ಅವಲೋಕನ

4.5. ವಿವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆ

* ಲೇಖನ ಸಂಖ್ಯೆ ಮತ್ತು ಪುಟಸಂಖ್ಯೆಗಳನ್ನು ಕೊನೆಯಲ್ಲಿನ ಲೇಖನ ಸೂಚಿಯನ್ನು ಅನುಸರಿಸಿ ನೀಡಲಾಗಿದೆ.

** ವಿಮರ್ಶೆಯನ್ನು ಕುರಿತಾದ ವಿಮರ್ಶೆಯನ್ನು ಇಲ್ಲಿ ವಿವಿಮರ್ಶೆ ಎಂದು ಕರೆಯಲಾಗಿದೆ.

# 4. ಕನ್ನಡ ವಿಮರ್ಶಾ ಸಂಸ್ಕೃತಿ: ಕುವೆಂಪು ಸಾಹಿತ್ಯ ಕುರಿತ ವಿಮರ್ಶೆ

## 4.1. ಪ್ರವೇಶ–ಆಚರಣೆಯಿಂದ ತತ್ವದೆಡೆಗೆ

ಮೊದಲ ಅಧ್ಯಾಯದ ಮೊದಲ ಭಾಗದಲ್ಲಿ ವಿಮರ್ಶೆಯ ಪ್ರಾಗ್ರೂಪಗಳನ್ನು ಮತ್ತು ವಿಮರ್ಶೆಯ ದೃಷ್ಟಿಗಳನ್ನು ಅಭ್ಯಾಸ ಮಾಡಲಾಗಿದೆ. ಆ ಅಭ್ಯಾಸದಲ್ಲಿ ಆಯಾ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಗುರ್ತಿಸಿಕೊಳ್ಳಲು ಯತ್ನಿಸಲಾಗಿದೆ. ಆ ಗುರ್ತಿಸಿಕೊಳ್ಳುವ ಯತ್ನದಲ್ಲಿ ತತ್ವಗಳ ಕ್ರೋಡೀಕರಣ ಮತ್ತು ಆಚರಣೆಯ ತಾತ್ವೀಕರಣ ಎಂಬ ಎರಡು ಕ್ರಮಗಳನ್ನು ಬಳಸಲಾಗಿದೆ. ಕುವೆಂಪು ಕೃತಿಗಳ ವಿಮರ್ಶೆಯನ್ನು ಇನ್ನು ಮುಂದೆ ಅಧ್ಯಯನದ ಅಂಗಾಂಶವನ್ನಾಗಿ (ಸ್ಟಡಿ ಸ್ಯಾಂಪಲ್ಲಾಗಿ) ತೆಗೆದುಕೊಂಡು ಆಧುನಿಕ ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಗುರ್ತಿಸಿಕೊಳ್ಳಲು ಯತ್ನಿಸಲಾಗುತ್ತದೆ. ತತ್ವಗಳ ಕ್ರೋಡೀಕರಣ ಮತ್ತು ಆಚರಣೆಯ ತಾತ್ವೀಕರಣ ಎಂಬ ಕ್ರಮಗಳನ್ನು ಇಲ್ಲೂ ತಳಪಾಯವಾಗಿ ಬಳಸಲಾಗುತ್ತದೆ. ಆದರೆ ಈ ಅಂಗಾಂಶದ ಅಧ್ಯಯನದಲ್ಲಿ ಪ್ರಾಗ್ರೂಪದಲ್ಲಿನ ವಿಧಾನವನ್ನು ತದ್ವತ್ ಅನುಸರಿಸುವುದಿಲ್ಲ. ಆಧುನಿಕ ಸಾಹಿತ್ಯದ ವಿನ್ಯಾಸವು ಪ್ರಾಚೀನ ಸಾಹಿತ್ಯದ ವಿನ್ಯಾಸಕ್ಕಿಂತ ಭಿನ್ನವಾದುದಾಗಿದೆ. ಹಾಗೇ ವಿಮರ್ಶೆ ಕೂಡ ಭಿನ್ನವಾಗಿದೆ. ಸಾಮ್ಯತೆಗಳು ಇವೆಯಾದರೂ; ಸಂಬಂಧಗಳು ಇವೆಯಾದರೂ; ಬೇರುಗಳು ಅವೇ ಆದರೂ ಇದರ ವಿನ್ಯಾಸವೇ ಬೇರೆ. ಪದ್ಯಕಾವ್ಯ, ಗದ್ಯಕಾವ್ಯ, ಶಾಸ್ತ್ರಕಾವ್ಯ ಎಂಬ ಮೂರು ಮುಖ್ಯ ಧಾರೆಗಳಲ್ಲಿ ಪ್ರಾಚೀನ ಸಾಹಿತ್ಯವನ್ನು ಸಲೀಸಾಗಿ ವರ್ಗೀಕರಿಸಿಕೊಳ್ಳಬಹುದು. ಮತ್ತು ತತ್ವಗಳ ಕ್ರೋಡೀಕರಣ–ಆಚರಣೆಯ ತಾತ್ವೀಕರಣವನ್ನು ಅಜಮಾಸು ನಡೆಸಬಹುದು. ಆದರೆ ಆಧುನಿಕ ಸಾಹಿತ್ಯದಲ್ಲಿ ಹಾಗಲ್ಲ. ಇಲ್ಲಿ ಅಸಂಖ್ಯ ಧಾರೆಗಳಿವೆ. ಈ ಎಲ್ಲ ಧಾರೆಗಳನ್ನು ಕೆಲವೇ ನೆಲೆಗಳಲ್ಲಿ ವರ್ಗೀಕರಿಸಿ ಅಭ್ಯಾಸ ಮಾಡಲು ಆಗುವುದಿಲ್ಲ.

ಆದ್ದರಿಂದ ಪ್ರಸ್ತುತ ಅಂಗಾಂಶದ ಅಧ್ಯಯನದಲ್ಲಿ ತತ್ವಗಳ ಕ್ರೋಡೀಕರಣ ಮತ್ತು ಆಚರಣೆಯ ತಾತ್ವೀಕರಣ ಈ ಎರಡು ನೆಲೆಗಳನ್ನು ತಳಪಾಯವಾಗಿ ಇರಿಕೊಳ್ಳಲಾಗಿದ್ದರೂ ಇಲ್ಲಿ ಅಧ್ಯಯನವನ್ನು ಆಚರಣೆಯಿಂದ ತತ್ವದೆಡೆಗೆ ಎಂಬ ನೆಲೆಯಲ್ಲಿಯೇ ಕೈಗೊಳ್ಳಲಾಗಿದೆ. ಕುವೆಂಪು ಸಾಹಿತ್ಯದ ಬಗೆಗಿನ ವಿಮರ್ಶೆಯನ್ನು ಒಟ್ಟಾರೆ ಆಧುನಿಕ ಕನ್ನಡ ವಿಮರ್ಶೆಯ ಆಚರಣೆಯ ಒಂದು ಅಂಗಾಂಶವೆಂದು ಸ್ವೀಕರಿಸಿ; ಈ ಆಚರಣೆಯಲ್ಲಿ ವ್ಯಕ್ತವಾಗುವ ವಿಮರ್ಶೆಯ ವಿನ್ಯಾಸಗಳು ಮತ್ತು ತಾತ್ವಿಕತೆಗಳನ್ನು ಗುರ್ತಿಸಿಕೊಳ್ಳಲು ಇಲ್ಲಿ ಯತ್ನಿಸಲಾಗುತ್ತದೆ. ಇಂಥ ಗುರ್ತಿಸಿಕೊಳ್ಳುವಿಕೆಯಲ್ಲಿ ವಿನ್ಯಾಸ ಮತ್ತು ತಾತ್ವಿಕತೆಗಳನ್ನು 1. ವಿಮರ್ಶೆಯಲ್ಲಿಯೇ ಹೇಳಿರುವ ತತ್ವ–ಪರಿಭಾಷೆಯ ಮೂಲಕ ಮತ್ತು ಕೆಲವೊಮ್ಮೆ 2. ಅದರಿಂದ ಸೂಚಿತವಾಗುವ ವಿಚಾರವನ್ನು ಪರಿಕಲ್ಪಿಸಿ ಹೇಳುವ ಮೂಲಕ ಕಂಡುಕೊಳ್ಳಲು ಯತ್ನಿಸಲಾಗುತ್ತದೆ. ಇದನ್ನೇ 1. ತಾತ್ವಿಕತೆಗಳ ಕ್ರೋಡೀಕರಣ ವಿಧಾನ ಮತ್ತು 2. ವಿನ್ಯಾಸಗಳ ಪರಿಕಲ್ಪನೀಕರಣ ವಿಧಾನ ಎಂದೂ ಕರೆಯಬಹುದು. ಈ ಎರಡು ವಿಧಾನ ಮತ್ತು ಅಥವಾ ಉದ್ದೇಶಗಳು ಈ ಅಧ್ಯಯನದಲ್ಲಿ ಪ್ರಧಾನವಾಗಿ ಇವೆ. ಆತ್ಯಂತಿಕವಾಗಿ ಆಚರಣೆಯಿಂದ ತತ್ವದೆಡೆಗೆ ಚಲಿಸುವ ಕ್ರಮ ಇದಾಗಿದೆ.

ನಮ್ಮಲ್ಲಿ ತತ್ವಗಳು ಸಾಕಷ್ಟು ಇವೆ. ತತ್ವಗಳ ಕುರಿತ ಬರವಣಿಗೆಯೂ ಸಾಕಷ್ಟು ಸಂಭವಿಸಿದೆ. ಸಿದ್ಧಾಂತಗಳನ್ನು ಸಾಕಷ್ಟು ಆಮದು ಮಾಡಿಕೊಂಡು ಪ್ರಯೋಗಿಸಲಾಗಿದೆ. ಒಂದೊಂದು ತಾತ್ವಿಕ–ಪಂಥಗಳನ್ನು ಒಂದೊಂದು ತೆರನ ಓದುಗಳಿಂದು ತಿಳಿಯುವ ಆಚರಣೆಗಳೂ ನಮ್ಮಲ್ಲಿ ಸಂಭವಿಸಿವೆ. ಆದರೆ ಆಚರಣೆಯೊಳಗಿನ ವಿನ್ಯಾಸ ಮತ್ತು ತತ್ವಗಳನ್ನು ಗುರ್ತಿಸಿ; ತಾತ್ವೀಕರಿಸುವ ಕೆಲಸ ಆಗಿಲ್ಲ. ವಿಮರ್ಶೆಯ ಆಚರಣೆಯಲ್ಲಿ ಪ್ರಕಟವಾಗುವ ವಿನ್ಯಾಸಗಳನ್ನು ಗುರ್ತಿಸಿಕೊಂಡು; ತಾತ್ವೀಕರಿಸಿ; ಪರಿಕಲ್ಪಿಸಿ ಕಟ್ಟುವ ಕೆಲಸ ಆಗಬೇಕಿದೆ. ಈ ಕಡೆಗೆ ಒಂದು ಚಿಕ್ಕ ಪ್ರಯತ್ನವನ್ನು ಈ ಅಧ್ಯಯನದ ಕುವೆಂಪು ಕುರಿತ ವಿಮರ್ಶೆಯ ಬಗೆಗಿನ ಈ ಅಧ್ಯಾಯದಲ್ಲಿ ಮತ್ತು ಮುಂದಿನ ಅಧ್ಯಾಯಗಳಲ್ಲಿ ಮಾಡಲು ಉದ್ದೇಶಿಸಲಾಗಿದೆ.

ಒಟ್ಟಾರೆ ಕುವೆಂಪು ಬಗೆಗಿನ ವಿಮರ್ಶೆಯಲ್ಲಿನ ವಿನ್ಯಾಸವನ್ನು 1. ವಿಮರ್ಶೆಯ ದೃಷ್ಟಿಗಳು 2. ವಿಮರ್ಶೆಯ ರೂಪಗಳು 3. ಚಾಲ್ತಿಯಲ್ಲಿನ ಪಂಥವಾದಿ ವಿಮರ್ಶೆಗಳು ಎಂದು ಮೂರು ವರ್ಗಗಳಲ್ಲಿ ವಿಂಗಡಿಸಿಕೊಂಡು ಅವುಗಳಲ್ಲಿನ ತಾತ್ವಿಕತೆಗಳನ್ನು (ನಿಲುವುಗಳನ್ನು) ಗುರ್ತಿಸಿಕೊಳ್ಳಲು ಇನ್ನು ಮುಂದೆ ಯತ್ನಿಸಲಾಗುತ್ತದೆ. ಅದಕ್ಕೂ ಮೊದಲು ಈಗಾಗಲೇ ಬಂದಿರುವ ಕುವೆಂಪು ವಿಮರ್ಶೆಯ ಕುರಿತ ವಿಮರ್ಶೆಯನ್ನು ಅವಲೋಕಿಸಿಕೊಂಡು; ಅದರ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಪರಿಶೀಲಿಸಿ ಆನಂತರ ದೃಷ್ಟಿ ರೂಪಗಳಿಗೆ ಗಮನ ಹರಿಸಲಾಗುವುದು. ಸಾಹಿತ್ಯ ಪ್ರಕಾರಗಳನ್ನು ಆಧರಿಸಿಯೇ ವಿಮರ್ಶೆಯನ್ನು ವಿಂಗಡಿಸಿಕೊಂಡು ಅಧ್ಯಯನ ಮಾಡಬಹುದಾದ ಸುಲಭ ವಿಧಾನವನ್ನು ಇಲ್ಲಿ ಅನುಸರಿಸಿಲ್ಲ. ವಿಮರ್ಶೆಯಲ್ಲಿ ಅಂತರ್ಗತವಾಗಿರುವ

ದೃಷ್ಟಿಗಳು ಮತ್ತು ರೂಪಗಳನ್ನು ಕಂಡುಕೊಂಡು, ವರ್ಗೀಕರಿಸಿಕೊಂಡು, ಕೆಲವೊಮ್ಮೆ ಪರಿಕಲ್ಪಿಸಿಕೊಂಡು, ನಾಮಕರಣ ಮಾಡಿಕೊಂಡು ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ನಮ್ಮ ವಿಮರ್ಶೆಯನ್ನು ನವೀನ ರೀತಿಯಲ್ಲಿ ವರ್ಗೀಕರಣ ನಾಮಕರಣ ಮಾಡುವ ವಿಧಾನ ಇದಾಗಿದೆ. ಇವು ಆಧುನಿಕ ವಿಮರ್ಶೆಯಲ್ಲಿ ಬಳಕೆಯಾಗಿರುವ ವಿನ್ಯಾಸಗಳೂ ಹೌದು.

ನಮ್ಮ ಪ್ರಿಯಾರಿಟಿಗಳು ಪಲ್ಲಟಗೊಂಡಿರುವ ಸೂಚನೆಯು ನಮ್ಮ ಆಕರ ಟಿಪ್ಪಣಿ ವಿವರದ ಆಚರಣೆಯಲ್ಲು ಕಾಣುತ್ತದೆ. ಕೃತಿಯು ಹಿನ್ನೆಲೆಗೆ ಸರಿದು ಕೃತಿಕಾರನು ಮುನ್ನೆಲೆಗೆ ಬಂದಿರುವ ಕಾಲವಿದು. ಆದರೆ ಈ ಅಧ್ಯಯನದಲ್ಲಿ ಕೃತಿಯನ್ನೇ ಮುಖ್ಯವಾಗಿಸಿ ಆಕರ ವಿವರ ನೀಡಲಾಗಿದೆ. ಪ್ರಾಚೀನ ಮತ್ತು ಆಧುನಿಕ ಸಾಹಿತ್ಯ ಎರಡಕ್ಕು ಆಕರ ವಿವರ ನೀಡುವಾಗ ಸಮಾನ ಮಾದರಿ ಅನುಸರಿಸಲು ನಿರ್ಧರಿಸಲಾಗಿದೆ. ಈ ಅಧ್ಯಯನದಲ್ಲಿ ಅಡಿ ಟಿಪ್ಪಣಿಗಳನ್ನು ಆಕರ ವಿವರ ಎಂದು ಕರೆಯಲಾಗಿದೆ. ವಿವರಗಳನ್ನು ಕೊಡುವಾಗ ಪ್ರಾಚೀನ ಸಂದರ್ಭದಲ್ಲಿ ಕೃತಿಗಳಿಗೆ ಪ್ರಾಮುಖ್ಯತೆ ಕೊಟ್ಟು; ಆಧುನಿಕ ಸಂದರ್ಭದಲ್ಲಿ ಲೇಖಕರಿಗೆ ಪ್ರಾಮುಖ್ಯತೆ ನೀಡುವ ರೂಡಿಯೊಂದು ನಮ್ಮಲ್ಲಿದೆ. ಈ ರೂಡಿಯನ್ನು ಇಲ್ಲಿ ಮುರಿಯಲಾಗಿದೆ; ಕುವೆಂಪು ವಿಮರ್ಶಕರಲ್ಲಿ ಸ್ಥೂಲವಾಗಿ ಗುರ್ತಿಸಿಕೊಂಡಿರುವ ಆಪ್ತವಲಯ, ನವ್ಯವಲಯ, ಅಲಿಪ್ತವಲಯ (ನೋಡಿ ವಿವಿಮರ್ಶೆ) ಎಂಬ ಮೂರು ವರ್ಗಗಳು ಮೂರು ಮುಖ್ಯ ಮನೋಧರ್ಮಗಳನ್ನು ಪ್ರಕಟಿಸುತ್ತಿದ್ದು; ಮುಂದಿನ ಅಭ್ಯಾಸಗಳಲ್ಲಿ ಈ ವಲಯಗಳನ್ನು ಆಗಾಗ ಉಲ್ಲೇಖಿಸಲಾಗುವುದು.

### 4.2. ವರ್ಗೀಕರಣ ನಾಮಕರಣ ವಿಧಾನ

ಚರಿತ್ರೆಯ ಅಧ್ಯಯನದಲ್ಲಿ, ಸಾಹಿತ್ಯದ ಅಧ್ಯಯನದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಎದುರಾಗುವ ಒಂದು ಪ್ರಚೋದಕ ಎಂದರೆ ಈ ವರ್ಗೀಕರಣ ನಾಮಕರಣ ವಿಧಾನ. ಅಧ್ಯಯನದ ಅನುಕೂಲಕ್ಕಾಗಿ ನಾವು ಸಾಹಿತ್ಯ ಪರಂಪರೆಗಳನ್ನು ಅಥವಾ ಸಾಹಿತ್ಯಗಳನ್ನು ಅವಲೋಕನ ಮಾಡುವಾಗ ಈ ವಿಧಾನ ಪ್ರಬಲವಾದ ಪ್ರಚೋದಕವಾಗಿ ಮ್ಯಾಗ್ನೆಟಿಕ್ ಪವರ್‍ರಿರುವ ಪ್ರಚೋದಕವಾಗಿ ಎದುರಾಗುತ್ತದೆ. ಇದನ್ನ ಕೆಲವೊಮ್ಮೆ ಸಮಸ್ಯೆ ಅಂತಲೂ ಕರೆಯಬಹುದು ಬಿಕ್ಕಟ್ಟು ಅಂತಲೂ ಕರೆಯಬಹುದು. ನಮ್ಮ ಸಾಹಿತ್ಯ ಚರಿತ್ರೆರಚನಾಶಾಸ್ತ್ರ ಈ ಬಿಕ್ಕಟ್ಟನ್ನು ಚೆನ್ನಾಗಿ ಅನುಭವಿಸಿದೆ. ಪ್ರಕಾರ, ಕಾಲಘಟ್ಟ, ಸಂವೇದನೆ, ಧರ್ಮ, ಛಂದೋರೂಪ ಹೀಗೆ ಹಲವು ನೆಲೆಯ ವಿಭಾಗೀಕರಣ ನಾಮಕರಣ ವಿನ್ಯಾಸಗಳಲ್ಲಿ ನಮ್ಮ ಚರಿತ್ರೆ ರಚನಾಶಾಸ್ತ್ರ ಪಡಿಪಾಟಲು ಬಿದ್ದಿರುವುದು ಈಗ ಚರಿತ್ರೆಯಾಗಿದೆ. ಆಧುನಿಕ ಸಂದರ್ಭದಲ್ಲೂ ಕೂಡ ಈ ವರ್ಗೀಕರಣ ನಾಮಕರಣ ವಿಧಾನ ನಮ್ಮನ್ನು ಕಾಡದೆ ಬಿಟ್ಟಿಲ್ಲ.

ಆಧುನಿಕ ಸಾಹಿತ್ಯ ಚರಿತ್ರೆಯಲ್ಲಿ ಹೇಗೋ ಹಾಗೆ ಕುವೆಂಪು ಸಾಹಿತ್ಯ ವಿಮರ್ಶೆಯಲ್ಲೂ ಈ ವರ್ಗೀಕರಣ–ನಾಮಕರಣ ವಿಧಾನ ಕೆಲವರಲ್ಲಿ ತಲೆ ಹಾಕಿದೆ. ಕುವೆಂಪು ವಿಮರ್ಶೆಯಲ್ಲಿ ಇದು ಹೇಗೆ ಕಾಣಿಸಿಕೊಂಡಿದೆ? ಕುವೆಂಪು ವಿಮರ್ಶೆಯಲ್ಲಿ ಇದು ಹತ್ತು ಹಲವು ರೀತಿಯಲ್ಲಿ ಕಾಣಿಸಿಕೊಂಡಿದೆ. ಕುವೆಂಪು ಸಾಹಿತ್ಯ–ಕೃತಿಗಳನ್ನು ಅಖಂಡವಾಗಿ ನೋಡುವ ಹಾಗೇ ವರ್ಗೀಕರಿಸಿ ನಾಮಕರಣ ಮಾಡಿ ನೋಡುವ ಪ್ರವೃತ್ತಿಯೂ ಇದೆ. ಉದಾಹರಣೆಗೆ: ಕುವೆಂಪು ನಿಸರ್ಗ ಕವಿತೆಗಳು, ನಾಡು ನುಡಿ ಚಿಂತನಾ ಕವಿತೆಗಳು, ಆಧ್ಯಾತ್ಮ ಕವಿತೆಗಳು, ಸಾಮಾಜಿಕ ನಾಟಕಗಳು, ಪೌರಾಣಿಕ ನಾಟಕಗಳು, ಚಾರಿತ್ರಿಕ ನಾಟಕಗಳು, ರೂಪಾಂತರಗಳು, ನವೋದಯ ವಿಮರ್ಶೆ ಮತ್ತು ಕುವೆಂಪು ಹೀಗೆ: ಹಲವಾರು ರೀತಿಯ ವರ್ಗೀಕರಣ ವಿಧಾನಗಳು ಇವೆ. ಇದರಿಂದ ಏನಾಗಿದೆ ಎಂದರೆ ಸಾಹಿತ್ಯವನ್ನು ಕೆಲವು ಕಂಪಾರ್ಟ್‌ಮೆಂಟುಗಳಲ್ಲಿ ಇಟ್ಟು ನೋಡುವಂತೆ ಆಗಿದೆ. ನಿಸರ್ಗ ಕವಿತೆ ಅನ್ನೋದಕ್ಕಿಂತ ನವೋದಯ ಅನ್ನೋದು ಸ್ವಲ್ಪ ದೊಡ್ಡ ಕಂಪಾರ್ಟ್‌ಮೆಂಟು ಅಷ್ಟೆ. (ನವೋದಯ ಅಂತ ನಾಮಕರಣ ಮಾಡಿದೋರೆ ಕುವೆಂಪು ಅನ್ನೋದು ಬೇರೆ ಪ್ರಶ್ನೆ) ಇಂಥ ವರ್ಗೀಕರಣಗಳಿಗೆ ಒಂದೊಂದಕ್ಕೂ ಭಿನ್ನ ಮಿತಿಗಳಿರುತ್ತವೆ. ಕೆಲವೊಮ್ಮೆ ಕಂಪಾರ್ಟ್‌ಮೆಂಟಿನ ಲಕ್ಷಣಗಳಿಗೆ ತಕ್ಕ ಹಾಗೆ ವ್ಯಾಖ್ಯಾನಗಳನ್ನು ಮಾಡ್ತಾ ಹೋಗೋದು, ಕಂಪಾರ್ಟ್‌ಮೆಂಟುಗಳ ಲಾಕ್ಷಣಿಕ ವಿಚಾರವೇ ಮುಖ್ಯವಾಗಿ ಸಾಹಿತ್ಯ ಹಿನ್ನೆಲೆಗೆ ಸರಿದುಬಿಡೋದು ಹೀಗಾಗೋದೆಲ್ಲ ಉಂಟು. ಇದಕ್ಕೆ ಹೊರದಾರಿ ಇಲ್ಲವಾ? ಇದೆ. ಆದಷ್ಟು ಕಡಿಮೆ ಇತಿಮಿತಿಗಳಿರುವ ಹೊಸ ಹೊಸ ಬಹುರೂಪಿ ವರ್ಗೀಕರಣ ವಿಧಾನಗಳನ್ನು ಹುಡುಕೋದು, ಪರಿಕಲ್ಪನಾತ್ಮಕ ಮಾದರಿಗಳನ್ನು ಅನುಸರಿಸೋದು, ಹೊಸ ವಿಮರ್ಶಾ ಮಾನದಂಡಗಳನ್ನು ಸಾಹಿತ್ಯದಿಂದಲೇ ರೂಪಿಸಿಕೊಳ್ಳೋದು ಇತ್ಯಾದಿ...ಇಂಥ ಪ್ರಯತ್ನಗಳು

ನಮ್ಮ ವಿಮರ್ಶಾ ಚರಿತ್ರೆಯಲ್ಲಿ ಸಾಕಷ್ಟು ನಡೆದಿವೆ ಮತ್ತು ನಡೀತಾ ಇವೆ ಕೂಡ. ಅಲ್ಲದೆ ಈಗಾಗಲೇ ಹೇಳಿರುವಂತೆ ಕುವೆಂಪು ಸಾಹಿತ್ಯದ ವಿಮರ್ಶೆಯಲ್ಲಿಯೂ ಒಂದು ವಿಮರ್ಶೆಯ ವಿಧಾನವೂ ವಿನ್ಯಾಸವೂ ಆಗಿ ಇದು ಪ್ರಕಟಗೊಂಡಿದೆ. ಈ ಅಧ್ಯಯನದಲ್ಲಿಯೂ ಇಂತಹ ಪ್ರಯತ್ನಗಳನ್ನು ಮಾಡಲಾಗಿದೆ. ವಿಮರ್ಶೆಯ ಆಚರಣೆಯಲ್ಲಿ ಪ್ರಕಟವಾಗಿರುವ ದೃಷ್ಟಿ ರೂಪ ಪಂಥಗಳನ್ನೆ ವರ್ಗೀಕರಿಸಿಕೊಂಡು ಇಲ್ಲಿ ಅವುಗಳ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಪರಿಶೀಲನೆಗೆ ಗುರಿಪಡಿಸಲಾಗಿದೆ.

**4.3. ದೃಷ್ಟಿಗಳು, ರೂಪಗಳು, ಪಂಥಗಳು ಎಂದರೇನು?**

ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯ ಸ್ವರೂಪವನ್ನು ಅವಲೋಕಿಸುವಾಗ; 1) ಒಟ್ಟಾರೆ ಕುವೆಂಪು ವಿಮರ್ಶೆಯಲ್ಲಿ ಯಾವ ಯಾವ ದೃಷ್ಟಿಗಳು ಕೆಲಸ ಮಾಡಿವೆ? ಅಂದರೆ ಈ ವಿಮರ್ಶೆಯಲ್ಲಿ ಸಂಭವಿಸಿರುವ ದೃಷ್ಟಿಗಳು ಯಾವುವು? 2) ಹಾಗೇ ಇಲ್ಲಿ ಯಾವ ಯಾವ ವಿಮರ್ಶೆಯ ರೂಪಗಳು ಸಂಭವಿಸಿವೆ, ಸೃಷ್ಟಿಯಾಗಿವೆ? ಯಾವ ಪಂಥಗಳನ್ನು ಅನುಸರಿಸಲಾಗಿದೆ? 3) ಈ ಕುವೆಂಪು ವಿಮರ್ಶೆಯಲ್ಲಿ ಯಾವ ಯಾವ ಮೆತೆಡ್ಡುಗಳನ್ನು, ವಿಧಾನಗಳನ್ನು ಅನುಸರಿಸಲಾಗಿದೆ? 4) ಕುವೆಂಪು ಕುರಿತ ವಿಮರ್ಶೆಯನ್ನು ಒಟ್ಟಾರೆಯಾಗಿ ಅದರ ಪ್ರಾಕ್ಟೀಸನ್ನೆ ಆಧರಿಸಿ ಯಾವ ಯಾವ ನೆಲೆಗಳಿಂದ ವರ್ಗೀಕರಣ ಮಾಡಿಕೊಂಡು ಆ ಮೂಲಕ ಅದರ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಹೇಗೆ ಗ್ರಹಿಸಬಹುದು? ಪ್ರಾಕ್ಟೀಸಿನಲ್ಲಿ ಕಾಣುವ ಚಹರೆ, ವಿಧಾನ, ವಿನ್ಯಾಸಗಳು ಯಾವುವು? ಎಂಬ ಈ ಹಲವು ನೆಲೆಗಳಲ್ಲಿ ಕುವೆಂಪು ಸಾಹಿತ್ಯದ ವಿಮರ್ಶೆಯ ಸ್ವರೂಪ, ವಿನ್ಯಾಸ, ತಾತ್ವಿಕತೆಗಳನ್ನು ಕಂಡುಕೊಳ್ಳಲು, ಪರಿಕಲ್ಪಿಸಲು ಇಲ್ಲಿ ಯತ್ನಿಸಲಾಗಿದೆ.

ಒಟ್ಟಾರೆ ಕುವೆಂಪು ವಿಮರ್ಶೆಯನ್ನು ನೋಡಿದಾಗ ಅಲ್ಲಿ ಯಾವ ಯಾವ ದೃಷ್ಟಿಗಳು ಸಂಭವಿಸಿವೆ? 1. ಪ್ರಕಾರ ದೃಷ್ಟಿ 2. ಪರಿಸರ ದೃಷ್ಟಿ 3. ತೌಲನಿಕ ದೃಷ್ಟಿ 4. ಪರಿಕರ ದೃಷ್ಟಿ 5. ವಿಚಾರದೃಷ್ಟಿ 6. ಸ್ತ್ರೀವಾದಿ ದೃಷ್ಟಿ 7. ನಾಡು ನುಡಿ ಚಿಂತನಾ ದೃಷ್ಟಿ 8. ಅಧ್ಯಯನ ದೃಷ್ಟಿ 9. ಕೃತಿ ದೃಷ್ಟಿ 10. ಚಳುವಳಿ ದೃಷ್ಟಿ 11. ಪರಂಪರೆಯ ದೃಷ್ಟಿ 12. ಪ್ರಾದೇಶಿಕ ದೃಷ್ಟಿ 13. ಸಂಸ್ಕೃತಿ ಅಧ್ಯಯನ ದೃಷ್ಟಿ 14. ಪ್ರಶಸ್ತಿ ದೃಷ್ಟಿ....ಇತ್ಯಾದಿ. ಇವುಗಳು ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯಲ್ಲಿ ಸ್ಥೂಲವಾಗಿ ಪ್ರಕಟವಾಗಿರುವ ವಿಮರ್ಶಾ ದೃಷ್ಟಿಗಳು.

ಇನ್ನು ವಿಮರ್ಶಾ ರೂಪಗಳಿಗೆ ಬಂದರೆ ಇಲ್ಲಿ; 1. ಅಭಿನಂದನ ರೂಪಿ ವಿಮರ್ಶೆ, 2. ಸಂಪಾದನ ರೂಪಿ ವಿಮರ್ಶೆ, 3. ಸೂಕ್ತಿ ರೂಪಿ ವಿಮರ್ಶೆ, 4. ಸಾಹಿತ್ಯ ರೂಪಿ ವಿಮರ್ಶೆ, 5. ಸರಳ ರೂಪಿ ವಿಮರ್ಶೆ, 6. ಒಡನಾಟ ರೂಪಿ ವಿಮರ್ಶೆ, 7. ಪತ್ರ ರೂಪಿ ವಿಮರ್ಶೆ, 8. ಸಂಶೋಧನಾ ಅಧ್ಯಯನ ರೂಪಿ ವಿಮರ್ಶೆ, 9. ವಿಮರ್ಶೆಯ ವಿಮರ್ಶೆ, 10. ನಿಘಂಟು ರಚನೆ......ಇತ್ಯಾದಿ ರೂಪಗಳಿವೆ.

ಪಂಥಗಳಲ್ಲಿ ನಮ್ಮ ಆಧುನಿಕ ವಿಮರ್ಶೆಯಲ್ಲಿ; ಪ್ರಾಯೋಗಿಕ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ರೂಪನಿಷ್ಠ ವಿಮರ್ಶೆ, ನೈತಿಕ ವಿಮರ್ಶೆ, ರಮ್ಯವಾದಿ ವಿಮರ್ಶೆ, ಪರಿಸರವಾದಿ ವಿಮರ್ಶೆ, ತೌಲನಿಕ ವಿಮರ್ಶೆ, ಅಭಿಜಾತ ವಿಮರ್ಶೆ, ವಾಸ್ತವವಾದಿ ವಿಮರ್ಶೆ, ರಸನಿಷ್ಠ ವಿಮರ್ಶೆ, ಸಮಾಜವಾದಿ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ, ಆಂತರಿಕ/ಬಾಹ್ಯ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ನವೋದಯ ವಿಮರ್ಶೆ. ನವ್ಯ ವಿಮರ್ಶೆ, ಬಂಡಾಯ ವಿಮರ್ಶೆ, ಮನಶ್ಶಾಸ್ತ್ರೀಯ ವಿಮರ್ಶೆ, ಸಮಾಜಶಾಸ್ತ್ರೀಯ ವಿಮರ್ಶೆ, ನಿರಚನವಾದಿ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಸಂಸ್ಕೃತಿ ಅಧ್ಯಯನ ವಿಮರ್ಶೆ.... ಇತ್ಯಾದಿಗಳು ಇವೆ. ಇವೆಲ್ಲ ಸಿದ್ಧಾಂತ/ಮಾರ್ಗ/ಪಂಥಗಳು ಇದ್ದರೂ ಇವೆಲ್ಲವೂ ಕುವೆಂಪು ಸಾಹಿತ್ಯದ ವಿಮರ್ಶೆಯಲ್ಲಿ (ಕನ್ನಡ ವಿಮರ್ಶೆಯಲ್ಲಿ?) ಪ್ರಾಕ್ಟೀಸಿಗೆ ಗುರಿಯಾಗಿಲ್ಲ. ಕೆಲವು ಮಾತ್ರವೇ ಪ್ರಯೋಗಕ್ಕೆ ಗುರಿಯಾಗಿವೆ.

ಸ್ತ್ರೀವಾದಿ ಸ್ವರೂಪದ ವಿಮರ್ಶೆ, ವಸಾಹತು ನೆಲೆಯ ವಿಮರ್ಶೆ, ಸಂಸ್ಕೃತಿ ಅಧ್ಯಯನ ಸ್ವರೂಪದ ವಿಮರ್ಶೆ, ಪ್ರಾಯೋಗಿಕ ಸ್ವರೂಪದ ವಿಮರ್ಶೆ, ಇತ್ಯಾದಿ.. ಕುವೆಂಪು ಕುರಿತ ವಿಮರ್ಶೆಯಲ್ಲಿ ಪ್ರಯೋಗವಾಗಿರುವ ಈ ಎಲ್ಲ ಪಂಥವಾದಿ ರೂಪಗಳಲ್ಲಿ ಯಾವೂ ಕೂಡ ಕಟ್ಟುನಿಟ್ಟಾಗಿ ಪಂಥ ಸಿದ್ಧಾಂತಗಳಿಗೆ ಬದ್ಧವಾದ ವಿಮರ್ಶೆಗಳಲ್ಲ. ಆಯಾ ಪಂಥಗಳ ಸ್ವರೂಪವನ್ನು ಪ್ರಧಾನವಾಗಿ ಒಳಗೊಂಡಿರುವ ಪ್ರಾಕ್ಟೀಸುಗಳಷ್ಟೆ. ಇವಲ್ಲದೆ ಕುವೆಂಪು ಸಂದರ್ಭದಲ್ಲಿ ತೌಲನಿಕ, ರೂಪನಿಷ್ಠ, ರಸನಿಷ್ಠ, ಅಭಿಜಾತ, ರಮ್ಯವಾದಿ, ಪರಿಸರವಾದಿ, ಮಾರ್ಕ್ಸ್‌ವಾದಿ, ಮನಶ್ಶಾಸ್ತ್ರೀಯವಾದಿ, ವಿಮರ್ಶೆಗಳೂ ಪ್ರಾಕ್ಟೀಸಿಗೆ ಒಳಗಾಗಿವೆ. ಅಥವಾ ಈ ಕೆಟಗರಿಗಳಿಗೆ ಸೇರಿಸಬಹುದಾದ ಲಕ್ಷಣಗಳುಳ್ಳ ವಿಮರ್ಶೆಗಳೂ ಇವೆ. ಆದರೆ ಖಚಿತವಾಗಿ ಪಾತಿವ್ರತ್ಯ ಅಂತಾರಲ್ಲ ಹಾಗೆ

ಪಂಥಕ್ಕೆ ಕಟ್ಟು ಬೀಳುವ ವಿಮರ್ಶೆಗಳು ಇವಲ್ಲ. ಇಂಗ್ಲಿಶಿನಲ್ಲಿ ಇವು ಹೇಗಾದರೂ ಇರಲಿ ಕನ್ನಡದಲ್ಲಿ ಇವುಗಳ ಪ್ರಾಕ್ಟೀಸನ್ನು ಸಮಗ್ರವಾಗಿ ಪರಿಶೀಲಿಸಿ ತಾತ್ವೀಕರಣಕ್ಕೆ ಗುರಿಪಡಿಸಿ ಆ ಮೂಲಕ ಇವುಗಳ ಕನ್ನಡ ಥಿಯರಿಗಳನ್ನ ಕಟ್ಟಬೇಕಾದ ಅಗತ್ಯವಿದೆ. ಇದೊಂದು ಬೇರೆಯದೇ ಅಧ್ಯಯನವಾದೀತು. ಇರಲಿ.

ಇಲ್ಲಿ ರೂಪಗಳು ಮತ್ತು ದೃಷ್ಟಿಗಳು ಎಂದು ವಿಮರ್ಶೆಯನ್ನು ಎರಡು ಪರಿಭಾಷೆಗಳಲ್ಲಿ ವರ್ಗೀಕರಿಸಲಾಗಿದೆ. ಈ ವಿಮರ್ಶೆಯ ರೂಪಗಳಿಗೂ ದೃಷ್ಟಿಗಳಿಗೂ ವ್ಯತ್ಯಾಸ ಏನು? ಕುವೆಂಪು ಸಾಹಿತ್ಯ ಕುರಿತ ವಿಮರ್ಶೆ ಏನಿದೆ ಅದರಲ್ಲಿ ಹಲವಾರು ದೃಷ್ಟಿಗಳು ಬಳಕೆಯಾಗಿವೆ. ಪರಿಕರ ದೃಷ್ಟಿ, ಪ್ರಕಾರ ದೃಷ್ಟಿ ಅವೆಲ್ಲ ಬರೀ ವಿಮರ್ಶಾ ದೃಷ್ಟಿಗಳು ಅಷ್ಟೆ. ಅವುಗಳಿಗೆ ಸ್ವತಂತ್ರ ವಿಮರ್ಶಾ ಪ್ರಕಾರಗಳಾಗುವ ಶಕ್ತಿ ಸಾಧ್ಯತೆಗಳು ಇಲ್ಲ. ಆದರೆ ಈ ಅಭಿನಂದನಾ ರೂಪಿ, ಒಡನಾಟ ರೂಪಿ, ಸರಳರೂಪಿ, ಸೂಕ್ತಿ ರೂಪಿ, ಸಾಹಿತ್ಯ ರೂಪಿ ವಿಮರ್ಶೆಗಳು ಇವಕ್ಕೆ ಹಾಗೆ ಪ್ರಕಾರಗಳಾಗೋ ಸಾಧ್ಯತೆ ಇದೆ. ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯ ಪ್ರಾಕ್ಟೀಸನ್ನೇ ಆಧರಿಸಿ ಇವುಗಳನ್ನು ಕಟ್ಟಿಕೊಳ್ಳಲಾಗಿದೆ. ಸಾಹಿತ್ಯದಲ್ಲಿ ಹೇಗೆ ಕತೆ, ಕವನ, ಕಾದಂಬರಿ ಅನ್ನುವ ಪ್ರಕಾರಗಳಿವೆಯೋ ಹಾಗೆ ಇವನ್ನೂ ಕೂಡ ವಿಮರ್ಶೆಯ ಪ್ರಕಾರಗಳಾಗಿ ನಾವು ನೋಡಬಹುದಾಗಿದೆ.

ಈ ವಿಮರ್ಶಾ ದೃಷ್ಟಿಗಳು ರೂಪಗಳು ಹೀಗೇ ರೂಪಗೊಳ್ಳಲು ಕಾರಣಗಳೇನಿರಬಹುದು? ಆಧುನಿಕ ವಿಮರ್ಶೆ ಇಂಗ್ಲೀಶ್ ವಿದ್ಯಾಭ್ಯಾಸ ಪದ್ಧತಿಯ ಉತ್ಪನ್ನ, ಇದೊಂದು ಶುದ್ಧ ಅಕಾಡೆಮಿಕ್ ಚಟುವಟಿಕೆ ಎಂಬ ತಿಳುವಳಿಕೆಯೊಂದು ನಮ್ಮಲ್ಲಿದೆ. ಆದರೆ ಅದಷ್ಟೇ ಅಲ್ಲ. ಇದಕ್ಕೆ, ನಮ್ಮ 19, 20ನೇ ಶತಮಾನಗಳ ವೈಚಾರಿಕ ನಿಲುವುಗಳಲ್ಲಾದ ಪಲ್ಲಟಗಳು, ನಮ್ಮ ಪರಂಪರೆಗಳು, ಆಯಾ ವರ್ತಮಾನದ ಸಮಾಜ–ಅದರ ಸಾಹಿತ್ಯದ ಜೊತೆಗಿನ ಅನುಸಂಧಾನಗಳು, ವಿಮರ್ಶಕರು, ಲೇಖಕ, ಮತ್ತು ಕೃತಿಜಗತ್ತು ಇವೆಲ್ಲವೂ ಬೇರೆ ಬೇರೆ ರೀತಿಯಲ್ಲಿ ಆಧುನಿಕ ವಿಮರ್ಶೆಯು ಈಗಿನ ರೂಪದಲ್ಲಿ ಸಂಭವಿಸಲು ಕಾರಣವಾಗಿವೆ. ಇವತ್ತು ಚಾಲ್ತಿಯಲ್ಲಿರೋ ಅಭಿನಂದನ ರೂಪಿ ವಿಮರ್ಶೆ ನೋಡಿ: ನಮ್ಮಲ್ಲಿ ಇದಕ್ಕೊಂದು ಚರಿತ್ರೆ ಇದೆ. ಗೌರವ, ಅಭಿಮಾನ ಪ್ರಕಟವಾಗೋ ಆಧುನಿಕ ರೂಪ ಇದು. ಇದಕ್ಕೊಂದು ಸಮಾರಂಭ ಮಾಡೋದು, ಭಾಷಣ ಮಾಡೋದು, ಪುಸ್ತಕ ಅರ್ಪಿಸೋದು; ಎಲ್ಲಾ ಒಂದು ರಿಚುವಲ್. ವೈಷ್ಣವ ಮಠದಲ್ಲಿ ಕೀರ್ತನೆಗಳನ್ನು, ಶೈವ ಮಠದಲ್ಲಿ ವಚನಗಳನ್ನು ಹಾಡಿದರೆ; ಕುವೆಂಪು ಸಮಾರಂಭಗಳಲ್ಲಿ ಅನಿಕೇತನ ಗೀತೆ ಹಾಡುತ್ತಾರೆ. ಇದೂ ರಿಚುವಲ್ಲೇ. ಕುವೆಂಪುಗೆ ಬಂದಿರೋವಷ್ಟು ಅಭಿನಂದನಾ ಗ್ರಂಥಗಳು ಕನ್ನಡದಲ್ಲಿ ಯಾರಿಗೂ ಬಂದಿಲ್ಲ. ಇನ್ನಾವುದೋ ಒಂದು ವಿಚಾರ ಸಂಕಿರಣ ಅಲ್ಲಿ ಭಾಷಣ ಮಾಡೋದು ಅವುಗಳನ್ನೆಲ್ಲ ಸಂಪಾದಿಸಿ ಒಂದು ಪುಸ್ತಕ ಮಾಡೋದು. ಅದಕ್ಕೆ ಮುನ್ನುಡಿ, ಪ್ರಸ್ತಾವನೆ ಬರೆಯೋದು, ಶತಮಾನೋತ್ಸವ ಸಂಭ್ರಮ, ಉತ್ಸವ, ಇವಕ್ಕೆಲ್ಲ ಸಭೆ ಸಮಾರಂಭ ಮಾಡೋದು ಪುಸ್ತಕ ತರೋದು ಹೀಗೆ ಎಲ್ಲವೂ ಶುದ್ಧಾಂಗವಾಗಿ ವಿಮರ್ಶೆಗಳಲ್ಲ. ನಮ್ಮಲ್ಲಿ ಸಾಹಿತ್ಯವಿಮರ್ಶೆ ಕೇವಲ ಅಕಾಡೆಮಿಕ್ ಚಟುವಟಿಕೆ ಆಗಿ ಮಾತ್ರ ಪ್ರಕಟವಾಗಿಲ್ಲ. ಇದೊಂದು ಸಾಸ್ಕೃತಿಕ ಅನುಸಂಧಾನಗಳ ಉತ್ಪನ್ನ. ಹಾಗಾಗಿಯೇ ವಿಮರ್ಶೆ ಎನ್ನುವುದು ನಮ್ಮಲ್ಲಿ ಸಾಹಿತ್ಯ ವಿಮರ್ಶೆ ಎಂಬ ಒಂದು ಪ್ರಕಾರವಲ್ಲ. ಇದೊಂದು ಸಾಂಸ್ಕೃತಿಕ ಕಥನ. ಸಂಸ್ಕೃತಿ ಅಧ್ಯಯನ ಶಿಸ್ತು. 2004ನೇ ಇಸವಿ ಒಂದರಲ್ಲೇ ಬರೀ ಕುವೆಂಪು ಬಗ್ಗೇನೇ 54 ಪುಸ್ತಕಗಳು ಬಂದಿವೆ. ಎಲ್ಲ ರಿಚುವಲ್ಸ್. ಇದೆಲ್ಲ ತಪ್ಪು ಎಂದು ಇಲ್ಲಿ ಹೇಳುತ್ತಿಲ್ಲ. ನಮ್ಮ ವಿಮರ್ಶೆಯ ಉತ್ಪಾದನೆ ಬರಿ ಅಕಡೆಮಿಕ್ ಆದದ್ದಲ್ಲ. ಈ ವಿಮರ್ಶೆ ಒಂದು ಸಂಸ್ಕೃತಿ ಅಧ್ಯಯನ ಶಿಸ್ತು, ಸಾಂಸ್ಕೃತಿಕ ಅನುಸಂಧಾನ ಸಾಂಸ್ಕೃತಿಕ ಆಚಾರ. ಆದ್ದರಿಂದಲೆ ಇಂಥದ್ದೆಲ್ಲ ಇಲ್ಲಿ ಸೃಷ್ಟಿಯಾಗಿದೆ.

ಕೆಲವು ರೂಪಗಳು ಮತ್ತು ದೃಷ್ಟಿಗಳಿಗೆ ಪರಸ್ಪರ ಅಂತಃಸಂಬಂಧವೂ ಇದೆ. ಸ್ತ್ರೀವಾದಿ ದೃಷ್ಟಿ–ಸ್ತ್ರೀವಾದಿ ಪಂಥ, ತೌಲನಿಕ ದೃಷ್ಟಿ–ತೌಲನಿಕ ಪಂಥ, ಅಭಿನಂದನಾ ದೃಷ್ಟಿ–ಅಭಿನಂದನಾ ರೂಪಿ, ಅಧ್ಯಯನ ದೃಷ್ಟಿ–ಅಧ್ಯಯನ ರೂಪಿ ಹೀಗೆ ಕೆಲವು ವಿಮರ್ಶೆಯ ವಿನ್ಯಾಸಗಳು ಏಕಕಾಲಕ್ಕೆ ದೃಷ್ಟಿಗಳೂ ರೂಪಗಳೂ ಆಗಿ ಅಸ್ತಿತ್ವದಲ್ಲಿ ಇವೆ. ಕೆಲವು ವಿಮರ್ಶೆಯ ದೃಷ್ಟಿಕೋನಗಳಾಗಿ ಉಳಿದಿದ್ದರೆ ಕೆಲವು ರೂಪ ಪಂಥಗಳಾಗಿ ಬೆಳೆದಿವೆ. ಅಲ್ಲದೆ ಕೆಲವು ದೃಷ್ಟಿಕೋನಗಳಾಗಿಯೂ ಪಂಥಗಳಾಗಿಯೂ ಆಚರಣೆಯಲ್ಲಿವೆ. ಉದಾಹರಣೆಗೆ ತೌಲನಿಕ ವಿಮರ್ಶೆಯು ಒಂದು ಪಂಥವಾಗುವ ಖಚಿತತೆಯನ್ನು ಅಜಮಾಸು ನಮ್ಮಲ್ಲಿ ಪಡೆದುಕೊಂಡಿದೆ. ಅಷ್ಟೇ ಅಲ್ಲದೆ ಎಲ್ಲ ಪಂಥ, ದೃಷ್ಟಿಗಳಲ್ಲಿ ಒಂದು ಅಂತರ್ಗತ ವಿಧಾನವಾಗಿ, ದೃಷ್ಟಿಯಾಗಿ ಚಾಲ್ತಿಯಲ್ಲಿ

ಇದೆ. ಹಾಗಾಗಿ ಇದಕ್ಕೆ ದೃಷಿಕೋನ, ವಿಧಾನ, ಪಂಥ, ಹೀಗೆ ಬಹುರೂಪಿ ಅಸ್ತಿತ್ವ ಇದೆ. ಹಾಗೆ ನೋಡಿದರೆ ನಮ್ಮ ಆಧುನಿಕ ವಿಮರ್ಶೆಯೇ ಇನ್ನೂ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಇರುವ ವಿನ್ಯಾಸವಾಗಿದೆ. ಹಾಗೆ ಯಾವ ಶಿಸ್ತೂ ಮುಗಿದೇ ಹೋಗುವುದಲ್ಲ. ಆಗುತ್ತಿರುತ್ತದೆ. ದೃಷ್ಟಿಗಳು, ವಿಧಾನಗಳು, ರೂಪಗಳು, ಪಂಥಗಳು ಎಲ್ಲವೂ ಒಟ್ಟಿಗೇ ಇರುವ; ಪ್ರತ್ಯೇಕವಾಗಿ ಇರುವ; ಒಂದೇ ರೂಪದಲ್ಲಿ ಹಲವು ದೃಷ್ಟಿಗಳು ಬಳಕೆಯಾಗುವ; ಒಂದೇ ವಿಮರ್ಶಾ ವಿಧಾನ, ಪಂಥದಲ್ಲಿ ಹಲವು ವಿಮರ್ಶಾ ವಿಧಾನಗಳು ಪ್ರಯೋಗವಾಗುವುದೇ ನಮ್ಮ ವಿಮರ್ಶೆಯ ವಿನ್ಯಾಸವಾಗಿದೆ. ದೃಷ್ಟಿಗಳು, ರೂಪಗಳು, ಪಂಥಗಳು ಎಂದು ಇಲ್ಲಿ ವರ್ಗೀಕರಿಸಿಕೊಂಡಿದ್ದರೂ ಈ ಎಲ್ಲವೂ ಇಲ್ಲಿ ಪ್ರತ್ಯೇಕವಾಗಿ ಆಚರಣೆಗೊಂಡಿಲ್ಲವಾದ್ದರಿಂದ ಇವುಗಳನ್ನು ಪ್ರತ್ಯೇಕ ಕಂಪಾರ್ಟುಮೆಂಟುಗಳಂತೆ ಏನೂ ಇಲ್ಲಿ ಪರಿಗಣಿಸಲಾಗಿಲ್ಲ. ವಿಮರ್ಶೆಯ ದೃಷ್ಟಿಗಳಲ್ಲಿ, ರೂಪಗಳಲ್ಲಿ, ಆಚರಣೆಯಾಗಿರುವ ಕೆಲವೇ ಪಂಥಗಳಲ್ಲಿ ಇರುವ ವಿಧಾನ, ವಿನ್ಯಾಸ, ತಾತ್ವಿಕತೆಗಳನ್ನು ಗುರ್ತಿಸಿಕೊಳ್ಳಲು ಇಲ್ಲಿ ಯತ್ನಿಸಲಾಗಿದೆ.

**4.4. ವಿವಿಮರ್ಶೆಯ ಅವಲೋಕನ**

ಕುವೆಂಪು ಸಾಹಿತ್ಯಕ್ಕೆ ಬಂದಿರುವ ವಿಮರ್ಶೆಯನ್ನು ಹಲವರು ಈಗಾಗಲೇ ಮರುವಿಮರ್ಶೆಗೆ ಗುರಿಪಡಿಸಿದ್ದಾರೆ. ಇಂತಹ ವಿಮರ್ಶೆಯ ವಿಮರ್ಶೆಯನ್ನು ವಿವಿಮರ್ಶೆ ಎಂದು ಇಲ್ಲಿ ಕರೆಯಲಾಗಿದೆ. ವಿಮರ್ಶೆಯ ವಿಮರ್ಶೆ, ವಿಮರ್ಶೆಯನ್ನು ಕುರಿತ ವಿಮರ್ಶೆ, ಕುವೆಂಪು ಸಾಹಿತ್ಯದ ಮೇಲಿನ ವಿಮರ್ಶೆಯನ್ನು ಕುರಿತಾದ ವಿಮರ್ಶೆ ಎಂಬಿತ್ಯಾದಿ ವಿವರಣಾತ್ಮಕ ಪದಪುಂಜಗಳನ್ನು ಮತ್ತೆ ಮತ್ತೆ ಕಳಸುವ ಅನಾನುಕೂಲವನ್ನು ತಪ್ಪಿಸಲು ಈ ಒಂದೇ ಪರಿಬಾಷೆಯನ್ನು ಟಂಕಿಸಲಾಗಿದೆ. ಈಗಾಗಲೇ ಬಂದಿರುವ ವಿವಿಮರ್ಶೆಯು ಕುವೆಂಪು ಕುರಿತ ವಿಮರ್ಶೆಯ ವಿನ್ಯಾಸ, ತಾತ್ವಿಕತೆಗಳ ಪರಿಶೀಲನೆಯೂ ಆಗಿರುವುದರಿಂದ ಇದರ ಅವಲೋಕನವು ಒಂದು ರೀತಿಯಲ್ಲಿ ಇದುವರೆಗೆ ಆಗಿರುವ ಅಧ್ಯಯನದ ಸ್ಥೂಲ ಸಮೀಕ್ಷೆಯೂ ಆಗಿದೆ. ವಿವಿಮರ್ಶೆಯು ಸ್ವಯಂ ವಿಮರ್ಶೆಯ ಆಚರಣೆ ಕೂಡ ಆಗಿದೆಯಾಗಿ ಇದರ ವಿನ್ಯಾಸ ಮತ್ತು ತಾತ್ವಿಕತೆಯನ್ನು ಕಂಡುಕೊಳ್ಳುವುದು ಕುವೆಂಪು ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಯನ್ನು ಕಂಡುಕೊಳ್ಳುವುದರ ಭಾಗವೇ ಆಗಿದೆ. ಆದ್ದರಿಂದ ಇಲ್ಲಿ ಈ ವಿವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಯನ್ನು ಗುರ್ತಿಸಿಕೊಳ್ಳುವ ಕೆಲಸವನ್ನು ಮೊದಲಿಗೆ ಮಾಡಲಾಗುವುದು.

ಹಲವಾರು ಲೇಖನಗಳು ಮೊದಲಿಗೆ ವಿವಿಮರ್ಶೆಯನ್ನು ಸ್ಥೂಲವಾಗಿ ಸಮೀಕ್ಷಿಸಿಕೊಂಡು; ಅವುಗಳ ಬಗ್ಗೆ ತಮ್ಮದೇ ನಿಲುವುಗಳನ್ನು ಮಂಡಿಸಿ, ಆನಂತರ ತಮ್ಮ ವಿಮರ್ಶೆಯ ವಸ್ತು ವಿಷಯಕ್ಕೆ ಪ್ರವೇಶ ಮಾಡುತ್ತವೆ. ಹೀಗಾಗಿ ನಮ್ಮಲ್ಲಿ ವಿವಿಮರ್ಶೆಯು ವಿಮರ್ಶೆಯ ಪೂರ್ವಪೀಠಿಕೆ ಎಂಬಂತೆ ರಚನೆಯಾಗಿದೆ. ಕುವೆಂಪು ವಿವಿಮರ್ಶೆಯು ಮುಖ್ಯವಾಗಿ ನಾಲ್ಕು ರೀತಿಯಲ್ಲಿ ಪ್ರಕಟವಾಗಿದೆ. 1. ಸಾಹಿತ್ಯ ಕುರಿತ ವಿಮರ್ಶೆಯಲ್ಲಿ ಅಲ್ಲಲ್ಲಿ ಅಂತರ್ಗತವಾಗಿ 2. ಪುಸ್ತಕ ವಿಮರ್ಶೆಯ ರೂಪದಲ್ಲಿ 3. ವಿಮರ್ಶೆಯ ವಿಮರ್ಶೆಯನ್ನೇ ಉದ್ದೇಶವಾಗಿ ಇರಿಸಿಕೊಂಡ ಬರವಣಿಗೆಯಲ್ಲಿ. 4. ವಿಮರ್ಶೆಯ ಪೂರ್ವ ಪೀಠಿಕೆಯಾಗಿ ಬರುವ ವಿವಿಮರ್ಶೆಗಳು ಹೀಗೆ. ಪೂರ್ವಪೀಠಿಕಾ ರೂಪದ ವಿವಿಮರ್ಶೆಗಳು ವಿಮರ್ಶಾ ಲೇಖನಗಳ ಅವಿಭಾಜ್ಯ ಅಂಗಗಳಂತೆ ಬರುತ್ತವೆ. ಇಂಥವುಗಳಲ್ಲಿ ವಿವಿಮರ್ಶೆಯ ಬಗೆಗೆ ಕಟುವಾದ ಪರಿಶೀಲನೆ, ನಿರಾಕರಣೆ, ಪರಿಚಯ, ವ್ಯಾಖ್ಯಾನ ಇವು ಮುಖ್ಯವಾದ ಪ್ರವೃತ್ತಿಗಳಾಗಿ ಕಂಡುಬರುತ್ತವೆ. ಪುಸ್ತಕ ವಿಮರ್ಶೆಗಳು ಪರಿಚಯಾತ್ಮಕ ಇಲ್ಲವೆ ಸಮೀಕ್ಷಾಧಾಟಿಯಲ್ಲಿ ಇದ್ದರೆ: ಲೇಖನಗಳಲ್ಲಿ ಅಂತರ್ಗತವಾಗಿ ಬರುವ ವಿವಿಮರ್ಶೆಯು ಸಮರ್ಥನೆ-ನಿರಾಕರಣೆಗಳ ಪ್ರವೃತ್ತಿಯ ಅಂಗವಾಗಿ ಬರುತ್ತದೆ. ಇಲ್ಲಿ ಮೂರನೇ ಬಗೆಯನ್ನು ಮಾತ್ರ ಸಮೀಕ್ಷೆಗೆ ಒಳಪಡಿಸಿ; ಅದರಲ್ಲಿನ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಪರಿಶೀಲಿಸಲು ಉದ್ದೇಶಿಸಲಾಗಿದೆ. ಇಲ್ಲಿ ಕಾಲಾನುಕ್ರಮದಲ್ಲಿ ಬಂದಿರುವ ಕೆಲವು ಪ್ರಾತಿನಿಧಿಕ ವಿವಿಮರ್ಶೆಯ ಬರಹಗಳನ್ನು ಸ್ಥೂಲವಾಗಿ ಮೊದಲಿಗೆ ಸಮೀಕ್ಷಿಸಿ ಆನಂತರ ಇವುಗಳ ನಿಲುವು-ವಿನ್ಯಾಸ-ತಾತ್ವಿಕತೆಗಳನ್ನು ಪರಿಶೀಲಿಸಲಾಗುವುದು.

ಎನ್.ಬೋರಲಿಂಗಯ್ಯನವರು. 1. ಪ್ರಜ್ಞೆ ಮತ್ತು ಪರಿಸರ ಒಂದು ಪ್ರತಿಕ್ರಿಯೆ (1972) 2. ಭಾರತೀಯ ಸಾಹಿತ್ಯ; ಒಂದು ಪ್ರತಿಕ್ರಿಯೆ (1975) 3. ಕುವೆಂಪು ಸಾಹಿತ್ಯ ಮತ್ತು ನವ್ಯ ವಿಮರ್ಶೆ (1975) ಹೀಗೆ ಮೂರು ಲೇಖನಗಳ ಮೂಲಕ ವಿವಿಮರ್ಶೆ ಪ್ರಕಟಿಸಿದ್ದಾರೆ. (1052), ಕುವೆಂಪು ಸಾಹಿತ್ಯದ ಟೀಕೆಯನ್ನು ಆಧಾರ ಸಮೇತವಾಗಿ ನಿರಾಕರಿಸುವ ಪ್ರವೃತ್ತಿ, ಕುವೆಂಪು ಸಾಹಿತ್ಯವು ಶ್ರೇಷ್ಠ

ಎಂದು ವಾದಿಸುವ ವಕೀಲಿ ಪ್ರವೃತ್ತಿ, ಮತ್ತು ಕುವೆಂಪು ಬಗೆಗಿನ ಪ್ರೀತಿ ಇವರ ವಿವಿಮರ್ಶೆಯಲ್ಲಿ ಮುಖ್ಯವಾಗಿ ಇದೆ. ಇವರು ಪ್ರತಿಪಾದಿಸಿರುವ ನಿಲುವುಗಳು ಇಂತಿವೆ.

ಕನ್ನಡದ ಪ್ರಾಯೋಗಿಕ ವಿಮರ್ಶೆ ಇನ್ನೂ ಪ್ರಾಥಮಿಕ ಹಂತದಲ್ಲೇ ಇದೆ. ರಮ್ಯಶೂದ್ರ, ನವ್ಯಬ್ರಾಹ್ಮಣ ಎಂಬಂತೆ ನಮ್ಮ ವಿಮರ್ಶೆಯಲ್ಲಿ ವರ್ಣಭೇದಪ್ರಜ್ಞೆ ಇದೆ. ಅಲ್ಲದೆ ಗುಂಪುಗಾರಿಕೆ, ಜಾತೀಯತೆ ಇದೆ. ಇದು ಇರಕೂಡದು. ನವ್ಯ ವಿಮರ್ಶೆಯು ಕುವೆಂಪು ಸಾಹಿತ್ಯದ ಗುಣಗಳನ್ನು ಗ್ರಹಿಸಿಲ್ಲ. ದೋಷಗಳನ್ನು ಮಾತ್ರ ಗ್ರಹಿಸಿದೆ. ಭಾಷೆ ಮತ್ತು ಕೃತಿಯ ವಿಚಾರದ ಅಭಿವ್ಯಕ್ತಿ ಸ್ವರೂಪಗಳ ನಡುವಿನ ಸಂಬಂಧದ ಬಗ್ಗೆ ನವ್ಯರು ಎತ್ತಿರುವ ಪ್ರಶ್ನೆಗಳು ಅರ್ಥಹೀನ. ಭಾಷೆ ಸಾಹಿತ್ಯ ಕಲೆಯ ಸರ್ವಸ್ವ ಅಲ್ಲ. ಸಂಸ್ಕೃತ ಭೂಯಿಷ್ಠತೆ ಕುವೆಂಪು ಸಾಹಿತ್ಯದಲ್ಲಿ ದೋಷ ಅಲ್ಲ. ಕೃತಿ ಅಥವಾ ಕವಿಗಳ ತೌಲನಿಕ ಅಭ್ಯಾಸದಲ್ಲಿ (ಉದಾ: ಕುವೆಂಪು ಬೇಂದ್ರೆ ತುಲನೆಯಲ್ಲಿ) ಕೃತಿನಿಷ್ಠತೆಗಿಂತ ಕೃತಿಕಾರನ ಸಾಮಾಜಿಕ ಒತ್ತಡಗಳಿಗೆ ಪ್ರಾಮುಖ್ಯತೆ ನೀಡಬೇಕು. ಹಾಗೇ ಶ್ರೇಷ್ಠ ವಿಮರ್ಶಕನಲ್ಲಿ ನಿರ್ಮತ್ಸರತೆ, ಆವೇಶರಹಿತ ಅಭಿಪ್ರಾಯ ಮಂಡನೆ, ಸಹನೆ, ಕೊಂಕು ಇಲ್ಲದ ನೇರ ಬರವಣಿಗೆಯ ಧಾಟಿ ಇರಬೇಕು. ಇವು ಅನಂತಮೂರ್ತಿ, ಎಂ.ಜಿ.ಕೃಷ್ಣಮೂರ್ತಿ, ಕುರ್ತಕೋಟಿ, ಜಿ.ಎಚ್.ನಾಯಕ ಇಂಥವರಲ್ಲಿ ಇಲ್ಲ.

ಕುವೆಂಪು ಸಾಹಿತ್ಯ: ಒಂದು ಪುನರ್ವಿಮರ್ಶೆ (1051) ಎಂಬ ತಮ್ಮ ಲೇಖನದಲ್ಲಿ (1976) ಎಚ್.ಎಂ.ಚೆನ್ನಯ್ಯನವರು ತಮ್ಮ ವಿಮರ್ಶೆಯ ಮೂಲಕವೇ ಇತರರ ಟೀಕೆಗಳಿಗೆ ಉತ್ತರಿಸಿದ್ದಾರೆ. ಇವರು 1. ಒಂದು ಮಹತ್ವಪೂರ್ಣ ಸಾಹಿತ್ಯ ಕೃತಿ ತನ್ನನ್ನು ತಾನು ಅಳೆಯಲು ಬೇಕಾದ ಮಾನಗಳನ್ನು ತಾನೇ ಒದಗಿಸಿಕೊಡುತ್ತದೆ. 2. ಪ್ರಸಿದ್ಧ ಕವನಗಳೆಲ್ಲ ಶ್ರೇಷ್ಠ ಆಗಿರಬೇಕಿಲ್ಲ, ಅನೇಕ ವೇಳೆ ಶ್ರೇಷ್ಠ ಕವನಗಳು ಪ್ರಸಿದ್ಧವಾಗಿಲ್ಲದೇ ಇರಬಹುದು. ಪ್ರಸಿದ್ಧಿಯು ಶ್ರೇಷ್ಠತೆಯ ಮಾನದಂಡ ಅಲ್ಲ. ಹಾಗಾಗಿ ಕವಿತೆಗಳನ್ನು ವಿಮರ್ಶೆಗೆ ಆಯ್ಕೆ ಮಾಡಿಕೊಳ್ಳುವಾಗ ಉತ್ತಮ ಕವಿತೆಗಳನ್ನೇ ಆಯ್ಕೆ ಮಾಡಿಕೊಳ್ಳಬೇಕು. ಟೀಕಿಸಲೆಂದೇ ಸಾಧಾರಣ ಕವಿತೆಗಳನ್ನು ಆಯ್ಕೆ ಮಾಡಿಕೊಳ್ಳಬಾರದು 3. ಆಕರವು ಪೌರಾಣಿಕ ಇಲ್ಲವೆ ಚಾರಿತ್ರಿಕ ಆದ ಮಾತ್ರಕ್ಕೆ ಸಾಹಿತ್ಯವು ಶ್ರೇಷ್ಠ ಅಥವಾ ಕನಿಷ್ಠ ಆಗುವುದಿಲ್ಲ ಎಂಬ ನಿಲುವುಗಳಿಗೆ ತಲುಪಿದ್ದಾರೆ.

ಕುವೆಂಪು ಕಾದಂಬರಿಗಳ ವಿಮರ್ಶೆ; ಒಂದು ಸಮೀಕ್ಷೆ (679) ಎಂಬ ಲೇಖನದಲ್ಲಿ (1976) ಎಂ.ಅಕಬರ ಅಲಿಯವರು ನಾನು ಕುವೆಂಪು ಕಾದಂಬರಿಗಳನ್ನು ಟೀಕಿಸುವುದಿಲ್ಲ ಎಂಬ ಪೂರ್ವನಿರ್ಧಾರದೊಂದಿಗೆ ಸಮೀಕ್ಷೆ ಆರಂಭಿಸಿದ್ದಾರೆ. 1. ಸಮಕಾಲೀನತೆಯು ಶುದ್ಧ ವಿಮರ್ಶೆ ಅಥವಾ ನ್ಯಾಯಯುತ ವಿಮರ್ಶೆಯನ್ನು ನೀಡಲಾರದು; ಇದು ಬೇಕಾದವರನ್ನು ಹೊಗಳುವ ಬೇಡಾದವರನ್ನು ತೆಗಳುವ ಸಂಭವವೇ ಹೆಚ್ಚು. 2. ನ್ಯೂನತೆಯನ್ನು ಗುರ್ತಿಸುವುದೇ ವಿಮರ್ಶೆಯ ಗುರಿ ಆಗಬಾರದು. 3. ಪೂರ್ವನಿಶ್ಚಿತ ತೀರ್ಮಾನಗಳಿಂದ ವಿಮರ್ಶೆಗೆ ತೊಡಗಬಾರದು ಎಂಬ ನಿಲುವುಗಳಿಗೆ ಇವರು ತಲುಪಿದ್ದಾರೆ. ತಮ್ಮ ನಿಲುವುಗಳಿಗೆ ತಾವೇ ನಿದರ್ಶನವೂ ಆಗಿದ್ದಾರೆ.

ಕುವೆಂಪು ಕುರಿತು ಕೆಲವು ಮಾತು (767) ಎಂಬ ತಮ್ಮ ಲೇಖನದಲಿ (1980)_ ಬರಗೂರು ರಾಚಂದ್ರಪ್ಪನವರು ವಿಮರ್ಶೆಗೆ ಸಾಂಸ್ಕೃತಿಕ ದೃಷ್ಟಿ ಮತ್ತು ಕಾರಣ ಮೀಮಾಂಸೆಯ ದೃಷ್ಟಿಕೋನಗಳು ಇರಬೇಕು ಎಂಬ ತತ್ವವನ್ನು ಮಂಡಿಸಿದ್ದಾರೆ. ಕೃತಿಗಳ ರಚನೆ ಹೇಗೆ ಇದೆ ಎಂದು ನೋಡುವುದಕ್ಕಿಂತ, ಯಾಕೆ ಹೀಗೆ ಇದೆ ಎಂದು ನೋಡಬೇಕು. ಕುವೆಂಪು ಕುರಿತ ವಿಮರ್ಶೆಯಲ್ಲಿ ಕುರುಡು ವೈಭವೀಕರಣ ಮತ್ತು ಟೀಕೆ ಈ ಎರಡೇ ಪ್ರವೃತ್ತಿಗಳು ಇವೆ. ನಮ್ಮ ವಿಮರ್ಶೆಯಿಂದ ಕುವೆಂಪು ಕೃತಿಗಳಿಗ ಸೂಕ್ತ ನ್ಯಾಯ ಸಂದಿಲ್ಲ. ಅದನ್ನು ಈಗಲಾದರೂ ಸಲ್ಲಿಸಬೇಕಾಗಿದೆ ಎಂಬ ನಿಲುವುಗಳಿಗೆ ಇಲ್ಲಿ ಬರಲಾಗಿದೆ.

ಟೀಕೆಗಳಿಗೆ ಉತ್ತರ (1982) ಪ್ರತಿಧ್ವನಿ ಯುಗೇ ಯುಗೇ ಸಂಭವಾಮಿ (1986) ಮತ್ತು ಇನ್ನಿತರ ತಮ್ಮ ಬರಹಗಳಲ್ಲಿ (1286, 2695) ದೇಜಗೌ ಕಟ್ಟಾ ಕುವೆಂಪು ಭಕ್ತರಂತೆ ಕುವೆಂಪು ಮಾತು, ಬರಹಗಳನ್ನು ಟೀಕಿಸುವವರಿಗೆ ತುಂಬಾ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದಾರೆ. ವಾದಕ್ಕೆ ಪ್ರತಿವಾದ, ಏಟಿಗೆ ಎದುರೇಟು, ಹೀನಾಮಾನಾ ಹೀಯಾಳಿಸುವುದು ಹೀಗೆ ದೇಜಗೌ ಬರವಣಿಗೆ, ವಿರೋಧಿಗಳನ್ನು ಮಟ್ಟಹಾಕುವ ಕತ್ತಿಯ ರೂಪದಲ್ಲೆ ಇದೆ. ಕುವೆಂಪು ಮಾತು–ಬರವಣಿಗೆಯನ್ನು ಒಪ್ಪದವರನ್ನು ಮಹೀಸುರರು, ಪುರೋಹಿತಶಾಹಿಗಳು, ವಿಚಾರವಾದೀಭ ಸಿಂಹರು, ಪರಸ್ಪರ ಪ್ರಶಂಸಾ ಸಂಘದ ಸದಸ್ಯರು, ಸ್ವಜಾತೀಯ ಗೆಳೆಯರ ಗುಂಪಿನವರು, ಶ್ವಾನಗಳು ಇತ್ಯಾದಿಯಾಗಿ ಇಲ್ಲಿ ನಿಂದಿಸಲಾಗಿದೆ. 20–4–1974 ರಲ್ಲಿ ಕುವೆಂಪು ಮಾಡಿದ ಭಾಷಣದಲ್ಲಿ ಮಧ್ವಾಚಾರ್ಯರ ಕೆಲವು ತತ್ವಗಳನ್ನು ವಿರೋಧಿಸಿದರು ಎಂಬ ಕಾರಣಕ್ಕೆ ನಾಡಿನಾದ್ಯಂತ ಎದ್ದ ವಿರೋಧವನ್ನು

ಟೀಕೆಗಳಿಗೆ ಉತ್ತರ ಎಂಬ ಲೇಖನದಲ್ಲಿ ದಾಖಲಿಸಲಾಗಿದೆ. ಆಗ ನಡೆದ ಪತ್ರ ವ್ಯವಹಾರ, ಕೋರ್ಟು ಕೇಸಿನ ವಿಚಾರಗಳ ವಿವರವನ್ನು ಇಲ್ಲಿ ನೀಡಲಾಗಿದೆ. ದೇಜಗೌ ಕುವೆಂಪು ಪರ ವಕೀಲರಂತೆ ಇಲ್ಲಿ ಮೇಲಿನ ವಿಚಾರದ ಒಂದು ಚಾರಿತ್ರಿಕ ದಾಖಲೆಯನ್ನು ಒದಗಿಸಿದ್ದಾರೆ.

1985ರಲ್ಲಿ ಭಗವಾನ್ ಮತ್ತು ಶಿವಣ್ಣನವರು ನಡೆಸಿದ ಸಂದರ್ಶನದಲ್ಲಿ ಕುವೆಂಪು 'ಹಿಂದೂ ಧರ್ಮವೆಂದರೆ ಬ್ರಾಹ್ಮಣಧರ್ಮ, ಇದೊಂದು ಅನಿಷ್ಟಧರ್ಮ' ಎಂದು ಹೇಳಿದರು ಎಂಬುದಕ್ಕೆ ಎದ್ದ ಬ್ರಾಹ್ಮಣರ ವಿರೋಧ-ಟೀಕೆಗಳನ್ನು ಪ್ರತಿಧ್ವನಿ ಸಂಭವಾಮಿ ಯುಗೇ ಯುಗೇ ಎಂಬ ಧೀರ್ಘಲೇಖನದಲ್ಲಿ (1986) ಕಟ್ಟಿಕೊಡಲಾಗಿದೆ. ಸಂದರ್ಶನವನ್ನು ಒಳಗೊಂಡಂತೆ, ಕುವೆಂಪುಗೆ ಬ್ರಾಹ್ಮಣರಿಂದ ಬಂದ ಬೆದರಿಕೆ ಪತ್ರಗಳು ಅದಕ್ಕೆ ಕುವೆಂಪು ಮತ್ತಿತರರು ನೀಡಿದ ಉತ್ತರಗಳು, ಗೊರೂರು, ಬಿ.ರಾಚಯ್ಯ, ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ಮೊದಲಾದವರ ಪ್ರತಿಕ್ರಿಯೆಗಳು, ಶ್ರೀಕೃಷ್ಣ ಆಲನಹಳ್ಳಿ ಮತ್ತು ದೇವನೂರ ಮಹದೇವ ಅವರು ಬ್ರಾಹ್ಮಣರ ಸಭೆಯಲ್ಲಿ ಮಾಡಿದ ಪ್ರತಿಭಟನೆಯ ವಿವರಗಳು, ಅಲ್ಲಮಪ್ರಭು ಬೆಟ್ಟದೂರ ಮತ್ತು ತ.ಹ.ನಾಗರಾಜರಾವ್ ಅವರ ಪತ್ರಗಳು ಇವೆಲ್ಲವನ್ನು ಒಳಗೊಂಡಂತೆ ಒಂದು ಪುಸ್ತಕವನ್ನೆ ದೇಜಗೌ ಸಿದ್ಧಪಡಿಸಿದ್ದಾರೆ. ಆ ಮೂಲಕ ಬ್ರಾಹ್ಮಣ್ಯ-ಅಬ್ರಾಹ್ಮಣ್ಯಗಳ ಸಂಘರ್ಷದ ಒಂದು ದಾಖಲೆ ನೀಡಿದ್ದಾರೆ. ಕುವೆಂಪು ಸಾಹಿತ್ಯಕ್ಕೆ ಬಂದ ಟೀಕೆಗಳನ್ನು ಸವಿಸ್ತಾರವಾಗಿ ಪ್ರಸ್ತಾಪಿಸಿ ಖಂಡಿಸಿದ್ದಾರೆ. ನೆನಪಿನ ದೋಣಿಯ ವಿವರಗಳನ್ನು ಉಲ್ಲೇಖಿಸಿ ಮಾಸ್ತಿ, ಗೋಕಾಕ್, ಡಿ.ವಿ.ಜಿ, ದೇವುಡು ಇವರ ಪ್ರತಿಕ್ರಿಯೆಗಳು ಜಾತಿವಾದದಿಂದ ಕೂಡಿದ್ದವೆಂದು ನಿರೂಪಿಸಿದ್ದಾರೆ. ಆ ಮೂಲಕ ತಮ್ಮ ಈ ಎರಡೂ ಬರಹಗಳಲ್ಲಿ ಕುವೆಂಪು ಕುರಿತ ವಿಮರ್ಶೆಯು ಜಾತಿವಾದಿತನದಿಂದ ಕೂಡಿದೆ ಮತ್ತು ಇಡೀ ಭಾರತೀಯ ಇತಿಹಾಸವೇ ಬ್ರಾಹ್ಮಣ-ಅಬ್ರಾಹ್ಮಣ ಸಂಘರ್ಷ ಎಂಬ ನಿಲುವುಗಳಿಗೆ ಬಂದಿದ್ದಾರೆ.

ಕುವೆಂಪು ಸಾಹಿತ್ಯ ವಿವಿಮರ್ಶೆಯ ವಿಮರ್ಶೆ (1059) ಎಂಬ ದೇಜಗೌ ಅವರ (1989) ಇನ್ನೊಂದು ಲೇಖನವು ಸುಧಾಕರರ ಸಾಹಿತ್ಯ ಸಂವೀಕ್ಷಣೆಗೆ ಬರೆದ ಪ್ರಸ್ತಾವನೆಯಂತೆ ಇದೆ. ವಿವಿಮರ್ಶೆಯನ್ನು ದೇಜಗೌ ಇಲ್ಲಿ ಪ್ರತಿಬಾಣ ಕೌಶಲ ಎಂದು ಕರೆದಿದ್ದಾರೆ. ಕುವೆಂಪು ವಿಮರ್ಶಕರನ್ನು ಇಲ್ಲಿ ಪೀಡೆಗಳು, ಕಿರುಕುಳರು, ಮಾತ್ಸರ್ಯಶೂರರು, ಜಾತ್ಯಂಧರು, ಸ್ವಯಮಾಚಾರ್ಯರು, ಶುನಕರು, ಅಸುರರು, ಶಬ್ದದರಿದ್ರರು, ಶೀಘ್ರ ಕೀರ್ತಿಕಾಮಿಗಳು, ಮಾತಾಡಿಕೊಂಡು ಮಸಲತ್ತು ಮಾಡುವವರು, ವಿಷವೂಡುವವರು ಎಂದೆಲ್ಲ ಬಣ್ಣಿಸಿದ್ದಾರೆ. 1. ಕನ್ನಡ ವಿಮರ್ಶೆಯಲ್ಲಿ ಜಾತಿವಾದಿತನ ತುಂಬಿಕೊಂಡಿದೆ 2. ಕುವೆಂಪು ಅವರಿಗೆ ಗುರುಕೃಪೆಯಿಂದ-ದೈವದತ್ತವಾಗಿ ಅಸಾಧಾರಣ ಬುದ್ಧಿ, ಜ್ಞಾನ, ಪ್ರತಿಭೆಗಳು ಬಂದಿವೆ 3. ಭಾಷೆ ಮತ್ತು ಜಾತಿಗಳ ಸಮೀಕರಣವನ್ನು ಮಾಡಬಾರದು ಎಂಬ ನಿಲುವುಗಳನ್ನು ಇಲ್ಲಿ ತಳೆದಿದ್ದಾರೆ.

ವಿಮರ್ಶಕರ ಕೈಯಲ್ಲಿ ಕುವೆಂಪು ಎಂಬ ಲೇಖನದಲ್ಲಿ ಎಸ್.ಎಸ್.ಭೂಸರೆಡ್ಡಿಯವರು ವಿಮರ್ಶಕರ ಟೀಕೆಗಳಿಗೆ ವಿಮರ್ಶಕರ ಮಾತುಗಳನ್ನೇ ಎದುರು ಬದುರು ಇಟ್ಟು ಮಾರುತ್ತರ ರೂಪಿ ವಿಮರ್ಶೆಯನ್ನು ಕಟ್ಟಿದ್ದಾರೆ. ಇದನ್ನು ವಿವಿಮರ್ಶೆಯ ಜುಗಲಬಂದಿ ಎನ್ನಬಹುದು. ಕುವೆಂಪು ಕುರಿತ ಟೀಕೆಗಳನ್ನು ಟೀಕಿಸಿ, ಹೊಗಳಿಕೆಗಳನ್ನು ಸ್ತುತಿಸಿ; ಟೀಕೆಯನ್ನು ತಿರಸ್ಕರಿಸುವ ಮತ್ತು ಮೆಚ್ಚುಗೆಯನ್ನು ಪುರಸ್ಕರಿಸುವ ಮಾದರಿಯನ್ನು ಇಲ್ಲಿ ನಿರ್ಮಿಸಿದ್ದಾರೆ. ತಮ್ಮ ತಿರಸ್ಕಾರ ಪುರಸ್ಕಾರಗಳಿಗೆ ಇವರು ಇಲ್ಲಿ ಯಾವ ತಾತ್ವಿಕ ಕಾರಣಗಳನ್ನೂ ಚರ್ಚಿಸಿಲ್ಲ.

ನಮ್ಮ ವಿಚಾರಪರರು ಮತ್ತು ವಿಮರ್ಶೆ (1388) ಎಂಬ ಲೇಖನದಲ್ಲಿ (1988) ಸುಧಾಕರ ಅವರು ಪೆನ್ ಪತ್ರಿಕೆಯ ಆಲ್ ಇಂಡಿಯಾ ರೈಟರ್ಸ್ ಕಾನ್ಫರೆನ್ಸಿನಲ್ಲಿ ಅನಂತಮೂರ್ತಿಯವರು ಮಾಡಿದ ಭಾಷಣವನ್ನು ತೀವ್ರವಾಗಿ ವಿರೋಧಿಸಿದ್ದಾರೆ. ಇಲ್ಲಿನ ವಿವಿಮರ್ಶೆಯಲ್ಲಿ ತಾತ್ವಿಕವಾದ, ಸೈದ್ಧಾಂತಿಕವಾದ ಚರ್ಚೆಗಳಿಗಿಂತ ಹೆಚ್ಚಾಗಿ ವ್ಯಕ್ತಿನಿಂದೆ, ಜಾತಿನಿಂದೆಗಳು ಕಾಣಿಸಿಕೊಂಡಿವೆ. ಅನಂತಮೂರ್ತಿಯವರ ವಿಮರ್ಶೆಗೆ ಸುಧಾಕರರು ತಾವೇ ಪರ್ಯಾಯ ವಿಮರ್ಶೆ ಮಾಡಿ ಇಲ್ಲಿ ತೋರಿದ್ದಾರೆ. ವಸ್ತು ಮತ್ತು ಭಾಷೆಯ ನಡುವಿನ ಸಂಬಂಧದ ವಿಚಾರದಲ್ಲಿ ಅನಂತಮೂರ್ತಿ ಕುವೆಂಪುವನ್ನು ಸಂಸ್ಕೃತಭೂಯಿಷ್ಟ ಎಂದು ಟೀಕಿಸಿದರೆ ಇದೇ ವಿಚಾರಕ್ಕೆ ಸುಧಾಕರ ಕುವೆಂಪುವನ್ನು ಸಮರ್ಥಿಸಿದ್ದಾರೆ. ಹಾಗೆ ಸಮರ್ಥಿಸುತ್ತ 1. ಕೃತಿಯ ಭಾಷೆಯು ಕೃತಿಯ ವಿಚಾರ ಮತ್ತು ದರ್ಶನಗಳಿಗೆ ಅನುಗುಣವಾಗಿರಬೇಕು. ಆಡು ಮಾತು ಪ್ರಾದೇಶಿಕ ಮಾತು, ಕನ್ನಡ ದೇಸಿ-

ಸಂಸ್ಕೃತ ಭೂಯಿಷ್ಟ ಎಂಬುದೆಲ್ಲ ಅಮುಖ್ಯ ಹಾಗೂ 2. ವಿಮರ್ಶೆಯಲ್ಲಿ ದುಡುಕಿನ ಅಸಮಗ್ರ ಓದಿನ ತೀರ್ಮಾನಗಳಿಗೆ ಬರಕೂಡದು ಎಂಬ ನಿಲುವುಗಳನ್ನು ಮಂಡಿಸಿದ್ದಾರೆ.

ಶಿವರಾಮು ಕಾಡನಕುಪ್ಪೆ ಅವರು ವಿಶ್ವಮಾನವರು ಮತ್ತು ಜಾತಿಮಾನವರು ಎಂಬ ತಮ್ಮ ಲೇಖನದಲ್ಲಿ (1990) ಕುವೆಂಪು ಅಧ್ಯಯನ ಮಾಡಿದವರನ್ನು 1. ಶಿಷ್ಯ ವರ್ಗ ಮತ್ತು 2. ನವ್ಯ ಸಾಹಿತಿಗಳು ಎಂದು ಎರಡು ವರ್ಗಗಳನ್ನಾಗಿ ವರ್ಗೀಕರಿಸಿದ್ದಾರೆ. ಇವರು ಇಲ್ಲಿ 1. ಕವಿಯ ಬಗ್ಗೆ ಹೆಚ್ಚಿನ ಪ್ರೀತಿ ಗೌರವ ಇದ್ದರೆ ವಸ್ತುನಿಷ್ಠ ವಿಮರ್ಶೆ ಸಾಧ್ಯವಿಲ್ಲ. 2. ಅನ್ಯ ಸಂಸ್ಕೃತಿಯ ಮಾನದಂಡಗಳಿಂದ ಸ್ವ ಸಾಹಿತ್ಯವನ್ನು ಅಳೆಯಬಾರದು ಎಂಬ ಎರಡು ಮುಖ್ಯ ನಿಲುವುಗಳನ್ನು ಮಂಡಿಸಿದ್ದಾರೆ.

ಚಂಪಾರವರ ಕುವೆಂಪು ನನ್ನ ನೆನಪಿನ ಡೋಣಿಯಲ್ಲಿ (835) ಲೇಖನ (1995) ಕುವೆಂಪು ಕಟು ವಿಮರ್ಶಕರನ್ನು ಚೆನ್ನಾಗಿ ಕುಟುಕಿರುವ ಲೋಕಾಭಿರಾಮ ವ್ಯಂಗ್ಯ ಮತ್ತು ಕುಟುಕು ನುಡಿಗಳ ವಿಮರ್ಶೆಯಾಗಿದೆ. ಇಲ್ಲಿ ಕುರ್ತಕೋಟಿ ಮತ್ತು ಗಿರಡ್ಡಿಯವರನ್ನು ಬೇಂದ್ರೆ ಭಜನಾ ಮಂಡಳಿಯ ಆಜೀವ ಸದಸ್ಯರೆಂದು ಜರೆಯಲಾಗಿದೆ. ವಿಮರ್ಶಕರಿಗಿರುವ ತನಗೆ ಪ್ರಿಯವಾಗುವ ಕವಿಯ ಬಗೆಗಿನ ಕುರಿತ ಬದ್ಧತೆಯನ್ನು ಕವಿಬದ್ಧತೆ (ಮಲಬದ್ಧತೆಯ ಹಾಗೆ) ಎಂಬ ಒಂದು ರೋಗ ಎನ್ನಲಾಗಿದೆ. ಕುವೆಂಪುವನ್ನು ಸ್ವಲ್ಪ ಹೊಗಳಲಾಗಿದೆ.

ಕುವೆಂಪು ಕೃತಿಗಳ ವಿಮರ್ಶೆಯ ನೆಲೆಗಳು (776) ಎಂಬ ಲೇಖನದಲ್ಲಿ (1997) ಕೆ.ವಿ.ನಾರಾಯಣರು ಒಟ್ಟಾರೆ ವಿಮರ್ಶೆ ಮತ್ತು ವಿವಿಮರ್ಶೆ ಎರಡನ್ನೂ ಪ್ರಕಾರದೃಷ್ಟಿಯಲ್ಲಿ ವರ್ಗೀಕರಿಸಿಕೊಂಡು ಚರ್ಚಿಸಿದ್ದಾರೆ. ವಿಮರ್ಶಕರು ತಮ್ಮ ನಿಲುವುಗಳನ್ನು ತಲುಪಲು ಬಳಸುವ ವಿಮರ್ಶಾ ಮಾರ್ಗಗಳನ್ನು ವಿಶ್ಲೇಷಿಸುವ ಮತ್ತು ಅವುಗಳ ಮಿತಿ ವ್ಯಾಪ್ತಿಗಳನ್ನು ಚರ್ಚಿಸುವ ಕೆಲಸವನ್ನು ಇಲ್ಲಿ ಮಾಡಿದ್ದಾರೆ. ಇವರು ಪ್ರಕಟಿಸಿರುವ ಕೆಲವು ನಿಲುವುಗಳು, ತತ್ವಗಳು ಹೀಗಿವೆ;

1. ಕುವೆಂಪು ಅವರ ಕೃತಿಗಳನ್ನು ಕುರಿತು ಬಂದಿರುವ ವಿಮರ್ಶೆಯ ಬಹುಪಾಲು ವರ್ಣನಾತ್ಮಕ ವಿಮರ್ಶೆ. 2. ಯಾವುದೇ ಕೃತಿ ಒಂದು ಸಾಹಿತ್ಯಕ ಘಟನೆ 3. ಕುವೆಂಪು ಅವರ ನಿಸರ್ಗ ಪ್ರೇಮವನ್ನು ಸಾಂಸ್ಕೃತಿಕ ಹಿನ್ನೆಲೆಯಿಂದ ನಮ್ಮ ವಿಮರ್ಶೆ ನೋಡಿಲ್ಲ. 4. ವಿಮರ್ಶೆಯ ದೃಷ್ಟಿಗಳು ಖಚಿತವೂ, ಸಾಹಿತ್ಯಕವೂ ಆಗಿದ್ದು ಆರೋಗ್ಯಕರವಾಗಿರಬೇಕು. 5. ಕೃತಿಯ ಶಿಲ್ಪ ಕುರಿತು ಭಿನ್ನ ವ್ಯಾಖ್ಯಾನ ಸಾಧ್ಯ. ಮತ್ತು ಶ್ರೇಷ್ಠವಲ್ಲದ ಕೃತಿಯು ಮಹತ್ವದ್ದಾಗಿರಲು ಸಾಧ್ಯ. 6. ರೊಮ್ಯಾಂಟಿಕ್ ಕಾವ್ಯದೋಷಗಳನ್ನು ನವ್ಯದ ಸಮರ್ಥನೆಗಾಗಿ ಹುಡುಕಲಾಗಿದೆ. ಇದು ವಿಮರ್ಶೆಯ ಒಂದು ವಿಪರ್ಯಾಸ. 7. ಮಾರ್ಕ್ಸ್‌ವಾದಿ ವಿಮರ್ಶೆಯ ನಿಲುವುಗಳು ನಮ್ಮಲ್ಲಿ ಇನ್ನೂ ಖಚಿತವಾದ ಸ್ವರೂಪ ಪಡೆದಿಲ್ಲ. ಹಾಗೇ ಕುವೆಂಪು ಕಾವ್ಯವು ಪರಂಪರೆಯೊಡನೆ ಪಡೆದಿರುವ ಸಂಬಂಧವನ್ನು ನಮ್ಮ ವಿಮರ್ಶೆ ಗುರ್ತಿಸಿಲ್ಲ. ಅಲ್ಲದೆ ಕುವೆಂಪು ಅವರ ಸಣ್ಣ ಕತೆಗಳ ಬಗೆಗೆ ಮಹತ್ವದ್ದೆನಿಸುವ ವಿಮರ್ಶೆ ಬಂದೇ ಇಲ್ಲ. 8. ಓದುಗನ ಅಪೇಕ್ಷೆಗಳು ಕುವೆಂಪು ಕೃತಿಯ ಆಶಯವನ್ನಾಗಲೀ ಅಭಿವ್ಯಕ್ತಿಯನ್ನಾಗಲೀ ನೇರವಾಗಿ ನಿಯಂತ್ರಿಸಿದ್ದಕ್ಕೆ ಆಧಾರಗಳಿಲ್ಲ. 9. ಶ್ರೇಷ್ಠ ಲೇಖಕನ ಕೃತಿಗಳ ಮೂಲಕವೇ ವಿಮರ್ಶಾ ಪರಿಕರಗಳು ಹೆಚ್ಚು ನಿಖರವಾಗಬಲ್ಲವು. 10. ತಾನು ಒಪ್ಪದ ತಾತ್ವಿಕ ದೃಷ್ಟಿಯನ್ನು ಹೊಂದಿರುವ ಕಾವ್ಯದ ಬಗೆಗೆ ವಿಮರ್ಶಕನು ಏನು ಮಾಡಬೇಕು? ಇದಕ್ಕೆ ತಕ್ಕ ಸೂಚನೆ ಕೊಡುವ ವಿಮರ್ಶೆ ನಮ್ಮಲ್ಲಿ ಬಂದಿಲ್ಲ. 11. ಕುವೆಂಪು ಕೃತಿಗಳ ವಿಮರ್ಶೆಯಿಂದ ಕುವೆಂಪು ಕೃತಿಗಳಿಗೆ ನ್ಯಾಯ-ಅನ್ಯಾಯ ಆಗಿಲ್ಲ. ಆದರೆ ಇದರಿಂದ ನಮ್ಮ ವಿಮರ್ಶಾ ಕ್ಷೇತ್ರದ ಕ್ಷುದ್ರತನವಂತೂ ಬಯಲಾಗಿದೆ. ಇಲ್ಲಿನ ಕೆಲವು ನಿಲುವುಗಳು ವಿರೋಧಾಭಾಸಗಳಂತೆ ಕಾಣುತ್ತವೆ. ಹಾಗೆಯೇ ಇಲ್ಲಿನ ಕೆಲವು ನಿಲುವುಗಳು ಅನ್ಯರ ವಿಮರ್ಶೆಯ ನಿಲುವುಗಳಿಗೆ ಮಾರುತ್ತರ ಕೊಡುವ ನಿಲುವುಗಳಾಗಿವೆ. ಬಂದಿರುವ ವಿಮರ್ಶೆಯನ್ನು ಪ್ರಕಾರ ದೃಷ್ಟಿಯಲ್ಲಿ ವರ್ಗೀಕರಿಸಿಕೊಂಡು ವಿಶ್ಲೇಷಿಸಿರುವುದರಿಂದ ಇಲ್ಲಿನ ಕೆಲವು ನಿಲುವುಗಳಿಗೆ ಬಿಡಿ ಪ್ರತಿಕ್ರಿಯೆಗಳಾಗುವ ಸ್ಥಿತಿ ಒದಗಿದೆ.

ಬಸವರಾಜ ಕಲ್ಗುಡಿಯವರು 'ಕನ್ನಡ ಸಾಹಿತ್ಯದ ಒಂದು ಮುಖ್ಯ ವಾಗ್ವಾದ; ಕುವೆಂಪು ಮಾಸ್ತಿ' (191) ಎಂಬ ಲೇಖನದಲ್ಲಿ (1999) ಶೂದ್ರ ತಪಸ್ವಿಯ ವಿವಾದವನ್ನು ನೆಪವಾಗಿ ಇರಿಸಿಕೊಂಡು ಮಾಸ್ತಿ ಮತ್ತು ಕುವೆಂಪು ಕುರಿತ ತಮ್ಮ ತೌಲನಿಕ ವಿಚಾರಗಳನ್ನು ಮಂಡಿಸಿದ್ದಾರೆ. ಮಾಸ್ತಿ ಮತ್ತು ಕುವೆಂಪು ಅವರ ಉತ್ತರ ಮಾರುತ್ತರಗಳನ್ನು ಪ್ರಸ್ತಾಪಿಸಿ ಇಬ್ಬರ ದೃಷ್ಟಿಕೋನಗಳೂ ಭಿನ್ನವಾದುವು; ಇಬ್ಬರ ಸೃಜನಶೀಲ

ಮಾರ್ಗಗಳೂ ಭಿನ್ನ ಮತ್ತು ಸಮಾನ ಮಹತ್ವದವು; ಕಲಾ ಸೃಷ್ಟಿಯಲ್ಲಿ ಇಬ್ಬರೂ ಎದುರಿಸಿದ ಬಿಕ್ಕಟ್ಟುಗಳು ಕೂಡ ಭಿನ್ನವಾದುವು ಎಂಬ ನಿಲುವು ಪ್ರಕಟಿಸಿದ್ದಾರೆ.

ಬೈರಮಂಗಲ ರಾಮೇಗೌಡರು ಕುವೆಂಪು ಕಾವ್ಯ ಕುರಿತ ವಿಮರ್ಶೆ (741) ಎಂಬ ತಮ್ಮ ಲೇಖನದಲ್ಲಿ (2003) ಪೂರ್ವನಿಶ್ಚಿತವಾದ ಅಭಿಪ್ರಾಯಗಳಿಂದಲೆ ಕೃತಿಯೊಂದನ್ನು ತಿರುವಿ ಹಾಕುವುದು, ಒಂದು ಗುಂಪಿನ ಮುಖವಾಣಿಯಾಗಿ ಮಾತನಾಡುವುದು, ಜಾತೀಯತೆಯನ್ನು ತೋರ್ಪಡಿಸುವುದು, ತನಗಾಗಿರುವ ಆಗಬಹುದಾದ ನಷ್ಟಕ್ಕೂ ಲಾಭಕ್ಕೂ ಅನುಗುಣವಾಗಿ ಕೃತಿಕಾರನನ್ನು ತೆಗಳುವುದು ಅಥವಾ ಹೊಗಳುವುದು– ಇದು 20ನೇ ಶತಮಾನದಲ್ಲೂ ಕನ್ನಡ ವಿಮರ್ಶೆಯ ಅನಾರೋಗ್ಯಕಾರಿ ಸ್ಥಿತಿ ಎಂದು ಹೇಳಿದ್ದಾರೆ. ಇಡಿ ಲೇಖನದಲ್ಲಿ ಬ್ರಾಹ್ಮಣ–ಶೂದ್ರ ಎಂಬ ಜಾತಿವಾದಿತನದಿಂದ ನಮ್ಮ ವಿಮರ್ಶೆ ಕಲುಷಿತವಾಗಿದೆ ಎಂಬ ನಿಲುವನ್ನು ಪ್ರತಿಪಾದಿಸಿ ಸಮರ್ಥಿಸಲಾಗಿದೆ. ಆಪ್ತವಲಯದವರ ಮುಖವಾಣಿಯಂತೆ ಮಾತನಾಡುತ್ತ ನವ್ಯರನ್ನೆಲ್ಲ ಬ್ರಾಹ್ಮಣ ಜಾತಿವಾದಿಗಳೆಂದು ಟೀಕಿಸಲಾಗಿದೆ.

ಕುವೆಂಪು ಕತಾಸಾಹಿತ್ಯದ ಬಗೆಗೆ ಸಮಕಾಲೀನರ ಪ್ರತಿಕ್ರಿಯೆ (642) ಎಂಬ ತಮ್ಮ ಬರಹದಲ್ಲಿ (2004) ಉದ್ದಂಡಯ್ಯನವರು ಒಟ್ಟಾರೆ ವಿವಿಮರ್ಶೆಯನ್ನು 1980ರ ಮುಂಚೆ ಮತ್ತು ಆನಂತರದ್ದು ಎಂದು ಎರಡು ಘಟ್ಟಗಳನ್ನಾಗಿ ವಿಂಗಡಿಸಿಕೊಂಡಿದ್ದಾರೆ. 80ರ ನಂತರದ ಕುವೆಂಪು ಕುರಿತ ವಿಮರ್ಶೆಯ ಧೋರಣೆಯು ಎಲ್ಲರಲ್ಲೂ ಬದಲಾಗಿದೆ; ಟೀಕಾಕಾರರೂ ಬದಲಾಗಿದ್ದಾರೆ ಎಂಬುದನ್ನು ನಿದರ್ಶನಗಳೊಂದಿಗೆ ಮಂಡಿಸಿದ್ದಾರೆ. ಕುವೆಂಪು ಕುರಿತ ಗುಣದೋಷ ಮಾದರಿಯ ವಿಮರ್ಶೆಯ ಸಮೀಕ್ಷೆ ಇಲ್ಲಿದೆ. ಟೀಕೆಯನ್ನು ವಿರೋಧಿಸುವ, ಮೆಚ್ಚುಗೆಯನ್ನು ಒಪ್ಪುವ, ಕುವೆಂಪು ಸಾಹಿತ್ಯವನ್ನು ಆರಾಧಿಸುವ ದೃಷ್ಟಿ ಇಲ್ಲಿ ಎದ್ದು ಕಾಣುತ್ತದೆ.

ಕುವೆಂಪು ಕೃತಿ ವಿಮರ್ಶೆ (2006) ಎಂಬ ಸಂಪಾದಿತ ಕೃತಿಯ ಪ್ರಸ್ತಾವನೆಯಲ್ಲಿ ಅರವಿಂದ ಮಾಲಗತ್ತಿಯವರು ಕುವೆಂಪು ಕುರಿತ ವಿಮರ್ಶೆಯ ಬಗೆಗೂ ಸಮೀಕ್ಷೆ ನಡೆಸಿದ್ದಾರೆ. (2589, ಪ್ರಸ್ತಾವನೆ, ಪುಟ: 12–20) ಈ ಸಮೀಕ್ಷೆಯಲ್ಲಿ ಕುವೆಂಪು ವಿಮರ್ಶೆಯನ್ನು ರಸಾಸ್ವಾದನಾ ಸ್ವರೂಪಿ, ಸಮತೋಲನಾ ಸ್ವರೂಪಿ, ಟೀಕಾತ್ಮಕ ಸ್ವರೂಪಿ ಇತ್ಯಾದಿಯಾಗಿ ಹನ್ನರಡು ಬಗೆಗಳಲ್ಲಿ ವರ್ಗೀಕರಿಸಿ ಗುರುತಿಸಿದ್ದಾರೆ. ಇವರು ಇಲ್ಲಿ ಪ್ರಕಟಿಸಿರುವ ಕೆಲವು ನಿಲುವುಗಳು ಹೀಗಿವೆ. 1. ಸಾಹಿತ್ಯ ವಿಮರ್ಶೆಯು ಯಾವುದೇ ವಿಧಾನವನ್ನು ಬಳಸಿದರೂ ಕೃತಿಕಾರನ ಸಮಕಾಲೀನ ಸಂದರ್ಭವನ್ನು ಮರೆತು ಮಾತನಾಡುವುದು ಅರ್ಥಹೀನ, 2. ಸಾಹಿತ್ಯವನ್ನು ಅರ್ಥೈಸುವಾಗ ಭಾವ, ಬುದ್ಧಿ ಅಥವಾ ಅನುಭವ ಹೀಗೆ ಯಾವುದಾದರೊಂದನ್ನು ಅವಲಂಬಿಸದೆ ಇವೆಲ್ಲವುಗಳ ಸಂಯೋಜನೆಯಿಂದ ಅರ್ಥೈಸಬೇಕು. 3. ಕುವೆಂಪು ಸಾಹಿತ್ಯದ ಸಮಗ್ರ–ವಸ್ತುನಿಷ್ಠ ಅಧ್ಯಯನ ಇದುವರೆಗೆ ಸಮರ್ಥವಾಗಿ ಆಗಿಲ್ಲ. ಇಲ್ಲಿ ಇದೆ–ಇಲ್ಲಗಳ ಸಂವಾದವೇ ಮೇಲುಗೈಯಾಗಿದೆ. 4. ನವೋದಯ–ನವ್ಯ–ದಲಿತ–ಬಂಡಾಯ–ಸ್ತ್ರೀವಾದಗಳ ಹಿನ್ನಲೆಯಲ್ಲಿ ಕುವೆಂಪುವನ್ನು ನೋಡಲಾಗಿದೆ. 5. ಕುವೆಂಪು ಬಗೆಗೆ ಬಂದಿರುವ ಬಹುಪಾಲು ನಿಲುವುಗಳು ಬೀಸುಮಾತಿನ ಹೇಳಿಕೆಗಳಾಗಿವೆ. 6. ಕನ್ನಡ ವಿಮರ್ಶೆ ಪ್ರತಿಕ್ರಿಯಾತ್ಮಕ ಮಾದರಿಯನ್ನು ಮೀರಿ ಬೆಳೆಯಬೇಕಾಗಿದೆ. ಈ ಎಲ್ಲಾ ನಿಲುವುಗಳ ಜೊತೆಗೆ ಮಾಲಗತ್ತಿಯವರು ಕುವೆಂಪು ಸಾಹಿತ್ಯ ಕುರಿತಾದ ತಮ್ಮದೇ ವಿಮರ್ಶಾ ನಿಲುವುಗಳನ್ನೂ ಪ್ರಕಟಿಸಿದ್ದಾರೆ. (2589–ಪ್ರಸ್ತಾವನೆ)

### 4.5. ವಿವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆ

ಒಟ್ಟಾರೆಯಾಗಿ ನೋಡಿದರೆ ಈ ವಿವಿಮರ್ಶೆಯಲ್ಲಿ ಹಲವು ವಿನ್ಯಾಸಗಳು ಕಾಣುತ್ತವೆ. ಕೆ.ವಿ.ನಾರಾಯಣ ಅವರು ಸಾಹಿತ್ಯ ಪ್ರಕಾರಗಳಿಗೆ ಅನುಗುಣವಾಗಿ ಒಟ್ಟಾರೆ ವಿಮರ್ಶೆಯನ್ನು ವರ್ಗೀಕರಿಸಿಕೊಂಡು ಅಭ್ಯಾಸ ಮಾಡಿದರೆ ಕಾಡನ ಕುಪ್ಪೆಯವರು ಶಿಷ್ಯವರ್ಗದ ವಿಮರ್ಶೆ ಮತ್ತು ನವ್ಯ ಸಾಹಿತಿಗಳ ವಿಮರ್ಶೆ ಎಂದು ವರ್ಗೀಕರಿಸಿಕೊಂಡು ವಿಶ್ಲೇಷಣೆ ಮಾಡಿದ್ದಾರೆ. ಉದ್ದಂಡಯ್ಯನವರು 80ರ ದಶಕದ ಮುಂಚೆ ಮತ್ತು ನಂತರ ಎಂದು ಕಾಲದೃಷ್ಟಿಯಿಂದ ವರ್ಗೀಕರಿಸಿಕೊಂಡು ವಿಶ್ಲೇಷಿಸಿದ್ದಾರೆ. ಹೀಗಾಗಿ ಈ ವಿವಿಮರ್ಶೆಯಲ್ಲಿ ಒಂದು ಮುಖ್ಯ ವಿನ್ಯಾಸವು ವರ್ಗೀಕರಣ ವಿನ್ಯಾಸ ಆಗಿದೆ. ಇಲ್ಲಿನ ಇನ್ನೊಂದು ಲಕ್ಷಣವೆಂದರೆ ಸಂವಾದ ವಿನ್ಯಾಸ. ವಾದ–ಪ್ರತಿವಾದ ಮಂಡನ ಗುಣ ಇದು. ತಮಗಿಂತ ಮೊದಲಿನ ವಿಮರ್ಶೆಯನ್ನು ಖಂಡಿಸುವ ಮತ್ತು ತಮ್ಮದೇ ನಿಲುವುಗಳನ್ನು ಮಂಡಿಸುವ ಮಾದರಿಯನ್ನು ಇಲ್ಲಿ ಹಲವರು ಅನುಸರಿಸಿದ್ದಾರೆ. ಹಾಗಾಗಿ (ಎಚ್.ಎಂ.ಚೆನ್ನಯ್ಯ, ಎನ್.ಬೋರಲಿಂಗಯ್ಯನವರ ಬರವಣಿಗೆ ಇದಕ್ಕೆ ಉದಾಹರಣೆ) ಇಲ್ಲಿನ ಬಹುಪಾಲು ವಿವಿಮರ್ಶೆಯು ಮಾರುತ್ತರ ರೂಪಿಯಾಗಿದೆ. ಮಾರುತ್ತರ ಪ್ರವೃತ್ತಿಯು ನಮ್ಮ ವಿಮರ್ಶೆಯ ಒಂದು

ಪ್ರಧಾನ ಚಹರೆ. ಇತರರ ವಿಮರ್ಶೆಯನ್ನು ವಿರೋಧಿಸಿ ತಮ್ಮದೇ ವಿಮರ್ಶೆಯನ್ನು ಮಂಡಿಸುವ ಬದಲು ವಿಮರ್ಶೆಯ ತಾತ್ವಿಕತೆಯನ್ನು ಪರಿಶೀಲಿಸುವ; ಆ ತಾತ್ವಿಕತೆಯನ್ನು ತಮ್ಮದೇ ನಿಲುವುಗಳ ಮೂಲಕ ವಿಸ್ತರಿಸುವ ಇಲ್ಲವೆ ಅದರ ಮಿತಿ-ವ್ಯಾಪ್ತಿಗಳನ್ನು ಚರ್ಚಿಸುವ ವಿಧಾನವನ್ನು ಕೆಲವರು ಅನುಸರಿಸಿದ್ದಾರೆ. ಇಂತಹ ಮಾದರಿಗೆ ಕೆ.ವಿ.ನಾರಾಯಣ, ಕಲ್ಗುಡಿ, ಬರಗೂರು ವಿವಿಮರ್ಶೆಗಳು ಉದಾಹರಣೆಗಳು.

ಕೆಲವು ವಿವಿಮರ್ಶೆಗಳಲ್ಲಿ ಕುವೆಂಪು ಬಗೆಗಿನ ಪ್ರೀತಿ-ಭಕ್ತಿಗಳೇ ತಾತ್ವಿಕತೆಯ ರೂಪದಲ್ಲಿ ಪ್ರಕಟವಾಗಿವೆ. ವಸ್ತು ನಿಷ್ಠವೆಂಬಂತೆ ಇವು ಗೋಚರಿಸುತ್ತವೆಯಾದರೂ ಅಲ್ಲಿ ವ್ಯಕ್ತಿ ಪೂಜೆಯೇ ಪ್ರಧಾನವಾಗಿರುತ್ತದೆ. ಇದಕ್ಕೆ ಸುಧಾಕರ, ದೇಜಗೌ ಬರವಣಿಗೆ ಉದಾಹರಣೆ. ಪೂರ್ವನಿರ್ಧಾರಗಳ ಮೂಲಕ ಹೊರಟು ವಿಮರ್ಶೆಗೆ ತೊಡಗುವುದು ಸರಿಯಲ್ಲ ಎನ್ನುತ್ತ ತಾವೇ ಪೂರ್ವನಿರ್ಧಾರಗಳ ಮೂಲಕ ಹೊರಡುವ ವಿಮರ್ಶೆಗಳೂ ಇವೆ. ಅಕಬರ ಅಲಿ, ಬೂಸರೆಡ್ಡಿಯವರ ವಿವಿಮರ್ಶೆಗಳು ಇದಕ್ಕೆ ನಿದರ್ಶನಗಳು. ಇಲ್ಲಿನ ಬಹುಪಾಲು ವಿವಿಮರ್ಶೆಯಲ್ಲಿ ಕಾಣುವ ಇನ್ನೊಂದು ವಿನ್ಯಾಸವೆಂದರೆ ಗುಣದೋಷ ವಿಮರ್ಶೆಗಳ ಅಜಮಾಸು ಸಮೀಕ್ಷೆ. ಈ ಸಮೀಕ್ಷೆಯಲ್ಲಿ ಅನ್ಯ ನಿಲುವುಗಳ ಖಂಡನೆ, ನಿದರ್ಶನ, ಪುರಸ್ಕಾರ, ಮರುಪರಿಶೀಲನೆ, ಇತ್ಯಾದಿಗಳಿವೆ. ಇಂಥ ಕಡೆ ಕವಿ-ಕೃತಿ, ವಿಚಾರ ಮತ್ತು ವ್ಯಕ್ತಿಗಳ ನಡುವೆ ಭೇದ ಅಳಿಸಿಹೊಗುತ್ತದೆ. ಇದಕ್ಕೆ ಸುಧಾಕರ ಮತ್ತು ಉದ್ದಂಡಯ್ಯನವರ ವಿವಿಮರ್ಶೆಗಳು ಉದಾಹರಣೆಗಳು. ಏನನ್ನು ಚರ್ಚಿಸಲು ಮತ್ತು ಯಾವ ವಿಧಾನವನ್ನು ಅನುಸರಿಸಲು ಉದ್ದೇಶಿಸಲಾಗಿದೆ ಎಂದು ಮೊದಲೇ ಸ್ಪಷ್ಟಿಕರಿಸಿ ಅನಂತರ ವಿಮರ್ಶೆಗೆ ತೊಡಗುವ ವಿಧಾನವನ್ನು ಹಲವರು ಅನುಸರಿಸಿದ್ದಾರೆ.(ಉದಾ.ಕೆ.ವಿ.ನಾರಾಯಣ, ಭೂಸರೆಡ್ಡಿ, ಕಾಡನಕುಪ್ಪೆ)

ಇಲ್ಲಿನ ಸಾಕಷ್ಟು ವಿವಿಮರ್ಶೆಗಳು ವಿಚಾರ ಸಂಕಿರಣ, ಹುಟ್ಟುಹಬ್ಬ, ಅಭಿನಂದನಾ ಸಮಾರಂಭ ಇತ್ಯಾದಿಗಳ ಸಾಂದರ್ಭಿಕತೆಯ ರಾಜಕಾರಣ ಮತ್ತು ಜಾತಿ, ವರ್ಗ, ಬಳಗ ಇತ್ಯಾದಿಗಳ ಸಂಬಂಧಿಕತೆಯ ರಾಜಕಾರಣಗಳಿಂದ ರೂಪಗೊಂಡಿವೆ ಮತ್ತು ಆಳಲ್ಪಟ್ಟಿವೆ. (ಸಾಂದರ್ಭಿಕತೆಯ ರಾಜಕಾರಣ ಮತ್ತು ಸಂಬಂಧಿಕತೆಯ ರಾಜಕಾರಣಗಳನ್ನು ಮುಂದೆ ಪ್ರತ್ಯೇಕವಾಗಿ ಚರ್ಚಿಸಲಾಗಿದೆ, ಗಮನಿಸಿ)

ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯಲ್ಲಿ ಮುಖ್ಯವಾಗಿ ನಾಲ್ಕು ವಿಮರ್ಶಾ ವಲಯ ಇರುವಂತೆ ಕಾಣುತ್ತದೆ. ಒಂದು ಕುವೆಂಪು ಅವರ ಆಪ್ತ ವಲಯ. ಇಲ್ಲಿ ದೇಜಗೌ, ಎನ್.ಬೋರಲಿಂಗಯ್ಯ, ಸುಧಾಕರ, ಪ್ರಭುಶಂಕರ, ಮುಂತಾದವರು ಬರುತ್ತಾರೆ. ಈ ವಲಯವನ್ನು ಕೆಲವರು ತಮಾಷೆಯಾಗಿ ಕುವೆಂಪು ಮಠ ಎಂತಲೂ, ಕುವೆಂಪು ಭಜನಾ ಮಂಡಳಿ ಎಂತಲೂ ಕರೆಯುತ್ತಾರೆ. ಇನ್ನೊಂದು ಕುವೆಂಪು ಅವರ ವಿರೋಧಿ ವಲಯ. ಇಲ್ಲಿ ಮಾಸ್ತಿ, ಗೋಕಾಕ, ಎಂ.ಜಿ.ಕೆ, ಕುರ್ತಕೋಟಿ, ಜಿ.ಎಚ್.ನಾಯಕ, ಅನಂತಮೂರ್ತಿ ಮುಂತಾದವರು ಬರುತ್ತಾರೆ. ಇದು ಬೇಂದ್ರೆ-ಅಡಿಗರ ಆಪ್ತ ವಲಯವೆಂದೂ ಹೆಸರಾಗಿದೆ. ಇದನ್ನು ನವ್ಯವಲಯ ಅಂತಲೂ ಕರೆಯುತ್ತಾರೆ. ಇನ್ನು ಮೂರನೆಯದು ಅನ್ಯ ವಲಯ ಅಥವಾ ನಿರ್ಲಿಪ್ತ ವಿಮರ್ಶಾ ವಲಯ. ಇಲ್ಲಿ ಪುಣೇಕರ, ಕೆ.ವಿ.ನಾರಾಯಣ, ಡಿ.ಆರ್.ನಾಗರಾಜ್, ಜಿ.ಎಸ್.ಆಮೂರ, ಎಚ್.ಎಸ್. ರಾಘವೇಂದ್ರರಾವ್, ರಹಮತ್ ತರೀಕೆರೆ ಮುಂತಾದವರು ಬರುತ್ತಾರೆ. ಇದು ಯಾರ ಆಪ್ತ ವಲಯವೂ ಅಲ್ಲ. ಯಾರ ವಿರೋಧಿ ವಲಯವೂ ಅಲ್ಲ.

ಪರ ವಿರೋಧ ಅಲಿಪ್ತ ಅಲ್ಲದ ಇನ್ನೊಂದು ವಲಯ ಇದೆ. ಕುವೆಂಪು ಸಮಕಾಲೀನರ ವಲಯ ಇದು. ಇದನ್ನು ಮಾತಾಡದೆ ಮೌನವಾಗಿರುವ ವಲಯ ಅಂತ ಕರೆಯಬಹುದು. ಡಿ.ಎಲ್. ನರಸಿಂಹಾಚಾರ್, ತೀ.ನಂ.ಶ್ರೀ, ಬಿ.ಎಂ.ಶ್ರೀ, ಕಾರಂತ, ಪು.ತಿ.ನ. ಇಂಥವರು ಈ ವಲಯದಲ್ಲಿ ಬರುತ್ತಾರೆ. ಇವರ ಕುವೆಂಪು ಸಾಹಿತ್ಯ ಕುರಿತ ಮೌನ ಕೂಡ ಕನ್ನಡ ವಿಮರ್ಶೆಯಲ್ಲಿ ಗಮನಾರ್ಹ. ಇವರೆಲ್ಲ ಯಾಕೆ ಬರೆಯಲಿಲ್ಲ ಅನ್ನುವ ವಿಚಾರ ಚರ್ಚಾರ್ಹವಾದದ್ದು. ಮೌನ ಎಂದರೆ ಅಭಿಪ್ರಾಯ ರಾಹಿತ್ಯ ಎಂದೇನೂ ಭಾವಿಸಬೇಕಾಗಿಲ್ಲ. ಟೀಕೆ-ಪ್ರತಿಟೀಕೆ, ವಿಮರ್ಶೆ-ಮಾರುತ್ತರ ವಿಮರ್ಶೆಗಳ ಜಾಲದಲ್ಲಿ ಸಿಕ್ಕುವುದು ಇವರಿಗೆ ಬೇಕಿರಲಿಲ್ಲವೆಂದು ಕಾಣುತ್ತದೆ. ಸಾಹಿತಿಯು ಬದುಕಿರುವಾಗ ಅವನೊಂದಿಗಿನ ಪರಿಚಯ, ಸ್ನೇಹ, ಇದ್ದಾಗ ವಿಮರ್ಶೆಯಲ್ಲಿ ವಸ್ತುನಿಷ್ಠತೆ ಸಾಧಿಸುವುದು ಕಷ್ಟವೆಂದು ಹೀಗೆ ಮಾಡಿರಬಹುದು. ಲೇಖಕನ ಸಾಹಿತ್ಯದ ಬಗೆಗೆ ಗಂಭೀರವಾದ ಭಿನ್ನಾಭಿಪ್ರಾಯಗಳು ಇದ್ದಾಗ ಸ್ನೇಹ-ಸಂಬಂಧಗಳ ಎದುರು ಮೌನವೆ ಸಂಭವಿಸಬಹುದೇನೊ!

ಆದರೆ ಈ ಮೌನವನ್ನು ಸಮರ್ಥಿಸುವುದಕ್ಕೆ ಪರಿಚಯ, ಸ್ನೇಹ, ಸಮಕಾಲೀನತೆಗಳು ಸಂಪೂರ್ಣ ಒದಗಿ ಬರುವುದಿಲ್ಲ. ತೀನಂಶ್ರೀ ಅವರು ಇಂಗ್ಲಿಶ್ ಗೀತೆಗಳ ಬಗ್ಗೆ, ದುರಂತ ಕಲ್ಪನೆ ಬಗ್ಗೆ, ಸಣ್ಣ ಕತೆಗಳ ಬಗ್ಗೆ, ಬೇಂದ್ರೆ ಕವಿತೆಗಳ ಬಗ್ಗೆ ಬರೆದಿದ್ದಾರೆ. ಆದರೆ ಕುವೆಂಪು ಕವಿತೆಗಳ ಬಗ್ಗೆ ಏನೂ ಬರೆದಿಲ್ಲ.

ವೆಂಕಣ್ಣಯ್ಯನವರು ಕುವೆಂಪು ಸಾಹಿತ್ಯದ ಬಗ್ಗೆ ಭಿನ್ನಾಭಿಪ್ರಾಯ ಇದ್ದವರಲ್ಲ. ತಮ್ಮ ತರಗತಿಯ ಪಾಠಗಳಲ್ಲಿ ಕುವೆಂಪು ಸಾಹಿತ್ಯವನ್ನು ಯುಗದ ಜಗದ ಸಾಹಿತ್ಯವೆಂದು ಇವರು ಹೊಗಳುತ್ತಿದ್ದವರು. ಕುವೆಂಪು ಬರವಣಿಗೆಯ ಬಗ್ಗೆ ಅಭಿಮಾನ ಇದ್ದವರು. ಪಾಶ್ಚಾತ್ಯ ವಿಮರ್ಶೆ, ಸಂಸ್ಕೃತ ಮೀಮಾಂಸೆ, ಟ್ಯಾಗೋರರ ಸಾಹಿತ್ಯ ಚಿಂತನೆಗಳು ಇವನ್ನೆಲ್ಲ ಕಸಿಮಾಡಿದ ವಿಮರ್ಶೆಯ ಮಾದರಿಯೊಂದನ್ನು ಟಿ.ಎಸ್.ವೆಂಕಣ್ಣಯ್ಯ ನಿರ್ಮಿಸಿದ್ದಾರೆ. ಇವರ ಪಂಪನ ಎರಡು ಪದ್ಯಗಳು ಲೇಖನ ಪ್ರಾಯೋಗಿಕ ವಿಮರ್ಶೆಯ ಒಂದು ಆದಿಮ ಮಾದರಿ. ಕಾವ್ಯದ ಅನಾದರ ಲೇಖನದಲ್ಲಿ ವೆಂಕಣ್ಣಯ್ಯನವರು ಸ್ತ್ರೀ ಪಾತ್ರಗಳ ಬಗ್ಗೆ ನಾವು ನೀಡಬೇಕಾದ ಗಮನದ ಬಗ್ಗೆ ಗಮನ ಸೆಳೆಯುತ್ತಾರೆ. ರಸನಿಷ್ಠ ಮಾದರಿಗಿಂತ ಭಿನ್ನವಾದ ಸಾಮಾಜಿಕ, ಚಾರಿತ್ರಿಕ, ಅಭಿಜಾತ, ಪ್ರಾಯೋಗಿಕ ಮಾನದಂಡಗಳಿಂದ ವಿಮರ್ಶೆಯನ್ನು ಬೆಳೆಸಿದ ಟಿ.ಎಸ್.ವೆಂಕಣ್ಣಯ್ಯನವರು ಕುವೆಂಪು ಸಾಹಿತ್ಯ ಕುರಿತು ಏನನ್ನೂ ಬರೆಯದಿರುವುದು ಸೋಜಿಗವಾಗಿದೆ!

ಎ.ಆರ್.ಕೃಷ್ಣಶಾಸ್ತ್ರಿ ತಮ್ಮ 'ಕೆಲವು ಸಣ್ಣ ಕತೆಗಳು' ಲೇಖನದಲ್ಲಿ ಮಾಸ್ತಿಯವರ ಸಣ್ಣಕತೆಗಳ ಕುರಿತು ವಿಮರ್ಶೆ ಮಾಡಿದ್ದಾರೆ. ಮಾಸ್ತಿಯವರ ಸಣ್ಣಕತೆಗಳನ್ನು 'ಬೆಣ್ಣೆಯಿಂದ ಮಾಡಿದ ಸಿಂಹಗಳು' ಎಂದು ಶಾಸ್ತ್ರಿಗಳು ಕರೆದಿದ್ದಾರೆ. ಕೈಲಾಸಂ ಅವರ ಟೊಳ್ಳು ಗಟ್ಟಿ ನಾಟಕದ ಬಗ್ಗೆ ವಿವರವಾದ ವಿಮರ್ಶೆ ಬರೆದಿದ್ದಾರೆ. ಅವರ ನಾಟಕದ ಭಾಷೆಯ ಬಗೆಗೂ ತಕರಾರುಗಳನ್ನು ತೆಗೆದಿದ್ದಾರೆ. ಭಾಸಮಹಾಕವಿ, ಬಂಕಿಮಚಂದ್ರ ಇಂತಹ ಉತ್ತಮ ವಿಮರ್ಶಾ ಕೈಪಿಡಿಗಳನ್ನು ನೀಡಿರುವ ಕೃಷ್ಣಶಾಸ್ತ್ರಿಗಳು ಕುವೆಂಪು ಕೇಳಿದ್ದಕ್ಕಾಗಿ ರಕ್ತಾಕ್ಷಿಗೆ ಮುನ್ನುಡಿ ಬರೆದು ಹರಸಿರುವುದು ಬಿಟ್ಟರೆ: ಕುವೆಂಪು ಅವರ ಬಗ್ಗೆ ಒಂದು ಭಾಷಣ ಮಾಡಿದ್ದಾರೆ. ಮಿಕ್ಕಂತೆ ಆ ಕಾಲದ ಪ್ರಧಾನ ವಿಮರ್ಶಕರಾಗಿದ್ದ ಎ.ಆರ್.ಕೃ. ಕುವೆಂಪು ಬಗ್ಗೆ ವಿಮರ್ಶೆ ಮಾಡಿಲ್ಲ. ಇದಕ್ಕೂ ಕೂಡ ಸಕಾರಣವಿಲ್ಲ!

ಇನ್ನು ಡಿ.ಎಲ್.ನರಸಿಂಹಾಚಾರ್ಯರು ಕುವೆಂಪು ಅವರ ಸಹಪಾಠಿಗಳಾಗಿದ್ದವರು. ಕುವೆಂಪು ಅವರಿಂದ ನಶ್ಯದ ಚಟ ಅಂಟಿಸಿಕೊಂಡವರು. ಪ್ರಬುದ್ಧ ಕರ್ನಾಟಕದಲ್ಲಿ ಕಾರಂತ, ಗೊರೂರು, ಅನಕೃ ಕಾದಂಬರಿಗಳ ಬಗ್ಗೆ, ಶ್ರೀರಂಗರ ನಾಟಕಗಳ ಬಗ್ಗೆ ವಿಮರ್ಶೆ ಮಾಡಿರುವವರು. ಆದರೆ ಇವರೂ ಕುವೆಂಪು ಬಗ್ಗೆ ವಿಮರ್ಶೆ ಬರೆದಿಲ್ಲ. ಹೊಸ ಸಾಹಿತ್ಯದ ಬಗ್ಗೆ ಒಳ್ಳೆ ಅಭಿಪ್ರಾಯ ಇಟ್ಟುಕೊಂಡಿದ್ದೂ; ಸ್ವತಃ ಹಳಗನ್ನಡ ಕಂದಗಳನ್ನು ರಚಿಸಿರುವ ಡಿ.ಎಲ್.ಎನ್. ಕುವೆಂಪು ಬಗ್ಗೆ ಬರೆಯದಿರಲು ಅವರ ಕಾವ್ಯ ನಾಟಕಗಳ ಬಗ್ಗೆ ಭಿನ್ನಾಬಿಪ್ರಾಯ ಇದ್ದದ್ದು ಕಾರಣವಿರಬಹುದಾ? ಬರೆಯದಿರುವ ವಿಮರ್ಶೆಯ ಬಗೆಗೆ; ಬರೆಯಬಹುದಾಗಿದ್ದ ವಿಮರ್ಶೆಯ ಬಗೆಗೆ ಚರ್ಚಿಸಿ ಫಲವಿಲ್ಲ. ಅದೇನಿದ್ದರೂ ಗಾಳಿಗೆ ಗುದ್ದಿದಂತೆ. ಇರಲಿ; ಇವರೆಲ್ಲರ ಬರವಣಿಗೆಗಳಲ್ಲಿನ ಸಾಹಿತ್ಯ ತತ್ವದ ಬಗೆಗಿನ ನಂಬಿಕೆಗಳನ್ನು ಅಭ್ಯಸಿಸಿದರೆ ಕುವೆಂಪು ಕಾವ್ಯದ ಬಗೆಗಿನ ಇವರ ಮೌನವನ್ನು ಅರ್ಥಮಾಡಿಕೊಳ್ಳಬಹುದೇನೋ?

ಇನ್ನು ಮೊದಲಿನ ಮೂರು ವಲಯಗಳಿಗೆ ಬರೋಣ. ಈ ಮೂರೂ ವಲಯಗಳಲ್ಲಿ ಪರಸ್ಪರ ವಾದ ವಿವಾದ ಸಂವಾದಗಳು ನಿರಂತರವಾಗಿ ನಡೆದಿವೆ. ಪೂರ್ವಜರ ಜೊತೆ ಸದಾ ಒಂದಿಲ್ಲೊಂದು ಬಗೆಯ ಜಗಳ-ತರಕಾರು ನಡೆಯುವುದು ಪೂರ್ವ ವಿಮರ್ಶೆಯನ್ನ ಖಂಡಿಸಿ, ನಿರಾಕರಿಸಿ ನಾನೇ ಅಪೂರ್ವವಾದದ್ದನ್ನು ಮೊತ್ತಮೊದಲಿಗೆ ಹೇಳುತ್ತಿದ್ದೇನೆ ಎಂದು ಹೇಳುವುದು. ಅಲ್ಲದ ಆರೋಗ್ಯ ಪೂರ್ಣವಾಗಿ, ತರ್ಕಬದ್ಧವಾಗಿ ತಮ್ಮದೇ ವಾದ-ನಿಲುವುಗಳನ್ನು ಮಂಡಿಸುವ ಮೂಲಕ ಅನ್ಯರ ಪೂರ್ವನಿರ್ಣಯಗಳನ್ನು ಒಡೆದು ಹಾಕುವುದು. ಇಂಥ ಸಂವಾದ ಗುಣ ನಮ್ಮ ಕನ್ನಡ ವಿಮರ್ಶೆಯ ಒಂದು ಮುಖ್ಯವಾದ ಲಕ್ಷಣ. ಅನ್ಯ ನಿಲುವು-ನಿರ್ಣಯಗಳ ಖಂಡನೆ ಮಾತ್ರವೆ ಅಲ್ಲ. ತಮ್ಮದೇ ಹಳೆ ನಿಲುವು ನಿರ್ಣಯಗಳನ್ನು ಮುರಿದು ಭಿನ್ನ ನಿಲುವು ತಾಳುವ ಗುಣ ಕೂಡ ನಮ್ಮಲ್ಲಿ ಇದೆ. ನಮ್ಮ ಕನ್ನಡ ವಿಮರ್ಶೆಯಲ್ಲಿ ಅಂಡರ್ ಕರೆಂಟಾಗಿ ಈ ಲಕ್ಷಣ ಸದಾ ಇದ್ದೇ ಇದೆ. ಆದರೆ ಕುವೆಂಪು ಪರ ವಿರೋಧಿ ವಲಯಗಳಲ್ಲಿ ಮಾತ್ರ ಈ ಗುಣ ಆರೋಪ ಪ್ರತ್ಯಾರೋಪ, ಬಾಣ ಪ್ರತಿಬಾಣ, ಸವಾಲು ಪಾಟಿ ಸವಾಲು ಧಾಟಿ ಹಿಡಿದು ವಕೀಲಿ ವಿಮರ್ಶೆಯಾಗಿ ರೂಪಾಂತರವಾಗಿದೆ.

ಇಲ್ಲಿನ ಇನ್ನೊಂದು ಲಕ್ಷಣವೆಂದರೆ ಭಿನ್ನ ವಿಮರ್ಶಕರ ಭಿನ್ನ ತಾತ್ವಿಕತೆ, ಭಿನ್ನ ನಂಬುಗೆಗಳ ತಾಕಲಾಟ. ಒಬ್ಬೊಬ್ಬರೂ ತಾವು ನಂಬುವ ತಾತ್ವಿಕತೆಗಳನ್ನು ತರ್ಕದ ಮೂಲಕ ಇಲ್ಲವೇ ನಿದರ್ಶನಗಳ ಮೂಲಕ ಮಂಡಿಸುತ್ತಾ ಅನ್ಯರ ನಿಲುವುಗಳ ಬಗ್ಗೆ ತಮ್ಮದೇ ಟಿಪ್ಪಣಿಗಳನ್ನು ನೀಡುತ್ತಿರುತ್ತಾರೆ. ಒಂದೇ ವಿಚಾರಕ್ಕೆ ಒಬ್ಬೊಬ್ಬರು ಭಿನ್ನ ದೃಷ್ಟಿಕೋನಗಳಿಂದ ಭಿನ್ನ ನಿಲುವುಗಳಿಗೆ ತಲುಪುತ್ತಿರುತ್ತಾರೆ. ಇಂತಹ ಕಡೆ

ಸಾಮಾಜಿಕ-ಸಾಂಸ್ಕೃತಿಕ ದೃಷ್ಟಿ ಮತ್ತು ಕೃತಿನಿಷ್ಠ ದೃಷ್ಟಿಗಳ ನಡುವೆ ಹೆಚ್ಚಿನ ಮಟ್ಟಿಗೆ ತಾಕಲಾಟ ನಡೆಯುತ್ತಿರುತ್ತದೆ. ಪ್ರಕಾರ ಸ್ವರೂಪ, ಜಾತಿನಿಂದೆ, ಭಾಷೆ, ಬಂಧ ಇವು ಇಲ್ಲಿ ಮುಖ್ಯವಾಗಿ ತಾಕಲಾಟಗಳಿಗೆ ಗುರಿಯಾಗಿರುವ ವಿಚಾರ ವಲಯಗಳು. ವ್ಯಕ್ತಿ, ಕೃತಿ, ಸಂಸ್ಕೃತಿ, ಸಮುದಾಯ ಹೀಗೆ ಭಿನ್ನ ನೆಲೆಗಳಿಂದ ಈ ತಾಕಲಾಟಗಳು ನಡೆದಿವೆ. ಅಚ್ಚರಿಯೆಂದರೆ ಜಾತಿ ದೃಷ್ಟಿಯೇ ಇಲ್ಲಿ ಮೇಲಾಟ ನಡೆಸಿದೆ.

ಕುವೆಂಪು ಸಾಹಿತ್ಯ ವ್ಯಕ್ತಿತ್ವದ ಬಗ್ಗೆ ಯಾರೂ ಪ್ರಶ್ನೆ ಎತ್ತುವ ಹಾಗಿಲ್ಲ, ಪ್ರಶ್ನೆ ಎತ್ತಿದಿರೋ ನಿಮಗೆ ಗ್ರಾಚಾರ ಕಾದಿದೆ ಎನ್ನುವ ಹಾಗೆ ಒಂದು ವಲಯ ಇದ್ದರೆ, ಕುವೆಂಪು ಕವಿನೇ ಅಲ್ಲ ಅನ್ನುವ ಇನ್ನೊಂದು ವಲಯ ಇದೆ. ಈ ಎರಡು ವಲಯಗಳ ತಿಕ್ಕಾಟದಲ್ಲಿ ಕನ್ನಡ ವಿಮರ್ಶೆಯಲ್ಲಿ ಹಲವು ರೀತಿಯ ನಂಬಿಕೆಗಳು ಸೃಷ್ಟಿಯಾಗಿವೆ.

1) ಸಮಕಾಲೀನ ವಿಮರ್ಶೆ ತನ್ನ ಕಾಲದ ಸಾಹಿತ್ಯವನ್ನು ಸರಿಯಾಗಿ ಮೌಲ್ಯ ಮಾಪನ ಮಾಡಲಾರದು ಅನ್ನುವ ನಂಬಿಕೆ

2) ಇಡೀ ಕನ್ನಡ ವಿಮರ್ಶೆಯಲ್ಲಿ ಇರೋದು ಎರಡೇ ಥರದ ವಿಮರ್ಶೆ. ಒಂದು ಜೈವಿಮರ್ಶೆ ಇನ್ನೊಂದು ಬೈವಿಮರ್ಶೆ. ಇಂಥದ್ದನ್ನ ಬಿಟ್ಟರೆ ಕನ್ನಡದಲ್ಲಿ ಸಮತೂಕದ ವಿಮರ್ಶೆ ಎಲ್ಲಿದೇ ಹೇಳಿ? ಅನ್ನುವ ನಂಬಿಕೆ.

3) ಇನ್ನು ಮೂರನೇಯದು: ಕನ್ನಡ ವಿಮರ್ಶೆ ಜಾತಿ ರಾಜಕಾರಣದಿಂದ ಜಾತಿ ವಾಸನೆಯಿಂದ ತುಂಬಿ ಹೋಗಿದೆ. ಇದೊಂದು ನಮ್ಮ ವಿಮರ್ಶೆಯ ನಿವಾರಿಸಲಾಗದ ದೌರ್ಬಲ್ಯ ಎಂಬ ನಂಬಿಕೆ. ಹಾಗೂ ಜಾತ್ಯಾತೀತವಾದ ಆಲೋಚನೆಯೇ ಇರೋಕೆ ಸಾಧ್ಯವಿಲ್ಲ ಎಂಬ ವಾದ.

ಇವೊಂಥರಾ ಗುಣಪಡಿಸಬಹುದಾದ ತಾತ್ಕಾಲಿಕ ರೋಗದ ಸೈಡ್ ಎಫೆಕ್ಟುಗಳಿದ್ದ ಹಾಗೆ. ಇವೆಲ್ಲ ಸೈಡ್ ಎಫೆಕ್ಟುಗಳೂ ಹೆಚ್ಚು ಕಾಲ ಇರುವಂಥವಲ್ಲ. ಇವು ಕಾಣೆಯಾಗಲು ಇನ್ನೂ ಸ್ವಲ್ಪ ಕಾಲ ಬೇಕು. ಚರಿತ್ರೆ ಅನ್ನುವುದು ಜೀವಂತ ಬೇತಾಳವೂ ಹೌದು, ಏಳು ಮಲ್ಲಿಗೆ ತೂಕದ ರಾಜಕುಮಾರಿಯನ್ನು ಹುಡುಕಲು ಸಹಾಯ ಮಾಡುವ ಯಕ್ಷಿಣಿಯೂ ಹೌದು. ಹಾಗೇನೇ ಅದೊಂದು ಸತ್ತ ಹೆಣಾನೂ ಹೌದು. ವಿಮರ್ಶೆಯ ಹಿನ್ನಲೆಯಲ್ಲೇ ಈ ಮಾತುಗಳನ್ನು ಹೇಳಲಾಗುತ್ತಿದೆ. ಈ ಚರಿತ್ರೆಯ ಹೆಣವನ್ನು ಕಾಲಕಾಲಕ್ಕೆ ಆಗಾಗ ಪೋಸ್ಟ್ ಮಾರ್ಟೆಂ ಮಾಡುತ್ತಾ ಇರಬೇಕು. ಆಗಲೇ ನಮ್ಮ ಹಳೇ ಗಾಯಗಳನ್ನು-ಸೈಡ್ ಎಫೆಕ್ಟುಗಳನ್ನು ವಾಸಿ ಮಾಡಿಕೊಳ್ಳಲು ಸಾಧ್ಯ.

ಈ ಆಪ್ತ ವಲಯದವರಿಗೆ ಕೈಗೆ ಸಿಕ್ಕದೆ ಇರುವಂಥ ಹಲವಾರು ವೈರಿಗಳಿದ್ದಾರೆ. ಇವರಲ್ಲಿ ಎರಡು ವರ್ಗ. ಒಂದು ಅರ್ಥವಾಗದೇ ಇರೋ ವರ್ಗ. ಇನ್ನೊಂದು ಕಣ್ಣಿಗೆ ಕಾಣಿಸದೇ ಇರೋ ವರ್ಗ. ಕಣ್ಣಿಗೆ ಕಾಣಿಸದೇ ಇರೋ ವರ್ಗದಲ್ಲಿ ಮೊದಲಿಗೆ ಜಿ.ಪಿ.ರಾಜರತ್ನಂ ಬರ್ತಾರೆ. ಕುವೆಂಪು ಸಾಹಿತ್ಯದ ಆದಿಮ ವಿಮರ್ಶಕರಲ್ಲಿ ಇವರೂ ಒಬ್ಬರು. ಜಿ.ಪಿ.ರಾಜರತ್ನಂ ಅವರ ಏಕಲವ್ಯ ಪಂಕ್ತಿ ಮತ್ತು ಚಿತ್ರಾಂಗದಾ ಚಿತ್ರಕೂಟ ಪುಸ್ತಕಗಳನ್ನು, ಕ.ವೆಂ.ರಾಜಗೋಪಾಲ ಅವರ ಬೆರಳ್ಗೆ ಕೊರಳ್, ಕೆ.ಮರುಳಸಿದ್ದಪ್ಪನವರ ಕುವೆಂಪು ನಾಟಕಗಳು: ವಸ್ತು ಮತ್ತು ರೂಪ, ನಾಡಿಗರ ಕುವೆಂಪು ಕವಿತೆಗಳಲ್ಲಿ ರಮ್ಯತೆ ಲೇಖನಗಳನ್ನು ಆಪ್ತ ವಲಯದವರು ಗಮನಿಸಿದ ಹಾಗೆ ಕಾಣುವುದಿಲ್ಲ. ಎಂ.ಜಿ.ಕೆ, ಅನಂತಮೂರ್ತಿ, ಕುರ್ತುಕೋಟಿ, ಗೋಕಾಕ್, ಮಾಸ್ತಿ, ಜಿ.ಎಚ್.ನಾಯಕ್, ಲಂಕೇಶ್ ಇವರ ವಲಯದಲ್ಲಿ ಜಿ.ಪಿ.ರಾಜರತ್ನಂ ಅವರನ್ನು ಸೇರಿಸಿ ಜನ್ಮ ಜಾಲಾಡಿಲ್ಲ. ಅಷ್ಟೇ ಅಲ್ಲ ಇವರಿಗೆ ನರಸಿಂಹಸ್ವಾಮಿ ಉಪವನ, ಡಾ.ಜಿ.ರಾಮಕೃಷ್ಣರ ತತ್ವಜ್ಞಾನ ಲೇಖನ, ಸಾಹಿತ್ಯಾಂಕದ ಕಲ್ಲೂರರ ಲೇಖನ, ಗೋಕಾಕರ ನಾಟಕಗಳ ಲೇಖನ, ಪುತಿನ ಲೇಖನ, ಇವೆಲ್ಲ ಕಣ್ಣಿಗೆ ಬಿದ್ದಂತೆ ಕಾಣುವುದಿಲ್ಲ.

ಜಿ.ಪಿ.ರಾಜರತ್ನಂ ಚಿತ್ರಾಂಗದಾ ಚಿತ್ರಕೂಟದಲ್ಲಿ ಕುವೆಂಪು ಖಂಡಕಾವ್ಯವನ್ನು ಸೊಹ್ರಾಬ್ ರುಸ್ತುಂ, ರವೀಂದ್ರನಾಥ ಠಾಕೂರ್, ಜೈಮಿನಿ, ಲಕ್ಷೀಶ, ವ್ಯಾಸ ಇವರೆಲ್ಲರ ಹಿನ್ನೆಲೆಯಲ್ಲಿಟ್ಟು ಪರೀಕ್ಷಿಸಿದ್ದಾರೆ. ಎಲ್ಲರನ್ನೂ ಸಮತೂಕದಿಂದ ವಿಮರ್ಶಿಸಿದಂತೆ ಕುವೆಂಪುವನ್ನೂ ಸಮತೂಕದಿಂದ ವಿಮರ್ಶಿಸಿದ್ದಾರೆ. ಅತ್ತ ಹೊಗಳಿಕೆಯೂ ಅಲ್ಲದ ಇತ್ತ ತೆಗಳಿಕೆಯೂ ಅಲ್ಲದ ಸಮತೂಕದ ವಿಮರ್ಶೆ. ಒಂದು ಗುಲಗಂಜಿ ತೂಕದಷ್ಟು ಹೆಚ್ಚಾದ ಕಟು ವಿಮರ್ಶೆಯೇ ಇಲ್ಲಿ ಇದೆ. ಅದಕ್ಕೇ ಆಪ್ತ ವಲಯಕ್ಕೆ

ಇವರು ಕಣ್ಣಿಗೆ ಬಿದ್ದಿಲ್ಲವೇನೋ ಅಂದದ್ದು. ತೌಲನಿಕತೆಯ ಜೊತೆಗೆ ಹದವಾಗಿ ಬೆರೆತ ರೂಪನಿಷ್ಠತೆ ಮತ್ತು ಮೀಮಾಂಸಾದೃಷ್ಟಿ ಹಾಗೂ ವಿವರಣಾತ್ಮಕ ವಿಮರ್ಶೆಗಳು ಇಲ್ಲಿವೆ. ಆಧುನಿಕ ಸಾಹಿತ್ಯದ ತೌಲನಿಕ ವಿಮರ್ಶೆಯ ಒಂದು ಆರಂಭಿಕ ಮಾದರಿಯನ್ನು ಇಲ್ಲಿ ಜಿ.ಪಿ.ರಾಜರತ್ನಂ ಕ್ರಿಯೇಟು ಮಾಡಿದ್ದಾರೆ.

ಒಂಚೂರು ಈ ಎರಡು ವಲಯಗಳನ್ನು ಚಾರಿತ್ರಿಕವಾಗಿ ಸ್ಥೂಲವಾಗಿ ಗಮನಿಸಬೇಕು ಅಂದರೆ; ಮಾಸ್ತಿಯವರು ಶೂದ್ರ ತಪಸ್ವಿ ಬಗ್ಗೆ ಬರೆದ ಲೇಖನ, ಗೋಕಾಕರು ಕೊಳಲು ಬಗ್ಗೆ ಬರೆದ ಲೇಖನ, ಅನಂತಮೂರ್ತಿ ದೆಹಲಿಯಲ್ಲಿ ಭಾಷಣ ಮಾಡಿ ಆಮೇಲೆ PEN ನಲ್ಲಿ ಪ್ರಕಟಿಸಿದ ಲೇಖನ, ಕುರ್ತಕೋಟಿಯವರು ಕಾದಂಬರಿ ಬಗ್ಗೆ; ರಾಮಾಯಣ ದರ್ಶನಂ ಬಗ್ಗೆ ಬರೆದ ಲೇಖನಗಳು, ಎಂ.ಜಿ.ಕೃಷ್ಣಮೂರ್ತಿಯವರು ಕಾದಂಬರಿಗಳ ಬಗ್ಗೆ ಬರೆದ ಲೇಖನ ಹಾಗೇ 1985 ರಲ್ಲಿ ಶಿವಣ್ಣ ಮತ್ತು ಭಗವಾನ್ ಸಂದರ್ಶನದಲ್ಲಿ ಹಿಂದೂ ಧರ್ಮವನ್ನ ಕುವೆಂಪು ಅನಿಷ್ಠ ಧರ್ಮ ಅಂದದ್ದಕ್ಕೆ ಮೈಸೂರಲ್ಲಿ ನಡೆದ ಬ್ರಾಹ್ಮಣರ ಕುವೆಂಪು ವಿರೋಧಿ ಸಭೆಯಲ್ಲಿ ಮಾಡಿದ ಭಾಷಣಗಳು, ಕುವೆಂಪುಗೆ ಬಂದ ಜ್ಞಾನಪೀಠ ಪ್ರಶಸ್ತಿಗೆ ಅನಂತಮೂರ್ತಿ ನೀಡಿದ ಪ್ರತಿಕ್ರಿಯೆ, ಬಿ.ಕೃಷ್ಣಪ್ಪನವರು ಕುವೆಂಪು ಅವರನ್ನು ದಲಿತವಿರೋಧಿ ಎಂದು ಹೇಳಿದ ಮಾತುಗಳು ಮತ್ತು ಕುವೆಂಪು ಸಾಹಿತ್ಯವನ್ನು ಒಡೇರ ದಿಬ್ಬದ ಸಾಹಿತ್ಯ ಎಂದು ಕರೆದ ಮಾತುಗಳು, ಕುವೆಂಪು ದಲಿತ ದೃಷ್ಟಿಯ ಬಗ್ಗೆ ದೇವಯ್ಯ ಹರವೆ ಬರೆದ ಲೇಖನ ಹೀಗೆ ಕುವೆಂಪು ಸಾಹಿತ್ಯ, ಮಾತು ಮತ್ತು ಪ್ರಶಸ್ತಿಗಳ ಬಗ್ಗೆ ಬೇರೆ ಬೇರೆ ರೀತಿಯಲ್ಲಿ ಒಂದು ಭಿನ್ನ ದನಿ ದಾಖಲಾಗಿರುವ ಚರಿತ್ರೆಯೇ ಇದೆ. ಹಾಗೇ ಇದಕ್ಕೆ ಏಟಿಗೆ ಎದಿರೇಟು ಅನ್ನುವ ಹಾಗೆ ದೇಜಗೌ ಅವರ ಪ್ರತಿಧ್ವನಿ ಸಂಭವಾಮಿ ಯುಗೇ ಯುಗೇ ಪುಸ್ತಕ, ಸುಧಾಕರರ ಸಾಹಿತ್ಯ ಸಂವೀಕ್ಷಣೆಯ ಲೇಖನ, ಪುಣೇಕರರ ರಮ್ಯತೆಯ ಲೇಖನ, ಆಮೂರರ ಪ್ರಕೃತಿ–ಸಂಸ್ಕೃತಿ ಲೇಖನ, ಕುವೆಂಪು ಸಾಹಿತ್ಯ ಮತ್ತು ನವ್ಯ ವಿಮರ್ಶೆ ಎಂಬ ಎನ್.ಬೋರಲಿಂಗಯ್ಯನವರ ಲೇಖನ, ಭಗವಾನರ ಲೇಖನ, ಸುಜನಾರ ರೂಪಾಂತರ ಲೇಖನ, ನಂಗಲಿಯವರ ಲೇಖನ, ಬೈರಮಂಗಲ ರಾಮೇಗೌಡರ ಲೇಖನ ಹೀಗೆ ಭಿನ್ನದನಿಗಳಿಗೆ ಪ್ರತಿಧ್ವನಿಗಳಾಗಿ ಬಂದಿರುವ ವಿಮರ್ಶೆಗೂ ಒಂದು ಚರಿತ್ರೆ ಇದೆ. ಅಂತೂ ಕನ್ನಡ ವಿಮರ್ಶೆಯಲ್ಲಿ ಜಂಗೀಕುಸ್ತಿ ನಡೆದಿದೆ ಮಾತ್ರ.

ಎನ್.ಬೋರಲಿಂಗಯ್ಯನವರು ಅನಂತಮೂರ್ತಿಯವರ ಪ್ರಜ್ಞೆ ಮತ್ತು ಪರಿಸರದ 'ಭಾರತೀಯ ಸಂಸ್ಕೃತಿ ಮತ್ತು ಲೇಖಕ' (39 ಪುಟಗಳ) ಈ ದೀರ್ಘ ಲೇಖನದ ಬಗ್ಗೆ ತಕರಾರೆತ್ತುವಾಗ ಕುವೆಂಪು ವಿಮರ್ಶೆಯ ಬಗ್ಗೆ ಮಾತ್ರವಷ್ಟೇ ಅಲ್ಲ. ಕುವೆಂಪು ವಿಮರ್ಶೆಯ ಗೈರು ಹಾಜರಿಯ ಬಗೆಗೂ ತಕರಾರೆತ್ತುತ್ತಾರೆ. ಮಾತಿನ ಬಗೆಗೂ ತಕರಾರಿರುವಂತೆ ಇಲ್ಲಿ ಮೌನದ ಬಗೆಗೂ ತಕರಾರಿದೆ. ಅಂದರೆ ಎಷ್ಟು ಪ್ರಮಾಣದಲ್ಲಿ ಕುವೆಂಪು ಬಗ್ಗೆ ಬರೆಯಬೇಕಾಗಿತ್ತೊ ಅಷ್ಟು ಪ್ರಮಾಣದಲ್ಲಿ ಬರೆಯಲಿಲ್ಲ ಎಂಬ ತಕರಾರು ಇಲ್ಲಿ ಬಂದಿದೆ. ಕುವೆಂಪುವನ್ನು ದೂಷಿಸುವುದು ಅಷ್ಟೇ ಅಲ್ಲ; ಟೀಕಿಸುವುದು ಅಷ್ಟೇ ಅಲ್ಲ ಕುವೆಂಪುವನ್ನು ನಿರ್ಲಕ್ಷಿಸುವುದನ್ನೂ ಇವರು ಸಹಿಸುವುದಿಲ್ಲ. ಎಂ.ಜಿ.ಕೃಷ್ಣಮೂರ್ತಿ ಅವರ ಆಧುನಿಕತೆ ಮತ್ತು ಭಾರತೀಯ ಸಾಹಿತ್ಯ ಲೇಖನದ ಬಗೆಗೂ ಇದೇ ತಕರಾರನ್ನು ಎನ್.ಬೋರಲಿಂಗಯ್ಯ ತೆಗೆಯುತ್ತಾರೆ. ಕುವೆಂಪು ಹೆಸರನ್ನು ಹೇಳದಿರುವಷ್ಟು ಅಲಕ್ಷ್ಯ ಮಾಡುವುದನ್ನು ಇವರು ಮಡಿವಂತಿಕೆ–ಬ್ರಾಹ್ಮಣಿಕೆ ಎಂದೇ ಕರೆಯುತ್ತಾರೆ.

ನವ್ಯರ ಕುವೆಂಪು ಸಾಹಿತ್ಯ ಕುರಿತು ಮುಖ್ಯವಾದ ತಕರಾರು ಭಾಷೆ ಮತ್ತು ಬಂಧ ಕುರಿತಾದದ್ದು. ಆದರೆ ಈ ತಕರಾರು ಅಡಿಗರಿಗೂ ತದ್ವತ್ ಅನ್ವಯಿಸುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಈ ಎರಡು ವಲಯಗಳಲ್ಲಿ ಸ್ಪಷ್ಟವಾಗಿ ತಮ್ಮ ದೃಷ್ಟಿ ಧೋರಣೆಯಲ್ಲಿ ಒಂದು ವ್ಯತ್ಯಾಸ ಇರುವುದು ಎದ್ದು ಕಾಣುತ್ತದೆ. ಆಪ್ತ ವಲಯದವರು ಸಾಹಿತ್ಯ ಮತ್ತು ಸಾಹಿತಿಯ ಸಾಮಾಜಿಕ ಹೊಣೆಗಾರಿಕೆ ಹಾಗೂ ಸಾಹಿತ್ಯದ ಓದಿನ ಪರಿಣಾಮಗಳನ್ನು ಆಧರಿಸಿ ಸಾಹಿತ್ಯ ವಿಮರ್ಶೆಗೆ ತೊಡಗಿದರೆ ಇತರ (ನವ್ಯ) ವಲಯದವರು ಸಾಹಿತ್ಯದ ಸೃಷ್ಟಿ ಅಥವಾ ಕಟ್ಟಾಣಿಕೆ ಮತ್ತು ಸಾಹಿತ್ಯದ ಶ್ರೇಷ್ಠತೆಗೆ ಹೆಚ್ಚು ಒತ್ತು ಕೊಡುತ್ತಾರೆ. ಇದು ಮೇಲ್ನೋಟಕ್ಕೆ ಕಾಣುವಂತೆ ಕೇವಲ ವೈದಿಕ ಅವೈದಿಕ, ಬ್ರಾಹ್ಮಣ ಶೂದ್ರ ತಿಕ್ಕಾಟ ಅಷ್ಟೇ ಅಲ್ಲ. ಎರಡು ದೃಷ್ಟಿಕೋನಗಳ ಜಗಳ ಕೂಡ. ಈ ಎರಡು ದೃಷ್ಟಿಕೋನಗಳೂ ನಿಗಮನ ವಿಧಾನವನ್ನೇ ಆಧರಿಸಿದ ದೃಷ್ಟಿಕೋನಗಳು. ಇವರೆಲ್ಲ ತಮ್ಮ ತಮ್ಮ ಸಿದ್ಧ ವೈಚಾರಿಕತೆಗಳನ್ನು ಸಾಹಿತ್ಯದಲ್ಲಿ ಅನ್ವಯಿಸಿ ನೋಡುತ್ತಾರೆ.

ಜಿ.ಎಚ್.ನಾಯಕ, ಲಂಕೇಶ್, ತೇಜಸ್ವಿ ಇವರು ಮೊದಲಿಗೆ ಅನಂತಮೂರ್ತಿ, ಅಡಿಗ, ಕುರ್ತಕೋಟಿ ಇವರನ್ನ ಪ್ರೀತಿ, ಒಡನಾಟಗಳಿಂದ ಒಪ್ಪಿಕೊಂಡಿದ್ದವರು. ಅವರ ನಿಲುವುಗಳಿಗೂ ಇವರ ನಿಲುವುಗಳಿಗೂ ಸಾಕಷ್ಟು ಸಾಮ್ಯ ಇತ್ತು. ಪ್ರಾಯೋಗಿಕ ವಿಮರ್ಶೆಯ ವಿಧಾನವನ್ನು ಒಪ್ಪಿ ವಿಮರ್ಶೆಗೆ ತೊಡಗಿದವರು

ಇವರು. ಒಂದು ಚಳುವಳಿ (ನವ್ಯ–ನವೋದಯ)ಯನ್ನು ಒಪ್ಪಿ ಬೆಳೆಸಿದವರು. ನವ್ಯ–ನವೋದಯ ಅಂದರೆ ಬೈನರಿ ಆಪೊಸಿಶನ್ಸ್ ಅನ್ನೋ ವಾತಾವರಣ ಸೃಷ್ಟಿಸಿಕೊಂಡು ಬೆಳೆದವರು. ಈ ವಾತಾವರಣ ಸೃಷ್ಟಿಯಿಂದ ಹಲವು ಮಿತಿಗಳು ಉಂಟಾದವು ಅನ್ನುವುದು ಕೂಡಾ ನಿಜಾನೇ. ಇಲ್ಲಿ ಉಂಟಾದ ಒಂದು ಮುಖ್ಯ ಬಿಕ್ಕಟ್ಟು ಏನು ಎಂದರೆ ಬರೆವಣಿಗೆಗಿಂತಾ ವ್ಯಕ್ತಿಯೆ ವಿಮರ್ಶೆಯಲ್ಲಿ ಮುಖ್ಯ ಆದದ್ದು. ಸಾಹಿತ್ಯ ವಿಮರ್ಶೆ ಪ್ರಾಯೋಗಿಕ ರೂಪದಲ್ಲಿ ಇದ್ದರೂ ಇದು ಸಾಹಿತಿಗಳಲ್ಲಿ ಒಂದು ಹೈರಾರ್ಕಿ ನಿರ್ಮಾಣಕ್ಕೆ ತೊಡಗಿತು. ಯಾರು ಶ್ರೇಷ್ಠ ಯಾರು ಶ್ರೇಷ್ಠ ಅಲ್ಲ ಅನ್ನುವ ಧ್ವನಿ ಅಲ್ಲಿ ಇತ್ತು. ಇದು ಅಷ್ಟು ಆರೋಗ್ಯಕಾರಿ ಅಲ್ಲ. ಆದರೆ ಒಂದು ಗಮನಿಸಬೇಕು. ಜಿ.ಎಚ್.ನಾಯಕ, ಅನಂತಮೂರ್ತಿ, ಲಂಕೇಶ, ತೇಜಸ್ವಿ ಇವರೆಲ್ಲ ತಮ್ಮ ಹಳೇ ಅಪ್ರೋಚುಗಳನ್ನು ಬದಲಾಯಿಸಿಕೊಂಡರು. ಕುರ್ತಕೋಟಿ ಕೂಡ ಅಲ್ಪ ಪ್ರಮಾಣದಲ್ಲಿ ಬದಲಾಗಿದ್ದಾರೆ. ಯುಗಧರ್ಮ ಮತ್ತು ಸಾಹಿತ್ಯ ದರ್ಶನ ಕೃತಿಯಲ್ಲಿನ ಇವರ ಕುವೆಂಪು ಕುರಿತ ನಿಲುವುಗಳು ನೂರು ಮರ ನೂರು ಸ್ವರ ಕೃತಿ ರಚನೆಯ ಹೊತ್ತಿಗೆ ಸ್ವಲ್ಪ ಬದಲಾವಣೆಯಾಗಿವೆ. ಆದರೆ ಎಂ.ಜಿ.ಕೆ. ಬದಲಾಗಲೇ ಇಲ್ಲ. ಸ್ಥಿತಿಪ್ರಜ್ಞೆ ಪುಸ್ತಕದ ಲೇಖನದಲ್ಲಿ ಜಿ.ಎಚ್.ನಾಯಕರು ತಮ್ಮ ಬದಲಾದ ದೃಷ್ಟಿಕೋನವನ್ನು ದಾಖಲಿಸಿದ್ದಾರೆ. ಅದಕ್ಕೆ ಕಾರಣಗಳನ್ನೂ ದಾಖಲಿಸಿದ್ದಾರೆ. ಹಾಗೇ ಅನಂತಮೂರ್ತಿ ಕೂಡಾ ಮಾತು ಸೋತ ಭಾರತದಲ್ಲಿ ತಮ್ಮ ಬದಲಾದ ದೃಷ್ಟಿಕೋನವನ್ನು ದಾಖಲಿಸಿದ್ದಾರೆ. ಮತ್ತು ಅದಕ್ಕೆ ಕಾರಣಗಳನ್ನೂ ಹೇಳಿದ್ದಾರೆ.

ಇಲ್ಲಿ ಇನ್ನೊಂದು ಮಾತು ಗಮನಿಸಬೇಕು. ವಿಮರ್ಶಕ ಮತ್ತು ಲೇಖಕರ ನಡುವಿನ ಸ್ನೇಹ ಆತ್ಮೀಯತೆ ಒಡನಾಟ ಇತ್ಯಾದಿ ಸಂಬಂಧ ಪರಸ್ಪರರ ವಿಮರ್ಶೆ ಮತ್ತು ಸಾಹಿತ್ಯವನ್ನು ಪ್ರಭಾವಿಸಿದೆ. ಇದನ್ನೆ ವಿಮರ್ಶೆಯಲ್ಲಿ ಸಂಬಂಧಿಕತೆಯ ರಾಜಕಾರಣ ಎಂದು ಈ ಅಧ್ಯಯನದಲ್ಲಿ ಕರೆಯಲಾಗಿದೆ. ಬೇಂದ್ರೆ ಮತ್ತು ಕುರ್ತಕೋಟಿ ಅವರ ನಡುವಣ ಸಂಬಂಧ; ಅನಂತಮೂರ್ತಿ ಅಡಿಗ ಜಿ.ಎಚ್.ನಾಯಕರ ನಡುವಿನ ಸಂಬಂಧ; ದೇಜಗೌ, ಪ್ರಭುಶಂಕರ, ಕುವೆಂಪು ಇವರ ನಡುವಿನ ಸಂಬಂಧ ಇವೆಲ್ಲ ಜಾತಿ ಸಂಬಂಧಗಳಲ್ಲ. ಸ್ನೇಹ ಸಂಬಂಧಗಳು. ದೃಷ್ಟಿಕೋನ, ಆಲೋಚನಾ ವಿಧಾನದ ಸಂಬಂಧಗಳು. ಸಾಹಿತ್ಯ ಸಂವೇದನೆ–ಕಾಲಘಟ್ಟ–ಚಳುವಳಿ ದೃಷ್ಟಿಯ ಸಂಬಂಧಗಳು. ಈ ಸಂಬಂಧಗಳು ಇವರ ವಿಮರ್ಶೆಯ ದೃಷ್ಟಿ ಧೋರಣೆಗಳನ್ನು ಪ್ರಭಾವಿಸಿವೆ. (ಹೆಚ್ಚಿನ ವಿವರಗಳಿಗೆ ನೋಡಿ; ಸಂಬಂಧಿಕತೆಯ ರಾಜಕಾರಣ)

ಕೊನೆಗೂ ಇವರೆಲ್ಲ ಬದಲಾದರು ಅನ್ನೋದು ಸಾಹಿತ್ಯಕವಾಗಿ ಸಾಂಸ್ಕೃತಿಕವಾಗಿ ನಮಗೆ ಮುಖ್ಯ. ಜನಾಭಿಪ್ರಾಯ, ಕಾಲದ ಸಂವೇದನೆ, ಕವಿಕೃತಿ ಸಮುದಾಯ ಇವೆಲ್ಲವೂ ಸೇರಿ ಇವರ ನಿಲುವುಗಳನ್ನು ಬದಲಾಯಿಸಿದವು. ಇದನ್ನೆ ಇನ್ನೊಂದು ಸ್ವಲ್ಪ ಉಚಾಯಿಸಿ ಹೇಳುವುದಾದರೆ ಕುವೆಂಪು ಅವರ ಸಾಹಿತ್ಯ ನಮ್ಮ ಕನ್ನಡ ವಿಮರ್ಶೆಯ ನಂಬಿಕೆಗಳನ್ನು ತಿದ್ದುಪಡಿ ಮಾಡಿದೆ. ನಮ್ಮ ವಿಮರ್ಶಕರ ದೃಷ್ಟಿ ಧೋರಣೆಗಳನ್ನು ರೂಪಿಸಿದೆ. ವಿಮರ್ಶೆ ತನ್ನ ಮಾನದಂಡಗಳನ್ನು ವರಸೆಗಳನ್ನು ರೂಪಿಸಿಕೊಳ್ಳಬೇಕಾಗಿರುವುದು ಸಿದ್ಧಾಂತಗಳಿಂದ ಅಲ್ಲ, ನಮ್ಮ ಸಾಹಿತ್ಯದಿಂದ ಅನ್ನುವುದು ಕುವೆಂಪು ಸಾಹಿತ್ಯದ ಅನುಸಂಧಾನದಿಂದ ವ್ಯಕ್ತವಾಗಿದೆ. ನಮ್ಮ ವಿಮರ್ಶೆಯ ಪರಿಕಲ್ಪನೆಗಳನ್ನು, ವರಸೆಗಳನ್ನು ನಮ್ಮ ಸಾಹಿತ್ಯಕ್ಕೆ ತಕ್ಕಂತೆ ರೂಪಿಸಿಕೊಳ್ಳುವ ಒಂದು ಸಾಧ್ಯತೆಯನ್ನು ಈ ಕುವೆಂಪು ವಿಮರ್ಶಾ ಜಗತ್ತು ತೋರುತ್ತಾ ಇದೆ. ಅಲ್ಲದೆ ವಿಮರ್ಶಕರು ಜನಾಭಿಪ್ರಾಯ ರೂಪಿಸಲಾರರು. ಜನಸಮುದಾಯದ ಸಂವೇದನೆಗಳೇ ವಿಮರ್ಶಕರನ್ನು ರೂಪಿಸುತ್ತವೆ ಎಂಬ ಸಿದ್ಧಾಂತವೂ ಕುವೆಂಪು ಸಾಹಿತ್ಯ ವಿಮರ್ಶೆಯ ಮೂಲಕ ಸಿದ್ಧಾಂತಗೊಂಡಿದೆ. ಕುವೆಂಪು ಬಗೆಗಿನ ನಮ್ಮವರ ನಿಲುವುಗಳು–ಅನುಸಂಧಾನ ಕ್ರಮಗಳು ಬದಲಾಗಿರುವುದೇ ಇದಕ್ಕೆ ಸಾಕ್ಷಿ. ಕಾಲದ ಪರೀಕ್ಷೆ ಎಂದರೆ ಇದೇ ತಾನೇ!

ಕುವೆಂಪು ಭಾಷೆಯ ಬಗೆಗಿನ ಒಂದು ಅಂಶವನ್ನು ಇಲ್ಲೇ ಪ್ರಸ್ತಾಪಿಸುವುದು ಉಚಿತವೆಂದು ತೋರುತ್ತದೆ. ಕುವೆಂಪು ಅವರ ನಾಟಕಗಳನ್ನು ಜಿ.ಎಸ್.ಎಸ್ ರಂಗಪಠ್ಯಗಳನ್ನಾಗಿ ಪರಿವರ್ತಿಸಿದಾಗ ಅದರ ಭಾಷಾ ಪ್ರಯೋಗದ ಬಗ್ಗೆ ಒಂದು ವಿವಾದವೇ ಉಂಟಾಯ್ತು. ಜಿ.ಎಸ್.ಎಸ್ ಪರ ಒಂದು ಗುಂಪು, ವಿರೋಧಿ ಪಾಳೆಯದಲ್ಲಿ ಕಿ.ರಂ.ನಾಗರಾಜ್ ಮತ್ತವರ ಬೆಂಬಲಿಗರು ಒಂದು ಗುಂಪು ಹೀಗೆ ಎರಡು ಗುಂಪುಗಳಲ್ಲಿ ಒಂದು ಸಣ್ಣ ಪ್ರಮಾಣದ ಸಂಘರ್ಷವೇ ನಡೆಯಿತು. ಕುವೆಂಪು ನಾಟಕಗಳ ಭಾಷೆ ರಂಗ ಪ್ರಯೋಗಕ್ಕೆ ತಕ್ಕುದಲ್ಲ ಮತ್ತು ಅದು ಸಂವಹನದ ತೊಡಕನ್ನು ಒಡ್ಡುತ್ತದೆ ಎಂಬುದು ಒಂದು ಗುಂಪಿನ ಪ್ರತಿಪಾದನೆ. ಆದರೆ, ಕುವೆಂಪು ಪ್ರಯೋಗಿಸಿರುವ ಭಾಷೆಗೆ ಅದರದ್ದೇ ಆದ ಒಂದು ಮಾಂತ್ರಿಕತೆ ಇದೆ. ಒಂದು ಚಂದ ಇದೆ. ಅದನ್ನ ರೂಪಾಂತರಿಸುವುದರಿಂದ ಅದಕ್ಕಿರುವ ನಿಯೋಗಗಳು, ಪರಿಣಾಮಗಳು ಇಲ್ಲವಾಗುತ್ತವೆ ಎಂಬುದು ಇನ್ನೊಂದು ಗುಂಪಿನ ವಾದವಾಗಿತ್ತು. ಇದೂ ಕೂಡ ಎರಡು ದೃಷ್ಟಿಕೋನಗಳ ನಡುವಿನ ಘರ್ಷಣೆ. ಎರಡನ್ನೂ ತರ್ಕಬದ್ಧವಾಗಿ ಸಮರ್ಥಿಸಿಕೊಳ್ಳಬಹುದು. ಆದರೆ ಪರಿವರ್ತನೆ ಬಗ್ಗೆ,

ಯಾವುದೇ ರೀತಿಯ ಭಾಷಿಕ ತರ್ಜುಮೆ, ರೂಪಾಂತರ, ಸರಳೀಕರಣ, ರಂಗಪಠ್ಯ ನಿರ್ಮಾಣಗಳ ಬಗ್ಗೆ ಆತಂಕ ಪಡುವ ಅಗತ್ಯವಿಲ್ಲ. ಆಶಯಗಳನ್ನೇ ತಪ್ಪಾಗಿ ಗ್ರಹಿಸುವ ಧೋರಣೆ, ಆಶಯಗಳನ್ನೇ ತಿರುಚುವ ವಿಮರ್ಶೆಗಳಿಗಿಂತ ಇನ್ನಷ್ಟು ಜನಕ್ಕೆ ಕುವೆಂಪು ತಲುಪಲಿ ಎಂಬ ಉದ್ದೇಶದಿಂದ ಮಾಡುವ ಇಂಥ ಭಾಷಿಕ ರೂಪಾಂತರಗಳು ಅಷ್ಟು ಅಪಾಯಕಾರಿಯಲ್ಲ.

### 4.5.1. ವಕೀಲಿ ವಿಮರ್ಶೆ ಮತ್ತು ಅಲಿಪ್ತ ವಿಮರ್ಶೆಗಳು

ಎನ್.ಬೋರಲಿಂಗಯ್ಯನವರನ್ನೂ ಒಳಗೊಂಡಂತೆ ದೇಜಗೌ, ಸುಧಾಕರ, ಬೂಸರೆಡ್ಡಿ, ಇವರೆಲ್ಲರ ವಿವಿಮರ್ಶೆಯನ್ನು ವಕೀಲಿ ವಿಮರ್ಶೆ ಎಂದೇ ಕರೆಯಬೇಕು. ಯಾಕೆಂದರೆ ಈ ವಿಮರ್ಶೆಗಳ ಹಿಂದೆ ಕವಿಯ ಬಗ್ಗೆ ಪೂಜ್ಯ ಭಾವನೆ ಇದೆ. ಕವಿ ಮತ್ತು ಕವಿಕೃತಿಯನ್ನು ಸಮರ್ಥಿಸಿಕೊಳ್ಳುವ ಧಾಟಿಯಲ್ಲೆ ಈ ವಿಮರ್ಶೆ ಇದೆ. ಕೆ.ವಿ.ನಾರಾಯಣ ಅವರ 'ಕುವೆಂಪು ಕೃತಿಗಳ ವಿಮರ್ಶೆಯ ನೆಲೆಗಳು' ಬೋರಲಿಂಗಯ್ಯನವರ ಕುವೆಂಪು ಸಾಹಿತ್ಯ ಮತ್ತು ನವ್ಯ ವಿಮರ್ಶೆ ಲೇಖನಗಳನ್ನು ಒಟ್ಟಿಗೇ ಇಟ್ಟು ನೋಡಿದರೆ ವಕೀಲಿ ವಿಮರ್ಶೆ ಮತ್ತು ಅಲಿಪ್ತ ವಿಮರ್ಶೆಗಳು ಎಂಥವು ಎಂಬುದು ತಿಳಿಯುತ್ತದೆ. ಪುಣೇಕರರ ವಿಮರ್ಶೆ ಕೂಡ ವಕೀಲಿ ವಿಮರ್ಶೆ ಅನ್ನಿಸುವುದಿಲ್ಲ. ಇಲ್ಲಿ ಇದಕ್ಕೆ ಒಂದು ಬಹು ಮುಖ್ಯ ಕಾರಣ ಇದೆ. ಕುರ್ತಕೋಟಿ, ಅನಂತಮೂರ್ತಿ ಇಂಥವರ ವಿಮರ್ಶೆಯಲ್ಲಿ ತಾವು ಮೆಚ್ಚುವ ಬೇಂದ್ರೆ ಅಡಿಗರನ್ನು ಶ್ರೇಷ್ಠ ಕವಿಗಳನ್ನಾಗಿ ಮಂಡಿಸುವ ಉದ್ದೇಶ ಇದೆ. ಹೀಗೆ ಮಂಡಿಸುವ ಕವಿಗಳಲ್ಲಿ ಇವರು ಒಂದು ಹೈರಾರ್ಕಿಯನ್ನು ನಿರ್ಮಾಣ ಮಾಡುತ್ತಾರೆ. ಆದರೆ ಕೆ.ವಿ.ನಾರಾಯಣ–ಪುಣೇಕರ ಇಂಥವರಿಗೆ ಹೈರಾರ್ಕಿ ನಿರ್ಮಾಣ ಮಾಡುವ ಉದ್ದೆಶ ಇಲ್ಲ. ಇವರ ವಿಮರ್ಶೆಯಲ್ಲಿ ಕನ್ನಡ ಸಾಹಿತ್ಯದ ವಿಮರ್ಶೆ, ಹೈರಾರ್ಕಿ ರಹಿತ ತೌಲನಿಕ ವಿವೇಚನೆ, ಕನ್ನಡ ವಿಮರ್ಶೆಯ ವಿಮರ್ಶೆ ಈ ಮೂರೂ ಮುಪ್ಪುರಿಗೊಂಡಿವೆ. ಹಾಗೆ ನೋಡಿದರೆ ಅನ್ಯ ವಿಮರ್ಶೆಯ ಖಂಡನೆ ಮತ್ತು ಸ್ವಯದ ಮಂಡನೆ ನಮ್ಮ ಕನ್ನಡ ವಿಮರ್ಶೆಯ ಒಂದು ಪ್ರಧಾನ ವ್ಯಾಪಾರ. ಕೆಲವೊಮ್ಮೆ ವಿರೋಧಪಕ್ಷ ಇಲ್ಲದಿದ್ದಾಗಲೂ ಕಲ್ಪಿತವೈರಿಗಳನ್ನು ಇಟ್ಟುಕೊಂಡು ಕಾದಾಡುವ ವಿಮರ್ಶೆ ನಮ್ಮಲ್ಲಿ ಸೃಷ್ಠಿಯಾಗಿದೆ. ನಿರ್ಲಿಪ್ತವಾದ, ವಿರೋಧಿಯಲ್ಲದ, ಹೈರಾರ್ಕಿಯನ್ನು ನಿರ್ಮಿಸದ ವಿಮರ್ಶೆ–ವಿವಿಮರ್ಶೆ ನಮ್ಮಲ್ಲಿ ಬಹಳಷ್ಟು ಅಪರೂಪ. ಅಲಿಪ್ತ ವಲಯದಲ್ಲಿ ಇದು ಸ್ವಲ್ಪಮಟ್ಟಿಗೆ ಕಾಣಿಸಿಕೊಂಡಿದೆ.

ಕಾದಂಬರಿ ವಿಚಾರಕ್ಕೆ ಪ್ರಕೃತಿ ಮತ್ತು ಸಂಸ್ಕೃತಿ ಎಂಬ ಚೌಕಟ್ಟನ್ನು ಹಾಕಿಕೊಳ್ಳುವ ಜಿ.ಎಸ್.ಆಮೂರ (705–ಪುಟ: 85, 100) ಕೂಡ ಎಂ.ಜಿ.ಕೆ, ಅನಂತಮೂರ್ತಿಗಳನ್ನು ನಿರಾಕರಿಸುತ್ತಾರೆ. ಆದರೆ ಇವರ ವಿಮರ್ಶೆ ನಮಗೆ ವಕೀಲಿ ವಿಮರ್ಶೆ ಅನ್ನಿಸುವುದಿಲ್ಲ. 'ಒಂದು ಸರಿಯಾದ ಬಂಧ ಅಥವಾ ಚೌಕಟ್ಟು ಕಾದಂಬರಿಯಲ್ಲಿ ಇಲ್ಲ (ಪುಟ–85), ಕಾದಂಬರಿಯಲ್ಲಿ ನೈತಿಕ ವಿಕಾಸವಿದೆ (ಪುಟ–87), ಹೂವಯ್ಯನನ್ನು ಕಾದಂಬರಿಕಾರರು ವಿಮರ್ಶೆಯ ಆಚೆಗೆ ಇಟ್ಟಿದ್ದಾರೆ (ಪುಟ–77), ಹೂವಯ್ಯನಲ್ಲಿ ಕ್ರಿಯಾಶೀಲತೆ ಮತ್ತು ಬುದ್ಧಿಶೀಲತೆ ಕಡಿಮೆ (ಪುಟ–79), ಲೇಖಕನ ವ್ಯಾಖ್ಯಾನಗಳು ಶಂಕೆ ಬರುವಂತೆ ಇರಬಾರದು (ಪುಟ–90), ಎಂಬ ಈ ಎಲ್ಲ ಎಂ.ಜಿ.ಕೆ. ಮಾತುಗಳನ್ನು ಮತ್ತು ಕಾದಂಬರಿಯು ಸರ್ವೋದಯದ ಆಧ್ಯಾತ್ಮಿಕ ಮಾನವೀಯತೆಯ ಕಥನ (ಪುಟ–87), ಕಾದಂಬರಿಯಲ್ಲಿ ತತ್ವದರ್ಶನಕ್ಕಿಂತ ಜೀವನದ ವಾಸ್ತವಗಳಿವೆ (ಪುಟ–103), ಎಂಬ ಡಿ.ಆರ್.ನಾಗರಾಜ್ ಮಾತುಗಳನ್ನು ಹಾಗೂ ಕಾದಂಬರಿಯು ಕೇಂದ್ರ ಪ್ರಜ್ಞೆ ಇಲ್ಲದೆ ವಿವರಗಳಲ್ಲಿ ಸೊಕ್ಕಿಬರುತ್ತದೆ (ಪುಟ–85) ಎಂಬ ಯು.ಆರ್.ಅನಂತಮೂರ್ತಿ ಮಾತುಗಳನ್ನು ಅಲ್ಲದೆ ಕುವೆಂಪು ಅಂತಃಕರಣ ದಲಿತ ಪರವಲ್ಲ (ಪುಟ–100) ಎಂಬ ಬಿ.ಕೃಷ್ಣಪ್ಪನವರ ಮಾತುಗಳನ್ನು ಇವರು ಒಂದೊಂದಾಗಿ ಉಲ್ಲೇಖಿಸುತ್ತ ತಮ್ಮ ವಿಮರ್ಶೆಯನ್ನು ಮಾರುತ್ತರ ರೂಪಿಯಾಗಿಯು ರಚಿಸಿದ್ದಾರೆ. ಆದರೂ ಇವರ ವಿಮರ್ಶೆ ವಕೀಲಿ ವಿಮರ್ಶೆ ಅನ್ನಿಸುವುದಿಲ್ಲ. ಕುವೆಂಪು ಅವರ ವೈರುಧ್ಯಗಳ ಬಗೆಗೆ ಚರ್ಚಿಸುವ ರಹಮತ್ ತರೀಕೆರೆಯವರು ಕುವೆಂಪು ಸಾಹಿತ್ಯದ ಬಗೆಗೆ, ಅದರ ಪ್ರಸ್ತುತತೆಯ ಬಗೆಗೆ ಕೆಲವು ಗಂಭೀರವಾದ ಪ್ರಶ್ನೆಗಳನ್ನು ಎತ್ತಿದ್ದಾರೆ. ಆದಾಗ್ಯೂ ಇವರ ವಿಮರ್ಶೆ ದೂಷಿಸುವುದನ್ನೇ ಉದ್ದೇಶವಾಗಿ ಇರಿಸಿಕೊಂಡದ್ದಲ್ಲ. ರಹಮತರದು ಕೂಡ ಅಲಿಪ್ತ ವಲಯದ ವಿಮರ್ಶೆಯೇ.

ಬಹಳಷ್ಟು ಟೀಕಾ ವಿಮರ್ಶೆಗಳು ಕೃತಿಕಾರನನ್ನು–ಕೃತಿಯನ್ನು ದೂಷಿಸುವುದನ್ನೆ ಉದ್ದೇಶವಾಗಿಸಿಕೊಂಡಂತೆ ಕಾಣುತ್ತವೆ. ವಕೀಲಿ ವಿಮರ್ಶೆಗಳು ವಿಮರ್ಶಕನನ್ನು ವಿರೋಧಿಸುವುದೋ ವಿಮರ್ಶೆಯನ್ನು ವಿರೋಧಿಸುವುದೋ ಹೀಗೆ ಯಾವುದೋ ಒಂದು ಪೂರ್ವ ನಿರ್ಧಾರಿತ ಉದ್ದೇಶದಿಂದಲೆ ಸೃಷ್ಟಿಯಾಗಿವೆ. ಕೃತಿ ವಿಮರ್ಶೆಗೆ ಕೃತಿಯ ಒಳಗೆ ಕಾರಣಗಳನ್ನು ಹುಡುಕುವುದು ಇಲ್ಲವೇ ಕೃತಿಯ

ಹೊರಗೆ ಕಾರಣಗಳನ್ನು ಹುಡುಕುವುದು ಈ ಎರಡು ಅಪ್ರೋಚುಗಳಲ್ಲಿ ಯಾವುದು ಸರಿ ಯಾವುದು ಸರಿಯಲ್ಲ ಎಂಬುದು ಅಮುಖ್ಯ. ಆದರೆ ತಮ್ಮ ಪೂರ್ವನಿರ್ಧಾರಿತ ಉದ್ದೇಶಗಳಿಗಾಗಿ ವಿಮರ್ಶಕರು ವಿಮರ್ಶೆಗೆ ಯತ್ನಿಸುವುದು ಮಾತ್ರ ಪ್ರಶ್ನಾರ್ಹವಲ್ಲವೆ?

ಈ ಎರಡೂ ಗುಂಪುಗಳ ನಡುವಿನ ಜಗಳ ಕೇವಲ ಸಾಹಿತ್ಯಕ ಜಗಳವಾಗಿ, ಅಷ್ಟೇ ಅಲ್ಲದೆ ಆಳದಲ್ಲಿ ಎರಡು ವರ್ಣ ಜಾತಿಗಳ ಪ್ರತಿಷ್ಠೆಯ ಪ್ರಶ್ನೆಯೂ ಆಗಿತ್ತೆಂಬುದು ತಿಳಿಯುತ್ತದೆ. ನವ್ಯರು ಪ್ರತಿಪಾದಿಸಿದಂತಹ ಜಗಳ ಕೇವಲ ಸಾಹಿತ್ಯಕ/ ವಸ್ತುನಿಷ್ಠ ಚರ್ಚೆಯಾಗಿತ್ತು ಎಂಬುದನ್ನು ನಂಬುವಂತಿಲ್ಲ (1085-ಪುಟ: 80ಬ)

ಎಂಬ ಶಿವಾನಂದರ ಮಾತುಗಳು ಇಲ್ಲಿ ಉಲ್ಲೇಖಾರ್ಹ. ನವ್ಯರು ಮತ್ತು ಆಪ್ತರ ಎರಡೂ ವಲಯಗಳ ನಡುವಿನ ಜಗಳವು ಕೇವಲ ದೃಷ್ಟಿಕೋನಗಳ ಜಗಳ ಮಾತ್ರವೋ? ಸಾಹಿತ್ಯಕ ಜಗತ್ತಿನ ಜಂಗಿಕುಸ್ತಿ ಮಾತ್ರವೋ? ಏನೇ ಆದರೂ ಇದು ನಮ್ಮ ಸಾಹಿತ್ಯಕ ಜಗತ್ತಿನ ಅನಾರೋಗ್ಯದ ಪ್ರತೀಕ ಎಂಬುದರಲ್ಲಿ ಎರಡು ಮಾತಿಲ್ಲ.

***

**ಆಕರ ವಿವರ**

1. ಓದಿನ ದಾರಿಗಳು ಸಂ.ಸಿ.ಎನ್.ರಾಮಚಂದ್ರನ್, ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು; 2002
2. ರಹಮತ್ ತರೀಕೆರೆಯವರು ಸಾಹಿತ್ಯ ಕೃತಿಗಳಲ್ಲಿ ಪ್ರಕಟವಾಗಿರುವ ಸಾಹಿತ್ಯ ಮೀಮಾಂಸೆಯನ್ನು ಕ್ರೋಡೀಕರಿಸುವ ಕೆಲಸ ಮಾಡಿದ್ದಾರೆ. ಮತ್ತು ವಿಮರ್ಶೆಯ ಭಿನ್ನ ಮಾದರಿಗಳನ್ನು ಒಟ್ಟಿಗೆ ಕೊಡುವ ಕೆಲಸವನ್ನು ಮಾಡಿದ್ದಾರೆ. ಹಾಗೇ ಬಿಡಿ ಬಿಡಿಯಾಗಿ ವಿಮರ್ಶಾ ಲೇಖನಗಳಿಗೆ ತಾತ್ವೀಕೃತ ಟಿಪ್ಪಣಿಗಳನ್ನು ರಚಿಸಿದ್ದಾರೆ. ಆದರೆ ವಿಮರ್ಶೆಯ ಆಚರಣೆಯನ್ನು ಒಟ್ಟಾರೆಯಾಗಿ ತಾತ್ವೀಕರಿಸುವ ಕೆಲಸ ಮಾಡಿಲ್ಲ. ನೋಡಿ; ಮಾತು ತಲೆಯೆತ್ತುವ ಬಗೆ ಮತ್ತು ಇಲ್ಲಿ ಯಾರೂ ಮುಖ್ಯರಲ್ಲ ಕೃತಿಗಳು ಪ್ರಸಾರಾಂಗ: ಹಂಪಿ.ವಿ.2005. ಇದರ ಜೊತೆಗೆ ನೋಡಿ: ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ-ಡಾ.ಎಚ್.ಎಸ್.ಶ್ರೀಮತಿ: ಅಜಂತ ಪ್ರಕಾಶನ ಹೊಸಪೇಟೆ: 1993. ಇಲ್ಲಿ ಡಾ.ಶ್ರೀವ್ಮತಿಯವರು 10 ರಿಂದ 13ನೇ ಶತಮಾನದವರೆಗಿನ ಸಾಹಿತ್ಯಕ್ಕೆ ಬಂದಿರುವ ಆಧುನಿಕ ಕಾಲದ ಪ್ರತಿಕ್ರಿಯೆಗಳನ್ನು ಮಾತ್ರವೇ ವಿಮರ್ಶೆಯೆಂದು ಪರಿಗಣಿಸಿ ತಾತ್ವೀಕರಿಸಲು ಯತ್ನಿಸಿದ್ದಾರೆ. ರಹಮತರು ವಿಮರ್ಶೆ ಮತ್ತು ಕಾವ್ಯಮೀಮಾಂಸೆಗಳಿಗೆ ಪರ್ಯಾಯವಾಗಿ ಸಾಹಿತ್ಯ ಮೀಮಾಂಸೆ ಎಂಬ ಪರಿಭಾಷೆಯನ್ನು ಬಳಸಿದರೆ, ಡಾ.ಶ್ರೀಮತಿಯವರು ವಿಮರ್ಶೆಗೆ ಬದಲಿಯಾಗಿ ಅಧ್ಯಯನ ಎಂಬ ಪರಿಭಾಷೆಯನ್ನು ಬಳಸಿದ್ದಾರೆ.
3. ಸ್ಥಿತಿಪ್ರಜ್ಞೆ-ಜಿ.ಎಚ್.ನಾಯಕ, ಕನ್ನಡ ವಿ.ವಿ. ಹಂಪಿ, 2007. ಮಾತು ಸೋತ ಭಾರತ-ಯು.ಆರ್. ಅನಂತಮೂರ್ತಿ, ಅಭಿನವ ಪ್ರಕಾಶನ, ಬೆಂಗಳೂರು, 2007. ನೂರು ಮರ ನೂರು ಸ್ವರ-ಕುರ್ತಕೋಟಿ, ಕನ್ನಡ ವಿ.ವಿ. ಹಂಪಿ.
4. ಜಿ.ಎಚ್.ನಾಯಕರು ಅವರ ವಿದ್ಯಾರ್ಥಿ ದೆಸೆಯಲ್ಲಿ ಕುವೆಂಪುವನ್ನು ನನ್ನ ಕಾವ್ಯ ಗುರು ಆಗಿ ಅಂತ ಕೇಳಿಕೊಳ್ಳಲು ಹೋಗಿದ್ದರಂತೆ. ಕುವೆಂಪು ಒಪ್ಪಲಿಲ್ಲವಂತೆ. ಒಂದು ವೇಳೆ ಒಪ್ಪಿ ಇವರನ್ನ ಕವಿಶಿಷ್ಯ ಅಂತ ಸ್ವೀಕರಿಸಿದ್ದರೆ ಜಿ.ಎಚ್.ನಾಯಕರ ವಿಮರ್ಶೆ ಏನಾಗುತ್ತಿತ್ತೋ ಯಾರು ಬಲ್ಲರು? ನೋಡಿ: ಸ್ಥಿತಿ ಪ್ರಜ್ಞೆ-ಜಿ.ಎಚ್.ನಾಯಕ, ಕನ್ನಡ ವಿ.ವಿ. ಹಂಪಿ, 2007, ಪುಟ: 66)

ಅಧ್ಯಾಯ–ಐದು

# ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆ
# ವಿಮರ್ಶೆಯ ದೃಷ್ಟಿಗಳು, ರೂಪಗಳು, ಪಂಥಗಳು

5.1. ವಿಮರ್ಶೆಯ ದೃಷ್ಟಿಗಳು

5.2. ವಿಮರ್ಶೆಯ ರೂಪಗಳು

5.3. ವಿಮರ್ಶೆಯ ಪಂಥಗಳು

5.4. ಸಾಂಸ್ಕೃತಿಕ ಅನುಸಂಧಾನಗಳು

ಕೊನೆಗೆ ಮೊದಲು

## 5.1. ವಿಮರ್ಶೆಯ ದೃಷ್ಟಿಗಳು

### 5.1.1. ಪರಿಕರ ದೃಷ್ಟಿ

ಲೇಖಕನು ತನ್ನ ಸಾಹಿತ್ಯ ರಚನೆಗೆ ಬಳಸುವ ಪರಿಕರಗಳಾದ ಭಾಷೆ, ಛಂದಸ್ಸು, ಉಪಮೆ, ಮಹೋಪಮೆ, ರೂಪಕ ಇತ್ಯಾದಿಗಳನ್ನು ಕೇಂದ್ರವಾಗಿಸಿಕೊಂಡು ಚರ್ಚಿಸುವ ವಿಮರ್ಶೆಯನ್ನು ಇಲ್ಲಿ ಪರಿಕರ ದೃಷ್ಟಿಯ ವಿಮರ್ಶೆ ಎಂದು ಕರೆಯಲಾಗಿದೆ. ಈ ದೃಷ್ಟಿಯಲ್ಲಿ ಸ್ಥೂಲವಾಗಿ ನಾಲ್ಕು ವಿನ್ಯಾಸಗಳನ್ನು ಕಾಣಬಹುದು. 1. ಭಾಷಿಕ ಚರ್ಚೆ 2. ಉಪಮೆ, ಪ್ರತಿಮೆ, ರೂಪಕಾದಿ ಮೀಮಾಂಸಾ ಚರ್ಚೆ 3. ಛಂದೋ ಚರ್ಚೆ 4. ಇವೆಲ್ಲವುಗಳ ಸಹಸಂಬಂಧಿಯಾದ ಶೈಲಿ ಮತ್ತು ಅಭಿವ್ಯಕ್ತಿ ಕ್ರಮಗಳ ಚರ್ಚೆ ಹಾಗೂ ಪರಿಕರಗಳು ಮತ್ತು ಸೃಜನಶೀಲತೆಯ ಸಂಬಂಧಗಳ ಚರ್ಚೆ ಇತ್ಯಾದಿ.. (ಇವಲ್ಲದೆ ಇನ್ನಿತರ ಚರ್ಚೆಗಳು ಕೂಡ ಇಲ್ಲಿ ಇವೆ)

#### 5.1.1.1. ಭಾಷಾ ಚರ್ಚೆ

ಭಾಷೆಯನ್ನು ಆಧರಿಸಿದ ಚರ್ಚೆಯಲ್ಲಿ ಹಲವು ನೆಲೆಗಳಿವೆ 1. ಕುವೆಂಪು ಭಾಷೆಯು ಈಗ ಇರುವ ಹಾಗೆ ರೂಪುಗೊಂಡಿರುವುದಕ್ಕೆ ಕಾರಣಗಳನ್ನು ಅನ್ವೇಷಿಸುವುದು. 2. ಭಾಷೆಯ ಉತ್ಪಾದಕತೆಯ ಬಗ್ಗೆ ಚರ್ಚಿಸುವುದು ಮತ್ತು ಪದರಚನೆ, ಪದಸಾನ್ನಿಧ್ಯ, ಪದಸಂಯೋಜನೆಗಳ ಬಗ್ಗೆ ಚರ್ಚಿಸುವುದು. 3. ಓದಿನಲ್ಲಿ, ಗ್ರಹಿಕೆಯಲ್ಲಿ ಕುವೆಂಪು ಭಾಷೆ ಒಡ್ಡುವ ತೊಡಕುಗಳನ್ನು ಕುರಿತು ಚರ್ಚಿಸುವುದು, 4. ತಮ್ಮದೇ ಸಾಹಿತ್ಯ ಭಾಷೆಯ ಕಲ್ಪನೆಯ ಮೂಲಕ ಕುವೆಂಪು ಭಾಷೆಗಳನ್ನು ವಿವೇಚಿಸುವುದು. 5. ಪ್ರಕಾರಗಳ ದೃಷ್ಟಿಯಿಂದ ಭಾಷಾ ಬಳಕೆಯನ್ನು ವ್ಯಾಖ್ಯಾನಿಸುವುದು. 6. ಭಾಷೆ ಮತ್ತು ಸಂಸ್ಕೃತಿಯ ನಡುವಿನ ಸಂಬಂಧಗಳನ್ನು ಚರ್ಚಿಸುವುದು. ಹೀಗೆ ಹಲವು ರೀತಿಯ ವಿವೇಚನೆಗಳು ಇಲ್ಲಿ ನಡೆದಿವೆ.

ಈ ಭಾಷಿಕ ವಿವೇಚನೆಯಲ್ಲಿ ವಿಮರ್ಶಕರು ಎತ್ತುವ ಎರಡು ಪ್ರಧಾನವಾದ ತಕರಾರುಗಳೆಂದರೆ: 1.ಭಾಷೆಯ ಸ್ವರೂಪಕ್ಕೆ ಸಂಬಂಧಿಸಿದ್ದು; ಕುವೆಂಪು ಭಾಷೆ ಸಂಸ್ಕೃತ ಭೂಯಿಷ್ಠ, ಅದು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ ಅನ್ನುವುದು. 2. ಸಾಹಿತ್ಯದ ಅಭಿವ್ಯಕ್ತಿ ವಿಧಾನಕ್ಕೆ ಸಂಬಂಧಿಸಿದ್ದು; ಕುವೆಂಪು ಎಲ್ಲವನ್ನೂ ಅನುಭವದ ನೆಲೆಯಲ್ಲಿ ಹೇಳುವುದಿಲ್ಲ, ವಾಚ್ಯವಾಗಿ ಹೇಳಿಬಿಡುತ್ತಾರೆ ಅನ್ನುವುದು. ಈ ಎರಡು ತಕರಾರುಗಳೂ ಸಾಕಷ್ಟು ಪರ ವಿರೋಧಿ ಚರ್ಚೆಗಳಿಗೆ ಗುರಿಯಾಗಿವೆ. ಈ ಪರ ವಿರೋಧಿ ಚರ್ಚೆಯಲ್ಲಿ 'ಒಂದು ಕನ್ನಡ'ವನ್ನು ಅಂದರೆ ಶಿಕ್ಷಣ ವ್ಯವಸ್ಥೆಯಲ್ಲಿ ರೂಪಿತವಾದ ಒಂದೆ ಪ್ರಮಾಣ ಕನ್ನಡವನ್ನು ಎಲ್ಲರೂ ಬಳಸಬೇಕು ಎಂಬ ಒತ್ತಡವೊಂದು ಕುವೆಂಪು ಭಾಷೆಯ ಬಗೆಗೆ ಎತ್ತುವ ಎಲ್ಲ ತಕರಾರುಗಳಲ್ಲೂ ಅಂತರ್ಗತವಾಗಿ ಕೆಲಸ ಮಾಡಿರಬಹುದು.

ಈ ದೃಷ್ಟಿಯಲ್ಲಿ ಭಾಷೆಯ ಮೂಲಕ ಸಾಹಿತ್ಯ ಸ್ವರೂಪವನ್ನು ನಿರ್ವಚಿಸುತ್ತ ಆ ಮೂಲಕ ಅದರ ಮೌಲ್ಯಮಾಪನ ಮಾಡುವುದು; (790–ಪುಟ: 55) ಸಾಹಿತ್ಯದ ಆಯ್ದ ಭಾಗಗಳ ಮೂಲಕ ಭಾಷೆಯ ಸ್ವರೂಪವನ್ನು ನಿರ್ವಚಿಸುತ್ತ ಆ ಮೂಲಕ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವುದು; (2239–ಪುಟ: 65) ಸಾಹಿತ್ಯದ ಭಾಷೆಯ ಮೂಲಕ ಸಾಹಿತ್ಯದ ಸಾಮಾಜಿಕ, ಸಾಂಸ್ಕೃತಿಕ, ಜಾನಪದೀಯ ಅಂಶಗಳನ್ನು ಮತ್ತು ಕವಿದೃಷ್ಟಿಯನ್ನು ಚರ್ಚಿಸುವುದು; ಸಾಹಿತ್ಯ ಭಾಷೆಯ ಧ್ವನಿಶಕ್ತಿಗಳಿಂದ ಸಾಹಿತ್ಯದ ಮೌಲ್ಯವನ್ನು ನಿರ್ಧರಿಸುವುದು; (713–ಪುಟ: 164) ಭಾಷೆಯ ಲಕ್ಷಣವನ್ನು ನಿರ್ವಚಿಸುತ್ತ ಆ ಮೂಲಕ ಸಾಹಿತ್ಯದ ಮೌಲ್ಯಮಾಪನ ಮಾಡುವುದು (462–ಪುಟ: 141) ಹೀಗೆ ಹಲವು ರೀತಿಯ ಚಟುವಟಿಕೆಗಳು ನಡೆದಿವೆ. ಕುವೆಂಪು ಭಾಷೆಯ ಚರ್ಚೆಯನ್ನು ನೆಪವಾಗಿ ಇರಿಸಿಕೊಂಡು ಕನ್ನಡ ಸಾಹಿತ್ಯ ಪರಂಪರೆಯ ಭಾಷಾ ವಿನ್ಯಾಸಗಳನ್ನು ಗುರ್ತಿಸುವ ಮತ್ತು ಆ ಹಿನ್ನೆಲೆಯಲ್ಲಿ ಕುವೆಂಪು ಭಾಷೆಯನ್ನು ಇಟ್ಟು ನೋಡುವ ಕಾರ್ಯವೂ ಇಲ್ಲಿದೆ. (462–ಪುಟ: 143)

> ಶ್ರೀರಾಮಾಯಣದರ್ಶನಂ ಸಾವಿರ ವರ್ಷಗಳ ಭಾಷಾಪರಂಪರೆಯ ಜೀವನಾಡಿಯನ್ನು ಮಿಡಿಯುತ್ತದೆ. ಅದು ಕೇವಲ ಹಳಗನ್ನಡವಲ್ಲ. ಸಹಸ್ರ ವರ್ಷಗಳ ಭಾಷೆಯ ಪ್ರಯೋಗ ಪರಿಣಾಮಗಳ ಪ್ರಜ್ಞೆಯಿರುವ, ಸಾಧ್ಯತೆಗಳನ್ನು ಅಭಿವ್ಯಕ್ತಿಗೆ ದುಡಿಸಿಕೊಳ್ಳುವ ಪ್ರತಿಭೆಯ ಫಲ ಎನ್ನಬಹುದು. ಈ ಮಹಾಕಾವ್ಯದಲ್ಲಿ ಪಂಪನ ಬಿಗಿ, ದೇಸಿಯ ಬನಿ, ಧ್ವನಿಶಕ್ತಿಯೂ, ರನ್ನನ ಶಬ್ದಶಕ್ತಿ ನಾಟಕೀಯತೆಯೂ, ನಾರಣಪ್ಪನ ಭಾಷೆಯ ನರ್ತನವೂ, ಲಕ್ಷ್ಮೀಶನ ನಾದವೂ ಇವೆ. ಕಾನೂರು ಹೆಗ್ಗಡಿತಿಯನ್ನು ರಚಿಸಿದ ಕಾದಂಬರಿ

ಪ್ರತಿಭೆಯೇ ಮಹಾಕಾವ್ಯ ರಚನೆಯನ್ನು ಮಾಡಿದೆ. ಹಳಗನ್ನಡದೊಂದಿಗೆ ಕಾದಂಬರಿಯ ಕನ್ನಡದ ಸೊಗಡೂ ಸೇರಿದೆ. (2239–ಪುಟ: 69)

ಹೀಗೆ ಇಲ್ಲಿ ಕುವೆಂಪು ಭಾಷೆಯು ಪರಂಪರೆಯ ಪ್ರಯೋಗಗಳ ಫಲ; ವ್ಯಕ್ತಿ ವಿಶಿಷ್ಟವಾದ–ನಮ್ಮ ಪರಂಪರೆಯ ಬಹುತೇಕ ಮುಖ್ಯ ಕವಿಗಳ ಭಾಷಾಪ್ರಯೋಗದ ಲಕ್ಷಣಗಳನ್ನು ಮೈಗೂಡಿಸಿಕೊಂಡ ರೂಪ ಎಂಬ ತತ್ವ ಇದೆ. ಹೀಗೆ ತುಲನೆಯ ನೆಲೆಯಿಂದ ನಿಲುವುಗಳಿಗೆ ತಲುಪುವ ಮಾರ್ಗ ನಮ್ಮ ವಿಮರ್ಶೆಯ ಯಾವತ್ತಿನ ಒಂದು ಚಹರೆಯಾಗಿದೆ. ಒಟ್ಟಾರೆ ಕುವೆಂಪು ಜೀವನದ ದೃಷ್ಟಿ, ವ್ಯಕ್ತಿತ್ವ, ಸಾಹಿತ್ಯಗಳಲ್ಲಿ ಒಂದು ವಿಕಾಸವನ್ನು ಗುರ್ತಿಸುವಂತೆ ಭಾಷೆಯನ್ನು ವಿಕಾಸವಾದಿ ದೃಷ್ಟಿಯಲ್ಲಿ ನಮ್ಮ ವಿಮರ್ಶೆಯು ವ್ಯಾಖ್ಯಾನಿಸಿದೆ. ಅವರ ಉಳಿದೆಲ್ಲ ಸಾಹಿತ್ಯ ಪ್ರಕಾರಗಳ ಭಾಷೆಯನ್ನು ಶ್ರೀರಾಮಾಯಣ ದರ್ಶನಂಗಾಗಿ ಮಾಡಿರುವ ಪೂರ್ವತಯಾರಿ ಎಂದು ಇಲ್ಲಿ ನಂಬಲಾಗಿದೆ. (2239–ಪುಟ: 71)

ಸಾಹಿತ್ಯದ ಸಫಲತೆಯು ಭಾಷಾ ಪ್ರಯೋಗದಲ್ಲಿಯೇ ಅಡಗಿರುತ್ತದೆ. ಯಾವನೇ ಒಬ್ಬ ಶಕ್ತ ಕವಿ ಶಕ್ತ ಭಾಷೆಯೊಂದನ್ನು ನಿರ್ಮಿಸುತ್ತಾನೆ. ಮತ್ತು ಭಾಷೆಯಲ್ಲಿಯೇ ಎಲ್ಲ ಸಾಧನೆಗಳನ್ನು ಹುಡುಕುವುದು ಕವಿಯಿಂದ ಅನಗತ್ಯವಾಗಿ ನಾವು ಬಹಳಷ್ಟು ಹೆಚ್ಚಾಗಿ ಅಪೇಕ್ಷಿಸಿದಂತಾಗುತ್ತದೆ ಎಂಬ ಎರಡೂ (462–ಪುಟ: 142) ಅಭಿಪ್ರಾಯಗಳು ಈ ದೃಷ್ಟಿಯಲ್ಲಿ ಮಂಡಿತವಾಗಿವೆ. ಅಲ್ಲದೆ ಪರಸ್ಪರ ಅಭಿಪ್ರಾಯಭೇದ, ತದ್ವಿರುದ್ಧ ನಿಲುವುಗಳನ್ನು ಪ್ರಕಟಿಸುವುದೂ ಕೂಡ ನಮ್ಮ ವಿಮರ್ಶೆಯ ಯಾವತ್ತಿನ ಚಹರೆಯಾಗಿದೆ. ಭಾಷೆಯ ಸ್ವರೂಪ ನಿರ್ವಚನದಲ್ಲೂ ಇದು ಪ್ರಕಟಗೊಂಡಿದೆ. ಕುವೆಂಪು ಸಾಹಿತ್ಯ ಭಾಷೆಯನ್ನು ಒಂದು ಭಾಷೆ ಎಂದೂ, ಹಲವು ಭಾಷೆಗಳು ಎಂದೂ ಇಲ್ಲಿ ಗ್ರಹಿಸಲಾಗಿದೆ. ಕುವೆಂಪು ಭಾಷೆಯನ್ನು ಕೆಲವರು ಹಳಗನ್ನಡ ಎಂದೂ, ಸಂಸ್ಕೃತ ಭೂಯಿಷ್ಠ ಎಂದೂ ಕರೆದಿದ್ದಾರೆ. ಇನ್ನು ಕೆಲವರು ಕಥನ ಭಾಷೆ, ಸಂಕೀರ್ಣ ಭಾಷೆ, ಮಲೆನಾಡ ಕನ್ನಡ, ವೀರ್ಯವತ್ತಾದ ಕನ್ನಡ, ಗಂಡುಕನ್ನಡ, ಹಳಗನ್ನಡವೂ ಅಲ್ಲದ ಗಿಳಗನ್ನಡವೂ ಅಲ್ಲದ 'ಕುವೆಂಪು ಕನ್ನಡ' ಎಂದೆಲ್ಲ ಕರೆದಿದ್ದಾರೆ.

ಅಭಿಪ್ರಾಯ ಭೇದಕ್ಕೆ ಒಂದರೆಡು ಉದಾಹರಣೆಗಳನ್ನು ಇಲ್ಲಿ ನೋಡಬಹುದು;

1. ಕವಿಯು ಅನೇಕ ಹಳಗನ್ನಡ ಶಬ್ದಗಳನ್ನು ಮತ್ತೆ ಉಪಯೋಗಿಸಿದ್ದಲ್ಲದೆ ಎಷ್ಟೋ ಶಬ್ದಗಳನ್ನು ಕಲ್ಪಿಸಿಕೊಂಡಿದ್ದಾನೆ. ಅವುಗಳಲ್ಲಿ ಕೆಲವು ಸುಂದರವಾಗಿದ್ದು ಇನ್ನುಳಿದವುಗಳು ಟೀಕಾಸ್ಪದವಾಗಿವೆ. ಮಳೆಬಿಲ್ಲು, ಹೊನ್ನಿನ ಸೊನ್ನೆ, ಇವೇ ಮೊದಲಾದವುಗಳಿಗೆ ಯಾರೂ ಬೇಡವೆನ್ನಲಾರರು. ಆದರೆ ನೇಗಿಲವನ್ನು ಮಣ್ಣುಣಿಯೆಂದೂ ರೈತರನ್ನು ಮಣ್ಣಿನ ಮಕ್ಕಳು ಹಾಗೂ ಭೂಮಿಯು ಹಾಡಿದ ಗೀತಗಳೆಂದೂ, ಪಕ್ಷಿಗಳನ್ನು ರೆಕ್ಕೆಯ ರಸಿಕರು ಹಾಗೂ ಬಣ್ಣದ ಚುಕ್ಕಿ ಎಂದೂ, ಶಾರದೆಯನ್ನು ನವಿಲುವಾಹನೆ ಎಂದೂ ಕರೆಯುವುದು ಸರಿಯಾಗಬಹುದೇ? ಕಬ್ಬಿಗನೆದೆಯೊಳು ಗಬ್ಬವನಾಂತಿಹ ಎಂಬಲ್ಲಿಯ ಪ್ರಯೋಗವೂ ಉಚಿತವಾಗಿಲ್ಲ. (1166–ಪುಟ: 600) (1930) (ಸಂಭವ ಕಾಲದಲ್ಲಿ ಅಯಾಟ್ಸಕಿರ್ಸನು ರೂಪಾಂತರಗಳಿಗೆ ತೆಗೆದ ತಗಾದೆಯಂತೆಯೇ ಈ ತಕರಾರೂ ಕೂಡ ಇದೆ. ನವೀನ ಪ್ರಯೋಗಗಳಿಗೆ ನಮ್ಮಲ್ಲಿ ಸ್ವಾಗತವೂ; ನಿರುತ್ತೇಜನವೂ ಎರಡೂ ಪ್ರಕಟವಾಗಿವೆ.)
2. ಕುವೆಂಪು ಅವರಲ್ಲಿ ಕೆಲವೊಮ್ಮೆ ಸಾಂಪ್ರದಾಯಿಕ, ಧಾರ್ಮಿಕ ಪರಿಭಾಷೆಗಳಲ್ಲೇ ಅನುಭವದ ಮಂಡನೆ ನಡೆಯುತ್ತದೆ. ಆದಾಗ್ಯೂ ಆ ಅನುಭವ ಪರಿಭಾಷೆಗಿಂತ ಭಿನ್ನವಾದದ್ದು. ಕೆಲವೊಮ್ಮೆಯಂತೂ ನೇರವಾಗಿ ದೈವೀ ಅನುಭವದ ಪರಿಭಾಷೆಯಲ್ಲಿ ಕಾವ್ಯ ಸೃಷ್ಟಿಯಾಗುತ್ತದೆ. ಇದಕ್ಕೆ ಉದಾ. ಬಾ ಫಾಲ್ಗುಣ ರವಿದರ್ಶನಕೆ ಕವಿತೆ (750–ಪುಟ: 87) (1987)
3. ಬಿ.ಎಂ.ಶ್ರೀಯವರ ಅಶ್ವತ್ಥಾಮನ್ ಮತ್ತು ಪಾರಸೀಕರು ನಾಟಕಗಳು ಕುವೆಂಪು ಅವರ ಭಾಷೆಯ ಮೇಲೆ ಭಾರೀ ಪರಿಣಾಮವನ್ನು ಬೀರಿವೆಯೆಂದು ಕಾಣುತ್ತದೆ. ಬಹುಶಃ ಶ್ರೀಯವರು ಇಂಗ್ಲಿಷ್ ಗೀತಗಳನ್ನಷ್ಟೆ ಪ್ರಕಟಿಸಿದ್ದರೆ, ಅವರ ನಾಟಕಗಳನ್ನು ಪ್ರಕಟಿಸದಿದ್ದರೆ, ಕುವೆಂಪು ಅವರ ಕಾವ್ಯ ಬೇರೆಯೇ ಆಗುತ್ತಿತ್ತು. ಅವರು ಭಾವಗೀತೆಗೆ ಮತ್ತು ದೀರ್ಘ ಕವನಗಳಿಗೆ ಅಶ್ವತ್ಥಾಮನ್ ಮತ್ತು ಪಾರಸೀಕರು ನಾಟಕಗಳಲ್ಲಿ ಕಾಣುವ ಭಾಷೆಯನ್ನು ಮಾರ್ಪಡಿಸಿಕೊಂಡಿದ್ದರಿಂದ ಭಾರೀ ಅಪಾಯವಾಗಿದೆ. (671–ಪುಟ: 51) (1994)

ಈ ಎರಡರಲ್ಲಿ ಮೊದಲನೆ ಉದಾಹರಣೆ ಪದಪ್ರಯೋಗದ ಸರಿ–ತಪ್ಪು, ಔಚಿತ್ಯ–ಅನೌಚಿತ್ಯಗಳನ್ನು ಚರ್ಚಿಸಿದರೆ ಎರಡನೆಯದು ಶೈಲಿ ಮತ್ತು ಅಭಿವ್ಯಕ್ತಿ ಕ್ರಮದ ಬಗ್ಗೆ ಚರ್ಚಿಸುತ್ತದೆ. ಪದಸೃಷ್ಟಿ ಮತ್ತು ಪದ ಸ್ವೀಕಾರ ಹಾಗೂ ಅವುಗಳ ಸೌಂದರ್ಯ ಮತ್ತು ಅಸಮರ್ಪಕತೆಯ ಬಗೆಗೂ ಮೊದಲನೆ ಉದಾಹರಣೆ ಮಾತಾಡುತ್ತದೆ. ಅನುಭವ ಮತ್ತು ಭಾಷೆಗಳು ಬೇರೆ ಬೇರೆ ಆಗುವ ಹಾಗೂ ಅವೆರಡೂ ಒಂದಾಗುವ

ಎರಡೂ ಸಾಧ್ಯತೆಗಳ ಬಗ್ಗೆ ಎರಡನೇ ಉದಾಹರಣೆ ಮಾತಾಡುತ್ತದೆ. ಈ ಎರಡೂ ಪ್ರತಿಕ್ರಿಯೆಗಳ ನಡುವೆ ಸುಮಾರು 50 ವರ್ಷಗಳ ಅಂತರ ಇದೆ. ವಿ.ಕೃ.ಗೋಕಾಕ ಮತ್ತು ಡಿ.ಆರ್.ನಾಗರಾಜ ಈ ಉದಾಹರಣೆಗಳ ಮೂಲಕ ಎರಡು ತಲೆಮಾರುಗಳನ್ನು ಪ್ರತಿನಿಧಿಸುತ್ತಾರೆ. ಇಲ್ಲಿ ನಮ್ಮ ವಿಮರ್ಶೆಯ ಎರಡು ಭಿನ್ನ ಕಾಲಘಟ್ಟಗಳ ಭಿನ್ನ ಮನೋಧರ್ಮಗಳನ್ನು ನೋಡಬಹುದಾಗಿದೆ. ಮೂರನೇ ಉದಾಹರಣೆಯು ಅಸಮಗ್ರ ಓದು ಮತ್ತು ದುಡುಕಿನ ತೀರ್ಮಾನಗಳು ವಿಮರ್ಶೆಯಲ್ಲಿ ಯಾವತ್ತೂ ಇರುತ್ತವೆ ಎಂಬುದನ್ನು ಪ್ರತಿನಿಧಿಸುತ್ತದೆ.

ಕುವೆಂಪು ಕಾವ್ಯದ ಭಾಷೆಯ ಬಗೆಗೆ ಮಾತನಾಡುವಾಗ ಬೇಂದ್ರೆಯ ಕಾವ್ಯಭಾಷೆಯ ಜೊತೆಗೆ ಅದನ್ನು ಹೋಲಿಸುವುದನ್ನು ಒಂದು ರಿಚುವಲ್ಲೆಂಬಂತೆ ನಮ್ಮ ಹಲವಾರು ವಿಮರ್ಶಕರು ಮಾಡುತ್ತ ಬಂದಿದ್ದಾರೆ. ಹೀಗೆ ಹೋಲಿಸುವಾಗ ಕುವೆಂಪು ಕಾವ್ಯವನ್ನು ಶ್ರೇಷ್ಠ ಅಲ್ಲವೆಂದು ನಿರಾಕರಿಸುವ ಮತ್ತು ಶ್ರೇಷ್ಠವೆಂದು ಸಮರ್ಥಿಸುವ ಎರಡೂ ಪ್ರವೃತ್ತಿಗಳು ಸಂಭವಿಸಿವೆ. ಕುವೆಂಪು ಕಾವ್ಯದ ಭಾಷೆಯ ಬಗ್ಗೆ ಎತ್ತಲಾಗಿರುವ ಮುಖ್ಯ ತಕರಾರೆಂದರೆ ಅವರ ಸಂಸ್ಕೃತಭೂಯಿಷ್ಟತೆಯ ಕುರಿತಾದುದು 1. ಸಂಸ್ಕೃತ ಭೂಯಿಷ್ಠತೆಯ ಕಾರಣಕ್ಕೆ ಕುವೆಂಪು ಕಾವ್ಯ ಸಂವಹನಗೊಳ್ಳುವುದಿಲ್ಲ; ಇದೇ ಕಾರಣಕ್ಕೆ ಇವರ ಕಾವ್ಯ ಶ್ರೇಷ್ಠವಲ್ಲ ಎಂಬ ವಾದ ಒಂದು ಕಡೆ ಇದ್ದರೆ, 2. ಸಂಸ್ಕೃತ ಭೂಯಿಷ್ಠತೆಗೆ ಕಾರಣವೇನಿರಬಹುದು? ಎಂಬ ಕಾರಣಮೀಮಾಂಸೆಯ ದೃಷ್ಟಿ; ಸಂಸ್ಕೃತ ಭೂಯಿಷ್ಠತೆಗೂ ಕಾವ್ಯದ ಶ್ರೇಷ್ಠತೆಗು ಸಂಬಂಧವಿಲ್ಲ ಎಂಬ ವಾದ ಇನ್ನೊಂದು ಕಡೆ ಇದೆ. ಮೊದಲ ವಾದವನ್ನು ನವ್ಯರು ಪ್ರತಿನಿಧಿಸಿದರೆ ಎರಡನೆಯದನ್ನು ಆಪ್ತರು ಪ್ರತಿನಿಧಿಸುತ್ತಾರೆ. ಭಾಷೆಯ ಸ್ವರೂಪದ ಕಾರಣ ಮೀಮಾಂಸೆಯನ್ನು ಮತ್ತು ನವ್ಯ ಹಾಗೂ ಆಪ್ತವಲಯಗಳ ಪೋಸ್ಟ್‌ಮಾರ್ಟೆಮ್ಮನ್ನು ಅಲಿಪ್ತರು ಮಾಡುತ್ತಾರೆ. ಹಾಗೇ ಇವರು ಭಾಷೆ ಮತ್ತು ಅದರ ಸಾಂಸ್ಕೃತಿಕ ನಿಯೋಗಗಳನ್ನು, ವರ್ತಮಾನದ ಆದ್ಯತೆಗಳನ್ನು ಚರ್ಚಿಸುತ್ತಾರೆ.

ಭಾಷೆಯ ದೃಷ್ಟಿಯಿಂದ ಕುವೆಂಪು ಮತ್ತು ಬೇಂದ್ರೆಯನ್ನು ತುಲನೆ ಮಾಡುವಾಗ ನಮ್ಮವರಲ್ಲಿ ಕಾವ್ಯಭಾಷೆಯು ಆಡುಭಾಷೆಯ ಪ್ರಯೋಗದಿಂದ ಕೂಡಿರಬೇಕು ಎಂಬ ಗ್ರಹೀತವೊಂದು ಇದೆ. ಹಳಗನ್ನಡ ಛಂದಸ್ಸು, ಪ್ರಾಚೀನ ಕಾವ್ಯಗಳ ಭಾಷಾ ಪ್ರಯೋಗಗಳನ್ನು ಬಿಡಬೇಕು ಎಂಬ ಸಂಭವಕಾಲೀನ ನಂಬಿಕೆಯನ್ನು ಕುವೆಂಪುಗೆ ಅನ್ವಯಿಸಿ ಕುವೆಂಪು ಭಾಷಾ ಪ್ರಯೋಗವನ್ನು ಹಳಗನ್ನಡ ಎಂದು ಹಲವರು ಟೀಕಿಸಿದ್ದಾರೆ. ಕುವೆಂಪು ಭಾಷೆ ಒಂದು ನಿಷೇಧಿತ ಮಾದರಿ ಎಂಬಂತೆ ವರ್ತಿಸಿದ್ದಾರೆ. ಆಡುಭಾಷೆಯನ್ನು ಕಾವ್ಯ ಬಳಸಿದರೆ ಮಾತ್ರ ಅದು ಶ್ರೇಷ್ಠ ಎಂಬ ನಂಬಿಕೆಯು ನಮ್ಮ ವಿಮರ್ಶೆಯ ಹಲವು ತಪ್ಪು ಕಲ್ಪನೆಗಳಲ್ಲಿ ಒಂದು ಆಗಿದೆ. ಒಬ್ಬ ಕವಿಯ ಭಾಷೆಯನ್ನು ಇನ್ನೊಬ್ಬನ ಕಾವ್ಯವನ್ನು ಅಳೆಯಲು ಬಳಸುವುದು; ಒಂದು ಚಳವಳಿ-ಕಾಲಘಟ್ಟದ ಸಾಹಿತ್ಯ ಸಂವೇದನೆಯಿಂದ ಇನ್ನೊಂದು ಸಂವೇದನೆಯನ್ನು ಅಳೆಯುವುದು ನಮ್ಮ ವಿಮರ್ಶಾ ಚರಿತ್ರೆಯ ಒಂದು ಕೆಟ್ಟ ಪರಿಪಾಟ ಆಗಿದೆ. ನವ್ಯ ಕಾವ್ಯದ ವಿಮರ್ಶಾ ಮಾನದಂಡಗಳಿಂದ ಮತ್ತು ಬೇಂದ್ರೆ ಕಾವ್ಯ ಮಾದರಿಯ ಅಳತೆಗೋಲಿನಿಂದ ಕುವೆಂಪುವನ್ನು ತೂಗಿನೋಡಿ ತಮ್ಮದೇ ನಿಲುವಿಗೆ ಬಂದಿರುವುದು ನಮ್ಮ ವಿಮರ್ಶಾ ವಲಯದಲ್ಲಿನ ಒಂದು ಚಹರೆಯಾಗಿದೆ.

ಕುವೆಂಪು ಕಾವ್ಯ ಭಾಷೆಯ ಕಾರಣಮೀಮಾಂಸೆಯಲ್ಲಿ ಭಾಷೆ ಮತ್ತು ಜಾತಿ, ಭಾಷೆ ಮತ್ತು ವರ್ಣ ವರ್ಗಗಳನ್ನು ಸಮೀಕರಿಸಿ ನೋಡಲಾಗಿದೆ. ಇವರ ಭಾಷಾ ಬಳಕೆಯನ್ನು ಶೂದ್ರ ಕಾಂಪ್ಲೆಕ್ಸ್ ಎಂದೂ ವ್ಯಾಖ್ಯಾನಿಸಲಾಗಿದೆ.(781) ಸಾಹಿತ್ಯದ ಭಾಷೆಯು ನಿರ್ಮಾಣಗೊಳ್ಳುವುದು ಕೇವಲ ವ್ಯಕ್ತಿಯಿಂದ ಅಲ್ಲ; ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವ ಪರಂಪರೆ-ವರ್ತಮಾನ-ಜಾಗತಿಕತೆಗಳು ವ್ಯಕ್ತಿಯ ಭಾಷೆಯನ್ನು ರೂಪಿಸುತ್ತವೆ ಎಂಬ ತತ್ವವನ್ನೂ ಇಲ್ಲಿ ಮಂಡಿಸಲಾಗಿದೆ. (531-ಪುಟ: 212) ಸಾಹಿತ್ಯದ ಭಾಷೆಯು ಸಾಹಿತ್ಯದ ವಸ್ತು, ಪಾತ್ರ, ಭಾವ ರಸಗಳಿಗೆ ಅನುಗುಣವಾಗಿ ರೂಪಗೊಳ್ಳುತ್ತದೆ. ಕೃತಿಯ ಸ್ವರೂಪವೆ ಭಾಷೆಯನ್ನು ನಿಯಂತ್ರಿಸುತ್ತದೆ ಎಂದು ಕಾರಣ ಮೀಮಾಂಸೆಯು ನಂಬುತ್ತದೆ. (708-ಪುಟ: 97) ಕವಿಯ ಪ್ರಾದೇಶಿಕ ಭಾಷೆಯು ಸಾಹಿತ್ಯದಲ್ಲಿ ಪ್ರವೇಶ ಪಡೆಯುತ್ತದೆ; ನಾಟಕವಾಗಲಿ ಕಾದಂಬರಿಯಾಗಲಿ ಕಾವ್ಯವಾಗಲಿ ವಾಸ್ತವವಾದಿಯಾದ ಬರವಣಿಗೆಯಾದಾಗ ಅಲ್ಲಿ ಪ್ರಾದೇಶಿಕ ನುಡಿಗಟ್ಟು, ಜಾನಪದೀಯ ಅಂಶಗಳು; ಭಾಷೆಯ ಸಾಂಸ್ಕೃತಿಕ ಲಕ್ಷಣಗಳು; ಪ್ರಾದೇಶಿಕವಾದ ಪದಗಳು, ಕಾಕುಗಳೆಲ್ಲ ಪ್ರಯೋಗವಾಗುತ್ತವೆ ಎಂದು ಈ ಮೀಮಾಂಸೆ ನಂಬುತ್ತದೆ. (713-ಪುಟ: 167)

ಭಾಷೆ ಮತ್ತು ಸ್ಥಳೀಯತೆಯ ನಡುವೆ ಸಂಬಂಧ ಇರುವಂತೆಯೇ; ಉದ್ದೇಶಿತ ಓದುಗ ವಲಯವೂ ಭಾಷೆಯನ್ನು ನಿಯಂತ್ರಿಸುತ್ತದೆ. ಕೃತಿಕಾರನು ತಾನು ಯಾರಿಗಾಗಿ ಬರೆಯುತ್ತಿದ್ದೇನೆ ಎಂದು ಸ್ಥೂಲವಾಗಿ

ಓದುಗ ವರ್ಗವನ್ನು ಮನಸ್ಸಿನಲ್ಲಿ ಇಟ್ಟುಕೊಂಡಿರುತ್ತಾನೆ; ಅಂದರೆ ಮಕ್ಕಳಿಗಾಗಿ ಬರೆಯುತ್ತಿದ್ದೇನೆ, ವಿದ್ವಾಂಸರಿಗಾಗಿ ಬರೆಯುತ್ತಿದ್ದೇನೆ, ವಿದ್ಯಾರ್ಥಿಗಳಿಗಾಗಿ ಬರೆಯುತ್ತಿದ್ದೇನೆ, ಬ್ರಾಹ್ಮಣರಿಗಾಗಿ ಬರೆಯುತ್ತಿದ್ದೇನೆ ಹೀಗೆ ನಿರ್ದಿಷ್ಟ ಸಹೃದಯ ವರ್ಗಗಳು ಮನಸ್ಸಿನಲ್ಲಿ ಇದ್ದರೆ ಆ ಉದ್ದೇಶಿತ ಸಹೃದಯ ವಲಯವು ಕೃತಿಯ ಭಾಷಾ ಸ್ವರೂಪವನ್ನು ನಿರ್ಧರಿಸುತ್ತದೆ ಎಂದು ಈ ಮೀಮಾಂಸೆಯು ನಂಬುತ್ತದೆ. (836) ಕಾವ್ಯ, ಕಾದಂಬರಿ, ನಾಟಕ, ವಿಚಾರ ಪ್ರಬಂಧ ಹೀಗೆ ಸಾಹಿತ್ಯ ಪ್ರಕಾರಗಳಿಗು ಮತ್ತು ಅವುಗಳ ಭಾಷೆಗೂ ನಿಯಂತ್ರಕ ಸಂಬಂಧ ಇರುತ್ತದೆ ಎಂದೂ ಈ ಮೀಮಾಂಸೆಯು ವಾದಿಸುತ್ತದೆ. ಕಾದಂಬರಿ ಕತೆಗಳಲ್ಲಿ ಅವುಗಳ ಆಕೃತಿ, ರಾಚನಿಕ ಸ್ವರೂಪವು ಭಾಷೆಯ ಸ್ವರೂಪವನ್ನು ನಿರ್ಧರಿಸುತ್ತದೆ ಎಂದು ಈ ವಿಮರ್ಶೆಯು ಭಾವಿಸುತ್ತದೆ. ಅಲ್ಲದೆ ಕಥನದಲ್ಲಿ ಪಾತ್ರಗಳು ಆಡುವ ಮಾತುಗಳಿಗು ನಿರೂಪಕನ ಮಾತುಗಳಿಗು ವ್ಯತ್ಯಾಸವಿರುತ್ತದೆಯಾಗಿ ಕೃತಿಯ ರಾಚನಿಕತೆಗೂ ಭಾಷೆಗೂ ನಿಯಂತ್ರಕ ಸಂಬಂಧ ಇರುತ್ತದೆ ಎಂದೂ ಇದು ಭಾವಿಸುತ್ತದೆ. ಹೀಗಾಗೀ ಸ್ಥೂಲವಾಗಿ ಸಾಹಿತ್ಯಭಾಷೆಯು 1. ಕೃತಿಕಾರನ ವರ್ಣ, ವರ್ಗ, ಜಾತಿ 2. ಪ್ರದೇಶ–ಕಾಲ 3. ಪರಂಪರೆ ಮತ್ತು ವರ್ತಮಾನದ ಒತ್ತಡಗಳು 4. ಉದ್ದೇಶಿತ ಓದುಗರು 5. ಪ್ರಕಾರಗಳು 6. ಲೇಖಕನ ಅಭಿರುಚಿ ಹೀಗೆ ಹತ್ತು ಹಲವು ಸಂಗತಿಗಳೊಂದಿಗೆ ನಿಯಂತ್ರಕ ಸಂಬಂಧವನ್ನು ಹೊಂದಿರುತ್ತದೆ ಎಂಬ ಸಿದ್ಧಾಂತವನ್ನು ಈ ಕಾರಣ ಮೀಮಾಂಸೆಯು ಮಂಡಿಸಿದೆ. ಹಾಗೇ ಸಾಧಾರಣವಾಗಿ ಸಮರ್ಥಿಸಲು ಯತ್ನಿಸಿದೆ.

ಭಾಷೆಯ ಕುರಿತಾಗಿ ಈಗಾಗಲೇ ನಡೆದಿರುವ ವಿಮರ್ಶೆಯನ್ನು ಸಮೀಕ್ಷಿಸುವ–ವ್ಯಾಖ್ಯಾನಿಸುವ ಪರಿಪಾಠವು ನಮ್ಮಲ್ಲಿನ ಒಂದು ಸಾಮಾನ್ಯ ವ್ಯಾಪಾರವಾಗಿದೆ. ಜಿ.ಎಸ್.ಶಿವರುದ್ರಪ್ಪನವರು ಕುವೆಂಪು ಅವರ ಕಾವ್ಯ ಭಾಷೆಯು ತೀರಾ ಪ್ರೌಢವೂ ಸಂಸ್ಕೃತಮಯವೂ ಆಗಿದೆ ಎಂದು ಆಕ್ಷೇಪ ಎತ್ತುವುದಕ್ಕಿಂತ 1. ಕವಿ ತನ್ನ ಅಭಿವ್ಯಕ್ತಿಗಾಗಿ ರೂಪಿಸಿಕೊಳ್ಳುವ ಭಾಷೆ ಅವನ ವಸ್ತು ಹಾಗೂ ಉದ್ದೇಶಕ್ಕೆ ಅನುಗುಣವಾಗಿದೆಯೇ? 2. ಕವಿಯು ತನ್ನದೇ ಹೊಸ ಭಾಷೆಯೊಂದನ್ನು ನಿರ್ಮಿಸಿದ್ದಾನೆಯೇ? ಇಂತಹ ಪ್ರಶ್ನೆಗಳನ್ನು ಸಹೃದಯ ಕೇಳಬೇಕು ಎಂದು ಹೇಳುತ್ತಾರೆ. (294) ವಿಮರ್ಶೆಯ ಕುರಿತಾದ ತತ್ವ ಚಿಂತನೆ ಮತ್ತು ವಿವಿಮರ್ಶೆಯಲ್ಲಿ ನಮ್ಮ ವಿಮರ್ಶೆಯ ಆದ್ಯತೆಗಳು ಏನಾಗಿರಬೇಕು ಎಂಬ ಎಚ್ಚರ ವಿಮರ್ಶಕನಿಗೆ ಇರಬೇಕು ಎಂಬ ತತ್ವವೂ ಈ ವಿಮರ್ಶೆಯಲ್ಲಿ ಮಂಡಿತವಾಗಿದೆ. ಲೇಖಕನು ಆಡು ಭಾಷೆಯನ್ನು ಕಾವ್ಯಕ್ಕೆ ಬಳಸಿಕೊಂಡರೆ ಅದು ಶ್ರೇಷ್ಠತೆಯ ಲಕ್ಷಣ ಎಂಬ ನಂಬಿಕೆ ನಮ್ಮಲ್ಲಿ ಇರುವಂತೆಯೇ ಲೇಖಕನಾದವನು ತನ್ನದೇ ಹೊಸ ಭಾಷೆ–ಅಭಿವ್ಯಕ್ತಿ ಶೈಲಿಯೊಂದನ್ನು ಸೃಷ್ಟಿಸಿಕೊಳ್ಳುವುದು ಆತನ ಶ್ರೇಷ್ಠತೆಯ ಲಕ್ಷಣ ಎಂಬ ತತ್ವವೂ ನಮ್ಮಲ್ಲಿ ಪ್ರಕಟವಾಗಿದೆ.

ಕುವೆಂಪು ಕನ್ನಡದಲ್ಲಿ ಬರೆದದ್ದನ್ನು ಒಂದು ಚಾರಿತ್ರಿಕವಾದ ಘಟನೆ ಎಂಬಂತೆ ನಮ್ಮ ವಿಮರ್ಶೆಯು ಚರ್ಚಿಸಿದೆ. ಜೆ.ಎಚ್.ಕಸಿನ್ಸ್ ಅವರ ಸಲಹೆಯ ಮೇರೆಗೆ ಕುವೆಂಪು ಕನ್ನಡದಲ್ಲಿ ಬರೆದರು ಎಂಬ ಮಿಥ್ ಒಂದು ನಮ್ಮಲ್ಲಿ ಚಾಲ್ತಿಯಲ್ಲಿದೆ. ಕುವೆಂಪು ಇಂಗ್ಲಿಷ್‌ನಲ್ಲಿ ಬರೆದಿದ್ದರೆ ಜಗತ್ಪ್ರಸಿದ್ಧ ಸಾಹಿತಿ ಆಗುತ್ತಿದ್ದರು; ಅವರು ಇಂಗ್ಲಿಷಿನಲ್ಲೇ ಬರೆದಿದ್ದರೆ ಖಂಡಿತಾ ಸೋಲುತ್ತಿದ್ದರು ಎಂಬ ಭಿನ್ನ ಊಹಾ ಕಲ್ಪನೆಗಳೂ ಇಲ್ಲಿ ಮಂಡಿತವಾಗಿವೆ. ಯಾವುದೇ ಒಬ್ಬ ಲೇಖಕ ತನ್ನ ಮಾತೃಭಾಷೆಯಲ್ಲೆ–ಪ್ರಾದೇಶಿಕ ನುಡಿಯಲ್ಲೇ ಸಾಹಿತ್ಯ ರಚಿಸಬೇಕೆ? ಹಾಗಾದಾಗ ಮಾತ್ರ ಲೇಖಕ ಶಕ್ತವಾಗಿ ಬರೆಯಬಲ್ಲನೆ? ವ್ಯಕ್ತಿಯ ಭಾಷೆಗೂ ಮತ್ತು ಅನುಭವ ಪ್ರಪಂಚಕ್ಕೂ ಇರುವ ಸಂಬಂಧವೇ ಸಾಹಿತ್ಯ ಭಾಷೆಯ ಆಯ್ಕೆಯನ್ನು ನಿಯಂತ್ರಿಸುತ್ತದೆಯೇ? ಈ ಬಗ್ಗೆ ಕೂಡ ಅಲ್ಪ ಸ್ವಲ್ಪ ಚರ್ಚೆ ನಮ್ಮಲ್ಲಿ ನಡೆದಿದೆ.

ಲೋಕೋಪಯೋಗಿ ಮತ್ತು ಭಾವೋಪಯೋಗಿ ಎಂಬ ಪರಿಭಾಷೆಯಲ್ಲಿ ಕುವೆಂಪು ಸಾಹಿತ್ಯ ಭಾಷೆಯನ್ನು ಲೇಖಕನ ಆಯ್ಕೆ ಎಂದು ಹೇಳುವುದನ್ನು ಉಲ್ಲೇಖಿಸುತ್ತ ಕೆ.ವಿ.ನಾರಾಯಣ ಅವರು 'ಅನುಭವ ಜಗತ್ತಿನ ಭಾಷೆ ಅಥವಾ ಭಾಷಾರೂಪಕ್ಕು ಅಭಿವ್ಯಕ್ತಿಯ ಭಾಷೆ ಅಥವಾ ಭಾಷಾರೂಪಕ್ಕು, ಬಿಡಿಸಲಾಗದ ಸಂಬಂಧ ಯಾವಾಗಲೂ ಇರುವುದಿಲ್ಲ' ಎಂಬ ಸಿದ್ಧಾಂತವನ್ನು ಮಂಡಿಸಿದ್ದಾರೆ. (531–ಪುಟ: 211) ಇವರಲ್ಲಿ ಇನ್ನೂ ಕೆಲವು ಸಿದ್ಧಾಂತಗಳು ಮಂಡಿತವಾಗಿವೆ. ಅವು ಭಾಷೆಯನ್ನು ವರ್ತಮಾನದ ಆದ್ಯತೆಗಳ ದೃಷ್ಟಿಯಿಂದ ನೋಡಿ ಕಂಡರಿಸಿದ ಸಿದ್ಧಾಂತಗಳಾಗಿವೆ. 1. ಭಾಷೆಯ ಬಳಕೆಯು ಕೇವಲ ಭಾಷೆಯ ಬಳಕೆ ಆಗಿರುವುದಿಲ್ಲ. ಅದು ಸಾಹಿತಿಯ ಸಾಮಾಜಿಕ ಚಿಂತನೆಗಳು ಮತ್ತು ತಾತ್ವಿಕ ಚಿಂತನೆಗಳೊಂದಿಗೆ ಸಂಬಂಧ

ಪಡೆದಿರುತ್ತದೆ. 2. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಕಾವ್ಯರಚನೆ, ಕಥಾರಚನೆ, ವೈಚಾರಿಕ ಬರಹಗಳಿಗೆ ಬೇಕಾದ ಕನ್ನಡದ ಮಾದರಿಗಳನ್ನು ಕಂಡುಕೊಳ್ಳುವ ಹುಡುಕಾಟ ನಡೆಯುತ್ತಿತ್ತು. ಅಂಥ ಅಗತ್ಯದ ಪೂರೈಕೆಯಾಗಿ ಕುವೆಂಪು ಭಾಷಾರೂಪಗಳು ಸೃಷ್ಟಿಯಾಗಿವೆ. ಈ ಸೃಷ್ಟಿಯ ಹಿಂದೆ ಪರಂಪರೆಯ ಬಳಕೆಗಳ ಜೊತೆ ಸಂಪರ್ಕ ಕಾಯ್ದುಕೊಳ್ಳುವ ಯತ್ನವೂ ಇದೆ. 3. ಕುವೆಂಪು ಅವರಿಗೆ ಭಾಷಿಕವಾಗಿ ಯಾವ ಹಳಗನ್ನಡದ ಕವಿಯನ್ನೂ ಮಾದರಿಯಾಗಿ ಗುರ್ತಿಸಲು ಬರುವುದಿಲ್ಲ. 4. ಕುವೆಂಪು ಕನ್ನಡದಲ್ಲಿ ಪದ ಮತ್ತು ಪದರಚನೆಯ ನೆಲೆಯಲ್ಲಿ ಮಾತ್ರ ಬದಲಾವಣೆಗಳು ನಡೆದಿವೆ. 5. ವಾಕ್ಯರಚನೆಯ ದೃಷ್ಟಿಯಿಂದ ಹಳೆ ಹೊಸಗನ್ನಡಗಳ ನಡುವೆ ಗಮನಿಸಬಹುದಾದ ಬದಲಾವಣೆಗಳು ಇಲ್ಲ. 6. ಕುವೆಂಪು ಅವರ ಸಂಸ್ಕೃತಭೂಯಿಷ್ಟತೆಗೂ ಭಾಷೆಯಲ್ಲಿ ಶೂದ್ರತನದ ಮೀರುವಿಕೆಗೂ ಸಂಬಂಧ ಇಲ್ಲ. (531–ಪುಟ: 210, 212)

ವಿಮರ್ಶೆಯು ಯಾವಾಗಲೂ ಒಳನೋಟವಾದಿ ಆಗಿರಬೇಕು ಎಂಬ ವಿಮರ್ಶಾ ತತ್ವವು ಇವರ ಆಚರಣೆಯಲ್ಲಿ ಪ್ರಕಟವಾಗಿದೆ. ಹಾಗೆಯೇ ಭಾಷೆಯ ಬಗ್ಗೆ ಚರ್ಚಿಸುವಾಗ ವಿಮರ್ಶೆಯು 1. ಭಾಷೆಯ ರಚನೆಯ ನೆಲೆ ಮತ್ತು ಅದಕ್ಕೆ ಇರುವ ಸಾಮಾಜಿಕ ಕಾರಣಗಳನ್ನು ಗಮನಿಸಬೇಕು. 2. ವಿಮರ್ಶೆಯ ಆದ್ಯತೆಗಳು ಸದಾ ಸಮಕಾಲೀನ ಸಮಾಜದ ಆದ್ಯತೆಗಳೊಂದಿಗೆ ಸಂಬಂಧ ಹೊಂದಿರಬೇಕು ಎಂಬ ತತ್ವಗಳೂ ಪ್ರಕಟವಾಗಿವೆ. 'ಅನುಭವ ಜಗತ್ತಿನ ಭಾಷೆ ಮತ್ತು ಅಭಿವ್ಯಕ್ತಿಯ ಭಾಷೆಗಳ ನಡುವೆ ನಿಕಟ ಸಂಬಂಧ ಇರುವುದಿಲ್ಲ' ಮತ್ತು 'ಕುವೆಂಪು ಅವರ ಸಂಸ್ಕೃತಭೂಯಿಷ್ಟತೆಗೂ ಭಾಷೆಯಲ್ಲಿ ಶೂದ್ರತನದ ಮೀರುವಿಕೆಗೂ ಸಂಬಂಧ ಇಲ್ಲ' ಎಂಬ ಇವರ ತತ್ವಗಳನ್ನು ಇನ್ನಷ್ಟು ಚರ್ಚಿಸಬೇಕಾದ ಅಗತ್ಯ ಇದೆ. (ಜೊತೆಗೆ ನೋಡಿ ನಾಡು ನುಡಿ ಚಿಂತನಾ ದೃಷ್ಟಿ)

**5.1.1.2. ಛಂದೋಚರ್ಚೆ**

ಛಂದೋಚರ್ಚೆಯಲ್ಲಿಯೂ ಹಲವು ದೃಷ್ಟಿಗಳಿವೆ. ಅವುಗಳನ್ನು ಮುಖ್ಯವಾಗಿ ನಾಲ್ಕು ನೆಲೆಗಳಲ್ಲಿ ನೋಡಬಹುದು. ಮೊದಲನೆಯದಾಗಿ: ಕುವೆಂಪು ಛಂದಸ್ಸುಗಳ ಸ್ವರೂಪ ನಿರ್ವಚನ; ಇದರಲ್ಲಿ ಎರಡು ಮಾರ್ಗ ಇವೆ: 1. ಛಂಧೋ ಪರಂಪರೆ ಗಮನಿಸಿ ಇರುವ ಛಂದೋರೂಪಗಳಿಗೆ ಹೊಂದಿಕೆಯಾಗುವಂತೆ ಕುವೆಂಪು ಕವಿತೆಗಳನ್ನು ಉದಾಹರಣೆ ಸಮೇತ ಗುರ್ತಿಸಿ, ವಿಂಗಡಿಸಿ ವ್ಯಾಖ್ಯಾನಿಸುವುದು. 2. ಕುವೆಂಪು ಕವಿತೆಗಳ ಸ್ವರೂಪವನ್ನು ಗಮನಿಸಿ ಛಂದೋರೂಪಗಳನ್ನು ಗುರ್ತಿಸುವುದು ಮತ್ತು ನಾಮಕರಣ ಮಾಡುವುದು. ಮೊದಲ ವರ್ಗದಲ್ಲಿ ಕರ್ಕಿ ಬಂದರೆ, ಎರಡನೆ ವರ್ಗದಲ್ಲಿ ಕಲಬುರ್ಗಿ ಬರುತ್ತಾರೆ. ನಿರ್ವಚನ ವಿಧಾನ ಎಂದು ಇದನ್ನು ಕರೆಯಬಹುದು.

ಎರಡನೆಯದಾಗಿ: ಆಧುನಿಕ ಛಂದಸ್ಸಿನ ತತ್ವಗಳ ಮತ್ತು ಪ್ರಭಾವಗಳ ಅನ್ವೇಷಣೆ; ಕುವೆಂಪುವನ್ನು ಕೇಂದ್ರ ಆಧಾರವಾಗಿ ಇಟ್ಟುಕೊಂಡು ಒಟ್ಟಾರೆ ಆಧುನಿಕ ಛಂದಸ್ಸಿನ ಮೀಮಾಂಸೆಯ ಬಗ್ಗೆ ಚರ್ಚೆ ಇಲ್ಲಿ ಹೆಚ್ಚಾಗಿ ನಡೆದಿದೆ. ಕುವೆಂಪು ಛಂದೋರೂಪಗಳ ಮೂಲವನ್ನು ಶೋಧಿಸುವ ಕೆಲಸ ಕೂಡ ಇಲ್ಲಿ ನಡೆದಿದೆ. (ನೋಡಿ: ಟಿ.ವಿ.ವೆಂಕಟಾಚಲಶಾಸ್ತ್ರಿ ಮತ್ತು ಚಿದಾನಂದಮೂರ್ತಿ ಲೇಖನಗಳು) ತತ್ವಗಳ ಅನ್ವೇಷಣೆ, ಪ್ರೇರಣೆಗಳ ಅನ್ವೇಷಣಾ ವಿಧಾನ ಎಂದು ಇದನ್ನು ಕರೆಯಬಹುದು.

ಮೂರನೆಯದಾಗಿ: ಛಂದಸ್ಸು, ಪದಪ್ರಯೋಗ, ಭಾಷಾ ಸ್ವರೂಪದ ಸಂಬಂಧಗಳ ಚರ್ಚೆ: ಪದಗಳ ಆಯ್ಕೆ ಮತ್ತು ಸಂಯೋಜನೆ, ಭಾವಾಭಿವ್ಯಕ್ತಿಗೆ ತಕ್ಕ ಭಾಷೆಯ ಆಯ್ಕೆ ಇವು ಛಂಧೋರೂಪವನ್ನು ನಿಯಂತ್ರಿಸುತ್ತವೆ ಅನ್ನುವುದು ಇಲ್ಲಿನ ಮುಖ್ಯ ವಾದ. ಇಲ್ಲಿ ಛಂದಸ್ಸು ಮತ್ತು ಅರ್ಥ ಸಂವಹನದ ಚರ್ಚೆ ಕೂಡ ನಡೆದಿದೆ. ಓ.ಎಲ್.ಅನಂತರಾಮಯ್ಯನವರ ಬರವಣಿಗೆ ಇದಕ್ಕೆ ಉದಾಹರಣೆ. ಇದನ್ನು ಅಂತಃಸಂಬಂಧಿ ಅನ್ವೇಷಣಾ ವಿನ್ಯಾಸ ಎನ್ನಬಹುದು.

ನಾಲ್ಕನೆಯದಾಗಿ: ಛಂದೋವಿಕಾಸವನ್ನು ಗುರ್ತಿಸುವ ಚರ್ಚೆ: ಒಟ್ಟಾರೆ ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯು ಅವರ ಬರವಣಿಗೆಯಲ್ಲಿ ಕುವೆಂಪು ದೃಷ್ಟಿ ಧೋರಣೆಗಳ ಒಂದು ವಿಕಾಸವನ್ನು ಗುರ್ತಿಸುವಂತೆ ಛಂದಸ್ಸಿನಲ್ಲಿಯೂ ಕೂಡ ಒಂದು ವಿಕಾಸವನ್ನು ಗುರ್ತಿಸುವ ಪ್ರಯತ್ನ ಮಾಡಿದೆ. ಛಂದಸ್ಸಿನ ಹಿನ್ನೆಲೆಯಲ್ಲಿ ಆರಂಭದ ಹಂತ, ವಿಕಾಸದ ಹಂತ, ಮಾಗಿದ ಹಂತ ಎಂದು ಕುವೆಂಪು ಬರವಣಿಗೆಯನ್ನು ಮೂರು ಮುಖ್ಯ ಘಟ್ಟಗಳನ್ನಾಗಿ ವಿಭಾಗಿಸಿ ಇಲ್ಲಿ ರಾಮಾಯಣ ದರ್ಶನದ

ಛಂದಸ್ಸನ್ನು ಪಕ್ವ ಛಂದೋರೂಪ ಎನ್ನಲಾಗಿದೆ. ಇದನ್ನು ವಿಕಾಸವಾದಿ ದೃಷ್ಟಿ ಎನ್ನಬಹುದು. (2231) ಕಾವ್ಯದ ಶ್ರೇಷ್ಠತೆ-ಜನಪ್ರಿಯತೆ ಮತ್ತು ಛಂದಸ್ಸಿಗೂ ಕಾವ್ಯ ಸತ್ವ ಮತ್ತು ಛಂದೋರೂಪಕ್ಕೂ ಒಂದು ಅನ್ಯೋನ್ಯವಾದ ಸಂಬಂಧ ಇದೆ ಎಂದು ಈ ಛಂದೋ ಅಧ್ಯಯನಗಳು ಬಿಂಬಿಸುತ್ತವೆ.

ಈ ಪರಿಕರ ದೃಷ್ಟಿಯಲ್ಲಿ ಹಾಗೆ ಗೆರೆಕೊರೆದಂತೆ ಒಂದೇ ನೆಲೆಯಲ್ಲಿ ವಿಮರ್ಶಕರು ಇರುವುದಿಲ್ಲ. ಭಾಷೆ ಬಗ್ಗೆ ಮಾತಾಡುವಾಗ ಛಂದೋವಿಚಾರ, ಲಯ ವಿಚಾರ, ಮೀಮಾಂಸೆ, ಅಭಿವ್ಯಕ್ತಿ ವಿಧಾನ ಎಲ್ಲ ಚರ್ಚೆಗೆ ಬರುತ್ತವೆ. ಹಾಗೇ ಈ ಚರ್ಚೆಯಲ್ಲಿ ವಿಮರ್ಶಕರಲ್ಲಿ ಒಮ್ಮತ ಅನ್ನುವುದು ಇಲ್ಲವೇ ಇಲ್ಲ. ನಾಟಕಗಳ ಕುರಿತಾಗಿ ಹೇಳುವಾಗ ಕೆಲವರು ಭಾಷೆ ಮತ್ತು ಛಂದಸ್ಸು ಎರಡನ್ನೂ ಆಧರಿಸಿ ಅವು ನಾಟಕಗಳಲ್ಲ ಕಾವ್ಯಗಳೇ ಅಂದರೆ. ನಾಟಕಗಳನ್ನು ರಂಗಗೀತೆಗಳು, ಖಂಡಕಾವ್ಯಗಳು, ಕಥನಗೀತೆಗಳು ಅಂತೆಲ್ಲ ಒಬ್ಬೊಬ್ಬರು ಒಂದೊಂದು ರೀತಿ ಹೇಳಿದ್ದಾರೆ. ಆದರೆ ಕರ್ಕಿ ಜಲಗಾರ ನಾಟಕವನ್ನು ಗೀತರೂಪಕ ಎಂದು ಕರೆದಿದ್ದಾರೆ. ಗೀತರೂಪಕವನ್ನು ಕನ್ನಡದಲ್ಲಿ ಮೊದಲಿಗೆ ಪ್ರಯೋಗ ಮಾಡಿದವರು ಕುವೆಂಪು ಎಂದು ಹೇಳುತ್ತಾರೆ. ಕುವೆಂಪು ಛಂದಸ್ಸನ್ನು ಕೆಲವರು ಮಾತ್ರಾಲಯದಲ್ಲಿ ಗುರ್ತಿಸಿದರೆ(ಕರ್ಕಿ, ಚಿ.ಮೂ.) ಇನ್ನು ಕೆಲವರು ಅಂಶಿಲಯದಲ್ಲಿ (ಕಲಬುರ್ಗಿ) ಗುರ್ತಿಸುತ್ತಾರೆ. ಮಹಾಕಾವ್ಯದ ಛಂದಸ್ಸಿನ ಬಗೆಗೂ ಅಷ್ಟೆ ಅದಕ್ಕೆ ನಾಮಕರಣ ಮಾಡುವಾಗ ಮಹಾಛಂದಸ್ಸು, ಮುಕ್ತಛಂದಸ್ಸು, ಸರಳರಗಳೆ, ಸಂಕೀರ್ಣ ರಗಳೆ ಇತ್ಯಾದಿ ಹೆಸರುಗಳಿವೆ. ಛಂದೋಬಳಕೆಯ ಬಗೆಗೂ ವಿಮರ್ಶೆಯಲ್ಲಿ ಒಮ್ಮತದ ಅಭಿಪ್ರಾಯ ಇಲ್ಲ. ಅದು ಛಂದಸ್ಸಿನ ಬಗೆಗಾಗಲೀ, ಭಾಷೆಯ ಬಗೆಗಾಗಲೀ, ಇನ್ನಾವುದೇ ವಿಮರ್ಶೆಯ ನಿಲುವುಗಳ ಬಗೆಗಾಗಲೀ, ಭಿನ್ನಾಭಿಪ್ರಾಯಗಳು ಇರುವುದೇ ನಮ್ಮ ವಿಮರ್ಶೆಯ ಲಕ್ಷಣ. ಭಿನ್ನಾಬಿನ್ನತೆಯು ನಮ್ಮ ವಿಮರ್ಶೆಯ ಒಂದು ಲಕ್ಷಣ. ವಿಮರ್ಶಾದಾರಿಗಳಲ್ಲಿ ಅಜಮಾಸು ಸಾಮ್ಯತೆ ಮತ್ತು ನಿಲುವುಗಳಲ್ಲಿ ಭಿನ್ನತೆ ಇರುವುದರಿಂದ ಈ ಲಕ್ಷಣವನ್ನು ಭಿನ್ನಾಭಿನ್ನತೆ ಎಂದು ಕರೆಯಬಹುದು.

**5.1.1.3. ಮೀಮಾಂಸಾ ಪರಿಕರಗಳ ಚರ್ಚೆ**

ಪರಿಕರ ದೃಷ್ಟಿಯಲ್ಲಿನ ಇನ್ನೊಂದು ಮುಖ್ಯ ವಲಯವೆಂದರೆ ಬಂಧ, ಶಿಲ್ಪ, ವಿನ್ಯಾಸ, ಶೈಲಿ, ತಂತ್ರ, ಉಪಮೆ, ರೂಪಕ, ಪ್ರತಿಮೆ, ಮಹೋಪಮೆ ಇತ್ಯಾದಿ ಮೀಮಾಂಸಾ ದೃಷ್ಟಿಯ ವಲಯ. ಈ ವಲಯದಲ್ಲಿ ಛಂದಸ್ಸು ಭಾಷೆಗಳನ್ನು ಒಳಗೊಂಡಂತೆಯೇ ವಿಮರ್ಶೆಯು ಬೆಳೆದಿದೆ. ಭಾಷೆ, ಛಂದಸ್ಸುಗಳನ್ನು ಹೊರತುಪಡಿಸಿದ ಪರಿಕರ ದೃಷ್ಟಿಯೇ ನಮ್ಮಲ್ಲಿ ಇಲ್ಲ. ಮೀಮಾಂಸಾ ನೆಲೆಯಲ್ಲಿ ತೌಲನಿಕ ಕ್ರಮ, ಆಸ್ವಾದನಾ ಕ್ರಮ, ನಿರ್ವಚನ ಕ್ರಮಗಳನ್ನು ಅನುಸರಿಸಲಾಗಿದೆ.

ಇಲ್ಲಿನ ಬಹುಪಾಲು ಚರ್ಚೆಯು ಕುವೆಂಪು ಸಾಹಿತ್ಯವನ್ನು ಪರಿಕರ ದೃಷ್ಟಿಯಿಂದ ವಿವರಿಸುವ, ಆಸ್ವಾದಿಸುವ ವಿವರಣಾತ್ಮಕ ವಿಮರ್ಶೆಯ ಧಾಟಿಯನ್ನು ಹಿಡಿದಿದೆ. ಕುವೆಂಪು ಕಥನವನ್ನು ಅವರು ಬಳಸಿರುವ ಉಪಮೆ, ಮಹೋಪಮೆಗಳ ಉದಾಹರಣೆಗಳ ಮೂಲಕ ರಮ್ಯವಾಗಿ, ಭಾವಪೂರ್ಣವಾಗಿ ಓದುಗರಿಗೆ ತಲುಪಿಸುವ ಕ್ರಮಗಳನ್ನು ಇಲ್ಲಿ ಬಳಸಲಾಗಿದೆ. (586) ಸರಿಸುಮಾರು ಇದೇ ಧಾಟಿಯನ್ನು ದೇಜಗೌ, ಎಂ.ಎನ್.ಲಿಂಗಪ್ಪ, ಎಂ.ವೀ.ಸೀ, ಎಚ್.ತಿಪ್ಪೇರುದ್ರಸ್ವಾಮಿ, ಕೆ.ವೆಂಕಟರಾಮಪ್ಪ ಇವರೆಲ್ಲ ಅನುಸರಿಸಿದ್ದಾರೆ.

ಪರಿಕರ ದೃಷ್ಟಿಯಲ್ಲಿ ಮೀಮಾಂಸಾ ಪರಿಕರಗಳನ್ನು ಕವಿಯು ಹೇಗೆಲ್ಲ ಬಳಸಿಕೊಂಡಿದ್ದಾನೆ ಎಂದು ಸಾಹಿತ್ಯವನ್ನು ವಿಶ್ಲೇಷಿಸಿ ತೋರುವ ಜೊತೆಗೇ ಪರಿಕರಗಳ ಮೂಲಕ ಸಾಹಿತ್ಯವನ್ನು ವ್ಯಾಖ್ಯಾನಿಸುವ-ವಿಶ್ಲೇಷಿಸುವ ಯತ್ನಗಳೂ ನಡೆದಿವೆ. ಕಾವ್ಯದ ರಸ-ಭಾವಗಳನ್ನು ವಿಮರ್ಶಕರು ತಾವು ಆಸ್ವಾದಿಸುತ್ತ, ಗುರ್ತಿಸುತ್ತ; ಹೆಸರಿಸುತ್ತ ವ್ಯಾಖ್ಯಾನಿಸುವ ಯತ್ನಗಳು ಇಲ್ಲಿ ನಡೆದಿವೆ. ಕುವೆಂಪು ಕಾವ್ಯದಲ್ಲಿ ಅನೇಕ ರಸಭಾವಗಳು ಇವೆಯಾದರೂ ಅಲ್ಲಿ ಪ್ರಧಾನವಾಗಿ ಇರುವ ಸ್ಥಾಯಿಭಾವವು ವಾತ್ಸಲ್ಯಭಾವ ಎಂಬ ಪ್ರಮೇಯವು ಇಲ್ಲಿ ಮಂಡಿತವಾಗಿದೆ. ಇಂತಹ ಕಡೆ ರಸನಿಷ್ಠ ವಿಮರ್ಶೆಗಳು, ರಸನಿಷ್ಠ ಅಧ್ಯಯನ ಮಾರ್ಗಗಳು ಆಚರಣೆಗೆ ಗುರಿಯಾಗಿವೆ. (2761)

1. ಉಪಮೆ ರೂಪಕಗಳು ಕವಿ ಸಂವೇದನೆಯ ಸೂಕ್ಷ್ಮತೆ ಮತ್ತು ತೀಕ್ಷ್ಣತೆಯನ್ನು ತಿಳಿಸುತ್ತವೆ. 2. ರೂಪಕವು ಕಾಲದೇಶವನ್ನು ಕೂಡಿಸುವ ಅಂಟು 3. ಉಪಮಾ ರೂಪಕಗಳ ಸೃಷ್ಟಿಯನ್ನು ಯಾರೂ ಅನುಸರಿಸಲು ಸಾಧ್ಯವಿಲ್ಲ. ಅದು ವ್ಯಕ್ತಿ, ವಿಶಿಷ್ಟವಾದುದು; ಅದು ಲೇಖಕನ ಸ್ವಂತ ಸತ್ವ 4. ಅಭಿವ್ಯಕ್ತಿ

ಕ್ರಮವೇ ಶೈಲಿ ಎಂಬ ತತ್ವಗಳನ್ನೂ ಇಲ್ಲಿ ಮಂಡಿಸಲಾಗಿದೆ. (2239) (586–ಪುಟ: 117) ಇಲ್ಲಿನ ಎರಡನೇ ತತ್ವವು ಸ್ವಲ್ಪ ಚರ್ಚಾಸ್ಪದವಾದುದು. ಇಲ್ಲಿ ಆಶಯ ಮತ್ತು ದರ್ಶನಧ್ವನಿಗಳನ್ನು ಒಟ್ಟು ಕೃತಿಯ ನೆಲೆಯಲ್ಲಿ ನೋಡಲಾಗಿದೆ. ಒಟ್ಟಾರೆ ಕೃತಿಯೊಂದನ್ನು ರೂಪಕವಾಗಿ ನೋಡಬಹುದಾದ ಸಾಧ್ಯತೆಯೂ ಇಲ್ಲಿ ಪ್ರಕಟವಾಗಿದೆ. (1624–ಪುಟ: 288) ಬೇಂದ್ರೆ, ಪುತಿನ, ಕುವೆಂಪು ಅವರ ಕೊಳಲಿನ ಪ್ರತಿಮೆಗಳ ತೌಲನಿಕ ಚಿಂತನೆಯೂ ಇಲ್ಲಿ ನಡೆದಿದೆ. (1654) ಕುವೆಂಪು ಅವರ ತತ್ವ ಮತ್ತು ಆಚರಣೆಗಳ ನಡುವಿನ ಸಂಬಂಧ; ಸಾಮಾಜಿಕ–ಸಾಂಸ್ಕೃತಿಕ ದೃಷ್ಟಿ ಧೋರಣೆಗಳು ಮತ್ತು ಮೀಮಾಂಸಾ ಪರಿಕರಗಳ ಸಂಬಂಧ ಇತ್ಯಾದಿಗಳು ಇಲ್ಲಿ ಆದ್ಯತೆಯನ್ನು ಪಡೆದುಕೊಂಡಿಲ್ಲ.

ಕುವೆಂಪು ಕಾವ್ಯ ಶೈಲಿಯನ್ನು 'ದೃಶ್ಯ ಪ್ರತಿಮಾ ಶಿಲ್ಪ', ಮಾಲೋಪಮಾ ವಿಧಾನ, ಪ್ರಸನ್ನ ಶೈಲಿ, ಸಾಲಂಕೃತ ಶೈಲಿ, ಶಕ್ತ ಶೈಲಿ, ದರ್ಶನ ಧ್ವನಿಯ ಧಾಟಿ, ಇತ್ಯಾದಿಯಾಗಿ ನಿರ್ವಚಿಸಲಾಗಿದೆ. ಕುವೆಂಪು ಕಥನವನ್ನು ಚರ್ಚಿಸುವಾಗ ನಮ್ಮ ವಿಮರ್ಶೆಯು ಬಂಧ, ಶಿಲ್ಪ, ಆಶಯ, ಕೇಂದ್ರ ಪ್ರಜ್ಞೆ, ವಸ್ತು, ಸಂವಿಧಾನ, ತಂತ್ರ, ಭಾಷೆ, ಶೈಲಿ, ನಿರೂಪಣೆ, ವಿನ್ಯಾಸ, ಧ್ವನಿ ಶಕ್ತಿ ಇತ್ಯಾದಿ ವಲಯಗಳು ಮತ್ತು ಪರಿಭಾಷೆಗಳು ಚರ್ಚಿತವಾಗಿವೆ. ಇವೆಲ್ಲವೂ 1. ಚರ್ಚೆಯ ವಲಯಗಳೂ ಮತ್ತು 2. ಪರಿಭಾಷೆಗಳೂ ಆಗಿರುವುದೇ ಈ ವಿಮರ್ಶೆಯ ಲಕ್ಷಣ. ನವ್ಯರು, ಆಪ್ತರು ಮತ್ತು ಅಲಿಪ್ತರಲ್ಲಿ ಕುವೆಂಪು ಕಾದಂಬರಿಗಳನ್ನು ಕೇಂದ್ರ ಪ್ರಜ್ಞೆ, ಶೈಲಿ, ಸಂವಿಧಾನ, ಬಂಧ, ಆಶಯ, ಭಾಷೆಗಳ ನೆಲೆಯಲ್ಲಿ ಟೀಕಿಸುವ ಮತ್ತು ಸಮರ್ಥಿಸುವ ಎರಡೂ ಕಾರ್ಯಗಳು ನಡೆದಿವೆ. ಈ ಹಿನ್ನೆಲೆಯಲ್ಲಿ ಲೇಖಕನ ಸೋಲು ಗೆಲುವುಗಳನ್ನು ನಮ್ಮ ವಿಮರ್ಶೆಯು ಚರ್ಚಿಸುತ್ತ ಬಂದಿದೆ. ಈ ಚರ್ಚೆಯಲ್ಲಿ ಭಿನ್ನ ತತ್ವಗಳ ಸಂಘರ್ಷವು ದಾಖಲಾಗಿದೆ. (ಈ ವಿವರಗಳನ್ನು ವಿವಿಮರ್ಶೆಯಲ್ಲಿ ಚರ್ಚಿಸಿದೆ.) ಈ ವಿಮರ್ಶೆಯ ವಲಯಗಳ ನಡುವಿನ ಸಂವಾದದಲ್ಲಿ ಪ್ರಕಾರ ಮೀಮಾಂಸೆಯೊಂದರ ಹುಡುಕಾಟವೂ ನಿರಂತರವಾಗಿ ನಡೆದಿದೆ.

ಉಪಮೆ, ಪ್ರತಿಮೆ, ರೂಪಕ ಇತ್ಯಾದಿ ಮೀಮಾಂಸಾ ಪರಿಕರಗಳ ಬಗ್ಗೆ ಚರ್ಚಿಸುವಾಗ ವಿಮರ್ಶೆಯು ಬಹುಪಾಲು ಕೃತಿಕೇಂದ್ರಿತವಾಗಿದೆ. ರೂಪನಿಷ್ಟವಾಗಿದೆ. ಕಲಾವಂತಿಕೆ, ಸಹಜತೆ, ಉತ್ತಮ ಕಟ್ಟಡ ನಿರ್ಮಾಣ, ಸುಂದರವಾದ ಭಾವ, ಲಯ ಅರ್ಥ, ಧ್ವನಿಗಳನ್ನು ಓದುಗನಿಗೆ ತಲುಪಿಸುವ ಕ್ರಮ, ಲೇಖಕನು ಬಳಸುವ ಉಪಮೆ–ಮಹೋಪಮೆಗಳಲ್ಲಿ ಇರುವ ಅವನ ವ್ಯುತ್ಪತ್ತಿಜ್ಞಾನ ಮತ್ತು ಪರಿಸರಗಳ ಪಾತ್ರ ಇವನ್ನೆಲ್ಲ ಇಲ್ಲಿ ಚರ್ಚಿಸಲಾಗಿದೆ. ಕುವೆಂಪು ಅವರ ದರ್ಶನಧ್ವನಿ ಮತ್ತು ಅವರ ಕೃತಿಯ ಆಶಯಗಳು ಎರಡೂ ಒಂದೇ, ಇವರ ಆಶಯ ಮತ್ತು ಆಕೃತಿಗಳು ಎರಡೂ ಒಂದೇ ಎಂಬ ನಿಲುವುಗಳೂ ಇಲ್ಲಿ ಪ್ರಕಟವಾಗಿವೆ. (1417–ಪುಟ: 383). ಕುವೆಂಪು ಅವರ ಮಹೋಪಮೆಗಳನ್ನು ನಿರ್ವಚಿಸುವ ಮತ್ತು ಸೋದಾಹರಣಪೂರ್ವಕವಾಗಿ ವಿವರಿಸುವ ಹಾಗೂ ಅವುಗಳು ಆಶಯದ ಅಭಿವ್ಯಕ್ತಿಗೆ ಹೇಗೆ ದುಡಿದಿವೆ ಎಂದೆಲ್ಲ ಇಲ್ಲಿ ಚರ್ಚಿಸಲಾಗಿದೆ. ಕೃತಿಯ ಅಭಿವ್ಯಕ್ತಿ ಕ್ರಮ–ಶೈಲಿ ಮತ್ತು ಮಹೋಪಮೆಗಳ ನಡುವಿನ ಸಂಬಂಧಗಳೂ ಇಲ್ಲಿ ಚರ್ಚಿತವಾಗಿವೆ. (1832–ಪುಟ: 148) ಮಹೋಪಮೆಗಳಲ್ಲಿ ಸ್ವತಂತ್ರ ಭಾವಗೀತೆಗಳಾಗುವ, ಸ್ವತಂತ್ರ ವರ್ಣನಾ ಚಿತ್ರಗಳಾಗುವ ಸಾಧ್ಯತೆ ಇದೆ ಎಂದೂ ಇಲ್ಲಿ ಬಣ್ಣಿಸಲಾಗಿದೆ. ಮೀಮಾಂಸಾ ದೃಷ್ಟಿಯ ಚರ್ಚೆಗಳ ಬಹುಪಾಲು ಭಾಗವು ಸಾಹಿತ್ಯದ ಬಿಡಿ ಭಾಗಗಳ ಕುರಿತ ಚರ್ಚೆಗೇ ಮೀಸಲಾಗಿದೆ. ಕೆಲವು ಕಡೆ ಮಾತ್ರ ಇಡಿ ಕೃತಿಗಳನ್ನು ರೂಪಕಗಳಂತೆ, ಪ್ರತಿಮೆ, ಪ್ರತೀಕಗಳಂತೆ ಕಂಡು ಚರ್ಚಿಸಿರುವ ಉದಾಹರಣೆಗಳು ಇವೆ. ಹೀಗಾಗಿ ಇಲ್ಲಿ ತೌಲನಿಕ ವಿಧಾನ, ನಿರ್ವಚನ ವಿಧಾನ, ಒಳನೋಟವಾದಿ ಮಾದರಿ, ಅಂತಃಸಂಬಂಧಗಳ ಅನ್ವೇಷಣೆ, ತೀರ್ಪು ಅಥವಾ ತೀರ್ಮಾನ ನೀಡುವಂತಹ ಮೌಲ್ಯೀಕರಣ ಮಾದರಿ, ಧ್ವನಿ–ಅರ್ಥಸಾಧ್ಯತೆಗಳ ಚರ್ಚೆಯ ನವೀನ ವ್ಯಾಖ್ಯಾನ ಮಾದರಿಗಳು ಹೀಗೆ ಹಲವು ರೀತಿಯ ವಿಮರ್ಶಾ ವಿನ್ಯಾಸಗಳು ಪ್ರಕಟವಾಗಿವೆ.

**5.1.2. ಪರಿಸರ ದೃಷ್ಟಿ**

ಕುವೆಂಪು ಸಾಹಿತ್ಯವನ್ನು ನೋಡಿರುವ ಹಲವು ದೃಷ್ಟಿಗಳಲ್ಲಿ ಪರಿಸರ ದೃಷ್ಟಿಯೂ ಒಂದು. ಪರಿಸರವೆಂದರೆ ಪ್ರಾಣಿಪರಿಸರ, ಪಕ್ಷಿಪರಿಸರ, ಜೀವಪರಿಸರ, ಕಾಡು–ನಾಡು ಎಂದು ಭಾವಿಸಿದ ಖಂಡ ದೃಷ್ಟಿಯ ವಿಮರ್ಶೆಗಳೂ; ಪರಿಸರವೆಂದರೆ ಒಟ್ಟು ಮಾನವರಹಿತ ಪ್ರಕೃತಿ ಎಂಬ ಪ್ರತ್ಯೇಕಿತ ದೃಷ್ಟಿಯ ವಿಮರ್ಶೆಗಳೂ; ಪರಿಸರವೆಂದರೆ ಪರಿಸರ ವ್ಯವಸ್ಥೆ–ಜೀವಾಜೀವಗಳ ಒಟ್ಟು ವ್ಯವಸ್ಥೆ ಎಂಬ ಅಖಂಡ

ದೃಷ್ಟಿಯ ವಿಮರ್ಶೆಗಳೂ ಇಲ್ಲಿ ಜನಿಸಿವೆ. ಈ ದೃಷ್ಟಿಯ ವಿಮರ್ಶೆಯಲ್ಲಿ ಮನುಷ್ಯನ ಬದುಕು ಮತ್ತು ನಿಸರ್ಗದ ನಡುವಿನ ಪ್ರಭಾವ-ಸಂಬಂಧಗಳನ್ನು ತಿಳಿಯುವ; ಜನಜೀವನ ವಿಧಾನದ ವಾಸ್ತವವಾದಿ ಚರಿತ್ರೆಯನ್ನು ತಿಳಿಯುವ; ಪ್ರಕೃತಿ ಮತ್ತು ಸಂಸ್ಕೃತಿಗಳ ನಡುವಣ ಸಂಬಂಧಗಳನ್ನು ತಿಳಿಯುವ; ಆಧುನಿಕತೆಯ ದಾಳಿ ಮತ್ತು ಸಮಾಜದ ಗತಿಶೀಲತೆಗಳನ್ನು ಗುರ್ತಿಸಿಕೊಳ್ಳುವ; ಕೃತಿಕಾರನ ದೃಷ್ಟಿ, ಧೋರಣೆ, ಆಲೋಚನಾ ಕ್ರಮ, ತಾತ್ವಿಕ-ದಾರ್ಶನಿಕ ನಿಲುವುಗಳು ಮತ್ತು ನಿಸರ್ಗದ ನಡುವಿನ ಸಂಬಂಧಗಳನ್ನು ಅರಿಯುವ; ಪರಿಸರವನ್ನು ಕವಿ ಚಿತ್ರಿಸಿರುವ, ವರ್ಣಿಸಿರುವ ರೀತಿ ಹೇಗಿದೆ ಎಂದು ತಿಳಿಯುವ; ಕಾವ್ಯ ಮಾದರಿಗಳನ್ನು ಗುರ್ತಿಸಿಕೊಳ್ಳುವ, ನಿಸರ್ಗ ಮತ್ತು ಸಾಹಿತ್ಯದ ಅಭಿವ್ಯಕ್ತಿ ಕ್ರಮಗಳ ನಡುವಣ ಸಂಬಂಧಗಳನ್ನು ವ್ಯಾಖ್ಯಾನಿಸುವ. ಹೀಗೆ ಹತ್ತು ಹಲವು ರೀತಿಯ ಯತ್ನಗಳು ಇಲ್ಲಿ ನಡೆದಿವೆ.

ಪರಿಸರವು ಸಾಹಿತ್ಯ ಸೃಷ್ಟಿಗೆ ಒದಗಿ ಬರುವ ಆಕರ ಮತ್ತು ಪರಿಕರ ಎಂದು ನಮ್ಮ ವಿಮರ್ಶೆಯು ಭಾವಿಸಿದೆ. ಹಾಗೆ ಭಾವಿಸಿ ಕುವೆಂಪು ಅದನ್ನು ಪರಿಕರ ಮತ್ತು ಆಕರವಾಗಿ ಹೇಗೆ ಬಳಸಿಕೊಂಡಿದ್ದಾರೆ ಎಂದು ವಿಶ್ಲೇಷಿಸಲು ಯತ್ನಿಸಿದೆ. ಕುವೆಂಪು ನಿಸರ್ಗ ಬರವಣಿಗೆಯನ್ನು ಕನ್ನಡ ಸಾಹಿತ್ಯ ಪರಂಪರೆ, ಇಂಗ್ಲಿಷ್ ರಮ್ಯತೆ ಮತ್ತು ವಿಶ್ವದ ಅನ್ಯ ಸಾಹಿತ್ಯಗಳ ಜೊತೆಗೆ ತುಲನೆ ಮಾಡುವ ಕ್ರಿಯೆಯೂ ಇಲ್ಲಿ ಜರುಗಿದೆ. ಇದೇ ದೃಷ್ಟಿಯು ಪ್ರೇರಣೆ-ಪ್ರಭಾವಗಳ ಅನ್ವೇಷಣೆಯಾಗಿಯೂ ವಿಸ್ತರಣೆಯಾಗಿದೆ. ಪ್ರಕೃತಿ ಮತ್ತು ಸಂಸ್ಕೃತಿಗಳಲ್ಲಿ ಆಗಿರುವ ಗುರುತರವಾದ ಬದಲಾವಣೆಗಳನ್ನು ಗುರ್ತಿಸಿಕೊಳ್ಳುವ ಮತ್ತು ಅದರ ಕಾರಣ, ಪರಿಣಾಮ, ಪರಿಹಾರಗಳನ್ನು ಚಿಂತಿಸುವ ಕೆಲಸಗಳನ್ನು ಈ ದೃಷ್ಟಿಯ ವಿಮರ್ಶೆಯು ಕೈಗೊಂಡಿದೆ. ಇದೇ ಪ್ರವೃತ್ತಿಯ ಮುಂದುವರಿದ ರೂಪವೆಂಬಂತೆ ಇಂದಿನ ಸಮಾಜವು ಎದುರಿಸುತ್ತಿರುವ ನಿಸರ್ಗ ಸಂಬಂಧಿ ಬಿಕ್ಕಟ್ಟುಗಳಿಗೆ ಕುವೆಂಪು ಸಾಹಿತ್ಯದಿಂದ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವೇ ಎಂಬ ಚಿಂತನೆಗಳನ್ನೂ ನಡೆಸಿದೆ. ಇದೇ ಇನ್ನೊಂದು ನೆಲೆಯಲ್ಲಿ ಪ್ರಸ್ತುತತೆ ಮತ್ತು ಉಪಯುಕ್ತತೆಗಳ ಚರ್ಚೆಯಾಗಿಯೂ ಬೆಳೆದಿದೆ, (705-ಪುಟ: 24)

ಸಾಹಿತ್ಯವು ತನ್ನ ವಿಮರ್ಶೆಯ ಮಾನದಂಡ ಮತ್ತು ಮಾರ್ಗಗಳನ್ನು ತಾನೇ ರೂಪಿಸುತ್ತದೆ ಎಂಬ ತತ್ವವು ಈ ದೃಷ್ಟಿಯ ವಿಮರ್ಶೆಯಲ್ಲಿ ಬಹು ಚೆನ್ನಾಗಿ ಆಚರಣೆಗೊಂಡಿದೆ. ಇಲ್ಲಿ ವಿಮರ್ಶೆಯ ದೃಷ್ಟಿಕೋನ, ತಾತ್ವಿಕತೆ, ವಿಧಾನಗಳನ್ನು ಕುವೆಂಪು ಸಾಹಿತ್ಯವು ರೂಪಿಸಿದೆ. ಉದಾಹರಣೆಗೆ ಉಪಮೆ, ರೂಪಕ, ಪ್ರತಿಮೆಗಳ ಆಕರವಾಗಿ ಪರಿಸರ (722), ದರ್ಶನ ಮತ್ತು ಸೌಂದರ್ಯಾನುಭವ ದೃಷ್ಟಿಯಲ್ಲಿ ಪರಿಸರ (2570), ಕುವೆಂಪು ಮತ್ತು ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ (898), ಇಂಥ ವಿಮರ್ಶೆಯ ಸ್ವರೂಪವನ್ನು, ವಿಮರ್ಶೆಯ ಆಲೋಚನಾ ವಿಧಾನ, ದಿಕ್ಕು ದೆಸೆಗಳನ್ನು ಕುವೆಂಪು ಸಾಹಿತ್ಯವು ರೂಪಿಸಿದೆ.

ಪ್ರಕೃತಿಯನ್ನು ತನ್ನ ಸಾಹಿತ್ಯ ಸಾಮಗ್ರಿಯನ್ನಾಗಿ ಲೇಖಕ ಬಳಸುತ್ತಾನೆ ಎಂದು ಪರಿಸರ ದೃಷ್ಟಿಯು ನಂಬುವಂತೆಯೇ (757) ಈ ದೃಷ್ಟಿಯು ಪರಿಸರವು ಸಾಹಿತ್ಯದ ವಸ್ತು ಅಲ್ಲ. ಕೃತಿಕಾರನು ಪರಿಸರದಿಂದ ಪಡೆದ ಅನುಭವವನ್ನು ಭಾಷೆಯಲ್ಲಿ ಹಿಡಿದಿಡಲು ಯತ್ನಿಸುವುದರಿಂದ ಕೃತಿಕಾರನ ಅನುಭವವೇ ನಿಜವಾದ ವಸ್ತು ಎಂದೂ ವ್ಯಾಖ್ಯಾನಿಸುತ್ತದೆ. (750) ಹೀಗೆ ಇಲ್ಲಿ ಪರಿಸರವನ್ನು ವಸ್ತು ಸಾಮಗ್ರಿಯ ಆಕರವನ್ನಾಗಿ ಮತ್ತು ಅನುಭವದ್ರವ್ಯ ಅಥವಾ ಸ್ಫೂರ್ತಿವಲಯನ್ನಾಗಿ ಗ್ರಹಿಸುವ ಎರಡೂ ನಂಬುಗೆಗಳಿವೆ. ಹಾಗಾಗಿ ಇಲ್ಲಿ ಕುವೆಂಪು ಕಾವ್ಯವನ್ನು ಪ್ರಕೃತಿಯ ಚಿತ್ರಣ, ಪರಿಸರದ ವರ್ಣನೆ ಎಂದು ಭಾವಿಸುತ್ತಲೆ ವ್ಯಕ್ತಿತ್ವದ ಅಭಿವ್ಯಕ್ತಿ ಎಂದೂ ನಮ್ಮ ವಿಮರ್ಶೆಯು ಭಾವಿಸುತ್ತದೆ. (898-ಪುಟ: 125) ವ್ಯಕ್ತಿತ್ವದ ಅಭಿವ್ಯಕ್ತಿ ಎಂದರೆ ಸ್ವ ಅನುಭವದ ಅಭಿವ್ಯಕ್ತಿ ಎಂದೂ ಭಾವಿಸುವ ಈ ವಿಮರ್ಶೆಯು ಕುವೆಂಪು ಅವರಲ್ಲಿ ನಿಸರ್ಗದ ಅನುಭವವು ಕೇವಲ ಐಂದ್ರಿಯಿಕ ಅನುಭವವಾಗದೆ, ಆನಂದಾನುಭವ ಅಷ್ಟೇ ಆಗದೆ ಅದು ಆಧ್ಯಾತ್ಮಿಕ ಅನುಭವ, ತನ್ಮಯತೆ-ಉನ್ಮತ್ತತೆ-ಏಕಾಗ್ರತೆ-ಲೀನತೆಗಳು ಉಳ್ಳ ನಿಸರ್ಗಾನುಭಾವ ಆಗಿ ಕಾಣಿಸಿಕೊಳ್ಳುತ್ತದೆ ಎಂದೂ ವ್ಯಾಖ್ಯಾನಿಸುತ್ತದೆ. (750-ಪುಟ: 84) ತನ್ನದೇ ವಸ್ತು ಸಾಮಗ್ರಿಯನ್ನು ಲೇಖಕ ನಿರ್ಮಿಸುವುದು ಮಾತ್ರ ಸ್ವೋಪಜ್ಞತೆ ಅಲ್ಲ, ಅನುಭವದ ಅಭಿವ್ಯಕ್ತಿ ಕ್ರಮವೇ ಲೇಖಕನ ವಿಶಿಷ್ಟತೆ ಮತ್ತು ಸ್ವೋಪಜ್ಞತೆ ಎಂದು ಈ ದೃಷ್ಟಿಯು ಭಾವಿಸುತ್ತದೆ. ಈ ಭಾವನೆಯಲ್ಲಿ ಲೇಖಕನು ತನ್ನ ಅನುಭವವನ್ನು ಅಭಿವ್ಯಕ್ತಿಸಲು ಆಯ್ಕೆ ಮಾಡಿಕೊಳ್ಳುವ ಅಭಿವ್ಯಕ್ತಿ ಕ್ರಮಕ್ಕೆ ಇರುವ ಮಿತಿಗಳನ್ನೇ ಲೇಖಕನ ಮಿತಿಗಳು ಎಂದು ಸಮೀಕರಿಸಿ ಹೇಳುವ ಅಪಾಯ ಇರುತ್ತದೆ. ಇಂಥ ಅಪಾಯಗಳನ್ನು ನಮ್ಮ ವಿಮರ್ಶೆಯು ಎದುರಿಸಿದೆ. ಇಂತಹ ವಿಮರ್ಶೆಯನ್ನು ವ್ಯಾಖ್ಯಾನ ಮಾದರಿ ಎಂದು ಕರೆಯಬಹುದು. ಈ ಮಾದರಿಯಲ್ಲಿ ಭಿನ್ನ ಭಿನ್ನ ರೀತಿಯಲ್ಲಿ ಸಾಹಿತ್ಯ-ಸಾಹಿತ್ಯ ಪ್ರಸಂಗಗಳ ಅರ್ಥಸಾಧ್ಯತೆಗಳನ್ನು; ಧ್ವನಿಶಕ್ತಿ ಸಾಧ್ಯತೆಗಳನ್ನು ವ್ಯಾಖ್ಯಾನಿಸುವ ಪರಿಕಲ್ಪಿಸುವ

ಕೆಲಸ ನಡೆಯುತ್ತಿರುತ್ತದೆ. ಇಲ್ಲಿ ಕೆಲವೊಮ್ಮೆ ವಿಮರ್ಶಕನ ದೃಷ್ಟಿಗಳ ಅನ್ವಯೀಕರಣವೂ ನಡೆಯುತ್ತಿರುತ್ತದೆ.

ಲೇಖಕನ ಕೃತಿಯ ತಾತ್ವಿಕತೆಗಳನ್ನು ಕಂಡುಕೊಳ್ಳುವ ಒಂದು ಮಾರ್ಗವನ್ನಾಗಿ ಪರಿಸರ ದೃಷ್ಟಿಯನ್ನು ನಮ್ಮ ವಿಮರ್ಶೆಯು ಬಳಸಿದೆ. ಕೃತಿಯ ಬಗೆಗೆ ಮತ್ತು ಲೇಖಕನ ಬಗೆಗೆ ತಮ್ಮದೇ ನಿಲುವುಗಳನ್ನು ತೆಗೆದುಕೊಳ್ಳುವ ಒಂದು ವಿಶ್ಲೇಷಣಾ ವಿಧಾನವಾಗಿ ಈ ದೃಷ್ಟಿಯು ನಮ್ಮಲ್ಲಿ ಬಳಕೆಯಾಗಿದೆ. (705–ಪುಟ: 72–103) ಸಾಂಸ್ಥಿಕ ಧರ್ಮವನ್ನು ಕುವೆಂಪು ನಿರಾಕರಿಸಿ ಅದಕ್ಕೆ ಪರ್ಯಾಯವಾಗಿ ನಿಸರ್ಗವನ್ನೇ ಧರ್ಮವನ್ನಾಗಿ ಸಾಂಸ್ಥೀಕರಿಸಲು ಯತ್ನಿಸಿದ್ದಾರೆ ಎಂದು ಈ ದೃಷ್ಟಿಯು ತಿಳಿಯುತ್ತದೆ. ನಿಸರ್ಗದ ದೈವೀಕರಣ, ಜೀವಾರೋಪಣ, ಆಧ್ಯಾತ್ಮೀಕರಣ ಮತ್ತು ದಾರ್ಶನಿಕತೆಗಳನ್ನು ಒಟ್ಟಾಗಿ ಸೇರಿಸಿ 'ಕುವೆಂಪು ನಿಸರ್ಗಧರ್ಮ' ಎಂಬಂತೆ ಈ ದೃಷ್ಟಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಸಾಹಿತ್ಯದಲ್ಲಿನ ಅರ್ಥಸಾಧ್ಯತೆಗಳನ್ನು ತೆರೆದು ತೋರಿಸುವ ಕೆಲಸವನ್ನು ವಿಮರ್ಶೆಯು ನಿರ್ವಹಿಸಬೇಕು ಸಾಹಿತ್ಯದಲ್ಲಿ ನೇರವಾಗಿ ಪ್ರತಿಪಾದಿತವಾಗಿರುವ ಜೀವನ ದೃಷ್ಟಿ ಮತ್ತು ಪರೋಕ್ಷವಾಗಿ ಪ್ರತಿಪಾದಿತವಾಗಿರುವ ಜೀವನ ತತ್ವಗಳನ್ನು ಪರಿಕಲ್ಪಿಸಿ ಹೇಳಬೇಕು ಎಂಬ ವಿಮರ್ಶಾ ತತ್ವವು ಇಂಥ ಆಚರಣೆಗಳಲ್ಲಿ ವ್ಯಕ್ತವಾಗಿದೆ. ಲೇಖಕನ ಸ್ವೋಪಜ್ಞತೆ ಮತ್ತು ಅನುಭವವನ್ನು ಆತನ ಅಭಿವ್ಯಕ್ತಿಸುವ ಕ್ರಮಗಳನ್ನು ವಿಮರ್ಶೆಯು ಸೋಸಿ ತೆಗೆಯಬೇಕು ಎಂಬ ತತ್ವವೂ ಇಲ್ಲಿ ಪ್ರತಿಪಾದಿತವಾಗಿದೆ.

ಕುವೆಂಪು ಸಾಹಿತ್ಯದಲ್ಲಿ ಚಿತ್ರಿತವಾಗಿರುವ ನಿಸರ್ಗಲೋಕದಲ್ಲಿ ಕುವೆಂಪು ನಿಸರ್ಗವನ್ನು ದೈವವೆಂದು, ತಾಯಿಯೆಂದು, ಸೃಷ್ಟಿಮಾತೆಯೆಂದು, ಕಾಳಿಯೆಂದು ಕರೆದಿರುವ ಬಗೆಗಳನ್ನು ಗಮನಿಸಿ, ಮಾತೃ ಸ್ಥಾನದಲ್ಲಿ ನಿಸರ್ಗವನ್ನು ಇಟ್ಟು ಶಿಶುಸ್ಥಾನದಲ್ಲಿ ಮಾನವನನ್ನು ಇಟ್ಟು ಕುವೆಂಪು ಕಾವ್ಯದಲ್ಲಿ ನಿಸರ್ಗ ಮತ್ತು ಮಾನವ ಸಂಬಂಧಗಳನ್ನು ನಿರ್ದೇಶಿಸಿರುವುದನ್ನು ಉಲ್ಲೇಖಿಸಿ, ಕುವೆಂಪು ಕಾವ್ಯದ ತುಣುಕುಗಳ ಉದಾಹರಣೆಗಳನ್ನು ನೀಡುತ್ತ ಕುವೆಂಪು ಸ್ತ್ರೀಪರ ದೃಷ್ಟಿಯ ಲೇಖಕ–ಸ್ತ್ರೀಯರ ಬಗ್ಗೆ ಗೌರವಾದರಗಳು ಉಳ್ಳ ಲೇಖಕ ಎಂಬ ನಿರ್ಧಾರಗಳಿಗೆ ಇಲ್ಲಿ ಬರಲಾಗಿದೆ. ನಿಸರ್ಗವನ್ನು ಕೆಲವು ಪದ್ಯಗಳಲ್ಲಿ ತಾಯಿಯ ಸ್ಥಾನದಲ್ಲಿ ಇಟ್ಟು ನೋಡುವ ದೃಷ್ಟಿ ಇರುವುದನ್ನು ಉದಾಹರಿಸಿ ಒಟ್ಟಾರೆ ಕುವೆಂಪು ಕಾವ್ಯದ ಬಗ್ಗೆ ಒಂದು ನಿರ್ಧಾರಕ್ಕೆ ಬರುವ ಪ್ರವೃತ್ತಿ ಇಲ್ಲಿ ಇದೆ. (2165) ಬಿಡಿ ನಿದರ್ಶನಗಳಿಂದ ಇಡಿ ತೀರ್ಪುಗಳಿಗೆ ತಲುಪುವ ವಿಧಾನ ಇದು.

ಪರಿಸರವೆಂದರೆ ಪ್ರಕೃತಿ; ಅದು ನಿಸರ್ಗ ನಿರ್ಮಿತವಾದುದು ಎಂದೂ, ಸಂಸ್ಕೃತಿಯು ಮಾನವ ನಿರ್ಮಿತ, ಕೃತಕ, ರೂಢಿಗತ ಎಂದೂ ಪರಿಸರ ದೃಷ್ಟಿಯು ಭಾವಿಸುತ್ತದೆ. ಪ್ರಕೃತಿ–ಸಂಸ್ಕೃತಿಗಳೆರಡೂ ಬೆರೆತ ಪರಿಸರ ದೃಷ್ಟಿಯು ಕುವೆಂಪು ಸಾಹಿತ್ಯವನ್ನು ಸಂಸ್ಕೃತಿಕಥನ ಎಂದೇ ಭಾವಿಸುತ್ತದೆ. ಕ್ರಿಯೆ, ಕಾಲ, ದೇಶಗಳ ಐಕ್ಯತೆ ಇಲ್ಲಿ ಸಾಧಿತವಾಗಿದೆಯೆಂದೂ ಹಾಗೇ ಕಾಲಗತಿ ಮತ್ತು ದೇಶ–ಧರ್ಮಗಳನ್ನು ಇದು ಹೊಂದಿದೆಯೆಂದೂ ಭಾವಿಸುತ್ತದೆ. ಕುವೆಂಪು ಕಾದಂಬರಿಗಳನ್ನು ಆಧರಿಸಿದ ಪ್ರಕಾರಕೇಂದ್ರಿತ ಚರ್ಚೆಗಳಲ್ಲಿ ಎರಡೂ ಕಾದಂಬರಿಗಳು ಯಾವ ಕಾಲಮಾನದ ಕಥನಗಳು ಮತ್ತು ಎಷ್ಟು ಕಾಲದಲ್ಲಿ ನಡೆದಿರುವ ಕಥನವನ್ನು ಇವು ಕಥಿಸುತ್ತವೆ ಎಂಬ ಅನ್ವೇಷಣೆ ಕೂಡ ನಮ್ಮ ವಿಮರ್ಶೆಯಲ್ಲಿ ನಡೆದಿದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯವು ಕಾಲಬದ್ಧ ಮತ್ತು ಕಾಲಾತೀತ, ದೇಶಬದ್ಧ ಮತ್ತು ದೇಶಾತೀತ, ಸ್ಥಳೀಯ ಮತ್ತು ವಿಶ್ವಾತ್ಮಕ ನೆಲೆಗಳೆಲ್ಲವನ್ನು ಒಳಗೊಂಡಿದ್ದರೆ ಅಂಥ ಸಾಹಿತ್ಯವು ಶ್ರೇಷ್ಠವಾದುದು ಎಂಬ ತತ್ವವನ್ನು ಈ ವಿಮರ್ಶೆಯು ಮಂಡಿಸಿದೆ. ದೇಶಬದ್ಧ ಮತ್ತು ದೇಶಾತೀತ ನಿಸರ್ಗಧರ್ಮ, ಕಾಲಬದ್ಧ ಮತ್ತು ಕಾಲಾತೀತ ನಿಸರ್ಗ ಧರ್ಮಗಳು ಐಕ್ಯಗೊಂಡ ಕಥನಗಳನ್ನಾಗಿ ಕಾದಂಬರಿಗಳನ್ನು ಈ ವಿಮರ್ಶೆಯು ನೋಡುತ್ತದೆ. (2577 ಮತ್ತು 2525)

ಪರಿಸರ ದೃಷ್ಟಿಯಲ್ಲಿ ಹತ್ತು ಹಲವು ರೀತಿಯ ಸಾಹಿತ್ಯಕ ವ್ಯಾಖ್ಯಾನಗಳು ನಡೆದಿವೆ. ಕುವೆಂಪು ಸಾಹಿತ್ಯವು ಒಂದು ಪರಿಸರ ವ್ಯವಸ್ಥೆ; ಇದೊಂದು ಮಾಹಿತಿ ವ್ಯವಸ್ಥೆ ಮತ್ತು ಜ್ಞಾನವ್ಯವಸ್ಥೆ ಕೂಡ ಎಂದು ಈ ದೃಷ್ಟಿಯು ವ್ಯಾಖ್ಯಾನಿಸಿದೆ. (870–ಪುಟ: 142) ಸಾಹಿತ್ಯದಲ್ಲಿ ಹಲವು ತೆರನ ಜ್ಞಾನವ್ಯವಸ್ಥೆಗಳ ವೈವಿಧ್ಯತೆ ಇರುತ್ತದೆ; ಕುವೆಂಪು ಕಾದಂಬರಿಗಳಲ್ಲಿ ವಾಸ್ತವ ಜೀವ ವೈವಿಧ್ಯತೆಯ ದಾಖಲೆಗಳಿವೆ ಎಂದೂ ಈ ವಿಮರ್ಶೆಯು ಭಾವಿಸುತ್ತದೆ. (2577–ಪುಟ: 24) ಪರಿಸರದಲ್ಲಿನ ಜೀವವೈವಿಧ್ಯತೆಯನ್ನು ಸಂರಕ್ಷಿಸುವುದು ಮತ್ತು ಸಂಗೋಪಿಸುವುದು ಎಷ್ಟು ಅಗತ್ಯವೋ ಹಾಗೆಯೇ ಜ್ಞಾನ ವ್ಯವಸ್ಥೆಗಳ ವೈವಿಧ್ಯತೆಯನ್ನು ಸಂರಕ್ಷಿಸುವುದು

ಮತ್ತು ಸಂಗೋಪಿಸುವುದೂ ಕೂಡ ಅಷ್ಟೇ ಮುಖ್ಯ ಎಂಬ ತತ್ವವನ್ನು ಇದು ಮಂಡಿಸುತ್ತದೆ. ಸಮಕಾಲೀನ ಸಮಾಜವು ಪರಿಸರದ ನೆಲೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಪರಿಹಾರಕ್ಕೆ ಸಾಹಿತ್ಯದಲ್ಲಿ ಸಲಹೆಗಳಿರುತ್ತವೆ; ಜನರು ಸಾಹಿತ್ಯದಿಂದ ತಮ್ಮ ನಡಾವಳಿಯನ್ನು ರೂಪಿಸಿಕೊಳ್ಳುವ ಅಗತ್ಯವಿದೆ ಎಂಬ ಸಿದ್ಧಾಂತವು ಈ ವಿಮರ್ಶೆಯಲ್ಲಿ ಮಂಡಿತವಾಗಿದೆ.

ಕುವೆಂಪು ಸಾಹಿತ್ಯದಲ್ಲಿನ ಕೆಲ ಭಾಗಗಳನ್ನು ಪ್ರಕೃತಿ ವರ್ಣನೆ ಎಂಬ ದೃಷ್ಟಿಯಿಂದ ನೋಡುವ ಮತ್ತು ಪ್ರಕೃತಿಯೂ ಇವರ ಸಾಹಿತ್ಯದಲ್ಲಿ ಒಂದು ಪಾತ್ರ ಎಂದು ನೋಡುವ ಎರಡೂ ಗ್ರಹೀತಗಳು ನಮ್ಮಲ್ಲಿವೆ. ಸಾಹಿತ್ಯವನ್ನು ನಿಸರ್ಗ ವರ್ಣನೆಯಾಗಿ ನೋಡುವ ವಿಮರ್ಶೆಯು ವ್ಯಕ್ತಿ ನಿಷ್ಠ ಮತ್ತು ವಸ್ತು ನಿಷ್ಠ ನೆಲೆಗಳಲ್ಲಿ ಮಾತಾನಾಡಿದರೆ, ಪಾತ್ರವಾಗಿ ನೊಡುವ ವಿಮರ್ಶೆಯು ಜೀವ ಕೇಂದ್ರಿತ ನೆಲೆಯಲ್ಲಿ ಮಾತಾಡಿದೆ. ಪ್ರಕೃತಿಯ ದೈವೀಕರಣ, ಮಾನವೀಕರಣ, ಜೀವಾರೋಪಣ, ಅನುಭಾವೀಕರಣ, ಆಧ್ಯಾತ್ಮೀಕರಣ, ಧಾರ್ಮಿಕ ಸಾಂಸ್ಥೀಕರಣ, ಸೌಂದರ್ಯ ದೃಷ್ಟಿ–ಆರಾಧನಾ–ಉಪಾಸನಾ ದೃಷ್ಟಿ, ಸಂಸ್ಕೃತಿಯ ಪ್ರತಿಮಾ ಗವಾಕ್ಷ, ಜೀವಸಂಪತ್ತು–ಸಂಸ್ಕೃತಿ ಚರಿತ್ರೆಯ ದಾಖಲಾತಿ, ಜ್ಞಾನ ವ್ಯವಸ್ಥೆ.... ಇತ್ಯಾದಿಯಾಗಿ ಕುವೆಂಪು ಸಾಹಿತ್ಯವನ್ನು ಬಹುನೆಲೆಗಳಲ್ಲಿ ಈ ವಿಮರ್ಶೆಯು ವ್ಯಾಖ್ಯಾನಿಸಿದೆ.

ಕುವೆಂಪು ಅವರ ಒಟ್ಟಾರೆ ಸಾಹಿತ್ಯವನ್ನು ಪರಿಸರ ದೃಷ್ಟಿಯಿಂದ ವ್ಯಾಖ್ಯಾನಿಸುವ ಮತ್ತು ಆ ವ್ಯಾಖ್ಯಾನಗಳನ್ನು ಕುವೆಂಪು ಅವರ ದೃಷ್ಟಿಕೋನ, ತತ್ವಜ್ಞಾನಗಳಿಗೆ ಹೊಂದಿಸುವ ಕೆಲಸವೂ ಇಲ್ಲಿ ನಡೆದಿದೆ. ಹಾಗೆಯೇ ಕುವೆಂಪು ಸಾಹಿತ್ಯವನ್ನು ಪ್ರಕಾರ, ವಸ್ತು, ಸಂವೇದನೆಗಳ ನೆಲೆಯಿಂದ ವರ್ಗೀಕರಿಸಿಕೊಂಡು ಪರಿಶೀಲಿಸುವ ಕೆಲಸವನ್ನು ಈ ದೃಷ್ಟಿಯು ಮಾಡಿದೆ. ಕಥನ ಕವನಗಳಲ್ಲಿ ನಿಸರ್ಗ, ಭಾವಗೀತೆಗಳಲ್ಲಿ ಪ್ರಕೃತಿ, ಮಹಾಕಾವ್ಯದಲ್ಲಿ ಪ್ರಕೃತಿ ಹೀಗೆ (2581) ವರ್ಗೀಕೃತ ವಿನ್ಯಾಸದಲ್ಲಿ ವಿಮರ್ಶೆ ಮಾಡುವುದು ನಮ್ಮ ವಿಮರ್ಶೆಯ ಒಂದು ಸಾಮಾನ್ಯವಾದ ಅಂತರ್ಗತ ಚಹರೆಯಾಗಿದೆ. ಸಾಹಿತ್ಯವನ್ನು ವರ್ಗೀಕರಿಸಿ ನೋಡುವ ಹಾಗೆಯೇ ಪ್ರಕೃತಿಯ ಅಂಗವನ್ನು ಪ್ರತ್ಯೇಕಿಸಿ ನೋಡುವ ಪ್ರವೃತ್ತಿಯೂ ಇಲ್ಲಿ ಇದೆ. ಉದಾಹರಣೆಗೆ ಕುವೆಂಪು ಕಾದಂಬರಿಗಳಲ್ಲಿ ಜೈವಿಕ ಜಾಲ, ಕುವೆಂಪು ಚಿತ್ರಿಸಿದ ಪ್ರಾಣಿಪ್ರಪಂಚ, ಕುವೆಂಪು ಮತ್ತು ಪುಷ್ಪ ಜಗತ್ತು, ಕುವೆಂಪು ಕಾವ್ಯದಲ್ಲಿ ಪಕ್ಷಿಲೋಕ, ಕುವೆಂಪು ಸಾಹಿತ್ಯದಲ್ಲಿ ಬೇಟೆ, ಹೀಗೆ ಪ್ರಕೃತಿಯ ಅಂಗಗಳನ್ನು ಪ್ರತ್ಯೇಕಿಸಿ ಪರಿಶೀಲಿಸುವ ಪ್ರವೃತ್ತಿಯೂ ಇಲ್ಲಿ ಇದೆ.

ಪ್ರಭಾವ–ಪ್ರೇರಣೆಗಳ ಅನ್ವೇಷಣೆ ಕೂಡ ಇಲ್ಲಿದೆ. (ಪ್ರತ್ಯೇಕವಾಗಿ ವಿವರಿಸಿದೆ, ನೋಡಿ;) ಈ ಅನ್ವೇಷಣೆಯು ಸಾಹಿತ್ಯದ ವಸ್ತುವಿನ್ಯಾಸ, ಸಂವೇದನೆ, ಅಭಿವ್ಯಕ್ತಿ ವಿಧಾನ, ಭಾಷೆ ಇವುಗಳ ಸ್ವರೂಪವು ಈಗ ಇರುವಂತೆ ಇರಲು ಅವುಗಳ ಮೂಲ ಎಲ್ಲಿಂದ ಬಂದಿತು, ಸ್ಫೂರ್ತಿ ಎಲ್ಲಿಂದ ಉಂಟಾಯಿತು ಎಂಬ ಮೂಲ ಶೋಧಿಸುವ ಹಾದಿಯಲ್ಲಿ ನಡೆದಿದೆ (2581–ಪುಟ: 60–79) ವಿಮರ್ಶೆಯಲ್ಲಿನ ಈ ಮೂಲಗಳ ಅನ್ವೇಷಣೆಯು ಮೂಲಗಳ ಅನ್ವೇಷಣೆಯಾಗಿ ಮಾತ್ರವೇ ಉಳಿದು ಹೋಗಿದೆ. ಆ ಮೂಲಕ ಸಾಹಿತ್ಯದ ಪ್ರೇರಣೆಗಳ ಬಗ್ಗೆ ಸಿದ್ಧಾಂತಗಳನ್ನೇನೂ ಮಂಡಿಸುವುದಿಲ್ಲ. ವಿಶೇಷವೆಂದರೆ ಈ ಸಾಹಿತ್ಯ ವಲಯಗಳ ಮೂಲಗಳನ್ನು ಹುಡುಕುವ ಮೂಲ ವ್ಯಾಧಿಯು ಕೆಲವೊಮ್ಮೆ ಸ್ವಂತಿಕೆಯ ಬಗ್ಗೆ ಗಂಭೀರವಾದ ಪ್ರಶ್ನೆಗಳನ್ನು ಎತ್ತಿದರೆ (1166–ಪುಟ: 595) ಕೆಲವೊಮ್ಮೆ ಗಂಭೀರವಾದ ಪ್ರಶ್ನೆಗಳನ್ನು ಎತ್ತುವುದಿಲ್ಲ.

ಇಲ್ಲಿ ಪ್ರಾದೇಶಿಕ ದೃಷ್ಟಿಯು ಒಂದು ಸಾಮಾನ್ಯವಾದ ದೃಷ್ಟಿ. ಕೃತಿಯನ್ನು ಒಂದು ಪ್ರದೇಶದ, ಒಂದು ಚಾರಿತ್ರಿಕ ಸಂದರ್ಭದ ಉತ್ಪನ್ನವಾಗಿ ಇಂಥ ವಿಮರ್ಶೆಯು ಪರಿಗಣಿಸುತ್ತದೆ. ಅಲ್ಪ ಪರಿಚಿತ ಮತ್ತು ಅಪರಿಚಿತಗಳನ್ನು ಪರಿಚಿತೀಕರಣಗೊಳಿಸುವ ಕ್ರಿಯೆಯನ್ನಾಗಿ ಸಾಹಿತ್ಯವನ್ನು ಇದು ಭಾವಿಸುತ್ತದೆ. ಸ್ಥಳೀಯತೆ ಪ್ರಕಟವಾದ ಮಾತ್ರಕ್ಕೆ ಸಾಹಿತ್ಯಕ್ಕೆ ಮಹತ್ವ ಲಭಿಸುವುದಿಲ್ಲ. ಸ್ಥಳೀಯತೆಯು ಸಾಹಿತ್ಯ ಕೃತಿಯಲ್ಲಿ ಸಹಜತೆಗೆ ದ್ಯೋತಕವಾಗಿ ಬರುತ್ತದೆ. ಹಾಗೆ ಬಂದಾಗಲೇ ಸಾಹಿತ್ಯವು ಉತ್ತಮ ಎನಿಸಿಕೊಳ್ಳಬಲ್ಲುದು ಎಂಬ ತತ್ವವನ್ನು ಇದು ಮಂಡಿಸುತ್ತದೆ. (708–ಪುಟ: 95) ಸಾಹಿತ್ಯದ ಸ್ಥಳೀಯತೆ ಎಂದರೆ ಕೇವಲ ಸಾಂಸ್ಕೃತಿಕ ಮಾಹಿತಿಕೋಶ ಅಲ್ಲ. ಸ್ಥಳೀಯತೆಯ ಮೂಲಕವೆ ಕೃತಿಯೊಂದು ವಿಶ್ವಾತ್ಮಕತೆಯನ್ನು ಅಭಿವ್ಯಕ್ತಿಗೊಳಿಸಬೇಕು ಎಂಬ ತತ್ವವನ್ನೂ ಇದು ಮಂಡಿಸುತ್ತದೆ. (505) ಕೃತಿಯು ಕೃತಿಕಾರನ ಪ್ರಾದೇಶಿಕ ಚಹರೆಗಳ ನಕಲು ಅಲ್ಲ. ಸಾಹಿತ್ಯವು ಪ್ರಾದೇಶಿಕ ನಿಸರ್ಗವೈವಿಧ್ಯ, ಸಾಂಸ್ಕೃತಿಕ ವೈವಿದ್ಯಗಳನ್ನು ತಾನು ಬಳಸುತ್ತದೆಯಾದರೂ ಹಾಗೆ ವೈವಿದ್ಯಗಳನ್ನು

ದಾಖಲಿಸುವ ಯಾಂತ್ರಿಕ ಕೆಲಸವನ್ನು ಮಾತ್ರ ಅದು ಮಾಡುವುದಿಲ್ಲ. ಲೇಖಕನು ಅದರಲ್ಲಿ ತನ್ನದೇ ಆಯ್ಕೆ ಮತ್ತು ಕಾಣ್ಕೆಗಳನ್ನು ತೋರುತ್ತಿರುತ್ತಾನೆ. ನಿಸರ್ಗದಲ್ಲಿ ಇರುವುದನ್ನು ತರುವುದಕ್ಕಿಂತ ತಾನು ನಿಸರ್ಗದಲ್ಲಿ ಕಂಡದ್ದನ್ನು ಕೃತಿಯಲ್ಲಿ ಆತ ತರುವುದರಿಂದ ಪ್ರಾದೇಶಿಕತೆಯು ಕೃತಿಕಾರನ ದೃಷ್ಟಿಯಲ್ಲಿ ಕಂಡ ಅವನದೇ ಲೋಕ-ಎಂಬ ವ್ಯಾಖ್ಯಾನವನ್ನು ಕೂಡ ಈ ವಿಮರ್ಶೆಯು ಮಂಡಿಸುತ್ತದೆ. (708-ಪುಟ: 97) ವಿಮರ್ಶೆಯ ತತ್ವಗಳ ಜೊತೆಗೆ ನಮ್ಮಲ್ಲಿ ಸಾಹಿತ್ಯದ ಸ್ವರೂಪ-ಲಕ್ಷಣಗಳನ್ನು ಮಂಡಿಸುವ ಸಾಹಿತ್ಯತತ್ವ ಚರ್ಚೆಗಳೂ ಸಾಕಷ್ಟು ಪ್ರಕಟವಾಗಿವೆ.

ಕಲ್ಪನಾರಮ್ಯವಾದ ಸಾಹಿತ್ಯ ಭಾಗಗಳನ್ನು ಆಸ್ವಾದಿಸುವ, ವಿವರಿಸುವ, ತಾವೂ ಕಾವ್ಯದಲ್ಲಿ ಲೀನವಾಗುವ, ಸಾಹಿತ್ಯದ ವರ್ಣನಾ ವಿಧಾನ-ತಾತ್ವಿಕತೆಗಳನ್ನು ಒಪ್ಪಿ ಗೌರವದಿಂದ ಉದ್ಗಾರಗಳನ್ನು ತೆಗೆಯುವ ಪ್ರವೃತ್ತಿಯು ಸ್ವಲ್ಪ ಹೆಚ್ಚಾಗಿಯೇ ಈ ವಿಮರ್ಶೆಯಲ್ಲಿ ಪ್ರಕಟವಾಗಿದೆ. (2379-ಪುಟ: 71-93) ಇಂಥ ಕಡೆ ಅಲಿಪ್ತ ವಿಮರ್ಶೆಗಿಂತ ಕಾವ್ಯದ ಆಸ್ವಾದನೆ ಕಾಣುತ್ತದೆ. ಕವಿಯ ದೃಷ್ಟಿಯನ್ನು ಗ್ರಹಿಸಿಕೊಳ್ಳುವ, ವಿವರಿಸಿಕೊಳ್ಳುವ, ಓದುಗರಿಗೆ ರಸಾಸ್ವಾದನೆಗೆ ಒದಗಿಸಲೋಸುಗ ಬಣ್ಣಿಸುವ, ಸಾಹಿತ್ಯವನ್ನು ಗೌರವದಿಂದ ಆರಾಧಿಸುವ ಪ್ರವೃತ್ತಿ ಇಲ್ಲಿ ಎದ್ದು ಕಾಣುತ್ತದೆ. ಲೇಖಕನ ದೃಷ್ಟಿ ಧೋರಣೆಗಳು ಹೀಗೆ ಯಾಕೆ ರೂಪಗೊಂಡಿರಬಹುದು ಎಂಬ ಚಿಂತನೆ ಅಲ್ಲಲ್ಲಿ ಪ್ರೇರಣೆ, ಸ್ಫೂರ್ತಿಗಳ ಚರ್ಚೆಯ ರೂಪದಲ್ಲಿ ಇಲ್ಲಿ ಕಾಣಿಸಿಕೊಳ್ಳುತ್ತದೆ. ಅದನ್ನು ಬಿಟ್ಟರೆ ಮಿಕ್ಕಂತೆ ನಿಸರ್ಗವನ್ನು ಕುವೆಂಪು ಹೇಗೆಲ್ಲ ಕಂಡಿದ್ದಾರೆ ಎಂಬ ವಿವರಣಾತ್ಮಕ ವಿಮರ್ಶೆಯೇ ಇಲ್ಲಿ ಹೆಚ್ಚಿನದಾಗಿ ಸೃಷ್ಟಿಯಾಗಿದೆ.

ಕೃತಿಕಾರನ ತಾತ್ವಿಕ-ದಾರ್ಶನಿಕ ದೃಷ್ಟಿಗಳನ್ನು ಪ್ರಶ್ನಿಸುವ ಚರ್ಚೆಗಳು ಇಲ್ಲಿ ತೀರಾ ಕಡಿಮೆ. ವಿವರಿಸುವ ಚರ್ಚೆಗಳೇ ಹೆಚ್ಚು. ಕುವೆಂಪು ಹೇಗೆ ವರ್ಣಿಸುತ್ತಾರೆ? ಏನನ್ನು ಮುಖ್ಯವಾಗಿ ವರ್ಣಿಸುತ್ತಾರೆ? ಆ ಮೂಲಕ ಪ್ರಕಟವಾಗುವ ದಾರ್ಶನಿಕತೆಯ ಸ್ವರೂಪವೇನು? ಆ ದಾರ್ಶನಿಕತೆಯು ಮಂಡಿಸುವ ಜೀವನ ದೃಷ್ಟಿ ಯಾವುವು? ಇದರ ಹಿಂದಿನ ಪ್ರಭಾವ-ಪ್ರೇರಣೆಗಳೇನು? ಎಂಬ ಜಿಜ್ಞಾಸೆಗಳು ಇಲ್ಲಿವೆ. ಕುವೆಂಪು ವೈಚಾರಿಕತೆ-ದಾರ್ಶನಿಕತೆಯನ್ನು ತಾವು ಒಪ್ಪದೆ ಪ್ರಶ್ನಿಸುವ; ತಾವು ಒಪ್ಪದಿರುವ ವೈಚಾರಿಕತೆಯನ್ನು ಪ್ರಕಟಿಸುವ ಕವಿತೆಯನ್ನು ಹೇಗೆ ಚರ್ಚಿಸಬೇಕೆಂಬ ತತ್ವ ಜಿಜ್ಞಾಸೆಯನ್ನು ನಿರ್ಮಿಸುವ ಪ್ರಯತ್ನಗಳು ಈ ವಿಮರ್ಶೆಯಲ್ಲಿ ತೀರಾ ಕಡಿಮೆ. ಅಲ್ಲದೆ ರಾಮಾಯಣದರ್ಶನಂ ಬಗ್ಗೆ ಪರಿಸರ ದೃಷ್ಟಿಯಿಂದ ಬೆರಳೆಣಿಕೆಯಷ್ಟು ಲೇಖನಗಳು ಮಾತ್ರ ಬಂದಿವೆ. ಕುವೆಂಪು ಅವರ ವೈಚಾರಿಕತೆ ಜೀವನ ದೃಷ್ಟಿಯ ಮೇಲೆ ಪರಿಸರದ ಪ್ರಭಾವ ಎಷ್ಟರಮಟ್ಟಿಗೆ ಆಗಿದೆ ಎಂಬ ಬಗ್ಗೆ ಕೆಲವೇ ಕೆಲವು ಪರಿಶೀಲನೆಗಳಿವೆ. ಆದರೆ ಈ ದೃಷ್ಟಿಯ ಬಹುಪಾಲು ವಿಮರ್ಶೆಯು ಕಾವ್ಯ ಮತ್ತು ಕಾದಂಬರಿಗಳನ್ನು ಆಶ್ರಯಿಸಿಯೆ ಸೃಷ್ಟಿಯಾಗಿದೆ.

### 5.1.3. ತೌಲನಿಕ ದೃಷ್ಟಿ

ತೌಲನಿಕತೆಯು ವಿಧಾನವಾಗಿ, ದೃಷ್ಟಿಯಾಗಿ, ರೂಪವಾಗಿ ಹೀಗೆ ಎಲ್ಲ ಬಗೆಗಳಲ್ಲಿಯೂ ಕುವೆಂಪು ಕುರಿತ ವಿಮರ್ಶೆಯಲ್ಲಿ ಬಳಕೆಯಾಗಿದೆ. ಎಲ್ಲ ವಿಮರ್ಶಾ ಮಾರ್ಗಗಳಲ್ಲೂ ಬಳಕೆಯಾಗುವ ಒಂದು ಅಂತರ್ಗತ ಪ್ರಜ್ಞೆಯಾಗಿ ಕೂಡ ಇದು ಬಳಕೆಯಾಗಿದೆ. ಒಂದು ವಿಮರ್ಶಾ ಪ್ರಕಾರವಾಗುವ ಸಾಧ್ಯತೆಯೂ ಇದಕ್ಕೆ ಇದೆ. ಈ ತೌಲನಿಕ ವಿದಾನದಲ್ಲಿ ಮುಖ್ಯವಾಗಿ ಎರಡು ಮೆತೆಡ್ಡುಗಳು ಕಾಣಿಸಿಕೊಳ್ಳುತ್ತವೆ. ಒಂದು: ಬೈನರಿ ಮೆತೆಡ್ಡು, ಎರಡನೆಯದು: ಬಹುರೂಪಿ ಮೆತೆಡ್ಡು. ಕುವೆಂಪು ಸಾಹಿತ್ಯ ಕುರಿತ ತೌಲನಿಕ ವಿಮರ್ಶೆಯಲ್ಲಿ ಸಾಮಾನ್ಯವಾಗಿ ಬೈನರಿ ಮೆತೆಡ್ಡು ಯಜಮಾನಿಕೆ ನಡೆಸಿದೆ. ಬಹುನೆಲೆಯ ತುಲನೆ ಕಡಿಮೆ. ಇವೆರಡನ್ನೂ ಒಳಗೊಂಡಿರುವ ವಿಮರ್ಶೆಯೂ ಸಾಕಷ್ಟಿದೆ. ತೌಲನಿಕ ವಿಧಾನದಲ್ಲಿ ಬಳಕೆಯಾಗಿರುವ ಹಲವು ಮಾದರಿಗಳನ್ನು ಹೀಗೆ ವಿವರಿಸಿಕೊಳ್ಳಬಹುದು.

1. ಸಾಮಾಜಿಕ ವಾಸ್ತವ ಮತ್ತು ಸಾಹಿತ್ಯಕ ವಾಸ್ತವಗಳ ತುಲನೆ:

ಜಿ.ಎಸ್.ಆಮೂರರ ಪ್ರಕೃತಿ ಮತ್ತು ಸಂಸ್ಕೃತಿ ಲೇಖನ ಇದಕ್ಕೊಂದು ಒಳ್ಳೆಯ ಉದಾಹರಣೆ. ಪ್ರೇರಣೆಗಳ ಹುಡುಕಾಟ ಇಲ್ಲಿ ಪ್ರಧಾನವಾಗಿದೆ. ಸಾಮಾಜಿಕ ವಾಸ್ತವ ಎಂಬುದು ಹೇಗೆ ಸಾಹಿತ್ಯದಲ್ಲಿ

ದರ್ಶನವಾಗಿ ರೂಪ ಪಡೆಯುತ್ತದೆ ಅನ್ನುವ ಚರ್ಚೆಗೆ ಈ ಮಾರ್ಗ ಕರೆದುಕೊಂಡು ಹೋಗುತ್ತದೆ. ತರೀಕೆರೆಯವರ ಸಂಘರ್ಷಗಳ ಸ್ವರೂಪ ಲೇಖನ ಈ ಮಾದರಿಗೆ ಇನ್ನೊಂದು ಉದಾಹರಣೆ. ಮುನ್ನೋಟ ಪುಸ್ತಕದಲ್ಲಿ ಡಾ.ಜಿ.ರಾಮಕೃಷ್ಣ ಮಲೆನಾಡಿನ ಗೌಡನೊಬ್ಬ ತನ್ನ ಹೊಲೆ ಜಾತಿ ಜೀತದಾಳೊಬ್ಬನ ಹೆಂಡತಿಯನ್ನು ಮಾರಿದ ಶಾಸನವೊಂದನ್ನು ಉಲ್ಲೇಖಿಸಿದ್ದಾರೆ. ಅದನ್ನು ಉಲ್ಲೇಖಿಸಿ ರಹಮತ್ ತರೀಕೆರೆಯವರು ಸಾಹಿತ್ಯಕ ಮತ್ತು ಸಾಮಾಜಿಕ ವಾಸ್ತವಗಳನ್ನು ತಾಳೆ ನೋಡುತ್ತಾರೆ. ಆ ಮೂಲಕ ವಾಸ್ತವವಾದಿ ಚಿತ್ರಣಗಳ ಪರಿಶೀಲನೆ ಮಾಡುತ್ತಾರೆ. ಒಂದೊಂದು ವಿಮರ್ಶಾ ಮಾರ್ಗಗಳೂ ಹೇಗೆ ಸ್ವತಂತ್ರ ಮತ್ತು ಪರಸ್ಪರ ಪೂರಕ ಹಾಗೂ ಇಂಟರ್‌ಲಿಂಕ್‌ಡ್ ಅನ್ನುವ ವಿಚಾರ ಇಂಥ ಕಡೆ ಚೆನ್ನಾಗಿ ಡ್ರಮಟೈಸ್ ಆಗುತ್ತದೆ.

ತೌಲನಿಕ ವಿಮರ್ಶೆಯ ಹಲವು ಮಾದರಿಗಳು ಒಬ್ಬನೇ ಲೇಖಕನ ಒಂದೇ ಲೇಖನದಲ್ಲಿ ಕೂಡ ಪ್ರಯೋಗವಾಗಿವೆ. ಬೈನರಿ ಮೆತೆಡ್ಡಿನಲ್ಲಿ ಸಾಮಾಜಿಕ ವಾಸ್ತವ ಮತ್ತು ಸಾಹಿತ್ಯಕ ವಾಸ್ತವಗಳನ್ನು ಪರಿಶೀಲಿಸುವ ಆಮೂರರು ಲೇಖಕರ ತಾತ್ವಿಕತೆಗಳನ್ನು ತಮ್ಮದೇ ಒಳನೋಟಗಳ ಮೂಲಕ ವಿವರಿಸುತ್ತಾರೆ. ಹಾಗೆ ವಿವರಿಸುವಾಗ ಸಾಹಿತ್ಯದ ತಮ್ಮ ಓದಿನ ಸ್ಮೃತಿಯಿಂದ ಯಾವುದೋ ಪಾತ್ರ, ಯಾವುದೋ ಕೃತಿಯನ್ನು ಉಲ್ಲೇಖಿಸಿ ಅದರೊಂದಿಗೂ ತುಲನೆ ಮಾಡುತ್ತಾರೆ. ಉದಾಹರಣೆಗೆ ಆಮೂರ ಗುತ್ತಿಯನ್ನು ಕಾರಂತರ ಚೋಮನೊಂದಿಗೆ, ದೇವನೂರರ ಸಾಕವ್ವನೊಂದಿಗೆ ಹೋಲಿಸುತ್ತಾರೆ. (705–ಪುಟ: 100) ಹಾಗೇ ಟಾಲ್‌ಸ್ಟಾಯ್, ಭಾರತೀಯ ಸಂಸ್ಕೃತಿಗಳನ್ನು ಹಿನ್ನೆಲೆಗೆ ತರುತ್ತಾರೆ.

ಕುವೆಂಪು ಅವರ ಮಲೆನಾಡಿಗೆ ಸೇರಿದವರೇ ಆದ ವಿಮರ್ಶಕರಲ್ಲಂತು ಈ ಎರಡು ವಾಸ್ತವಗಳ ತುಲನೆ ಅಪ್ರಜ್ಞಾಪೂರ್ವಕವಾಗಿಯೆ ನಡೆದು ಹೋಗುತ್ತದೆ. ಪ್ರಾದೇಶಿಕ ಸಂಸ್ಕೃತಿಯ ಬಗೆಗೆ ಮಾತನಾಡುವಾಗೆಲ್ಲ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡಿರುವ ಚಿತ್ರಗಳನ್ನು ವಾಸ್ತವದ ಉದಾಹರಣೆಗಳೆಂಬಂತೆ ಇವರು ಬಳಸುತ್ತಾರೆ. ಅಲ್ಲದೆ ಕಣ್ಣೆದುರಿಗಿನ ಇಂದಿನ ಲೋಕ ಮತ್ತು ಸಾಹಿತ್ಯ ಕೃತಿಯಲ್ಲಿ ಕಟ್ಟಿ ಕೊಟ್ಟಿರುವ ಲೋಕ ಇವೆರಡರ ತುಲನೆಯು ಎರಡು ಕಾಲಘಟ್ಟಗಳ ತುಲನೆಯಾಗಿ ಇಲ್ಲಿ ಬೆಳೆಯುತ್ತದೆ. (675(ಅ)–ಪುಟ: 8) ಕುವೆಂಪು ಕೃತಿಲೋಕದ ಭೌಗೋಳಿಕ ಪರಿಸರ, ಜನಜೀವನ, ಆಚಾರ ವಿಚಾರ ಹೀಗೆ ಅನೇಕ ವಿಚಾರಗಳಲ್ಲಿ ಅಂದು ಮತ್ತು ಇಂದುಗಳ ತುಲನೆ ನಡೆಯುತ್ತದೆ. ಇಂಥ ಕಡೆ ಸಾಹಿತ್ಯ ವಿಮರ್ಶೆಯು ಸಮಾಜ ವಿಮರ್ಶೆಯಾಗಿ ಹೊರಳಿಕೊಳ್ಳುತ್ತದೆ. ಸಾಹಿತ್ಯವನ್ನು ನೆಪವಾಗಿ ಇರಿಸಿಕೊಂಡು ಸಮಾಜ ವಿಮರ್ಶೆಯನ್ನು ಮಾಡುವುದು ನಮ್ಮ ವಿಮರ್ಶೆಯ ಪ್ರಧಾನ ಪ್ರವೃತ್ತಿಯೂ, ಕಾರ್ಯವೂ ಆಗಿದೆ.

2. ಕೃತಿಗಳ ತುಲನೆ, ಕೃತಿಕಾರರ ತುಲನೆ:

ಒಂದೇ ಕೃತಿಯ ಹಲವು ಪಾತ್ರಗಳನ್ನು ತುಲನೆ ಮಾಡುವುದು, ಕುವೆಂಪು ಅವರ ಎರಡು ಕಾದಂಬರಿಗಳನ್ನು ಪರಸ್ಪರ ತುಲನೆ ಮಾಡುವುದು, ನಾಟಕಗಳನ್ನು ಪರಸ್ಪರ ಒಂದನ್ನು ಇನ್ನೊಂದರ ಜೊತೆ ಹೋಲಿಸಿ ನೋಡುವುದು, ಒಂದೇ ವಸ್ತು ಬಳಕೆಯಾಗಿರುವ–ವಸ್ತು ಸಾಮ್ಯ, ಆಶಯ ಸಾಮ್ಯ, ವೈದೃಶ್ಯಗಳು ಉಳ್ಳ ಕೃತಿಗಳನ್ನು ತುಲನೆ ಮಾಡುವುದು, ಉದಾ: ಕೈಲಾಸಂ ಪರ್ಪಸ್ ಜೊತೆ ಬೆರಳ್ಗೆ ಕೊರಳ್ ತುಲನೆ, ಬೇಂದ್ರೆ ಬೆಳಗು ಜೊತೆ ಆನಂದಮಯ ಈ ಜಗ ಹೃದಯ ತುಲನೆ, ಹಲವು ಮಹಾಕಾವ್ಯಗಳ ತುಲನೆ, ಈ ರೀತಿ ಅಲ್ಲದೆ; ಮಾಸ್ತಿ–ಕುವೆಂಪು, ಮಿಲ್ಟನ್–ಕುವೆಂಪು, ತಕಜಿ–ಕುವೆಂಪು, ವಾಸುದೇವನ್ ನಾಯರ್–ಕುವೆಂಪು, ಹೆನ್ರಿ ಜೇಮ್ಸ್, ಫ್ಲಾಬೇರ್, ಹಾಥಾರ್ನ್, ಟಾಲ್‌ಸ್ಟಾಯ್, ಷೇಕ್ಸ್‌ಪಿಯರ್ ಇಂಥವರ ಜೊತೆ ತುಲನೆ, ಹೀಗೆ ಹಲವು ರೀತಿಯ ತುಲನೆಗಳು ಈ ವಿಮರ್ಶೆಯಲ್ಲಿ ಪ್ರಕಟವಾಗಿವೆ. ಇಂಥ ತುಲನೆಯಲ್ಲಿ ಸ್ವಂತಿಕೆ, ಪ್ರೇರಣೆ, ವಿಶಿಷ್ಟತೆಗಳ ಜೊತೆಗೆ ಸಾಮ್ಯ–ವೈದೃಶ್ಯಾದಿಗಳನ್ನು ಚರ್ಚೆ ಮಾಡಲಾಗಿದೆ.

ತೌಲನಿಕ ದೃಷ್ಟಿಯಲ್ಲಿ ನಡೆದಿರುವ ಒಂದು ಮುಖ್ಯವಾದ ಕೆಲಸವೆಂದರೆ ಪ್ರಭಾವ–ಪ್ರೇರಣೆಗಳ ಅನ್ವೇಷಣೆ. ಎಲ್ಲೆಲ್ಲಿಂದ ಕುವೆಂಪು ಪ್ರಭಾವಿತರಾಗಿದ್ದಾರೆ ಎಂದು ನೋಡಿ ಕುವೆಂಪು ಮೇಲಿನ ಪ್ರಭಾವಗಳನ್ನು ನಿರ್ಲಿಪ್ತವಾಗಿ ಗುರ್ತಿಸುವುದು, ತಮ್ಮ ಪಾಂಡಿತ್ಯ ಪ್ರದರ್ಶನ ಮಾಡುವುದು, ಆ ಮೂಲಕ ಸ್ತರವಿನ್ಯಾಸ ಸೃಷ್ಟಿಸುವುದು, ಭಿನ್ನತೆ ಮತ್ತು ಸಾಮ್ಯತೆಗಳನ್ನು ಗುರ್ತಿಸುವ ಮೂಲಕ ಕವಿಯ ವಿಶಿಷ್ಟತೆಗಳನ್ನು ಕಂಡುಕೊಳ್ಳುವುದು ಇತ್ಯಾದಿ ಕ್ರಿಯೆಗಳು ಇಲ್ಲಿ ನಡೆದಿವೆ. ಕಾದಂಬರಿಗಳ ಬಗ್ಗೆ ಗಿರಡ್ಡಿ, ಮಹಾಕಾವ್ಯಗಳ ಬಗ್ಗೆ ಆಮೂರ, ಶೇಷಗಿರಿರಾವ್, ರಮ್ಯತೆ ಬಗ್ಗೆ ಮುಣೇಕರ ಹೀಗೆ ಸಾಕಷ್ಟು ಮಂದಿ ಈ ಕೆಲಸ ಮಾಡಿದ್ದಾರೆ. ಶ್ರೀ ರಾಮಾಯಣ

ದರ್ಶನಂ ಪುನರ್ವಿಮರ್ಶೆ ಲೇಖನದಲ್ಲಿ ಭಾಷೆ ವಿಚಾರಕ್ಕೆ ಡಾಂಟೆ, ಹೋಮರಿಕ್ ಸಿಮಿಲಿ ಇನ್ನಿತರ ವಿಚಾರಕ್ಕೆ ಹೋಮರ್, ರಾವಣ ಪಾತ್ರಸೃಷ್ಟಿಯಲ್ಲಿ ಜೈನರಾಮಾಣದ ನಾಗಚಂದ್ರ ಇವರೆಲ್ಲ ಹೇಗೆ ಬೆರೆತು ಹೋಗಿದ್ದಾರೆ ಎಂದು ಆಮೂರರು ಗುರ್ತಿಸಿದ್ದಾರೆ. (ಪ್ರೇರಣೆಗಳ ಅನ್ವೇಷಣೆಯನ್ನು ಪ್ರತ್ಯೇಕವಾಗಿ ಮುಂದೆ ಚರ್ಚಿಸಲಾಗಿದೆ)

ಇಲ್ಲೇ ಇನ್ನೊಂದು ಅಂಶವನ್ನು ಗಮನಿಸಬೇಕು. ಪ್ರಕಾರಗಳನ್ನು ಹೋಲಿಸಿ ನೋಡುವ ಕ್ರಮದಲ್ಲಿ ಕುವೆಂಪು ಕಾದಂಬರಿ ಮತ್ತು ಕಾವ್ಯಗಳ ನಡುವೆ ಯಾವುದು ಶ್ರೇಷ್ಠ ಎಂಬ ಚರ್ಚೆಯೊಂದು ನಡೆದಿದೆ. ಕುವೆಂಪು ಒಳ್ಳೆ ಕಾದಂಬರಿ ಬರೆದಿದ್ದಾರೆ. ಆದರೆ ಅವರು ಒಳ್ಳೆ ಕವಿಯಲ್ಲ ಅನ್ನುವ ಇಮೇಜನ್ನು ಸೃಷ್ಟಿಸುವ ಪ್ರಯತ್ನಗಳು ಇಲ್ಲಿ ನಡೆದಿವೆ. ತುಂಬ ಹಿಂದೆಯೇ ಸೃಷ್ಟಿಯಾದ ಈ ನಂಬಿಕೆ ಇವತ್ತಿಗೂ ಚಾಲ್ತಿಯಲ್ಲಿ ಇದೆ. ತೌಲನಿಕ ವಿಮರ್ಶೆಯ ಬಿಕ್ಕಟ್ಟುಗಳನ್ನು ಕೆಲಮಟ್ಟಿಗೆ ಮಾಸ್ತಿ ಕುವೆಂಪು ತುಲನೆಯಲ್ಲಿ ಪ್ರಸ್ತಾಪಿಸುವ ಎಚ್.ಎಸ್.ರಾಘವೇಂದ್ರರಾವ್ ತಮ್ಮ ಲೇಖನದಲ್ಲಿ ತುಲನೆಗೆ ಮಾಸ್ತಿಯವರ ಕತೆಗಳು ಮತ್ತು ಕುವೆಂಪು ಅವರ ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಅದಕ್ಕೆ ಇವರು ಕೊಡುವ ಕಾರಣ ಇವು ಇವರ ಶ್ರೇಷ್ಠ ರಚನೆಗಳು ಅನ್ನುವುದು. ಅಂದರೆ ಹೋಲಿಸುವುದಕ್ಕೆ ಏನನ್ನು, ಯಾವು ಯಾವುದನ್ನು ಮತ್ತು ಯಾರ್‍ಯಾರನ್ನು ಆಯ್ಕೆ ಮಾಡಿಕೊಳ್ಳುತ್ತಾರೆ ಎಂಬುದನ್ನು ಗಮನಿಸಿದರೆ ವಿಮರ್ಶೆಯ ತತ್ವ, ತೌಲನಿಕತೆಯ ತತ್ವ ಇವರ ವಿಮರ್ಶೆಯ ಮನೋಧರ್ಮ ಎಲ್ಲವುಗಳನ್ನು ಕಾಣಬಹುದು. ತೌಲನಿಕ ವಿಮರ್ಶೆಗೆ ತೊಡಗುವಾಗ ವಿಮರ್ಶೆಗೆ ಆಯಾ ಲೇಖಕರ ಶ್ರೇಷ್ಠ ಕೃತಿಗಳನ್ನೇ ಆಯ್ಕೆ ಮಾಡಿಕೊಂಡು ತುಲನೆ ಮಾಡಬೇಕು ಎಂಬ ನಂಬಿಕೆಯೊಂದು ಈ ವಿಮರ್ಶೆಯಲ್ಲಿ ಇದೆ. (ಎಚ್.ಎಂ.ಚೆನ್ನಯ್ಯ) ಒಬ್ಬರ ಶ್ರೇಷ್ಠ ಕವಿತೆಯನ್ನು ಇನ್ನೊಬ್ಬರ ಕೆಟ್ಟ ಕವಿತೆ ಜೊತೆ ಹೋಲಿಸಿ ಅಪತೀರ್ಮಾನಗಳಿಗೆ ಬರುವ ಸಾಧ್ಯತೆಯನ್ನು ನಿವಾರಿಸುವ ಬಗೆ ಇದು.

ಇಲ್ಲಿ ಪ್ರಕಾರಗಳ ತುಲನೆಯನ್ನು ಗಮನಿಸಿದರೆ ಪ್ರಕಾರ ತತ್ವ ಅಥವಾ ಪ್ರಕಾರ ಮೀಮಾಂಸೆ ನಮ್ಮ ವಿಮರ್ಶೆಯ ನಿಲುವುಗಳನ್ನು ರೂಪಿಸಿರುವುದನ್ನು ನೋಡಬಹುದು. ಎಂ.ಜಿ.ಕೆಯಂಥವರು ವಿಮರ್ಶೆಯ ಬಂಧ, ಕೇಂದ್ರ ಪ್ರಜ್ಞೆಯ ಬಗ್ಗೆ ತಕರಾರೆತ್ತುವಾಗ; ಅನಂತಮೂರ್ತಿ ಕಾದಂಬರಿಯು ವಿವರಗಳಲ್ಲಿ ಸೊಕ್ಕಿದೆ ಎಂದು ಹೇಳುವಾಗ; ಕ.ವೆಂ.ರಾಜಗೋಪಾಲರು ಕೆಲವು ನಾಟಕಗಳ ದೃಶ್ಯಗಳು ಅತಿ ವಿವರಗಳಿಂದಲೂ ಕೆಲವು ವಿವರರಾಹಿತ್ಯದಿಂದಲೂ ಸರಿಯಾದ ನಿರ್ವಹಣೆಗೆ ಗುರಿಯಾಗಿಲ್ಲ ಎಂದು ಹೇಳುವಾಗ; ಕುರ್ತಕೋಟಿ ಕುವೆಂಪು ಕಾವ್ಯದ ಭಾಷೆಯ ಬಗೆಗೆ ಮಾತಾಡುವಾಗ; ಅಭಿವ್ಯಕ್ತಿ ವಿಧಾನದ ಬಗ್ಗೆ ಮಾತಾಡುವಾಗ ಇವರೆಲ್ಲರಲ್ಲಿ ತಮ್ಮದೇ ಆದ ಪ್ರಕಾರ ಮೀಮಾಂಸೆ ಇವರ ವಿಮರ್ಶೆಯ ನಿಲುವುಗಳನ್ನು ರೂಪಿಸಿದೆ. ಅಂದರೆ ಒಳ್ಳೆಯ ಕಾದಂಬರಿ ಒಳ್ಳೆಯ ನಾಟಕ ಒಳ್ಳೆಯ ಕವಿತೆ ಎಂದರೆ ಹೀಗೆ ಹೀಗೇ ರಚನೆಯಾಗಿರಬೇಕು ಎಂಬ ಅವರದ್ದೇ ಆದ ನಂಬಿಕೆಗಳು ಇವರ ವಿಮರ್ಶೆಯ ನಿಲುವುಗಳನ್ನು ಮತ್ತು ಪ್ರಕಾರ ತತ್ವಗಳನ್ನ ರೂಪಿಸಿವೆ. ಕಾದಂಬರಿಯಾಗಲೀ, ನಾಟಕವಾಗಲೀ ಕವಿತೆಯಾಗಲಿ ಹೇಗೆ ರೂಪಿತವಾಗಿದೆ ಅಥವಾ ಅದು ಯಾವ ಪ್ರಕಾರತತ್ವ ಅಥವಾ ರಚನಾತತ್ವವನ್ನು ಬಿಂಬಿಸುತ್ತಿದೆ ಎಂದು ನೋಡುವುದಕ್ಕಿಂತ ತಮ್ಮದೇ ಆದ ರಚನಾತತ್ವದ ನಂಬಿಕೆಗಳ ಮೂಲಕ ಕೃತಿಯನ್ನು ಇವರು ಶ್ರೇಷ್ಠ ಕನಿಷ್ಠ ಎಂದು ನಿರ್ಧರಿಸುತ್ತ ಇರುತ್ತಾರೆ.

3. ಹಲವು ಬಗೆಯ ಕುವೆಂಪುಗಳ ತುಲನೆ:

ಈ ವಿಧಾನದಲ್ಲಿ ಕೆಲವು ಲೇಖನಗಳಲ್ಲಿ ಭಿನ್ನ ವ್ಯಕ್ತಿತ್ವದ ಕುವೆಂಪುವನ್ನು ಕಲ್ಪಿಸಿಕೊಳ್ಳಲಾಗಿದೆ. ಎಲ್ಲ ರೀತಿ ವಿಮರ್ಶೆಗಳಲ್ಲೂ ಇದು ಪ್ರಕಟವಾಗಿದೆ. ಕಲಾವಿದ ಕುವೆಂಪು, ನಿರೂಪಕ ಕುವೆಂಪು ಎಂಬಂತಹ ತುಲನೆ, ತತ್ವಜ್ಞಾನಿ ಕುವೆಂಪು-ನಾಟಕಕಾರ ಕುವೆಂಪು-ಕವಿ ಕುವೆಂಪು-ಚಿಂತಕ ಕುವೆಂಪು-ಕುಲಪತಿ ಕುವೆಂಪು ಹೀಗೆ ಅನೇಕ ಕುವೆಂಪುಗಳ ನಡುವಿನ ತುಲನೆ ಕೂಡ ತೌಲನಿಕ ಕ್ರಮದ ಒಂದು ಬಗೆಯಾಗಿದೆ. ಡಿ.ಆರ್.ನಾಗರಾಜರು ಕುವೆಂಪು ಸಾಹಿತ್ಯದಲ್ಲಿ ಕಲಾವಿದ ಮತ್ತು ನಿರೂಪಕ ಎಂಬ ಎರಡು ವ್ಯಕ್ತಿತ್ವಗಳನ್ನು ಗುರ್ತಿಸುತ್ತಾರೆ. (781) ನಿರೂಪಕ ಕುವೆಂಪು ಕಲಾನಿರ್ಮಿತಿಗಿಂತ ತನ್ನ ವೈಚಾರಿಕ, ಸಾಮಾಜಿಕ ಕಾಳಜಿಗಳ ಅಭಿವ್ಯಕ್ತಿಗೆ ಹೆಚ್ಚು ಒತ್ತು ಕೊಡುತ್ತಾನೆ, ಕಲಾವಿದ ಕುವೆಂಪು ಸಹಜವಾಗಿ ಸಾಹಿತ್ಯದ ಅಭಿವ್ಯಕ್ತಿಗೆ ತೊಡಗುತ್ತಾನೆ; ಇಬ್ಬರಲ್ಲಿ ನಿರೂಪಕ ಕುವೆಂಪುಗಿಂತ ಕಲಾವಿದ ಕುವೆಂಪುವೆ ಹೆಚ್ಚು ಶಕ್ತನಾಗಿ ಕಾಣುತ್ತಾನೆ ಎಂಬ ನಿಲುವನ್ನು ಪ್ರಕಟಿಸುತ್ತಾರೆ.

4. ಪರಂಪರೆಯೊಂದಿಗೆ ಇಟ್ಟು ನೋಡುವುದು:

ತುಲನಾಕ್ರಮದಲ್ಲಿ ಒಂದನ್ನು ಇನ್ನೊಂದರ ಜೊತೆ ಇಟ್ಟು ತೂಗಿ ನೋಡುವ ಹಾಗೆಯೇ ಒಂದನ್ನು ಇನ್ನೊಂದರ ಹಿನ್ನೆಲೆಯಲ್ಲಿಟ್ಟು ನೋಡುವುದೂ ಇದೆ. ಇಲ್ಲಿ ಪ್ರಭಾವಗಳ ಪ್ರೇರಣೆಗಳ ಅನ್ವೇಷಣೆಯ ಜೊತೆಗೆ ಪರಂಪರೆಯ ಜೊತೆ ಕುವೆಂಪುಗೆ ಇರುವ ಸಂಬಂಧಗಳ ಚರ್ಚೆ, ಪರಂಪರೆಯನ್ನು ಕುವೆಂಪು ನೋಡಿರುವ, ಬಳಸಿಕೊಂಡಿರುವ ಕ್ರಮದ ಚರ್ಚೆ, ಪರಂಪರೆಯ ಸಾತತ್ಯವು ಕುವೆಂಪು ಸಾಹಿತ್ಯದಲ್ಲಿ ಕಾಣುವ ಬಗೆಯ ಚರ್ಚೆ ಹಾಗೂ ಪರಂಪರೆಯೊಂದರ ನಿರ್ಮಾಪಕರೇ ಆಗಿ ಕುವೆಂಪು ಬೆಳೆದಿರುವ ಚರ್ಚೆಗಳಿವೆ. ಇದಕ್ಕೆ ಜಿ.ಎಚ್.ನಾಯಕ, ಸುಜನಾ, ಡಿ.ಆರ್.ನಾಗರಾಜ, ಕೆ.ಮರುಳಸಿದ್ದಪ್ಪ ಇವರ ಕೆಲ ವಿಮರ್ಶೆಯನ್ನು ಉದಾಹರಣೆಗೆ ನೋಡಬಹುದು. ಕುವೆಂಪು ಕಥನಕವನಗಳ ಬಗ್ಗೆ ವಿಮರ್ಶೆ ಮಾಡುವಾಗ ಜಿ.ಶ್ರೀನಿವಾಸರಾಜು ಕುವೆಂಪು ಕಥನಕವನಗಳನ್ನು ಒಟ್ಟು ಕಥನಕವನಗಳ ಪರಂಪರೆಯ ಹಿನ್ನೆಲೆಯಲ್ಲಿ ಇಟ್ಟು ವಿಮರ್ಶೆ ಮಾಡುತ್ತಾರೆ. (648) ಇಲ್ಲಿ ಕುವೆಂಪು ವಿಶಿಷ್ಟತೆ ಏನು ಮತ್ತು ಕುವೆಂಪು ಹೇಗೆ ಭಿನ್ನ ಅನ್ನುವುದು ಮುಖ್ಯವಾಗಿದೆ. ಪುಣೇಕರರ 'ಕುವೆಂಪು ಮತ್ತು ಇಂಗ್ಲಿಶ್ ರೊಮ್ಯಾಂಟಿಕ್ ಕಾವ್ಯ' ಈ ಮಾದರಿಯ ಇನ್ನೊಂದು ಉದಾಹರಣೆ. (898) ಪ್ರಭಾವಗಳ ಅನ್ವೇಷಣೆಗೂ ಸ್ವಂತ ವ್ಯಕ್ತಿತ್ವಕ್ಕೂ ಇರುವ ವ್ಯತ್ಯಾಸವನ್ನು ಬಹು ಚೆನ್ನಾಗಿ ಮನಗಾಣಿಸುವ ವಿಮರ್ಶೆ ಇದು. ನವ್ಯರ ದೌರ್ಬಲ್ಯಗಳ ನಾಡಿ ಹಿಡಿಯುವಂಥ ವಿಮರ್ಶೆ ಇದು. ವಿಚಾರ ಸಾಹಿತ್ಯವನ್ನು ಚರ್ಚಿಸುವಾಗ ವಿಚಾರ ಪರಂಪರೆಯಲ್ಲಿಟ್ಟು ಚರ್ಚಿಸುವುದು; ನಾಟಕಗಳ ಚರ್ಚೆಯಲ್ಲಿ ನಾಟಕಚರಿತ್ರೆಯನ್ನು ಹಿನ್ನೆಲೆಗೆ ಇಟ್ಟು ನೋಡುವುದು; ಭಾಷೆಯ ಬಗೆಗೆ ಚರ್ಚಿಸುವಾಗ ಸಾಹಿತ್ಯ ಪರಂಪರೆಯಲ್ಲಿನ ಭಾಷೆಯ ಬಳಕೆಯ ವಿನ್ಯಾಸಗಳ ಜೊತೆ ಇಟ್ಟು ಚರ್ಚಿಸುವುದು ಹೀಗೆ ಪರಂಪರೆಯ ಬಿತ್ತಿಯೊಂದಿಗೆ ತೌಲನಿಕವಾಗಿ ಚರ್ಚಿಸುವುದು ಈ ವಿಮರ್ಶೆಯ ಒಂದು ವಿನ್ಯಾಸವಾಗಿದೆ.

5. ದೃಷ್ಟಿ-ಧೋರಣೆಗಳ ಸಂಬಂಧಾಂತರಗಳ ತುಲನೆ

ಕುವೆಂಪು ಅವರು ತಮ್ಮ ಭಿನ್ನ ಪ್ರಕಾರಗಳಲ್ಲಿ ವ್ಯಕ್ತ ಪಡಿಸಿರುವ ದೃಷ್ಟಿಧೋರಣೆಗಳ ನಡುವೆ ಸಾಮ್ಯತೆ ಇದೆಯೇ ಅಥವಾ ವೈರುಧ್ಯ ಇದೆಯೇ ಎಂಬ ತುಲನೆಯೊಂದು ನಮ್ಮ ತೌಲನಿಕ ವಿಮರ್ಶೆಯಲ್ಲಿ ಪ್ರಕಟವಾಗಿದೆ. ನಿಸರ್ಗಕವಿತೆಗಳಲ್ಲಿ ಕುವೆಂಪು ಪ್ರಕಟಪಡಿಸಿರುವ ದಾರ್ಶನಿಕತೆಗೂ ವೈಚಾರಿಕ ಲೇಖನಗಳಲ್ಲಿ ಅವರು ಪ್ರಕಟಿಸುವ ವೈಚಾರಿಕತೆಗೂ ಸಾಮ್ಯವಿದೆಯೇ ಇಲ್ಲವೇ? (2581–ಪುಟ: 218) ಕುವೆಂಪು ಕಾದಂಬರಿಗಳಲ್ಲಿ ಪ್ರಕಟಿಸುವ ಪರಿಸರ ಪ್ರಜ್ಞೆಗೂ ಕಾವ್ಯದಲ್ಲಿ ಪ್ರಕಟಿಸುವ ಪರಿಸರ ಪ್ರಜ್ಞೆಗೂ ಸಂಬಂಧ ಇದೆಯೇ ಇಲ್ಲವೇ? ಇವರ ನಾಟಕಗಳ ಭಾಷೆಗೂ ಕಾವ್ಯದ ಭಾಷೆಗೂ ಇರುವ ಸಂಬಂಧಾಂತರಗಳೇನು? (836) ಇವರ ಮಹಾಕಾವ್ಯದ ರಚನಾ ವಿನ್ಯಾಸ, ಅಭಿವ್ಯಕ್ತಿ ವಿಧಾನಗಳಿಗೂ ಬಿಡಿಕವಿತೆಗಳ ಅಭಿವ್ಯಕ್ತಿ ವಿಧಾನಗಳಿಗೂ ಇರುವ ಸಾಮ್ಯ ವ್ಯತ್ಯಾಸಗಳೇನು? ಹೀಗೆ ಹಲವು ನೆಲೆಯ ಅಂತರ್ ಪ್ರಕಾರೀಯ ತೌಲನಿಕ ಚರ್ಚೆಗಳು ನಮ್ಮ ವಿಮರ್ಶೆಯಲ್ಲಿ ನಡೆದಿದೆ. ಈ ಚರ್ಚೆಗಳು ಭಿನ್ನ ಭಿನ್ನ ನಿಲುವುಗಳಿಗೆ ತಲುಪಿವೆ. ವಿಶೇಷವಾಗಿ ಕುವೆಂಪು ಅವರ ಜೀವನ ದೃಷ್ಟಿ ಅಥವಾ ದಾರ್ಶನಿಕತೆಗಳಲ್ಲಿ ವೈರುಧ್ಯವನ್ನು ನಮ್ಮ ವಿಮರ್ಶೆಯು ಗುರ್ತಿಸಿಲ್ಲ. ಆದರೆ ಅವರ ಕೆಲವು ವೈಚಾರಿಕ ಚಿಂತನೆಗಳಲ್ಲಿ ವೈರುಧ್ಯವನ್ನು ನಮ್ಮ ವಿಮರ್ಶೆಯು ಗುರ್ತಿಸಿದೆ. ಇಂತಹ ವೈರುಧ್ಯಗಳನ್ನು 'ವಾಸ್ತವದ ಬಹುತ್ವ' ಎಂಬಂತೆಯೂ (1415), ಸಹಜ ವಾಸ್ತವ ಎಂಬಂತೆಯೂ (2376) ನಮ್ಮ ವಿಮರ್ಶೆಯು ಸಮರ್ಥಿಸಿದೆ.

6. ಅನ್ಯ ಕಣ್ಣುಗಳ ಮೂಲಕ ನೋಡುವ ವಿಧಾನ

ತೌಲನಿಕ ವಿಮರ್ಶೆಯಲ್ಲಿ ಒಂದು ವಿಶಿಷ್ಟವಾದ ಬಗೆ ಎಂದರೆ ಅನ್ಯ ಕಣ್ಣುಗಳಿಂದ ನಮ್ಮ ಸಾಹಿತ್ಯವನ್ನು ನೋಡುವ ವಿಧಾನ. ಇಲ್ಲಿ ತೌಲನಿಕವಾಗಿ ಸಾಹಿತ್ಯವನ್ನು ವಿಮರ್ಶಿಸುವ ಉದ್ದೇಶ ಇರುವುದಿಲ್ಲವಾದರೂ ಆತ್ಯಂತಿಕವಾಗಿ ಅದೇ ಸಂಭವಿಸುತ್ತಿರುತ್ತದೆ. ಹೋಲಿಕೆಗಳು ಮತ್ತು ವ್ಯತ್ಯಾಸಗಳ ವಿವರಗಳ ಮೂಲಕ, ತರತಮ ವಿಶ್ಲೇಷಣೆಗಳ ಮೂಲಕ ತೌಲನಿಕವಾದ ಚರ್ಚೆ ಇಲ್ಲಿ ಬೆಳೆಯುವುದಕ್ಕಿಂತ, ಅನ್ಯ ಸಾಹಿತ್ಯದ ತನ್ನ ತಿಳುವಳಿಕೆಯನ್ನು ವಿಮರ್ಶಕನು ಪ್ರದರ್ಶಿಸುವ ಪ್ರವೃತ್ತಿಯೆ ಇಲ್ಲಿ ಹೆಚ್ಚಾಗಿ ಕಾಣುತ್ತಿರುತ್ತದೆ. ಉಲ್ಲೇಖಗಳು ಮತ್ತು ರೆಫರೆನ್ಸುಗಳು ಇಲ್ಲಿ ಸಹಜವೆಂಬಂತೆ ಹಾಯುತ್ತಿರುತ್ತವೆ. ಯು.ಆರ್.ಅನಂತಮೂರ್ತಿ ಅವರ 'ಭವ್ಯ ನಿತ್ಯಗಳ ಸಂಗಮ' ಲೇಖನ ಇಂತಹ ವಿಮರ್ಶೆಗೆ ಒಂದು ಉತ್ತಮ ಉದಾಹರಣೆ.

ಇಂತಹ ಕಡೆ ಸಾಹಿತ್ಯ ವಿಮರ್ಶೆಯಲ್ಲಿ ವಿಮರ್ಶಕರು ತಾವು ಬಲ್ಲ ಸಾಹಿತ್ಯಕ ಜಗತ್ತಿನಲ್ಲಿ ಎಲ್ಲಿಂದ ಎಲ್ಲಿಗೋ ಜಿಗಿಯುತ್ತಿರುತ್ತಾರೆ. ಅವರ ನೆನಪಿನ ಕುದುರೆ ಎಲ್ಲಿಂದ ಎಲ್ಲಿಗೋ ಜಿಗಿಯುತ್ತಿರುತ್ತದೆ.

ಸಾಹಿತ್ಯದ ಜಗತ್ತಿನಲ್ಲಿ ಇಲ್ಲಿ ಕಾಲ, ಭಾಷೆ, ದೇಶದ ಹಂಗು ಇರುವುದಿಲ್ಲ. ಇಲ್ಲಿ ಒಬ್ಬೊಬ್ಬ ವಿಮರ್ಶಕನೂ ಅವನೇ ಕಟ್ಟಿಕೊಂಡ ಅವನು ಬಲ್ಲ ಜಗತ್ತೊಂದರಲ್ಲಿ ಯಾವು ಯಾವುದನ್ನೋ ಉಲ್ಲೇಖಿಸುತ್ತ ತನ್ನ ವಿಮರ್ಶೆಯನ್ನು ಸಾದೃಶ್ಯಗಳಿಂದ, ಉಪಮೆಗಳಿಂದ, ಪ್ರೇರಣೆಗಳಿಂದ ಕಟ್ಟುತ್ತಿರುತ್ತಾನೆ. (1667–ಪುಟ: 28–38) ಇಲ್ಲೆಲ್ಲ ಲೇಖಕನ ತತ್ತ್ವ ದರ್ಶನಗಳ ಬಗೆಗೆ ಮಾತಾಡುವಾಗ ವಿಮರ್ಶಕ ತಾನೂ ತತ್ತ್ವಜ್ಞಾನಿಯ ಪಾತ್ರವನ್ನು ಆಡುತ್ತಿರುತ್ತಾನೆ. 18ನೆ ಶತಮಾನದ ಇಂಗ್ಲಿಶ್ ಗದ್ಯ, ಗ್ರೀಕ್ ನಾಟಕಗಳು, ಕನ್ನಡ ಪರಂಪರೆ, ಪಂಪ, ಕುಮಾರವ್ಯಾಸರು, ಷೆಲ್ಲಿ, ಕೀಟ್ಸ್, ಮಿಲ್ಟನ್, ಟಾಲ್‌ಸ್ಟಾಯ್, ಟ್ಯಾಗೋರ್, ಈಗೋಯಿಸ್ಟಿಕ್ ಸಬ್ಲೈಮು, ಪ್ಯೂರಿಟನ್ ಚಿಂತನೆ, ಎ.ಕೆ.ರಾಮಾನುಜನ್, ಉಪನಿಷತ್ತು, ಸೈಕಲಾಜಿಕಲ್ ಫಿಕ್ಷನ್ನು, ಮರ್ಸಿ ಸ್ಪೀಚು, ರ್‍ಯಾಶನಾಲಿಸಮ್ಮು, ಷೇಕ್ಸ್‌ಪಿಯರು, ಆಧ್ಯಾತ್ಮ, ರಾಮಾಯಣ, ಭಾರತ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಟ್ಯಾಗೋರ್, ಗೀತಗೋವಿಂದ, ಶ್ರೀಹರ್ಷ, ಚೈತನ್ಯ ಪ್ರಭು, ಹೀಗೆ ವಿಮರ್ಶಕನದೇ ಆದ ಒಂದು ಜಗತ್ತು ವಿಮರ್ಶೆಯಲ್ಲಿ ಹುಟ್ಟಿ ಬೆಳೆಯುತ್ತಿರುತ್ತದೆ. ಇಲ್ಲಿ, ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಎಲ್ಲಿಲ್ಲಿಂದ ಎಲ್ಲೆಲ್ಲಿಗೋ ಜಿಗಿತಗಳಿರುತ್ತವೆ. ತೌಲನಿಕತೆ ಇಲ್ಲಿ ಉದ್ದೇಶ ಅಲ್ಲವಾದರೂ ತೌಲನಿಕ ಜಗತ್ತಿನಲ್ಲಿ ಸ್ಥಳೀಯ ಪ್ರತಿಭೆಯು ಅನುಸಂಧಾನಕ್ಕೆ ಗುರಿಯಾಗುತ್ತಿರುತ್ತದೆ. ಇಲ್ಲಿ ಸ್ವ ಮತ್ತು ಅನ್ಯಗಳು ಕಲಸಿಹೋಗುತ್ತಿರುತ್ತವೆ. ದೃಷ್ಟಿಕೋನಕ್ಕೆ ತಕ್ಕಂತೆ ಹೊಸ ಹೊಸದಾಗಿ ಸ್ವ ಮತ್ತು ಅನ್ಯಗಳು ರೂಪಗೊಳ್ಳುತ್ತಿರುತ್ತವೆ. ಇಂತಹ ಕಡೆ ತನ್ನದೇ ಆದ ಒಂದು ಸಾಹಿತ್ಯ ಜಗತ್ತಿನ ಸೃಷ್ಟಿ ನಡೆಯುತ್ತಿರುತ್ತದೆ. ಸಾಹಿತ್ಯ ವಿಮರ್ಶೆಯೇ ಕೆಲವೊಮ್ಮೆ ಇಲ್ಲಿ ಹಿನ್ನೆಲೆಗೆ ಸರಿದು ಸಾಹಿತ್ಯವೆಂಬ ಸಾಧನದ ಮೂಲಕ ಜಾಗತಿಕ ಜಿಜ್ಞಾಸೆಯೊಂದು ಜರುಗುತ್ತಿರುತ್ತದೆ. ಇಂತಹ ಕಡೆ ವಿಮರ್ಶಕನ ಆತನದೇ ಆದ ಸಾಹಿತ್ಯ ಜಗತ್ತಿನ ಸೃಷ್ಟಿ, ಸೃಷ್ಟಿಯಲ್ಲಿನ ಜಿಗಿದಾಟ ಮತ್ತು (ನೆನಪಿಗೆ ಹೊಳೆಯುವ) ಜಾಗತಿಕ ಜಿಜ್ಞಾಸೆಯು ವಿಮರ್ಶೆಯ ಲಕ್ಷಣ ಮತ್ತು ದೃಷ್ಟಿ ಆಗಿರುತ್ತದೆ. ಕುವೆಂಪುವನ್ನು ಹತ್ತು ಹಲವುಗಳ ಸಂಗಮವೆಂದು ವ್ಯಾಖ್ಯಾನಿಸುವ ವಿಮರ್ಶೆಯೂ ಸ್ವಯಂ ಇಲ್ಲಿ ಹತ್ತು ಹಲವುಗಳ ಸಂಗಮವೆ ಆಗಿರುತ್ತದೆ. ಕೆಲವು ವಿಮರ್ಶೆಯ ಇಂತಹ ಮಾದರಿಗಳಲ್ಲಿ ನೇಮ್‌ಡ್ರಾಪಿಂಗು ಮಾತ್ರವೇ ಪ್ರಧಾನವಾಗುವ ಸಂಭವನೀಯತೆಯೂ ಪ್ರಕಟವಾಗಿದೆ. ಕೆಲವೊಮ್ಮೆ ಸಾದೃಶ್ಯ–ಸಾಮ್ಯಗಳನ್ನು ಹುಡುಕಿ ಚರ್ಚಿಸುವ ಕಡೆಗೂ ಈ ಪ್ರವೃತ್ತಿಯು ಬೆಳೆದಿದೆ. (ನೋಡಿ: 778) ಸಾಮ್ಯ ಸಾದೃಶ್ಯಗಳ ಸಂಯೋಜನೆಯೆ ಪ್ರಧಾನವಾದ ವಿಮರ್ಶೆಯೂ ಇಲ್ಲಿದೆ.

### 7. ತತ್ತ್ವರೂಪಿ ಮತ್ತು ಪರಿಣಾಮ ಮೀಮಾಂಸೆ

ತತ್ತ್ವರೂಪದಲ್ಲಿ ಮಂಡಿತವಾಗಿರುವ ತತ್ತ್ವಗಳು ಮತ್ತು ಸಾಹಿತ್ಯದಲ್ಲಿ ಆಚರಣೆಯ ಮೂಲಕ ಪ್ರಕಟವಾಗುವ ತತ್ತ್ವಗಳೆರಡನ್ನು ಕ್ರೋಢೀಕರಿಸಿ ಹೇಳುವ ಮಾರ್ಗವನ್ನು ಅನುಸರಿಸಿರುವ ಉದಾಹರಣೆಯೂ ನಮ್ಮಲ್ಲಿದೆ. (604–ಪುಟ 9, 18) ಕುವೆಂಪು ಅವರ ಸೃಜನಶೀಲತೆ ಮತ್ತು ತತ್ತ್ವಗಳ ನಡುವೆ ಹೊಂದಾಣಿಕೆ ಇಲ್ಲದ ಬಿರುಕುಗಳು ಇವೆಯೇ ಎಂಬ ಪರೀಕ್ಷೆಯು ಇಲ್ಲಿ ನಡೆದಿದೆ. ಒಟ್ಟು ಕುವೆಂಪು ಪ್ರತಿಪಾದಿಸುವ ವಿಮರ್ಶೆಯ ತತ್ತ್ವ ಮತ್ತು ಕಾವ್ಯ ತತ್ತ್ವ ಎಂಥದ್ದು ಎಂಬ 'ಕುವೆಂಪು ತಾತ್ತ್ವಿಕ ಮಾರ್ಗ' ಒಂದರ ಹುಡುಕಾಟ ಇಲ್ಲಿದೆ. ಕುವೆಂಪು ನಂತರದ ವಿಮರ್ಶಾ ಪರಂಪರೆಯಲ್ಲಿ ಕುವೆಂಪು ನಡುಗಡ್ಡೆಯಾಗಿ ಉಳಿದಿದ್ದಾರೆ; ಅನುಸರಣೆಗೆ ಗುರಿಯಾಗಿಲ್ಲ ಎಂಬ ನಿಲುವಿಗೆ ಇಲ್ಲಿ ಬರಲಾಗಿದೆ. ಕುವೆಂಪುವನ್ನು ಹಿಂದಿನ ಪರಂಪರೆಯ ಹಿನ್ನೆಲೆಯಲ್ಲಿ ಇಟ್ಟು ಚರ್ಚಿಸುವ ದೃಷ್ಟಿಕೋನವು ಇರುವಂತೆಯೇ ನಮ್ಮಲ್ಲಿ ಕುವೆಂಪು ನಂತರದ ಕಾಲದಲ್ಲಿ ವಿಮರ್ಶೆ–ಕಾವ್ಯ–ನಾಟಕ–ವಿಚಾರಗಳ ಕ್ಷೇತ್ರಗಳಲ್ಲಿ ಯಾವ ರೀತಿಯ ಪರಿಣಾಮಗಳನ್ನು ಉಂಟುಮಾಡಿದ್ದಾರೆ ಎಂಬ ಚರ್ಚೆಯೂ ಇದೆ. ಕಾರಣ ಮೀಮಾಂಸೆಯಂತೆ ಪರಿಣಾಮ ಮೀಮಾಂಸೆಯ ಚರ್ಚೆಯೂ ನಮ್ಮಲ್ಲಿನ ಒಂದು ಕಾರ್ಯ. ಕುವೆಂಪು ಕಾಲವನ್ನು (ಕುವೆಂಪು ಬದುಕಿನ 20ನೇ ಶತಮಾನವನ್ನು) ಕುವೆಂಪು ಯುಗ ಎಂದು ಕರೆಯುವ ದೃಷ್ಟಿಯೂ ಇಲ್ಲಿ ಇದೆ. (ಭಗವಾನ್) ತೌಲನಿಕವಾಗಿ ಚಿಂತಿಸುವಾಗ ಕುವೆಂಪು ಬರೆಹದ ಕಾಲವನ್ನು ಅಜಮಾಸು ಮಧ್ಯವಾಗಿ ಇರಿಸಿಕೊಂಡು ಹಿಂದಿನ ಸಾವಿರ ವರ್ಷಗಳ ಭೂತ ಮತ್ತು ಆನಂತರದ ಭವಿಷ್ಯತ್ತುಗಳೆರಡರ ತುಲನೆಯನ್ನು ನಮ್ಮಲ್ಲಿ ಮಾಡಲಾಗಿದೆ. ಕನ್ನಡ ನಾಟಕಗಳ ಚರಿತ್ರೆಯಲ್ಲಿ ಕುವೆಂಪು ನಾಟಕಗಳ ಭಾಷೆ, ಛಂದಸ್ಸು, ವಿನ್ಯಾಸ, ರಚನಾಕ್ರಮ ಒಟ್ಟಾರೆ ಕುವೆಂಪು ನಾಟಕಪ್ರಜ್ಞೆ ಕುವೆಂಪು ನಂತರದಲ್ಲಿ ನಡುಗಡ್ಡೆಯಾಗಿ ಉಳಿದಿದೆ. ಅನುಸರಣೆಯಾಗಿಲ್ಲ ಎಂಬ ನಿಲುವಿಗೆ ಇಲ್ಲಿ ಬರಲಾಗಿದೆ. (417–ಪುಟ: 383)

ಏನೇ ಆಗಲಿ ನಮ್ಮಲ್ಲಿ ಕಂಪಾರೆಟೀವ್ ಮೆತೆಡ್ ಅನ್ನುವುದು ಸಾಕಷ್ಟು ಪ್ರಾಕ್ಟೀಸಿಗೆ ಗುರಿಯಾಗಿದೆ. ಆದರೆ ಆ ಪ್ರಾಕ್ಟೀಸನ್ನು ತೌಲನಿಕ ತತ್ವ ಮೀಮಾಂಸೆ ಅಷ್ಟಾಗಿ ಬಾಧಿಸಿದಂತೆ ತೋರುವುದಿಲ್ಲ. ವಿಮರ್ಶೆಯಲ್ಲಿ ಇಂಗ್ಲಿಶ್ ಲೋಕದ ಹತ್ತು ಹಲವು ಪಂಥಗಳು ಮಾರ್ಗಗಳು ತಲೆ ಹಾಕಿರುವಂತೆ ನಮ್ಮ ಕಂಪೇರಿಂಗ್ ಪ್ರಾಕ್ಟೀಸಿನಲ್ಲಿ ದಿ ಥಿಯರಿ ಆಫ್ ಕಂಪಾರಿಶನ್ ಅಥವಾ ಥಿಯರೀಸ್ ಆಫ್ ಕಂಪಾರೆಟೀವ್ ಕ್ರಿಟಿಸಿಸಮ್ ಅಷ್ಟಾಗಿ ತಲೆ ಹಾಕಿದಂತೆ ಕಾಣುವುದಿಲ್ಲ. ಈಗೀಗ ಆಮದಾದ ಸಿದ್ಧಾಂತಗಳು; ಅನುವಾದಗೊಂಡ ಸಿದ್ಧಾಂತಗಳು ಬೆಳಕು ಕಾಣುತ್ತಿವೆ. ಕುವೆಂಪು ವಿಮರ್ಶೆಯಲ್ಲಿ ನಿಯತವಲ್ಲದ ಹತ್ತು ಹಲವು ರೀತಿಯ ತುಲನಾ ವಿಧಾನಗಳು ಸೃಷ್ಟಿಯಾಗಿವೆ. ತೌಲನಿಕತೆ ಅನ್ನುವುದು ಕನ್ನಡ ವಿಮರ್ಶೆಯ ಗುಣಧರ್ಮ ಅನ್ನುವ ರೀತಿ ಇದೆ. ಅಷ್ಟೇ ಅಲ್ಲ ಇದೊಂದು ಪಂಥವಾಗಿಯೂ ಬೆಳೆಯುತ್ತಿದೆ. ಏನೇ ಆದರೂ ನಮ್ಮಲ್ಲಿನ ಒಟ್ಟಾರೆ ವಿಮರ್ಶೆಯ ಪ್ರಾಕ್ಟೀಸನ್ನೇ ಅಭ್ಯಾಸ ಮಾಡಿ ಆ ಮೂಲಕ ತೌಲನಿಕತೆಯನ್ನು ಥಿಯರೈಸ್ ಮಾಡಿಕೊಳ್ಳಬೇಕಾದ ಅಗತ್ಯ ಇದೆ. ಮತ್ತು ಮಾಡಬಹುದಾದ ಅವಕಾಶವೂ (ಸ್ಪೇಸ್) ಇದೆ.

**5.1.4. ಪ್ರೇರಣೆ, ಪ್ರಭಾವಗಳ ಅನ್ವೇಷಣೆ**

ಪ್ರೇರಣೆ, ಪ್ರಭಾವ, ಸ್ಫೂರ್ತಿಗಳು ಕವಿಗೆ-ಕವಿಯ ವ್ಯಕ್ತಿತ್ವ ಮತ್ತು ದೃಷ್ಟಿಕೋನಗಳ ರೂಪಣೆಗೆ; ಆ ಮೂಲಕ ಆತನ ಸಾಹಿತ್ಯಕ್ಕೆ ಹೇಗೆಲ್ಲ, ಎಷ್ಟೆಲ್ಲ, ಎಲ್ಲೆಲ್ಲಿಂದೆಲ್ಲ ಒದಗಿ ಬಂದಿವೆ ಎಂದು ಅನ್ವೇಷಿಸುವುದು ಕುವೆಂಪು ಕುರಿತ ವಿಮರ್ಶೆಯ ಒಂದು ಪ್ರಧಾನ ಉದ್ಯೋಗವಾಗಿದೆ. ಈ ಅನ್ವೇಷಣೆಯು ನಮ್ಮಲ್ಲಿ ಬಹುಪಾಲು ತೌಲನಿಕ ವಿಮರ್ಶೆಯ ಅಂಗವಾಗಿಯೆ ನಡೆಯುತ್ತ ಬಂದಿದೆ. ಅಲ್ಲದೆ ಇದೊಂದು ಸ್ವತಂತ್ರ ಮಾರ್ಗವೇ ಆಗಬಹುದಾದ ಸಾಧ್ಯತೆಯೂ ಇದೆ. ಪ್ರೇರಣೆ ಪ್ರಭಾವಗಳ ಅಧ್ಯಯನವು ಒಂದು ವಿಮರ್ಶಾ ಮತ್ತು ಅಧ್ಯಯನ ಮಾರ್ಗವಾಗಬಹುದಾದ ಸಾಧ್ಯತೆಗಳು ನಮ್ಮಲ್ಲಿ ಇನ್ನೂ ಶೋಧಿತವಾಗಬೇಕಿದೆ. ಈ ನಿಟ್ಟಿನಲ್ಲಿ ತಾತ್ವಿಕವಾಗಿ-ಸೈದ್ಧಾಂತಿಕವಾಗಿ ಹೆಚ್ಚಿನ ಕೆಲಸಗಳು ನಡೆಯಬೇಕಿದೆ.

ಪ್ರೇರಣೆಯ ವಲಯದಲ್ಲಿ ಶೈಲಿ, ಭಾಷೆಗಳ ವಿಚಾರದಲ್ಲಿ ಸ್ವಂತಿಕೆ ಅಡಗಿರುತ್ತದೆ ಮತ್ತು ಕಥನಗಳ ಪುನರ್ಕಥನವು ಸ್ವಂತಿಕೆಯೇ ಆಗಿದೆ ಎಂದು ನಮ್ಮ ಪ್ರಾಚೀನ ಸಾಹಿತ್ಯ ವಿಮರ್ಶೆಯು ಭಾವಿಸುತ್ತದೆ. ಪ್ರೇರಣೆ-ಪ್ರಭಾವಗಳನ್ನು ಆಧುನಿಕ ವಿಮರ್ಶೆಯು ಕೂಡ ಪರತಂತ್ರವೆಂದು ಭಾವಿಸುವುದಿಲ್ಲ. ಅವುಗಳನ್ನು ಅರಗಿಸಿಕೊಂಡು ನಮ್ಮ ಸಾಹಿತ್ಯವು ಹೇಗೆ ಬೆಳೆದಿದೆ ಎಂದು ನೋಡುವ ಮೂಲಕ ಅದರ ವಿಶಿಷ್ಟತೆಯನ್ನು ಗುರ್ತಿಸುವ ಕೆಲಸಕ್ಕೆ ಇಲ್ಲಿ ಪ್ರೇರಣೆಯ ಅಧ್ಯಯನವು ತೊಡಗಿಕೊಂಡಿದೆ. ಸಂಸ್ಕೃತ-ಪ್ರಾಕೃತ-ದ್ರಾವಿಡ ಭಾಷೆಗಳ ಜೊತೆಗಿನ ಕನ್ನಡದ ಕೊಡು ಕೊಳೆಯನ್ನು ಪ್ರಾಚೀನ ಸಂದರ್ಭದಲ್ಲೂ, ಇಂಗ್ಲೀಷಿನ ಜೊತೆಗಿನ ಅನುಸಂಧಾನವನ್ನು ಆಧುನಿಕ ಸಂದರ್ಭದಲ್ಲೂ ವಿವೇಚಿಸುವುದು ನಮ್ಮಲ್ಲಿ ಯಾವತ್ತಿನಿಂದಲೂ ನಡೆದು ಬಂದಿದೆ. ಇಂಗ್ಲೀಷಿನ ಪ್ರಭಾವದಿಂದ ಕನ್ನಡದಲ್ಲಿ ಹೊಸ ಮಟ್ಟುಗಳು ಪ್ರಯೋಗವಾದುದನ್ನು ಇಂಗ್ಲೀಷ್ ಗೀತಗಳ ಉದಾಹರಣೆ ಕೊಟ್ಟು ಸಂಭವಕಾಲೀನ ವಿಮರ್ಶೆಯು ಚರ್ಚಿಸಿದೆ.

ಪ್ರೇರಣೆ, ಪ್ರಭಾವಗಳ ಚರ್ಚೆಯು ಕೆಲವೊಮ್ಮೆ ಮಿಥ್ಯಾಕಲ್ಪನೆಗಳನ್ನೇ ಚಾರಿತ್ರಿಕ ವಾಸ್ತವಗಳೆಂದು ತಿಳಿಯುವ; ನಿರೂಪಿಸುವ ಕೆಲಸವನ್ನು ಮಾಡಿದೆ. ಇಂಗ್ಲೀಷ್ ಗೀತಗಳು ಬಗೆಗಿನ ನಿರೂಪಣೆಯೆ ಇದಕ್ಕೆ ಉದಾಹರಣೆ. ಹೊಸಗನ್ನಡ ಛಂದೋಲಯಗಳು, ಗೀತಗಳು, ಆಧುನಿಕ ಕವಿತೆಯ ರೂಪ ಚೌಕಟ್ಟುಗಳು ಇಂಗ್ಲೀಷಿನಿಂದ ಒದಗಿ ಬಂದವು ಎಂಬುದೆ ಒಂದು ಮಿಥ್ಯಾಕಲ್ಪನೆ. ನಮ್ಮ ಪರಂಪರೆಯಲ್ಲಿ ಸ್ವರವಚನ, ಕೀರ್ತನ, ತತ್ವಪದ, ತಾರಾವಳಿ, ಲಾವಣಿ, ದೇವರ ಪದಗಳು ನೂರಾರು ಇದ್ದುವು. ಆದರೆ 'ಇಂಗ್ಲಿಷ್ ಗೀತಗಳು' ಅನ್ನು ಆಧರಿಸಿದ ವಿಮರ್ಶೆಗಳು ಇವುಗಳ ಕ್ರೆಡಿಟ್ಟನ್ನೆಲ್ಲ ಶ್ರೀಯವರಿಗೇ ನೀಡಿವೆ.

ಕುವೆಂಪು ಸಂದರ್ಭದಲ್ಲಿನ ಪ್ರಭಾವ-ಪ್ರೇರಣೆಗಳ ಅನ್ವೇಷಣೆಯು ಸಾಹಿತ್ಯದ ಮತ್ತು ವ್ಯಕ್ತಿತ್ವದ ಮೇಲಿನ ಪ್ರೇರಣೆಗಳ ಅನ್ವೇಷಣೆ ಎಂಬಂತೆ ಎರಡು ತೆರನಾಗಿ ನಡೆದಿದೆ. ಈ ಎರಡೂ ಕೂಡ ಅಭೇದವೆಂಬಂತೆಯೂ ನಡೆದಿವೆ. ಹಾಗೆ ನೋಡಿದರೆ ಇವೆರಡೂ ಪ್ರತ್ಯೇಕವೇನೂ ಅಲ್ಲ. ಸಾಹಿತ್ಯದ ಮೂಲ; ಹಿನ್ನೆಲೆಗಳ ಅಧ್ಯಯನ (ಶೋಧವಾಗಿಯೂ ಇದು ನಡೆದಿದೆ) 1. ವರ್ತಮಾನದ ಭಾರತೀಯ ಸಾಂಸ್ಕೃತಿಕ ಸಂದರ್ಭ ವಿವೇಕಾನಂದ, ಪರಮಹಂಸ, ಸ್ವಾಮಿ ಶ್ರದ್ಧಾನಂದ, ಗಾಂಧೀಜಿ, ಟ್ಯಾಗೋರ್, ಅರವಿಂದ ಮುಂತಾದ ವ್ಯಕ್ತಿಗಳ ಪ್ರಭಾವ ಮತ್ತು ಸ್ವಾತಂತ್ರ ಹೋರಾಟದ ಹಿನ್ನೆಲೆ ಇತ್ಯಾದಿ.. 2. ಭಾರತೀಯ

ಮತ್ತು ಕನ್ನಡ ಪರಂಪರೆಗಳ ಪ್ರಭಾವ-ವೇದ, ಉಪನಿಷತ್ತು, ಪುರಾಣ, ದರ್ಶನ, ಸಂಸ್ಕೃತ ಸಾಹಿತ್ಯ ಪರಂಪರೆ, ಕನ್ನಡ ಸಾಹಿತ್ಯ ಪರಂಪರೆ, ಜೈನಧರ್ಮ, ಜೈನಪುರಾಣ ಇತ್ಯಾದಿ.. 3. ಇಂಗ್ಲಿಷ್ ಲೋಕ, ಇಂಗ್ಲಿಷ್ ಶಿಕ್ಷಣ, ಆಂಗ್ಲ ಭಾಷೆಯ ಮೂಲಕ ದಕ್ಕಿದ ವಿಶ್ವಸಾಹಿತ್ಯ ಲೋಕ; ಅದರಲ್ಲೂ ಮುಖ್ಯವಾಗಿ ರಮ್ಯಕಾವ್ಯ ಮತ್ತು ಮಹಾಕಾವ್ಯ ಪರಂಪರೆ ಹಾಗೂ ಶೇಕ್ಸ್‌ಪಿಯರನ ನಾಟಕಗಳು ಇತ್ಯಾದಿ.. 4. ಕುವೆಂಪು ಅವರು ಹುಟ್ಟಿ ಬೆಳೆದ ಪ್ರಾದೇಶಿಕ ಪರಿಸರ-ಮಲೆನಾಡು-ಪ್ರಕೃತಿ ಮತ್ತು ಸಂಸ್ಕೃತಿ. 5. ಕುವೆಂಪು ಹುಟ್ಟಿದ ಶೂದ್ರ ವರ್ಗ. ಹೀಗೆ ಮುಖ್ಯವಾಗಿ ಐದು ಬಗೆಯಲ್ಲಿ ಕುವೆಂಪು ವ್ಯಕ್ತಿತ್ವ-ಸಾಹಿತ್ಯದ ಮೇಲಣ ಪ್ರಭಾವ ಪ್ರೇರಣೆಗಳನ್ನು ಗುರ್ತಿಸಿಕೊಳ್ಳಲಾಗಿದೆ.

ಈ ಅನ್ವೇಷಣೆಯು ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯವು ರೂಪಗೊಂಡ ಬಗೆಯನ್ನು-ಅವುಗಳ ಸ್ವರೂಪವನ್ನು ತಿಳಿಯುವ ಯತ್ನವಾಗಿದೆ. ಹಾಗೇ ವ್ಯಕ್ತಿತ್ವ ಮತ್ತು ಸಾಹಿತ್ಯಗಳ ನಡುವಿನ ಸಂಬಂಧ; ಸಾಹಿತ್ಯ-ಸಾಹಿತಿ-ಲೋಕ-ಸ್ಥಳೀಯತೆ-ಪರಂಪರೆಗಳ ನಡುವಿನ ಸಂಬಂಧಗಳನ್ನು ಅರ್ಥ ಮಾಡಿಕೊಳ್ಳುವ ಯತ್ನವಾಗಿದೆ. ಇಂಥ ಯತ್ನಗಳನ್ನು ವಿಮರ್ಶೆಯು ಮಾಡಬೇಕು ಎಂಬ ವಿಮರ್ಶೆಯ ಕಾರ್ಯದ ಕುರಿತ ತತ್ವವು ಇಲ್ಲೆಲ್ಲ ಆಚರಣೆಯ ಮೂಲಕ ಪ್ರಕಟವಾಗಿದೆ. ಸ್ಫೂರ್ತಿ, ಹಿನ್ನೆಲೆ, ಪ್ರೇರಣೆ ಮತ್ತು ಪ್ರಭಾವಗಳ ನಡುವಿನ ಅರ್ಥವ್ಯತ್ಯಾಸಗಳನ್ನು ನಮ್ಮ ವಿಮರ್ಶೆ ಗೆರೆಕೊರೆದಂತೆ ವಿಂಗಡಿಸಿಕೊಳ್ಳುವುದಿಲ್ಲ. ಅವೆರಡನ್ನೂ ಒಂದೆಂದೇ ಭಾವಿಸಿ; ಕೆಲವೊಮ್ಮೆ ಒಟ್ಟೊಟ್ಟಿಗೇ ಚರ್ಚಿಸಿ ತನ್ನದೇ ತೀರ್ಮಾನಗಳಿಗೆ ನಮ್ಮ ವಿಮರ್ಶೆಯು ಬಂದಿದೆ. ಇವುಗಳ ಬಗ್ಗೆ ನಿರ್ದಿಷ್ಟವಾದ ಸಿದ್ಧಾಂತಗಳನ್ನು ನಮ್ಮ ವಿಮರ್ಶೆಯು ಮಂಡಿಸಿಲ್ಲ. ಸ್ವೀಕರಣಾ ಸಿದ್ಧಾಂತಗಳನ್ನು ಅಥವಾ ಪ್ರೇರಣೆಯ ಸಿದ್ಧಾಂತಗಳನ್ನು ಮಂಡಿಸುವುದಿರಲಿ ಈ ನೆಲೆಯಲ್ಲಿ ನಿರ್ವಚನವೂ ನಡೆದಿಲ್ಲ. ಈ ನಿಟ್ಟಿನಲ್ಲಿ ಈ ಮಾರ್ಗದ ಕೆಲವು ಉದ್ದೇಶಗಳನ್ನು ಸ್ಪಷ್ಟಪಡಿಸಿಕೊಳ್ಳುವ ಕೆಲಸ ಕೆಲವೆಡೆ ಆಗಿದೆಯಾದರೂ ಅದೂ ಸಮರ್ಪಕವಾಗಿ ಆಗಿಲ್ಲ. ಆದರೆ ಪ್ರಭಾವ-ಪ್ರೇರಣೆಗಳ ಅನ್ವೇಷಣೆಯು ಅಂತಿಮವಾಗಿ ವಿಶಿಷ್ಟತೆಯನ್ನು ಗುರ್ತಿಸುವ ಒಂದು ಮಾರ್ಗವಾಗಿ ನಮ್ಮಲ್ಲಿ ಬಳಕೆಯಾಗಿದೆ. ವಿಶಿಷ್ಟತೆಯನ್ನು ಸ್ಫೂರ್ತಿ, ಪ್ರೇರಣೆಗಳ ಅಭ್ಯಾಸದ ಮೂಲಕ ಗುರ್ತಿಸಿಕೊಳ್ಳಬಹುದು ಎಂಬುದೇ ನಮ್ಮ ಪ್ರೇರಣೆಗಳ ಅಧ್ಯಯನದ ಒಂದು ಮುಖ್ಯ ಸಿದ್ಧಾಂತವೂ ಆಗಿದೆ. ಇದು ನೇರವಾಗಿ ಸಿದ್ಧಾಂತವಾಗಿ ಪ್ರಕಟಗೊಂಡಿಲ್ಲವಾದರೂ ವಿಮರ್ಶೆಯ ಆಚರಣೆಯಲ್ಲಿದು ವ್ಯಕ್ತಗೊಳ್ಳುತ್ತದೆ.

ಕುವೆಂಪು ಸ್ಫೂರ್ತಿ, ಪ್ರೇರಣೆಗಳ ಅನ್ವೇಷಣೆಯು ಮುಖ್ಯವಾಗಿ ಲೇಖಕರ ದೃಷ್ಟಿ ಧೋರಣೆಗಳನ್ನು ಅರ್ಥಮಾಡಿಕೊಳ್ಳುವ ಒಂದು ಮಾರ್ಗವಾಗಿಯೂ ಕೆಲಸಕ್ಕೆ ಒದಗಿದೆ. ಇದಕ್ಕೆ ಒಂದು ಮಾದರಿಯನ್ನು ನೋಡಬಹುದು.

> 'ಅಣ್ಣನ ಅನೇಕ ಕೃತಿಗಳನ್ನು ನೋಡಿದರೆ ಅವುಗಳ ಮೂಲ ಸ್ಫೂರ್ತಿ ಸಮಾಜವಾದಿ ನೆಲೆಯಿಂದ ಹೊಮ್ಮಿದಂತೆ ಓದುಗರಿಗೆ ಅನ್ನಿಸುತ್ತದೆ. ಆದರೆ ಅಣ್ಣನ ಈ ಸಮಾಜವಾದಿ ನೆಲೆ ಲೋಹಿಯಾ ಅಥವಾ ಜೆ.ಪಿಯಂತಹವರ ತಾತ್ವಿಕ ನೆಲೆಯಿಂದ ಹೊರಟದ್ದಲ್ಲ. ಅಣ್ಣನ ಜೀವನಾದ್ಯಂತ ಕಾಡಿದ ಎರಡು ಬಹು ಮುಖ್ಯ ಕಾಳಜಿಗಳೆಂದರೆ ಮೊದಲನೆಯದು ಕನ್ನಡ ಭಾಷೆ. ಎರಡನೆಯದು ಹಿಂದೂ ಧರ್ಮದ ಭಯಂಕರ ಕುರೂಪಗಳಾದ ಜಾತಿಪದ್ಧತಿ ಮತ್ತು ಮತಗಳ ಬಗ್ಗೆ ಸಿಟ್ಟು;
> (2482-ಪುಟ: 176)

ಒಡನಾಟದಿಂದ ಹುಟ್ಟಿದ ನೆನಪುಗಳು ವ್ಯಕ್ತಿತ್ವದ ಮತ್ತು ಬದುಕಿನ ವಿಧಾನದ ವ್ಯಾಖ್ಯಾನಕ್ಕೆ ಹಾಗೂ ಅವರ ದೃಷ್ಟಿ ಧೋರಣೆಗಳ ವ್ಯಾಖ್ಯಾನಕ್ಕೆ ಇಲ್ಲಿ ಬಳಕೆಯಾಗಿವೆ. ವ್ಯಕ್ತಿಯು-ಅಥವಾ ಸಾಹಿತ್ಯವು ಸ್ವಯಂಪೂರ್ಣ ಅಲ್ಲ. ಎರಡೂ ಚರಿತ್ರೆಯ-ಸಂಸ್ಕೃತಿಯ ಕೂಸುಗಳು ಎಂಬ ತಿಳುವಳಿಕೆ ಇಂತಹ ಪ್ರೇರಣೆ ಪ್ರಭಾವಗಳ ಅನ್ವೇಷಣೆಯ ಹಿನ್ನೆಲೆಯಲ್ಲಿ ಇದೆ. ಈ ಅನ್ವೇಷಣೆಯು ಸಾಹಿತ್ಯಗಳನ್ನು ತುಲನೆ ಮಾಡುವಾಗ ಕುವೆಂಪು ಮತ್ತು ಅನ್ಯಗಳ ನಡುವಿನ ಭಿನ್ನಾಭಿನ್ನತೆಯ ಶೋಧವನ್ನು ಒಂದು ಮುಖ್ಯ ಕೆಲಸವೆಂಬಂತೆ ನಿರ್ವಹಿಸುತ್ತದೆ. ಭಿನ್ನತೆ-ಅಭಿನ್ನತೆಗಳ ಶೋಧದಲ್ಲಿ ವಯಕ್ತಿಕ ವಿಶಿಷ್ಟತೆ ಮತ್ತು ಸ್ಥಳೀಯತೆಗಳು ವಿಶ್ವಾತ್ಮಕ ಮತ್ತು ಪರಸ್ಥಳೀಕ ಹಿನ್ನೆಲೆಯಲ್ಲಿ ಪರಿಶೀಲನೆಗೆ ಗುರಿಯಾಗುತ್ತಿರುತ್ತವೆ. ಕುವೆಂಪು-ಕಾರಂತರ ನಡುವಿನ ಸಾಮ್ಯತೆ-ಅಸಾಮ್ಯತೆಗಳನ್ನು ಶೋಧಿಸುವಾಗ ವ್ಯಕ್ತಿವಿಶಿಷ್ಟತೆಯನ್ನು ಹುಡುಕುವ ಕೆಲಸವನ್ನೂ; ವರ್ಡ್ಸ್‌ವರ್ತ್- ಕುವೆಂಪುಗಳ ನಡುವಿನ ಸಾಮ್ಯತೆ-ಅಸಾಮ್ಯತೆಗಳನ್ನು ಶೋಧಿಸುವಾಗ ವ್ಯಕ್ತಿವಿಶಿಷ್ಟತೆಯ ಜೊತೆ ಸ್ಥಳೀಯತೆಯ ವಿಶಿಷ್ಟತೆಯನ್ನು ಹುಡುಕುವ ಕೆಲಸವನ್ನು ಈ ಅನ್ವೇಷಣೆಯು ಮಾಡುತ್ತಿರುತ್ತದೆ. ಎಲ್.ಸಿ. ಸುಮಿತ್ರ ಅವರ ಕಾಡು ಕಡಲು, ವಿಠ್ಠಲರಾವ್ ಗಾಯಕವಾಡ ಅವರ ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ, ಎ.ಎಸ್.ವೇಣುಗೋಪಾರಾವ್

ಅವರ ಶ್ರೀ ಕುವೆಂಪು ಅವರ ದಾರ್ಶನಿಕ ವಿಚಾರಗಳು ಇಂತಹ ಅಧ್ಯಯನಗಳು ಇದಕ್ಕೆ ಉದಾಹರಣೆ.

> ಕುವೆಂಪು ಹಾರ್ಡಿ, ಟಾಲ್‌ಸ್ಟಾಯ್ ಮುಂತಾದವರರಿಂದ ಕಾದಂಬರಿಯ ರೂಪದರ್ಶನ ಪಡೆದಂತೆಯೇ ಬುದ್ಧ, ಪರಮಹಂಸ, ವಿವೇಕಾನಂದ, ಗಾಂಧಿ, ಅರವಿಂದರಿಂದ ಅದ್ವಯ ತತ್ವ ದರ್ಶನವನ್ನೂ ಪಡೆದಿದ್ದಾರೆ. ಈ ಎರಡೂ ದರ್ಶನಗಳು ಸಮನ್ವಯಗೊಂಡಂತೆ ಅವರ ಕಾದಂಬರಿಗಳು ಅವತರಣಗೊಂಡಿವೆ. ಇದನ್ನು ಗಮನಿಸದೇ ಹೋದರೆ ಕಾನೂರು ಹೆಗ್ಗಡಿತಿಯ ತುಂಬ ತುಂಬಿರುವ ಲೌಕಿಕ ಹಿಂಸೆಯ ಆಧ್ಯಾತ್ಮಿಕ ದರ್ಶನವಾಗಲೀ, ಮಲೆಗಳಲ್ಲಿ ಮದುಮಗಳುವಿನ ತುಂಬಾ ಹಬ್ಬಿರುವ ಆಧ್ಯಾತ್ಮಿಕ ದರ್ಶನದಿಂದ ಹಿಂದಿರುವ ಲೌಕಿಕ ಆಶಯಗಳಾಗಲೀ ಸ್ಪಷ್ಟವಾಗಿ ಆಕಾರಗೊಳ್ಳುವುದಿಲ್ಲ. (443–ಪುಟ: 29–30)

ಹೀಗೆ ಪ್ರಭಾವ–ಪ್ರೇರಣೆಗಳ ತಿಳುವಳಿಕೆಯು ಸಾಹಿತ್ಯಕೃತಿಗಳನ್ನು ಅರ್ಥಮಾಡಿಕೊಳ್ಳಲು ಬೇಕಾದ ಒಂದು ಅತ್ಯಗತ್ಯವಾದ ತಿಳುವಳಿಕೆ ಎಂಬ ಪ್ರೇರಣಾ ಸಿದ್ಧಾಂತವೊಂದು (ಸ್ವೀಕರಣಾ ಸಿದ್ಧಾಂತವೊಂದು) ನಮ್ಮಲ್ಲಿ ಪ್ರಕಟವಾಗಿದೆ. ಪ್ರೇರಣೆ–ಪ್ರಭಾವಗಳ ಅನ್ವೇಷಣೆಯನ್ನು ಮುಖ್ಯವಾದ ಉದ್ದೇಶವನ್ನಾಗಿ ಮತ್ತು ಪ್ರಾಸಂಗಿಕ ಅಂಗವನ್ನಾಗಿ ಇರಿಸಿಕೊಂಡ ನಮ್ಮ ಬಹುಪಾಲು ವಿಮರ್ಶೆಯು ತನ್ನ ಆಚರಣೆಯ ಮೂಲಕ ಈ ಸಿದ್ಧಾಂತವನ್ನು ಪ್ರಕಟಿಸಿದೆ. ಕೃತಿಯ ವೈಚಾರಿಕತೆ, ಕೃತಿಯ ಅಭಿವ್ಯಕ್ತಿ ವಿಧಾನ, ಕೃತಿಯ ಭಾಷೆ, ವಸ್ತು ಹೀಗೆ ಕೃತಿಯ ಪ್ರತಿಯೊಂದು ಅವಯವಗಳನ್ನು ವಿಶ್ಲೇಷಿಸುವಾಗ ನಮ್ಮ ವಿಮರ್ಶೆಯು ಆಗಾಗ ಪ್ರೇರಣೆ–ಪ್ರಭಾವಗಳ ಮೂಲಕ ಕೃತಿ ಕುರಿತು ತನ್ನದೇ ಪ್ರಮೇಯ–ನಿಲುವುಗಳಿಗೆ ಬರುತ್ತಿರುತ್ತದೆ. ಹಾಗಾಗಿ ಪ್ರೇರಣೆ ಪ್ರಭಾವಗಳ ವಿಶ್ಲೇಷಣೆಯು ನಮ್ಮಲ್ಲಿ ಕೃತಿಯನ್ನು ಕೇವಲ ಅರ್ಥಮಾಡಿಕೊಳ್ಳಲು ಮಾತ್ರವಲ್ಲದೆ ಕೃತಿ ವ್ಯಾಖ್ಯಾನ, ಕವಿ ವ್ಯಾಖ್ಯಾನಗಳಿಗೂ ಬಳಕೆಯಾಗಿದೆ. ಹೀಗಾಗಿ ಪ್ರೇರಣೆ ಪ್ರಭಾವಗಳ ಅನ್ವೇಷಣೆಯು ನಮ್ಮಲ್ಲಿ ಒಂದು ಬಹು ಬಳಕೆಯ ವಿಮರ್ಶಾ ಮಾರ್ಗವಾಗಿ ಚಾಲ್ತಿಯಲ್ಲಿದೆ.

ರಮ್ಯವಾದ ಮತ್ತು ಕನ್ನಡ ನವೋದಯಗಳ ಸಾಮ್ಯತೆ–ಭಿನ್ನತೆಗಳ ಚರ್ಚೆಯಲ್ಲಿ ಡಿ.ಆರ್.ನಾಗರಾಜ್ ಕನ್ನಡ ನವೋದಯ ಮತ್ತು ಕುವೆಂಪು ನಿಸರ್ಗ ತತ್ವದಲ್ಲಿನ ವಿಶಿಷ್ಟತೆಗಳನ್ನು ಗುರ್ತಿಸಲು ಯತ್ನಿಸಿದ್ದಾರೆ. ಭಿನ್ನತೆ–ಸಾಮ್ಯತೆಯ ಅಭ್ಯಾಸವು ಕೆಲವೊಮ್ಮೆ 1. ಕೇವಲ ಪ್ರಭಾವ ಗುರ್ತಿಸುವಿಕೆ, 2. ಚೌರ್ಯವಾದ–ಪಾರತಂತ್ರವಾದಗಳ ಮಂಡನೆಯ ಅಪಾಯಕ್ಕೆ ಸಾಗುವ ಸಾಧ್ಯತೆ ಇರುತ್ತದೆ. ಆದರೆ ಡಿ.ಆರ್.ನಾಗರಾಜ್ ವಿಮರ್ಶೆಯಲ್ಲಿ ಇದು ಘಟಿಸಿಲ್ಲ. ಈ ಅನ್ವೇಷಣೆಯು ಕೆಲವೊಮ್ಮೆ ಗೈರುಹಾಜರಿಗಳ ಶೋಧವೂ ಆಗುವ ಅಪಾಯ ಇರುತ್ತದೆ. ಇವರಲ್ಲಿ ಇದು ಇದೆ. ಇವರಲ್ಲಿ ಇದು ಇಲ್ಲ. ಎಂಬ ಇಲ್ಲಗಳ ಗುರ್ತಿಸುವಿಕೆಯ ಕಡೆಗೆ ಇದು ಚಲಿಸುವ ಸಾಧ್ಯತೆಯೂ ಇರುತ್ತದೆ. ಭೂಮಿತತ್ವದ ಚರ್ಚೆಯಲ್ಲಿ ಡಿ.ಆರ್. ಇಂತಹ ಇಲ್ಲಗಳ ಚರ್ಚೆಯ ಕಡೆಗೆ ಚಲಿಸಿದ್ದಾರೆ. (750–ಪುಟ: 85–87)

ಪ್ರಭಾವಗಳ ಹುಡುಕಾಟವು ಸ್ವಂತಿಕೆಯ ನಿರಾಕರಣೆ ಆಗಬಹುದಾದ ಅಪಾಯದ ಅರಿವು ಪುಣೇಕರರ ವಿಮರ್ಶೆಯಲ್ಲಿ ಇದೆ. ಅನ್ವೇಷಣಾ ಮಾದರಿಯ ಎರಡು ಉದ್ದೇಶಗಳನ್ನು ಅವರೇ ಸ್ಪಷ್ಟ ಪಡಿಸಿದ್ದಾರೆ. 1. ಧಾರ್ಮಿಕ ಚೌಕಟ್ಟಿನಿಂದ ಕಾವ್ಯವನ್ನು ಮುಕ್ತಗೊಳಿಸಿ ವ್ಯಕ್ತಿತ್ವದ ಅಭಿವ್ಯಕ್ತಿಯಾಗಿ ಕಾವ್ಯವನ್ನು ಸಜ್ಜುಗೊಳಿಸಿದ ಸಾಹಸವನ್ನು ಗುರ್ತಿಸುವುದು. 2. ಕುವೆಂಪು ಕಾವ್ಯವು ಇಂಗ್ಲಿಷ್ ರಮ್ಯಕಾವ್ಯದಿಂದ ಮಾತ್ರ ಪ್ರೇರಿತವಾಗಿದೆ ಎಂಬ ಕನ್ನಡ ವಿಮರ್ಶೆಯ ನಂಬಿಕೆಯನ್ನು ಒಡೆಯುವುದು. (898) ಈ ಉದ್ದೇಶಗಳನ್ನು ಪುಣೇಕರರ ವಿಮರ್ಶೆ ಸಾಧಿಸಿದೆ. ಇಲ್ಲಿನ ಎರಡನೆ ಉದ್ದೇಶ ಪ್ರಭಾವಗಳ ಅನ್ವೇಷಣೆಯ ವಿಸ್ತರಣೆ ಅಷ್ಟೇ; ಅಲ್ಲದೆ ಈ ಅನ್ವೇಷಣೆಯು ಪರಿಣಾಮದಲ್ಲಿ ತೋರುವ ಫಲಿತಾಂಶವು ಅಂತಹ ದೊಡ್ಡ ಅನ್ವೇಷಣೆ ಏನೂ ಅಲ್ಲ. ಇದು ತನ್ನ ಹಾದಿಯಲ್ಲಿ ವಿಮರ್ಶಕನ ಪ್ರತಿಭಾ ವಿಲಾಸದ ಪ್ರದರ್ಶನವನ್ನೇ ಎತ್ತಿ ತೋರುತ್ತಿರುತ್ತದೆ. ಪುಣೇಕರ, ಡಿ.ಆರ್.ನಾಗರಾಜ, ಆಮೂರ ಎಲ್ಲರಲ್ಲು ಇದೇ ಆಗಿದೆ. ಪುಣೇಕರರು ಹೇಳುವ ಮೊದಲನೆ ಉದ್ದೇಶಕ್ಕೆ ಬಂದರೆ; ಬರಹಗಾರನ ಅಭಿವ್ಯಕ್ತಿ ಕ್ರಮದ ವ್ಯಾಖ್ಯಾನಕ್ಕೆ ತೌಲನಿಕತೆ ಒಂದು ಸಾಧನವೇನೋ ಹೌದು ಆದರೆ ಇದಕ್ಕೆ ಪ್ರಭಾವಗಳ ಅನ್ವೇಷಣೆ ಅನಿವಾರ್ಯ ಎಂದು ಸಮರ್ಥಿಸಲು ಆಗುವುದಿಲ್ಲ. ಇಲ್ಲು ಕೂಡ ಕಾವ್ಯದ ವಿಮರ್ಶೆಯಲ್ಲಿ ವಿಮರ್ಶಕನ ಪ್ರತಿಭಾ ವಿಲಾಸದ ಪ್ರದರ್ಶನವೇ ಪ್ರಕಟವಾಗುತ್ತಿರುತ್ತದೆ.

ಆಮೂರರು ಪ್ರೇರಣೆಗಳ ಅನ್ವೇಷಣೆಯಲ್ಲಿ ಮೂರು ಮುಖ್ಯವಾದ ಪ್ರೇರಣೆಗಳನ್ನು ಗುರ್ತಿಸುತ್ತಾರೆ. (705–ಪುಟ:72,73) ಈ ಮೂರರಲ್ಲಿ ಮೊದಲಿನದನ್ನು ಮಾತ್ರವೆ ಪ್ರೇರಣೆ ಎನ್ನಬಹುದು. ಉಳಿದೆರಡು

ಕಾದಂಬರಿಕಾರನ ಉದ್ದೇಶಗಳಷ್ಟೆ. ಕಾದಂಬರಿಯ ತಾತ್ವಿಕ ವಿನ್ಯಾಸವನ್ನೇ ಆಮೂರರು ಪ್ರೇರಣೆ ಎಂದು ಕರೆದಿರುವುದು ಸೋಜಿಗವಾಗಿದೆ. ಇವರು ಕುವೆಂಪು ಕಥನವನ್ನು ಫ್ಲಾಬೇರ್, ಮೇಡಂ ಬಾವರಿಗೆ, ಟಾಲ್‌ಸ್ಟಾಯ್‌ನ ವಾರ್ ಅಂಡ್ ಪೀಸ್‌ಗೆ, ಹಾಥಾರ್ನನ ಕಾದಂಬರಿಗಳಿಗೆ ಹೋಲಿಸುತ್ತಾರೆ. ಇಂಥ ಹೋಲಿಕೆಯು ತೌಲನಿಕ ವಿಧಾನದ ಒಂದು ನಿರಪಾಯ ಹಂತ. ಇಂತಹ ಹೋಲಿಕೆಗಳ ಮೂಲಕ ಸ್ಥಳೀಯ ಕಲಾಕೃತಿಗಳಲ್ಲಿ ವೈಶ್ವಿಕ ಗುಣಮಟ್ಟವನ್ನು ಗುರ್ತಿಸುವ ಪ್ರವೃತ್ತಿ ಕಂಡು ಬರುತ್ತದೆ. ಹೀಗೆ ಪ್ರೇರಣೆ–ಪ್ರಭಾವಗಳ ಅನ್ವೇಷಣೆಯಲ್ಲಿ ಇಂಗ್ಲಿಷ್ ಕಾವ್ಯ–ಕವಿಗಳಿಗೆ ಕುವೆಂಪುವನ್ನು ಹೋಲಿಸುವ ಪ್ರವೃತ್ತಿ ವ್ಯಾಪಕವಾಗಿದೆ. ಕೆಲವೊಮ್ಮೆ ಅಗತ್ಯವಿರಲಿ, ಅಗತ್ಯವಿಲ್ಲದಿರಲಿ ತಮ್ಮ ಇಂಗ್ಲಿಷ್ ಓದನ್ನು ಪ್ರದರ್ಶಿಸಲಾದರೂ ಹೋಲಿಕೆಗಳು, ಉಲ್ಲೇಖಗಳು, ಅಸೋಸಿಯೇಶನ್ನುಗಳು ನಮ್ಮ ವಿಮರ್ಶೆಯಲ್ಲಿ ತಲೆಹಾಕುತ್ತಿರುತ್ತವೆ. (1770–ಪುಟ: 33–41) ಇಷ್ಟಕ್ಕೂ ಹೋಲಿಕೆಗೆ ಕಾರಣವೇನು ? ಸಾಮ್ಯಗಳು ಮತ್ತು ಪ್ರಭಾವ–ಪ್ರೇರಣೆಗಳೇ ಹೋಲಿಕೆಯ ಕಾರಣಗಳು.

> ಕುವೆಂಪು ಅವರನ್ನು ಅವರ ತಲೆಮಾರಿನ ಇತರ ಲೇಖಕರಿಂದ ಭಿನ್ನರನ್ನಾಗಿ ಮಾಡುವ ಅಂಶಗಳೆಂದರೆ, ಅವರು ಹುಟ್ಟಿದ ಮತ್ತು ಬೆಳೆದ ಪರಿಸರ, ಮತ್ತು ಅವರ ಮೇಲೆ ಆದ ಬೌದ್ಧಿಕ ಪ್ರಭಾವಗಳು. 'ಶೂದ್ರವರ್ಗ'ದಿಂದ ಹುಟ್ಟಿ ಬಂದವರು ಅವರು. ಅವರ ಬಾಲ್ಯ ಮತ್ತು ಹದಿವಯಸ್ಸು ಮುಖ್ಯವಾಗಿ ಕಳೆದದ್ದು ಮಲೆನಾಡಿನಲ್ಲಿ; ಈ ಪರಿಸರದಿಂದ ಪ್ರಾಪ್ತವಾದ ವಿಶಿಷ್ಟ ಅನುಭವಗಳೊಂದಿಗೆ ಮುಂದೆ ಬೌದ್ಧಿಕವಾಗಿ ಅವರ ಮೇಲೆ ಆದ ಪ್ರಭಾವಗಳೆಂದರೆ, ವೈದಿಕ ಧರ್ಮದ ಶ್ರೇಷ್ಠ ಕೃತಿಗಳಾದ ಉಪನಿಷತ್ತುಗಳು, ರಾಮಕೃಷ್ಣ ಪರಮಹಂಸರ ಅನುಭಾವ, ಅರವಿಂದರ ಅತಿಮಾನಸ ಯೋಗ, ಜೊತೆಗೆ ಪಾಶ್ಚಾತ್ಯ ತತ್ವಶಾಸ್ತ್ರ ಮತ್ತು ವೈಜ್ಞಾನಿಕ ದೃಷ್ಟಿ. ಸಾಹಿತ್ಯಕವಾಗಿ ಅವರ ಮೇಲೆ ಆದ ಪರಿಣಾಮಗಳೆಂದರೆ, ಮುಖ್ಯವಾಗಿ ಇಂಗ್ಲಿಶ್ ರೊಮ್ಯಾಂಟಿಕ್ ಕಾವ್ಯ, ಮಿಲ್ಟನ್, ಡಾಂಟೆ ಇತ್ಯಾದಿ ಪುರಾಣ ಕವಿಗಳು (ಎಪಿಕ್ ಪೊಯೆಟ್ಸ್), ರಾಜಕೀಯವಾಗಿ ಮುಖ್ಯವಾಗಿ ಇವರ ಧೋರಣೆಗಳನ್ನು ರೂಪಿಸಿದ್ದು ಗಾಂಧಿವಾದ. ಇವುಗಳ ಜೊತೆಗೆ ಸದಾ ಜೀವನದ ಬಗೆಗೆ ಬಿಚ್ಚು ಮನಸ್ಸುಳ್ಳ ಮತ್ತು ವಿಸ್ಮಯವನ್ನು ಉಳಿಸಿಕೊಂಡ ದೃಷ್ಟಿ. (570–ಪುಟ: 183)

ಕವಿಯನ್ನು ಅರ್ಥಮಾಡಿಕೊಳ್ಳುವ ಪ್ರವೃತ್ತಿ ಮತ್ತು ಕವಿಯ ಬಿನ್ನತೆಯ ಗುರ್ತಿಸುವಿಕೆ ಪ್ರಭಾವಗಳ ಅಧ್ಯಯನದಲ್ಲಿ ಪ್ರಧಾನವಾಗಿ ಕಾಣುತ್ತದೆ. ಲೇಖಕನ ಮೌಲ್ಯ ಪ್ರಜ್ಞೆ–ವ್ಯಕ್ತಿತ್ವಗಳು ರೂಪಗೊಂಡ ಬಗೆಯನ್ನು ಸಾಮಾಜಿಕವಾಗಿ–ಚಾರಿತ್ರಿಕವಾಗಿ ಅನ್ವೇಷಿಸುವ ಪ್ರವೃತ್ತಿಯೂ ಇಲ್ಲಿ ಪ್ರಧಾನವಾಗಿ ಕಾಣುತ್ತದೆ. ಲೆಖಕನ ವಿಶಿಷ್ಟತೆಯನ್ನು ವ್ಯಾಖ್ಯಾನಿಸಲು ಮತ್ತು ಚರ್ಚಿಸಲು ಇಂತಹ ಪ್ರಭಾವಗಲ ಅಧ್ಯಯನವನ್ನು ನಮ್ಮಲ್ಲಿ ಬಳಸಿಕೊಳ್ಳಲಾಗಿದೆ.

> ಕುವೆಂಪು ವಿಚಾರದಲ್ಲಿ ಇಂಗ್ಲಿಶ್ ರೊಮ್ಯಾಂಟಿಕ್ ಕವಿಗಳ ಪ್ರಭಾವವನ್ನು ಅಲ್ಲಗಳೆಯಲಾಗದಿದ್ದರೂ, ಕುವೆಂಪು ಅವರ ನಿಸರ್ಗಾನುಭೂತಿಯ ತಾತ್ವಿಕ ಬೇರುಗಳು ಇಂಗ್ಲೆಂಡಿನಿಂದ ಬಂದಂಥವಲ್ಲ.. ಕುವೆಂಪುರ ಅದ್ವೈತ ದೃಷ್ಟಿ ಶಂಕರಾಚಾರ್ಯರ ಅದ್ವೈತದಿಂದ ಬಂದದ್ದಾಗಿರದೆ ಪರಮಹಂಸ, ವಿವೇಕಾನಂದರ ಮತಾತೀತ ನೆಲೆಯಿಂದ ರೂಪಿತಗೊಂಡದ್ದಾಗಿದೆ.. ಕುವೆಂಪುರವರ ಪುರೋಹಿತಶಾಹಿ ವಿರೋಧಿ ನಿಲುವು ವಿವೇಕಾನಂದರ ವಿಚಾರಧಾರೆಗಳಿಂದ ಉದ್ದೀಪ್ತವಾಗಿದ್ದರೂ ಮೂಲತಃ ನಿಸರ್ಗೋಪಾಸನೆಯ ತಾತ್ವಿಕ ನೆಲೆಯ ಧಾತುವಿನಿಂದಲೂ ರೂಪಿತಗೊಂಡಿದೆ.. ಪ್ರಕೃತಿಯ ಶಕ್ತಿಗಳನ್ನು ಆರಾಧಿಸುವ ವಿನ್ಯಾಸದಲ್ಲಿಯೇ ವಿಗ್ರಹಾರಾಧನೆಯ ಭಂಜಕ ಪ್ರವೃತ್ತಿ ಹೆಣೆದುಕೊಂಡಿದೆ. ವಿಚಾರಗಳು ಹುಟ್ಟಿಬಂದ ಸಂದರ್ಭವನ್ನು ವಿಶ್ಲೇಷಿಸಿದಾಗಲೇ ವಿಚಾರದ ಮೂಲ ಸೆಲೆಗಳು ಗೋಚರವಾಗುತ್ತವೆ. ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಉಲ್ಬಣಿಸುತ್ತಿದ್ದ ಮತೀಯ ಸ್ವರೂಪದ ರಾಷ್ಟ್ರೀಯತೆ ಉಂಟು ಮಾಡಿದ್ದ ಸಾಂಸ್ಕೃತಿಕ ಬಿಕ್ಕಟ್ಟನ್ನು ಮೀರಲು ಕುವೆಂಪು ವಿಶ್ವಾತ್ಮಕ ಮೌಲ್ಯಗಳನ್ನು ಪರಿಶೋಧಿಸುತ್ತಾರೆ. ಮತ್ತು ಅವುಗಳಿಂದ ವಿಶ್ವಮಾನವ (ಯೂನಿವರ್ಸಲಿಸಂ) ಪರಿಕಲ್ಪನೆಯನ್ನು ಸಂಯೋಜಿಸಿಕೊಳ್ಳುತ್ತಾರೆ ಎನ್ನಿಸುತ್ತದೆ. ಹಾಗಾಗಿ ಮನುಜಮತ ಎಂಬುದು (ಹ್ಯೂಮನಿಸಂ) ಮಾನವತಾವಾದ ಹಾಗೂ ಮತಮೌಢ್ಯವನ್ನು ತೊಡೆದು ಹಾಕುವ ವಿಜ್ಞಾನ ಬುದ್ಧಿಯಾಗಿ/ವೈಚಾರಿಕ ನೆಲೆಗಟ್ಟಾಗಿ ನಿಲ್ಲುತ್ತದೆ. ವಿಶ್ವಪಥ ಎಂಬುದು ರಾಷ್ಟ್ರ ಎನ್ನುವಂತಹ ಗಡಿರೇಖೆಯನ್ನು ದಾಟುವ ಸಹೋದರತ್ವದ ಆಶಯವಾಗುತ್ತದೆ. ಸರ್ವೋದಯ ತತ್ವ ಪಾಪಿಗೂ ಕೂಡ ಉದ್ಧಾರವುಂಟು ಎಂಬ ಗಾಂಧಿ ವಿಚಾರಧಾರೆಯಾದರೆ

> ಪರಮಹಂಸ–ವಿವೇಕಾನಂದರಿಂದ ರೂಪುಗೊಂಡ ಸರ್ವಧರ್ಮ ಸಮನ್ವಯ ತತ್ವ ಸಹಿಷ್ಣುತತೆಯ/ ಧರ್ಮ ನಿರಪೇಕ್ಷತೆಯ ಪ್ರತೀಕವಾಗುತ್ತದೆ. ಹಾಗೆಯೇ ಅರವಿಂದರ ಪೂರ್ಣದೃಷ್ಟಿಯ ನೆಲೆಯನ್ನು ಇಲ್ಲಿ ಸಂಚಯಿಸಿಕೊಳ್ಳಲಾಗಿದೆ. (1085–ಪುಟ: 80ಬ,ಕ)

ಪ್ರಭಾವ–ಪ್ರೇರಣೆಗಳ ಅನ್ವೇಷಣೆಯು ಸಾಹಿತ್ಯದ ಸ್ವರೂಪವನ್ನು ನಿರ್ವಚಿಸಲು ಕೂಡ ಬಳಕೆಯಾಗುತ್ತದೆ. ಇಲ್ಲಿ ತಾವು ಹೇಳುವ ಮಾತುಗಳು ಇನ್ನಾರಿಗೋ ಉತ್ತರ ಕೊಡುವ ರೂಪದಲ್ಲೂ ಇರುತ್ತವೆ. ಹಾಗಾಗಿ ಇದರಲ್ಲಿ ವಿವಿಮರ್ಶೆಯ ಗುಣ ಕೂಡ ಅಂತರ್ಗತವಾಗಿ ಬೆರೆತುಕೊಂಡಿರುತ್ತದೆ. ಇಂತಹ ಕಡೆ ಪ್ರಭಾವ–ಪ್ರೇರಣೆಗಳ ಪರಿಶೀಲನೆಯು ಸಾಹಿತ್ಯ ಸ್ವರೂಪವು ಹೀಗೆ ರಚನೆಗೊಳ್ಳಲು ಕಾರಣವೇನು? ಎಂದು ಶೋಧಿಸುವ ಕಾರಣಮೀಮಾಂಸೆಯೂ ಆಗಿರುತ್ತದೆ.

ಕವಿಯು ತಾನು ಪಡೆದ ಪ್ರೇರಣೆ ಪ್ರಭಾವಗಳಿಂದ ಗಿಳಿಯಂತೆ ವರ್ತಿಸುವುದಿಲ್ಲ; ಅವನು ಅವುಗಳನ್ನು ಅರಗಿಸಿಕೊಂಡು ತನ್ನದೇ ಸೃಷ್ಟಿಯನ್ನು ಕೊಡುತ್ತಾನೆ ಎಂದು ಪ್ರೇರಣೆಗಳ ಅನ್ವೇಷಣೆಯು ನಂಬುತ್ತದೆ. ಇಂಥ ನಂಬಿಕೆಯು ಕೆಲವೊಮ್ಮೆ ಪ್ರೇರಣೆಗಳನ್ನು ಜೀರ್ಣಿಸಿಕೊಂಡು ಬರೆಯುವುದನ್ನೆ ವಿಶಿಷ್ಟತೆ ಎಂದು ಕೂಡ ಕರೆದಿದೆ. ಪುಣೇಕರರು ಪಂಚಲೋಹ ಎಂಬ ಪರಿಕಲ್ಪನೆಯ ಮೂಲಕ ಕುವೆಂಪು ವಿಶಿಷ್ಟತೆಯನ್ನು ಗುರ್ತಿಸುತ್ತಾರೆ. ಸಂಕರಸ್ಥಿತಿಯೇ ವಾಸ್ತವ; ಶುದ್ಧ ಸ್ವಂತಿಕೆ ಎಂಬುದು ಅವಾಸ್ತವ ಎಂಬುದು ಇವರ ತಾತ್ವಿಕತೆಗಳಲ್ಲಿ ಒಂದು. (898–ಪುಟ: 124) ಪಂಚಲೋಹ ಪರಿಕಲ್ಪನೆಯನ್ನು ಬೆಳೆಸುತ್ತ ಸಾಮರಸ್ಯ, ರಸಾಯನ ಎಂಬ ರೂಪಕಗಳ ಮೂಲಕ ಇದನ್ನು ಮತ್ತೆ ಕುವೆಂಪು ವಿಶಿಷ್ಟತೆ ಎನ್ನುತ್ತಾರೆ.

> ಪುಟ್ಟಪ್ಪನವರಲ್ಲಿ ಮೈಗತವಾದ ಇಂಗ್ಲಿಶ್ ರೊಮ್ಯಾಂಟಿಸಿಸಂದ ಪರಿಣಾಮಕ್ಕೆ ಎದುರಾಳಿಯಾಗಿ ನಿಂತ ಭಾರತೀಯ ಸಂಪ್ರದಾಯಗಳಾದ ಭಕ್ತಿ, ವೇದಾಂತಗಳೂ, ಸಂದರ್ಭಕ್ಕೆ ಹಿನ್ನೆಲೆಗೆ ಒಪ್ಪಗೊಟ್ಟು ತಾವಾಗಿಯೇ ಭಾರತೀಯಗೊಂಡ ನಿಸರ್ಗಪ್ರೇಮ–ಸಾಮಾಜಿಕ ಕ್ರಾಂತಿಕಾರತೆಗಳೂ, ಒಟ್ಟಿನಲ್ಲಿ ರೊಮ್ಯಾಂಟಿಕ್ ಸಂಪ್ರದಾಯಕ್ಕೆ ತಳಹದಿಯಾದ ಮಾನವಿಕತೆಯೂ, ಹೇಗೆ ಸಾಮರಸ್ಯ ಪಡೆಯುತ್ತ ಹೋದವೆಂಬುದನ್ನು ಗುರುತಿಸುವದು ಕಠಿಣವಾಗಲಾರದು. ಆದಾಗ್ಯೂ ಬಹುದಿನ ಸ್ತ್ರೀ ಸೌಂದರ್ಯದ ನೇರ ಅಭಿವ್ಯಕ್ತಿಯಿಲ್ಲದೆ ಅವರ ಪ್ರತಿಭೆ ಇನ್ನೂ ತನ್ನ ಹಸಿವನ್ನು ಹಿಂಗಿಸಿಕೊಂಡಿರಲಿಲ್ಲ. ಅವರ ಏಕಾಕಿ ಆನಂದವು ವೈವಾಹಿಕ ಜೀವನದ ನಂತರ ಹೆಚ್ಚು ಹೆಚ್ಚು ಅನಿವಾರ್ಯವಾಗಿ ದ್ವಿದಲವಾಗತೊಡಗಿ, ಮಡದಿ–ಮಕ್ಕಳ ಅಲ್ಪಕಾಲೀನ ವಿರಹದಿಂದ ತಪ್ತಗೊಂಡು ಅವರು ಅನೇಕ ಕವನಗಳನ್ನು ಬರೆದಿದ್ದಾರೆ. ಹೀಗಿದ್ದೂ ಈ ಮಾನವಿಕತೆ ತನ್ನ ಉತ್ಥಾನ ಅಭಿವ್ಯಕ್ತಿ ಪಡೆದದ್ದು 1950ರ ನಂತರ, ಜೇನಾಗುವಾ, ಚಂದ್ರಮಂಚಕೆ ಬಾ ಚಕೋರಿ, ಅನುತ್ತರಾಗಳಲ್ಲಿ. ಏತನ್ಮಧ್ಯೆ ಷೋಡಶಿ, ಪ್ರೇಮಕಾಶ್ಮೀರದಂಥ ಸಂಗ್ರಹಗಳಲ್ಲಿ ಅವರ ಆತಂಕಗಳು ಕರಗುತ್ತಿರುವುದನ್ನು ನೋಡುತ್ತೇವೆ. ಆದರೆ ಪೂರ್ತಿ ಭಾರತೀಯವೆನ್ನಿಸಿಕೊಂಡು ವೇದಾಂತ, ಭಕ್ತಿ, ಪ್ರೇಮ, ಕಾಮ, ಮಾತೃವಾತ್ಸಲ್ಯ, ಮಾನವಕತೆ, ದಾಕ್ಷಿಣ್ಯ, ರಸಿಕತೆ, ಅನಿರ್ಬಂಧತೆಗಳನ್ನು ಒಂದೇ ರಸಾಯನವನ್ನಾಗಿ ಮಾಡಬಲ್ಲ ನಮ್ಮ ಶಾಕ್ತ ತಾಂತ್ರಿಕ ಸಂಪ್ರದಾಯಗಳ ಸಮೀಕರಣವು ಈ ಸಂಗ್ರಹಗಳಲ್ಲಿ ಸಿಕ್ಕಂತೆ ಕನ್ನಡದಲ್ಲಿ ಇನ್ನಾವುದರಲ್ಲೂ ಸಿಕ್ಕುವುದಿಲ್ಲ. ವಿದೇಶದಲ್ಲೂ ಸಿಕ್ಕುವುದು ಕಠಿಣ. (898–ಪುಟ: 127)

ಪುಣೇಕರರಿಗೆ ತದ್ವಿರುದ್ಧವೆಂಬಂತೆ ಗೋಕಾಕರು ಮಾತಾಡಿದ್ದಾರೆ. ಪ್ರಭಾವ ಸ್ಫೂರ್ತಿಗಳು ಅನುಕರಣೆಗೆ ಗುರಿಯಾಗಿ ಕುವೆಂಪು ತಮ್ಮ ಸ್ವಂತಿಕೆಯನ್ನೇ ಕಳೆದುಕೊಂಡಿದ್ದಾರೆ ಎಂದು ಇವರು ಹೇಳುತ್ತಾರೆ. (ನೊಡಿ; 1166–ಪುಟ: 595) ಕುರ್ತಕೋಟಿಯವರು ಪ್ರಾಚೀನ ಸಾಹಿತ್ಯದ ಕಥನಗಾರಿಕೆಯ ಬಗೆಗೆ ಬರೆಯುತ್ತ ಪುನರ್ಕಥನ–ಪುನರ್ಲೇಖನ ಎಂಬ ಪರಿಕಲ್ಪನೆಯ ಮೂಲಕ ಅನ್ಯಕಥನ ಸ್ವೀಕರಣೆಯನ್ನು ವಿವರಿಸಿದ್ದಾರೆ. (ನೋಡಿ ಸಾಹಿತ್ಯ ಸಂಗಾತಿ; ಅನುವಾದ ಮತ್ತು ಪುನರ್ಲೇಖನ ಪುಟ. 27, ಪ್ರಸಾರಾಂಗ, ಹಂಪಿ ವಿ.ವಿ, 1995) ಸ್ವೀಕರಣೆಯ ಬಗೆಗೆ ಇದನ್ನೊಂದು ಸಿದ್ಧಾಂತವನ್ನಾಗಿಯೇನೂ ಅವರು ಮಂಡಿಸದಿದ್ದರೂ ನಾವು ಇದನ್ನು ಕನ್ನಡ ಪ್ರಾಚೀನ ಸಾಹಿತ್ಯ ಸ್ವೀಕರಣೆಯ ಸಿದ್ಧಾಂತವೊಂದನ್ನಾಗಿ ಪರಿಗಣಿಸಬಹುದು. ಕುವೆಂಪು ಬಗೆಗೆ ಯು.ಆರ್.ಅನಂತಮೂರ್ತಿ ಹೇಳುವ 'ಭವ್ಯ ನಿತ್ಯಗಳ ಸಂಗಮ' ಎಂಬ ಪರಿಕಲ್ಪನೆ, ಪುಣೇಕರರು ಹೇಳುವ 'ಸಮನ್ವಯ', 'ಪಂಚಲೋಹ' ಪರಿಕಲ್ಪನೆಗಳನ್ನು ಕೂಡ (ನೋಡಿ, 1667 ಮತ್ತು 898) ಸ್ವೀಕರಣೆಯ ಸಿದ್ಧಾಂತರೂಪಿ ಮಾತುಗಳು ಎಂದೇ ಪರಿಗಣಿಸಬಹುದು. ಸಂಕರದ ಕಲ್ಪನೆ ಕೂಡ ಅಜಮಾಸು ಸ್ವೀಕರಣೆಯ ಸಿದ್ಧಾಂತವಾಗಿ ನಮ್ಮ ವಿಮರ್ಶೆಯಲ್ಲಿ ಪ್ರಕಟವಾಗಿದೆ.

ಪ್ರಭಾವಗಳ ಅನ್ವೇಷಣೆಗೆ ನಮ್ಮಲ್ಲಿ ಇನ್ನೊಂದು ಮುಖ ಇದೆ. ಇದು ವಿಮರ್ಶೆಯ ಸ್ವರೂಪವನ್ನು ಕಾರಣ ಮೀಮಾಂಸೆಯನ್ನಾಗಿ ಮಾಡಬಲ್ಲ ಮುಖ. ಯಾವುದೇ ಒಬ್ಬ ಲೇಖಕ ತನ್ನ ಕೃತಿಯನ್ನು ಹೀಗೇ ಯಾಕೆ ಬರೆದಿದ್ದಾನೆ? ಇದಕ್ಕೆ ಕಾರಣಗಳೇನಿರಬಹುದು? ಎಂಬ ಅನ್ವೇಷಣೆಗೂ ಇದು ಒಯ್ಯುತ್ತದೆ. ವಸ್ತು, ಭಾಷೆ, ಅಭಿವ್ಯಕ್ತಿ ವಿಧಾನ, ದರ್ಶನ ಹೀಗೆ ಭಿನ್ನ ನೆಲೆಗಳ ಮೂಲ ಪ್ರೇರಣೆಗಳನ್ನು ಅವುಗಳ ಹುಟ್ಟಿನ ಕಾರಣಗಳನ್ನಾಗಿ ತಿಳಿಯುವ ಕೆಲಸ ಇಲ್ಲಿ ನಡೆಯುತ್ತದೆ. (ಭಾಷೆಯ ವಿಚಾರದ ಚರ್ಚೆಗೆ ನೋಡಿ;836) ಕವಿಸೃಷ್ಟಿಯನ್ನು ಅರ್ಥಮಾಡಿಕೊಳ್ಳುವ ಮತ್ತು ಸಮರ್ಥಿಸುವ ಕಡೆಗೆ ವಿಮರ್ಶೆಯನ್ನು ಇದು ಕರೆದೊಯ್ಯುತ್ತದೆ. ಪುಣೇಕರರ ಒಟ್ಟಾರೆ ವಿಮರ್ಶೆಯಲ್ಲಿ ಇದು ಸಂಭವಿಸಿದೆ. ಪುಟ್ಟಪ್ಪನವ ಕಾವ್ಯದಲ್ಲಿ ಸ್ತ್ರೀ ಸೌಂದರ್ಯದ ಅಭಾವವಿದೆ ಎನ್ನುವ ಪುಣೇಕರರು ಅದಕ್ಕೆ ಕಾರಣವನ್ನು ಕುವೆಂಪು ಬೆಳೆದ ವಾತಾವರಣದಲ್ಲಿ ಗುರ್ತಿಸುತ್ತಾರೆ. ಸಾಹಿತ್ಯವನ್ನು ಸಾಹಿತ್ಯೇತರ ಕಾರಣಗಳಿಂದ–ಲೋಕನೆಲೆಯಿಂದ ನೋಡುವ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ. (898–ಪುಟ: 125) ಪುಣೇಕರರು ಪುಟ್ಟಪ್ಪನವರ ಕಾವ್ಯವನ್ನು ಅವರ ವ್ಯಕ್ತಿತ್ವದ ಅಭಿವ್ಯಕ್ತಿ ಎಂದು ಭಾವಿಸುವುದರಿಂದ ಕೂಡ ಅವರ ಪ್ರಭಾವಗಳ ಅನ್ವೇಷಣೆಯು ಕಾರಣ ಮೀಮಾಂಸೆಯೇ ಆಗಿ ಪರಿಣಮಿಸಿದೆ. ಕಾರಣ ಮೀಮಾಂಸೆಯು ನಮ್ಮ ವಿಮರ್ಶೆಯಲ್ಲಿ ಅಂತರ್ಗತವಾಗಿ ಬೆರೆತುಕೊಂಡಿರುವ ಒಂದು ಗುಣಲಕ್ಷಣ ಮತ್ತು ಇದಕ್ಕೆ ಒಂದು ಸ್ವತಂತ್ರ ಮಾರ್ಗವಾಗುವ ಸಾಧ್ಯತೆಯೂ ಇದೆ.

ಈ ಅನ್ವೇಷಣಾ ಮಾದರಿಗೆ ಇನ್ನೊಂದು ಅಪಾಯವಿದೆ. ಎಲ್ಲೆಲ್ಲಿಂದ ಯಾರ್‍ಯಾರಿಂದ ಪ್ರಭಾವ ಪ್ರೇರಣೆಗಳು ಒದಗಿದೆಯೋ ಆ ಆಕರಗಳನ್ನು ಪ್ರಭಾವಿತ ಕೃತಿಯೊಂದಿಗೆ ತಾಳೆ ನೋಡುತ್ತ ಎರಡರಲ್ಲಿ ಯಾವುದು ಹೆಚ್ಚು ಎಂದು ಪತ್ತೆ ಹಚ್ಚುವ ಅಪಾಯ. ಇದು ಯಾರಾದರೂ ಒಬ್ಬರನ್ನು ಶ್ರೇಷ್ಠವೆಂದೂ ಇನ್ನೊಬ್ಬರನ್ನು ಅಷ್ಟು ಶ್ರೇಷ್ಠ ಅಲ್ಲ ಎಂದೂ ವಿಂಗಡಿಸುವ ತರತಮ ಶ್ರೇಣೀಕರಣದ ತೌಲನಿಕ ವಿಧಾನವನ್ನು ಹಿಡಿಯಬಹುದಾದ ಅಪಾಯ. ಇಂಥ ಅಪಾಯದಿಂದ ಪಾರಾಗಲೆಂದೇ ನಮ್ಮ ವಿಮರ್ಶೆಯು ಭಿನ್ನತೆಗಳ ಅನ್ವೇಷಣೆ ಮತ್ತು ವಿಶಿಷ್ಟತೆಗಳ ಅನ್ವೇಷಣೆಗೆ ತೊಡಗಿದೆ. ಪ್ರೇರಣೆಗಳ ಬಗ್ಗೆ ಮಾತಾಡುವಾಗ ಕೆಲವೊಮ್ಮೆ ಅಲ್ಲೇನಿದೆ, ಇಲ್ಲೇನಿದೆ ಎಂದು ಸಾಮ್ಯ ವ್ಯತ್ಯಾಸಗಳನ್ನು ಪಟ್ಟಿಮಾಡುವ 'ಸಂಶೋಧನಾ' ವಿಮರ್ಶೆಯೂ ಸಂಭವಿಸಿದೆ. ಈ ಪಟ್ಟಿ ವಿಮರ್ಶೆಯಿಂದ ಹೆಚ್ಚಿನದೇನೂ ಸಾಧಿತವಾಗುವುದಿಲ್ಲ. ಹೆಚ್ಚೆಂದರೆ ವಿಮರ್ಶಕನ ಓದಿನ ವಿಸ್ತಾರಗಳು ಅಭಿನಯಗೊಳ್ಳಬಹುದು ಅಷ್ಟೆ. ಆದರೆ ಭಿನ್ನತೆಗಳ ಅನ್ವೇಷಣೆ, ಸಾಮ್ಯತೆಗಳ ಅನ್ವೇಷಣೆ, ವಿಶಿಷ್ಟತೆಗಳ ಅನ್ವೇಷಣೆ ಇವು ಪ್ರಭಾವ ಪ್ರೇರಣೆಗಳ ಮೂರು ಮುಖ್ಯ ಉದ್ಯೋಗಗಳಾಗಿವೆ. ಇವು ಈ ಅನ್ವೇಷಣೆಯ ಮುಖ್ಯ ವಿನ್ಯಾಸಗಳೂ ಹೌದು, ವಿಮರ್ಶೆಯ ಕಾರ್ಯಗಳೂ ಹೌದು.

ಸಾಹಿತ್ಯವನ್ನು ಕವಿಯ ವ್ಯಕ್ತಿತ್ವದ ಅಭಿವ್ಯಕ್ತಿ ಎಂದು ತಿಳಿಯುವ ತಿಳುವಳಿಕೆಯು ನಮ್ಮ ವಿಮರ್ಶೆಯಲ್ಲಿ ಸಾಕಷ್ಟು ವ್ಯಾಪಕವಾಗಿ ಇದೆ. ಇದು ಕವಿಯ ವ್ಯಕ್ತಿತ್ವವು ರೂಪುಗೊಂಡ ಬಗೆಯನ್ನು ಅನ್ವೇಷಿಸುವ ಕಡೆಗೆ ತನ್ನ ಗಮನವನ್ನು ಕೇಂದ್ರೀಕರಿಸುತ್ತದೆ. ಪ್ರೇರಕ–ಪ್ರೇರಿತ–ಫಲಿತಗಳ ನಡುವಣ ಸಂಬಂಧಗಳ ಅಭ್ಯಾಸವಾಗಿ ಇಂಥ ವಿಮರ್ಶೆಯು ಪರಿಣಮಿಸಿದೆ. ಕಾಲ ದೇಶ ಬದ್ಧ ನಿಸರ್ಗ ಮತ್ತು ಕಾಲ ದೇಶ ಬದ್ಧ ಕವಿ ವ್ಯಕ್ತಿತ್ವ ಹಾಗೂ ಸಾಹಿತ್ಯ ಈ ಮೂರನ್ನು ಪ್ರೇರಕ–ಪ್ರೇರಿತ–ಫಲಿತಗಳೆಂದು ನೋಡುತ್ತ ಈ ವಿಮರ್ಶೆಯು ಲೋಕ–ಕವಿ–ಕಾವ್ಯಗಳು ಪರಸ್ಪರ ಜನಕ–ಜನ್ಯ ಸಂಬಂಧ ಹೊಂದಿವೆ ಎಂದು ವ್ಯಾಖ್ಯಾನಿಸುತ್ತದೆ. ಇದು ಸಾಹಿತ್ಯವನ್ನು ಸಾಹಿತಿಯ ಜೀವನದ ದಾಖಲೆ ಎಂದೂ (1770–ಪುಟ: 40) ಪರಿಸರದ ಜೀವಸಂಪತ್ತಿನ ದಾಖಲೆ ಎಂದೂ (2577–ಪುಟ: 36) ನೋಡುತ್ತದೆ. ಇಂಥ ದೃಷ್ಟಿಗಳಿಗೆ ಸಾಹಿತ್ಯವು ಜೀವನ ಚರಿತ್ರೆಯ ತುಣುಕೂ ಹೌದು, ಸಂಸ್ಕೃತಿ ಚರಿತ್ರೆಯ ರೂಪಕವೂ ಹೌದು (2585) ಹಾಗೆಯೇ ಕಲಾಕೃತಿಯೂ ಹೌದು. (ಜೊತೆಗೆ ನೋಡಿ;ಸಂಸ್ಕೃತಿ ವಿಕಾಸ ದೃಷ್ಟಿ) ಜನ್ಯ ಜನಕ ಸಂಬಂಧಗಳ ಅನ್ವೇಷಣೆಯ ವಿನ್ಯಾಸ ಮತ್ತು ಪ್ರೇರಕ–ಪ್ರೇರಿತ–ಫಲಿತಗಳ ಅಂತಃಸಂಬಂಧಗಳ ಅನ್ವೇಷಣೆಯು ನಮ್ಮ ಈ ವಿಮರ್ಶೆಯ ಎರಡು ಮುಖ್ಯ ವಿನ್ಯಾಸಗಳಾಗಿವೆ.

**5.1.5. ವಿಚಾರ ದೃಷ್ಟಿ–ದರ್ಶನ ದೃಷ್ಟಿ**

ಕುವೆಂಪು ಅವರ ವೈಚಾರಿಕತೆಗಳನ್ನು ಸಂಗ್ರಹಿಸಿ ಮರುರೂಪಿಸುವ; ವ್ಯಾಖ್ಯಾನಿಸುವ, ವಿಶ್ಲೇಷಿಸುವ, ವಿವರಿಸಿ ಮಂಡಿಸುವ; ಅವರ ತಾತ್ವಿಕ ಗ್ರಹಿಕೆಗಳ ಜೊತೆ ತಮ್ಮದೇ ತಕರಾರುಗಳನ್ನು ಹೂಡುವ ಮತ್ತು ಅವರ ದೃಷ್ಟಿ–ಧೋರಣೆಗಳ ಮೇಲೆ ಆಗಿರುವ ಪ್ರಭಾವ ಪ್ರೇರಣೆಗಳನ್ನು ಅನ್ವೇಷಿಸುವ ಹೀಗೆ ಅನೇಕ ರೀತಿಯಲ್ಲಿ ಈ ವಿಮರ್ಶೆಯು ಸಂಭವಿಸಿದೆ. ಶೈವದರ್ಶನ, ಚಾರ್ವಾಕ ದರ್ಶನ, ಜೈನದರ್ಶನ ಇತ್ಯಾದಿ

ಭಾರತೀಯ ದರ್ಶನಗಳ ಹಿನ್ನಲೆಯಲ್ಲಿ ಮತ್ತು ಜಾಗತಿಕ ತತ್ವಜ್ಞಾನಗಳ ಹಿನ್ನಲೆಯಲ್ಲಿ ಕುವೆಂಪು ದಾರ್ಶನಿಕ ವಿಚಾರಗಳನ್ನು ಚರ್ಚಿಸುವ ಯತ್ನವೂ ಇಲ್ಲಿ ನಡೆದಿದೆ. ವೈಚಾರಿಕ ದೃಷ್ಟಿ, ತತ್ವಗಳನ್ನೆ ದರ್ಶನಗಳೆಂದು ಕಾಣುವ ದೃಷ್ಟಿಯು ಇಲ್ಲಿದೆ. ವಿಚಾರ ಸಾಹಿತ್ಯ ಮತ್ತು ಇತರೆ ಸಾಹಿತ್ಯ ಎಂದು ಈ ದೃಷ್ಟಿಯಲ್ಲಿ ಸಾಹಿತ್ಯವನ್ನು ಎರಡಾಗಿ ವಿಭಜಿಸಿಕೊಂಡು ಕೆಲವೊಮ್ಮೆ ಪ್ರತ್ಯೇಕವಾಗಿಯೂ ಕೆಲವೊಮ್ಮೆ ಅಖಂಡವಾಗಿಯೂ ನೋಡಲಾಗಿದೆ. ಸಾಹಿತ್ಯದಲ್ಲಿ ಪ್ರಕಟವಾಗುವ ವೈಚಾರಿಕತೆ ಮತ್ತು ವಿಚಾರ ಸಾಹಿತ್ಯದಲ್ಲಿ ಪ್ರಕಟವಾಗುವ ವೈಚಾರಿಕತೆಗಳನ್ನು ತೌಲನಿಕವಾಗಿ ನೋಡುವ ದೃಷ್ಟಿಯೂ ಇಲ್ಲಿದೆ. 'ವಿಚಾರ ಸಾಹಿತ್ಯ' ಎಂಬ ಪರಿಭಾಷೆಯಲ್ಲಿ ವಿಚಾರಗಳ ಮಂಡನೆಯನ್ನು ಸಾಹಿತ್ಯವೆಂದು ಕರೆಯುವ ರೂಢಿ ಇದ್ದರೂ ನಮ್ಮ ವಿಮರ್ಶೆಯು ವಿಚಾರ ಸಾಹಿತ್ಯವನ್ನು ಸೃಜನೇತರವೆಂದೂ; ಕಥನ, ಕಾವ್ಯ, ನಾಟಕಾದಿಗಳನ್ನು ಸೃಜನಶೀಲ ಎಂದೂ ಭಾವಿಸಿದೆ. ಸಾಹಿತ್ಯವನ್ನು ಸೃಜನ ಮತ್ತು ಸೃಜನೇತರವೆಂದು ವಿಭಜಿಸಿ ನೋಡುವ ಕಲ್ಪನೆಯು ನಮ್ಮ ವಿಮರ್ಶೆಯ ಯಾವತ್ತಿನ ಒಂದು ಲಕ್ಷಣವಾಗಿದೆ.

ವಿಚಾರದೃಷ್ಟಿಯ ವಿಮರ್ಶೆಯಲ್ಲಿ ಹಲವು ದೃಷ್ಟಿ ಧೋರಣೆಗಳಿವೆ. ವೈಚಾರಿಕತೆಯನ್ನು ಇದು ಸಾಹಿತ್ಯದಲ್ಲಿ ಅಡಗಿರುವ ಒಂದು ಮನೋಧರ್ಮ ಎಂಬಂತೆ, ಸಾಹಿತ್ಯದ ವಸ್ತು ಎಂಬಂತೆ ಮತ್ತು ಒಂದು ಸಾಹಿತ್ಯ ಪ್ರಕಾರ ಎಂಬಂತೆ ಭಾವಿಸಿ ಚರ್ಚಿಸಿದೆ. ಹಾಗಾಗಿಯೇ ಇಲ್ಲಿ ಕಾದಂಬರಿಗಳಲ್ಲಿ ವೈಚಾರಿಕತೆ (301), ಕಾವ್ಯದಲ್ಲಿ ವೈಚಾರಿಕತೆ (759), ಸಾಹಿತ್ಯದಲ್ಲಿ ವೈಚಾರಿಕತೆ (1090) ಜಲಗಾರ: ಪಗ್ರತಿಶೀಲತೆ (1257), ಇಂತಹ ವಿಮರ್ಶೆಗಳೂ ಕುವೆಂಪು ವಿಚಾರಸಾಹಿತ್ಯ (979) ವೈಚಾರಿಕಾ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು (993) ಇಂತಹ ವಿಮರ್ಶೆಗಳೂ ಸೃಷ್ಟಿಯಾಗಿವೆ. ವೈಚಾರಿಕತೆಯನ್ನು ಒಂದು ಇಸಮ್ಮು ಅಥವಾ ವಾದವಾಗಿ; ಒಬ್ಬೊಬ್ಬ ವ್ಯಕ್ತಿಗೂ ಅವನದೇ ಆದ ದಾರ್ಶನಿಕ ಪಂಥವೊಂದು ಇರುತ್ತದೆ ಎಂಬ ಅರ್ಥದಲ್ಲಿಯೂ ಕುವೆಂಪು ಬರಹವನ್ನು ಇಲ್ಲಿ ವಿಮರ್ಶಿಸಲಾಗಿದೆ. ವೈಚಾರಿಕತೆಯು ಆಧುನಿಕ ವಿದ್ಯಾಭ್ಯಾಸಕ್ಕೆ ತೆರೆದುಕೊಂಡ ವ್ಯಕ್ತಿಯಲ್ಲಿ ಸಹಜವಾಗಿ ಹುಟ್ಟುವ ಸ್ವಭಾವ ಎಂಬಂತೆ ಇಂತಹ ವಿಮರ್ಶೆಯು ಭಾವಿಸಿದೆ. ಕುವೆಂಪು ಮತ್ತು ವಿಚಾರವಾದ (937), ಕುವೆಂಪು ಅವರ ವಿಚಾರವಾದ (565) ಇಂತಹ ವಿಮರ್ಶೆಗಳು ಇದಕ್ಕೆ ಉದಾಹರಣೆ.

ಕುವೆಂಪು ಅವರು ಎಲ್ಲರಿಗಿಂತ ಭಿನ್ನವಾಗಿ ಪ್ರತಿಪಾದಿಸುವ ವೈಚಾರಿಕ ದೃಷ್ಟಿ ಯಾವುದು? ಎಂದು ಅದರ ಸ್ವರೂಪವನ್ನು ವಿವರಿಸಿಕೊಳ್ಳುವ, ಮೌಲ್ಯಮಾಪನ ಮಾಡುವ, ಮತ್ತು ಇಂದಿಗೆ ಅದರ ಪ್ರಸ್ತುತತೆ ಏನು? ಎಂದು ಪರಿಶೀಲಿಸುವ ದೃಷ್ಟಿಗಳೆಲ್ಲ ಇಲ್ಲಿ ಇವೆ. ಹಾಗಾಗಿ ಕುವೆಂಪು ಅವರ ವೈಚಾರಿಕತೆ (570ರಿಂದ572), ಕುವೆಂಪು ವಿಚಾರ ಸಾಹಿತ್ಯದ ನೆಲೆ ಬೆಲೆ (980), ಕುವೆಂಪು ವಿಚಾರಧಾರೆಯ ಪ್ರಸ್ತುತತೆ (2625), ಸಮಕಾಲೀನತೆಯಲ್ಲಿ ಕುವೆಂಪು (2376) ಈ ರೀತಿಯಲ್ಲಿ ವಿಮರ್ಶೆಗಳು ಇಲ್ಲಿ ಸೃಷ್ಟಿಯಾಗಿವೆ. ಕುವೆಂಪು ವಿಚಾರ ಧಾರೆಯನ್ನು ಸಮಕಾಲೀನಗೊಳಿಸುವ ಮತ್ತು ಅವರು ಬದುಕಿದ್ದ ಕಾಲದ ಒತ್ತಡಗಳ ಉತ್ಪನ್ನವಾಗಿ ನೋಡುವ ಎರಡೂ ಕ್ರಮಗಳು ಇಲ್ಲಿವೆ. ಕುವೆಂಪು ವಿಚಾರದೃಷ್ಟಿಯು ಇಂದಿಗೆ ಹೊಂದಿಕೆ ಆಗುತ್ತದೆಯೋ ಅಥವಾ ಅದೂ ಕೂಡ ಪರಿಶೀಲನಾರ್ಹವೋ ಎಂಬ ಪ್ರಶ್ನೆಗಳು ಇಲ್ಲಿ ಚರ್ಚಿತವಾಗಿವೆ. ಇದರ ಜೊತೆಗೆ ಕುವೆಂಪು ಅವರ ದೃಷ್ಟಿಗಳನ್ನು ವರ್ಗೀಕರಿಸಿ ಅಭ್ಯಸಿಸುವ ಮತ್ತು ನಿರ್ವಚಿಸಿಕೊಳ್ಳುವ ದೃಷ್ಟಿಯೂ ಇಲ್ಲಿ ಇದೆ. ಹೀಗಾಗಿಯೆ ಇಲ್ಲಿ ಕುವೆಂಪು ಅವರ ಆಧ್ಯಾತ್ಮಿಕ ದೃಷ್ಟಿ (430) ವೈಜ್ಞಾನಿಕ ದೃಷ್ಟಿ (2080) ಕುವೆಂಪು ಅವರ ತತ್ವದೃಷ್ಟಿ (1294), ಇಂತಹ ವಿಮರ್ಶೆಗಳು ಇಲ್ಲಿ ಸೃಷ್ಟಿಯಾಗಿವೆ. ಒಟ್ಟಾರೆಯಾಗಿ ಕುವೆಂಪು ಧೋರಣೆಗಳು ಯಾವ ಯಾವ ಕೆಟಗರಿಗಳಿಗೆ ಸೇರುತ್ತವೆ ಎಂದು ವಿಂಗಡಿಸಿ ವಿವೇಚಿಸುವ ಪ್ರವೃತ್ತಿ ಇಲ್ಲಿ ಹೆಚ್ಚಾಗಿದೆ. ಸಮಾಜದ ಮುಖ್ಯ ವಲಯಗಳಿಗೆ ಸಂಬಂಧಿಸಿದಂತೆ; ಉದಾಹರಣೆಗೆ ಶಿಕ್ಷಣ ಕ್ಷೇತ್ರ, ರಾಜಕೀಯ ಕ್ಷೇತ್ರ, ಧರ್ಮ-ಜಾತಿ-ಆಚಾರ ಇತ್ಯಾದಿಗಳಿಗೆ ಕುವೆಂಪು ಪ್ರತಿಕ್ರಿಯಿಸಿರುವ ಬಗೆಗಳನ್ನು ವಿಂಗಡಿಸಿ ವಿಶ್ಲೇಷಿಸುವ ಪ್ರವೃತ್ತಿ ಇಲ್ಲಿ ಇದೆ. ಧರ್ಮ, ಜಾತಿ, ಕೋಮುವಾದ: ಕುವೆಂಪು ಚಿಂತನೆಗಳು (1355), ಶಿಕ್ಷಣ ಕುರಿತು ಕುವೆಂಪು ವಿಚಾರಗಳು (2124, 2125), ಕುವೆಂಪು ಅವರ ರಾಜಕೀಯ ವಿಚಾರಧಾರೆ (560, 561) ಇಂತಹ ಲೇಖನಗಳು ಇದಕ್ಕೆ ಉದಾಹರಣೆ. ಈ ಭಿನ್ನ ವಲಯಗಳನ್ನು ಕುರಿತಂತೆ ಕುವೆಂಪು ಅವರ ಒಟ್ಟಾರೆ ಬರವಣಿಗೆಯಲ್ಲಿ ಮತ್ತು ಭಾಷಣಗಳಲ್ಲಿ ವ್ಯಕ್ತವಾಗಿರುವ ಚಿಂತನೆಗಳನ್ನು ಕ್ರೋಢೀಕರಿಸಿಕೊಂಡು ಪರಿಶೀಲಿಸುವ ಕೆಲಸ ಇಲ್ಲಿ ನಡೆದಿದೆ. ಸಾಹಿತ್ಯವನ್ನು ಸಮಾಜ ವಿಮರ್ಶೆಯಾಗಿ ನೋಡುವ ಮತ್ತು ವಿಮರ್ಶೆಯನ್ನು ಸಮಾಜ ವಿಮರ್ಶೆಯಾಗಿ ಮಾಡುವ ಪ್ರವೃತ್ತಿ ಇಲ್ಲಿ ಆಚರಣೆಯಾಗಿದೆ.

ಸಂಸ್ಕೃತಿಯ ದೃಷ್ಟಿಯಿಂದ ವೈಚಾರಿಕತೆಯನ್ನು ಪರಿಶೀಲಿಸುವ ವಿಮರ್ಶೆಯೂ ಇಲ್ಲಿ ಸಾಕಷ್ಟು ಸೃಷ್ಟಿಯಾಗಿದೆ. ಇಲ್ಲಿ ವೈಚಾರಿಕತೆಯಲ್ಲಿ ಪ್ರಕಟವಾಗುವ ಸಾಂಸ್ಕೃತಿಕ ನೆಲೆಗಳನ್ನು ಪರಿಶೀಲಿಸುವ ಮತ್ತು ಸಾಂಸ್ಕೃತಿಕ ಹಿನ್ನೆಲೆಯಿಂದ ವೈಚಾರಿಕತೆಯನ್ನು ಪರಿಶೀಲನೆ ಮಾಡುವ ಹಾಗೂ ಸಾಂಸ್ಕೃತಿಕವಾಗಿ ಒಟ್ಟು ಶೋಷಿತ ಸಮುದಾಯಗಳಿಗೆ ಈ ವಿಚಾರವಾದದಿಂದ ಆಗಬಹುದಾದ ಪ್ರಯೋಜನಗಳನ್ನು ಪರಿಶೀಲಿಸುವ, ಹಾಗೆಯೇ ಸಾಂಸ್ಕೃತಿಕ ಒತ್ತಡಗಳಿಂದ ಮತ್ತು ಒತ್ತಡಗಳಿಗಾಗಿ ವೈಚಾರಿಕತೆಯು ರೂಪಗೊಳ್ಳಬಹುದಾದ ನೆಲೆಗಳನ್ನು ಪರಿಶೀಲಿಸುವ ಕೆಲಸಗಳು ಇಲ್ಲಿ ನಡೆದಿವೆ. ಸದ್ಯದ ಸಂಸ್ಕೃತಿ ವಿವೇಚನೆಯ ಹಿನ್ನೆಲೆಯಲ್ಲಿ ಕುವೆಂಪು ವೈಚಾರಿಕತೆ (2368), ಬ್ರಾಹ್ಮಣತ್ವದ ವಿರೋಧ–ದೇಸಿ ಚಿಂತನೆ–ಕುವೆಂಪು ವಿಚಾರವಾದ (778), ಕುವೆಂಪು ಸಂಸ್ಕೃತಿ ವಿಚಾರವಾದ (1014), ಕುವೆಂಪು ಸಂಸ್ಕೃತಿ ಚಿಂತನೆ (1013) ಇಂತಹ ಲೇಖನಗಳು ಇದಕ್ಕೆ ಕೆಲವು ಉದಾಹರಣೆಗಳಾಗಿವೆ.

ಕುವೆಂಪು ವಿಚಾರ ಸಾಹಿತ್ಯದ ಕೃತಿಗಳನ್ನು ಪರಿಶೀಲಿಸುವ ಕೃತಿನಿಷ್ಠ ಪರಿಶೀಲನೆಯೂ ಇಲ್ಲಿ ಸಾಕಷ್ಟು ನಡೆದಿದೆ. ಒಂದೊಂದು ಕೃತಿಗಳನ್ನು ಅವರ ಸಮಗ್ರ ದರ್ಶನದ ಘಟಕಗಳೆಂಬಂತೆ ಇಲ್ಲಿ ನೋಡಲಾಗಿದೆ. ಸಾಧಾರಣೀಕರಣ, ಅನ್ವಯೀಕರಣ ಪ್ರವೃತ್ತಿಗಳು ಇಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ವಿಭೂತಿ ಪೂಜೆ (2034ರಿಂದ2037), ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ (45, 46) ವಿಚಾರಕ್ರಾಂತಿಗೆ ಆಹ್ವಾನ (2013ರಿಂದ2017) ಜನತಾಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ (1248ರಿಂದ 1250) ಇಂತಹ ವಿಮರ್ಶಾ ಲೇಖನಗಳು ಇದಕ್ಕೆ ಉದಾಹರಣೆ. ಇವು ಕೃತಿ ಕೇಂದ್ರಿತವಾಗಿ ಕುವೆಂಪು ಅವರ ವೈಚಾರಿಕ ಚಿಂತನೆಗಳನ್ನು ವಿವರಿಸುವ, ಮರುನಿರೂಪಿಸುವ ಕೆಲಸವನ್ನೂ ಮಾಡಿವೆ. ಖಂಡದೃಷ್ಟಿಯ ಕೃತಿನಿಷ್ಠ ವಿಮರ್ಶೆಗಳು ಇವಾಗಿದ್ದರೂ ಇಲ್ಲಿ ಒಟ್ಟಾರೆ ಕುವೆಂಪು ವಿಚಾರ ಸಾಹಿತ್ಯ ಮತ್ತು ಸಾಹಿತ್ಯದ ವಿವರಗಳನ್ನೂ ಎಳೆದು ಚರ್ಚಿಸಲಾಗುತ್ತದೆ. ಮತ್ತು ಆ ಮೂಲಕ ಒಟ್ಟಾರೆ ಕುವೆಂಪು ವಿಚಾರದೃಷ್ಟಿಯ ಬಗೆಗೆ ನಿಲುವುಗಳನ್ನು ತೆಗೆದುಕೊಳ್ಳಲಾಗುತ್ತದೆ.

ಕುವೆಂಪು ಅವರ ವಿಚಾರದೃಷ್ಟಿಗಳು ರೂಪಗೊಂಡ ಬಗೆಯನ್ನು ಪರಿಶೀಲಿಸುವ, ಅವರ ವಿಚಾರವಂತಿಕೆಯ ಮೇಲಿನ ಪ್ರಭಾವ–ಪ್ರೇರಣೆಗಳನ್ನು ಅನ್ವೇಷಿಸುವ ದೃಷ್ಟಿಯ ವಿಮರ್ಶೆಯೂ ಇಲ್ಲಿ ರಚನೆಯಾಗಿದೆ. ಹಾಗೆಯೇ ನಮ್ಮ ಸಮಾಜದ ಮೇಲೆ ಆಗಿರುವ ಕುವೆಂಪು ವಿಚಾರಗಳ ಪ್ರಭಾವವನ್ನು ಅಭ್ಯಾಸಮಾಡುವ ಯತ್ನಗಳೂ ಇಲ್ಲಿ ನಡೆದಿವೆ. ಆ ಮೂಲಕ ಕುವೆಂಪು ಅವರ ಪಾತ್ರ ಸಾಹಿತಿಯಾಗಿ, ದಾರ್ಶನಿಕರಾಗಿ ಈ ಸಮಾಜದಲ್ಲಿ ಎಷ್ಟರ ಮಟ್ಟಿಗೆ ನಿರ್ವಹಣೆಯಾಗಿದೆ ಎಂಬ ಪರಿಶೀಲನೆಗಳೂ ಇಲ್ಲಿ ನಡೆದಿವೆ. ಸಮಾಜ ಪರಿವರ್ತಕರಾಗಿ ಕುವೆಂಪು (2379) ಶೂದ್ರ ಸಂಸ್ಕೃತಿಯ ವಿಮರ್ಶಕರಾಗಿ ಕುವೆಂಪು (2345), ವೈಚಾರಿಕತೆಯ ಮೇಲೆ ಪರಿಸರದ ಪ್ರಭಾವ (2088) ಜಲಗಾರ ಮತ್ತು ಸಮಾಜ ಸುಧಾರಣೆ (1260), ಗಾಂಧಿ, ಜೆ.ಪಿ, ಹಾಗೂ ಕುವೆಂಪು ವಿಚಾರಧಾರೆ (1186) ಇಂತಹ ಲೇಖನಗಳಲ್ಲಿ ಯಾರು ಯಾರಿಂದೆಲ್ಲ ಕುವೆಂಪು ವೈಚಾರಿಕತೆ ಪ್ರಭಾವಿತವಾಗಿದೆ ಎಂಬ ಸ್ಥೂಲ ಸಮೀಕ್ಷೆ ಮತ್ತು ಆ ಮೂಲಕ ಕುವೆಂಪು ವಿಶಿಷ್ಟತೆಯ ವ್ಯಾಖ್ಯಾನಗಳು ನಡೆದಿವೆ. (ಮುಂದೆ ವಿವರಿಸಲಾಗಿದೆ) ಪ್ರಭಾವ–ಪ್ರೇರಣೆಗಳ ಅಭ್ಯಾಸವು ಕಾರಣಮೀಮಾಂಸೆಯಾಗಿಯೂ, ಸಮಾಜದ ಮೇಲೆ ಬೀರಿರುವ ಸಾಹಿತ್ಯದ ಪರಿಣಾಮಗಳು ಏನೆಂಬ ಅಭ್ಯಾಸವು ಪರಿಣಾಮ ಮೀಮಾಂಸೆಯಾಗಿಯೂ ಇಲ್ಲಿ ಬೆಳೆದಿದೆ.

ತತ್ವಜ್ಞಾನ ದರ್ಶನಗಳ ಹಿನ್ನೆಲೆಯಲ್ಲಿ ಕುವೆಂಪು ವಿಚಾರಗಳನ್ನು ದಾರ್ಶನಿಕವಾಗಿ ವ್ಯಾಖ್ಯಾನಿಸುವ ಮತ್ತು ಕುವೆಂಪುವನ್ನು ತತ್ವಜ್ಞಾನಿ, ದಾರ್ಶನಿಕ, ಸಂತ, ಯೋಗಿ, ವಿಜ್ಞಾನಿ, ಸಾಂಸ್ಕೃತಿಕ ನಾಯಕ ಇತ್ಯಾದಿಯಾಗಿ ನೋಡುವ ದೃಷ್ಟಿಕೋನವೂ ಇಲ್ಲಿದೆ. ಈ ಹಿನ್ನೆಲೆಯಲ್ಲಿ ಸಂತ ತತ್ವಜ್ಞಾನಿ ಕುವೆಂಪು (2355), ದಾರ್ಶನಿಕ ವಿಜ್ಞಾನಿ ಕುವೆಂಪು (1328), ದೂರದ ಸಿಡಿಲು ಕುವೆಂಪು (1335), ದಾರ್ಶನಿಕ ಲೇಖಕ ಕುವೆಂಪು (1327) ಇಂತಹ ಹಲವು ವಿಮರ್ಶೆಗಳು ರಚನೆಯಾಗಿವೆ. ಈ ದೃಷ್ಟಿಯಲ್ಲಿ ಪ್ರತ್ಯೇಕ ಅಧ್ಯಯನಗಳೂ ನಡೆದಿವೆ. ಉದಾಹರಣೆಗೆ ಎ.ಎಸ್.ವೇಣುಗೋಪಾಲರಾವ್ ಅವರ 'ಶ್ರೀ ಕುವೆಂಪು ದಾರ್ಶನಿಕ ವಿಚಾರಗಳು' ಇಲ್ಲಿ ವ್ಯಕ್ತಿ, ಸಾಹಿತ್ಯ, ಕೃತಿ ಹೀಗೆ ಮುಖ್ಯವಾಗಿ ಮೂರು ನೆಲೆಯಲ್ಲಿ ದರ್ಶನಗಳ ಹಿನ್ನೆಲೆಯಲ್ಲಿ ಕುವೆಂಪುವನ್ನು ವ್ಯಾಖ್ಯಾನಿಸುವ, ನಿರ್ವಚಿಸುವ ಕೆಲಸ ನಡೆದಿದೆ. ವೈಚಾರಿಕ ವಿಚಾರವನ್ನೇ ಪ್ರತ್ಯೇಕ ಅಧ್ಯಯನದ ಕ್ಷೇತ್ರವನ್ನಾಗಿ ಇರಿಸಿಕೊಂಡು ವಿಮರ್ಶೆ(ಸಂಶೋಧನೆ) ನಡೆಸಿರುವ ವಿಮರ್ಶೆಗಳೂ ನಮ್ಮಲ್ಲಿವೆ. ಎಚ್.ತಿಪ್ಪೇರುದ್ರಸ್ವಾಮಿ, ದೇಜಗೌ, ವಿಠ್ಠಲರಾವ್ ಅವರ ಅಧ್ಯಯನಗಳು ಇದಕ್ಕೆ ಉದಾಹರಣೆಗಳು.

ಕುವೆಂಪು ಪ್ರಣೀತ ಮಾನವತಾ ಸಿದ್ಧಾಂತ ಕೃತಿಯಲ್ಲಿ ಕುವೆಂಪುವನ್ನು ಮಾನವತಾವಾದಿ ಎಂದು ಕರೆಯುವ ದೇಜಗೌ, ಕುವೆಂಪು ತತ್ವ ಸಿದ್ಧಾಂತಗಳನ್ನು ಉದಾರ ಮಾನವತಾವಾದದ ಹಿನ್ನೆಲೆಯಿಂದ ನೋಡಿದ್ದಾರೆ. ಕುವೆಂಪು ತಮ್ಮ ಸಾಹಿತ್ಯದ ಮೂಲಕ ಮಂಡಿಸುವ ಒಂದು ಸಿದ್ಧಾಂತವೆಂದರೆ ಮಾನವತಾ ಸಿದ್ಧಾಂತ. ಅವರ ಮಾನವತಾ ಸಿದ್ಧಾಂತವು ದಾರ್ಶನಿಕತೆ, ಧಾರ್ಮಿಕತೆ, ಆಧ್ಯಾತ್ಮಿಕತೆ, ವೈಚಾರಿಕತೆ, ವೈಜ್ಞಾನಿಕತೆ ಈ ಪಂಚಮುಖಗಳ 'ಅಮೃತಫಲ'ವಾಗಿ ಹುಟ್ಟಿದೆ ಎಂದು ವ್ಯಾಖ್ಯಾನಿಸುವ ದೇಜಗೌ, ಕುವೆಂಪು ಅವರ ವೈಚಾರಿಕತೆಯು ಹಲವು ದೃಷ್ಟಿ ಧೋರಣೆಗಳ ಸಂಗಮವಾಗಿದ್ದು–ಮಾನವತಾ ಸಿದ್ಧಾಂತವಾಗಿ ಪ್ರಕಟವಾಗಿದೆ ಎಂದು ವಾದಿಸುತ್ತಾರೆ. ಸ್ತ್ರೀವಾದಿ ದೃಷ್ಟಿ, ಭಾಷಾ ದೃಷ್ಟಿ, ಶ್ರೀಸಾಮಾನ್ಯನ ದೃಷ್ಟಿ, ಪರಿಸರ ದೃಷ್ಟಿ, ಹೀಗೆ ಸಾಹಿತ್ಯದಲ್ಲಿ ಪ್ರಕಟವಾಗಿರುವ ಹಲವು ದೃಷ್ಟಿಗಳಿಂದ ಕುವೆಂಪು ವೈಚಾರಿಕತೆಯನ್ನು ಒಟ್ಟಾರೆಯಾಗಿ ಮಾನವತಾವಾದ ಎಂದು ಪರಿಕಲ್ಪಿಸಿ ಇಲ್ಲಿ ಹೇಳಲಾಗಿದೆ. (2610) ಹೀಗೆ ಒಂದು ಸಿದ್ಧಾಂತವನ್ನು, ಒಂದು ದರ್ಶನವನ್ನು ಕುವೆಂಪು ಅವರಲ್ಲಿ ಗುರ್ತಿಸಿಕೊಳ್ಳುವ ಯತ್ನಗಳೂ ನಮ್ಮಲ್ಲಿ ಸಂಭವಿಸಿವೆ. ಒಂದು ದರ್ಶನ, ಒಂದು ಸಿದ್ಧಾಂತಕ್ಕೆ ಕುವೆಂಪು ವೈಚಾರಿಕ ಚಿಂತನೆಗಳನ್ನು ಅನ್ವಯಿಸುವ ಅನ್ವಯೀಕರಣ ವಿನ್ಯಾಸವು ನಮ್ಮ ವಿಮರ್ಶೆಯ ಒಂದು ಲಕ್ಷಣವಾಗಿದೆ.

ಅಲ್ಲದೆ ಕುವೆಂಪು ವೈಚಾರಿಕ ಚಿಂತನೆ, ದರ್ಶನಗಳನ್ನು, ಸುಭಾಷಿತರೂಪಿ–ಸೂಕ್ತಿರೂಪಿ ಮಾತುಗಳನ್ನು ಸಂಗ್ರಹಿಸಿ ಪ್ರಕಟಿಸುವ, ಮರುನಿರೂಪಿಸುವ ಯತ್ನಗಳೂ ಇಲ್ಲಿ ನಡೆದಿವೆ. ಕುವೆಂಪು ವಿಚಾರಗಳು (973ಮತ್ತು 2623), ಕುವೆಂಪು ಸೂಕ್ತಿ ಸುಧಾ (2669,2670), ಕುವೆಂಪು ಒಲವು ನಿಲುವು (2557) ಇಂತಹ ಹಲವು ಅಧ್ಯಯನಗಳು ಇಲ್ಲಿ ನಡೆದಿವೆ. ಇವುಗಳನ್ನು ಶುದ್ಧಾಂಗವಾಗಿ ವಿಮರ್ಶೆಗಳು ಎನ್ನಲು ಬರುವುದಿಲ್ಲವಾದರೂ ಆಯ್ಕೆ ಮತ್ತು ಸಂಯೋಜನೆ, ಆಯ್ಕೆ ಮತ್ತು ಅಲಕ್ಷ್ಯಗಳ ಹಿನ್ನೆಲೆಯಿಂದ ಇವುಗಳನ್ನು ನೋಡಬಹುದಾಗಿದೆ. ಕುವೆಂಪು ಸಾಹಿತ್ಯದ ಪ್ರಚಾರ–ಪ್ರಸಾರವೇ ಇವುಗಳ ಮುಖ್ಯ ಉದ್ದೇಶವಾಗಿದೆ. ಕುವೆಂಪು ವಿಚಾರ ಸಾಹಿತ್ಯ ಮತ್ತು ಸಾಹಿತ್ಯಗಳಲ್ಲಿ ಸಂಧಿಗ್ಧತೆ–ದ್ವಂದ್ವಗಳಿವೆ ಎಂದು ನಂಬಿ, ಗುರ್ತಿಸಿ–ವ್ಯಾಖ್ಯಾನಿಸುವ ಕೆಲಸಗಳೂ ನಮ್ಮಲ್ಲಿ ಸಾಕಷ್ಟು ಸಂಭವಿಸಿವೆ. ಈ ವ್ಯಾಖ್ಯಾನಗಳಲ್ಲಿ ವಿಮರ್ಶೆಯು ನಿಂದೆಯಾಗುವ, ಕಾರಣಮೀಮಾಂಸೆಯಾಗಿ ಪರಿವರ್ತಿತವಾಗಿ–ಪ್ರೇರಣೆ ಪ್ರಭಾವಗಳ ಹುಡುಕಾಟವಾಗಿ ಪರಿಣಮಿಸುವ ಸಾಧ್ಯತೆಗಳೂ ಪ್ರಕಟಗೊಂಡಿವೆ. (ಮುಂದೆ ವಿವರಿಸಲಾಗಿದೆ)

ಯಾವ ದೃಷ್ಟಿಯಲ್ಲಿ ವಿಮರ್ಶೆಗೆ ತೊಡಗಿದರೂ ನಮ್ಮ ವಿಮರ್ಶಕರು ವೈಚಾರಿಕತೆಯ ಪರೀಕ್ಷೆಯನ್ನು ಒಂದು ಸಾಮಾನ್ಯ ಅಂಶವೆಂಬಂತೆ ನಡೆಸಿದ್ದಾರೆ. ಕುವೆಂಪು ಅವರ ಅಖಂಡ ದೃಷ್ಟಿ–ಪೂರ್ಣದೃಷ್ಟಿ ನಮ್ಮ ವಿಮರ್ಶೆಯನ್ನು ಸಾಕಷ್ಟು ಪ್ರಭಾವಿಸಿದೆ. ಈ ದೃಷ್ಟಿಯು ನಮ್ಮ ವಿಮರ್ಶೆಯ ಲಕ್ಷಣಗಳಲ್ಲಿ ಒಂದು ಕೂಡ ಹೌದು. ಅಷ್ಟೇ ಅಲ್ಲ ಪೂರ್ಣದೃಷ್ಟಿ ಎಂಬುದು ಕುವೆಂಪು ಪ್ರತಿಪಾದಿಸುವ ಒಂದು ದರ್ಶನ–ತತ್ವ ಎಂಬಂತೆಯೇ ಅದನ್ನು ಅವರ ಸಾಹಿತ್ಯದ ಒಂದು ಲಕ್ಷಣವಾಗಿಯೂ ನಮ್ಮ ವಿಮರ್ಶೆಯು ವ್ಯಾಖ್ಯಾನಿಸಿದೆ. (443) ಸಮನ್ವಯ, ಸರ್ವೋದಯ ತತ್ವ, ಅನಿಕೇತನ, ವಿಶ್ವಮಾನವ ಪ್ರಜ್ಞೆಗಳಿಂದ ಪ್ರಭಾವಿತವಾಗಿರುವ ನಮ್ಮ ವಿಮರ್ಶೆ ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯದಲ್ಲಿ ಇವುಗಳನ್ನು ಹುಡುಕುವ ಮತ್ತು ಈ ತತ್ವಗಳ ಮೂಲಕ ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯವನ್ನು ವ್ಯಾಖ್ಯಾನಿಸುವ (ಅನ್ವಯಿಸಿ ನೋಡುವ) ಕೆಲಸವನ್ನು ಮಾಡಿದೆ. ಕುವೆಂಪು ಅವರ ವ್ಯಕ್ತಿತ್ವ, ಸಾಹಿತ್ಯಗಳ ವಿಶಿಷ್ಟತೆಯೆಂದರೆ ಅದು 'ಸಂಗಮ ಪ್ರಜ್ಞೆ' ಎಂದು ಈ ಹಿನ್ನೆಲೆಯಲ್ಲಿ ನಮ್ಮ ವಿಮರ್ಶೆಯು ವ್ಯಾಖ್ಯಾನಿಸಿದೆ. (1667) ವ್ಯಾಖ್ಯಾನ ಮಾದರಿ ಎಂದು ಇದನ್ನು ಕರೆಯಬಹುದು.

ಸಂಸ್ಕೃತಿಯ ಪರಿಕಲ್ಪನೆ, ಪೌರ್ವಾತ್ಯವಾದಗಳು, ಗ್ರಾಂಶಿಯ ಹೆಜಮನಿ ಮತ್ತು ಕೌಂಟರ್ ಹೆಜಮನಿ, ಸೈದನ ಎಕ್ಸಿಲಿಕ್ ಕ್ವಾಲಿಟಿ, ವಸಾಹತುವಾದ ಈ ಎಲ್ಲ ಹಿನ್ನೆಲೆಗಳಿಂದ ಕೂಡ ಕುವೆಂಪು ವೈಚಾರಿಕತೆಯನ್ನು ಪರಿಶೀಲಿಸಿ ವ್ಯಾಖ್ಯಾನಿಸಲಾಗಿದೆ. ವಸಾಹತುಶಾಹಿ ಯಾಜಮಾನ್ಯ ಮತ್ತು 'ದೇಸಿ' ಯಾಜಮಾನ್ಯ ಇವೆರಡನ್ನು ಪ್ರತಿರೋಧಿಸುತ್ತಾ, ಆಸ್ಮಿತೆ ಮತ್ತು ವಿಶ್ವಾತ್ಮಕತೆ ಇವೆರಡನ್ನು ಬೆಸೆಯುತ್ತಾ ಕುವೆಂಪು ವೈಚಾರಿಕತೆಯು ಒಂದು ನಿರ್ದಿಷ್ಟ ಕಾಲಘಟ್ಟದ ಒತ್ತಡಗಳಿಂದ ರೂಪಗೊಂಡಿದ್ದು ಮತ್ತು ಸಾರ್ವಕಾಲಿಕ ಪ್ರಸ್ತುತತೆಯನ್ನು ಪಡೆಯುವಂತಹದೂ ಆಗಿದೆ (1984–ಪುಟ: 61) ಎಂಬ ನಿಲುವಿಗೂ ಇಲ್ಲಿ ಬರಲಾಗಿದೆ. ಇದು ಅನ್ಯ ಕಣ್ಣುಗಳಿಂದ ಕುವೆಂಪು ವೈಚಾರಿಕತೆಯನ್ನು ವ್ಯಾಖ್ಯಾನಿಸಿಕೊಳ್ಳುವ–ಅರ್ಥೈಸಿಕೊಳ್ಳುವ ಮಾರ್ಗವಾಗಿದೆ. ಅನ್ಯ ಕಣ್ಣುಗಳ ಮೂಲಕ ನೋಡುವ ವಿಧಾನವು ನಮ್ಮ ವಿಮರ್ಶೆಯ ಯಾವತ್ತಿನ ಒಂದು ಮುಖ್ಯ ಲಕ್ಷಣ. ಇಲ್ಲಿ ಅನ್ಯ ಸಿದ್ಧಾಂತ, ನಂಬಿಕೆಗಳ ಮೂಲಕ ಸ್ಥಳೀಯವನ್ನು ಪರಿಶೀಲಿಸುವ ಮತ್ತು ಅನ್ಯ ಸಿದ್ಧಾಂತವನ್ನು ಅನ್ವಯಿಸಿ ಸಾಹಿತ್ಯವನ್ನು ಅಳೆಯುವ ಕೆಲಸಗಳು ನಡೆಯುತ್ತಿರುತ್ತವೆ.

ಕುವೆಂಪು ಅವರ ವೈಚಾರಿಕ ನಿಲುವುಗಳು ರಾಷ್ಟ್ರೀಯ ಚಳುವಳಿ, ಭಾರತೀಯ ಪುನರುಜ್ಜೀವನಗಳ ಭಿತ್ತಿಯಲ್ಲಿಯೂ ಪರಿಶೀಲನೆಗೆ ಗುರಿಯಾಗಿವೆ. ಮೂರ್ತಿಪೂಜೆಯ ಖಂಡನೆ, ಮೂಢನಂಬಿಕೆಗಳ ನಿರಾಕರಣೆ, ಸಾಂಸ್ಥಿಕ ಧರ್ಮದ ನಿರಾಕರಣೆ ಇಂತಹ ತತ್ವಗಳು ಕುವೆಂಪು ಅವರ ವೈಚಾರಿಕ ಚಿಂತನೆಗಳೇ ಆಗಿದ್ದು ಇವು ಭಾರತೀಯ ಪುನರುಜ್ಜೀವನ ಚಳವಳಿಯ ಒಳಧಾರೆಗಳೇ ಆಗಿವೆ. ಮತ್ತು ಇವು ಕುವೆಂಪು ಅವರ ಚಿಂತನೆಗಳಲ್ಲೂ ಪ್ರಕಟವಾಗಿವೆ ಹಾಗೆಯೇ ನಿಸರ್ಗ ಕವಿತೆಗಳಲ್ಲೂ ಪ್ರಕಟವಾಗಿವೆ. ಎಂದು ವಿಚಾರ ದೃಷ್ಟಿಯ ವಿಮರ್ಶೆಯು ವ್ಯಾಖ್ಯಾನಿಸುತ್ತದೆ. (1085–ಪುಟ: 73) ಈ ನೆಲೆಯಲ್ಲಿ ಕುವೆಂಪು ಅವರ ಪ್ರಭಾವ ಪ್ರೇರಣೆಗಳನ್ನು ಮರು ಅನ್ವೇಷಿಸುವ; ಅವರ ಚಿಂತನಾ ದೃಷ್ಟಿಗಳನ್ನು ಪುನಾರಚಿಸಿಕೊಳ್ಳುವ ಕೆಲಸವನ್ನೂ ನಮ್ಮ ವಿಮರ್ಶೆಯು ಮಾಡಿದೆ. ವಿಮರ್ಶೆಯ ಹಲವು ಜವಾಬ್ದಾರಿಗಳಲ್ಲಿ ಮೌಲ್ಯಪ್ರಜ್ಞೆ–ನಡಾವಳಿಗಳನ್ನು ಸಾಹಿತ್ಯದಿಂದ ಸೋಸಿ ಮರುಕಟ್ಟಿಕೊಳ್ಳುವ ಜವಾಬ್ದಾರಿಯು ಪ್ರಮುಖವಾದುದುಎಂಬ ತತ್ವವು ಈ ಆಚರಣೆಯಲ್ಲಿ ಮಂಡಿತವಾಗಿದೆ. ವೈಚಾರಿಕ ಆಕೃತಿಗಳ ವರ್ತಮಾನೀಕರಣ–ಪುನಾರಚನೆ–ಸಾಹಿತ್ಯದ ಮೌಲ್ಯಮಾಪನಗಳೆರಡೂ ಇಂತಹ ಕಡೆ ಒಟ್ಟಿಗೇ ನಡೆಯುತ್ತಿರುತ್ತವೆ. ಅಲ್ಲದೆ ಈ ದೃಷ್ಟಿಯು ಕುವೆಂಪು ಅವರ ತಾತ್ವಿಕ ಚಿಂತನೆಗಳಿಗೂ ಮತ್ತು ಅವರ ಸಾಹಿತ್ಯದಲ್ಲಿ ಪ್ರಕಟವಾಗುವ ತಾತ್ವಿಕತೆಗಳಿಗೂ ಸಾಮ್ಯವಿದೆ ಎಂಬ ನಿಲುವನ್ನು ಸಾಧಾರವಾಗಿ ಮಂಡಿಸುತ್ತದೆ.(570–ಪುಟ: 183) ಹೀಗಾಗಿ ಇಲ್ಲಿ ಸಾಹಿತ್ಯ ವಿಚಾರ ಮತ್ತು ವಿಚಾರ ಸಾಹಿತ್ಯಗಳ ನಡುವಿನ ತಲನೆಯು ಈ ದೃಷ್ಟಿಯ ಒಂದು ವಿನ್ಯಾಸವಾಗಿದೆ. ಸಾಮ್ಯ ವೈಷಮ್ಯಗಳ ವಿವೇಚನೆಯ ವಿನ್ಯಾಸ ಎಂದು ಇದನ್ನು ಕರೆಯಬಹುದು. ಈ ವಿನ್ಯಾಸದಲ್ಲಿ ಲೇಖಕನ ದೃಷ್ಟಿಧೋರಣೇಗಳನ್ನು ಕ್ರೋಡೀಕರಿಸಿಕೊಂಡು ವಿಶ್ಲೇಷಿಸುತ್ತ; ಅಖಂಡವಾಗಿ ವ್ಯಾಖ್ಯಾನಿಸುವ ಯತ್ನಗಳು ನಡೆಯುತ್ತಿರುತ್ತವೆ.

ಈ ವಿಚಾರ ದೃಷ್ಟಿಯು ಅಂತಃಸಂಬಂಧಗಳ ಅಧ್ಯಯನವೂ ಹೌದು. ಸಮಾಜ ಮತ್ತು ಸಾಹಿತ್ಯ, ಸಾಹಿತ್ಯ ಮತ್ತು ಸಾಹಿತಿ, ಸಮಕಾಲೀನ ಪ್ರಾದೇಶಿಕ–ಸಾಂಸ್ಕೃತಿಕ ಪರಿಸರ ಮತ್ತು ತಾತ್ವಿಕತೆಗಳ ನಡುವಣ ಅಂತಃಸಂಬಂಧಗಳ ಚರ್ಚೆಯೂ ಇಲ್ಲಿ ನಡೆದಿದೆ. ವಿಶೇಷವೆಂದರೆ ಸಾಹಿತ್ಯದ ವಸ್ತು ಸಾಮಗ್ರಿ ಮತ್ತು ವಿಚಾರ ದೃಷ್ಟಿಯ ಸಂಬಂಧಗಳನ್ನು ಚರ್ಚಿಸುವಾಗ ಇಲ್ಲಿ ಪರೋಕ್ಷವಾಗಿ ವಿಮರ್ಶೆಯ ದೃಷ್ಟಿ–ವಿಧಾನ ಮತ್ತು ವಿಮರ್ಶೆಗೆ ಎತ್ತಿಕೊಂಡ ವಸ್ತು ವಿಚಾರಗಳ ನಡುವಿನ ಅನ್ಯೋನ್ಯ ಸಂಬಂಧಗಳೂ ಪ್ರಕಟವಾಗಿವೆ. (1085–ಪುಟ: 59–80) ಈ ದೃಷ್ಟಿಯಲ್ಲಿ ಕುವೆಂಪು ಅವರ ಜೀವನ ವಿಧಾನ ಮತ್ತು ತತ್ವಜ್ಞಾನಗಳ ನಡುವಿನ ಸಂಬಂಧಗಳು ತೌಲನಿಕವಾಗಿ ಚರ್ಚಿತವಾಗಿವೆ. ಸಾಮ್ಯ–ವೈಷಮ್ಯಗಳ ವಿವೇಚನೆಯಾಗಿ ಇಲ್ಲಿ ತೌಲನಿಕತೆಯು ಬೆಳೆದಿದೆ. ಸಾಹಿತ್ಯದಿಂದ ಮತ್ತು ವಿಚಾರ ಸಾಹಿತ್ಯದಿಂದ ಜನರಿಗೆ ಹೇಳುವ ತತ್ವಗಳನ್ನು ಅಂದರೆ ತನ್ನ ನುಡಿಗಳನ್ನು ಸಾಹಿತಿಯು ತನ್ನ ನಡೆಯಲ್ಲಿ ತೋರುತ್ತಾನೆಯೋ ಎಂಬ ತೌಲನಿಕ ಪರೀಕ್ಷೆಯೂ ಇಲ್ಲಿ ನಡೆದಿದೆ. (1099) ವಿಶೇಷವಾಗಿ ನೆನಪಿನ ದೋಣಿಯ ಅಧ್ಯಯನದಲ್ಲಿ ಕುವೆಂಪು ಅವರ ಜೀವನದಲ್ಲಿ ಅವರು ಅನುಸರಿಸುತ್ತಿದ್ದ ತತ್ವಗಳಿಗೂ ಮತ್ತು ಸಾಹಿತ್ಯದಲ್ಲಿ ಅವರು ಪ್ರತಿಪಾದಿಸುತ್ತಿದ್ದ ತತ್ವಗಳಿಗೂ ಇರುವ ಸಾಮ್ಯ ವೈಷಮ್ಯಗಳ ತೌಲನಿಕ ವಿವೇಚನೆಯು ಇಲ್ಲಿ ಕಂಡುಬರುತ್ತದೆ. (1479–ಪುಟ: 60 74) ಹೀಗಾಗಿ ಅಂತಃಸಂಬಂಧಗಳ ಅಭ್ಯಾಸವು ನಮ್ಮ ವಿಮರ್ಶೆಯ ಒಂದು ಮುಖ್ಯ ಕಾರ್ಯವೂ, ವಿನ್ಯಾಸವೂ ಆಗಿದೆ.

ವಿಚಾರ ದೃಷ್ಟಿಯ ವಿಮರ್ಶೆಯಲ್ಲಿ ಬಹುಪಾಲು ಲೇಖನಗಳಲ್ಲಿ ಕಂಡುಬರುವ ಮತ್ತೊಂದು ಸಾಮಾನ್ಯವಾದ ವಿನ್ಯಾಸವೆಂದರೆ: ಕುವೆಂಪು ಅವರ ವೈಚಾರಿಕತೆಯನ್ನು ಪರಿಶೀಲಿಸುವ ಮೊದಲು ಮತ್ತು ಅಲ್ಲಲ್ಲಿ ಪ್ರಾಸಂಗಿಕವಾಗಿ ಅವರ ವಿಚಾರ ದೃಷ್ಟಿಯು ರೂಪಗೊಳ್ಳಲು ಕಾರಣವಾದ ಪ್ರಭಾವ ಪ್ರೇರಣೆಗಳನ್ನು ಗುರ್ತಿಸಿಕೊಳ್ಳುವುದು. ಇವರ ವೈಚಾರಿಕತೆಯು ಹಲವು ದೃಷ್ಟಿಗಳ ಸಂಗಮಿತ ದೃಷ್ಟಿ, ಹಲವು ದರ್ಶನಗಳ ಪರಿಪಾಕ, ವರ್ತಮಾನ ಮತ್ತು ಪರಂಪರೆಗಳ ಮುಖಾಮುಖಿಯ ಉತ್ಪನ್ನ, ಭಾರತೀಯ–ಪಾಶ್ಚಾತ್ಯ ಸಾಹಿತ್ಯ, ಸಂಸ್ಕೃತಿಗಳ ಸಂಕರ ಎಂಬಿತ್ಯಾದಿ ನಿಲುವುಗಳು ಇಲ್ಲಿವೆ. ಈಗಾಗಲೇ ಹೇಳಿರುವಂತೆ ಇಲ್ಲಿ ಕಾಣುವ ಇನ್ನೊಂದು ಪ್ರಮುಖವಾದ ವಿನ್ಯಾಸವೆಂದರೆ ತೌಲನಿಕ ವಿನ್ಯಾಸ. 1. ಕುವೆಂಪು ಅವರ ವೈಚಾರಿಕತೆಯನ್ನು ಅವರ ಕಾಲದ ಬೇಂದ್ರೆ, ಕಾರಂತ, ಶ್ರೀರಂಗ, ಮಾಸ್ತಿ, ದೇವುಡು ಮೊದಲಾದವರ ವಿಚಾರ ದೃಷ್ಟಿಗಳೊಂದಿಗೆ ತೌಲನಿಕವಾಗಿ ಹೋಲಿಸಿ ನೋಡುವ 2. ಇಡೀ ಕನ್ನಡ ಸಾಹಿತ್ಯ ಚರಿತ್ರೆಯ ಮುಖ್ಯ ಕವಿಗಳ–ಕಾಲಘಟ್ಟಗಳ ವೈಚಾರಿಕತೆಗಳೊಂದಿಗೆ ಇಟ್ಟು ತೂಗಿ ನೋಡುವ 3. ಭಾರತೀಯ ದರ್ಶನಗಳ ಚರಿತ್ರೆ, ಪಾಶ್ಚಾತ್ಯ ವಿಚಾರವಾದಗಳು, ಜಾಗತಿಕ ಚಿಂತಕರ ಚಿಂತನೆಗಳ ಭಿತ್ತಿಗಳಲ್ಲಿ ಕುವೆಂಪು ವಿಚಾರವನ್ನು ತೂಗಿ ನೋಡುವ ಭಿನ್ನ ಕ್ರಮಗಳು ಈ ವಿನ್ಯಾಸದಲ್ಲಿ ಇವೆ. ಇವು ಸಾಮ್ಯ–ವೈಷಮ್ಯಗಳ ಚರ್ಚೆ, ವಿಭಿನ್ನತೆ–ವಿಶಿಷ್ಟತೆಗಳ

ಚರ್ಚೆ, ಪ್ರೇರಣೆ–ಪ್ರಭಾಗಗಳ ಚರ್ಚೆ, ಸ್ಥಳೀಯತೆ–ವಿಶ್ವಾತ್ಮಕತೆಗಳ ಚರ್ಚೆ ಹೀಗೆ ಹಲವು ಬಗೆಯ ಚರ್ಚೆಗಳಲ್ಲಿ ಚಾಚಿಕೊಂಡಿದೆ. (ನೋಡಿ: 2663, 2424–ಪುಟ: 82–94, 980–ಪುಟ: 20)

ವೈಚಾರಿಕತೆಯು ಕಾವ್ಯದ ಇಲಾಖೆಗೆ ಸೇರಿದ್ದಲ್ಲ ಅದು ಗದ್ಯದ ಇಲಾಖೆಗೆ ಸೇರಿದ್ದು. ಭಾವತೀವ್ರತೆಗೂ, ತನ್ಮಯತೆಗೂ ಮತ್ತು ವೈಚಾರಿಕತೆಗೂ ಹೊಂದಾಣಿಕೆ ಆಗುವುದಿಲ್ಲ ಎಂಬ ನಂಬಿಕೆಗಳು ಕೂಡ ಈ ದೃಷ್ಟಿಯಲ್ಲಿ ಕೆಲಸ ಮಾಡಿವೆ. ಅ) ಕಾವ್ಯ ಕೃತಿಯ ಮಹತ್ವವನ್ನು ನಿರ್ಣಯಿಸುವಾಗ ವೈಚಾರಿಕತೆಯನ್ನು ಮಾನದಂಡವನ್ನಾಗಿ ಬಳಸಬೇಕು ಆ) ವೈಚಾರಿಕತೆಯಲ್ಲಿ ಸ್ವಂತಿಕೆಯನ್ನು ಹುಡುಕುವಾಗ ಕಾವ್ಯವು ಅಭಿವ್ಯಕ್ತಿಸುತ್ತಿರುವ ವಿಚಾರಕ್ಕಿಂತ ಕಾವ್ಯದ ಅಭಿವ್ಯಕ್ತಿ ಕ್ರಮದ ಸ್ವಂತಿಕೆಯನ್ನು ಪರಿಗಣಿಸಬೇಕು ಇ) ಕಾವ್ಯದ ಶೈಲಿಯಲ್ಲಿ ವೈಚಾರಿಕತೆಯು ಬೆರೆತು ಹೋಗಿರುತ್ತದೆ. ಈ) ಕವಿತೆಯ ಅಭಿವ್ಯಕ್ತಿ ವ್ಯಕ್ತಿ ನಿಷ್ಠವಾದದ್ದು ಉ) ಸಂವೇದನೆ ಮತ್ತು ವಿಚಾರ ಪ್ರತ್ಯೇಕ ಅಲ್ಲ. ವಿಚಾರಕ್ಕೂ ಪ್ರತಿಮಾ ವಿಧಾನಕ್ಕೂ ಜೈವಿಕ ಸಂಬಂಧ ಇರುತ್ತದೆ ಎಂಬ ತತ್ವಗಳು ಇಲ್ಲಿ ಪ್ರಕಟವಾಗಿವೆ. (759–ಪುಟ: 33) ತಮ್ಮದೇ ನಂಬಿಕೆಗಳು ಮತ್ತು ಕಲ್ಪನೆಗಳ ಮೂಲಕ ವಿಮರ್ಶಕನು ವಿಮರ್ಶೆಗೆ ತೊಡಗುವುದು ನಮ್ಮ ವಿಮರ್ಶೆಯಲ್ಲಿ ಒಂದು ಸರ್ವೇಸಾಮಾನ್ಯವಾದ ವಿದ್ಯಮಾನ 1) ವ್ಯಕ್ತಿ ನಿಷ್ಠತೆ, ಸ್ವಂತಿಕೆ ಮತ್ತು ಸಾರ್ವತ್ರಿಕತೆ 2) ಸಮಕಾಲೀನತೆ, ಸಾರ್ವಕಾಲೀನತೆ 3) ಸ್ಥಳೀಯತೆ, ವಿಶ್ವಾತ್ಮಕತೆಗಳ ಚರ್ಚೆಗಳು ವಿಚಾರ ದೃಷ್ಟಿಯ ವಿಮರ್ಶೆಯಲ್ಲಿ ಸಾಕಷ್ಟು ಪಾಲನ್ನು ಪಡೆದಿವೆ. ಈ ದೃಷ್ಟಿಯ ವಿಮರ್ಶೆಯಲ್ಲಿ ಈ ಮೂರು ಅಂಶಗಳನ್ನು ವೈರುಧ್ಯಗಳೆಂದು ಭಾವಿಸದೆ ಕುವೆಂಪು ವೈಚಾರಿಕತೆಗೆ ಇರುವ ಸಾಧ್ಯತೆಗಳೆಂದು ಭಾವಿಸಲಾಗಿದೆ. ವೈಚಾರಿಕತೆಯು ಕಾವ್ಯದಲ್ಲಿಗಿಂತ ಗದ್ಯದಲ್ಲಿ ಚೆನ್ನಾಗಿ ಪ್ರಕಟವಾಗಲು ಅವಕಾಶವಿದೆ ಎಂಬ ಇಲ್ಲಿನ ತತ್ವ/ನಿಲುವು ಚರ್ಚಾರ್ಹವಾದುದು. ಅದನ್ನೊಂದು ಒಪ್ಪಿತ ಸತ್ಯವನ್ನಾಗಿ ಅಂಗೀಕರಿಸಲು ಆಗುವುದೇ? ಚಿಂತಿಸಬೇಕಿದೆ.

**5.1.5.1. ತಕರಾರುಗಳ ವಿನ್ಯಾಸ**

ತಕರಾರುಗಳನ್ನು ಎತ್ತುವುದು ಈ ವಿಮರ್ಶೆಯಲ್ಲಿನ ಇನ್ನೊಂದು ಮುಖ್ಯವಾದ ಲಕ್ಷಣ ಮತ್ತು ವಿನ್ಯಾಸ. ಕುವೆಂಪು ಅವರ ವೈಚಾರಿಕತೆಯ ಅಭಿವ್ಯಕ್ತಿ ಕ್ರಮದ ಬಗೆಗೆ, ತತ್ವ–ದರ್ಶನಗಳ ಪ್ರಸ್ತುತತೆಯ ಬಗೆಗೆ–ಅನುಸರಣೆಯ ಬಗೆಗೆ, ಕುವೆಂಪು ಅವರ ಜೀವನ ವಿಧಾನ–ವರ್ತನೆಗಳ ಬಗೆಗೆ ಹೀಗೆ ಹಲವು ನೆಲೆಗಳಲ್ಲಿ ಇಲ್ಲಿ ತಕರಾರುಗಳನ್ನು ಎತ್ತಲಾಗಿದೆ. ಈ ತಕರಾರುಗಳಲ್ಲಿ ಅವರ ಸಾಹಿತ್ಯದಲ್ಲಿ ಪ್ರಕಟವಾಗುವ ದಾರ್ಶನಿಕತೆಗಳಲ್ಲಿ ಸಾಕಷ್ಟು ವೈರುಧ್ಯಗಳೂ–ವಿಸಂಗತಿಗಳೂ ಇವೆ ಎಂಬುದು ಒಂದು ಮುಖ್ಯವಾದ ತಕರಾರು. ಇವರ ವ್ಯಕ್ತಿತ್ವದ ಬಗೆಗೆ ಇರುವ ಇನ್ನೊಂದು ತಕರಾರೆಂದರೆ ಅವರು ಆಸ್ತಿಕರು ಎನ್ನುವುದು. ವೈಚಾರಿಕತೆ–ವೈಜ್ಞಾನಿಕತೆ ಮತ್ತು ನಾಸ್ತಿಕತೆಯ ನಡುವೆ ಮಾತ್ರ ಸಂಬಂಧ ಇರುತ್ತದೆ. ಆಸ್ತಿಕನೊಬ್ಬ ಹೇಗೆ ವಿಜ್ಞಾನವಾದಿಯಾಗಬಲ್ಲ ಎಂಬ ಶಂಕೆಯೊಂದು ನಮ್ಮಲ್ಲಿದೆ. ಇದಕ್ಕೆ ಚೆನ್ನಾದ ಪ್ರತ್ಯುತ್ತರಗಳೂ ನಮ್ಮ ವಿಮರ್ಶೆಯಲ್ಲೇ ಪ್ರಕಟವಾಗಿವೆ. ಆಸ್ತಿಕತೆ ವೈಚಾರಿಕತೆಗಳು ಒಂದಕ್ಕೊಂದು ವಿರುದ್ಧವಲ್ಲ ಎಂದು ಇಲ್ಲಿ ಚೆನ್ನಾಗಿ ವಾದಿಸಲಾಗಿದೆ ಕೂಡ. ಇನ್ನು ಸಾಹಿತ್ಯದಲ್ಲಿ ವೈರುಧ್ಯಗಳಿರುವುದು ಕಾಲಾನುಕ್ರಮದಲ್ಲಿ ಸಹಜ. ಅರ್ಧಶತಮಾನಕ್ಕೂ ಹೆಚ್ಚು ಕಾಲ ಬರವಣಿಗೆ ಮಾಡಿದ ಲೇಖಕನ ಸಾಂದರ್ಭಿಕ ಹೇಳಿಕೆಗಳು ಮತ್ತು ರಚನೆಗಳಲ್ಲಿ ವೈರುಧ್ಯಗಳು ಕಾಣುವುದು ಸಹಜ. ಆದರೆ ಅವನ್ನೆಲ್ಲ ಅಖಂಡ ದೃಷ್ಟಿಯಿಂದ ನೋಡಬೇಕು ಎಂಬ ಗ್ರಹಿಕೆಯೂ ಇಲ್ಲಿ ಪ್ರಕಟವಾಗಿದೆ. (994, 2376)

ವಿಚಾರದ ಅಭಿವ್ಯಕ್ತಿಗೆ ಕವಿ ಬಳಸುವ ಭಾಷೆ ಕೆಲವೊಮ್ಮೆ ಕೃತಕವಾಗಿದೆ ಎಂಬ ತಕರಾರನ್ನು ಕೂಡ ಇಲ್ಲಿ ಎತ್ತಲಾಗಿದೆ. (759–ಪುಟ: 51) ಆಶಯ ಮತ್ತು ಅಭಿವ್ಯಕ್ತಿ, ವಸ್ತು ಮತ್ತು ಭಾಷೆಯ ನಡುವಿನ ವಿಸಂಗತಿಯನ್ನೇ ಈ ಚರ್ಚೆಯು ಪ್ರಧಾನವಾಗಿ ಆಧರಿಸಿದೆ. ಅಭಿವ್ಯಕ್ತಿ ಕ್ರಮಗಳಲ್ಲಿ ಅನುಭವದ ಅಭಿವ್ಯಕ್ತಿ, ತಂತ್ರಗಾರಿಕೆಯ ಮೂಲಕ ಕಟ್ಟುವಿಕೆ, ವಿಚಾರಗಳ ನೇರ ಮಂಡನೆ, ಧ್ವನಿಪೂರ್ಣತೆ–ವಾಚ್ಯ ಹೇಳಿಕೆಗಳ ರೂಪ, ಭಾವಪ್ರಧಾನವಾದ ಆವೇಶ–ಆಕ್ರೋಶಗಳ ಮಂಡನೆ, ವಿಡಂಬನಾತ್ಮಕ ಮಂಡನೆ ಹೀಗೆ ವೈಚಾರಿಕತೆಯು ಅಭಿವ್ಯಕ್ತಗೊಂಡಿರುವ ಕ್ರಮಗಳನ್ನು ಚರ್ಚಿಸುವ ಕಡೆಗೂ ಈ ದೃಷ್ಟಿಯು ಸಾಗಿದೆ. ಶೈಕ್ಷಣಿಕತೆಯ ಬಗೆಗೆ, ಶಿಕ್ಷಣ ಮಾಧ್ಯಮದ ಬಗೆಗೆ ವಿಗ್ರಹಾರಾಧನೆಯ ಬಗೆಗೆ, ಅಸಮಾನತೆಯ ಬಗೆಗೆ, ಜಾತಿಭೇದ–ಮೌಢ್ಯಗಳ ಬಗೆಗೆ, ಕಮ್ಯುನಿಸಮ್ಮು–ಕ್ಯಾಪಿಟಲಿಸಮ್ಮುಗಳ ಬಗೆಗೆ ಹೀಗೆ ಚಿಂತನೆಗಳು ಯಾವೆಲ್ಲ

ಮಂಡಿತವಾಗಿವೆ ಎಂದು ಗುರ್ತಿಸಿಕೊಳ್ಳುವ ಕಡೆಗೂ ಇದು ಸಾಗಿದೆ. ಇಂಥ ಕಡೆ ಎರಡು ಕಾರ್ಯಗಳು ಆಗಿವೆ. 1. ಕುವೆಂಪು ಅವರ ಅಭಿವ್ಯಕ್ತಿ ಕ್ರಮಗಳನ್ನು ಗುರ್ತಿಸಿಕೊಳ್ಳುವುದು 2. ಅವರ ಕವಿತೆಗಳಲ್ಲಿನ ಚಿಂತನೆಗಳನ್ನು ಗುರ್ತಿಸಿಕೊಳ್ಳುವುದು.

ಕುವೆಂಪು ವೈಚಾರಿಕತೆಯ ಬಗೆಗಿನ ಇನ್ನೊಂದು ತಕರಾರೆಂದರೆ; ಇವರು ಪುನರ್ಜನ್ಮ, ಕರ್ಮ ಸಿದ್ಧಾಂತ, ವಿಧಿ ವಾದಗಳನ್ನು ನಂಬುತ್ತಾರೆ. ಇದು ಸರಿಯಲ್ಲ ಎಂಬುದು. ಈ ಬಗ್ಗೆ ಕೂಡ ಸಾಕಷ್ಟು ಪರ ವಿರೋಧಿ ಚರ್ಚಾಸ್ಪರ್ಧೆಗಳು ನಮ್ಮ ವಿಮರ್ಶೆಯಲ್ಲಿ ನಡೆದಿವೆ. ಸಮರ್ಥನೆಯ ವಿಮರ್ಶೆಯಲ್ಲಿ ಕುವೆಂಪು ಹೀಗೆ ಯಾಕೆ ನಂಬುತ್ತಾರೆ ಎಂದು ಕಾರಣ ಮತ್ತು ಪ್ರೇರಣೆಗಳನ್ನು ಅನ್ವೇಷಿಸುವ ಕೆಲಸವೇ ಹೆಚ್ಚು ನಡೆದಿದೆ. ಕುವೆಂಪು ಎಷ್ಟು ವಾಸ್ತವವಾದಿಯೋ ಅಷ್ಟೇ ಮಾಂತ್ರಿಕ ವಾಸ್ತವವಾದಿಯೂ ಹೌದು. ಇವರದು ಹಿಂದೂ ಮನಸ್ಸು; ಇವರೊಬ್ಬ ಹಿಂದೂ ಚಿಂತನೆಯ ಜಾಹಿರಾತುದಾರರು ಎಂಬೆಲ್ಲ ನಿಲುವುಗಳು ಈ ಬಗ್ಗೆ ಪ್ರಕಟವಾಗಿವೆ.(ಅನಂತಮೂರ್ತಿ) ಕುವೆಂಪು ವಿಚಾರದ ಬಗೆಗಿನ ಇನ್ನೊಂದು ತಕರಾರೆಂದರೆ; ಕುವೆಂಪು ಅವರ ಆಳವಾದ ಸಾಮಾಜಿಕ ಪ್ರಜ್ಞೆಗೆ ಸರಿದೂಗುವ ತತ್ವಶಾಸ್ತ್ರದ ಪ್ರಮೇಯಗಳು ಅವರ ಕೃತಿಗಳಲ್ಲಿ ಅಷ್ಟಾಗಿ ಲಭ್ಯವಾಗುವುದಿಲ್ಲ ಎಂಬುದು. ಈ ತಕರಾರು ಒಂದು ಪ್ರಮೇಯವೂ, ಸಾಹಿತ್ಯದ ಕುರಿತ ನಿಲುವೂ ಆಗಿದೆ. ಇದೊಂದು ಸಡಿಲವಾದ ಪ್ರಮೇಯ. ನಮ್ಮ ವಿಮರ್ಶೆಯು ಇದನ್ನು ಆಧಾರಪೂರ್ವಕವಾಗಿ ಸಮರ್ಥಿಸಲು ಆಗಿಲ್ಲ. (ನೋಡಿ: 1075–ಪುಟ: 90)

ಒಂದು ಕಡೆ ಕಠೋರ ಸಾಮಾಜಿಕ ವಿಮರ್ಶೆಗೆ ಇಳಿಯುವ ಕುವೆಂಪು ತಮ್ಮ ಕಾವ್ಯ ಮೀಮಾಂಸೆಯ ಬರಹಗಳಲ್ಲಿ ಭಾರತೀಯ ಮೀಮಾಂಸೆಯ ಹಂತದಲ್ಲೆ ನಿಂತು ಬಿಡುತ್ತಾರೆ ಎಂಬುದು ಇಲ್ಲಿನ ಇನ್ನೊಂದು ತಕರಾರು. ವೈಚಾರಿಕತೆ ಎಂದರೆ ಎಲ್ಲ ವಲಯಗಳಲ್ಲಿ ಪ್ರಕಟವಾಗಬೇಕಾದ ಕ್ರಾಂತಿಕಾರಕವಾದ ಬದಲಾವಣೆ ಎಂಬ ಗ್ರಹಿಕೆ ಇಂತಹ ದೃಷ್ಟಿಗಳಲ್ಲಿ ಕೆಲಸ ಮಾಡಿದೆ. ಇದು ಕಾವ್ಯ ಮೀಮಾಂಸೆಯನ್ನು ಕೇವಲ ತತ್ವವಾಗಿ ಗ್ರಹಿಸಿದ ದೃಷ್ಟಿಯಿಂದ ಜನಿಸಿದ ನಿಲುವಾಗಿದೆ. ಅಲ್ಲದೆ ಕುವೆಂಪು ಅವರ ಭಾಷೆಯ ಹುಡುಕಾಟ, ಭಿನ್ನ ಪ್ರಕಾರಗಳ ಭಿನ್ನ ಸೃಷ್ಟಿಗಳಲ್ಲಿ ಅಂದರೆ ಆಚರಣೆಯಲ್ಲಿ ಪ್ರಕಟವಾಗಿರುವ ತತ್ವವನ್ನು ಗಮನಿಸದೇ ಇರುವುದರಿಂದ ಜನಿಸಿರುವ ನಿಲುವು ಇದು. ಹೀಗಾಗಿ ಅರೆಬರೆ ಓದಿನ ಮೂಲಕ ತಮ್ಮದೇ ನಿಲುವಿಗೆ ಬರುವುದು ನಮ್ಮ ವಿಮರ್ಶೆಯ ಎಲ್ಲ ವಿನ್ಯಾಸಗಳಲ್ಲು ಅಲ್ಲಲ್ಲಿ ಕಾಣಬರುವ ಲಕ್ಷಣವಾಗಿದೆ. (ನೋಡಿ; 980–ಪುಟ: 22) ಇವೇ ಅಲ್ಲದೆ; ಕುವೆಂಪು ರಾಮಕೃಷ್ಣ ಪರಮಹಂಸರ, ಶಾರದಾಮಾತೆಯ ಚಿತ್ರಕ್ಕೆ ಊದು ಬತ್ತಿ ಹಚ್ಚುತ್ತಿದ್ದ ಬಗ್ಗೆ, ಹೆಂಡತಿ ಚಿತ್ರವನ್ನು ಪೂಜಿಸುತ್ತಿದ್ದ ಕುವೆಂಪು ವರ್ತನೆ ಬಗ್ಗೆ, ಬುದ್ಧನ ಪೋಟೋಗೆ ನಮಸ್ಕರಿಸುವ–ಪೂಜಿಸುವ ಹೂವಯ್ಯನ ವರ್ತನೆ ಬಗ್ಗೆ, ಕುವೆಂಪು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಮೌನ ತಾಳಿದ ಬಗ್ಗೆ ಹೀಗೆ ಹಲವಾರು ತಕರಾರುಗಳು ಎದ್ದಿವೆ. ಹೂವಯ್ಯನ ವರ್ತನೆ ಮತ್ತು ಕುವೆಂಪು ವರ್ತನೆಗಳನ್ನು ಸಮೀಕರಿಸಿರುವ ಮಾತುಗಳೂ ನಮ್ಮಲ್ಲಿವೆ. (ನೋಡಿ; ಸಮೀಕರಣ ವಿಧಾನ) ಸಾಹಿತ್ಯದ ಹೊರಗೆ ಲೇಖಕನ ಬದುಕಿನ ವಿಧಾನ; ವರ್ತನೆಗಳ ಬಗೆಗೆ ತಕರಾರು ಎತ್ತಿದಾಗ ನಮ್ಮ ವಿಮರ್ಶೆ ಮಾರುತ್ತರ ನೀಡದೆ ಮೌನವಾಗಿದೆ. ಎಂ.ಡಿ ನಂಜುಂಡಸ್ವಾಮಿ ಈ ಬಗ್ಗೆ ಪ್ರತಿಕ್ರಿಯಿಸುತ್ತಾ ಇಂತಹ ತಕರಾರುಗಳಿಗೆ ಲೇಖಕರೇ ಉತ್ತರಿಸಬೇಕು ಎಂದು ಹೇಳಿಬಿಡುತ್ತಾರೆ. (ನೋಡಿ: 2760)

ಇಲ್ಲಿ ಎತ್ತಲಾಗಿರುವ ಇನ್ನೊಂದು ಮುಖ್ಯ ತಕರಾರೆಂದರೆ ಪ್ರಕಾರ ಮೀಮಾಂಸೆ ಮತ್ತು ವೈಚಾರಿಕತೆಯ ಬಗೆಗಿನ ತಕರಾರು. ಈ ತಕರಾರಿನ ಬಗೆಗೆ ಸಾಕಷ್ಟು ಚರ್ಚೆಗಳು ನಡೆದಿವೆ. ಪ್ರಕಾರಗಳನ್ನು ಆಧರಿಸಿ ವಿಚಾರ ದೃಷ್ಟಿಯ ಬಗೆಗೆ ಮಾತನಾಡುವಾಗ ಪ್ರಕಾರ ಮೀಮಾಂಸೆಯ ತತ್ವಗಳೇ ಪ್ರಧಾನವಾಗಿ ನಮ್ಮಲ್ಲಿ ಚರ್ಚಿತವಾಗಿದೆ. ಹಾಗಾಗಿ ನಮ್ಮ ವಿಮರ್ಶೆಯ ಹಲವು ವಿನ್ಯಾಸಗಳಲ್ಲಿ ಪ್ರಕಾರ ಮೀಮಾಂಸೆಯೂ ಒಂದು ಮುಖ್ಯವಾದ ವಿನ್ಯಾಸವಾಗಿದೆ. ಈ ವಿನ್ಯಾಸವು ಪ್ರಕಾರಕ್ಕೂ ವೈಚಾರಿಕತೆಗೂ, ಪ್ರಕಾರಕ್ಕೂ ಅಭಿವ್ಯಕ್ತಿ ಕ್ರಮಕ್ಕೂ ಒಂದು ಅನ್ಯೋನ್ಯ ಸಂಬಂಧ ಇರುತ್ತದೆ ಎಂದು ಭಾವಿಸುತ್ತದೆ. ಈ ಹಿನ್ನೆಲೆಯಲ್ಲಿ ಗಿರಡ್ಡಿ ಗೋವಿಂದರಾಜರ ನಿಲುವುಗಳನ್ನು ಮಾದರಿಯಾಗಿ ನೋಡಬಹುದು; (304)

ಅ) ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಾದಂಬರಿಯೇ ವೈಚಾರಿಕತೆಯ ಅಭಿವ್ಯಕ್ತಿಗೆ ಹೆಚ್ಚು ಅನುಕೂಲವಾದ ಮಾಧ್ಯಮವಾಗಿದೆ. ಆ) ಉತ್ತಮ ಕಾದಂಬರಿಯ ಅನುಭವ ಪ್ರಪಂಚ ಬದುಕಿನ ಬಗೆಗೆ ನಮಗಿರುವ ಪ್ರಜ್ಞೆಯನ್ನು ವಿಸ್ತರಿಸಬೇಕು. ಹೊಸದೊಂದು ದೃಷ್ಟಿಕೋನವೊಂದರ ಸಾಧ್ಯತೆಯನ್ನು ಬಿಂಬಿಸಬೇಕು. ಇದೆಲ್ಲ ಸಾಧ್ಯವಾಗುವುದು ಜೀವನದ ಆಳವಾದ ತಿಳುವಳಿಕೆಯಿಂದ. ಈ ತಿಳುವಳಿಕೆಯು ಆತನ ವೈಚಾರಿಕತೆಯ

ಫಲವಾಗಿರುತ್ತದೆ. ಇ) ಅನುಭವ ಸ್ವೀಕಾರ ಹಾಗೂ ಆಯ್ಕೆಗಳನ್ನು ಕೂಡ ಲೇಖಕನ ವೈಚಾರಿಕತೆಯೇ ನಿಯಂತ್ರಿಸುತ್ತದೆ. ಈ) ಲೇಖಕನ ವೈಚಾರಿಕತೆಯಲ್ಲಿನ ಸ್ವಂತತೆ, ಅರ್ಥಪೂರ್ಣತೆ, ಆಳ-ಗಾಂಭೀರ್ಯಗಳು ಅನುಭವದ ಮೇಲೆ, ಆ ಮೂಲಕ ಕೃತಿಯ ಯಶಸ್ಸಿನ ಮೇಲೆ ಪರಿಣಾಮ ಬೀರಬಲ್ಲುವು. ಅಂದರೆ ಒಂದು ಕೃತಿಯಲ್ಲಿಯ ಅನುಭವದ ಮಹತ್ವವೆಂದರೆ ಲೇಖಕನ ವೈಚಾರಿಕತೆಯ ಮಹತ್ವವೇ ಆಗಿದೆ. ಉ) ಪಾತ್ರ ಸನ್ನಿವೇಶಗಳು ಬದುಕಿನ ಲವಲವಿಕೆಯಿಂದ ತುಂಬಿಕೊಂಡೂ ಒಟ್ಟು ಸಂವಿಧಾನದಲ್ಲಿ ಕಾದಂಬರಿ ಅರ್ಥಪೂರ್ಣತೆಯನ್ನು, ಸಮಗ್ರ ದರ್ಶನವನ್ನು ಪ್ರಕಟಿಸದೇ ಹೋಗಬಹುದು.

ಈ ನಿಲುವುಗಳು (304-ಪುಟ: 622-624) ತತ್ವಗಳಾಗಿ ನೋಡುವುದಕ್ಕೆ ಸರಿಯಾಗಿಯೇ ಕಾಣುತ್ತದೆ. ಆದರೆ ಈ ತತ್ವಗಳನ್ನು ಅನ್ವಯಿಸಿ ಕುವೆಂಪು ಕಾದಂಬರಿಗಳನ್ನು ವಿಮರ್ಶಿಸಲು ತೊಡಗಿದ ಗಿರಡ್ಡಿಯವರು 1)ವೈಚಾರಿಕತೆಗೂ ಕಾದಂಬರಿಯ ಸಂವಿಧಾನದಲ್ಲಿ ಒಡಮೂಡುವ ಅರ್ಥಪೂರ್ಣತೆಗೂ ಸಂಬಂಧವಿಲ್ಲ 2) ಇಲ್ಲಿನ ವಿವರ ಪೂರ್ಣ ಚಿತ್ರಗಳು ತೀರಾ ಅನವಶ್ಯಕ 3) ಕಾದಂಬರಿಯಲ್ಲಿ ಕೇಂದ್ರ ವಸ್ತು ಇಲ್ಲ. 4) ಬಂಧವಿಲ್ಲ 5) ಸಾವಯವ ಸಂವಿಧಾನ ಇಲ್ಲ. 6) ಇಲ್ಲಿ ಒಂದೇ ವಸ್ತು ಎಂಬುದು ಇಲ್ಲ 7) ಕಾದಂಬರಿಗಳಲ್ಲಿ ಲೇಖಕನ ಸಮಗ್ರ ದರ್ಶನ ಮೂಡಿಲ್ಲ. ಅಂದರೆ ಇವುಗಳ ಸಮಗ್ರ ರಚನೆಯಲ್ಲಿ ಲೇಖಕರ ವಯಕ್ತಿಕ ವೈಚಾರಿಕತೆ ಕೆಲಸ ಮಾಡಿಲ್ಲ ಎಂಬ ತೀರ್ಮಾನಗಳಿಗೆ ತಲುಪುತ್ತಾರೆ. (304-ಪುಟ: 624-626) ಇಲ್ಲಿನ ವಿಮರ್ಶೆಯ ಬಹು ಮುಖ್ಯ ವಿನ್ಯಾಸವೆಂದರೆ; ಸಾಹಿತ್ಯದ ಮೂಲಕ ಮೂಡಬಹುದಾದ ತತ್ವಗಳನ್ನು ಕ್ರೋಡೀಕರಿಸುವ-ತಾತ್ವೀಕರಿಸುವ ವಿಧಾನಕ್ಕಿಂತ ಸಿದ್ಧ ತತ್ವಗಳನ್ನು ಸಾಹಿತ್ಯಕ್ಕೆ ಅನ್ವಯಿಸಿ ತೀರ್ಪು ನೀಡುವುದು. ಸಿದ್ಧ ತತ್ವಗಳ ಅನ್ವಯೀಕರಣವು ಕೆಲವೊಮ್ಮೆ ತಪ್ಪು ನಿಲುವುಗಳಿಗೆ ಕರೆದೊಯ್ಯಬಹುದು ಎಂಬುದಕ್ಕೆ ಗಿರಡ್ಡಿಯವರ ಈ ವಿಮರ್ಶೆ ಸಾಕ್ಷಿಯಾಗಿದೆ.

ಇಂತಹ ವಿಮರ್ಶೆಯನ್ನು ವಿವಿಮರ್ಶಿಸುವ ಕೆಲಸವೂ ನಮ್ಮಲ್ಲಿ ಸಾಕಷ್ಟು ನಡೆದಿದೆ. ಕುವೆಂಪು ಅವರು ಬರೆದಿರುವ ಕಾದಂಬರಿಗಳಿಗಿಂತ ಅವರು ಬರೆಯಬಹುದಾಗಿದ್ದ ಕಾದಂಬರಿಗಳ ಹುಡುಕಾಟವನ್ನು ನಮ್ಮ ವಿಮರ್ಶೆ ಮಾಡಿದಂತೆ ತೋರುತ್ತದೆ. ನವ್ಯ ಕಾವ್ಯದ ಸಿದ್ಧ ಪರಿಭಾಷೆ ತತ್ವಗಳಿಂದ ಕುವೆಂಪು ಕಾದಂಬರಿಗಳನ್ನು ವಿಮರ್ಶೆ ಮಾಡಲು ಹೊರಟ ವಿಮರ್ಶಕರು ತಪ್ಪು ನಿಲುವುಗಳಿಗೆ ಬಂದಿದ್ದಾರೆ ಎಂದು ರಾಜೇಂದ್ರ ಚೆನ್ನಿಯವರು ಇಂತಹ ಅನ್ವಯೀಕರಣ ಮಾದರಿಗಳನ್ನು ಟೀಕಿಸಿದ್ದಾರೆ. ನವ್ಯದ ಸಮರ್ಥನೆಗಾಗಿ ನವೋದಯದ ಸ್ವರೂಪವನ್ನು ಅಲ್ಲಗಳೆದ ವಿದ್ಯಮಾನ ನಮ್ಮ ವಿಮರ್ಶೆಯ ಅನಾರೋಗ್ಯದ ಸ್ಥಿತಿ ಎಂದು ಕೆ.ವಿ.ನಾರಾಯಣ ಅವರು ಟೀಕಿಸಿದ್ದಾರೆ. ಟೀಕೆಗಳ ಟೀಕೆ (ವಿವಿಮರ್ಶೆ) ನಮ್ಮ ವಿಮರ್ಶೆಯ ಯಾವತ್ತಿನ ಲಕ್ಷಣ (900, 776)

ಕುವೆಂಪು ಕಾವ್ಯದಲ್ಲಿನ ವೈಚಾರಿಕತೆಯನ್ನು ಚರ್ಚಿಸುವಾಗ ವಿಚಾರವು ಹೇಳಿಕೆಯ ಮಟ್ಟದಲ್ಲಿ ಉಳಿದು ಅದು ಕಾವ್ಯವಾಗದೆ ಹೋಗುತ್ತದೆ ಎಂಬ ತಕರಾರನ್ನು ನಮ್ಮಲ್ಲಿ ಹಲವು ಸಾರಿ ಎತ್ತಲಾಗಿದೆ. (1165) ಕಲಾವಂತಿಕೆ ಮತ್ತು ಮಹತ್ತುಗಳ ಚರ್ಚೆಯಲ್ಲಿ ಸಾಹಿತ್ಯದ ಕಲೆಗಾರಿಕೆಯೇ ಬೇರೆ, ಸಾಮಾಜಿಕವಾಗಿ ಅದರ ಮಹತ್ವವೇ ಬೇರೆ ಎಂಬ ಚರ್ಚೆಯೂ ಇಲ್ಲಿ ನಡೆದಿದೆ. ಸಾಹಿತ್ಯವು ಸಾಹಿತ್ಯವಾಗಿದೆಯೇ ಇಲ್ಲವೇ ಎಂಬುದಕ್ಕಿಂತ ಸಾಹಿತ್ಯದ ಸಾಮಾಜಿಕ ಕಾಳಜಿಯು ಪ್ರಸ್ತುತವೇ ಅಲ್ಲವೇ ಎಂಬುದು ಮುಖ್ಯ ಎಂಬ ವಾದಗಳೂ ಇಲ್ಲಿ ಪ್ರಕಟವಾಗಿವೆ. ಈ ಹಿನ್ನೆಲೆಯಲ್ಲಿ ಕುವೆಂಪು ಕಾವ್ಯದಲ್ಲಿ ಪ್ರಖರ ವೈಚಾರಿಕತೆ ಇದೆ. ಆದರೆ ಅದು ಕಾವ್ಯದ ಕಲೆಗಾರಿಕೆಯಾಗಿ ಅರಳಿಲ್ಲ ಎಂಬ ತಕರಾರು ಇಲ್ಲಿ ಮುಖ್ಯವಾಗಿದೆ. ಈ ದೃಷ್ಟಿಯ ವಿಮರ್ಶೆಯಲ್ಲಿ ಕಲೆ ಮತ್ತು ವೈಚಾರಿಕತೆಗಳ ಅಂತಃಸಂಬಂಧದ ಚರ್ಚೆಯು ಪ್ರಾಮುಖ್ಯತೆ ಗಳಿಸಿದೆ. ಭಿನ್ನ ಭಿನ್ನ ರೀತಿಯ ಅಂತ: ಸಂಬಂಧಗಳ ಭ್ಯಾಸವು ನಮ್ಮ ವಿಮರ್ಶೆಯ ಒಂದು ಪ್ರಮುಖ ವಿನ್ಯಾಸವಾಗಿದೆ.

1. ಕಾವ್ಯದಲ್ಲಿ ವೈಚಾರಿಕತೆಯು ಕಲಾತ್ಮಕವಾಗಿ ಅಭಿವ್ಯಕ್ತಗೊಂಡಾಗ ಅದು ಒಳ್ಳೆಯಕಾವ್ಯ. 2. ಕಾವ್ಯದ ಸಾಮಾಜಿಕ ಕಳಕಳಿ-ಪ್ರಸ್ತುತತೆ ಮುಖ್ಯ, ಅದರ ಸೌಂದರ್ಯ-ಕಲಾವಂತಿಕೆ ಮುಖ್ಯವಲ್ಲ. 3. ಸಾಹಿತ್ಯದ ಅಭಿವ್ಯಕ್ತಿ ಕ್ರಮದಲ್ಲಿಯೇ ವೈಚಾರಿಕತೆಯು ಅಡಗಿರುತ್ತದೆ. 4. ಸಾಹಿತ್ಯವು ಕಲಾತ್ಮಕವಾಗಿಲ್ಲದೇ ಹೋದಾಗ್ಯೂ ಅದು ಮಹತ್ವದ ಸಾಹಿತ್ಯ ಆಗಿರಬಹುದು ಎಂಬ ಭಿನ್ನ ಸಾಹಿತ್ಯ ತತ್ವಗಳು ಈ ಚರ್ಚೆಯಲ್ಲಿ ಪ್ರಕಟಗೊಂಡಿವೆ. ಗಿರಡ್ಡಿಯವರ ಕಾದಂಬರಿ ಪ್ರಕಾರ ತತ್ವಕ್ಕೂ ಕಾವ್ಯವು ಕಾವ್ಯವಾಗಿ ಅರಳಬೇಕು.. ಎಂಬ ಇತ್ಯಾದಿ ಮೇಲಿನ ತತ್ವಗಳಿಗೂ ಹೋಲಿಸಿದರೆ; ನಮ್ಮದೇ ಆದ ಪ್ರಕಾರ ಮೀಮಾಂಸೆಯ ನಂಬಿಕೆಗಳು ನಮ್ಮ ವಿಮರ್ಶೆಯ ಸ್ವರೂಪ ನಿಲುವುಗಳನ್ನು ನಿಯಂತ್ರಿಸಿರುವಂತೆ ಕಾಣುತ್ತದೆ. ಆದರೆ ಇಂತಹ ಪೂರ್ವ ನಂಬಿಕೆಗಳೇ ನಮ್ಮ

ವಿಮರ್ಶೆಯಲ್ಲಿ ಯಜಮಾನಿಕೆಯನ್ನೇನೂ ನಡೆಸಿಲ್ಲ. ಸಿದ್ಧ ಪ್ರಕಾರ ಮೀಮಾಂಸೆಯನ್ನು ಅನ್ವಯಿಸಿ ನೋಡುವ ಮತ್ತು ಸಾಹಿತ್ಯ ಪ್ರಕಾರ ಮೀಮಾಂಸೆಯನ್ನು ರೂಪಿಸಿಕೊಳ್ಳುವ ಎರಡೂ ಕೆಲಸಗಳು ನಮ್ಮ ವಿಮರ್ಶೆಯಲ್ಲಿ ಜರುಗಿವೆ. ಹೀಗಾಗಿ ಗಿರಡ್ಡಿಯವರ ಇಂತಹ ಅನ್ವಯೀಕರಣ ಮಾದರಿ ನಮ್ಮ ವಿಮರ್ಶೆಯ ಒಂದು ಮುಖ ಮಾತ್ರ.

ಸಾಹಿತ್ಯ ವಿಚಾರಗಳನ್ನು ಪರಿಶೀಲಿಸುವಾಗ ನಮ್ಮ ವಿಮರ್ಶೆಯಲ್ಲಿ ವಿಮರ್ಶಾ ವಿಧಾನಗಳಿಗೆ ಇರಬಹುದಾದ ತೊಡಕುಗಳು–ಮಿತಿಗಳು ಕೂಡ ಪ್ರಕಟವಾಗಿವೆ. ವಿಮರ್ಶೆಯ ನಂಬಿಕೆ, ನಿರೀಕ್ಷೆಗಳೇ ಪರೀಕ್ಷೆಗೆ ಗುರಿಯಾಗಿವೆ. ಕುವೆಂಪು ವೈಚಾರಿಕತೆ, ದಾರ್ಶನಿಕತೆಗಳನ್ನು ಪರಿಶೀಲಿಸುವಾಗ ನಮ್ಮ ವಿಮರ್ಶೆಯು ವೈರುಧ್ಯ–ವಿಸಂಗತಿಗಳ ಬಗೆಗೆ ಯಾಕೆ ತಕರಾರನ್ನು ಎತ್ತುತ್ತದೆ? ಯಾವುದೇ ಒಬ್ಬ ಲೇಖಕನನ್ನು ಒಂದು ನಿರ್ಧಿಷ್ಟ ತಾತ್ವಿಕ ಚೌಕಟ್ಟಿನಲ್ಲಿ ಇಟ್ಟು ನೋಡಲು ಸಾಧ್ಯವಾಗುತ್ತದೆ; ಒಂದು ದಾರ್ಶನಿಕ ಧಾರೆಯಲ್ಲಿ ಇಟ್ಟು ವ್ಯಾಖ್ಯಾನಿಸಲು ಸಾಧ್ಯವಾಗುತ್ತದೆ ಎಂಬ ನಂಬಿಕೆ ನಮ್ಮಲ್ಲಿ ಇರುವುದರಿಂದಲೆ ಇಂತಹ ತಕರಾರು ಹುಟ್ಟಿರಬಹುದು. ಹಲವು ಕಾಲಮಾನದಲ್ಲಿ, ಹಲವು ಪ್ರಕಾರಗಳಲ್ಲಿ ಬರೆದುದೆಲ್ಲವನ್ನು ಸಮಗ್ರವಾಗಿ ಇಟ್ಟುಕೊಂಡು ಅಲ್ಲಿನ ವೈಚಾರಿಕತೆಯನ್ನು ಒಂದು ದೃಷ್ಟಿಯಿಂದ ವ್ಯಾಖ್ಯಾನಿಸುವ; ಕುವೆಂಪು ಅವರ ಎಲ್ಲ ಬರಹಗಳ ಒಳಗೆ ಒಂದು ಸಮಾನ ತಾತ್ವಿಕ ಕೇಂದ್ರ ಇರಬೇಕು ಎಂದು ನೀರೀಕ್ಷಿಸುವ, ಇದೆ ಎಂದು ಭಾವಿಸಿ ಅದನ್ನು ಹುಡುಕುವ ಧೋರಣೆಯು ನಮ್ಮ ವಿಮರ್ಶೆಯಲ್ಲಿ ಇರುವುದರಿಂದ ಇಂತಹ ತಕರಾರುಗಳು ಎದ್ದಿವೆ. ಒಂದು ಸಮಗ್ರವಾದ ಜೀವನದೃಷ್ಟಿಯನ್ನು ಕುವೆಂಪು ಚಿಂತನೆಯಲ್ಲಿ ಅಪೇಕ್ಷಿಸುವ ನಮ್ಮ ವಿಮರ್ಶೆಯು ಅದ್ವೈತ ತತ್ವ ಮತ್ತು ವಿಶ್ವಮಾನವ ತತ್ವಗಳಿಂದ ಸಾಕಷ್ಟು ಪ್ರೇರಿತವಾಗಿದೆ. ಕುವೆಂಪು ಅವರ ಎಲ್ಲ ಬರಹ ಮತ್ತು ವರ್ತನೆಗಳಲ್ಲಿ ಅದ್ವೈತ ತತ್ವವನ್ನೇ ನಮ್ಮ ವಿಮರ್ಶೆಯು ಕಂಡಿದೆ. ಸರ್ವೋದಯ, ಸಮನ್ವಯ, ಮನುಜಮತ ವಿಶ್ವಪಥ, ಅನಿಕೇತನತೆ ಇವೆನ್ನೆಲ್ಲ ಒಳಗೊಂಡ 'ಪಂಚ ಮಂತ್ರ ಮತ್ತು ಸಪ್ತಸೂತ್ರ' ಹಾಗೂ ವಿಶ್ವಮಾನವತೆಯೆ ಕುವೆಂಪು ಅವರ 'ಒಂದು' ಸಮಗ್ರ ಜೀವನದರ್ಶನ ಎಂಬ ನಂಬಿಕೆ ನಮ್ಮಲ್ಲಿ ಇದೆ. ಅಂತು ಇಂತು ಕುವೆಂಪು ದರ್ಶನ ಅಂದರೆ ಇದು; ಇದಿಷ್ಟೆ ನೋಡಿ ಎಂದು ಹೇಳಿಬಿಡುವ 'ಒಂದು' ಖಚಿತ ಆಕೃತಿ ನಮಗೆ ಬೇಕು ಎಂಬ ಹಂಬಲ ನಮ್ಮ ವಿಮರ್ಶೆಯ ಒಡಲಿನಲ್ಲಿ ಕ್ರಿಯಾಶೀಲವಾಗಿದೆ.

ಒಂದು ಜೀವನದರ್ಶನವನ್ನು ಕಂಡುಕೊಳ್ಳುವ, ಒಂದು ದೃಷ್ಟಿ–ಧೋರಣೆಯನ್ನು ಮುಖ್ಯವೆಂದು ಹೇಳುವ, ಒಂದು ವೈಚಾರಿಕ ಆಕೃತಿಯ ಮೂಲಕ ಲೇಖಕನನ್ನು ವ್ಯಾಖ್ಯಾನಿಸುವ 'ಒಂದು' ದೃಷ್ಟಯು ನಮ್ಮ ವಿಮರ್ಶೆಯ ಒಂದು ಮುಖ್ಯ ವಿನ್ಯಾಸವಾಗಿದೆ. ಒಂದು ಅಧ್ಯಯನ, ಒಂದು ವಿವೇಚನೆ, ಒಂದು ಟಿಪ್ಪಣಿ, ಒಂದು ಅಭ್ಯಾಸ ಹೀಗೆ ಈ 'ಒಂದು' ದೃಷ್ಟಿ ಎಂಬುದಕ್ಕೆ ಖಚಿತವಲ್ಲದ ವ್ಯಾಪ್ತಿಯೂ ನಮ್ಮಲ್ಲಿದೆ. ಅಲ್ಲದೆ (ಸಮಗ್ರ ಜೀವನದರ್ಶನ ಎಂಬುದನ್ನು ತಪ್ಪಾಗಿ ಗ್ರಹಿಸಿದ) ಒಂದೇ ಒಂದು ಜೀವನ ದರ್ಶನ ಸಾಹಿತ್ಯದಲ್ಲಿ ಇರುತ್ತದೆ ಎಂದು ಭಾವಿಸುವುದು ಅಥವಾ ಹಾಗೆ ಒಂದು ಜೀವನದರ್ಶನ ಇರಬೇಕು ಎಂದು ನಿರೀಕ್ಷಿಸುವುದು ಎಷ್ಟರಮಟ್ಟಿಗೆ ಸರಿ ಎಂಬ ಪ್ರಶ್ನೆಗಳನ್ನೂ ನಮ್ಮ ವಿಮರ್ಶೆಯು ಕೇಳಿದೆ. ಸಾಹಿತ್ಯದ ವೈಚಾರಿಕ ದೃಷ್ಟಿಗಳನ್ನು ಏಕತ್ರವಾಗಿ ಸೂತ್ರೀಕರಿಸಲು ಆಗುವುದಿಲ್ಲ, ಸಮಸ್ಯೀಕರಿಸಲು ಆಗುತ್ತದೆ ಎಂಬ ಧೋರಣೆ ಕೂಡ ನಮ್ಮಲ್ಲಿ ಪ್ರಕಟವಾಗಿದೆ. ಹಾಗೆಯೇ ಯಾವುದೇ ಒಬ್ಬ ಲೇಖಕನ ದೃಷ್ಟಿಕೋನದಲ್ಲಿ ಸಾಹಿತ್ಯದಲ್ಲಿ ಇರುವ ವೈರುಧ್ಯಗಳು ಅವನ ಬದುಕಿದ ಸಮಾಜದ ಚಾರಿತ್ರಿಕ ಸಂದರ್ಭದ ವೈರುಧ್ಯಗಳೇ ಆಗಿರುತ್ತವೆ ಎಂಬ ನಿಲುವುಗಳೂ ಇಲ್ಲಿ ಪ್ರಕಟವಾಗಿದೆ. (ನೋಡಿ; 994–ಪುಟ: 640) ಅಲ್ಲದೆ ನ್ಯಾಯಾಧೀಶರಂತೆ ತಮ್ಮದೇ ತೀರ್ಪುಗಳನ್ನು ನೀಡುವ ಕೆಲಸ ಮಾಡದೆ ವಿಮರ್ಶೆಯನ್ನು ಮುಕ್ತವಾಗಿ ಇರಿಸುವ ಸಮಸ್ಯೀಕರಣ ವಿಧಾನವನ್ನು ನಮ್ಮಲ್ಲಿ ಅನುಸರಿಸಲಾಗಿದೆ. ಹೀಗಾಗಿ ಸಮಸ್ಯೀಕರಣ ವಿಧಾನವು ನಮ್ಮ ಹಲವು ವಿಮರ್ಶಾ ಲಕ್ಷಣಗಳಲ್ಲಿ ಒಂದು ಮುಖ್ಯವಾದ ಲಕ್ಷಣವಾಗಿದೆ.

ಕುವೆಂಪು ವೈಚಾರಿಕತೆಯು ಹೇಗೆ ಅಭಿವ್ಯಕ್ತಗೊಂಡಿದೆ ಮತ್ತು ಅವರ ವೈಚಾರಿಕ ಚಿಂತನೆಗಳು ಯಾವುವು ಎಂಬುದನ್ನು ಕ್ರೋಡೀಕರಿಸುವ ಕಾರ್ಯವು ಈ ದೃಷ್ಟಿಯಲ್ಲಿ ಹೆಚ್ಚಾಗಿ ನಡೆದಿದೆ. ಅವುಗಳ ಪ್ರಸ್ತುತತೆಯ ಚರ್ಚೆ ಕಡಿಮೆ ನಡೆದಿದೆ. ಅವರ ಚಿಂತನೆಗಳು ತುಂಬಾ ಮೌಲಿಕ ಮತ್ತು ಒಪ್ಪಿತ ಎಂಬ ನಂಬುಗೆಯೇ ಇಲ್ಲಿ ಹೆಚ್ಚಾಗಿದೆ. ಸಾಹಿತ್ಯ ಸ್ವರೂಪ, ಸಾಹಿತ್ಯ ತತ್ವ ಮತ್ತು ವಿಮರ್ಶಾತತ್ವಗಳ ಚರ್ಚೆಯೂ; ವೈಚಾರಿಕ ಚಿಂತನೆಗಳ

ಮಂಡನಾ ಕ್ರಮಗಳ ಚರ್ಚೆಯೂ ಇಲ್ಲಿ ಪ್ರಾಮುಖ್ಯತೆ ಪಡೆದುಕೊಂಡು ವೈಚಾರಿಕತೆಯ ಅನ್ವಯಿಕತೆಯ ಸಾಧ್ಯತೆಗಳು ಚರ್ಚಿತವಾಗಿದ್ದರೂ ಕಡಿಮೆ ಪ್ರಾಶಸ್ತ್ಯ ಪಡೆದು ಕೊಂಡಿವೆ. ನಮ್ಮ ವಿಮರ್ಶೆಯಲ್ಲಿ ಕುವೆಂಪು ವೈಚಾರಿಕತೆಯನ್ನು ಒಪ್ಪಿ ಅಂಗೀಕರಿಸುವ ವಲಯವೇ ಹೆಚ್ಚಾಗಿದೆ. ಕುವೆಂಪು ವಿಚಾರ ಮತ್ತು ಅವರ ತಾತ್ವಿಕತೆಯನ್ನು ಒಪ್ಪದೇ ಅದರ ಬಗ್ಗೆ ತಕರಾರು ಎತ್ತುವ  ಪ್ರವೃತ್ತಿ ನಮ್ಮಲ್ಲಿ ಇದೆಯಾದರೂ ಅದಕ್ಕೆ ತಮ್ಮದೇ ಪರ್ಯಾಯ ಚಿಂತನೆಯನ್ನು ಮಂಡಿಸುವ ಯತ್ನಗಳು ತೀರಾ ಕಡಿಮೆ ಎಂದೇ ಹೇಳಬೇಕು. ನಮ್ಮ ಬಹುಪಾಲು ತಕರಾರುಗಳ ವಿನ್ಯಾಸವು ಲೇಖಕನಲ್ಲಿ ದೋಷ ಹುಡುಕಲು, ಯತ್ನಿಸುವಂತೆಯೇ ಕಾಣುತ್ತವೆ.

**5.1.6. ಸ್ತ್ರೀವಾದಿ ದೃಷ್ಟಿ**

ನಮ್ಮ ವಿಮರ್ಶೆಯ ಹಲವು ದೃಷ್ಟಿಗಳಲ್ಲಿ ಸ್ತ್ರೀವಾದಿ ದೃಷ್ಟಿಯೂ ಒಂದು. ಇದು ಓದಿನ ದಾರಿಯಾಗಿಯೂ, ವಿಮರ್ಶಾ ಮಾರ್ಗವಾಗಿ ನಮ್ಮಲ್ಲಿ ಬೆಳೆದಿದೆ. ಸ್ತ್ರೀವಾದಿ ದೃಷ್ಟಿಯಲ್ಲಿ ವಿಮರ್ಶೆಯ ಪ್ರಧಾನ ಗಮನ ಇರುವುದು ಮಹಿಳಾ ಪಾತ್ರ, ಪ್ರಸಂಗ, ಮಹಿಳಾ ಜಗತ್ತುಗಳ ಬಗೆಗೆ. ಗಂಡು ಲೇಖಕನೊಬ್ಬ ಹೆಣ್ಣನ್ನು ಚಿತ್ರಿಸಿರುವ ಬಗೆ ಹೇಗೆ ಎಂದು ನೊಡುವ; ಹೆಣ್ಣೊಬ್ಬಳು ಸಾಹಿತ್ಯವನ್ನು ತನ್ನ ದೃಷ್ಟಿಯಿಂದ ಓದಿದರೆ (ಮಹಿಳಾ ಓದು) ಅದು ಹೇಗಿರುತ್ತದೆ ಎಂದು ವಿವರಿಸುವ; ನಮ್ಮ ಸಾಹಿತ್ಯವು ಹೆಣ್ಣನ್ನು ಪರಿಭಾವಿಸುವ ಮಾದರಿಗಳನ್ನು ಕಂಡುಕೊಳ್ಳುವ; ಸಾಹಿತ್ಯದ ಮೂಲಕ ಸಮಾಜದ ಹೆಣ್ಣಿನ ಸ್ಥಿತಿಗಳನ್ನು ಮತ್ತು ಅದಕ್ಕೆ ಕಾರಣ–ಪರಿಹಾರಗಳನ್ನು ಚರ್ಚಿಸುವ; ಚಾರಿತ್ರಿಕವಾಗಿ ಸಮಾಜದಲ್ಲಿ ಹೆಣ್ಣಿನ ಬಗೆಗಿನ ಪುರುಷದೃಷ್ಟಿ ಮತ್ತು ಹೆಣ್ಣಿನ ಬಗೆಗಿನ ಹೆಣ್ಣಿನ ವರ್ತನೆಗಳು ಹೇಗಿದ್ದವು ಎಂಬುದಕ್ಕೆ ಸಾಹಿತ್ಯವನ್ನು ಚರಿತ್ರೆಯ ತುಣುಕಾಗಿ ಕಾಣುವ; ದಲಿತ ಮಹಿಳೆಯ ಕಣ್ಣಿಂದ, ಪ್ರತಿಭಟನೆ–ಪ್ರತಿರೋಧಗಳ ಮೂಲಕ, ಸ್ತ್ರೀಪರ ತತ್ವಗಳ ಮೂಲಕ ಕುವೆಂಪುವನ್ನು ಮೌಲ್ಯಮಾಪನ ಮಾಡುವ; ಸಂಸ್ಕೃತಿ–ಮೌಲ್ಯ–ಲಿಂಗರಾಜಕಾರಣಗಳ ನೆಲೆಯಿಂದ ಸಾಹಿತ್ಯವನ್ನು ಪರಿಶೀಲಿಸುವ ಹೀಗೆ ಹಲವು ನೆಲೆಗಳಲ್ಲಿ ಸ್ತ್ರೀವಾದಿ ದೃಷ್ಟಿಯು ಸಂಭವಿಸಿದೆ. ಹೀಗಾಗಿ ಇದೊಂದು ದೃಷ್ಟಿಯಾಗಿ, ಓದಿನ ವಿಧಾನವಾಗಿ, ವಾದ(ಇಸಂ) ಆಗಿ, ವಿಮರ್ಶಾ ಪಂಥವಾಗಿ, ಹೆಣ್ಣನ್ನು ಕುರಿತ ಸಂಕಥನವಾಗಿ ಹಲವು ರೀತಿಗಳಲ್ಲಿ ಪ್ರಯೋಗವಾಗಿದೆ.

ಸ್ತ್ರೀವಾದಿ ದೃಷ್ಟಿ ಎಂದರೆ ಏನು ಎಂಬ ಬಗ್ಗೆ ಈ ವಿಮರ್ಶೆಯ ಆಚರಣೆಯಲ್ಲಿ ಹಲವು ಬಗೆಯ ನಂಬಿಕೆಗಳು ಪ್ರಕಟವಾಗಿವೆ. ಸ್ತ್ರೀಯನ್ನು ಶೋಷಿಸದೆ ಇರುವುದು, ಹೆಣ್ಣನ್ನು ಗೌರವಾದರ ಭಾವದಿಂದ ನೋಡುವುದು, ಹೆಣ್ಣನ್ನು ಗಂಡಿಗೆ ಸಮಾನಳಾಗಿ ಕಾಣುವುದು, ಹೆಣ್ಣನ್ನು ಅಧಿಕಾರದ ಸ್ಥಾನದಲ್ಲಿ ಇಟ್ಟು ನೋಡುವುದು, ಹೆಣ್ಣನ್ನು ಮಾತೃಸ್ಥಾನದಲ್ಲಿ ಇಟ್ಟು ನೋಡುವುದು, ಹೆಣ್ಣಿನ ಬಗೆಗೆ ಮೃದು ಧೋರಣೆ ತಾಳುವುದು, ಸ್ತ್ರೀಪರವಾದ–ಸ್ತ್ರೀಪಕ್ಷಪಾತಿಯಾದ ಧೋರಣೆ ಹೊಂದಿರುವುದು, ಹೆಣ್ಣಿಗೆ ಸ್ವಾತಂತ್ರ್ಯ ಇದೆಯೇ ಎಂದು ನೋಡುವುದು, ಸಾಮಾಜಿಕ ನ್ಯಾಯದ ವಿಸ್ತರಣೆಯಾಗಿ ಸ್ತ್ರೀ ಚಿತ್ರಣ ಇದೆಯೇ ಎಂದು ನೋಡುವುದು ಎಂಬೆಲ್ಲ ಹಲವು ನಂಬಿಕೆಗಳು ಇವೆ. 'ಆಧುನಿಕವಾದ ಈ ಕಾಲಘಟ್ಟದಲ್ಲಿ ಸ್ತ್ರೀವರ್ಗಕ್ಕೆ ಹೊಸ ಭರವಸೆ, ಹೊಸ ಚೇತನ್ಯ, ಬೆಳಕು ಮೂಡಿಸುವ ತಾತ್ವಿಕ ಚಿಂತನೆಯೇ ಸ್ತ್ರೀವಾದ' ಎಂದು ಇದನ್ನು ಒಂದು ಚಿಂತನಾ ಧಾರೆಯಾಗಿ ನೋಡುವ ದೃಷ್ಟಿಯೂ ಇಲ್ಲಿ ಇದೆ. (1082–ಪುಟ: 128) ಸ್ತ್ರೀವಾದವು ಸಾಹಿತ್ಯವನ್ನು ಪರಿಶೀಲಿಸುವ ಮತ್ತು ಪ್ರವೇಶಿಸುವ ಒಂದು ಭಿನ್ನ ದೃಷ್ಟಿಕೋನ ಎಂಬುದು ಮಾತ್ರ ಬಹುತೇಕ ಎಲ್ಲ ವಿಮರ್ಶೆಗಳಲ್ಲೂ ಅಭಿನಯಗೊಂಡಿದೆ. ಸ್ತ್ರೀವಾದಿ ದೃಷ್ಟಿಯ ಸಾಹಿತ್ಯ ವಿಮರ್ಶೆಯಲ್ಲಿ ಸ್ತ್ರೀವಾದ ಎಂದರೆ ಏನು ಎಂಬ ಬಗೆಗಿನ ವ್ಯಾಖ್ಯಾನ/ನಿರ್ವಚನವು ಈ ಸಂಕಥನದ ಒಂದು ಪ್ರಧಾನವಾದ ಕಾರ್ಯ/ವಿನ್ಯಾಸವಾಗಿ ನಿರಂತರ ನಡೆಯುತ್ತ ಬಂದಿದೆ.

ಸ್ತ್ರೀ ಪಾತ್ರಗಳ ಅಭ್ಯಾಸವು ಸ್ತ್ರೀವಾದಿ ದೃಷ್ಟಿಯಲ್ಲಿ ಇರುವ ಒಂದು ಮುಖ್ಯವಾದ ವಿನ್ಯಾಸ. ಇಲ್ಲಿ ತಿಮ್ಮಿ, ಸೀತೆ, ಕಾವೇರಿ, ಚಿತ್ರಾಂಗದೆ, ಸುಬ್ಬಮ್ಮ, ರಕ್ತಾಕ್ಷಿ, ಚಿನ್ನಮ್ಮ, ಮಂಥರೆ, ಮಂಡೋದರಿ, ಚಂದ್ರನಖಿ, ಅನಲೆ, ತಾರಕ್ಷಿ, ಹೇಮಾವತಿ ಹೀಗೆ ಹಲವು ಪಾತ್ರಗಳು ಪರಿಶೀಲನೆಗೆ ಗುರಿಯಾಗಿವೆ. ಪಾತ್ರಗಳ ಪರಿಶೀಲನೆಯಲ್ಲಿ ಸ್ತ್ರೀ ಪುರುಷ ಪಾತ್ರಗಳೆರಡನ್ನೂ ತೌಲನಿಕವಾಗಿ ಪರಿಶೀಲನೆಗೆ ಗುರಿಪಡಿಸಿದ್ದರೂ ಸ್ತ್ರೀ ಪಾತ್ರಗಳು ವಿಶೇಷವಾದ ಪರಿಶೀಲನೆಗೆ ಗುರಿಯಾಗಿವೆ. ಅತ್ಯಂತ ಹೆಚ್ಚು ಗಮನ ಸೆಳೆದಿರುವ ಪಾತ್ರವೆಂದರೆ ಮಂಥರೆ. ಪಾತ್ರಗಳನ್ನು ಕುವೆಂಪು ದೃಷ್ಟಿ, ಧೋರಣೆಗಳ ಪ್ರತೀಕಗಳೆಂಬಂತೆ, ಕೃತಿಯ ಆಶಯಗಳ

ಪ್ರತೀಕಗಳಂತೆ, ಲಿಂಗರಾಜಕಾರಣದ–ಲಿಂಗಾಧಾರಿತ ಶೋಷಣೆಯ ಪ್ರತೀಕಗಳಂತೆ, ಮಾತೃವಾತ್ಸಲ್ಯ, ಮೌಲ್ಯ, ದಾಂಪತ್ಯ ದರ್ಶನಗಳ ಪ್ರತೀಕಗಳಂತೆ ಹೀಗೆ ಹಲವು ನೆಲೆಗಳಲ್ಲಿ ನೋಡಲಾಗಿದೆ.

1. ಕುವೆಂಪು ಕೃತಿಗಳ ಬಿಡಿ ಬಿಡಿ ಪಾತ್ರಗಳ ವಿಶ್ಲೇಷಣೆ (ಗುತ್ತಿ–ಹೂವಯ್ಯ ವಿಭಿನ್ನ ದೃಷ್ಟಿಕೋನಗಳು; ಮಂಥರೆಯ ಮಾತೃ ಹೃದಯ ಹೀಗೆ.) 2. ಪ್ರಕಾರಗಳಲ್ಲಿನ ಪಾತ್ರಗಳ ವಿಶ್ಲೇಷಣೆ (ಕಾದಂಬರಿಗಳಲ್ಲಿ ಸ್ತ್ರೀ, ಮಹಾಕಾವ್ಯದ ಸ್ತ್ರೀಪಾತ್ರಗಳು ಹೀಗೆ) 3. ಒಟ್ಟಾರೆ ಕುವೆಂಪು ಸಾಹಿತ್ಯದಲ್ಲಿನ ಮಹಿಳಾ ಪಾತ್ರಗಳ ವಿಶ್ಲೇಷಣೆ ಹೀಗೆ ಇಲ್ಲಿ ಪ್ರಧಾನವಾಗಿ ಮೂರು ಬಗೆಯಲ್ಲಿ ಈ ಅಭ್ಯಾಸವು ನಡೆದಿದೆ. ಒಟ್ಟಾರೆ ಕುವೆಂಪು ಸಾಹಿತ್ಯದಲ್ಲಿನ ಮಹಿಳಾ ಪಾತ್ರಗಳ ಕುರಿತು ಮಾತಾನಾಡುವಾಗ ಮಹಿಳೆಯರನ್ನು ವರ್ಗೀಕರಿಸಿಕೊಂಡು ವಿಶ್ಲೇಷಿಸುವ ಪ್ರವೃತ್ತಿ ವಿಶೇಷವಾಗಿ ಕಂಡು ಬರುತ್ತದೆ. ಇದಕ್ಕೆ ಒಂದೆರಡು ಉದಾಹರಣೆ ನೋಡಬಹುದು: ಕಮಲಾ ಹಂಪನಾ ಅವರು ಸ್ತ್ರೀಪಾತ್ರಗಳನ್ನು 1. ಕಾದಂಬರಿಗಳಲ್ಲಿನ ಸ್ತ್ರೀಪಾತ್ರಗಳು 2. ಭಾವಗೀತೆಗಳಲ್ಲಿನ ಸ್ತ್ರೀಪಾತ್ರಗಳು 3. ಕಾವ್ಯ–ಮಹಾಕಾವ್ಯ ಹಾಗೂ ಇತಿಹಾಸಗಳ ಆಧಾರದಿಂದ ರಚಿತವಾದ ಸ್ತ್ರೀಪಾತ್ರಗಳು ಎಂದು ಮೂರು ಬಗೆಯಾಗಿ ವಿಂಗಡಿಸಿಕೊಳ್ಳುತ್ತಾರೆ. ಮಲ್ಲಿಕಾ ಘಂಟಿಯವರು ಅ). ಶೂದ್ರ ಮಹಿಳೆಯರು ಆ). ಬ್ರಾಹ್ಮಣ ಮಹಿಳೆಯರು ಇ). ಪುರಾಣ ಸ್ತ್ರೀಯರು ಎಂದು ಮೂರು ವರ್ಗಗಳಾಗಿ ವರ್ಗೀಕರಿಸಿ ಕೊಂಡಿದ್ದಾರೆ. ವಿಜಯಾ ಸುಬ್ಬರಾಜ್ ಅವರು ಅ) ಬ್ರಾಹ್ಮಣ ಆ). ಶೂದ್ರ ಇ). ದಲಿತ ಎಂದು (ಕಾದಂಬರಿ ಪಾತ್ರಗಳನ್ನು) ವಿಂಗಡಿಸಿಕೊಂಡಿದ್ದಾರೆ. ಹೀಗಾಗಿ ನಮ್ಮ ವಿಮರ್ಶೆಯಲ್ಲಿ ವರ್ಗೀಕರಣ–ನಾಮಕರಣ ವಿನ್ಯಾಸವೊಂದು ಸಾಮಾನ್ಯವಾದ ವಿನ್ಯಾಸವಾಗಿದೆ.

ಈ ವರ್ಗೀಕರಣ ವಿನ್ಯಾಸದಲ್ಲಿ ಅ) ಸಾಹಿತ್ಯಕ ವಾಸ್ತವವನ್ನು ಸಾಮಾಜಿಕ ವಾಸ್ತವವೆಂದು ಭಾವಿಸುವ ಆ) ಸಾಹಿತ್ಯದ ಆಶಯಗಳನ್ನೇ ಕವಿಯ ದೃಷ್ಟಿ ಎಂದು ತಿಳಿಯುವ; ಇ) ಲೇಖಕನನ್ನು ಸಮಾಜದ ಇಡಿ ಗಂಡು ಸಮುದಾಯದ ಪ್ರತಿನಿಧಿ ಎಂದು ತಿಳಿಯುವ; ಈ) ಪುರುಷ ಸಮಾಜದ ಪ್ರತಿಬಿಂಬವೇ ಸಾಹಿತ್ಯ ಎಂದು ತಿಳಿಯುವ ಉ) ಸಾಹಿತ್ಯದ ಬಿಡಿ ಬಿಡಿ ಪಾತ್ರ–ಸನ್ನಿವೇಶಗಳ ಉದಾಹರಣೆಗಳ ಮೂಲಕ ಸಾರ್ವತ್ರಿಕ ಸಿದ್ಧಾಂತ–ನಿಲುವುಗಳಿಗೆ ತಲುಪುವ; ಊ) (ಪುರಾಣ ಕಥನಗಳ) ಸಾಮ್ಯ ವ್ಯತ್ಯಾಸಗಳ ಅಭ್ಯಾಸದ ಮೂಲಕ ತೀರ್ಮಾನಗಳಿಗೆ ಬರುವ; ಋ) ತಮ್ಮದೇ ನಂಬಿಕೆ, ತಿಳುವಳಿಕೆಗಳ ಅನ್ವಯದಿಂದ ತೀರ್ಮಾನಗಳಿಗೆ ಬರುವ; ಎ) ಭಿನ್ನ ವರ್ಗ–ಜಾತಿಯ ಹೆಣ್ಣುಗಳ ನೋವು–ವರ್ತನೆಗಳಲ್ಲಿ ವ್ಯತ್ಯಾಸ ಇದೆಯೇ ಎಂದು ಪರಿಶೀಲಿಸುವ ಏ) ಭಿನ್ನ ಹೆಣ್ಣು–ಗಂಡು ಪಾತ್ರಗಳನ್ನು ತೌಲನಿಕವಾಗಿ ಚರ್ಚಿಸುವ; ಹೀಗೆ ಹಲವು ನೆಲೆಗಳಿವೆ.

ಪಾತ್ರಗಳ ಅಭ್ಯಾಸದ ವಿನ್ಯಾಸದಲ್ಲಿ ಮಹಿಳಾ ಪಾತ್ರಗಳನ್ನು ಲೇಖಕ ಹೇಗೆ ಚಿತ್ರಿಸಿದ್ದಾನೆ? ಹಾಗೆಯೇ ಯಾಕೆ ಚಿತ್ರಿಸಿರಬಹುದು? ಹಾಗೆ ಚಿತ್ರಿಸಿರುವುದರಿಂದ ಸಮಾಜದ ಮೇಲಾಗುವ ಪರಿಣಾಮಗಳೇನು? ಸಾಹಿತ್ಯದಲ್ಲಿ ಲೇಖಕ ಮಹಿಳೆಗಾಗಿ ಪ್ರಕಟಿಸುವ ನೀತಿಸಂಹಿತೆ ಯಾವುದು? ಅದರ ಹಿಂದಿನ ಪುರುಷ ರಾಜಕಾರಣದ ಸ್ವರೂಪವೇನು? ಎಂದೆಲ್ಲ ಈ ದೃಷ್ಟಿಯು ಪರಿಶೀಲಿಸುತ್ತದೆ. ಹಾಗಾಗಿ ಸ್ತ್ರೀವಾದಿ ದೃಷ್ಟಿಯಲ್ಲಿನ ಪಾತ್ರಾಭ್ಯಾಸದ ವಿನ್ಯಾಸದಲ್ಲಿ ಮೌಲ್ಯಾತ್ಮಕ ಪರಿಕಲ್ಪನೆಗಳ ಅನ್ವೇಷಣೆ ಮತ್ತು ಕಾರಣ–ಪರಿಣಾಮಗಳ ಅನ್ವೇಷಣೆಯು ಒಂದು ಒಳವಿನ್ಯಾಸವಾಗಿದೆ.

ಕುವೆಂಪು ಅವರ ಸ್ತ್ರೀ ದೃಷ್ಟಿಯನ್ನು ಕೇವಲ ಸ್ತ್ರೀಪಾತ್ರ, ಸನ್ನಿವೇಶಗಳ ಮೂಲಕ ವಿವರಿಸಿ ವ್ಯಾಖ್ಯಾನಿಸುವ ಪ್ರವೃತ್ತಿ ಇರುವಂತೆಯೇ ಇಲ್ಲಿ ಕವಿಯು ನಿಸರ್ಗವನ್ನು, ಭೂಮಿಯನ್ನು, ನಾಡು–ನುಡಿಯನ್ನು ಸ್ತ್ರೀದೃಷ್ಟಿಯಿಂದ ಭಾವಿಸಿರುವ ವಿಚಾರಗಳನ್ನು ಆಧರಿಸಿ ಮತ್ತು ಸಾಮಾಜಿಕ ಚಲನಶೀಲತೆ, ವೈಚಾರಿಕತೆ, ಪ್ರಾದೇಶಿಕ ಸಾಂಸ್ಕೃತಿಕ ಚಹರೆಗಳು ಹೀಗೆ ಹಲವು ವಲಯಗಳಿಂದ ಲೇಖಕರ ಸ್ತ್ರೀ ದೃಷ್ಟಿಯನ್ನು ವ್ಯಾಖ್ಯಾನಿಸುವ ಯತ್ನಗಳೂ ನಡೆದಿವೆ. (730–ಪುಟ: 273, 2165–ಪುಟ: 127) ಆದರೆ ಈ ವಿಮರ್ಶೆಯು ಬಹುಪಾಲು ಸ್ತ್ರೀಪಾತ್ರ ಕೇಂದ್ರಿತ ಜಿಜ್ಞಾಸೆಯೇ ಆಗಿರುವುದು ಗಮನಾರ್ಹ. ಸ್ತ್ರೀವಾದಿ ವಿಮರ್ಶೆ ಎಂದರೆ ಸ್ತ್ರೀಪಾತ್ರ ಚಿತ್ರಗಳ ಕುರಿತ ಜಿಜ್ಞಾಸೆ ಎಂದು ತಿಳಿಯುವಷ್ಟರ ಮಟ್ಟಿಗೆ ಇಲ್ಲಿ ಈ ಜಿಜ್ಞಾಸೆ ಪ್ರಾಧಾನ್ಯತೆ ಪಡೆದಿದೆ. ಕುವೆಂಪು ಅವರ ಒಟ್ಟಾರೆ ದೃಷ್ಟಿಯನ್ನು ಮೌಲ್ಯಾನ್ವೇಷಕ ನೆಲೆಯ ನೈತಿಕ ಜಿಜ್ಞಾಸೆ ಎಂದು ಕೂಡ ಈ ದೃಷ್ಟಿಯು ವ್ಯಾಖ್ಯಾನಿಸಿದೆ. (728–ಪುಟ: 700) ಕುವೆಂಪು ಅವರ ಎಲ್ಲ ಕಥನಗಳಲ್ಲಿನ ಸ್ತ್ರೀಯರು ಬದಲಾಗುತ್ತಿರುವ ಸಾಂಸ್ಕೃತಿಕ ಲೋಕವನ್ನು ಚಿತ್ರಿಸಲು ಪ್ರತೀಕಗಳಂತೆ ಬಳಕೆಯಾಗಿದ್ದಾರೆ. ಈ ಸ್ತ್ರೀಪ್ರತೀಕಗಳು ಸಾಂಸ್ಕೃತಿಕ ಮೌಲ್ಯ–ನೈತಿಕ ಮೌಲ್ಯಗಳ ರಕ್ಷಕ ರೂಪಕಗಳಂತೆ ಬಳಕೆಯಾಗಿವೆ ಎಂಬ ನಿಲುವನ್ನು ಇಲ್ಲಿ

ಪ್ರಕಟಿಸಲಾಗಿದೆ. ಅಲ್ಲದೆ ಗಂಡು ಮತ್ತು ಹೆಣ್ಣು ಪಾತ್ರಗಳ ಚಿತ್ರಣಗಳನ್ನು ತುಲನೆ ಮಾಡುತ್ತ:

> ಚಂದ್ರಯ್ಯಗೌಡರು ಯಜಮಾನಿಕೆ, ಲೈಂಗಿಕ ಸ್ವೇಚ್ಛಾಚಾರ ಎಲ್ಲ ನಡೆಸಿ, ಹೆಂಡತಿಯನ್ನು ಕಸವಾಗಿ ಕಂಡದ್ದಕ್ಕಾಗಿ ಕೊನೆ ಗಳಿಗೆಯಲ್ಲಿ ಕಣ್ಣೀರಿಟ್ಟು ಗೌರವದ ಮರಣವನ್ನು ಪಡೆಯುವುದು ಕುವೆಂಪು ಅವರ ನೀತಿ ಕಲ್ಪನೆಯೊಳಗೂ ಸಾಧ್ಯವಾಗುತ್ತದೆ. ಆದರೆ ಅದೇ ಬಗೆಯ ಬದುಕು ಬದುಕಿದ್ದಕ್ಕಾಗಿ ಸುಬ್ಬಮ್ಮ ಅನಾಗರೀಕ ಗರ್ಭಪಾತದಿಂದ ಸಾಯಬೇಕಾಗುತ್ತದೆ. ಅಷ್ಟೇ ಅಲ್ಲ ಸಾವಿನಲ್ಲೂ ಸಮಾಜದ ದೃಷ್ಟಿಯಿಂದ ಆಕೆ ಪಾರಾಗಿಲ್ಲ. ಅವಳ ಸತ್ತ ಸ್ಥಿತಿ ಕಂಡ ರಾಮಯ್ಯ ಮನೆತನಕ್ಕೆ ಮಸಿ ಬಳಿದಳೆಂಬ ಅಸಹ್ಯದಿಂದ ನೇಣು ಹಾಕಿಕೊಳ್ಳುತ್ತಾನೆ. ಪುಟ್ಟಣ್ಣ ಅವಳ ಸಾವಿನ ಮೂಲವಾದ 'ಅನೈತಿಕ' ಪಿಂಡ, ರಕ್ತದ ಕಾಲುವೆ ಹೂವಯ್ಯನ ಕಣ್ಣಿಗೂ ಬೀಳದಂತೆ ಗುಟ್ಟಾಗಿ ಶುಚಿಗೊಳಿಸಿಬಿಡುತ್ತಾನೆ. ಹೂವಯ್ಯ ಬಂದು ಕಾಣುವಾಗ ಸುಬ್ಬಮ್ಮ ತೊಳೆದಿಟ್ಟ ಪರಿಶುದ್ಧವಾದ ಶವವಾಗಿರುತ್ತಾಳೆ. ಈ ಮರಣದಲ್ಲಿ ಆಕೆ ಒಮ್ಮೆ ಗಳಿಸಿದ್ದ ವಿಜಯದ ವೀರನಾಯಕಿತನವಿಲ್ಲ. ಮೌಲ್ಯಕ್ಕಾಗಿ ಹೋರಾಡಿ ಮಡಿದ ಹುತಾತ್ಮತೆಯೂ ಇಲ್ಲ. ಏಕೆ ಎಂಬುದು ನಿಜವಾದ ಮನಸ್ಸನ್ನು ತಟ್ಟಬೇಕಾದ ಅಂಶವಾಗಿದೆ ಎಂದು ನನಗೆ ತೋರುತ್ತದೆ (459–ಪುಟ: 200)

ಹೀಗೆ ಲೇಖಕನನ್ನು ಕಟಕಟೆಯಲ್ಲಿ ತಪ್ಪಿತಸ್ಥನಂತೆ ನಿಲ್ಲಿಸುವ ಧಾಟಿಯೂ ಇಲ್ಲಿದೆ. ಇಂತಹ ವಿಮರ್ಶೆಗಳಲ್ಲಿ ಸಾಹಿತ್ಯವು ಸಾಮಾಜಿಕ ಉತ್ಪನ್ನ ಎಂದು ತಿಳಿಯುತ್ತಲೆ ಅದು ವ್ಯಕ್ತಿಯ ಕಲಾಸೃಷ್ಟಿ; ಅದರ ಎಲ್ಲ ಆಶಯ–ಪರಿಣಾಮಗಳಿಗೆ ಲೇಖಕನೇ ಜವಾಬ್ದಾರನೆಂದು ತಿಳಿಯುವ ಪ್ರವೃತ್ತಿಯೂ ಇದೆ. ಲೇಖಕನ್ನು ತಪ್ಪಿತಸ್ಥನ ಸ್ಥಾನದಲ್ಲಿ ಇಲ್ಲವೆ ಸಂತನ ಸ್ಥಾನದಲ್ಲಿ ಇರಿಸಿ ನೋಡುವ ಆಚರಣೆಯು (459–ಪುಟ: 196) ಕೇವಲ ಸ್ತ್ರೀವಾದಿ ವಿಮರ್ಶೆಗೆ ಮಾತ್ರ ಸಂಬಂಧಿಸಿದ ಮಾತಲ್ಲ. ಇದು ನಮ್ಮ ವಿಮರ್ಶೆಯ ಒಂದು ಚಹರೆಯೇ ಹೌದು. ಬರೆದಾಕ್ಷಣಕ್ಕೆ ಇಲ್ಲಿ ಲೇಖಕನಿಗೆ ಪಥ್ಯದಿಂದ ಬಿಡುಗಡೆ ಇಲ್ಲ. ತನ್ನ ಕೃತಿಯ ಆಗುಹೋಗು–ಪರಿಣಾಮಗಳ ಹೊಣೆಯಿಂದ ಆತ ತಪ್ಪಿಸಿಕೊಳ್ಳುವಂತಿಲ್ಲ.

ಇಲ್ಲಿನ ವಿಮರ್ಶೆಯ ಇನ್ನೊಂದು ಲಕ್ಷಣವೆಂದರೆ ವಿವರಣಾತ್ಮಕತೆ. ಇದು ಎಲ್ಲ ವಿಮರ್ಶಾ ದೃಷ್ಟಿಗಳಲ್ಲಿ ಇರುವಂತೆ ಇಲ್ಲೂ ಇದೆ.

> ಶ್ರೀ ರಾಮಾಯಣದರ್ಶನಂನ ಎಲ್ಲಾ ಸ್ತ್ರೀ ಪಾತ್ರಗಳು ಒಂದಲ್ಲಾ ಒಂದು ರೀತಿಯಿಂದ ಆದರ್ಶವನ್ನು ಪ್ರತಿಪಾದಿಸುತ್ತವೆ. ಸೀತಾ ಮಂಡೋದರಿಯರು ತಮ್ಮ ತಮ್ಮ ಶೀಲ ಹದಿಬದೆಯತನದಿಂದ ಎತ್ತರಕ್ಕೆ ಏರಿದರೆ, ಊರ್ಮಿಳೆ ತಪಸ್ವಿನಿ ಸರ್ವರ ಶುಭಕಾಮನೆಯಾಗಿದ್ದಾಳೆ. ಮಂಥರೆ ತನ್ನ ಮಮತೆ, ವಾತ್ಸಲ್ಯ, ತ್ಯಾಗಗಳಂತಹ ಗುಣಗಳಿಂದ ಮನಸೆಳೆದರೆ; ಕಿರಿವಯಸ್ಸಿನ ಅನಲೆ ತನ್ನ ಅಪರಿಮಿತ ಆತ್ಮೀಯತೆ ಪ್ರೀತಿ ವಿಶ್ವಾಸಗಳಿಂದ ಎಲ್ಲರ ಮನವನ್ನೂ ಗೆಲ್ಲುತ್ತಾಳೆ. ತ್ರಿಜಟೆ ತನ್ನ ಮಾನವೀಯ ಅನುಕಂಪದಿಂದ ಆದರಣೀಯಳಾದರೆ; ಕೈಕೆ ತನ್ನ ಪ್ರಾಯಶ್ಚಿತ್ತ ಬುದ್ಧಿಯಿಂದ ಕ್ಷಮಾರ್ಹಳಾಗುತ್ತಾಳೆ. 2267–ಪುಟ: 179)

ಹೀಗೆ ಕುವೆಂಪು ಅವರ ಸ್ತ್ರೀದೃಷ್ಟಿಯ ವಿಚಾರಗಳನ್ನು ಸ್ತ್ರೀವಾದಿ ವಿಮರ್ಶೆಯು ನೈತಿಕ ನೆಲೆಯ ಜಿಜ್ಞಾಸೆ–ಆದರ್ಶದ ನಿರೂಪಣೆ ಎಂದೇ ವ್ಯಾಖ್ಯಾನಿಸುತ್ತದೆ. ಇಲ್ಲಿನ ವಿಮರ್ಶೆ ಸರಿಸುಮಾರು ವಿವರಣಾತ್ಮಕವೇ ಆಗಿದೆ. ಪಾತ್ರಗಳ ಅಭ್ಯಾಸವನ್ನು ಒಳಗೊಂಡಂತೆ ಒಟ್ಟಾರೆ ಸ್ತ್ರೀವಾದಿ ದೃಷ್ಟಿಯ ವಿಮರ್ಶೆಯಲ್ಲಿ ಲೇಖಕನ ದೃಷ್ಟಿ–ಧೋರಣೆಗಳ ವ್ಯಾಖ್ಯಾನ ಮತ್ತು ಅವುಗಳ ಜಿಜ್ಞಾಸೆ ಪ್ರಮುಖವಾದ ಒಂದು ಕಾರ್ಯವಾಗಿದೆ. ಲೇಖಕನ ದೃಷ್ಟಿ ಧೋರಣೆಗಳ ಜಿಜ್ಞಾಸೆ (830–ಪುಟ: 80)ಯಲ್ಲಿ ಕೆಲವೊಮ್ಮೆ ಒಂದೊಂದು ಬಿಡಿ ನೆಲೆಯ ವಿವರವೂ ಒಂದೊಂದು ರೀತಿಯ ತೀರ್ಮಾನಗಳಿಗೆ ಕರೆದುಕೊಂಡು ಹೋಗಬಹುದು. ಕೆಳಗಿನ ತೀರ್ಮಾನಗಳ ಮಾದರಿ ನೋಡಿ.

ಮಾದರಿ–1

> 1. ಕುವೆಂಪು ಸನಾತನ ಸಂಪ್ರದಾಯದ ದೃಷ್ಟಿಯಲ್ಲೇ ಹೆಣ್ಣನ್ನು ಕಂಡಿದ್ದಾರೆ. ಹೆಣ್ಣನ್ನು ಗಂಡಿನ ಸಮಾನವಾಗಿ ಸಮಾಜದ ಹೊರಗೆ ದುಡಿಯುವಂತೆ ಕಲ್ಪಿಸಿಕೊಳ್ಳುವುದಿಲ್ಲ. 2. ಪ್ರಣಯವನ್ನು ಬೇಂದ್ರೆ, ಕೆ.ಎಸ್.ನ ರೀತಿ ಸಹಜ ಮತ್ತು ಉತ್ಕಟವಾಗಿ ಚಿತ್ರಿಸುವುದಿಲ್ಲ. ದೈವಿಕ ನೆಲೆಗೆ ಏರಿಸುತ್ತಾರೆ. ಶಿವಾಣಿಯಂತೆ ಪತ್ನಿಯನ್ನು ಕಲ್ಪಿಸಿಕೊಂಡಿದ್ದಾರೆ. 3. ಕುವೆಂಪು ದೃಷ್ಟಿಯಲ್ಲಿ ಹೆಣ್ಣಿಗೆ ತುಂಬಾ ಉನ್ನತ ಸ್ಥಾನ ಇದೆ. (760–ಪುಟ: 47–49)

ಒಂದು ನಿಲುವಿಗೂ ಇನ್ನೊಂದು ನಿಲುವಿಗೂ ಕೆಲವೊಮ್ಮೆ ವೈರುಧ್ಯ ಏರ್ಪಡಬಹುದಾದ ಸಾಧ್ಯತೆ ಬಿಡಿ

ಸನ್ನಿವೇಶಗಳ ಮೂಲಕ ಇಡಿ ತೀರ್ಮಾನಗಳಿಗೆ ಹೊರಟಾಗ ಒದಗುತ್ತದೆ. ಬಿಡಿಯ ಕುರಿತ ತರ್ಕಗಳೇ ಒಟ್ಟಾರೆ ಲೇಖಕನ ದೃಷ್ಟಿಯ ಮೌಲ್ಯ ಮಾಪನವೂ ಆಗುವ ಸಾಧ್ಯತೆ (ಅಪಾಯ) ಇಂತಹ ಕಡೆ ಇರುತ್ತದೆ. ಇದಕ್ಕೆ ಇನ್ನೊಂದೆರಡು ಮಾದರಿ ನೋಡಬಹುದು.

ಮಾದರಿ–2

> ಎಲ್ಲ ವಿಧದ ಶೋಷಣೆಗೂ ವೈಚಾರಿಕವಾಗಿ ಸ್ಪಂದಿಸುವ ಕವಿ ಹೆಣ್ಣಿನ ಸ್ಥಿತಿಯನ್ನು ಮಾತ್ರ ವೈಭವೀಕರಿಸುತ್ತಾರೆ. ಚಲನಶೀಲತೆಯನ್ನು ವಿರೋಧಿಸುವ ಜಡ ನಿಲುವನ್ನು ವ್ಯಕ್ತಪಡಿಸುತ್ತಾರೆ. ಹೆಣ್ಣು ಹೊಸ್ತಿಲು ದಾಟುವುದು ಬೇಡ. ವ್ಯಕ್ತಿತ್ವಕ್ಕಾಗಿ ಶ್ರಮಿಸುವುದೂ ಬೇಡ. ಅದೇನಿದ್ದರೂ ಗಂಡಿನ ಜಗತ್ತು ಎಂದು ಗಂಡಸಿನ ಹೆಂಗಸಿನ ಪ್ರಪಂಚವನ್ನು ಒಡೆದಿಡುತ್ತಾರೆ....ಮನೆ ಮನೆಯ ತಪಸ್ವಿನಿಗೆ ಪದ್ಯದಲ್ಲಿ ಪ್ರಪಂಚದ ಬೇಕು ಬೇಡಗಳನ್ನು ತಾನು ನಿರ್ಣಯಿಸಹೊರಟ ಪಿತೃವ್ಯವಸ್ಥೆಯ ಧೋರಣೆಯೇ ವ್ಯಕ್ತವಾಗುತ್ತದೆ. ಉಪಭೋಗಿ ಸಂಸ್ಕೃತಿಯ ಚಿಂತನೆ ಇದು. ಮನುವಾದವನ್ನು ಕುವೆಂಪು ಪ್ರತಿಭಟಿಸುತ್ತಾರೆ. ಆದರೆ ಹೆಣ್ಣಿನ ವಿಷಯದಲ್ಲಿ ಮನುವಾದವನ್ನು ಆದರ್ಶವೆಂಬಂತೆ ಒಪ್ಪುತ್ತಾರೆ. ವ್ಯವಸ್ಥೆಯ ಬಲಾಢ್ಯತೆಗೆ ಇದು ಸಾಕ್ಷಿ. ತನ್ನ ಕಾಲದ ಎಲ್ಲ ವಿಧದ ಅನ್ಯಾಯಗಳಿಗೆ ದನಿ ಎತ್ತಿದ ಕುವೆಂಪು ಮಹಿಳಾ ಸಮಸ್ಯೆಯನ್ನು ಪ್ರಮುಖ ಕಾಳಜಿಯಾಗಿ ಸ್ವೀಕರಿಸಲಿಲ್ಲ. ವಿಧವಾ ಸಮಸ್ಯೆಯ ಕುರಿತ ಕವಿತೆಯೊಂದಿದೆ. ಬಿಟ್ಟರೆ ಉಪೇಕ್ಷಿತ ಧೋರಣೆಯೇ ಕಂಡು ಬರುತ್ತದೆ (736–ಪುಟ: 65)

ಮಾದರಿ–3

> ಸನ್ಯಾಸದ ಒಲವು, ಅನುರಾಗ, ನಿರ್ಲಿಪ್ತತೆ ಈ ಬಗೆಯ ನಿಲುವುಗಳಂತೆಯೇ ದಾಂಪತ್ಯ ಜೀವನವು ಶಿವ ಶಿವಾಣಿಯರ ಆಟ ಎಂಬ ಉನ್ನತ ನಿಲುಮೆಯು ಕುವೆಂಪು ಸಾಹಿತ್ಯ ಸೃಷ್ಟಿಯಲ್ಲಿದೆ. ಪ್ರೇಮಕಾಶ್ಮೀರ, ಜೇನಾಗುವಾ, ಚಂದ್ರಮಂಚಕೆ ಬಾ ಚಕೋರಿ ಇತ್ಯಾದಿ ಕವನ ಸಂಕಲನಗಳಲ್ಲಿ ಉತ್ಕಟ ಪ್ರೇಮಗೀತೆಗಳಿವೆ. ಅವುಗಳಲ್ಲಿ ಸರಸ ದಾಂಪತ್ಯದ ಚಿತ್ರಗಳಿವೆ. ಅವರ ಎರಡು ಸಾಮಾಜಿಕ ಕಾದಂಬರಿಗಳಲ್ಲಿ ವಿರಸ ದಾಂಪತ್ಯ, ವಿಷಮ ದಾಂಪತ್ಯ, ಕಾಮಪಂಕದಲ್ಲಿ ಹೊರಳಾಡುವ ದಾಂಪತ್ಯ, ವ್ಯಭಿಚಾರಗಳ ಚಿತ್ರಗಳಿವೆ. ಶ್ರೀರಾಮಾಯಣದರ್ಶನದಲ್ಲಿ ರಸಿಕತೆಯಿಂದ ಆರಂಭಿಸಿ ತಪಸ್ಸಿನ ಮಟ್ಟಕ್ಕೇರಿದ ದಾಂಪತ್ಯ, ಮಹಾಪತಿವ್ರತೆಯರ ಚಿತ್ರಣಗಳಿವೆ. ಹೀಗೆ ಕುವೆಂಪು ಚಿತ್ರಿಸಿದ ದಾಂಪತ್ಯ ಜೀವನವು ವಿವಿಧವೂ ವ್ಯಾಪಕವೂ ಆಗಿದೆ (804–ಪುಟ: 145)

ವಿಮರ್ಶೆಯ ಈ ತುಣುಕುಗಳನ್ನು ನೋಡಿದರೆ: ಬಿಡಿ ಭಾಗಗಳ ಅಪಸಾಂದರ್ಭೀಕರಣ ಮತ್ತು ಬಿಡಿ ನಿದರ್ಶನಗಳ ಮೂಲಕ ಬೀಸು ಹೇಳಿಕೆಗಳಿಗೆ ತಲುಪುವ ವಿಧಾನಗಳೆರಡೂ ಇಲ್ಲಿ ಅಭಿನಯಗೊಂಡಿವೆ ಎನ್ನಿಸುತ್ತದೆ. ಕಾವ್ಯ ಪ್ರಕಾರವನ್ನು ಮಾತ್ರ ಗಮನಿಸಿ ಅದರಲ್ಲೂ ಕೆಲವೊಂದು ಬಿಡಿ ಕವಿತೆಗಳನ್ನು ಮಾತ್ರ ಗಮನಿಸಿ ಒಟ್ಟಾರೆ ಕುವೆಂಪು ಸ್ತ್ರೀ ದೃಷ್ಟಿಯ ಬಗೆಗೆ ತೀರ್ಪು ನೀಡುವ ಮಾದರಿ ಡಾ. ವಿನಯಾ ಅವರಲ್ಲಿದೆ (ಮಾದರಿ–1). ಮಲ್ಲಿಕಾಘಂಟಿಯವರ ವಿಮರ್ಶೆಯಲ್ಲಿಯೂ ಈ ಮಾದರಿ ಸ್ವಲ್ಪ ಕಾಣಿಸಿಕೊಂಡಿದೆ (ಮಾದರಿ–2). ಆದರೆ ಸ.ಸ.ಮಾಳವಾಡರಲ್ಲಿ ಅಖಂಡ ದೃಷ್ಟಿ ಇರುವುದರಿಂದ ಬೀಸು ಹೇಳಿಕೆಗಳು ಉದಯಿಸಿಲ್ಲ (ಮಾದರಿ–3). ಕೇಶವಶರ್ಮರ ಬರೆಹದಲ್ಲೂ (749) ಕೂಡ ಸಾಂಸ್ಕೃತಿಕ ದೃಷ್ಟಿ ಮತ್ತು ಅಖಂಡ ದೃಷ್ಟಿ ಇರುವುದರಿಂದ ಲೇಖಕರ ದೃಷ್ಟಿಯ ವೈರುಧ್ಯ–ಚಲನಶೀಲತೆ–ಬಹುತ್ವಗಳನ್ನು ಒಟ್ಟಿಗೆ ಹಿಡಿಯಲು ಸಾಧ್ಯವಾಗಿದೆ. ಮಾಳವಾಡರಲ್ಲಿ ವಿವರಣಾತ್ಮಕ ಧಾಟಿಯಲ್ಲಿ ಬಿಡಿ ಬಿಡಿ ವಿವರಗಳು ಇಡಿಯ ಕಡೆ ಚಲಿಸುವುದರಿಂದ ಅಲ್ಲಿಯೂ ಬಹುತ್ವವನ್ನು ಹಿಡಿಯಲು ಸಾಧ್ಯವಾಗಿದೆ. ಅಂದರೆ ವಿಮರ್ಶೆಯ ದೃಷ್ಟಿಗಳು ಮತ್ತು ವಿಧಾನಗಳ ಶಕ್ತಿ ಮತ್ತು ಮಿತಿಗಳೇ ವಿಮರ್ಶೆಯ ತೀರ್ಮಾನಗಳಿಗೂ ಅಂಟಿಕೊಳ್ಳುತ್ತವೆ. ಅವು ವಿಮರ್ಶಕರ ಶಕ್ತಿ ಮತ್ತು ಮಿತಿಗಳೂ ಆಗುತ್ತವೆ. ವಿಧಾನದ ಆಯ್ಕೆ ಮತ್ತು ರೂಪಣೆಯಲ್ಲಿ ವಿಮರ್ಶಕ ತೋರುವ ಎಚ್ಚರ ಬಹಳ ಮುಖ್ಯವಾದುದು.

'ಕುವೆಂಪು ಬರಹಗಳು ನಿರ್ದಿಷ್ಟ ಚಾರಿತ್ರಿಕ ಪ್ರಕ್ರಿಯೆಯ ಕುರಿತ ಅವರ ಸಂವಾದಗಳು' (749) ಎಂಬ ಗ್ರಹಿಕೆಯಿಂದ ಇವರ ತಾತ್ವಿಕ ನಿಲುವುಗಳನ್ನು ಪರಿಶೀಲಿಸುವ ಕೆಲಸವೂ ಇಲ್ಲಿ ನಡೆದಿದೆ. ಹಾಗಾಗಿಯೇ ಸಮಾಜದ ಚಾರಿತ್ರಿಕ ಸಂದರ್ಭವು ಸಾಹಿತ್ಯದ ಸ್ವರೂಪವನ್ನು ರೂಪಿಸುತ್ತದೆ ಎಂಬ ತತ್ವವು ಇಲ್ಲಿ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವ ದಾರಿಯಾಗಿ ಬೆಳೆದಿದೆ. ಸಾಹಿತ್ಯದ ತಾತ್ವಿಕ ನಿಲುವುಗಳನ್ನು ಕೇವಲ ಲೇಖಕನ ನಿಲುವುಗಳು ಎಂದು ತಿಳಿಯದೆ ಅವು ಸಮಷ್ಟಿ ದೃಷ್ಟಿಗಳ ಪ್ರತೀಕಗಳು ಎಂದು ತಿಳಿಯುವ ಧೋರಣೆ ಇಂತಹ ಕಡೆ ಇದೆ. ಈ ಧೋರಣೆಯು ಲೇಖಕನನ್ನು ಮಾತ್ರ ಸಾಹಿತ್ಯದ ತಾತ್ವಿಕ ನಿಲುವುಗಳಿಗೆ

ಹೊಣೆಗಾರನನ್ನಾಗಿ ಮಾಡದೆ ಒಟ್ಟು ಸಾಮಾಜಿಕ ಸಾಂಸ್ಕೃತಿಕ ಸಂದರ್ಭವನ್ನು ಹೊಣೆಯಾಗಿಸುತ್ತದೆ. ಇಂತಹ ಕಡೆ ಸಾಹಿತ್ಯ ವಿಮರ್ಶೆಯು ಕಾರಣ ಮೀಮಾಂಸೆಯಾಗಿ ಬೆಳೆಯುತ್ತದೆ. (459–ಪುಟ: 196) ಈ ಕಾರಣಮಿಮಾಂಸೆಯು ಕುವೆಂಪು ಬರವಣಿಗೆಯಲ್ಲಿ ಬರುವ ಹೆಂಗಸರನ್ನು ಸಾಮಾಜಿಕ ಪರಿಸ್ಥಿತಿಯಿಂದ ರೂಪಗೊಂಡವರು ಎಂದು ಭಾವಿಸುತ್ತದೆ. ಪುರಾಣ ಪ್ರತೀಕಗಳಾದ ನಾಟಕಗಳ ಬಗ್ಗೆ ಮಾತಾಡುವಾಗಲೂ ಅವನ್ನು ಚಾರಿತ್ರಿಕ ಸಂದರ್ಭದ ಒತ್ತಡಗಳಿಗೆ ತಳಸಂಸ್ಕೃತಿಯು ತೋರಿದ ಪ್ರತಿರೋಧ ಎಂದೇ ಇಲ್ಲಿ ವ್ಯಾಖ್ಯಾನಿಸಲಾಗಿದೆ. ಈ ತಳಸಂಸ್ಕೃತಿಯಲ್ಲಿ ಹೆಣ್ಣುಗಳೂ ಬರುತ್ತಾರೆ. ಕುವೆಂಪು ಕಾವ್ಯದಲ್ಲಿ ಸ್ತ್ರೀ ಮತ್ತು ಪುರುಷ, ಸ್ತ್ರೀ ಮತ್ತು ಸಮಾಜ, ಸ್ತ್ರೀ ಮತ್ತು ರಾಷ್ಟ್ರೀಯತೆ, ಸ್ತ್ರೀ ಮತ್ತು ಭಾಷೆ ಹೀಗೆ ಭಿನ್ನ ಖಂಡದೃಷ್ಟಿಗಳು ಇವೆಯೆಂದು ಈ ವ್ಯಾಖ್ಯಾನವು ಭಾವಿಸುತ್ತದೆ. ಬಿಡಿ ಬಿಡಿಯ ಪರಿಶೀಲನೆಯು ಇಡಿಯ ಕಡೆಗೆ ಚಲಿಸುವ ವಿನ್ಯಾಸವಿದು. (749–ಪುಟ: 86)

ಶ್ರೀಸಾಮಾನ್ಯನೆ ಭಗವದ್ ಮಾನ್ಯಂ, ಪಾಪಿಗೂ ಉದ್ಧಾರಮಿಹುದೌ, ಮನೆಮನೆಯ ತಪಸ್ವಿನಿ, ಹೆತ್ತಮ್ಮಗಿಂ ಮತ್ತೊಳರೇ? ಇಂತಹ ಕುವೆಂಪು ಅವರ ಮಾತುಗಳನ್ನು ಮತ್ತೆ ಮತ್ತೆ ಈ ವಿಮರ್ಶೆಯು ಉಲ್ಲೇಖಿಸುತ್ತದೆ. ಉಲ್ಲೇಖಿಸುತ್ತ ಆ ಮೂಲಕ ಕುವೆಂಪು ಸ್ತ್ರೀಪರ ನಿಲುವುಳ್ಳವರು, ಸ್ತ್ರೀಯರ ಬಗ್ಗೆ ಗೌರವಾದರ ಉಳ್ಳವರು ಎಂಬ ನಿಲುವಿಗೆ ಬರುತ್ತದೆ. ಅಷ್ಟೇ ಅಲ್ಲ ಅನಲೆ, ತಾರಕ್ಷಿ, ಮಂಡೋದರಿ, ಮಂಥರೆ, ಪಾತ್ರಗಳನ್ನು, ಸ್ವರ್ಗದ್ವಾರದಿ ಯಕ್ಷಪ್ರಶ್ನೆ, ಸೀತಾ–ರಾಮರ ಅಗ್ನಿ ಪ್ರವೇಶ ಇಂತಹ ಭಾಗಗಳನ್ನು ಉಲ್ಲೇಖಿಸುತ್ತ ಕುವೆಂಪು ಸ್ತ್ರೀಪಕ್ಷಪಾತಿ, ಸ್ತ್ರೀವಾದಿ ಎಂಬ ನಿಲುವಿಗೆ ಬರುತ್ತದೆ. ಅಂದರೆ ಬಿಡಿ ಉಲ್ಲೇಖ ಮತ್ತು ಕವಿದೃಷ್ಟಿ ನಿರ್ವಚನ ಈ ವಿಮರ್ಶೆಯ ಒಂದು ವಿನ್ಯಾಸವಾಗಿದೆ. ಅಲ್ಲದೆ ವಿಮರ್ಶೆಯು ತಾನು ತೆಗೆದುಕೊಳ್ಳುವ ನಿಲುವುಗಳಿಗೆ ಬಹಳಷ್ಟು ಸಾರಿ ನಿದರ್ಶನಗಳ ಮತ್ತು ಉಲ್ಲೇಖಗಳನ್ನು ಕುರಿತ ತರ್ಕವನ್ನೇ ಪ್ರಧಾನವಾಗಿ ಆಶ್ರಯಿಸುತ್ತದೆ. ನಿದರ್ಶನ ಮತ್ತು ವ್ಯಾಖ್ಯಾನ ಮಾದರಿ ಎಂದು ಇಂತಹ ವಿಮರ್ಶೆಯನ್ನು ಕರೆಯಬಹುದು.

> ಶ್ರೀ ಕುವೆಂಪು, ಗೃಹ ತಪಸ್ವಿನಿಯರನ್ನು ತಾಯಿಯಂತೆ, ಭಗವತಿಯಂತೆ ಕಂಡು ಆರಾಧಿಸಿ, ಪ್ರಖ್ಯಾತಿ ಪಡೆಯಬೇಕೆಂಬ ಗಂಡಸರ ಕುತ್ತು ಅವಳಿಗೆ ಹಿಡಿಯದಿರಲಿ. ಕೀರ್ತಿಶನಿ ಅವಳ ಹೆಗಲೇರದಿರಲಿ ಎಂಬುದಾಗಿ ಕಳಕಳಿಯಿಂದ ಬೇಡಿಕೊಳ್ಳುತ್ತಾರೆ. ಹೀಗೆಂದ ಮಾತ್ರಕ್ಕೆ ಮಹಿಳೆಗೆ ಸ್ವಾತಂತ್ರ್ಯ ಇರಕೂಡದು ಅವಳು ಗೃಹದಲ್ಲೇ ಬಂಧಿಯಾಗಿರಬೇಕು ಎಂಬುದು ಅವರ ಮತವಲ್ಲ. ವ್ಯಕ್ತಿಗಳ ಸಾಮಾಜಿಕ, ವಯಕ್ತಿಕ ಜೀವನದಲ್ಲಿ ಅವಳು ನಿರ್ವಹಿಸಬೇಕಾದ ಕರ್ತವ್ಯ ಅಷ್ಟು ಗುರುತರವಾದುದು, ಪವಿತ್ರವಾದುದು, ಅವಳು ಪೂಜನೀಯಳೇ ಎಂಬುದನ್ನು ಸ್ಪಷ್ಟಪಡಿಸುವುದು ಅವರ ಆಶಯ (2165–ಪುಟ: 142)

> ಈ ದೇಶದಲ್ಲಿ ಹೆಣ್ಣು ಸಾಮಾಜಿಕವಾಗಿ ಎಷ್ಟೇ ಶೋಷಣೆಗೆ ಒಳಗಾಗಿದ್ದರೂ ತಾತ್ವಿಕವಾಗಿ ಅವಳನ್ನು ವೈಭವೀಕರಿಸುವ ಸಮಾನಾಂತರ ನೆಲೆಯೊಂದು ನಮ್ಮ ದೇಶದ ಇತಿಹಾಸ, ಸಾಹಿತ್ಯಗಳಲ್ಲಿ ಹಾಸು ಹೊಕ್ಕಾಗಿದೆ. ನಮ್ಮ ಪರಂಪರೆಯಲ್ಲಿ ಹೆಣ್ಣನ್ನು ನೋಡುವ ದೃಷ್ಟಿ ಮಾತೃಪ್ರಧಾನವಾದುದು. ಹೆಣ್ಣು ತಾಯಿಯಾಗಿ, ದೇವಿಯಾಗಿ, ಶಕ್ತಿ ಸ್ವರೂಪಿಣಿಯಾಗಿ ನಮ್ಮ ಪರಂಪರೆಯಲ್ಲಿ ಚಿತ್ರಿತಳಾಗಿದ್ದಾಳೆ. ಈ ದೇಶದ ಶಿಷ್ಟ ಹಾಗೂ ಜಾನಪದೀಯ ಸಾಹಿತ್ಯಗಳೆರಡರಲ್ಲಿಯೂ ಹೆಣ್ಣನ್ನು ತಾಯಿಯೆಂದೇ ಗುರುತಿಸಲಾಗುತ್ತದೆ. ಭೂಮಿತಾಯಿ–ಜನ್ಮಕೊಟ್ಟ ತಾಯಿ, ಹೆಣ್ಣು ಈ ಮೂರೂ ಸಮಾನ ನೆಲೆಯಲ್ಲಿ ನೋಡಿ ಹೆಣ್ಣನ್ನು ಪೂಜನೀಯಳೆಂದು ಒಪ್ಪಲಾಗಿದೆ. ಈ ದೇಶದ ಮಹಾಕಾವ್ಯಗಳಲ್ಲೂ ಹೆಣ್ಣನ್ನು ಪತಿವ್ರತೆ, ತ್ಯಾಗಮಯಿ, ತಪಸ್ವಿನಿ ಎಂದೇ ಚಿತ್ರಿಸಿವೆ. ಕುವೆಂಪು ಕೂಡ ಹೆಣ್ಣನ್ನು ಕುರಿತ ಭಾರತೀಯ ಪರಂಪರೆಯ ಈ ಮೌಲ್ಯಗಳನ್ನೇ ತಮ್ಮ ಕಾವ್ಯದಲ್ಲಿ ಎತ್ತಿ ಹಿಡಿದಿದ್ದಾರೆ. ಕುವೆಂಪು ಪರಂಪರೆಯನ್ನು ಚಿಕಿತ್ಸೆಗೆ ಒಳಪಡಿಸಿ ಅದು ಇಂದಿಗೆ ಎಷ್ಟು ಪ್ರಸ್ತುತ ಎಂದು ನೋಡುತ್ತಾರೆ. ಆದರೆ ಹೆಣ್ಣಿನ ವಿಚಾರಕ್ಕೆ ಬಂದಾಗ ಮಾತ್ರ ಅವರ ದೃಷ್ಟಿಕೋನ ಬಹಳ ಮಟ್ಟಿಗೆ ಸಾಂಪ್ರದಾಯಕವಾದದ್ದು. ಹೆಣ್ಣಿನ ಬಗೆಗೆ ಅವರು ಪರಂಪರಾಗತ ವೈಭವೀಕೃತ ನೆಲೆಯನ್ನು ಒಪುತ್ತಾರೆಯೇ ಹೊರತು ಆಧುನಿಕ ಸಾಮಾಜಿಕ ಸಂದರ್ಭದ ಬದಲಾದ ಮೌಲ್ಯಗಳ ಹಿನ್ನೆಲೆಯಲ್ಲಿ ಹೆಣ್ಣಿನ ಸ್ಥಾನಮಾನಗಳು ಹಿಂದಿಗಿಂತ ಭಿನ್ನವಾಗಿರಬೇಕೆನ್ನುವ ವಿಷಯದಲ್ಲಿ ಅವರು ಅಷ್ಟಾಗಿ ಉತ್ಸಾಹ ತೋರುವುದಿಲ್ಲ. ಪುರುಷನಿಗೆ ಸಮಾನವಾದ ಕ್ಷೇತ್ರಗಳಲ್ಲಿ ಅವಳು ಪಾಲುಗೊಳ್ಳಬಹುದೆನ್ನುವ ಹೊಸ ದೃಷ್ಟಿಯನ್ನು ಅವರು ಒಪ್ಪುವುದಿಲ್ಲ (760–ಪುಟ: 47)

ಹೀಗೆ ಕುವೆಂಪು ಅವರ ಬಗೆಗೆ ಭಿನ್ನವಾಗಿ, ಕೆಲವೊಮ್ಮೆ ತದ್ವಿರುದ್ಧವಾಗಿ ತೀರ್ಪು ನೀಡುವ ವಿಮರ್ಶೆಯೂ ಇಲ್ಲಿ ಪ್ರಕಟವಾಗಿದೆ. ವಿಮರ್ಶೆಯು ಇಂತಹ ಕಡೆ ಬಿಡಿ ನಿದರ್ಶನಗಳ ಒದಿನ ತರ್ಕವನ್ನು ಮಾತ್ರವೇ

ಗಟ್ಟಿಯಾಗಿ ಹಿಡಿದು ತನ್ನ ನಿಲುವಿಗೆ ತಕ್ಕಂತೆ ಅದನ್ನು ಬಳಸಿಕೊಳ್ಳುತ್ತದೆ. ನಿದರ್ಶನ ಮತ್ತು ವ್ಯಾಖ್ಯಾನ ಮಾದರಿಯ ಇಂತಹ ವಿಮರ್ಶೆಗಳಲ್ಲಿ ಬಿಡಿ ಬಿಡಿ ಉಲ್ಲೇಖಗಳ ತಾರ್ಕಿಕ ವ್ಯಾಖ್ಯಾನವೇ ವಿಮರ್ಶೆಯ ನಿಲುವು, ಲೇಖಕನ ಕುರಿತ ತೀರ್ಪೂ ಆಗುವ ಸಾಧ್ಯತೆ (ಅಪಾಯ) ಇರುತ್ತದೆ.

ಕುವೆಂಪು ಬೇಂದ್ರೆ ಕಾರಂತ ಹೀಗೆ ಆಧುನಿಕ ಸಾಹಿತ್ಯದ ಆಯ್ದ ಲೇಖಕರ ಸ್ತ್ರೀಪರ ಕಾಳಜಿಗಳನ್ನು ತೌಲನಿಕವಾಗಿ ಹೋಲಿಸಿ ನೋಡುವುದು ಈ ವಿಮರ್ಶೆಯ ಒಂದು ಸಾಮಾನ್ಯವಾದ ಚಹರೆಯಾಗಿದೆ. ತೌಲನಿಕ ವಿವೇಚನೆಯನ್ನೇ ಉದ್ದೇಶವಾಗಿ ಇರಿಸಿಕೊಂಡ ವಿಮರ್ಶೆ ಇಲ್ಲಿ ಇಲ್ಲವಾದರೂ ಬಹುಪಾಲು ಸ್ತ್ರೀವಾದಿ ಬರವಣಿಗೆಯಲ್ಲಿ ಎಲ್ಲರಲ್ಲು ಇದು ಒಂದು ಸೆಳಕಾಗಿ ಅಲ್ಲಲ್ಲಿ ಕಾಣಿಸಿಕೊಂಡಿದೆ. ಇದರ ಜೊತೆಗೆ ಇರುವ ಇನ್ನೊಂದು ಸಾಮನ್ಯವಾದ ಚಹರೆ ಕುವೆಂಪು ಅವರ ಸ್ತ್ರೀ ದೃಷ್ಟಿಯು ರೂಪಗೊಂಡ ಕಾರಣ ಪ್ರೇರಣೆಗಳನ್ನು ಅನ್ವೇಷಿಸುವುದು. ಈ ಅನ್ವೇಷಣೆಯಲ್ಲಿ ಲೇಖಕನ ಗ್ರಹಿಕೆ ಮತ್ತು ವ್ಯಕ್ತಿತ್ವದ ಮೇಲಿನ ಪ್ರಭಾವಗಳೆರಡೂ ಚರ್ಚಿತವಾಗಿವೆ.

> ವಿವಾಹಾನಂತರ ಪೂರ್ಣಗೊಂಡ ಶ್ರೀ ರಾಮಾಯಣ ದರ್ಶನದ ನಾನಾ ಸ್ತ್ರೀ ಪಾತ್ರಗಳಲ್ಲಿ ತಮ್ಮ ಪ್ರೀತಿಯ ಸತಿಯ ಜೀವನ ವಿಕಾಸವನ್ನೂ, ಅವರ ಸಾಧನೆ ಸಿದ್ದಿಗಳನ್ನೂ, ಅವರ ಆಧ್ಯಾತ್ಮಿಕ ಪರಿಪೂರ್ಣತೆಯನ್ನೂ ಗುರುತಿಸುತ್ತಾರೆ. ಆ ಪಾತ್ರಗಳನ್ನು ಕಂಡರಿಸುವಲ್ಲಿ ಹೇಮಾವತಿಯವರ ಚಿತ್ರವೇ ಅವರ ಕಣ್ಮುಂದೆ ನಿಲ್ಲುತ್ತದೆ. ವಾಲ್ಮೀಕಿ ಸೃಷ್ಟಿಸಿದ ಪಾತ್ರಗಳ ಅಸ್ಥಿಪಂಜರದಲ್ಲಿ ಕುವೆಂಪು ತಮ್ಮ ಸತಿ ಸಾಧ್ವೀಮಣಿಯ ರೂಪ ಸ್ವರೂಪ, ಭಾವ ಸ್ವಭಾವ, ಗುಣ ಲಕ್ಷಣಗಳನ್ನು ತುಂಬುತ್ತಾರೆ. ಕೈಕೆ ಮೊದಲಾದವರನ್ನು ಹೇಮಾಂಗಿನಿಯರೆಂದು, ಪ್ರೇಮಪಕ್ಷಿಯ ಹೇಮಪಂಜರಗಳೆಂದು, ಹೇಮಸುಂದರ ಗಾತ್ರೆಯರೆಂದು ವರ್ಣಿಸುವಲ್ಲಿ ಅವರ ಲೇಖನಿ ಸೋಲುವುದಿಲ್ಲ... ಸ್ತ್ರೀಪಾತ್ರ ರಚನೆಯ ಸಮಯದಲ್ಲಿ ಕುವೆಂಪು ಅವರಿಗೆ ಪ್ರೇರಣೆ ನೀಡಿರುವ ಮತ್ತೊಂದು ವ್ಯಕ್ತಿಯೆಂದರೆ ಅವರ ತಾಯಿ ಸೀತಮ್ಮನವರು. ಸೀತಮ್ಮನವರೇ ವಸ್ತುವಾಗಿರುವ ಕೆಲವು ಕವನಗಳುಂಟಾದರೂ ನಾಗಮ್ಮ, ಶಬರಿ, ಕೌಸಲ್ಯೆಯರನ್ನು ಚಿತ್ರಿಸುವಾಗ ಅವರ ನೆನಪು ಅನಿವಾರ್ಯವಾಗಿ ಅವರ ಚಿತ್ಕೋಶವನ್ನು ಆವರಿಸಿಕೊಳ್ಳುತ್ತದೆ. ಶ್ರೀರಾಮ ವನವಾಸೋದ್ಯುಕ್ತನಾಗಿ ಕೌಸಲ್ಯೆಯಿಂದ ಬೀಳ್ಕೊಳ್ಳುವ ಸಂದರ್ಭದಲ್ಲಿ ತಾಯಿ ಸೀತಮ್ಮನ ಶೋಕವೆ ಕಾವ್ಯದಲ್ಲಿ ಉಕ್ಕಿ ಹರಿಯುವಂತೆ ಭಾಸವಾಗುತ್ತದೆ... ಲೋಕದ ಸರ್ವಸ್ತ್ರೀಯರಲ್ಲಿ ಮಾತೃತ್ವವನ್ನು ಮಾತ್ರ ಕಾಣುತ್ತಿದ್ದ ಶ್ರೀ ರಾಮಕೃಷ್ಣರ ದಿವ್ಯ ಪ್ರಭಾವವೂ ಕುವೆಂಪು ಅವರ ಈ ಮನೋಧರ್ಮವನ್ನು ರೂಪಿಸಿದೆ ಎಂದರೆ ತಪ್ಪಾಗದು. (2638–ಪುಟ: 87–89)

ಹೀಗೆ ಕುವೆಂಪು ಅವರ ಸ್ತ್ರೀಲೋಕ ಸೃಷ್ಟಿಯ ಹಿನ್ನೆಲೆಯಲ್ಲಿ ಯಾವ ಯಾವ ಸಂಗತಿಗಳು ಪ್ರೇರಣೆಯಾಗಿ ಒದಗಿರಬಹುದು ಎಂಬ ಜಿಜ್ಞಾಸೆಯು (ಸಂಶೋದನೆಯು) ಈ ವಿಮರ್ಶೆಯ ಒಂದು ವಿನ್ಯಾಸವಾಗಿದೆ. ಇಲ್ಲಿ ಪ್ರೇರಣೆಯ ಜಿಜ್ಞಾಸೆಯು ಪ್ರೇರಣೆಗಳ ಹುಡುಕಾಟಕ್ಕೆ ಮಾತ್ರವೆ ಸೀಮಿತಗೊಂಡಂತೆ ಕಾಣುತ್ತದೆಯಾದರೂ ಕವಿಯನ್ನು ಆತನ ನಿಲುವುಗಳ ಹೊಣೆಯಿಂದ ಬಿಡುಗಡೆಗೊಳಿಸುವ ಕೆಲಸವನ್ನು ಇದು ನಿರ್ವಹಿಸುವಂತೆ ಕಾಣುತ್ತದೆ.

ಲಿಂಗಾಧಾರಿತ ಶೋಷಣೆಯ ಮಾದರಿಗಳ ಅಧ್ಯಯನ ಈ ವಿಮರ್ಶೆಯ ಒಂದು ಮುಖ್ಯವಾದ ವಿನ್ಯಾಸ. ಕುವೆಂಪು ಅವರ ಸಾಹಿತ್ಯದ ಸ್ತ್ರೀಚಿತ್ರಗಳನ್ನು ಸಾಂಸ್ಕೃತಿಕ ಪ್ರತೀಕಗಳಂತೆ, ಸ್ತ್ರೀತ್ವದ ಪ್ರತೀಕಗಳಂತೆ ನೋಡುವ ಜೊತೆಗೆ ನಮ್ಮ ವಿಮರ್ಶೆಯು ಲಿಂಗಾಧಾರಿತ ಶೋಷಣೆಯ ಮಾದರಿಗಳ ಅಧ್ಯಯನದಂತೆಯೂ ನೋಡಿದೆ. 1. ಗಂಡಿನಿಂದ ಹೆಣ್ಣು ಜಾತಿ ವರ್ಗಗಳ ಭೇದವಿಲ್ಲದೆ ಸದಾ ಲಿಂಗಾಧಾರಿತ ಶೋಷಣೆಗೆ ಗುರಿಯಾಗುತ್ತಾಳೆ. 2. ಹೆಣ್ಣಿನಿಂದಲೂ ಹೆಣ್ಣು ಶೋಷಣೆಗೆ ಗುರಿಯಾಗುತ್ತಾಳೆ. 3. ಹೆಣ್ಣು ಶೋಷಣೆಯ ಪ್ರತೀಕ ಮಾತ್ರವಲ್ಲ ಶೋಷಣೆಯೆಂಬ ಪುರುಷ ಮೌಲ್ಯದ ನಿರಂತರ ವಾಹಕ ಆಗಿಯೂ ಇದ್ದಾಳೆ. 4. ಆರ್ಥಿಕ ಪರಾವಲಂಬಿತನವೇ ಶೋಷಣೆಯ ಮುಖ್ಯವಾದ ಕಾರಣ 5. ಹೆಣ್ಣುಗಳ ಪಲಾಯನವು ಪಾರಾಗುವ ಯತ್ನ ಮಾತ್ರ ಅಲ್ಲ. ಪ್ರತಿಭಟನೆಯ ರೂಪ ಕೂಡ ಹೌದು. 6. ಕಾದಂಬರಿಯಲ್ಲಿ ಹೆಣ್ಣು ಹಲವು ಕಡೆ ಮಾತೃವಾತ್ಸಲ್ಯದ ಪ್ರತೀಕವಾಗಿ ಬರುತ್ತಾಳೆ. ಆದರೆ ಪುರುಷರ ಮಾತೃಹೃದಯದ ಒಂದೇ ಒಂದು ಉದಾಹರಣೆಯೂ ಕಾದಂಬರಿಗಳಲ್ಲಿ ಇಲ್ಲ. ಹಾಗಾಗಿ ಇಲ್ಲಿನ ಸಂಸ್ಕೃತಿ ಜಿಜ್ಞಾಸೆ ಮರುಚರ್ಚೆಗೆ ಅರ್ಹ. ಇಂತಹ ಹಲವು ನಿಲುವುಗಳು ಈ ಹಿನ್ನೆಲೆಯಲ್ಲಿ ಪ್ರಕಟವಾಗಿವೆ. (459–ಪುಟ: 196–208) ಸ್ತ್ರೀವಾದಿ ವಿಮರ್ಶೆಯ ಒಂದು ಮುಖ್ಯವಾದ ಸಾಹಿತ್ಯ ಪರಿಶೀಲನೆಯ ದೃಷ್ಟಿಕೋನ ಎಂದರೆ ಲಿಂಗಾಧಾರಿತ ಶೋಷಣೆಯ ಪರಿಶೀಲನೆಯದ್ದು. ಲಿಂಗಾಧಾರಿತ ಶೋಷಣೆಯೇ ಸ್ತ್ರೀ ಪುರುಷರ ನಡುವಿನ ಅಸಮಾನ ಸಂಬಂಧಗಳ ಮೂಲ ಬೀಜ ಎಂದು ಈ ದೃಷ್ಟಿಯು ಭಾವಿಸುತ್ತದೆ. ಈ ಶೋಷಣೆಯ ಸ್ವರೂಪ ಕಾರಣಗಳ ಚರ್ಚೆಯೇ ಸಾಹಿತ್ಯದ ಪರಿಶೀಲನೆಯನ್ನು ಇಲ್ಲಿ ಬಹುವಾಗಿ ವ್ಯಾಪಿಸಿಕೊಂಡಿದೆ.

ಹೆಣ್ಣುತನ-ಗಂಡುತನ (ಸ್ತ್ರೀತ್ವ-ಪುರುಷತ್ವ)ಗಳ ಸ್ವರೂಪ ಮತ್ತು ಅದರ ಕುರಿತ ಬಗೆ ಬಗೆಯ ವಿನ್ಯಾಸಗಳನ್ನು ಕಂಡುಕೊಳ್ಳುವುದು ಮತ್ತು ಆ ಮೂಲಕ ಸಂಸ್ಕೃತಿಯ ಲಿಂಗರಾಜಕಾರಣವನ್ನು ಚರ್ಚಿಸುವುದು ಈ ವಿಮರ್ಶೆಯ ಇನ್ನೊಂದು ಕಾಳಜಿ. ಲಿಂಗಾಧಾರಿತ ಶೋಷಣೆಯನ್ನು ಪರಿಶೀಲಿಸುವ ವಿಮರ್ಶೆಯ ವಿಸ್ತರಣೆ ಎಂಬಂತೆ ಇದು ಸಂಭವಿಸಿದೆ. ಕಾದಂಬರಿ, ಮಹಾಕಾವ್ಯಗಳಲ್ಲಿ ಬರುವ ಪಾತ್ರಗಳ ಮೂಲಕ ಮತ್ತು ಕುವೆಂಪು ಅವರ ದಾಂಪತ್ಯ ಚಿತ್ರಗಳ ಮೂಲಕ ಈ ನೆಲೆಯಲ್ಲಿ ಪರಿಶೀಲನೆಗಳು ನಡೆದಿವೆ. ಗಂಡಿನಲ್ಲಿರುವ ಮಾತೃಹೃದಯ, ಹೆಣ್ಣುತನಗಳು, ಹೆಣ್ಣಿನಲ್ಲಿರುವ ಗಂಡುತನಗಳು, ಗಂಡು ಹೆಣ್ಣುಗಳಲ್ಲಿರುವ ಸಾಮರಸ್ಯ-ಸಹಬಾಳ್ವೆ, ಕೌಟುಂಬಿಕ ಸಂಬಂಧಗಳೆಲ್ಲ ಇಲ್ಲಿ ಚರ್ಚಿತವಾಗಿವೆ. ಈ ಚರ್ಚೆಗಳು ಅಂತಿಮವಾಗಿ ಸಾಮಾಜಿಕ ಮೌಲ್ಯ, ನೈತಿಕ ಜಿಜ್ಞಾಸೆಗಳಾಗಿ ಬೆಳೆದಿವೆ. ಮೌಲ್ಯಾನ್ವೇಷಕ ಪ್ರವೃತ್ತಿಯೇ ಇಂತಹ ಕಡೆ ವಿಮರ್ಶೆಗೆ ಪ್ರಾಪ್ತವಾಗಿದೆ.

ವರ್ಗವಿನ್ಯಾಸದ ಹಿನ್ನೆಲೆಯಲ್ಲಿ ಸ್ತ್ರೀ ಜಗತ್ತನ್ನು ಪರಿಶೀಲಿಸುವ ಮತ್ತು ಆ ಮೂಲಕ ತಮ್ಮದೇ ನಿಲುವುಗಳಿಗೆ ಬರುವ ಯತ್ನಗಳೂ ಇಲ್ಲಿವೆ. ಹೆಣ್ಣು ಯಾವುದೇ ಜಾತಿ-ವರ್ಗಕ್ಕೆ ಸೇರಿರಲಿ ಅವಳು ಅನುಭವಿಸುವ ನೋವಿನಲ್ಲಿ ಮತ್ತು ಈಡಾಗುವ ಶೋಷಣೆಯಲ್ಲಿ ಲಿಂಗರಾಜಕಾರಣವು ಇದ್ದೇ ಇರುತ್ತದೆ. ಎಲ್ಲಾ ವರ್ಣ-ವರ್ಗಗಳಲ್ಲೂ ಹೆಣ್ಣು ಶೋಷಿತಳೇ ಅಲಕ್ಷಿತಳೇ. ಲಿಂಗರಾಜಕಾರಣಕ್ಕೆ ಇಲ್ಲಿ ಭೇದವಿಲ್ಲ. ಈ ನೆಲೆಯಲ್ಲಿ ವರ್ಗದೃಷ್ಟಿಯಲ್ಲಿ ವಿಮರ್ಶೆಯು ಕೆಲಸ ಮಾಡಿದೆ. (1082-ಪುಟ: 126) ಹೀಗಾಗಿ ಶೋಷಿತ ವರ್ಗವಾಗಿ ಸ್ತ್ರೀ ಜಗತ್ತನ್ನು ನೋಡುವ; ಬ್ರಾಹ್ಮಣ ಮತ್ತು ಶೂದ್ರ ಹಾಗೂ ದಲಿತ ಹೆಣ್ಣುಗಳಲ್ಲಿನ ಸ್ಥಿತಿಗತಿಗಳ ವ್ಯತ್ಯಾಸಗಳನ್ನು ತೌಲನಿಕವಾಗಿ ಗಮನಿಸುವ ಯತ್ನಗಳು ಇಲ್ಲಿ ನಡೆದಿವೆ. ಕುವೆಂಪು ಸ್ತ್ರೀ ಪಾತ್ರಗಳನ್ನು ಮನೋವೈಜ್ಞಾನಿಕ ಹಿನ್ನೆಲೆಯಿಂದಲೂ ಇಲ್ಲಿ ಪರಿಶೀಲಿಸಲಾಗಿದೆ. (534) ಪಾತ್ರ ಚಿತ್ರಣದ ಹಿಂದೆ ಕುವೆಂಪು ಅವರಲ್ಲಿ ಕೆಲಸ ಮಾಡಿರಬಹುದಾದ ತತ್ವವು ಮನೋವೈಜ್ಞಾನಿಕ ತತ್ವ ಎಂಬ ತಿಳುವಳಿಕೆ ಇಲ್ಲಿ ಇದೆ. ಇದು ಒಂದು ರೀತಿಯಲ್ಲಿ ಪ್ರೇರಣೆಯ ಅನ್ವೇಷಣೆಯೇ ಆಗಿದೆ. ಅಲ್ಲದೆ ಮಾನವತಾ ಸಿದ್ಧಾಂತದ ಹಿನ್ನೆಲೆಯಲ್ಲೂ ಸ್ತ್ರೀ ಜಗತ್ತನ್ನು ನೋಡಲಾಗಿದೆ. ಮಾನವತಾವಾದವು ಸ್ತ್ರೀ ಜಗತ್ತಿನ ಮೂಲಕ ಪ್ರಕಟವಾಗಿದೆ ಎಂಬ ನಿಲುವಿಗೆ ಇಲ್ಲಿ ಬರಲಾಗಿದೆ. (2437) ಈ ನೆಲೆಗಳಲ್ಲಿ ಉದಾರ ಮಾನವತಾವಾದಿ ದೃಷ್ಟಿಯಿಂದ, ಮಾರ್ಕ್ಸ್‌ವಾದಿ ದೃಷ್ಟಿಯಿಂದ, ಮನೋವಿಜ್ಞಾನದ ದೃಷ್ಟಿಯಿಂದ ಕುವೆಂಪು ಸ್ತ್ರೀ ದೃಷ್ಟಿಯನ್ನು ಪರಿಶೀಲಿಸಿ ವ್ಯಾಖ್ಯಾನಿಸುವ ಯತ್ನಗಳು ಈ ವಿಮರ್ಶೆಯಲ್ಲಿ ನಡೆದಿವೆ. ಅನ್ಯದೃಷ್ಟಿಯ ಅನುಸಂಧಾನ ಎಂದು ಇದನ್ನು ಕರೆಯಬಹುದು.

ಸ್ತ್ರೀ ದೃಷ್ಟಿಯ ಇನ್ನೊಂದು ವಲಯವೆಂದರೆ ಮಾತೃಕಲ್ಪನೆಯ ವಲಯ. ಮಾತೃತ್ವ ಕಲ್ಪನೆಯಲ್ಲಿ ಭೂಮಿ, ನಿಸರ್ಗ, ಭಾಷೆ, ನಾಡು, ಪತ್ನಿ ಹೀಗೆ ಹಲವು ನೆಲೆಗಳನ್ನು ಕುವೆಂಪು ಮಾತೃಸಮಾನವಾಗಿ ಕಲ್ಪಿಸಿಕೊಳ್ಳುವುದನ್ನು ನಿದರ್ಶನವಾಗಿ ಬಳಸಿ ಇದನ್ನು ಅವರ ಪ್ರಧಾನ ಸ್ತ್ರೀದೃಷ್ಟಿ ಎನ್ನಲಾಗಿದೆ. (749-ಪುಟ: 88) ರಾಷ್ಟ್ರೀಯತೆಯ ರೂಪಕವಾಗಿ, ವಸಾಹತು ವಿರೋಧಿ ಪರಿಕಲ್ಪನೆಯಾಗಿ, ಪಶ್ಚಿಮದ ಪಿತೃಕಲ್ಪನೆಗೆ ಎದುರಾಳಿ ಕಲ್ಪನೆಯಾಗಿ, ಸಾಂಸ್ಕೃತಿಕ ಏಕತೆಯ ಪ್ರತೀಕವಾಗಿ, ಮಾತೃ ಆರಾಧಕ ಸಂಸ್ಕೃತಿಯ ಸಂಕೇತವಾಗಿ ಹೀಗೆ ಹಲವು ನೆಲೆಗಳಲ್ಲಿ ಮಾತೃಕಲ್ಪನೆಯು ಬಳಕೆಯಾಗಿದೆ ಎಂದು ವ್ಯಾಖ್ಯಾನಿಸಲಾಗಿದೆ. ಹೀಗೆ ನಮ್ಮ ವಿಮರ್ಶೆಯು ಒಳನೋಟವಾದಿ ಮಾದರಿಯನ್ನು ಆಗಾಗ ತಾಳುತ್ತದೆ. ಒಳನೋಟವಾದಿ ಮಾದರಿ ನಮ್ಮ ವಿಮರ್ಶೆಯ ಹಲವು ಚಹರೆಗಳಲ್ಲಿ ಒಂದು.

ಕುವೆಂಪು ಸ್ತ್ರೀದೃಷ್ಟಿಗಳನ್ನು ಪರಿಶೀಲಿಸುವಾಗ ಅವರ ಮಾತೃದೃಷ್ಟಿಯ ಜೊತೆಗೆ ಶೀಲದ ಕಲ್ಪನೆಯನ್ನೂ ಮುಖ್ಯವಾಗಿ ಚರ್ಚಿಸಲಾಗಿದೆ. 1. ಶೌಚ-ಶೀಲ ಎನ್ನುವುದು ಕೇವಲ ಹೆಣ್ಣಿಗೆ ಮಾತ್ರ ಅನ್ವಯಿಸುವ ಮೌಲ್ಯ ಅಲ್ಲ. ಅದು ಗಂಡಿಗೂ ಕೂಡ ಅನ್ವಯಿಸುವ ಮೌಲ್ಯ. 2. ಶೀಲವು ಕೇವಲ ದೇಹದ ವಿಚಾರ ಅಲ್ಲ. ಅದು ಮನಸ್ಸಿನ ವಿಚಾರವೂ ಹೌದು ಎಂದು ಕುವೆಂಪು ನಂಬಿ ಪ್ರತಿಪಾದಿಸಿದ್ದಾರೆ ಎಂಬ ನಿಲುವುಗಳಿಗೆ ಇಲ್ಲಿ ಬರಲಾಗಿದೆ. ಲೇಖಕರ ನಿಲುವುಗಳನ್ನು ಕಂಡುಕೊಳ್ಳುವುದು ಮತ್ತು ಆ ನಿಲುವುಗಳ ಬಗ್ಗೆ ತಮ್ಮ ನಿಲುವುಗಳನ್ನು ಎದುರು ನಿಲ್ಲಿಸುವುದು ನಮ್ಮ ವಿಮರ್ಶೆಯ ಒಂದು ಪ್ರವೃತ್ತಿಯಾಗಿದೆ. ಇಲ್ಲೆಲ್ಲ ಸಾಮಾಜಿಕ ಮೌಲ್ಯಗಳನ್ನು ಅನ್ವೇಷಿಸುವುದು; ಮಾನವ ನಡಾವಳಿಗಳ ಬಗೆಗಿನ ಲೇಖಕನ ನಿಲುವುಗಳನ್ನು ಅನ್ವೇಷಿಸುವುದು; ಈ ಅನ್ವೇಷಣೆಗೆ ಸಾಹಿತ್ಯವನ್ನು ಆಕರವನ್ನಾಗಿ ಬಳಸುವುದು; (ಕೆಲವೊಮ್ಮೆ ಲೇಖಕನ ಬದುಕನ್ನೂ ಆಕರವನ್ನಾಗಿ ಬಳಸುವುದು) ಆ ಮೂಲಕ ಆತನನ್ನು ಮೌಲ್ಯಮಾಪನಕ್ಕೆ ಗುರಿಮಾಡುವುದು ನಮ್ಮ ವಿಮರ್ಶೆಯ ಒಂದು ವಿನ್ಯಾಸವಾಗಿದೆ.

ದಾಂಪತ್ಯ ಜಿಜ್ಞಾಸೆ ಸ್ತ್ರೀದೃಷ್ಟಿಯ ಇನ್ನೊಂದು ಮುಖ್ಯ ವಲಯ. ದಾಂಪತ್ಯ-ಸಂಸಾರ ಚಿತ್ರಗಳಲ್ಲಿ ಕುವೆಂಪು ವಾಸ್ತವವಾದಿ ಲೌಕಿಕವನ್ನು ಆದರ್ಶವಾದಿ ನೆಲೆಯಲ್ಲಿ ಚಿತ್ರಿಸುತ್ತಾರೆ; ದೈಹಿಕ-ಐಹಿಕ ವಾಸ್ತವವನ್ನು ಆಧ್ಯಾತ್ಮ ಸಾಧನೆಯ ಅವಕಾಶವೆಂದು; ಯೋಗವೆಂದು ಭಾವಿಸುತ್ತಾರೆ. ಕುವೆಂಪು ಅವರಲ್ಲಿ ಲೌಕಿಕ ಸಂಸಾರ ಆಧ್ಯಾತ್ಮ ಸಾಧನೆಯ ಒಂದು ಭಂಗಿ ಎಂದು ವ್ಯಾಖ್ಯಾನಿಸಲಾಗಿದೆ. ಅದ್ವೈತ ತತ್ವವೇ ಕುವೆಂಪು ಅವರ ದಾಂಪತ್ಯ ದರ್ಶನದಲ್ಲೂ ಮೂಡಿ ಬಂದಿದೆ, ದಾಂಪತ್ಯವು ಜನ್ಮಾಂತರ ಮೈತ್ರಿಯೆಂದು ಇವರು ಭಾವಿಸುತ್ತಾರೆ ಎಂದೂ ಇಲ್ಲಿ ವ್ಯಾಖ್ಯಾನಿಸಲಾಗಿದೆ. ಸ್ತ್ರೀವಾದಿ ವಿಮರ್ಶೆಯು ಹೀಗೆ ಕವಿಯ ದೃಷ್ಟಿಯನ್ನು ವ್ಯಾಖ್ಯಾನಿಸುವ-ನಿರ್ವಚಿಸುವ ಕೆಲಸವನ್ನೂ ಮಾಡುತ್ತ ಬಂದಿದೆ. ಹಾಗಾಗಿ ಕವಿದೃಷ್ಟಿಯ ನಿರ್ವಚನ ಮತ್ತು ವ್ಯಾಖ್ಯಾನವು ನಮ್ಮ ವಿಮರ್ಶೆಯ ಒಂದು ಚಹರೆ ಎಂದೇ ಹೇಳಬಹುದು. ಈ ನಿರ್ವಚನವು ಕೃತಿಯ ಆಶಯಗಳನ್ನೆ; ಪಾತ್ರ ಪ್ರಸಂಗಗಳ ಆಶಯಗಳನ್ನೇ ಲೇಖಕನ ದೃಷ್ಟಿಗಳೆಂದು ಕೆಲವೆಡೆ ವ್ಯಾಖ್ಯಾನಿಸುತ್ತದೆ ಕೂಡ. (482)

ಸಮನ್ವಯ, ಸರ್ವೋದಯ, ಪೂರ್ಣದೃಷ್ಟಿ, ಸಮಾನತೆ ಇತ್ಯಾದಿ ಕುವೆಂಪು ತತ್ವ ದರ್ಶನಗಳು ಸಮಾಜಿಕ ನ್ಯಾಯದ ಪ್ರತಿಪಾದನೆಗಾಗಿಯೇ ಹುಟ್ಟಿವೆ. ಇವುಗಳ ಅಂಗವಾಗಿಯೇ ಸಾಹಿತ್ಯ ರಚನೆಯಾಗಿದೆ. ಕಾವ್ಯನ್ಯಾಯಕ್ಕಾಗಿ ಸಾಹಿತ್ಯ ರಚನೆಯಾಗಿಲ್ಲ. ಆದ್ದರಿಂದ ಸ್ತ್ರೀ ಚಿತ್ರಣ ಕೂಡ ಸಾಮಾಜಿಕ ನ್ಯಾಯದ ವಿಸ್ತರಣೆಯೇ ಆಗಿದೆ ಎಂಬ ದೃಷ್ಟಿಯೂ ಇಲ್ಲಿ ಇದೆ. ಹೀಗಾಗಿ ಹೆಣ್ಣನ್ನು ಗಂಡುಲೋಕ ಮತ್ತು ಒಟ್ಟಾರೆ ಸಮಾಜ ನೋಡುತ್ತ ಬಂದಿರುವ ಚಾರಿತ್ರಿಕ ವಾಸ್ತವದ ಪ್ರತಿನಿಧೀಕರಣವೆಂಬಂತೆ ಹಾಗೂ ನೋಡಬೇಕಾಗಿರುವ ಮಾರ್ಗಸೂಚಿ ಎಂಬಂತೆ ಸಾಹಿತ್ಯವನ್ನು ಈ ದೃಷ್ಟಿಯು ಭಾವಿಸಿದೆ. (1082-ಪುಟ: 134)

ಸಮಾಜದಲ್ಲಿ ಗಂಡು ಮತ್ತು ಹೆಣ್ಣು ಎಂಬ ಎರಡೇ ವರ್ಗ ಮಾತ್ರ ಇಲ್ಲ. ಅದರಾಚೆಗೂ ಲೋಕ ಇದೆ. ಇಲ್ಲಿ ಅಪಾರವಾದ ಜೀವವೈವಿಧ್ಯವಿದೆ. ನಿಸರ್ಗವಿದೆ. ಸಾಹಿತ್ಯದ ಬೇರೆ ಬೇರೆ ಅಂಗಗಳಾದ ವೈಚಾರಿಕತೆ, ಮೀಮಾಂಸೆ, ಭಾಷೆ, ಛಂದಸ್ಸು, ಲೀಂಗೇತರ ಸಂಗತಿಗಳು ಇವೆ. ಆದರೆ ನಮ್ಮ ಸ್ತ್ರೀವಾದವು ಈ ಆಯಾಮಗಳ ಕಡೆ ಅಷ್ಟಾಗಿ ಚಾಚಿಕೊಂಡಿಲ್ಲ. ಅಲ್ಪ ಸ್ವಲ್ಪ ನಿಸರ್ಗ ಚಿತ್ರಗಳ ತಾಯ್ತನ-ದೈವೀಕರಣ, ನಾಡು ನುಡಿಯ ಮಾತೃಕಲ್ಪನೆ ಬಗೆಗೆ ಸ್ವಲ್ಪ ಚರ್ಚೆ ನಡೆದಿದೆ. ಬಿಟ್ಟರೆ ಮಿಕ್ಕಂತೆ ಸ್ತ್ರೀವಾದವು ಲಿಂಗಕೇಂದ್ರಿತ ಇಲ್ಲವೆ ಪಾತ್ರಕೇಂದ್ರಿತವಾಗಿಯೇ ಇದೆ.

ಇಲ್ಲಿನ ಬಹುಪಾಲು ಬರವಣಿಗೆಯಲ್ಲಿ ಅ) ಸಾಹಿತ್ಯದಲ್ಲಿನ ಸ್ತ್ರೀ ದೃಷ್ಟಿಗಳನ್ನು ಕಂಡುಕೊಳ್ಳುವ; ಆ) ಸ್ತ್ರೀ ಸಂವೇದನೆ-ನಿಲುವುಗಳಿಗೆ ಲೇಖಕನನ್ನೇ ಹೊಣೆಗಾರನನ್ನಾಗಿ ಮಾಡುವ ಮತ್ತು ಲೇಖಕನನ್ನು ಮಾತ್ರವೇ ಹೊಣೆಗಾರನೆಂದು ಭಾವಿಸದೆ ಚಾರಿತ್ರಿಕ ಸಂದರ್ಭವನ್ನು ಹೊಣೆಯಾಗಿಸುವ; ಪ್ರೇರಣೆ-ಕಾರಣಗಳನ್ನು ಅನ್ವೇಷಿಸುವ; ಇ) ಮಾನವತಾವಾದ, ಮನಶ್ಶಾಸ್ತ್ರ, ಮಾರ್ಕ್ಸ್‌ವಾದ, ಅಲಕ್ಷಿತ ನೆಲೆ, ತೌಲನಿಕತೆ ಹೀಗೆ ಅನ್ಯದೃಷ್ಟಿಗಳಿಂದ ಸ್ತ್ರೀ ಜಗತ್ತನ್ನು ಪರಿಶೀಲಿಸುವ; ಈ) ಸ್ತ್ರೀತ್ವದ ಸಾಹಿತ್ಯ ಪ್ರತೀಕಗಳಿಗೆ ತಮ್ಮದೇ ನಿಲುವುಗಳನ್ನು ಎದುರು ನಿಲ್ಲಿಸುವ; ಉ) ಮಹಿಳಾ ಓದು-ಸ್ತ್ರೀವಾದವನ್ನು ನಿರ್ವಚಿಸುವ, ಪ್ರಯೋಗಿಸುವ; ಊ) ಲಿಂಗ ಸಮಾನತೆಯನ್ನು ಪ್ರತಿಪಾದಿಸುವ, ಸ್ತ್ರೀ ಶೋಷಣೆಯನ್ನು ಪ್ರತಿರೋಧಿಸುವ; ಋ) ಸಾಮಾಜಿಕ ನ್ಯಾಯದ ವಿಸ್ತರಣೆಯಾಗಿ ಸ್ತ್ರೀವಾದಿ ವಿಮರ್ಶೆಯನ್ನು ಭಾವಿಸುವ; ಎ) ಹೆಣ್ಣಿಗೆ ಸಮಾನ ಅವಕಾಶ, ಸಮಾನ ಗೌರವ, ಆಯ್ಕೆಯ ಸ್ವಾತಂತ್ರ್ಯಗಳು ಇರಬೇಕೆಂದು ಪ್ರತಿಪಾದಿಸುವ ಏ) ಲಿಂಗಾಧಾರಿತ ಶೋಷಣೆಯ ಎಲ್ಲ ಆಯಾಮಗಳನ್ನೂ ಪ್ರತಿರೋಧಿಸುವ; ಈ) ಒಟ್ಟಾರೆ ಸಾಹಿತ್ಯವನ್ನು ಸ್ತ್ರೀ ಸಂಕಥನವಾಗಿ ನೋಡುವ; ಹೀಗೆ ಹತ್ತು ಹಲವು ನಿಲುವು-ನೆಲೆಗಳಲ್ಲಿ ಸ್ತ್ರೀ ದೃಷ್ಟಿಯು ಸಂಕಥನಗೊಂಡಿದೆ.

**5.1.8. ಇತರೆ ದೃಷ್ಟಿಗಳು**

ಇದುವರೆಗೆ ವಿವರಿಸುವ ದೃಷ್ಟಿಗಳಲ್ಲದೆ ಇಲ್ಲಿ ಪ್ರಕಾರದೃಷ್ಟಿ, ಕೃತಿ ಕೇಂದ್ರಿತ ದೃಷ್ಟಿ, ವ್ಯಕ್ತಿದೃಷ್ಟಿ ಅಥವಾ ಲೇಖಕ ಕೇಂದ್ರಿತ ದೃಷ್ಟಿ, ಪಾತ್ರದೃಷ್ಟಿ, ಪರಂಪರೆದೃಷ್ಟಿ, ಸಂವೇದನಾ ಕೇಂದ್ರಿತ ದೃಷ್ಟಿ, ಚಳುವಳಿದೃಷ್ಟಿ, ಪ್ರಶಸ್ತಿದೃಷ್ಟಿ, ಪ್ರಾದೇಶಿಕದೃಷ್ಟಿ, ವಸಾಹತು ವಿರೋಧಿ ದೃಷ್ಟಿ ಹೀಗೆ ಇನ್ನೂ ಹಲವಾರು ದೃಷ್ಟಿಗಳಿವೆ. ಇವುಗಳೆಲ್ಲವು ಅತಿ ಹೆಚ್ಚು ಬಳಕೆಯಾಗಿರುವ ದೃಷ್ಟಿಗಳು ಎಂದರೆ ಪ್ರಕಾರದೃಷ್ಟಿ ಮತ್ತು ಕೃತಿದೃಷ್ಟಿಗಳು ಕುವೆಂಪು ಕುರಿತು ಬಂದಿರುವ ವಿಮರ್ಶೆಯು ಬಹುಪಾಲು ಈ ದೃಷ್ಟಿಗಳಲ್ಲೇ ಬಂದಿದೆ. ಕೃತಿ ಕೇಂದ್ರಿತವಾಗಿ ನೋಡಲಿ, ಪಾತ್ರ ಕೇಂದ್ರಿತವಾಗಿ ನೋಡಲಿ, ಪ್ರಕಾರ ಕೇಂದ್ರಿತವಾಗಿ ನೋಡಲಿ ಹೇಗೇ ನೋಡಿದರೂ

ಇಲ್ಲಿನ ವಿಮರ್ಶೆಯೆಲ್ಲವೂ ವಿಮರ್ಶೆಯ ವ್ಯಾಪ್ತಿಗೆ ಸಂಬಂಧಿಸಿದ ವಿಚಾರ ಮಾತ್ರ. ಚರ್ಚೆಗೆ ಯಾವುದನ್ನು ಮತ್ತು ಎಷ್ಟನ್ನು ಎತ್ತಿಕೊಳ್ಳಬೇಕು ಎಂಬ ಸಂಗತಿಗಳೇ ಇಲ್ಲಿ ಪ್ರಧಾನವಾಗಿರುತ್ತವೆ, ಹೆಚ್ಚೆಂದರೆ ಪ್ರಕಾರ ಮೀಮಾಂಸೆ, ಪಾತ್ರ ಚಿತ್ರಣ ಕ್ರಮ, ಕೃತಿನಿರ್ಮಾಣ ಕ್ರಮಗಳು ಚರ್ಚೆಯ ಗಮನ ಸೆಳೆದುಕೊಳ್ಳಬಹುದು. ಅದು ಬಿಟ್ಟರೆ ಮಿಕ್ಕಂತೆ ಈ ದೃಷ್ಟಿಯ ವಿಮರ್ಶೆಗಳೆಲ್ಲವೂ ಇತರ ಕೆಟಗರಿಗಳ ಒಳಗೆ ಒಂದಲ್ಲ ಒಂದು ಕಡೆ ಬಂದೇ ಬರುತ್ತವೆ. ಹಾಗಾಗಿ ಇವುಗಳನ್ನು ಪ್ರತ್ಯೇಕವಾಗಿ ಚರ್ಚಿಸಿಲ್ಲ.

ಲೇಖಕ ಕೇಂದ್ರಿತ ದೃಷ್ಟಿಯಲ್ಲಿ ಕುವೆಂಪು ಅವರ ಮಲೆಗಳಲ್ಲಿ ಮದುಮಗಳು, ಕುವೆಂಪು ಅವರ ಶ್ರೀರಾಮಾಯಣ ದರ್ಶನಂ, ಕುವೆಂಪು ಅವರ ವೈಚಾರಿಕತೆ. ಕುವೆಂಪು ಮತ್ತು ಬೇಂದ್ರೆ, ಕುವೆಂಪು ಮತ್ತು ಕಾರಂತ, ನಡೆದಾಡುವ ಮಲೆನಾಡು ಕುವೆಂಪು ಇಂತಹ ಕಡೆಗಳಲ್ಲಿ ಕುವೆಂಪು ಅವರ ಲೇಖಕತನವನ್ನು ಒಪ್ಪಿಕೊಳ್ಳುವ ಮತ್ತು ವಿಮರ್ಶೆಯ ನಿರ್ಣಯಗಳಿಗೆ ಲೇಖಕನನ್ನು ಹೊಣೆ ಮಾಡುವ ಪ್ರವೃತ್ತಿ ಕಂಡು ಬರುತ್ತದೆ. ಲೇಖಕನನ್ನು ಸಂತನನ್ನಾಗಿ ನೋಡುವ ಇಲ್ಲವೆ ತಪ್ಪಿತಸ್ಥನನ್ನಾಗಿಸಿ ಕಟಕಟೆಯಲ್ಲಿ ನಿಲ್ಲಿಸುವ; ಅನ್ಯರೊಂದಿಗೆ ತುಲನೆಮಾಡಿ ತರತಮ ಸ್ಥಾನೀಕರಣ ಮಾಡುವ ಹೀಗೆ ಹಲವು ಪ್ರವೃತ್ತಿಗಳು ಈ ದೃಷ್ಟಿಯಲ್ಲಿ ಕಂಡು ಬರುತ್ತವೆ. ಪ್ರಾದೇಶಿಕ ದೃಷ್ಟಿಯಲ್ಲಿ ಪ್ರಾದೇಶಿಕ ಸಂಸ್ಕೃತಿ-ಚರಿತ್ರೆ-ಕಾಲಧರ್ಮಗಳೊಂದಿಗೆ ಲೇಖಕನನ್ನು ತೌಲನಿಕವಾಗಿ ನೋಡುವ, ಪ್ರೇರಣೆ-ಪ್ರಭಾವಗಳನ್ನು ಅನ್ವೇಷಿಸುವ ವಿನ್ಯಾಸಗಳಿವೆ. ಲೇಖಕ ಮತ್ತು ಪ್ರದೇಶಗಳ ನಡುವಿನ ಸಂಬಂಧವನ್ನು ಜನ್ಯ-ಜನಕವೆಂಬಂತೆ ನೋಡುವ; ಸಮಾಜ ಮತ್ತು ಸಾಹಿತ್ಯದ ಸಂಬಂಧವನ್ನು ಬಿಂಬ-ಪ್ರತಿಬಿಂಬದಂತೆ ನೋಡುವ ಪ್ರವೃತ್ತಿ ಸಾಮಾನ್ಯವಾಗಿ ಇಲ್ಲಿ ಇರುತ್ತದೆ.

ಪ್ರಶಸ್ತಿ, ಬಹುಮಾನ, ಪದವಿಗಳು ಬಂದಾಗ ವ್ಯಕ್ತಿತ್ವ ಮತ್ತು ಸಾಹಿತ್ಯವನ್ನು ಪರಿಶೀಲಿಸಿ ಕೊಂಡಾಡುವ ಪ್ರಶಸ್ತಿ ದೃಷ್ಟಿಯ ವಿಮರ್ಶೆಯೂ ಸಾಕಷ್ಟು ನಮ್ಮಲ್ಲಿ ಸೃಷ್ಟಿಯಾಗಿದೆ. ಇಲ್ಲೆಲ್ಲ ಗುಣಗ್ರಹಣ, ಗುಣಗಾನ ಧಾಟಿಯಲ್ಲಿಯೇ ವಿಮರ್ಶೆಯು ಸೃಷ್ಟಿಯಾಗಿದೆ. ಜ್ಞಾನಪೀಠ ಪ್ರಶಸ್ತಿ ವಿಜೇತ ಕುವೆಂಪು, ಕುಲಪತಿಯಾಗಿ ಕುವೆಂಪು, ಅಸಮಾನತೆಯ ವಿರುದ್ಧದ ಅಪ್ರತಿಮ ಸೇನಾನಿ ಕುವೆಂಪು ಎಂಬಿತ್ಯಾದಿ ಮಾದರಿಯ ವಿಮರ್ಶೆಗಳು ಇಂತಹ ಸಂದರ್ಭಗಳಲ್ಲಿ ಸೃಷ್ಟಿಯಾಗಿವೆ. ಸಾಂದರ್ಭಿಕತೆಯ ಮತ್ತು ಸಂಬಂಧಿಕತೆಯ ರಾಜಕಾರಣದಿಂದ ರೂಪಿತವಾಗಿರುವ ಇಂತಹ ವಿಮರ್ಶೆಗಳೂ ಕೂಡ ನಮ್ಮ ವಿಮರ್ಶೆಯ ರೂಪಗಳೇ ಆಗಿವೆ.

ಚಳುವಳಿ ದೃಷ್ಟಿಯ ವಿಮರ್ಶೆಯಲ್ಲಿ ನವೋದಯ, ನವ್ಯ ಮತ್ತು ಬಂಡಾಯ ಎಂಬ ಮೂರು ಸಾಹಿತ್ಯ ಘಟ್ಟಗಳ ಹಿನ್ನೆಲೆಯಲ್ಲಿ ಕುವೆಂಪುವನ್ನು ವಿಮರ್ಶಿಸಲಾಗಿದೆ. ಕುವೆಂಪು ವಿಮರ್ಶೆ ಮತ್ತು ವಿವಿಮರ್ಶೆಯಲ್ಲಿ ಆಪ್ತವಲಯ, ನವ್ಯವಲಯ, ನಿರ್ಲಿಪ್ತವಲಯ ಎಂಬ ಮೂರು ವಲಯಗಳೇ ಈ ಹಿನ್ನೆಲೆಯಲ್ಲಿ ನಿರ್ಮಾಣವಾಗಿವೆ. ಹಾಗೆ ನೋಡಿದರೆ ನವ್ಯ ವಲಯವು ಶುದ್ಧಾಂಗವಾಗಿ ನವ್ಯ ವಲಯ ಅಲ್ಲ. ಅಲ್ಲಿ ಅಡಿಗರ ಆಪ್ತರು ಮತ್ತು ಬೇಂದ್ರೆ ಆಪ್ತರು ಇಬ್ಬರೂ ಇದ್ದಾರೆ. ಹಾಗಾಗಿ ಇವನ್ನು ಕುವೆಂಪು ವಲಯ, ಬೇಂದ್ರೆ-ಅಡಿಗರ ವಲಯ, ಅನ್ಯವಲಯ ಎಂದು ಕರೆಯುವುದೇ ಹೆಚ್ಚು ಸೂಕ್ತವಾದುದು. ಬೇಂದ್ರೆ-ಅಡಿಗರ ವಲಯದವರು ಸೌಂದರ್ಯಾತ್ಮಕ ದೃಷ್ಟಿ; ಕಾವ್ಯ ಕಟ್ಟಾಣಿಕೆ; ಕಾದಂಬರಿ ಕಟ್ಟಾಣಿಕೆ ದೃಷ್ಟಿಗಳಿಂದ ಕುವೆಂಪುವನ್ನು  ಟೀಕಿಸಿದ್ದಾರೆ. ಬೇಂದ್ರೆ-ಅಡಿಗರ ವಲಯದವರ ಬಹುಪಾಲು ವಿಮರ್ಶೆಯು ರೂಪನಿಷ್ಠವಾದುದಾಗಿದೆ. ಅಡಿಗರ ಆಪ್ತರು ನವೋದಯ ಮತ್ತು ನವ್ಯ ಎಂಬ ಎರಡು ಸಾಹಿತ್ಯ ಸಂವೇದನೆಗಳನ್ನು ಅವಳಿ ವೈರುದ್ಯಗಳಂತೆ ಭಾವಿಸಿ ನವ್ಯದ ಪರವಹಿಸಿ ನವೋದಯದ ಹಿನ್ನೆಲೆಯಿಂದ ಕುವೆಂಪುವನ್ನು ಟೀಕಿಸಿದ್ದಾರೆ. ಕೆಲವರು ಬಂಡಾಯದ ದೃಷ್ಟಿಯಿಂದ ಕುವೆಂಪುವನ್ನು ಅಪ್ಪಟ ಬಂಡಾಯಗಾರ/ಬಂಡಾಯ ಕವಿ ಎಂದು ಕರೆದಿದ್ದಾರೆ. ಸಾಹಿತ್ಯ ಚಳುವಳಿಗಳನ್ನು ಸಾಹಿತ್ಯ ಸಂವೇದನೆಗಳೆಂದು ತಿಳಿದು ಒಟ್ಟಾರೆಯಾಗಿ ನವ್ಯ-ಬಂಡಾಯಗಳು ನವೋದಯವನ್ನು (ಕುವೆಂಪುವನ್ನು) ಹೇಳದಿರುವುದೇ ಹೆಚ್ಚು. 80ರ ದಶಕದ ನಂತರದಲ್ಲಿ ಈ ಚಳುವಳಿ ದೃಷ್ಟಿಯ ದಾಳಿಯು ಬದಲಾಗಿ ಕುವೆಂಪುವನ್ನು ಬೇರೆ ದೃಷ್ಟಿಗಳಿಂದ ನೋಡುವ ಪರಿಪಾಟ ನಮ್ಮಲ್ಲಿ ಬೆಳೆದಿದೆ.

ರಾಷ್ಟ್ರೀಯತೆಯ ದೃಷ್ಟಿಯಿಂದ, ವಸಾಹತು ವಿರೋಧಿ ಸಂವೇದನೆಯ ಹಿನ್ನೆಲೆಯಿಂದ, ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ, ಪರಂಪರೆಯ ಪರಿಷ್ಕರಣೆಯ ದೃಷ್ಟಿಯಿಂದ ಪ್ರಸ್ತುತತೆಯ ದೃಷ್ಟಿಯಿಂದ ಕುವೆಂಪುವನ್ನು ವಿಮರ್ಶಿಸಿರುವ ಯತ್ನಗಳೂ ನಮ್ಮಲ್ಲಿವೆ. ಇಲ್ಲೆಲ್ಲ ಕುವೆಂಪು ದೃಷ್ಟಿ ಧೋರಣೆ, ವಿಚಾರ ದರ್ಶನಗಳು

ಸಾಮಾಜಿಕ ಅನ್ವಯಿಕತೆ; ಪ್ರಸ್ತುತತೆಗಳ ಪರೀಕ್ಷೆಗಳಿಗೆ ಗುರಿಯಾಗಿವೆ. ಕುವೆಂಪು ಸಾಹಿತ್ಯವನ್ನು ಇಲ್ಲೆಲ್ಲ ಭಿನ್ನ ದೃಷ್ಟಿಕೋನಗಳಿಂದ ಬೆಲೆಕಟ್ಟುವ ಯತ್ನಗಳು ನಡೆದಿವೆ. ಸಾಹಿತ್ಯದ ಅನುಸಂಧಾನಗಳು ಸಾಹಿತ್ಯದಿಂದ ನಾವು ಬದುಕುವ-ಬಾಳುವ ಮಾರ್ಗಗಳನ್ನು ಕಂಡುಕೊಳ್ಳುವ ಯತ್ನಗಳಾಗಿ ಇಲ್ಲೆಲ್ಲ ಬೆಳೆದಿವೆ. ಕುವೆಂಪುವನ್ನು ಮತ್ತಷ್ಟು ವರ್ತಮಾನೀಕರಿಸುವ; ಜಾಗತೀಕರಣ-ಇಂಗ್ಲಿಷ್ ಶಿಕ್ಷಣ ಇತ್ಯಾದಿ ಹಿನ್ನೆಲೆಯಲ್ಲಿ ಪ್ರಸ್ತುತವೇ ಎಂದು ಪರೀಕ್ಷಿಸುವ ಯತ್ನಗಳಾಗಿ ಬೆಳೆದಿವೆ.

### 5.2. ವಿಮರ್ಶೆಯ ರೂಪಗಳು

#### 5.2.1. ಅಧ್ಯಯನ ರೂಪಿ ವಿಮರ್ಶೆ

ನಮ್ಮಲ್ಲಿನ ಲೇಖನ ರೂಪದ ವಿಮರ್ಶೆಯು ಬಹುಪಾಲು ಸಾಂದರ್ಭಿಕತೆಯ ರಾಜಕಾರಣದಿಂದ ಇಲ್ಲವೆ ಸಂಬಂಧಿಕತೆಯ ರಾಜಕಾರಣದಿಂದ ಸೃಷ್ಟಿಯಾಗಿರುವ ವಿಮರ್ಶೆ. ಯಾವುದಾದರೂ ವಿಚಾರ ಸಂಕಿರಣ, ಶಿಬಿರ, ಅಧ್ಯಯನ, ಅಭಿನಂದನ, ಪತ್ರಿಕೆಯ ವಿಶೇಷಾಂಕ ಇತ್ಯಾದಿಗಳಿಂದ ಸೃಷ್ಟಿಯಾಗಿರುವ ವಿಮರ್ಶೆ. ಶೈಕ್ಷಣಿಕ ಕಾರಣಗಳಿಂದ ಕೆಲವು ವಿಮರ್ಶೆಗಳು ಸೃಷ್ಟಿಯಾಗಿರಬಹುದು. ಇಂಥ ವಿಮರ್ಶೆಯನ್ನು ಬಿಟ್ಟರೆ ಇರುವ ಇನ್ನೊಂದು ವಲಯ ಅಧ್ಯಯನದ ಉದ್ದೇಶದಿಂದಲೆ ಸೃಷ್ಟಿಯಾಗಿರುವ ಅಧ್ಯಯನ ರೂಪಿ ವಿಮರ್ಶೆ. ಈ ಅಧ್ಯಯನ ರೂಪಿ ವಿಮರ್ಶೆಯಲ್ಲಿ ಎರಡು ಬಗೆ. 1. ಪಿಎಚ್.ಡಿ ಪದವಿ ಅಧ್ಯಯನ ಅಥವಾ ಸಂಶೋಧನಾ ದೃಷ್ಟಿಯ ವಿಮರ್ಶೆ 2. ಅಧ್ಯಯನವನ್ನೇ ಉದ್ದೇಶವಾಗಿ ಇರಿಸಿಕೊಂಡ ಅಧ್ಯಯನ ರೂಪಿ ವಿಮರ್ಶೆ. ಕುವೆಂಪು ಸಾಹಿತ್ಯ-ಚಿಂತನೆಯನ್ನು ಆಧರಿಸಿದಂತೆ ನಮ್ಮಲ್ಲಿ ಇದುವರೆಗೆ 30ಕ್ಕೂ ಹೆಚ್ಚು ಪಿಎಚ್.ಡಿ ಅಧ್ಯಯನಗಳು ನಡೆದಿವೆ. ಒಬ್ಬ ಲೇಖಕನನ್ನು ಆಧರಿಸಿ ಇಷ್ಟು ಪ್ರಮಾಣದ ಅಧ್ಯಯನಗಳು ಇನ್ನಾರನ್ನು ಕುರಿತ ಕನ್ನಡದಲ್ಲಿ ನಡೆದಿಲ್ಲ. ಅಧ್ಯಯನದ ಉದ್ದೇಶಕ್ಕಾಗಿಯೇ ಸೃಷ್ಟಿಯಾಗಿರುವ ಕೃತಿಗಳೋ ನೂರಾರು. ಇದೊಂದು ನಿಲ್ಲದ ಪ್ರಕ್ರಿಯೆ.

ನಮ್ಮಲ್ಲಿನ ಲೇಖನರೂಪಿ ವಿಮರ್ಶೆಯಲ್ಲಿ ಬಹುಪಾಲು ಲೇಖನಗಳಿಗೆ ನಿರ್ಧಿಷ್ಟವಾದ 'ಒಂದು' ಉದ್ದೇಶ ಇರುವುದಿಲ್ಲ. ನಿರ್ದಿಷ್ಟವಾದ ಪಂಥ ಮಾರ್ಗಗಳಿಂದ ವಿಶ್ಲೇಷಣೆಗೆ ಈ ವಿಮರ್ಶೆಗಳು ತೊಡಗುವುದಿಲ್ಲ. ವ್ಯಾಸಂಗದ ಸಂದರ್ಭದಲ್ಲಿ ಹೊಳೆದ ಒಳನೋಟಗಳನ್ನು ಮಂಡಿಸುತ್ತ; ಸಾಹಿತ್ಯವನ್ನು ನಿದರ್ಶನವಾಗಿ ಉದಾಹರಿಸುತ್ತ; ವಿವರಿಸುತ್ತ; ವ್ಯಾಖ್ಯಾನಿಸುತ್ತ ಇವು ತಮ್ಮದೇ ನಿಲುವು-ಪ್ರಮೇಯಗಳಿಗೆ ತಲುಪುವ ಕೆಲಸಗಳನ್ನು ಮಾಡುತ್ತಿರುತ್ತವೆ. ಕೆಲವು ಲೇಖನಗಳು ಮೊದಲಿಗೆ ತಮ್ಮ ಉದ್ದೇಶಗಳನ್ನು ಸ್ಪಷ್ಟ ಪಡಿಸಿಕೊಂಡು ಬೆಳೆಯ ತೊಡಗುತ್ತವೆಯಾದರೂ ಆನಂತರದಲ್ಲಿ ತಮ್ಮ ಉದ್ದೇಶಗಳಿಗೆ ಮಾತ್ರ ಬದ್ಧವಾಗಿಯೇನೂ ಉಳಿಯುವುದಿಲ್ಲ. ಎತ್ತಲಾದರು ಚಾಚಿಕೊಳ್ಳಲೂಬಹುದು. ಸ್ತ್ರೀವಾದಿ ನೆಲೆ, ಮನಶ್ಶಾಸ್ತ್ರೀಯ ನೆಲೆ, ಸಾಂಸ್ಕೃತಿಕ ನೆಲೆಗಳ ಮೂಲಕ ಸೈದ್ಧಾಂತಿಕ ಮಾರ್ಗಗಳನ್ನು ಹಿಡಿದ ವಿಮರ್ಶೆಗಳು ಕೆಲವು ನಮ್ಮಲ್ಲಿ ಇವೆಯಾದರೂ, ಇವು ಅಲ್ಪಸಂಖ್ಯಾತ ಗುಂಪಿನವು. ಅಂದರೆ ಇಂಥವು ನಮ್ಮಲ್ಲಿ ಕಡಿಮೆ. ಇವು ಕೂಡ ಸಿದ್ಧಾಂತಕ್ಕೆ ಕಟ್ಟು ಬಿದ್ದ ರಚನೆಗಳಲ್ಲ. ನಿರ್ಧಿಷ್ಟವಾದ ಒಂದು ಸಿದ್ಧಾಂತ-ಮಾರ್ಗದ ಬಳಕೆ ಕೂಡ ನಮ್ಮಲ್ಲಿ ಇಲ್ಲ.

ನಿರ್ದಿಷ್ಟವಾದ ವಿಧಾನಗಳ ಮತ್ತು ಮಾರ್ಗಗಳ ಚೌಕಟ್ಟುಗಳನ್ನು ಹಾಕಿಕೊಂಡ ವಿಮರ್ಶೆಗಳೆಂದರೆ ನಮ್ಮಲ್ಲಿ ಸಂಶೋಧನಾ ಅಧ್ಯಯನಗಳೇ. ಸಂಶೋಧನೆಗು ವಿಮರ್ಶೆಗು ಅಂತಹ ವ್ಯತ್ಯಾಸವೇನೂ ಇಲ್ಲವಾದ್ದರಿಂದ ಸಂಶೋಧನಾ ದೃಷ್ಟಿಯ ವಿಮರ್ಶೆಯನ್ನು ಇಲ್ಲಿ ಪಿ.ಎಚ್‌ಡಿ. ಪದವಿ ಅಧ್ಯಯನ ರೂಪಿ (ಸಂಕ್ಷಿಪ್ತವಾಗಿ ಅಧ್ಯಯನರೂಪಿ) ವಿಮರ್ಶೆ ಎಂದೇ ಕರೆಯಲಾಗಿದೆ. ಸಂಶೋಧನೆ ಎಂಬ ಒಂದು ಪ್ರತ್ಯೇಕ ಶಿಸ್ತೇ ನಮ್ಮಲ್ಲಿ ಇರುವುದರಿಂದ ಪಿಎಚ್.ಡಿ ಪದವಿಗಾಗಿ ನಡೆಯುವ ಸಾಹಿತ್ಯಕ ಅಧ್ಯಯನಗಳನ್ನು ಸಂಶೋಧನೆಗಳೆಂದು ಕರೆಯಲು ಆಗುವುದಿಲ್ಲ. ನಮ್ಮಲ್ಲಿ ಸಂಶೋಧನೆ ಎಂಬ ಹೆಸರಿನಲ್ಲಿ ನಡೆಯುವ ಸಾಹಿತ್ಯದ ಅಧ್ಯಯನಗಳೆಲ್ಲ ವಿಮರ್ಶೆಗಳೇ ಆಗಿವೆ. ಸಂಶೋಧನೆ ಎನ್ನುವುದು ಈಗಾಗಲೇ ಸಾಹಿತ್ಯ ವಿಮರ್ಶೆಯೇ ಆಗಿ ಪರಿಣಮಿಸಿಬಿಟ್ಟಿದೆ. ಸಾಹಿತ್ಯದಲ್ಲಿ ಸಂಶೋಧನೆ ಎಂಬ ಪದವೇ ಕಂಡು ಹಿಡಿಯುವುದು ಎಂಬ ತನ್ನ ಅರ್ಥವನ್ನು ಕಳೆದುಕೊಂಡುಬಿಟ್ಟಿದೆ. ವಿಸ್ತೃತವಾದ ಪರಿಶೀಲನೆ, ಅಭ್ಯಾಸ ಮತ್ತು ವ್ಯಾಖ್ಯಾನಗಳೇ ಪ್ರಧಾನವಾಗಿರುವ ಸಾಹಿತ್ಯಕ ಅಧ್ಯಯನಗಳನ್ನು ಸಂಶೋಧನೆ ಎಂದು ಕರೆಯುವುದರಲ್ಲಿ ಅರ್ಥವಿಲ್ಲ ಎಂಬುದನ್ನು ಇಲ್ಲಿನ ಅಧ್ಯಯನಗಳೇ ತಮ್ಮ ಆಚರಣೆಯಲ್ಲಿ ಸಾಬೀತು ಮಾಡಿವೆ. ಹಾಗಾಗಿ ಇವನ್ನು ಅಧ್ಯಯನರೂಪಿ ವಿಮರ್ಶೆ ಎನ್ನುವುದೇ ಹೆಚ್ಚು ಸೂಕ್ತವಾದುದು.

ಅನ್ಯಜ್ಞಾನಶಿಸ್ತುಗಳ ಪರಿಕರಗಳನ್ನು, ವಿಧಾನಗಳನ್ನು ಬಳಸುತ್ತ ವಿಮರ್ಶೆ ಮಾಡುವುದು ನಮ್ಮಲ್ಲಿ ಯಾವತ್ತಿನಿಂದಲೂ ಬಂದ ಒಂದು ರೂಡಿ. ಅಧ್ಯಯನ ಎಂಬುದು ನಮ್ಮಲ್ಲಿ ಒಂದು ವಿಶಿಷ್ಟ ಅಭ್ಯಾಸ ಮಾರ್ಗವಾಗಿ, ಪರಿಭಾಷೆಯಾಗಿ, ಜ್ಞಾನ ಶಿಸ್ತಾಗಿ, ವಿಮರ್ಶಾ ವಿಧಾನವಾಗಿ, ದೃಷ್ಟಿ ಅಥವಾ ಮನೋಧರ್ಮವಾಗಿ ಚಾಲ್ತಿಯಲ್ಲಿದೆ. ಅಧ್ಯಯನ ಎಂದರೆ ಸಂಸ್ಕೃತಿ ಅಧ್ಯಯನ, ಭಾಷಾಂತರ ಅಧ್ಯಯನ, ಆಧುನಿಕೋತ್ತರ ಅಧ್ಯಯನ, ಅಲಕ್ಷಿತ ಚರಿತ್ರೆಯ ಅಧ್ಯಯನ, ಇಂತಹ ಹಲವು ರೀತಿಯ ಅನ್ಯ ಶಿಸ್ತುಗಳಲ್ಲಿ ಸರ್ವವ್ಯಾಪಿಯಾಗಿರುವ ಒಂದು ವಿಧಾನವನ್ನೇ ವಿಮರ್ಶೆಯಲ್ಲಿಯೂ ನಮ್ಮಲ್ಲಿ ರೂಡಿಸಿಕೊಳ್ಳಲಾಗಿದೆ. ನಮ್ಮ ಬಹುಪಾಲು ವಿಮರ್ಶೆಯು ಅಧ್ಯಯನದ ಫಲವೇ ಆದರೂ ಎಲ್ಲ ವಿಮರ್ಶೆಗಳೂ ಅಧ್ಯಯನಗಳಲ್ಲ. ನಮ್ಮಲ್ಲಿ ವಿಮರ್ಶೆಯ ಒಂದು ಪ್ರಕಾರವಾಗಿ ಅಧ್ಯಯನವೆಂಬ ಒಂದು ಮಾರ್ಗವೇ ರೂಪಗೊಂಡಿದೆ. ಹಾಗಾಗಿ ಅಧ್ಯಯನ ವಿಧಾನವು ನಮ್ಮ ವಿಮರ್ಶೆಯ ಒಂದು ಲಕ್ಷಣವೂ ಹೌದು. ಒಂದು ಮಾರ್ಗವೂ ಹೌದು.

ಪಿಎಚ್.ಡಿ ಪದವಿಗಾಗಿ ನಡೆಯುವ ಅಧ್ಯಯನಗಳಲ್ಲಿ ಅಧ್ಯಯನದ ಉತ್ಪನ್ನವಾದ ವಿಮರ್ಶಾ ರಚನೆಯನ್ನು ಮಹಾಪ್ರಬಂಧ ಎಂದು ನಮ್ಮಲ್ಲಿ ಕರೆಯುತ್ತಾರೆ. ಮಹಾ ಎಂಬುದು ಗಾತ್ರ ಮತ್ತು ಗುಣಗಳೆರಡಕ್ಕೂ ಸಂಬಂಧಿಸಿದ ಮಾತಾದರೂ ನಮ್ಮಲ್ಲಿ ಇದು ಗಾತ್ರಕ್ಕೇ ಹೆಚ್ಚು ಅನ್ವಯವಾಗುತ್ತದೆ. ಹಾಗೆ ನೋಡಿದರೆ ನಮ್ಮ ಪಿ.ಎಚ್‌ಡಿ. ಪ್ರಬಂಧಗಳಲ್ಲಿ ಒಂದು ಮಹಾ ಪ್ರಬಂಧದ ಲಕ್ಷಣ ಇರುವುದಿಲ್ಲ. ಎಲ್ಲ ಪ್ರಬಂಧಗಳಲ್ಲಿಯೂ ಪರಸ್ಪರ ಸಂಬಂಧವುಳ್ಳ ಚಿಕ್ಕ ಚಿಕ್ಕ ಪ್ರಬಂಧಗಳ ಸಂಕಲನವಾಗುವ ಲಕ್ಷಣವೇ ಇರುತ್ತದೆ. ಹಾಗಾಗಿ ಮಹಾಪ್ರಬಂಧವೆಂದರೆ ಲೇಖನಗಳ ಸಂಕಲನರೂಪಿಯಾದ ಮಹಾಲೇಖನವೇ ಆಗಿದೆ. ನಮ್ಮಲ್ಲಿ ಅತಿ ಬಳಕೆಯಲ್ಲಿರುವ 'ಒಂದು ಅಧ್ಯಯನ' ಎಂಬ ಪರಿಭಾಷೆ ಕೂಡ ಕ್ಲೀಷೆಯಾಗಿದೆ. ಹಲವು ದೃಷ್ಟಿಗಳು, ಹಲವು ವಿಧಾನಗಳು, ಹಲವು ಮೆತೆಡ್ಡುಗಳು ಇರುವ ಅಧ್ಯಯನವು ಒಂದು ಅಧ್ಯಯನ ಎಂದು ಕರೆಸಿಕೊಳ್ಳಲು ತಾಂತ್ರಿಕವಾಗಿ ಕೂಡ ಅರ್ಹವಲ್ಲ. ಆದರೂ ಒಂದು ಪದವಿಗೆ ಮಾಡಿದ ಅಧ್ಯಯನ ಎಂಬ ಅರ್ಥದಲ್ಲಿ ಇದು ಸ್ವೀಕಾರಾರ್ಹ. ಗಾತ್ರದ ದೃಷ್ಟಿಯಿಂದ ಅಧ್ಯಯನಗಳೆಲ್ಲವೂ ಮಹಾ ಆಗಿಯೇ ಇರುತ್ತವೆ. ಹಾಗೆ ಇರಲೇಬೇಕು. ಇದು ಪಿಎಚ್.ಡಿಯ ತಾಂತ್ರಿಕ ಅವಶ್ಯಕತೆಯೂ ಹೌದು. ಆದರೆ ಪದವಿಯ ಹೊರತಾಗಿ ನಡೆದಿರುವ ಅಧ್ಯಯನಗಳು ಕೂಡ ಗಾತ್ರದಲ್ಲಿ ಮಹಾನೇ ಆಗಿವೆ. ಅಧ್ಯಯನ ಎಂಬ ತಲೆಬರಹದಲ್ಲಿ ಇರಿಸಿಕೊಂಡಿರುವ ಅಧ್ಯಯನಗಳು ಗಾತ್ರದಲ್ಲಿ ಸರಿಸುಮಾರು ಪಿಎಚ್.ಡಿ ಪದವಿಯ ಮಹಾ ಪ್ರಬಂಧಗಳನ್ನೇ ಹೋಲುತ್ತವೆ.

ಎಲ್ಲ ಪಿಎಚ್.ಡಿ ಅಧ್ಯಯನಗಳೂ ಮುದ್ರಣ ರೂಪದಲ್ಲಿ ಪುಸ್ತಕಗಳಾಗಿ ಅವತರಿಸುವಾಗ ಅವು ಸರಿಸುಮಾರು ತಮ್ಮ ಪಿಎಚ್.ಡಿ ಪ್ರಬಂಧದ ತಾಂತ್ರಿಕ ಲಕ್ಷಣಗಳನ್ನು ಕಳಚಿಕೊಂಡು ವಿಮರ್ಶಾ ಕೃತಿಯ ರೂಪವನ್ನು ಧರಿಸುತ್ತವೆ. ಕೆಲವು ಕೃತಿಗಳು ಪಿಎಚ್.ಡಿ ಅಧ್ಯಯನದ ಲಕ್ಷಣಗಳಲ್ಲಿ ಕೆಲವನ್ನಾದರೂ ಉಳಿಸಿಕೊಂಡರೆ (ಬಹುಪಾಲು ಅಧ್ಯಯನಗಳು ಪ್ರಕಟವಾಗದೆ ಕೇವಲ ಪದವಿಗಳಿಗಾಗಿ ಮಾತ್ರ ಬಳಕೆಯಾಗಿ ಉಳಿಯುತ್ತವೆ ಎಂಬುದೂ ನಿಜ)  ಕೆಲವು ಆ ಯಾವ ಸುಳಿವೂ ಇಲ್ಲದಂತೆ ಬದಲಾಗಿ ವಿಮರ್ಶಾ ಕೃತಿಗಳಂತೆಯೇ ಕಾಣುತ್ತವೆ. ಕೆಲವು ತಮ್ಮ ಮೊದಲಿನ ತಲೆಬರಹಗಳನ್ನು ಬದಲಾಯಿಸಿಕೊಂಡು ಹೊಸ ಹೆಸರಿನಲ್ಲೆ ಪ್ರಕಟವಾಗುತ್ತವೆ. (ಕುವೆಂಪು ಸಾಹಿತ್ಯದ ಅಧ್ಯಯನವನ್ನು ಒಂದು ಭಾಗವಾಗಿ ಒಳಗೊಂಡ ಡಿ.ಆರ್. ನಾಗರಾಜ್, ಎಚ್.ಎಸ್. ರಾಘವೇಂದ್ರರಾವ್, ಪ್ರೀತಿ ಶುಭಚಂದ್ರ, ಕೆ.ಸಿ.ಶಿವಾರೆಡ್ಡಿ, ಇವರ ಥೀಸೀಸುಗಳು ಹೊಸ ಹೆಸರಿನಲ್ಲಿ ಪ್ರಕಟವಾಗಿರುವ ಕೃತಿಗಳಿಗೆ ಕೆಲ ಉದಾಹರಣೆಗಳು) ಪ್ರಕಟವಾಗುವಾಗ ಪ್ರಬಂಧಗಳು ವಿಮರ್ಶಾ ಕೃತಿಗಳಾಗಿ ಕಾಣಿಸಿಕೊಳ್ಳಲು ಮುಖ್ಯವಾದ ಕಾರಣವೆಂದರೆ, ಪಿಎಚ್.ಡಿ ಪದವಿಯ ಕೆಲವು ತಾಂತ್ರಿಕ ಅಗತ್ಯಗಳನ್ನು ಬಿಡಿಸಿದರೆ ಉಳಿದಂತೆ ಸಾಹಿತ್ಯದ ಅಧ್ಯಯನವು ವಿಮರ್ಶೆಯೇ ಆಗಿರುವುದು. ಇಲ್ಲಿ ಕೆಲವು ಪದವಿಗಾಗಿ ನಿರ್ಮಾಣವಾಗುವ ವಿಮರ್ಶೆಗಳಾದರೂ ಕೆಲವಕ್ಕೆ ಅದರ ಆಚೆಗೂ ಉಪಯುಕ್ತತೆ ಇರುತ್ತದೆ. ಹಾಗಾದರೆ ಈ ಅಧ್ಯಯನ ರೂಪಿ ವಿಮರ್ಶೆಗೂ ಇತರ ವಿಮರ್ಶೆಗೂ ಅಂತರವೇ ಇಲ್ಲವೇ? ಇದನ್ನು ಮುಂದೆ ಚರ್ಚಿಸಲಾಗಿದೆ.

ಕುವೆಂಪು ಸಾಹಿತ್ಯ ಕುರಿತ ಮಹಾಪ್ರಬಂಧಗಳು ಹಲವಾರು ವಿಧಾನ-ವಿನ್ಯಾಸಗಳನ್ನು ಹೊಂದಿವೆ. ಇವುಗಳಲ್ಲೆಲ್ಲ ಪ್ರಧಾನವಾದ ವಿಧಾನವೆಂದರೆ ತೌಲನಿಕ ವಿಧಾನ. ವ್ಯಕ್ತಿಯಾಗಿ, ಸಾಹಿತಿಯಾಗಿ ಕುವೆಂಪುವನ್ನು ಇತರರೊಡನೆ ತುಲನೆ ಮಾಡುವುದು, ಒಟ್ಟಾರೆ ಕುವೆಂಪು ಸಾಹಿತ್ಯವನ್ನು ಇತರ ಸಾಹಿತಿಗಳ ಸಾಹಿತ್ಯದೊಂದಿಗೆ ತುಲನೆ ಮಾಡುವುದು, ಕುವೆಂಪು ಕಾವ್ಯ, ಕಾದಂಬರಿ, ನಾಟಕ, ಮಹಾಕಾವ್ಯ ಹೀಗೆ ಕೆಲವು ಪ್ರಕಾರಗಳನ್ನು ಇತರರ ಪ್ರಕಾರಗಳೊಂದಿಗೆ ತುಲನೆ ಮಾಡುವುದು, ಕಾವ್ಯದ ವಸ್ತು, ಪಾತ್ರ, ಪ್ರಕೃತಿ, ಪ್ರತಿಮೆ ಹೀಗೆ

ಬಿಡಿನೆಲೆಗಳಿಂದ ಅನ್ಯಗಳ ಜೊತೆ ತುಲನೆ ಮಾಡುವುದು, ಪರಂಪರೆ ಮತ್ತು ಆಧುನಿಕತೆಗಳನ್ನು ತುಲನೆ ಮಾಡುವುದು ಹೀಗೆ ಹಲವು ರೀತಿಗಳಲ್ಲಿ ತೌಲನಿಕ ವಿಧಾನದಲ್ಲಿ ಇಲ್ಲಿ ಅಧ್ಯಯನ ನಡೆಸಲಾಗಿದೆ. ಆಧುನಿಕ ಕನ್ನಡ ಕಾವ್ಯದ ನಾಲ್ಕು ವಸ್ತುಗಳ ಅಭ್ಯಾಸ (ಡಿ.ಆರ್.ನಾಗಾರಾಜ್) ಮೂವರು ಕನ್ನಡ ಕವಿಗಳ ವಿಶಿಷ್ಟತೆಯ ಅಧ್ಯಯನ (ಎಚ್.ಎಸ್.ರಾಘವೇಂದ್ರರಾವ್) ಬೇಂದ್ರೆ ಕುವೆಂಪು ಅಡಿಗ ಕಂಬಾರರ ಕಾವ್ಯದ ಅಧ್ಯಯನ (ಕೆ.ಸಿ.ಶಿವಾರೆಡ್ಡಿ) ಪುತಿನ, ಬೇಂದ್ರೆ, ಕುವೆಂಪು ಕೃತಿಗಳಲ್ಲಿ ಪ್ರತಿಮೆಗಳು (ನರಸಿಂಹ ಮೂರ್ತಿ) ಹೀಗೆ ಕುವೆಂಪುವನ್ನು ಏಕಾಂಗಿಯಾಗಿ ಉದ್ದೇಶಿಸದೆ ಅನ್ಯರೊಂದಿಗಿನ ತುಲನೆಗಾಗಿ ಉದ್ದೇಶಿಸಿ ಕೈಗೊಂಡ ಅಧ್ಯಯನಗಳು ಇಲ್ಲಿ ಇರುವಂತೆಯೇ ಕುವೆಂಪು ಕೃತಿಗಳಲ್ಲಿ ಪರಂಪರೆ ಮತ್ತು ಆಧುನಿಕತೆ–ತೌಲನಿಕ ಅಧ್ಯಯನ (ಭೋಗರಾಜು.ಪಿ) ಇಂತಹ ಕುವೆಂಪು ಸಾಹಿತ್ಯದಲ್ಲಿಯೇ ಆಂತರಿಕವಾಗಿ ತೌಲನಿಕವಾಗಿ ಅಧ್ಯಯನ ನಡೆಸುವ ಯತ್ನಗಳೂ ಇವೆ.

ವಿಮರ್ಶೆಯ ಒಂದು ದೃಷ್ಟಿಯಾಗಿ ತೌಲನಿಕತೆಯು ಎಲ್ಲ ಅಧ್ಯಯನಗಳಲ್ಲೂ ಇದೆ. ಉದಾಹರಣೆಗೆ ಕುವೆಂಪು ಅವರ ನಾಟಕಗಳ ಅಧ್ಯಯನದಲ್ಲಿ (2549) ನವೋದಯದೊಂದಿಗೆ ಮತ್ತು ಪುರಾಣ ವಸ್ತುಗಳೊಂದಿಗೆ ತುಲನೆ ಮಾಡಲಾಗಿದೆ. ಶ್ರೀ ರಾಮಾಯಣ ದರ್ಶನಂ ಅಧ್ಯಯನದ ಶೀರ್ಷಿಕೆಯಲ್ಲಿ (2786) ಟೈಟಲ್ಲು 'ಒಂದು ಅಧ್ಯಯನ' ಎಂದು ಇದ್ದರೂ ರಾಮಾಯಣ ದರ್ಶನವನ್ನು ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್, ವಾಲ್ಮೀಕಿ, ಪಂಪ, ನಾರಣಪ್ಪ, ಗೋಕಾಕ, ಭೂಸನೂರ ಮಠ ಇವೆರಲ್ಲರ ಮಹಾಕಾವ್ಯಗಳೊಂದಿಗೆ ಹೋಲಿಸಲಾಗಿದೆ. ಹೀಗಾಗಿ ಅಧ್ಯಯನ ರೂಪಿ ವಿಮರ್ಶೆಯಲ್ಲಿ ತೌಲನಿಕ ವಿನ್ಯಾಸವು 1. ಎಲ್ಲ ಅಧ್ಯಯನಗಳಲ್ಲೂ ಅಂತರ್ಗತವಾದ ಒಂದು ದೃಷ್ಟಿ ಮತ್ತು ವಿಧಾನವಾಗಿ ಮತ್ತು 2. ಅಧ್ಯಯನದ ಒಂದು ಪ್ರಧಾನ ಮಾರ್ಗವಾಗಿ ಹೀಗೆ ಎರಡು ಬಗೆಗಳಲ್ಲಿ ಪ್ರಕಟವಾಗಿದೆ.

ತೌಲನಿಕ ವಿನ್ಯಾಸವಲ್ಲದೆ ವಸ್ತು ಮೌಲ್ಯ, ವಿಚಾರ, ವಿಷಯಾಧಾರಿತ ಅಧ್ಯಯನ ವಿನ್ಯಾಸಗಳೂ ಇಲ್ಲಿವೆ. ಕುವೆಂಪು ಕೃತಿಗಳಲ್ಲಿ ಪರಂಪರೆ ಮತ್ತು ಆಧುನಿಕತೆ (2769) ಕುವೆಂಪು ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ (2665) ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ (2663) ಹೀಗೆ ಇಲ್ಲಿನ ಅಧ್ಯಯನಗಳಲ್ಲಿ ಕುವೆಂಪು ಸಾಹಿತ್ಯವು ಪ್ರಸ್ತುತ ಸಮಾಜದೊಂದಿಗೆ ಮುಖಾಮುಖಿ ಆಗಬಹುದಾದ ನೆಲೆಗಳನ್ನು ಪರಿಶೀಲಿಸುವ ಯತ್ನ ನಡೆದಿದೆ. ಸಾಹಿತ್ಯವನ್ನು ಸಮಕಾಲೀನಗೊಳಿಸುವ, ಸಾಮಾಜಿಕ ಜೀವನದೊಂದಿಗೆ ಇಲ್ಲಿನ ಮೌಲ್ಯ, ನಡಾವಳಿ, ಬಿಕ್ಕಟ್ಟುಗಳೊಂದಿಗೆ ಅನ್ವಯ ದೃಷ್ಟಿಯಿಂದ ಸಾಹಿತ್ಯವನ್ನು ಪರಿಶೀಲಿಸುವ ಯತ್ನಗಳಿವು. ಸಾಹಿತ್ಯ ಮತ್ತು ಸಮಾಜ, ಸಾಹಿತ್ಯ ಮತ್ತು ಸಂಸ್ಕೃತಿ, ಸಾಹಿತ್ಯ ಮತ್ತು ಮಾನವೀಯ ಸಂಬಂಧಗಳು ಇತ್ಯಾದಿಗಳ ನಡುವಿನ ಅಂತಃಸಂಬಂಧಗಳನ್ನು ಚರ್ಚಿಸುವ ಅಧ್ಯಯನಗಳಿವು. ಕುವೆಂಪು ಕಾದಂಬರಿಗಳು ಸಾಂಸ್ಕೃತಿಕ ಅಧ್ಯಯನ (2573) ಎಂಬಂಥ ಸಂಸ್ಕೃತಿ ದೃಷ್ಟಿಯ ಅಧ್ಯಯನಗಳು ಇಲ್ಲಿವೆ. ಪ್ರಾದೇಶಿಕ ಸಂಸ್ಕೃತಿಯ ಮತ್ತು ಒಂದು ಕಾಲಬದ್ಧ ಜನಜೀವನದ ದಾಖಲೆಯಾಗಿ; ಸಂಸ್ಕೃತಿಯ ಬೇರೆ ಬೇರೆ ಅಂಗಗಳ ಸಾಹಿತ್ಯ ಕಥನವಾಗಿ ಕುವೆಂಪು ಸಾಹಿತ್ಯವನ್ನು ವಿವರಿಸಿಕೊಳ್ಳುವ ಯತ್ನಗಳೂ ನಡೆದಿವೆ.

ಕುವೆಂಪು ಸಾಹಿತ್ಯದ ಸಂಶೋಧನಾ(!) ಅಧ್ಯಯನಗಳಲ್ಲಿ ಪರಿಸರ ದೃಷ್ಟಿಯ ಅಧ್ಯಯನಗಳದ್ದೂ ಕೂಡ ಒಂದು ಮುಖ್ಯವಾದ ವಲಯ. ಕುವೆಂಪು ಕವಿತೆಗಳಲ್ಲಿ ನಿಸರ್ಗ(2570) ಕಾಡು ಕಡಲು (2525) ಕುವೆಂಪು ಕಾವ್ಯದಲ್ಲಿ ಪ್ರಕೃತಿ (2581) ಕುವೆಂಪು ಸಾಹಿತ್ಯ ಒಂದು ಜೀವ ಪರಿಸರ ಅಧ್ಯಯನ (2634) ಕುವೆಂಪು, ಕಾರಂತ, ತೇಜಸ್ವಿ ಕಾದಂಬರಿಗಳಲ್ಲಿ ಪ್ರಕೃತಿಯ ಪರಿಕಲ್ಪನೆ (2580) ಹೀಗೆ ಹಲವಾರು ಪರಿಸರ ದೃಷ್ಟಿಯ ಅಧ್ಯಯನಗಳು ಇಲ್ಲಿ ನಡೆದಿವೆ. ಕುವೆಂಪು ಸಾಹಿತ್ಯವನ್ನು 1. ನಮ್ಮ ಸಮಾಜವು ಎದುರಿಸುತ್ತಿರುವ ಪರಿಸರ ಸಮಸ್ಯೆಗಳ ಪರಿಹಾರದ ಪ್ರತೀಕವಾಗಿ ಮತ್ತು ಮಾರ್ಗದರ್ಶಕವಾಗಿ ನೋಡುವ 2. ಪ್ರಾದೇಶಿಕ ಪರಿಸರದ ಸಮೃದ್ಧ (ಜೀವ. ಪ್ರಾಣಿ, ಸಸ್ಯ ಪರಿಸರಗಳ ದಾಖಲೆಯಾಗಿ 3. ತತ್ವ–ದರ್ಶನ, ವ್ಯಕ್ತಿತ್ವ ಮತ್ತು ಪರಿಸರಗಳ ನಡುವಿನ ಸಂಬಂಧಗಳ ಹುಡುಕಾಟವಾಗಿ 4. ಭಾವೋಪಯೋಗಿಯಾದ ಆನಂದಾನುಭವ, ಸೌಂದರ್ಯಾನುಭವಗಳ ಕಥನವಾಗಿ 5. ಸಂಸ್ಕೃತಿಯ ವಿಕಾಸ, ಚಲನಶೀಲ ಬದುಕುಗಳ ಚಿತ್ರಣವಾಗಿ ಹೀಗೆ ಹಲವು ಮುಖ್ಯ ನೆಲೆಗಳಲ್ಲಿ ಪರಿಸರವಾದಿ ಅಧ್ಯಯನವು ನಡೆದಿದೆ.

ಇವಲ್ಲದೆ ಈ ಅಧ್ಯಯನ ರೂಪಿ ವಿಮರ್ಶೆಯಲ್ಲಿ ಪರಿಕಲ್ಪನಾತ್ಮಕ ನೆಲೆ, ಅಖಂಡ ದೃಷ್ಟಿ, ಪ್ರಕಾರ ದೃಷ್ಟಿ, ಪಾತ್ರದೃಷ್ಟಿ ಹೀಗೆ ಹಲವು ನೆಲೆ ಮತ್ತು ದೃಷ್ಟಿಗಳ ಅಧ್ಯಯನಗಳು ನಡೆದಿವೆ. ಕುವೆಂಪು ಅವರ ನಾಟಕಗಳು (2549), ಕುವೆಂಪು ಅವರ ಭಾವಗೀತೆಗಳು (2550) ಕುವೆಂಪು ಕಾದಂಬರಿಗಳು (2573) ಶ್ರೀ ರಾಮಾಯಣ ದರ್ಶನಂ(2786) ಕುವೆಂಪು ಕಥನ(2562) ಹೀಗೆ ಪ್ರಕಾರ ದೃಷ್ಟಿಯಿಂದ ಹಲವಾರು

ಅಧ್ಯಯನಗಳು ಇಲ್ಲಿ ನಡೆದಿವೆ. ಇಲ್ಲೆಲ್ಲಾ ತೌಲನಿಕ ನೆಲೆಯು ಒಂದು ಪ್ರಧಾನವಾದ ಅಧ್ಯಯನ ವಿಧಾನವಾಗಿ ಇದ್ದರೂ ಬಹುರೂಪಿ ಅಧ್ಯಯನ ದೃಷ್ಟಿಗಳು ಇಲ್ಲಿ ಪ್ರಯೋಗವಾಗಿವೆ. ಇಲ್ಲಿನ ಬಹುಪಾಲು ವಿಮರ್ಶೆಯು 1. ಸಾಹಿತಿಯಾಗಿ ಕುವೆಂಪು ಮಹತ್ವ ಮತ್ತು ಸ್ಥಾನವನ್ನು ಚರ್ಚಿಸುವ, 2. ಕನ್ನಡ ಸಾಹಿತ್ಯ ಮತ್ತು ವಿಶ್ವ ಸಾಹಿತ್ಯದೊಂದಿಗೆ ಕುವೆಂಪುವನ್ನು ತೂಗಿ ನೋಡುವ, 3. ಕುವೆಂಪುವನ್ನು ವಿವರಿಸಿ, ವ್ಯಾಖ್ಯಾನಿಸುವ 4. ಸಂಸ್ಕೃತಿ ದೃಷ್ಟಿ, ವಸಾಹತುಶಾಹಿ ದೃಷ್ಟಿ, ಸುಧಾರಣಾವಾದಿ ದೃಷ್ಟಿ, ಸ್ತ್ರೀವಾದಿ ದೃಷ್ಟಿ ಹೀಗೆ ಹಲವು ದೃಷ್ಟಿಗಳಿಂದ ಸಾಹಿತ್ಯವನ್ನು ಪರಿಶೀಲಿಸುವ 5. ಕುವೆಂಪು ಸಾಹಿತ್ಯದ ಮೇಲಿನ ಪ್ರಭಾವ-ಪ್ರೇರಣೆಗಳನ್ನು ಅಭ್ಯಾಸ ಮಾಡುವ 6. ಆಸ್ವಾದನಾ ಮಾದರಿಯಲ್ಲಿ ಕುವೆಂಪು ಸಾಹಿತ್ಯವನ್ನು ವಿಮರ್ಶಾ ರೂಪದಲ್ಲಿ ಮರುಮಂಡಿಸುವ ಹೀಗೆ ಹಲವು ನೆಲೆಗಳ ಅನುಸಂಧಾನಗಳಿವೆ. ಪ್ರಕಾರ ದೃಷ್ಟಿಯೇ ಇಲ್ಲಿ ಪ್ರಧಾನವಾದರೂ ಇವು ಆತ್ಯಂತಿಕವಾಗಿ ತಾವು ಆರಿಸಿಕೊಂಡ ಪ್ರಕಾರಗಳಿಗೆ ಸಂಪೂರ್ಣವಾಗಿ ಬದ್ಧಗೊಳ್ಳದೆ ಕುವೆಂಪು ಅವರ ಒಟ್ಟಾರೆ ಸಾಹಿತ್ಯವನ್ನು ಚರ್ಚೆಯಲ್ಲಿ ಒಳಗೊಳ್ಳುತ್ತವೆ.

ಶ್ರೀ ರಾಮಾಯಣದರ್ಶನದಲ್ಲಿ ಕುವೆಂಪು ಸೃಜಿಸಿದ ಮೂರು ಪಾತ್ರಗಳು (2791) ಏಕಲವ್ಯ ಒಂದು ಅಧ್ಯಯನ (2502) ಶ್ರೀ ರಾಮಾಯಣದರ್ಶನದಲ್ಲಿ ಸ್ತ್ರೀಪಾತ್ರಗಳು (2790) ಇಂತಹ ಪಾತ್ರ ಕೇಂದ್ರಿತ ಅಧ್ಯಯನಗಳೂ ಇಲ್ಲಿ ಇವೆ. ಇವುಗಳು ಬಹುತೇಕ ಕೃತಿನಿಷ್ಠ, ರೂಪನಿಷ್ಠ ವಿಧಾನವನ್ನೇ ತಮ್ಮ ಅಧ್ಯಯನ ಧಾಟಿಯನ್ನಾಗಿ ಹೊಂದಿವೆ. ಇವುಗಳ ಇನ್ನೊಂದು ಮುಖ್ಯವಾದ ವಿಧಾನವೆಂದರೆ ಅದು ತೌಲನಿಕ ವಿಧಾನ. ಇಲ್ಲಿನ ತೌಲನಿಕ ವಿಧಾನವು ಭಿನ್ನತೆಗಳನ್ನು ಚರ್ಚಿಸುವ ಮೂಲಕ ವಿಶಿಷ್ಟತೆಗಳನ್ನು ಗುರ್ತಿಸುವ ಕಡೆಗೆ ಬೆಳೆದಿದೆ. ಸಂಸ್ಕೃತಿ ಅಧ್ಯಯನ, ದರ್ಶನ-ವಿಚಾರ ದೃಷ್ಟಿಯ ಅಧ್ಯಯನ, ಪಾತ್ರಗಳ ಅಧ್ಯಯನ, ಪರಿಸರ ದೃಷ್ಟಿಯ ಅಧ್ಯಯನ ಹೀಗೆ ನಮ್ಮ ವಿಮರ್ಶೆಯ ಬಹುತೇಕ ಮುಖ್ಯ ಮತ್ತು ಬಹು ಬಳಕೆಯ ನೆಲೆಗಳು ಈ ಅಧ್ಯಯನರೂಪಿ ವಿಮರ್ಶೆಯಲ್ಲಿ ಆಚರಣೆಯಾಗಿವೆ.

ಅಧ್ಯಯನದ ಸ್ವರೂಪ ಮತ್ತು ವಿಧಾನಗಳು ಎರಡು ಭಿನ್ನ ಮತ್ತು ಪ್ರತ್ಯೇಕ ಸಂಗತಿಗಳು ಎಂದು; ಅಧ್ಯಯನದ ದೃಷ್ಟಿಕೋನ ಮತ್ತು ವಸ್ತುಗಳು ಎರಡು ಭಿನ್ನ ಸಂಗತಿಗಳು ಎಂದು ಇಲ್ಲಿನ ಬಹುತೇಕ ಅಧ್ಯಯನಗಳು ತಾತ್ವಿಕವಾಗಿ ಭಾವಿಸುತ್ತವೆ. ಆದರೆ ಸ್ವರೂಪ ಮತ್ತು ವಿಧಾನ, ದೃಷ್ಟಿ ಮತ್ತು ವಸ್ತುಗಳು ಇಲ್ಲೆಲ್ಲ ಎರಡಲ್ಲದಂತೆ ಬೆರೆತಿವೆ. ಇವುಗಳು ಪ್ರತ್ಯೇಕ ಅಲ್ಲ ಎಂಬುದು ಅವುಗಳ ಆಚರಣೆಗಳ ಮೂಲಕ ವ್ಯಕ್ತವಾಗಿದೆ. ಆದರೆ ತಾತ್ವಿಕವಾಗಿ ಅಧ್ಯಯನಕಾರರು ಹಾಗೆ ಭಾವಿಸಿಲ್ಲ. ಉದಾಹರಣೆಗೆ ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆಯನ್ನು ಪರಿಶೀಲಿಸುವ ಅಧ್ಯಯನದ ವಸ್ತುವೂ ವೈಚಾರಿಕತೆಯೇ ಅಧ್ಯಯನದ ದೃಷ್ಟಿಯೂ ವಿಚಾರ ದೃಷ್ಟಿಯೇ ಆಗಿದೆ. ಸಮಕಾಲೀನ ಬದುಕಿನ ಆಗು ಹೋಗುಗಳಿಗೆ ಲೇಖಕನೊಬ್ಬ ಪ್ರತಿಕ್ರಿಯಿಸುವುದೇ ಆತನ ವೈಚಾರಿಕತೆ ಎಂದು ಇಲ್ಲಿ ನಂಬಲಾಗಿದೆ. (ಪುಟ-7) (ನಮ್ಮ ವಿಮರ್ಶೆಯಲ್ಲು ಕೂಡ ಒಂದು ಕಾಲದಲ್ಲಿ ಇದ್ದ ಆಶಯ ಮತ್ತು ಆಕೃತಿಗಳು ಬೇರೆ ಬೇರೆ ಎಂಬ ನಂಬಿಕೆ ಈಗ ಬದಲಾಗಿ ಅವೆರಡೂ ಒಂದೇ ಎಂಬ ತಿಳುವಳಿಕೆಯ ಕಡೆ ಸಾಗಿದೆ.) ಪರಿಸರ ದೃಷ್ಟಿ, ಸ್ತ್ರೀವಾದಿ ದೃಷ್ಟಿ, ಸಾಂಸ್ಕೃತಿಕ ದೃಷ್ಟಿ, ವಿಚಾರದೃಷ್ಟಿಗಳಲ್ಲಿ ಅಧ್ಯಯನದ ಅಗತ್ಯ, ಅವಶ್ಯಕತೆ ಮಹತ್ವಗಳನ್ನು ಚರ್ಚಿಸುವಾಗ ಬಹು ಮುಖ್ಯವಾಗಿ ಸಾಹಿತ್ಯದ ಪ್ರಸ್ತುತತೆ ಮತ್ತು ಉಪಯುಕ್ತತೆಗಳನ್ನು ಚರ್ಚಿಸಲಾಗಿದೆ. ಸಮಾಜಕ್ಕೆ ಅನ್ವಯವಾಗುವ-ಜೀವನಕ್ಕೆ ಅನ್ವಯ ಆಗಬಹುದಾದ ಉಪಯುಕ್ತತೆಗಳು ಮತ್ತು ಜ್ಞಾನದ ನೆಲೆಯಲ್ಲಿ ಬಳಕೆ ಆಗಬಹುದಾದ ಉಪಯುಕ್ತತೆಗಳು ಇಲ್ಲಿ ಒಟ್ಟಿಗೆ ಮಂಡಿತವಾಗಿವೆ.

ಇಲ್ಲಿನ ಬಹುಪಾಲು ಸಂಶೋಧನೆಗಳಲ್ಲಿ ಬಿಡಿ ಬಿಡಿ ವಿವರಗಳ ವಿಸ್ತೃತ ಮಂಡನೆ ಮತ್ತು ಪರಿಶೀಲನೆ ಹೆಚ್ಚು ಪ್ರಾಶಸ್ತ್ಯ ಪಡೆದಿವೆ. ಯಾಂತ್ರಿಕವಾದ ಮಂಡನೆಯೇ ಹೆಚ್ಚಾಗಿದ್ದು ಜೀವಂತಿಕೆ ಮತ್ತು ಚೈತನ್ಯಗಳು ಇಲ್ಲವಾಗಿ ಬಿಟ್ಟಿವೆ. ಪದವಿಯ ತಾಂತ್ರಿಕತೆಗಳಿಗೆ ಬದ್ಧವಾಗಿ ಅಧ್ಯಯನಗಳು ಏಕರೂಪಿ ಮಾದರಿಗಳನ್ನು ಅನುಸರಿಸುವಂತಾಗಿ ಜಡತೆಯೊಂದು ಇವಕ್ಕೆ ಪ್ರಾಪ್ತವಾಗಿದೆ. ಇಂತಿಷ್ಟು ಕನಿಷ್ಠ ಪುಟಗಳನ್ನು ಬರೆಯಬೇಕೆಂಬ ಒತ್ತಡ ಇರುವುದರಿಂದ ಬಹುಪಾಲು ಅಧ್ಯಯನಗಳಲ್ಲಿ ಅವಲೋಕನ, ಸಮೀಕ್ಷೆ, ಪ್ರಾಯೋಗಿಕ ವಿಮರ್ಶೆಯ ಧಾಟಿಗಳು ಪ್ರಧಾನವಾಗಿ ಕಾಣಿಸಿಕೊಂಡಿವೆ. ಒಂದು ಮಾತಿನಲ್ಲಿ ಹೇಳಬಹುದಾದುದನ್ನು ಹಲವು ಮಾತುಗಳಲ್ಲಿ ಹೇಳುವುದು ಇಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಅಲ್ಲದೆ ಒಂದು ಸಿಟಿಂಗಿನಲ್ಲಿ ಯಾವ ಪ್ರಬಂಧಗಳೂ ರಚನೆಯಾಗುವುದಿಲ್ಲವಾಗಿ; ಬೇರೆ ಬೇರೆ ಅಧ್ಯಾಯಗಳ ಬರವಣಿಗೆಯಲ್ಲಿ ಕಾಲದ ಅಂತರ ಹೆಚ್ಚು ಇರುವ ಸಾಧ್ಯತೆ ಇರುವುದರಿಂದಾಗಿ ಐಡಿಯಾಗಳು, ನಿಲುವುಗಳು, ವಿಚಾರಗಳು ಮತ್ತೆ ಮತ್ತೆ ಬೇರೆ ಬೇರೆ ರೂಪಗಳಲ್ಲಿ ಪುನರಾವರ್ತನೆ ಆಗುತ್ತಿರುತ್ತವೆ. ಹೀಗಾಗಿ 1. ವಿವರಣಾತ್ಮಕ ನೆಲೆ ಮತ್ತು ಪ್ರಯೋಗಿಕ ವಿಧಾನ 2. ಬ್ರೀವಿಟಿ

ಇಲ್ಲದಿರುವಿಕೆ– ಪುನರಾವರ್ತನೆಗಳು ಬಹುಪಾಲು ಅಧ್ಯಯನಗಳ ಲಕ್ಷಣಗಳಾಗಿವೆ. ಪ್ರತಿಭೆ, ಸೃಜನಶೀಲ ಲವಲವಿಕೆಗಳಿಗಿಂತ ಈ ವಿಮರ್ಶೆಗಳಲ್ಲಿ ಹೆಚ್ಚಾಗಿ ಶ್ರಮಶೀಲ ದುಡಿಮೆ, ದುಡಿಮೆಯ ಶ್ರಮಶೀಲತೆ ಎದ್ದು ಕಾಣುತ್ತದೆ. ಶ್ರಮ ಮತ್ತು ಸೃಜನ ಶೀಲತೆಗಳು ಅನ್ಯೋನ್ಯವಾಗಿ ಬೆರೆತ ನಿದರ್ಶನಗಳು ಕಡಿಮೆ. ಶ್ರಮದ ಕುರುಹುಗಳಾಗಿ ಸಮೃದ್ಧವಾದ ಉಲ್ಲೇಖಗಳು–ಉದ್ಧರಣೆಗಳು ಅಧ್ಯಯನಗಳಲ್ಲಿ ನಮ್ಮನ್ನು ಮತ್ತೆ ಮತ್ತೆ ಎದುರಾಗುತ್ತಿರುತ್ತವೆ. (ನೋಡಿ ಉಲ್ಲೇಖ–ಉದ್ಧರಣೆ)

ಬಹುಪಾಲು ಅಧ್ಯಯನಗಳು ಸಾಮಾನ್ಯವಾದ ಪ್ರಮಾಣೀಕೃತ ಮಾದರಿಯೊಂದನ್ನು ಅನುಸರಿಸಿವೆ. ಈ ಮಾದರಿಯು ಸರಿಸುಮಾರು ಈ ಕೆಳಕಂಡಂತಿದೆ;

1. ಅಧ್ಯಯನದ ಚೌಕಟ್ಟನ್ನು ನಿರ್ಮಿಸಿಕೊಳ್ಳುವುದು–ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳುವುದು.2. ಉದ್ದೇಶ, ಅಗತ್ಯ, ಮಹತ್ವ, ವಿಧಾನ, ಸ್ವರೂಪ, ವ್ಯಾಪ್ತಿಗಳನ್ನು ಸ್ಪಷ್ಟಗೊಳಿಸಿಕೊಳ್ಳುವುದು. 3. ತಾವು ಅಧ್ಯಯನ ಮಾಡಲಿರುವ ವಲಯದಲ್ಲಿ ಈಗಾಗಲೇ ಆಗಿರುವ ಅಧ್ಯಯನ/ವಿಮರ್ಶೆಯ ಸಮೀಕ್ಷೆ ಮಾಡುವುದು. 4. ತಮ್ಮ ಅಧ್ಯಯನದ ವಿಷಯ ನಿರ್ವಚಿಸಿಕೊಳ್ಳುವುದು. 5. ವಿಷಯದ ಚಾರಿತ್ರಿಕ ಭೂಮಿಕೆ ಸಿದ್ಧಪಡಿಸಿಕೊಳ್ಳುವುದು/ ಪರಂಪರೆಯ ಭೂಮಿಕೆ ಸಿದ್ಧ ಪಡಿಸಿಕೊಳ್ಳುವುದು. ಅಥವಾ ತಮ್ಮ ವಸ್ತು ವಿಷಯವನ್ನು ಅದರ ಪರಂಪರೆಯಲ್ಲಿಟ್ಟು ತೌಲನಿಕವಾಗಿ ಪರಿಶೀಲಿಸುವುದು 6. ವಿಷಯವನ್ನು ಒಟ್ಟಾರೆಯಾಗಿ ಇಲ್ಲವೆ ವರ್ಗೀಕರಿಸಿಕೊಂಡು ವಿವರವಾಗಿ ಪರಿಶೀಲಿಸುವುದು. 7. ಅಧ್ಯಯನದ ಒಟ್ಟು ಫಲಿತಗಳನ್ನು ಕ್ರೋಡೀಕರಿಸುವುದು. 8. ಉಪಸಂಹಾರವೊಂದನ್ನು ಮಾಡುವುದು. (ಪೂರ್ಣಸಂಹಾರ ಅಲ್ಲ, ಉಪಸಂಹಾರ ಮಾತ್ರ) 9. ಗ್ರಂಥ ಋಣ ಮತ್ತು (ಅನುಬಂಧಗಳು ಇದ್ದರೆ) ಅನುಬಂಧಗಳನ್ನು ನೀಡುವುದು.

ಇದು ಬಹುಪಾಲು ಎಲ್ಲರೂ ಅನುಸರಿಸಿರುವ ಸಾಮಾನ್ಯವಾದ ಒಂದು ಮಾದರಿ. ಇದೊಂದು ಸ್ಟಾಂಡರ್ಡಾದ ಮಾದರಿ. ಕೆಲವು ಅಧ್ಯಯನಗಳು ಮೇಲಿನ ಮಾದರಿಯಲ್ಲಿ ಒಂದೆರಡು ಅಂಶಗಳನ್ನು ಬಿಟ್ಟುಕೊಟ್ಟು ಕಿರಿದಾಗಿರಬಹುದು ಎಂಬುದನ್ನು ಬಿಟ್ಟರೆ ಮಿಕ್ಕಂತೆ ಎಲ್ಲವೂ ಇದೇ ಮಾದರಿಯನ್ನು ಆಚರಿಸಿವೆ. ಮೇಲ್ನೋಟಕ್ಕೇ ಗೋಚರಿಸುವಂತೆ ಇದೊಂದು ಸರಳ ರೇಖಾತ್ಮಕವಾದ ಮಾದರಿ. ಈ ಸರಳ ರೇಖಾತ್ಮಕ ಮಾದರಿಯನ್ನು ಎರಡು ಉದಾಹರಣೆಗಳಿಂದ ಸ್ಪಷ್ಟಪಡಿಸಿಕೊಳ್ಳಬಹುದು.

ರಾಮಾಯಣ ದರ್ಶನಂ ಅಧ್ಯಯನದಲ್ಲಿ (2796) ಮೊದಲಿಗೆ ಮಹಾಕಾವ್ಯದ ನಿರ್ವಚನ ಮಾಡಲಾಗಿದೆ. ಆನಂತರ ರಾಮಾಯಣ ಪರಂಪರೆಗಳನ್ನು ಪರಿಶೀಲಿಸಲಾಗಿದೆ. ಸಂಸ್ಕೃತ ಪರಂಪರೆ, ಇಂಗ್ಲಿಷ್ ಪರಂಪರೆ, ಕನ್ನಡ ಪ್ರಾಚೀನ ಪರಂಪರೆ ಮತ್ತು ನವೋದಯಗಳ ಹಿನ್ನಲೆಯಲ್ಲಿಟ್ಟು ರಾಮಾಯಣ ದರ್ಶನವನ್ನು ಪರಿಶೀಲಿಸಲಾಗಿದೆ. ಆಮೇಲೆ ರಾಮಾಯಣ ದರ್ಶನದ ಪಾತ್ರ, ವಸ್ತು, ಆಶಯ, ಛಂದಸ್ಸು, ಶೈಲಿ, ಉಪಮೆಗಳನ್ನು ಪರಿಶೀಲಿಸಲಾಗಿದೆ. ಕೊನೆಯಲ್ಲಿ ಉಪಸಂಹಾರ ಇದೆ. ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ (2663) ಎಂಬ ಅಧ್ಯಯನದಲ್ಲಿ ಕೂಡ ಮೊದಲಿಗೆ ವೈಚಾರಿಕತೆಯನ್ನು ನಿರ್ವಚಿಸಿಕೊಳ್ಳಲಾಗಿದೆ. ನಂತರ ವೈಚಾರಿಕತೆಯ ಇತಿಹಾಸ ಕುರಿತು ಪರಿಶೀಲಿಸಲಾಗಿದೆ. ಆಮೇಲೆ ಕನ್ನಡ ಸಾಹಿತ್ಯ ಪರಂಪರೆ, ಜಾಗತಿಕ, ಸಂಸ್ಕೃತ, ಭಾರತೀಯ ವಿಚಾರವಂತರ ಪರಂಪರೆಗಳಲ್ಲಿ ಕುವೆಂಪುವನ್ನು ಇಟ್ಟು ಪರಿಶೀಲಿಸಲಾಗಿದೆ. ನಂತರ ವಿಷಯವನ್ನು ನವೋದಯದ ನೆಲೆಯಲ್ಲಿ ಚರ್ಚಿಸಲಾಗಿದೆ. ಆಮೇಲೆ ಕುವೆಂಪು ಸಾಹಿತ್ಯದಲ್ಲಿನ ವೈಚಾರಿಕತೆಯ ಸ್ವರೂಪವನ್ನು ಪರಿಶೀಲಿಸಲಾಗಿದೆ. ಕೊನೆಗೆ ಉಪಸಂಹಾರ ಇದ್ದೇ ಇದೆ. ಈ ರೀತಿ ನಮ್ಮ ಬಹುತೇಕ ಅಧ್ಯಯನಗಳು ಇದೇ ರೇಖಾತ್ಮಕ ಮಾದರಿಯೊಂದನ್ನು ರೂಪಿಸಿಕೊಂಡಿವೆ ಮತ್ತು ಅನುಸರಿಸಿವೆ. ನೇರವಾಗಿ ತಮ್ಮ ಅಧ್ಯಯನ ವಸ್ತುವಿಗೆ ಪ್ರವೇಶಿಸದೆ, ಮೊದಲು ವಿಷಯವನ್ನು ನಿರ್ವಚಿಸಿಕೊಂಡು; ತಮಗೆ ತಾವೆ ಸ್ಪಷ್ಟಪಡಿಸಿಕೊಂಡು ನಂತರ ಅದನ್ನು ಪರಂಪರೆಯಲ್ಲಿಟ್ಟು ತೂಗಿ, ವರ್ತಮಾನದಲ್ಲಿಟ್ಟು ನೋಡಿ, ಆಮೇಲೆ ತಮ್ಮ ವಿಷಯಕ್ಕೆ ಪ್ರವೇಶ ಮಾಡುವ ಒಂದು ರೇಖಾತ್ಮಕ ಮಾದರಿ ಇದು. ಇದೆಲ್ಲವೂ ಮೆತೆಡಾಲಜಿಗೆ ಸಂಬಂಧಿಸಿದ ಮಾತು ಎನ್ನಿಸಿದರೂ ಒಟ್ಟಾರೆ ತಾತ್ವಿಕತೆ ಮತ್ತು ವಿನ್ಯಾಸವೇ ಇದಾಗಿದೆ.

ಕೆಲವು ಅಧ್ಯಯನಗಳು ಈ ರೇಖಾತ್ಮಕ ದಾರಿಯನ್ನು ಕಡಿಮೆ ಮಾಡಿಕೊಂಡಿವೆ. ಕಾಡು ಕಡಲು (ಸುಮಿತ್ರ) ಕುವೆಂಪು ಕಥನ (ಉದ್ದಂಡಯ್ಯ) ಕುವೆಂಪು ಕವಿತೆಗಳಲ್ಲಿ ನಿಸರ್ಗ (ಲಕ್ಷ್ಮೀನಾರಾಯಣ) ಇಂತಹ ಅಧ್ಯಯನಗಳು ಮೊದಲಿಗೆ ತಮ್ಮ ವಿಷಯವನ್ನು ನಿರ್ವಚಿಸಿಕೊಂಡು ನಂತರ ಕನ್ನಡ ಸಾಹಿತ್ಯ ಪರಂಪರೆ–ನವೋದಯಗಳಲ್ಲಿ ಇಟ್ಟು ನೋಡಿ ಆಮೇಲೆ ವಿಷಯಕ್ಕೆ ಪ್ರವೇಶಿಸಿವೆ. ಇಂಥ ಕಡೆ ಮಾದರಿಯು ವ್ಯಾಪ್ತಿಯಲ್ಲಿ ಕಿರಿದಾಗಿದೆ ಅಷ್ಟೆ. ಕುವೆಂಪು ಕಾವ್ಯ ಮೀಮಾಂಸೆ ಮತ್ತು ವಿಮರ್ಶೆ (ಜಯಂತಿ) ಕುವೆಂಪು

ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ ಇಂತಹ ಕೆಲವೇ ಅಧ್ಯಯನಗಳಲ್ಲಿ ವಿಷಯಕ್ಕೆ ನೇರವಾಗಿ ಪ್ರವೇಶಿಸಲಾಗಿದೆ. ಇಲ್ಲಿ ರೇಖಾತ್ಮಕ ಮಾದರಿಗಿಂತ ಬೇರೆಯಾದ ವರ್ಗೀಕರಣ ವಿನ್ಯಾಸವನ್ನು ಅನುಸರಿಸಲಾಗಿದೆ. ವಿಷಯವನ್ನು ಸಾಹಿತ್ಯದ ವಸ್ತು ಮತ್ತು ಸಾಂಸ್ಕೃತಿಕ ದೃಷ್ಟಿ ಹಾಗೂ ಪ್ರಕಾರ ದೃಷ್ಟಿಗಳಲ್ಲಿ ವರ್ಗೀಕರಿಸಿಕೊಂಡು ಇಲ್ಲಿ ಅಧ್ಯಯನ ನಡೆಸಲಾಗಿದೆ. ಹೀಗಾಗಿ ಅಧ್ಯಯನಗಳಲ್ಲಿ ಮುಖ್ಯವಾಗಿ ಎರಡು ವಿನ್ಯಾಸಗಳನ್ನು ಕಾಣಬಹುದಾಗಿದೆ. 1. ರೇಖಾತ್ಮಕ ಮಾದರಿ 2. ವರ್ಗೀಕರಣ ವಿನ್ಯಾಸ, ಈಗಾಗಲೇ ಗುರ್ತಿಸಿರುವಂತೆ ಈ ಎರಡು ಮಾದರಿ–ವಿನ್ಯಾಸಗಳಲ್ಲಿ ಮತ್ತು ಬಹುಪಾಲು ಎಲ್ಲ ಅಧ್ಯಯನಗಳಲ್ಲಿ ಇರುವ ಮೂರನೇ ವಿನ್ಯಾಸವೆಂದರೆ 3. ತೌಲನಿಕ ವಿನ್ಯಾಸ. ಈ ಮಾದರಿ ವಿನ್ಯಾಸಗಳು ಏಕರೂಪಿಯಾಗದೆ ಭಿನ್ನ ದೃಷ್ಟಿಗಳಿಂದ ಕೂಡಿರುವುದೇ ಇವುಗಳ ಲಕ್ಷಣ.

ಪಿಎಚ್.ಡಿ ಪದವಿಗಾಗಿ ನಡೆದಿರುವ ಅಧ್ಯಯನಗಳಲ್ಲದೆ ಅಧ್ಯಯನವನ್ನೆ ಉದ್ದೇಶವಾಗಿ ಇರಿಸಿಕೊಂಡ ಅಧ್ಯಯನಗಳು ಹತ್ತಾರು ನಡೆದಿವೆ. ನಿರ್ದಿಷ್ಟ ಅಧ್ಯಯನದ ಚೌಕಟ್ಟನ್ನು ಹೊಂದಿರುವ ಅಭ್ಯಾಸಗಳನ್ನೆಲ್ಲ ಇಲ್ಲಿ ಅಧ್ಯಯನ ರೂಪಿ ವಿಮರ್ಶೆ ಎಂದೇ ಕರೆದುಕೊಳ್ಳಲಾಗಿದೆ. ದೇಜಗೌ, ರಾಗೌ, ಎಚ್.ತಿಪ್ಪೇರುದ್ರಸ್ವಾಮಿ, ಎ.ಎಸ್.ವೇಣು ಗೋಪಾಲರಾವ್, ನರಹಳ್ಳಿ ಬಾಲಸುಬ್ರಮಣ್ಯ, ಉಷಾ ವಿಜಯ ಮೊಳೆಯಾರ ಮುಂತಾದ ಹಲವಾರು ಜನ ಇಂಥ ಅಧ್ಯಯನಗಳನ್ನು ನಡೆಸಿದ್ದಾರೆ. ಇವರೆಲ್ಲರ ಅಧ್ಯಯನಗಳಲ್ಲಿ ಇರುವ ಸಾಮಾನ್ಯ ಮಾದರಿಯು ಸರಿಸುಮಾರು ಮಹಾಪ್ರಬಂಧ ಅಧ್ಯಯನಗಳ ಸಾಮಾನ್ಯ ಮಾದರಿಯನ್ನೆ ಹೋಲುತ್ತದೆ. 1. ಅಧ್ಯಯನದ ಪೂರ್ವಪೀಠಿಕೆ, ವಿಷಯದ ನಿರ್ವಚನವುಳ್ಳ ಪ್ರವೇಶವೊಂದನ್ನು ಮೊದಲಿಗೆ ಕಟ್ಟಿಕೊಳ್ಳುವುದು, 2. ನಂತರ ವಿಷಯವನ್ನು ಸಾಂಸ್ಕೃತಿಕ, ಚಾರಿತ್ರಿಕ ಹಿನ್ನಲೆಯಲ್ಲಿ ವಿವರಿಸಿಕೊಳ್ಳುವುದು ಮತ್ತು ಕವಿಯ ವಯಕ್ತಿಕ–ಪ್ರಾದೇಶಿಕ ಹಿನ್ನೆಲೆಗಳನ್ನು ವಿವರಿಸಿಕೊಳ್ಳುವುದು, ಅನಂತರ 3. ವಿಷಯಕ್ಕೆ ಅನುಸಾರವಾಗಿ ಕೃತಿಗಳ, ಪಾತ್ರಗಳ, ಪ್ರಕಾರಗಳ, ವಸ್ತುಗಳ ವರ್ಗೀಕೃತ ಪರಿಶೀಲನೆ ನಡೆಸುವುದು, ಕೊನೆಯಲ್ಲಿ 4. ಉಪಸಂಹಾರ–ಸಮಾಪ್ತಿ ಮಾಡುವುದು. ಇದು ಎಲ್ಲ ಅಧ್ಯಯನಗಳೂ ಅನುಸರಿಸಿರುವ ಸಾಮಾನ್ಯವಾದ ಮಾದರಿ ಆಗಿದೆ.

ಈ ಅಧ್ಯಯನಗಳ ಬಹುಪಾಲು ವಿಮರ್ಶೆಯು ಸಾಹಿತ್ಯವನ್ನು ಆಸ್ವಾದನಾ ಧಾಟಿಯಲ್ಲಿ ವಿವರಿಸುತ್ತದೆ. ಇಲ್ಲಿನ ವಿಮರ್ಶೆಯ ಪ್ರಧಾನವಾದ ಮಾದರಿಯು ವಿವರಣಾತ್ಮಕ ವಿಮರ್ಶೆಯೇ ಆಗಿದೆ. ಕುವೆಂಪು ಶೈಲಿ, ಕುವೆಂಪು ಅವರ ಶಿಕ್ಷಣ ತತ್ವ ವಿಚಾರ ಇಂತಹ ಅಧ್ಯಯನಗಳಲ್ಲಂತು ಕವಿಯೇ ವಿಮರ್ಶಕನ ಮೈದುಂಬಿ ಬಂದಂತೆ ವಿಮರ್ಶೆಯ ಶೈಲಿ ಕೂಡ ಆಸ್ವಾದನಾ ಧಾಟಿಯನ್ನು ಹಿಡಿದಿದೆ. (2552, 2631) ಇಲ್ಲಿನ ಶಿಕ್ಷಣ ದೃಷ್ಟಿಯ ಅಧ್ಯಯನದಲ್ಲಿ ಕವಿಯನ್ನೇ ವೈದ್ಯನನ್ನಾಗಿ, ಶಿಕ್ಷಕನ್ನಾಗಿ, ಸಮಾಜ ಸುಧಾರಕನನ್ನಾಗಿ, ಪ್ರವಾದಿಯನ್ನಾಗಿ ಹಲವು ಪಾತ್ರಗಳಲ್ಲಿ ಕಲ್ಪಿಸಿಕೊಳ್ಳಲಾಗಿದೆ. ಇಂತಹ ಸಾಧ್ಯತೆಯು ಕುವೆಂಪು ವ್ಯಕ್ತಿತ್ವಕ್ಕೆ ಇತ್ತು ಮತ್ತು ಸಾಹಿತ್ಯಕ್ಕೆ ಯಾವತ್ತಿಗೂ ಇದೆ ಎಂಬ ನಿಲುವನ್ನು ಇಲ್ಲಿ ಪ್ರಕಟಿಸಲಾಗಿದೆ. ವಿಚಾರ ಮತ್ತು ದರ್ಶನ ದೃಷ್ಟಿಯಲ್ಲಿ ಸಾಹಿತ್ಯವನ್ನು ನೋಡಲಾಗಿದೆ. ವಿಕಾಸವಾದಿ ವಿಮರ್ಶಾಮಾರ್ಗವನ್ನು ಇಲ್ಲಿ ಪ್ರಧಾನವಾಗಿ ಅನುಸರಿಸಲಾಗಿದೆ. ವ್ಯಕ್ತಿತ್ವದಲ್ಲಿನ ವಿಕಾಸವನ್ನು ದಾರ್ಶನಿಕ ದೃಷ್ಟಿಯ ವಿಕಾಸ ಎಂದೇ ಭಾವಿಸಲಾಗಿದೆ. ಲೇಖಕನ ವಿಚಾರ ಮತ್ತು ದಾರ್ಶನಿಕತೆಯು ಕಾಲದೇಶ ಬದ್ಧವಾದ ಉತ್ಪನ್ನವೆಂದು ಇಲ್ಲಿ ಭಾವಿಸಲಾಗಿದೆ. ಲೇಖಕ, ಸಾಹಿತ್ಯ ಮತ್ತು ಸಮಾಜಗಳನ್ನು ಈ ಅಧ್ಯಯನವು ಪರಸ್ಪರಾವಲಂಬಿ ಎಂದು ಬಾವಿಸುತ್ತದೆ.

ಇಲ್ಲಿನ ಎಲ್ಲ ಅಧ್ಯಯನಗಳಲ್ಲೂ ಕಾಣಿಸಿಕೊಳ್ಳುವ ಒಂದು ಸಾಮಾನ್ಯ ಲಕ್ಷಣವೆಂದರೆ ವಿವಿಮರ್ಶೆ. ವಿವಿಮರ್ಶೆ ಇಲ್ಲದ ಅಧ್ಯಯನಗಳನ್ನು ಕಲ್ಪಸಿಕೊಳ್ಳಲೂ ಸಾಧ್ಯವಿಲ್ಲ. ದೇಜಗೌ ಅವರ ಅಧ್ಯಯನಗಳಲ್ಲಂತೂ ಇದು ಒಂದು ಕಡ್ಡಾಯವಾದ ಆಚರಣೆ. ಇಲ್ಲಿನ ಎಲ್ಲ ಅಧ್ಯಯನಗಳೂ ತಮ್ಮ ತಮ್ಮ ವಿಷಯಕ್ಕೆ ಸಂಬಂಧಿಸಿದ ಅದುವರೆಗಿನ ಕುವೆಂಪು ಬಗೆಗಿನ ವಿಮರ್ಶೆಯನ್ನು ಖಂಡಿಸುವ ಇಲ್ಲವೆ ಸಮರ್ಥನೆಗೆ ಬಳಸಿಕೊಳ್ಳುವ ಕೆಲಸವನ್ನು ಮಾಡಿವೆ. ಇಲ್ಲಿನ ಇನ್ನೊಂದು ಲಕ್ಷಣ ಎಂದರೆ ಪ್ರತಿಯೊಂದು ವಿಷಯವನ್ನು ಬಿಡಿ ಬಿಡಿಯಾಗಿ ಚರ್ಚಿಸುವುದು. ಇಲ್ಲಿನ ಬಹುಪಾಲು ವಿಮರ್ಶೆಯು ಬಿಡಿ ಬಿಡಿಯಾದ ವಿಶ್ಲೇಷಣೆಗಳಿಂದ ಇಡಿಯ ಕಡೆಗೆ ಚಲಿಸುತ್ತದೆ. ಬಿಡಿಯ ಮೂಲಕವೆ ಇಡಿಯನ್ನೂ ಕಟ್ಟಿಕೊಳ್ಳುತ್ತದೆ. ಇಲ್ಲಿನ ವಿವರಗಳು ಬಹುಪಾಲು ವರ್ಗೀಕರಣ ವಿನ್ಯಾಸದಲ್ಲಿಯೆ ಸಂಭವಿಸಿವೆ. ಯಾವುದಾದರೂ ವಸ್ತು, ಪ್ರಕಾರವನ್ನು ಅಧ್ಯಯನಕ್ಕೆ ತೆಗೆದುಕೊಂಡರೆ ಅದನ್ನು ಭಿನ್ನ ಭಿನ್ನವಾಗಿ ವರ್ಗೀಕರಿಸಿಕೊಂಡು (ಉದಾಹರಣೆಗೆ ಕಾವ್ಯವೆಂದರೆ ಪ್ರಣಯಗೀತೆಗಳು, ಮಕ್ಕಳ ಕವನಗಳು. ಪ್ರಕೃತಿ ಕವನಗಳು, ಇತ್ಯಾದಿಯಾಗಿ ವರ್ಗೀಕರಿಸಿಕೊಂಡು) ಅಧ್ಯಯನವನ್ನು ನಡೆಸಲಾಗಿದೆ. ಹಾಗಾಗಿ ಇಲ್ಲಿನ ಇನ್ನೊಂದು ಲಕ್ಷಣವು ವರ್ಗೀಕರಣ ವಿನ್ಯಾಸ ಆಗಿದೆ.

ಇಲ್ಲಿ ಬಹುತೇಕ ವಿವರಗಳು, ವಿಶ್ಲೇಷಣೆಗಳು ಚಾರಿತ್ರಿಕವಾದ ಮಾರ್ಗವನ್ನು ಹಿಡಿದಿವೆ. ಸಾಂಸ್ಕೃತಿಕ, ಸಾಹಿತ್ಯಕ, ದಾರ್ಶನಿಕ ಹೀಗೆ ಹಲವು ನೆಲೆಯ/ವಲಯದ ಅಧ್ಯಯನಗಳಲ್ಲಿ ಚಾರಿತ್ರಿಕವಾದ ತುಲನೆ ಮತ್ತು ಪ್ರೇರಣೆ ಹಾಗು ಹಿನ್ನಲೆಗಳ ಶೋಧನೆಗಳು ನಡೆದಿವೆ.

ಮೀಮಾಂಸಾ ದೃಷ್ಟಿಯಲ್ಲಿಯೂ ಇಲ್ಲಿ ಅಧ್ಯಯನಗಳು ನಡೆದಿವೆ. ಈ ದೃಷ್ಟಿಯ ಅಧ್ಯಯನಗಳಲ್ಲಿ ಎರಡು ವಲಯಗಳಿವೆ 1. ಕುವೆಂಪು ಅವರ ಮೀಮಾಂಸಾ ಬರವಣಿಗೆಯನ್ನು ಪರಿಶೀಲಿಸುವ ವಲಯ 2. ರೂಪಕ, ಉಪಮೆ, ಮಹೋಪಮೆಗಳ, ರಸಭಾವಗಳ ಹಿನ್ನಲೆಯಲ್ಲಿ ಕುವೆಂಪು ಸಾಹಿತ್ಯವನ್ನು ಪರಿಶೀಲಿಸುವ ವಲಯ. ಇಲ್ಲಿನ ಎರಡನೆಯ ವಲಯದಲ್ಲಿ ಕುವೆಂಪು ಕಾವ್ಯದಲ್ಲಿ ವ್ಯಾತ್ಸಲ್ಯಭಾವ ಎಂಬ ಅಧ್ಯಯನ ಉಲ್ಲೇಖಾರ್ಹ (2761) ಇಲ್ಲಿ ಕುವೆಂಪು ಕಾವ್ಯ ಮತ್ತು ಮಹಾಕಾವ್ಯಗಳನ್ನು ರಸದೃಷ್ಟಿಯಲ್ಲಿ ಅಧ್ಯಯನ ಮಾಡಲಾಗಿದೆ. ಕುವೆಂಪು ಕಾವ್ಯದ ಪ್ರಧಾನವಾದ ಸ್ಥಾಯಿಭಾವವು ವಾತ್ಸಲ್ಯಭಾವ ಎಂಬ ಪ್ರಮೇಯವನ್ನು ಇಲ್ಲಿ ಮಂಡಿಸಲಾಗಿದೆ. ಆಯ್ಕೆ ಮತ್ತು ಸಂಯೋಜನೆಯ ಮಾದರಿಯಲ್ಲಿ ಕಾವ್ಯದ ಆಯ್ದ ಭಾಗಗಳನ್ನು ಉದಾಹರಿಸಿ ವಿವರಿಸುತ್ತ ತಮ್ಮ ತತ್ವಕ್ಕೆ (ಪ್ರಮೇಯಕ್ಕೆ) ತಕ್ಕಂತೆ ಕಾವ್ಯವನ್ನು ಅನ್ವಯಿಸುವ ಅನ್ವಯೀಕರಣ ಮಾದರಿಯನ್ನು ಇಲ್ಲಿ ಅನುಸರಿಸಲಾಗಿದೆ. ಸಿದ್ಧಮಾದರಿಗೆ ಕಾವ್ಯವನ್ನು ಅನ್ವಯಿಸುವ ಅಧ್ಯಯನವಿದು. ಇಂತಹ ಅಧ್ಯಯನ ಮತ್ತು ಕುವೆಂಪು ಸಾಹಿತ್ಯದಲ್ಲಿ ರೈತ, ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ, ಕುವೆಂಪು ಸಾಹಿತ್ಯದಲ್ಲಿ ಮಕ್ಕಳು ಇಂತಹ ಹಲವಾರು ಅಧ್ಯಯನಗಳಲ್ಲಿ ಕುವೆಂಪು ಸಾಹಿತ್ಯದ ಭಾಗ ಮತ್ತು ಕುವೆಂಪು ವಿಚಾರಗಳ ಉಲ್ಲೇಖಗಳನ್ನು ಮಾಡುತ್ತ ವಿವರಿಸುವ ಮಾರ್ಗವನ್ನು ಅನುಸರಿಸಲಾಗಿದೆ. ವಸ್ತು ಆಧಾರಿತ–ವಸ್ತು ವಿಶ್ಲೇಷಕ ಮಾರ್ಗಗಳು ಇಲ್ಲಿ ಮುಖ್ಯವಾಗಿ ಬಳಕೆಯಾಗಿವೆ.

ಅಧ್ಯಯನ ರೂಪಿ ವಿಮರ್ಶೆಯ ಮಾರ್ಗವು ಏನಿದ್ದರೂ ತನ್ನ ವಿಶಿಷ್ಟತೆ–ವಿಭಿನ್ನತೆಗಳನ್ನು ಹೊಂದಿರುವುದು ತಮ್ಮ ಹೊರ ಆವರಣದಲ್ಲಿ ಮಾತ್ರ. ತಾಂತ್ರಿಕ ಸಂಗತಿ ಚೌಕಟ್ಟುಗಳಲ್ಲಿ ಮಾತ್ರ. ಒಳ ಹೂರಣಗಳೆಲ್ಲ ಲೇಖನರೂಪಿ ವಿಮರ್ಶೆಗಳಲ್ಲಿನ ಭಿನ್ನ ವಿಮರ್ಶಾ ಮಾದರಿ, ದೃಷ್ಟಿ, ಮಾರ್ಗಗಳನ್ನು ಒಳಗೊಂಡ ವಿಮರ್ಶೆಯೇ ಆಗಿರುತ್ತದೆ. ಲೇಖನರೂಪಿ ವಿಮರ್ಶೆಗಳ ಸಂಕಲನಗಳಲ್ಲಿ ಲೇಖನಗಳು ಇದ್ದರೆ; ಅಧ್ಯಯನಗಳಲ್ಲಿ ಅಧ್ಯಾಯಗಳಿರುತ್ತವೆ. ಗಾತ್ರದ ದೃಷ್ಟಿಯಿಂದ ಇವುಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿರಬಹುದೇ ವಿನಾ ಹೂರಣದ ದೃಷ್ಟಿಯಲ್ಲಿ ಲೇಖನಗಳಿಗೂ ಇವುಗಳಿಗೂ ಅಂತಹ ವ್ಯತ್ಯಾಸ ಏನೂ ಇರುವುದಿಲ್ಲ. (ವಿಮರ್ಶಾ ಲೇಖನಗಳನ್ನು ವಿಮರ್ಶಾ ಪ್ರಬಂಧಗಳೆಂದು ಕರೆಯುವ ರೂಢಿಯೂ ನಮ್ಮಲ್ಲಿದೆ.) ಅಲ್ಲದೆ ಎಲ್ಲಾ ವಿಮರ್ಶೆಯೂ ಅಧ್ಯಯನದ ಫಲಿತವೇ ಎಂಬುದನ್ನು ಈಗಾಗಲೇ ಹೇಳಲಾಗಿದೆ.

ಅಧ್ಯಯನ ಕೃತಿಗಳ ಅಧ್ಯಾಯಗಳಲ್ಲಿ ಪರಸ್ಪರ ಸಂಬಂಧ, ಸಾತತ್ಯ ಇರುತ್ತದೆ. ಆದರೆ (ವಿಮರ್ಶಾ ಲೇಖನಗಳನ್ನು ಸಂಕಲಿಸಿದ) ಸಂಕಲಿತ ಕೃತಿಗಳ ಲೇಖನಗಳಲ್ಲಿ ಪರಸ್ಪರ ಸಂಬಂಧ ಇದ್ದರೆ ಇರಬಹುದು. ಇಲ್ಲದೆಯೂ ಇರಬಹುದು. ಸಾತತ್ಯ ಕೂಡ ಇರಲೇಬೇಕೆಂದೇನೂ ಇಲ್ಲ. ಕೆಲವೊಂದು ಸಂಕಲನಗಳು ಗುಣ–ಗಾತ್ರ–ವಿಷಯಗಳಲ್ಲಿ ತುಂಬಾ ವೈವಿಧ್ಯತೆಯನ್ನೇ ಹೊಂದಿರುತ್ತವೆ. ಆದರೆ ಅಧ್ಯಯನ ಕೃತಿಗಳಲ್ಲಿ ಸಾಮಾನ್ಯವಾಗಿ ಒಂದು ಸ್ಟಾಂಡರ್ಡಾದ ಪ್ಯಾಟರ್ನು ಅಥವಾ ಮಾದರಿಯನ್ನು ಅನುಸರಿಸಲಾಗುತ್ತದೆ. ಅಲ್ಲದೆ ಅಧ್ಯಯನಗಳಲ್ಲಿ ಯಾವುದಾದರೂ ಒಂದು ನಿರ್ದಿಷ್ಟ ಚೌಕಟ್ಟು ಇರುತ್ತದೆ. ಲೇಖನ ಸಂಕಲನಗಳಲ್ಲಿ ಹಾಗೆ 'ಒಂದು ಚೌಕಟ್ಟು' ಎಂಬುದು ಇದ್ದರೆ ಇರಬಹುದು, ಇಲ್ಲದೆಯೂ ಇರಬಹುದು. ಅಧ್ಯಯನಗಳಲ್ಲಿ ನಿರ್ದಿಷ್ಟವಾದ ಉದ್ದೇಶ, ವಿಧಾನಗಳು ಇರಬಹುದು. ಹಾಗೇ ಸಂಕಲನಗಳಲ್ಲಿ ಉದ್ದೇಶ, ವಿಧಾನಗಳು ನಿರ್ದಿಷ್ಟವಾಗಿ ಇಲ್ಲದೇ ಇರಬಹುದು. ಅಧ್ಯಯನಗಳಲ್ಲಿ ಇರಬಹುದಾದ ತಾಂತ್ರಿಕವಾದ ಸಂಗತಿಗಳು ಸಂಕಲಿತ ಕೃತಿಗಳಲ್ಲಿ/ಲೇಖನಗಳಲ್ಲಿ ಇರುವುದಿಲ್ಲ. ಅಧ್ಯಯನಗಳಲ್ಲಿ ತಾಂತ್ರಿಕತೆಯ ಅಂಗವಾಗಿಯೇ ಉಪಸಂಹಾರವೆಂಬ ವಿಧಿ ಆಚರಣೆಯೊಂದು ಇರುತ್ತದೆ. ಮತ್ತು ಇವುಗಳಲ್ಲಿ ಫಲಿತಗಳನ್ನು ನಿರ್ದೇಶಿಸಿ ಹೆಚ್ಚು ಕಡಿಮೆ ಉಪಸಂಹಾರವನ್ನು ಪೂರ್ಣ ಸಂಹಾರ ಎಂಬಂತೆಯೇ ಬರೆಯಲಾಗಿರುತ್ತದೆ. ಆದರೆ ಲೇಖನಗಳು ಹಾಗೆ ಇರುವುದಿಲ್ಲ. ಇವುಗಳು ಸಾಮಾನ್ಯವಾಗಿ ತೆರೆದ ರಚನೆಗಳಾಗಿರುತ್ತದೆ.

ತೌಲನಿಕ ದೃಷ್ಟಿ, ಪ್ರಕಾರದೃಷ್ಟಿ, ಸಂಸ್ಕೃತಿದೃಷ್ಟಿ, ಪ್ರಾದೇಶಿಕದೃಷ್ಟಿ, ವಿಚಾರದೃಷ್ಟಿ, ಸ್ತ್ರೀವಾದಿದೃಷ್ಟಿ, ಪರಿಕರದೃಷ್ಟಿ, ಪರಿಸರದೃಷ್ಟಿ, ಹೀಗೆ ವಿಭಿನ್ನ ದೃಷ್ಟಿ–ಕೆಟಗರಿಗಳಲ್ಲಿ ನಮ್ಮ ಎಲ್ಲ ಸಂಶೋಧನಾ ಅಧ್ಯಯನದ ಮತ್ತು ಅಧ್ಯಯನೋದ್ದೇಶಿತ ಅಧ್ಯಯನಗಳ ಅಧ್ಯಾಯ/ಲೇಖನಗಳು ಒಂದಲ್ಲ ಒಂದು ಕೆಟಗರಿಗೆ ಸೇರಿಯೇ ಸೇರುತ್ತವೆ. ಹಾಗಾಗಿ ಆಯಾಯಾ ಅಧ್ಯಾಯ/ಲೇಖನಗಳಿಗೆ ಅಧ್ಯಯನದ ಚೌಕಟ್ಟಿನಲ್ಲಿ ಒಟ್ಟಿಗೇ ಕೂರುವ

ಲಕ್ಷಣವೂ ಮತ್ತು ಬೇರೆ ಬೇರೆ ಕೆಟಗರಿಗಳಿಗೆ ಸೇರಿ ಕೊಳ್ಳುವ ಲಕ್ಷಣಗಳೂ ಇವೆ. ಆದ್ದರಿಂದ ಬೇರೆ ಬೇರೆ ದೃಷ್ಟಿ-ಕೆಟಗರಿಗಳ ತಾತ್ವಿಕತೆ-ವಿನ್ಯಾಸಗಳನ್ನು ವಿವರಿಸಿಕೊಳ್ಳುವಾಗ ಒಟ್ಟಾರೆಯಾಗಿ ಎಲ್ಲವನ್ನೂ ಗಮನಿಸುವುದರಿಂದ ಇಲ್ಲಿ ಅಧ್ಯಯನರೂಪಿ ವಿಮರ್ಶೆಗಳ ವಿಶಿಷ್ಟತೆಗಳನ್ನು-ವಿಭಿನ್ನತೆಗಳನ್ನು ಮಾತ್ರ ಗಮನಿಸಲಾಗಿದೆ.

**5.2.2. ಒಡನಾಟರೂಪಿ ವಿಮರ್ಶೆ (ಒಡನಾಟ ಕಥನ)**

ನಮ್ಮ ವಿಮರ್ಶೆಯ ಒಂದು ಪ್ರಧಾನ ಮಾರ್ಗ ಅಥವಾ ಪಂಥ ಆಗುವಷ್ಟು ಶಕ್ತಿ ಮತ್ತು ವ್ಯಾಪ್ತಿ ಈ ಒಡನಾಟ ರೂಪಿ ವಿಮರ್ಶೆಗೆ ಇದೆ. ನಮ್ಮಲ್ಲಿ ಈ ಒಡನಾಟ ರೂಪಿ ವಿಮರ್ಶೆಯು ಸ್ಥೂಲವಾಗಿ ಮೂರು ರೀತಿಗಳಲ್ಲಿ ಪ್ರಕಟವಾಗಿದೆ. 1. ಹಲವಾರು ವಿಮರ್ಶಾ ಲೇಖನಗಳಲ್ಲಿ ಅಂತರ್ಗತವಾದ ದೃಷ್ಟಿಯಾಗಿ, ದೃಷ್ಟಾಂತವಾಗಿ ಇಲ್ಲವೆ ನಿದರ್ಶನವಾಗಿ 2. ಒಡನಾಟ ರೂಪಿ ಕೃತಿ, ಲೇಖನಗಳನ್ನು ಬರೆಯಬೇಕೆಂಬ ಉದ್ದೇಶದಿಂದೆ ಮತ್ತು 3. ಪತ್ರರೂಪಿ ವ್ಯವಹಾರಗಳಲ್ಲಿ ಹೀಗೆ ಇದು ಮೂರು ಬಗೆಗಳಲ್ಲಿದೆ. ಕವಿಯ ಜೊತೆಗಿನ ಒಡನಾಟದ ನೆನಪುಗಳನ್ನು ನಮ್ಮಲ್ಲಿ ಹಲವಾರು ಜನ ಬರೆದಿದ್ದಾರೆ ಅವರಲ್ಲಿ ತೇಜಸ್ವಿ, ತಾರಿಣಿ ಚಿದಾನಂದ, ದೇಜಗೌ, ಎಸ್.ಎಂ.ವೃಷಬೇಂದ್ರಸ್ವಾಮಿ, ಕೆ.ವಿ.ಸುಬ್ಬಣ್ಣ, ಪ್ರಭುಶಂಕರ, ಎಚ್.ಎಲ್.ನಾಗೇಗೌಡ, ಎಲ್.ಎಸ್.ಶೇಷಗಿರಿರಾವ್, ಜಿ.ಎಸ್. ಶಿವರುದ್ರಪ್ಪ ಹೀಗೆ ಅನೇಕರು ಬರೆದಿದ್ದಾರೆ.

ಕುವೆಂಪು ಅವರ ಗುಣ, ಸ್ವಭಾವ, ವರ್ತನೆ, ವ್ಯಕ್ತಿತ್ವಗಳು; ಬೇರೆ ಬೇರೆ ವರ್ತಮಾನದ ವಿಚಾರಗಳಿಗೆ ಅವರು ಸ್ಪಂದಿಸುತ್ತಿದ್ದ ರೀತಿ; ಕುವೆಂಪು ಅವರ ಸಾಹಿತ್ಯರಚನೆಯ ವಿಚಾರಗಳು; ಅವರ ಖಾಸಗಿ ಅಭಿರುಚಿಗಳು-ಅವರ ದಿನಚರಿ-ಕೌಟಂಬಿಕ ಸಂಬಂಧಗಳು; ಸಾಹಿತ್ಯ-ಲೋಕ-ಲೇಖಕನ ನಡುವಿನ ಸಂಬಂಧಗಳು; ಸರ್ಕಾರ-ಅಧಿಕಾರ ಮತ್ತು ಲೇಖಕನ ನಡುವಿನ ಸಂಬಂಧಗಳು; ಕುವೆಂಪು ಸಾಹಿತ್ಯದ ವಿಮರ್ಶೆ ಮತ್ತು ವಿವಿಮರ್ಶೆ; ಕುವೆಂಪು ಮೇಲಣ ಪ್ರಭಾವ ಮತ್ತು ಒಡನಾಡಿಗಳ ಮೇಲೆ ಕುವೆಂಪು ಕಡೆಯಿಂದ ಆದ ಪ್ರಭಾವ; ಕುವೆಂಪು ಅವರ ಅನುಕ್ತ ಆತ್ಮಚರಿತ್ರೆಯ ತುಣುಕುಗಳು, ವಿಮರ್ಶಕರ ನೆನಪುಗಳ ನಿರೂಪಣೆಗಳು, ದಿನಚರಿಯ ಮತ್ತು ಆತ್ಮಚರಿತ್ರೆಯ ತುಣುಕುಗಳು ಇತ್ಯಾದಿಯಾಗಿ ಹತ್ತು ಹಲವು ನೆಲೆಗಳಲ್ಲಿ ಒಡನಾಟರೂಪಿ ಬರಹಗಳು ರಚನೆಯಾಗಿವೆ.

ಈ ವಿಮರ್ಶೆಯಲ್ಲಿ ವ್ಯಕ್ತಿ ಮತ್ತು ಸಾಹಿತ್ಯವನ್ನು ಅಭೇದವೆಂಬಂತೆ, ಸಾಹಿತ್ಯ ಮತ್ತು ಸಮಾಜಗಳನ್ನು ಪರಸ್ಪರಾಲಂಬಿಗಳಂತೆ ಭಾವಿಸಲಾಗುತ್ತದೆ. ಬದುಕು ಮತ್ತು ಚಿಂತನೆಗಳು (ಬರವಣಿಗೆ) ಬೇರೆ ಬೇರೆ ಅಲ್ಲ ಎಂಬ ನಂಬಿಕೆ ಇಲ್ಲಿರುತ್ತದೆ. ವಯಕ್ತಿಕವಾದ ಸಂಬಂಧಗಳು, ನೆನಪುಗಳು ಇಲ್ಲಿ ಪ್ರಧಾನವಾಗಿ ಬರುತ್ತ ಆ ಮೂಲಕವೇ ಸಾಹಿತ್ಯದ ವಿಶ್ಲೇಷಣೆ ಮತ್ತು ಸಮಾಜದ ವಿಶ್ಲೇಷಣೆ ನಡೆಯುತ್ತಿರುತ್ತದೆ. ಇಲ್ಲಿ ಚರಿತ್ರೆ ಮತ್ತು ವರ್ತಮಾನಗಳು, ಕಲ್ಪನೆ ಮತ್ತು ವಾಸ್ತವಗಳು ಪರಸ್ಪರ ಮುಖಾಮುಖಿ ಆಗುತ್ತಿರುತ್ತವೆ. ಅಂತಿಮವಾಗಿ ಇದೂ ಕೂಡ ಸಂಸ್ಕೃತಿ ಚಿಂತನೆಯೇ ಹೌದಾದರೂ ಕೆಲವೆಡೆ ಇದು ಆತ್ಮ ಪ್ರಶಂಸೆಯ, ಕೊಚ್ಚಿಕೊಳ್ಳುವಿಕೆಯ, ಧನ್ಯತಾಭಾವ-ಗೌರವಭಾವ-ಪ್ರೀತಿಗಳ ಪ್ರದರ್ಶನ ಆಗಿ ಕೂಡ ಕಾಣಿಸಿಕೊಂಡಿದೆ.

ಸಂದರ್ಶನಗಳೂ ಒಡನಾಟದ ಫಲಗಳೇ ಆದರೂ ಅವುಗಳನ್ನು ಒಡನಾಟರೂಪಿ ವಿಮರ್ಶೆಗಳೆನ್ನಲು ಬರುವುದಿಲ್ಲ. ಸಂದರ್ಶನಗಳಲ್ಲಿ ಸಾಂದರ್ಭಿಕತೆಯ ಮತ್ತು ಸಂಬಂಧಿಕತೆಯ ರಾಜಕಾರಣವು ಹೆಚ್ಚು ಕೆಲಸ ಮಾಡಿರುತ್ತದೆ. ಕೆಲವೊಮ್ಮೆ ಒಡನಾಟರೂಪಿ ಸಂಕಥನವು ಅತ್ತ ಸಾಹಿತ್ಯ ವಿಮರ್ಶೆಯೂ ಆಗದೆ ಇತ್ತ ಒಡನಾಟ ಕಥನವೂ ಆಗದೆ ಸಾಮಾಜಿಕ ಚಿಂತನೆಯ ನೆಪದಲ್ಲಿ ವಯಕ್ತಿಕ ನೆನಪುಗಳ ಲಹರಿಯಾಗುವ-ಇವೆಲ್ಲವುಗಳ ಸಂಕರರೂಪಿ ಆಗುವ ಉದಾರಣೆಗಳೂ ಇಲ್ಲಿವೆ. (43-ಪುಟ; 636) ಆಯ್ಕೆ ಮತ್ತು ಅಲಕ್ಷತೆಯ ರಾಜಕಾರಣ ಮತ್ತು ಸಂಬಂಧಿಕತೆಯ ರಾಜಕಾರಣಗಳು ಒಡನಾಟ ರೂಪಿ ವಿಮರ್ಶೆಯಲ್ಲಿ ಸಂಬಂಧಿಗಳಂತೆ ಕಾಣುತ್ತವೆ. ಇದಕ್ಕೆ ಒಂದು ತುಣುಕನ್ನು ನೋಡಬಹುದು;

> ಒಂದು ಸಂಜೆ ನಾನು ಕುವೆಂಪು ಅವರೊಡನೆ ಮಾತಾಡುತ್ತಾ ಕುಳಿತಿದ್ದಾಗ ನವ್ಯಕವಿ ಗೋಪಾಲಕೃಷ್ಣ ಅಡಿಗರು ಇದ್ದಕ್ಕಿದ್ದಂತೆ ಅಲ್ಲಿಗೆ ಬಂದರು. ನನಗೆ ಪರಮಾಶ್ಚರ್ಯವಾಯಿತು. ಏಕೆಂದರೆ ಅಡಿಗರೇ ಮುಂತಾಗಿ ನವ್ಯ ಕವಿಗಳು ಶ್ರೀ ಕುವೆಂಪು ಅವರ ವಿಷಯದಲ್ಲೂ, ಅವರ ಕಾವ್ಯದ ವಿಷಯದಲ್ಲೂ ಅಷ್ಟು ಪ್ರಸನ್ನರಾಗಿರಲಿಲ್ಲ. ಅಷ್ಟೇ ಅಲ್ಲ, 'ಕುವೆಂಪು ಕವಿಯೇ ಅಲ್ಲ, ಕುವೆಂಪು ಕವಿ ಎಂದಾದರೆ ನಾನು ಕವಿಯೇ ಅಲ್ಲ' ಎಂದು ಅಡಿಗರು ಸಾರಿದ್ದರು. ಜನ ಮನೋಮಂದಿರದಲ್ಲಿ ನೆಲೆಸಿರುವ ಕವಿ ಯಾರು ಎಂಬುದನ್ನು ಕಾಲ ಇಷ್ಟು ಬೇಗ ನಿರ್ಧರಿಸುತ್ತದೆ ಎಂದು ಆಗ ನಾನು ಊಹಿಸಿಯೂ

ಇರಲಿಲ್ಲ. ಅಡಿಗರು ಏಕಾಏಕಿ ಕುವೆಂಪು ಅವರ ಮನೆಗೆ ಬಂದದ್ದೇಕೆ? ಎಂದು ತಿಳಿಯಲಿಲ್ಲ.

ಅಡಿಗರು ಕುವೆಂಪು ಅವರಿಗೆ ನಮಸ್ಕಾರ ಹೇಳಿದರು. ಕುವೆಂಪು ಅಡಿಗರನ್ನು ತಮ್ಮ ಸಹಜ ಮಂದಸ್ಮಿತದಿಂದ ಸ್ವಾಗತಿಸಿದರು. ಅಡಿಗರು 'ಏನೋ ಹುಡುಗ ತಿಳಿಯದೆ ಮಾಡಿಬಿಟ್ಟ ಅವನನ್ನ ಬಿಡಿಸಿಬಿಡಿ' ಎಂದರು. ಕುವೆಂಪು 'ಆಗಲಿ ಈಗಲೇ ಪೋಲಿಸ್ ಸ್ಟೇಶನ್ನಿಗೆ ಫೋನ್ ಮಾಡಿ ಹೇಳುತ್ತೇನೆ. ನೀವು ನಿಶ್ಚಿಂತರಾಗಿ ಮನೆಗೆ ಹೋಗಿ' ಎಂದರು. ಅಡಿಗರು 'ತುಂಬಾ ಥ್ಯಾಂಕ್ಸ್' ಎಂದರು. ಅವರು ಹೊರಡುವ ಮುನ್ನ ಕುವೆಂಪು ಹೇಳಿದರು: 'ಆದರೂ ಹುಡುಗ ನಿಮ್ಮ ನವ್ಯವನ್ನೂ ಹಳೆಯದೆನಿಸುವಷ್ಟರ ಮಟ್ಟಿಗೆ ನವ್ಯಾತಿನವ್ಯವಾಗಿ ಮಾಡಿದ್ದಾನೆ' ಎಂದು ಹೇಳಿ ಜೋರಾಗಿ ನಕ್ಕರು. ಅಡಿಗರೂ ನಗುತ್ತಾ ಹೊರಟು ಹೋದರು. ಇದು ಯಾವುದರ ಹಿಂದೂ ಮುಂದೂ ತಿಳಿಯದ ನಾನು ಸುಮ್ಮನೆ ಪಿಳಪಿಳನೆ ಕಣ್ಣು ಬಿಡುತ್ತಾ ಕುಳಿತಿದ್ದೆ. ಅನಂತರ ಕುವೆಂಪು ಅವರು ಅಂದು ಬೆಳಗ್ಗೆಯೋ ಮಧ್ಯಾಹ್ನವೋ ನಡೆದಿದ್ದ ಘಟನೆಯನ್ನು ತಿಳಿಸಿದರು.

ತರುಣರೊಬ್ಬರು ಬಂದು ತಾವು ಗೋಪಾಲಕೃಷ್ಣ ಅಡಿಗರ ಮಗನೆಂದೂ, ತಮ್ಮ ತಂದೆ ಐವತ್ತು ರೂಪಾಯಿ ಬೇಕೆಂದು ಹೇಳಿ ಕಳಿಸಿದ್ದಾರೆಂದೂ ಹೇಳಿದ. ಕುವೆಂಪು ಅವರಿಗೆ ಎರಡು ಕಾರಣಗಳಿಗಾಗಿ ಅನುಮಾನ ಮೂಡಿತಂತೆ. ಒಂದು ಅಡಿಗರಿಗೆ ಅಷ್ಟು ದೊಡ್ಡ ಮಗ ಇರುವುದು ಸಾಧ್ಯವಿಲ್ಲ. ಎರಡನೆಯದು ಅಡಿಗರು ತಮ್ಮ ಮನೆಗೆ ಹಣಕ್ಕಾಗಿ ಹೇಳಿ ಕಳಿಸುತ್ತಾರೆಯೇ? ಎಂದು. ಆದ್ದರಿಂದ ಅವರು ಒಂಟಿಕೊಪ್ಪಲು ಪೋಲಿಸ್ ಸ್ಟೇಷನ್ನಿಗೆ ಫೋನ್ ಮಾಡಿದರು. ಪೋಲೀಸರು ಅವನನ್ನು ಕರೆದುಕೊಂಡು ಹೋಗಿ ವಿಚಾರಿಸಿದಾಗ ಆತ ಅಡಿಗರ ದೂರದ ಸಂಬಂಧಿ ಎಂದು ತಿಳಿಯಿತು. ಅಡಿಗರು ಬಂದು ಹೇಳಿ ಹೋದ ಮೇಲೆ ಕುವೆಂಪು ಪೋಲೀಸರಿಗೆ ಫೋನು ಮಾಡಿದರು. ಆ ತರುಣನ ಬಿಡುಗಡೆಯಾಯಿತು. (2807–ಪುಟ: 28–29)

ಇಂತಹ ಉಲ್ಲೇಖಗಳ ಆಯ್ಕೆ ಮತ್ತು ಜೋಡಣೆಯಲ್ಲಿ ಒಂದು ಸಂಬಂಧಿಕತೆಯ ರಾಜಕಾರಣವಿದೆ. ಪ್ರಭುಶಂಕರರ ನೆನಪಿನಿಂದ ಮರೆಯಾಗಿ ಹೋದ ಎಷ್ಟೋ ಒಡನಾಟದ ಪ್ರಸಂಗಗಳಂತೆ ಈ ಅಡಿಗರ ಕಡೆಯ ಹುಡುಗನ 'ನವ್ಯಾತಿನವ್ಯ' ಕೆಲಸವೂ ಮರೆತು ಹೋಗಬಹುದಿತ್ತಲ್ಲ! ಆದರೆ ಕೆಲವನ್ನು ಮರೆಯಲಾಗುವುದಿಲ್ಲ. ಅದೇ ಸಂಬಂಧಿಕತೆಯ ರಾಜಕಾರಣ. ಅಡಿಗರು ಕುವೆಂಪು ಮನೆಗೆ ಬಂದಿದ್ದನ್ನು ಸ್ವಾರಸ್ಯವಾಗಿ ವಿವರಿಸುವಾಗ ಇಂತಹ ಪ್ರಸಂಗಗಳು ನೆನಪಿನ ನಿರೂಪಣೆಗಳಾದರೂ ಸ್ವಾರಸ್ಯಕಾರಿ ಸಾಹಿತ್ಯ ಪ್ರಬಂಧಗಳ ಸ್ವರೂಪವನ್ನು ಪಡೆದುಕೊಳ್ಳುವುದು ಒಂದು ವಿಶೇಷ. ನಾನು ಕಂಡ ಕುವೆಂಪು ಎಂಬ ಧಾಟಿಯಲ್ಲಿ ಕುವೆಂಪು ಬಗೆಗಿನ ವ್ಯಕ್ತಿತ್ವ ಚಿತ್ರಣಗಳನ್ನು ಚಿತ್ರಿಸುವ ಅವರ ಜೀವನದಲ್ಲಿ ನಡೆದ ಅಪರೂಪದ ಪ್ರಸಂಗಗಳನ್ನು ಪ್ರಸ್ತಾಪಿಸುವ ಧಾಟಿ ಇಂತಹ ಬರಹಗಳಲ್ಲಿ ಇರುತ್ತದೆ.

ಕುವೆಂಪು ನೆನಪಿನ ದೋಣಿ ಬರೆದಿದ್ದರೂ ಕುವೆಂಪು ಜೀವನ ಚರಿತ್ರೆಗಳು ಬೇಕಾದಷ್ಟು ಹುಟ್ಟಿವೆಯಲ್ಲಾ ಯಾಕೆ? ಕುವೆಂಪು ಬಗ್ಗೆ–ಜೊತೆ ನಮ್ಮ ಅನೇಕ ಜನರಲ್ಲಿ ಅವರವರದೇ ನೆನಪಿನ ದೋಣಿಗಳಿವೆ. (835–ಚಂಪಾ) ಕುವೆಂಪು ಸಾಹಿತ್ಯದಿಂದ ಮಾತ್ರ ನಮ್ಮ ಸಮಾಜ ಕಲಿಯುವುದು ಕಲಿತರೆ ಸಾಲದು. ಅವರ ಬದುಕಿನ ಬಗೆಯಿಂದ ಕೂಡ ಕಲಿಯಬೇಕು ಎಂಬ ದೃಷ್ಟಿ ಅವರ ಜೀವನ ಚರಿತ್ರೆಗಳಲ್ಲಿ; ಒಡನಾಟರೂಪಿ ವಿಮರ್ಶೆಗಳಲ್ಲಿ ಇದೆ. ಅಲ್ಲದೆ ಇಲ್ಲಿ ಕವಿಯ ಆತ್ಮಚರಿತ್ರೆಯಲ್ಲಿ ಸಿಕ್ಕದ ಅನುಕ್ತ ಅಧ್ಯಾಯಗಳೆಷ್ಟೋ ಕಥನಗೊಂಡಿವೆ. ಕವಿ ಹೇಳಿರುವುದಕ್ಕಿಂತ ಹೇಳದಿರುವುದೂ ಸಾಕಷ್ಟಿರುತ್ತದೆ ಅಲ್ಲವೇ! ಅಲ್ಲದೆ ಕುವೆಂಪು ಅಂತಹ ದೊಡ್ಡವರ ಖಾಸಗಿತನ, ಖಾಸಗಿ ಬದುಕು, ನಂಬಿಕೆಗಳ ಬಗ್ಗೆ ಜನಕ್ಕೆ ಸಾಕಷ್ಟು ಕುತೂಹಲ ಇರುತ್ತದೆ. ಇಂತಹ ಕುತೂಹಲವನ್ನು ತಣಿಸುವ ಕೆಲಸವನ್ನೂ ಈ ಒಡನಾಟ ಕಥನಗಳು ಮಾಡಿವೆ. ಕುವೆಂಪು ಅವರ ಜೊತೆಗಿನ ತಮ್ಮ ಹಳೆ ನೆನಪುಗಳನ್ನು ಮೆಲುಕು ಹಾಕುವ; ಮತ್ತು ಆ ಮೂಲಕ ಕುವೆಂಪು ಅವರ ಘನತೆ–ವ್ಯಕ್ತಿತ್ವಗಳನ್ನು ಕಟ್ಟಿಕೊಡುವ ಕೆಲಸವನ್ನು ಇಂತಹ ನೆನಪಿನ ನಿರೂಪಣೆಗಳು ಮಾಡುತ್ತವೆ. ತಾರಿಣಿ ಚಿದಾನಂದ ಅವರ ಮಗಳು ಕಂಡ ಕುವೆಂಪು ಕೃತಿಯಲ್ಲಿ ಎನ್.ಡಿ.ವೆಂಕಟೇಶ್, ದೇವಂಗಿ ಚಂದ್ರಶೇಖರ, ಶ್ರೀಮತಿ ಕನಕಲಕ್ಷ್ಮಿ, ಅವರ ಹಲವು ನೆನಪಿನ ದೋಣಿಗಳು ನಿರೂಪಣೆಗೊಂಡಿವೆ. (2703–ಪುಟ: 481, 515)

ಕುವೆಂಪು ಅವರ ವ್ಯಕ್ತಿತ್ವದ ವ್ಯಾಖ್ಯಾನವನ್ನು ಒಡನಾಟಕಥನವು ಸಾಕಷ್ಟು ಮಾಡುತ್ತ ಬಂದಿದೆ. ವ್ಯಕ್ತಿತ್ವದ ವ್ಯಾಖ್ಯಾನವು ಕೇವಲ ಒಡನಾಟದ ನೆನಪುಗಳಿಂದ ಮಾತ್ರ ಸಂಭವಿಸುವುದಿಲ್ಲ. ಲೇಖಕನ ಸಾಹಿತ್ಯ, ಆತನ ಜೀವನ, ಲೇಖಕ ಮತ್ತು ಸಮಾಜದ ನಡುವಿನ ಸಂಬಂಧಗಳೆಲ್ಲವು ಇಲ್ಲಿ ಒಟ್ಟಾರೆ ವ್ಯಾಖ್ಯಾನಕ್ಕೆ ಜೊತೆಯಾಗುತ್ತಿರುತ್ತವೆ. ವ್ಯಕ್ತಿತ್ವದ ವ್ಯಾಖ್ಯಾನವು ಸಾಂಸ್ಕೃತಿಕ ನಾಯಕತ್ವವನ್ನು ವಹಿಸಬಲ್ಲ

ತಾಕತ್ತು ಲೇಖಕನಿಗೆ ಇದೆಯೇ ಎಂದು ಪರೀಕ್ಷಿಸುತ್ತಿರುತ್ತದೆ. ಕುವೆಂಪು ಕುರಿತ ಬಹುತೇಕ ವ್ಯಕ್ತಿತ್ವ ವ್ಯಾಖ್ಯಾನಗಳಲ್ಲಿ ಕುವೆಂಪು ಬಗೆಗೆ ಪ್ರೀತಿ–ಗೌರವಗಳೇ ಹೆಚ್ಚಾಗಿ ಎದ್ದು ಕಾಣುತ್ತವೆ. (2806–ಪುಟ; 66) ಈ ವ್ಯಾಖ್ಯಾನಗಳು ಅಂತಿಮವಾಗಿ ಐಕಾನು ನಿರ್ಮಾಣಕ್ಕೆ ದುಡಿಯುತ್ತವೆ. ಲೇಖಕನನ್ನು ಪೂಜ್ಯಾರ್ಹ ವಿಗ್ರಹವನ್ನಾಗಿ ಕಟೆಯುತ್ತಿರುತ್ತವೆ. ದೇಜಗೌ, ಪ್ರಭುಶಂಕರ, ವೃಷಬೇಂದ್ರಸ್ವಾಮಿ ಇಂಥವರ ಒಡನಾಟ ಕಥನಗಳಲ್ಲಿ ಇದೇ ಸಂಭವಿಸಿದೆ.

ಕವಿಯ ವ್ಯಕ್ತಿತ್ವದ ಬೇರೆ ಬೇರೆ ಮುಖಗಳನ್ನು ಪರಿಚಯ ಮಾಡಿಕೊಡುವ ಕೆಲಸವನ್ನು ಈ ಒಡನಾಟ ಕಥನವು ಮಾಡುತ್ತದೆ. ಕುವೆಂಪು ತುಂಬಾ ಗಂಭೀರವದನರು, ಹಾಸ್ಯಪ್ರವೃತ್ತಿಗಿಂತ ಗಾಂಭೀರ್ಯವೇ ಅವರ ವ್ಯಕ್ತಿತ್ವದ ಲಕ್ಷಣ ಎಂಬಂತೆ ಬಹುಪಾಲು ಒಡನಾಟ ಕಥನಗಳು ಬಿಂಬಿಸಿವೆ. ಆದರೆ ಅವರಲ್ಲಿಯೂ ಇದ್ದ ಹಾಸ್ಯ ಪ್ರಜ್ಞೆಯನ್ನು ದೇವಂಗಿ ಚಂದ್ರಶೇಖರರು ತಮ್ಮ ಒಂದು ಲೇಖನದಲ್ಲಿ ವಿವರಿಸಿದ್ದಾರೆ. (ನೋಡಿ: 1905, ಗಂಗೋತ್ರಿ–ಪುಟ: 493). ಅಲಿಗೆ ಪುಟ್ಟಯ್ಯನಾಯಕರ ಒಂದು ನೆನಪಿನ ಕಥನದಲ್ಲಿ ಕುವೆಂಪು ಅವರು ಪುನರ್ಜನ್ಮ–ಪೂರ್ವಜನ್ಮ ಕಲ್ಪನೆಗಳನ್ನು ಹೇಗೆ ನಂಬುತ್ತಿದ್ದರು ಎಂಬ ಬಗ್ಗೆ ವಿವರಗಳಿವೆ. (ನೋಡಿ: 2589–ಪುಟ: 13–15) ಕುವೆಂಪು ಅವರು ಹೆಚ್ಚಾಗಿ ಯಾವ ಸಭೆ ಸಮಾರಂಭಗಳಿಗೂ ಅಷ್ಟಾಗಿ ಹೋಗಲು ಇಚ್ಛೆ ಪಡುತ್ತಿರಲಿಲ್ಲ. ಅವರು ಕುಟೀಚಕ ಸ್ವಭಾವದವರಾಗಿದ್ದರು ಎಂಬ ಬಗ್ಗೆ ಹಾ.ಮಾ.ನಾಯಕರ ದೆಹಲಿಗೆ ಕುವೆಂಪು ಕೃತಿಯಲ್ಲಿ ವಿವರಗಳಿವೆ. (ನೋಡಿ: 2589–ಪುಟ: 41–48) ಸುದೀರ್ಘ ಬ್ರಹ್ಮಚರ್ಯದ ಬಗೆಗೆ ಕುವೆಂಪು ಅವರ ಅಭಿಪ್ರಾಯ ಏನು ಎಂಬ ಬಗ್ಗೆ ಎಚ್.ಎಲ್.ನಾಗೇಗೌಡರ ಮಲೆನಾಡ ವಾಲ್ಮೀಕಿ ಕೃತಿಯಲ್ಲಿ ಒಂದು ಕಡೆ ವಿವರ ಇದೆ. (ನೋಡಿ: 2705–ಪುಟ: 77) ಕುವೆಂಪು ಅವರ ಸಂಗೀತಾಸಕ್ತಿ, ವಾಯುವಿಹಾರ ಅಭಿರುಚಿ, ಕುವೆಂಪು ಅವರ ಪ್ರಿಯವಾದ ಹೋಳಿಗೆ, ಉದ್ದಿನವಡೆ ವಿಚಾರಗಳು ತಾರಿಣಿ ಚಿದಾನಂದ ಅವರ 'ಮಗಳು ಕಂಡ ಕುವೆಂಪು' ಕೃತಿಯಲ್ಲಿ ಇವೆ. (2703–ಪುಟ:109, 312 ಮತ್ತು 378) ಕುವೆಂಪು ಅವರ ಕೊನೆಯ ದಿನಗಳ ಬದುಕಿನ ಬಗ್ಗೆ ದೇಜಗೌ ಕೃತಿಯಲ್ಲಿ ವಿವರಗಳಿವೆ. (ನೋಡಿ; 2547) ಹೀಗೆ ಹಲವು ಒಡನಾಟದ ಕಥನಗಳು ಕುವೆಂಪು ಅವರ ಗುಣ–ಸ್ವಭಾವಗಳನ್ನು ಪರಿಚಯಿಸುವ, ಅವರ ಅಪರೂಪದ ನಡವಳಿಕೆಗಳನ್ನು ಪರಿಚಯಿಸುವ ಕೆಲಸ ಮಾಡುತ್ತವೆ. ಆ ಮೂಲಕ ಕವಿಯ ಸಾಹಿತ್ಯ ವ್ಯಕ್ತಿತ್ವಕ್ಕಿಂತ ಭಿನ್ನವಾದ ಖಾಸಗಿ ವ್ಯಕ್ತಿತ್ವದ ಹಲವು ಮುಖಗಳನ್ನು ಇಂತಹ ಬರವಣಿಗೆಗಳು ನಿರ್ವಚಿಸಲು–ಚಿತ್ರಿಸಲು ಯತ್ನಿಸುತ್ತವೆ.

ಕುವೆಂಪು ಅವರ ಬೇರೆ ಬೇರೆ ಕೃತಿರಚನೆಯ ಹಿನ್ನೆಲೆಗಳು, ಅವರ ಸಾಹಿತ್ಯ ಬರವಣಿಗೆಯ ಸಿದ್ಧತೆಗಳು, ಅವರು ಬರೆಯಬೇಕೆಂದು ಅಂದುಕೊಂಡು ಬರೆಯಲಾಗದೆ ಹೋದ ಮಹಾಕಾದಂಬರಿ 'ಕಾಲೋಸ್ಮಿ'ಯ ವಿಚಾರ, ಹಾಗೇ ಅವರು ಬೆರಳ್ಗೆ ಕೊರಳ್ ನಾಟಕದನಂತರ ಬರೆಯಬೇಕು ಎಂದುಕೊಂಡಿದ್ದ ಕೊರಳ್ಗೆ ಉರುಳ್ ಮತ್ತು ಉರುಳ್ಗೆ ಕುರುಳ್ ಎಂಬ ಇನ್ನೆರಡು ನಾಟಕಗಳ ವಿಚಾರ, ಮದುಮಗಳು ಕಾದಂಬರಿಯ ಮ್ಯಾಪಿನ ವಿಚಾರ (2703 ಮತ್ತು 2705), 16 ಕಂದ ಪದ್ಯಗಳ ಮೂಲಕ ಪಂಪನ ಕುರಿತ ಒಂದು ಪ್ರಶಸ್ತಿ ಕಾವ್ಯವನ್ನು ಕುವೆಂಪು ಬರೆದಿರುವ ವಿಚಾರ (ಆಪ್ತರು ಆಚಾರ್ಯರು–ಟಿ.ವಿ.ವೆಂಕಟಾಚಲಶಾಸ್ತ್ರಿ, 2005; ಪುಟ 113), ಕುವೆಂಪು ಅಲ್ಲಮ ಮತ್ತು ಗೋರಕ್ಷ ಪ್ರಸಂಗದ ಬಗ್ಗೆ ಒಂದು ನಾಟಕ ಬರೆಯಬೇಕು ಅಂದುಕೊಂಡಿದ್ದ ವಿಚಾರ (2494–ಪುಟ: 239), ಹೀಗೆ ಲೇಖಕರ ಸಾಹಿತ್ಯ ರಚನೆಯ ಪೂರ್ವಾಪರ ವಿಚಾರಗಳನ್ನು ಓದುಗರಿಗೆ ಒದಗಿಸಿಕೊಡುವ ಕೆಲಸವನ್ನು ಒಡನಾಟ ಕಥನಗಳು ಮಾಡುತ್ತವೆ. ಓದುಗರಿಗೆ ಅಗತ್ಯವಾಗಿ ತಿಳಿಸಬೇಕು ಎನ್ನಿಸುವಂತಹ ಅಪರೂಪದ ಪ್ರಸಂಗಗಳು, ಸ್ವಾರಸ್ಯಕರವಾದ ಕವಿಯ ಕೌಟುಂಬಿಕ–ಖಾಸಗಿ ವಿಚಾರಗಳು ಕೂಡ ಇಲ್ಲಿ ನಿರೂಪಿತವಾಗುತ್ತವೆ. ಅಪರೂಪದ ಕೆಲವು ಪ್ರಸಂಗಗಳಲ್ಲಿ ಬಿಜಾಪುರದ ಅಜ್ಜನ ಉದಯರವಿ ಭೇಟಿ ಪ್ರಸಂಗ (2703–ಪುಟ; 276) ತುಂಬಾ ಸ್ವಾರಸ್ಯಕರವಾದುದು.

ಒಡನಾಟ ರೂಪಿ ವಿಮರ್ಶೆಗಳು ಸಾಹಿತಿಯ ಸಾಹಿತ್ಯ ಮತ್ತು ಬದುಕು ಈ ಎರಡರ ನಡುವೆ ಒಂದು ಸಂಬಂಧ ಇರಬೇಕು ಎಂದು ಭಾವಿಸುತ್ತವೆ. ತತ್ವ ಹೇಳುವುದೊಂದು ಬದನೆಕಾಯಿ ತಿನ್ನುವುದೊಂದು ಎಂಬಂತೆ ಮನುಷ್ಯ ಬಾಳಬಾರದು; ನಡೆ–ನುಡಿ ಒಂದಾಗಿರಬೇಕು ಎಂಬ ತತ್ವ ಒಡನಾಟರೂಪಿ ವಿಮರ್ಶೆಯಲ್ಲೂ ಇದೆ. ಸಾಹಿತ್ಯ–ಸಮಾಜ–ಲೇಖಕನ ಬದುಕು ಈ ಮೂರರ ನಡುವಿನ ಸಾತತ್ಯವನ್ನು ವಾಸ್ತವಾದಿ ಮತ್ತು ನೈತಿಕ ನೆಲೆಯಲ್ಲಿ ನಮ್ಮ ವಿಮರ್ಶೆಯು (ಒಡನಾಟ) ವಿವೇಚಿಸುತ್ತದೆ. ಕುವೆಂಪು ಬಾಳಿದ ರೀತಿಯನ್ನು ವಿಶೇಷವಾಗಿ ಯಾವತ್ತಿಗೂ ಪ್ರಸ್ತುತ ಮತ್ತು

ಅನುಕರಣೀಯ ಎಂದು ಈ ವಿಮರ್ಶೆಯು ಭಾವಿಸುತ್ತದೆ. ತಮ್ಮ ಒಂದು ಆಶಯ ಭಾಷಣದಲ್ಲಿ ಜಿ.ಎಸ್. ಸಿದ್ಧಲಿಂಗಯ್ಯ ಇದನ್ನು ಚೆನ್ನಾಗಿ ವಿವರಿಸಿದ್ದಾರೆ. (2625–ಪುಟ;3–10)

ಒಡನಾಟಕಥನಗಳ ಬಹುಮುಖ್ಯವಾದ ಸ್ವರೂಪವೆಂದರೆ ಲೇಖಕನ ಜೊತೆಗಿನ ತನ್ನ ಒಡನಾಟದ ಅನುಭವಗಳನ್ನು–ನೆನಪುಗಳನ್ನು ಆಯ್ದು ನಿರೂಪಿಸುವುದು. ಆ ಮೂಲಕ ತಮ್ಮ ಮತ್ತು ಅವರ ಸ್ನೇಹ ಸಂಬಂಧ, ರಕ್ತ ಸಂಬಂಧ, ಆತ್ಮೀಯತೆ, ಗುರುಶಿಷ್ಯ ಸಂಬಂಧ, ಇವುಗಳನ್ನೆಲ್ಲ ವಿವರಿಸುವುದು. ಸಂಬಂಧಗಳ ನಿರೂಪಣೆಯಲ್ಲಿ–ಒಡನಾಟದ ಸಿಹಿ ನೆನಪುಗಳು ಹೆಚ್ಚು ನಿರೂಪಿತವಾಗಿವೆ. ಧನ್ಯತಾಭಾವ–ಪುನೀತಭಾವಗಳೇ ಇಲ್ಲೆಲ್ಲ ಹೆಚ್ಚಾಗಿವೆ. ಕುವೆಂಪು ಅಂಥವರ ಸಾನ್ನಿಧ್ಯ–ಸಾಮಿಪ್ಯ ದೊರೆಕಿದ್ದೇ ಒಂದು ಪುಣ್ಯ ಎಂಬ ಭಾವವೇ ಇಲ್ಲಿ ಹೆಚ್ಚಾಗಿದೆ. ಒಡನಾಟದ ನೆನಪಿಗಳು ನಡೆದ ಘಟನೆಗಳ, ಸಮಾರಂಭಗಳ ಆಯ್ದ ಪ್ರಸಂಗಗಳ ನಿರೂಪಣೆಗಳಾಗದೆ ಸಂಕ್ಷಿಪ್ತ ವರದಿಗಳಾಗುವ ಪ್ರವೃತ್ತಿಯೂ ಇಲ್ಲಿ ಪ್ರಕಟವಾಗಿದೆ. (ನೋಡಿ; 2547–ಪುಟ; 33ರಿಂದ45) ಕೆಲವೊಮ್ಮೆ ಇಂತಹ ಕಡೆ ಆತ್ಮಾಭಿಮಾನ, ಆತ್ಮ ಪ್ರಶಂಸೆಗಳೂ ತಲೆಹಾಕಬಹುದು. ಸಂಬಂಧಿಕತೆಯ ರಾಜಕಾರಣದ ಅಭಿನಯ ಈ ಒಡನಾಟ ಕಥನದಲ್ಲಿ ಬಹು ಚೆನ್ನಾಗಿ ವ್ಯಕ್ತವಾಗಿದೆ. ಸಮಾಜ, ಲೇಖಕನ ವ್ಯಕ್ತಿತ್ವ ಮತ್ತು ಬದುಕು ಹಾಗೂ ಸಾಹಿತ್ಯಗಳೆಲ್ಲ ವಿಮರ್ಶೆಯಲ್ಲಿ ಇಲ್ಲಿ ಕಲಸಿಕೊಳ್ಳುತ್ತವೆ. ಸಾಹಿತ್ಯ ಪ್ರಕಾರಗಳು ಇಲ್ಲಿ ಕಲಸಿಕೊಳ್ಳುತ್ತವೆ. ಪ್ರಕಾರಗಳನ್ನು ಮೀರಿದ ಅಪ್ರಕಾರಗಳು ಸಂಭವಿಸುತ್ತವೆ.

ತೇಜಸ್ವಿಯವರ ಅಣ್ಣನ ನೆನಪು, ಕೆವಿಸುಬ್ಬಣ್ಣನವರ ಕುವೆಂಪುಗೆ ಪುಟ್ಟ ಕನ್ನಡಿಗಳು ಮೇಲುನೋಟಕ್ಕೆ ಒಡನಾಟಕಥನಗಳಾಗಿ ಕಾಣುತ್ತವೆ. ಆದರೆ ಇವು ಅಪ್ರಕಾರ ಮಾದರಿಗಳು. ಸಾಹಿತ್ಯ ವಿಮರ್ಶೆ, ಸಮಾಜ ವಿಮರ್ಶೆ, ಲೇಖಕನ ಜೀವನಚರಿತ್ರೆ, ಸಾಮಾಜಿಕ ಚರಿತ್ರೆ, ಕಲ್ಪನೆ, ವಾಸ್ತವ, ನೆನಪು, ತಮ್ಮದೇ ಆದ ಸಂಸ್ಕೃತಿ ಚಿಂತನೆಗಳೆಲ್ಲವೂ ಇಲ್ಲಿ ಬೆರೆತು ಹೋಗುತ್ತವೆ. ಸುಬ್ಬಣ್ಣನವರ ಪುಸ್ತಕವು ಕುವೆಂಪು ಜೊತೆಗಿನ ತಮ್ಮ ಶಿಷ್ಯಬದುಕಿನ ನೆನಪುಗಳಿಂದ ಆರಂಭವಾದರೂ; ಬರೆಯಲ್ಪಟ್ಟ ದಿನಚರಿಯಂತೆ ಹೊರನೋಟಕ್ಕೆ ಕಾಣುವುದಾದರೂ ಅದು ಬರಿ ನೆನಪುಗಳ ಕಥನಕ್ಕೆ ಅಥವಾ ಒಂದೆರಡು ದಿನಗಳ ದಿನಚರಿಯ ನಿರೂಪಣೆಗೆ ಸೀಮಿತವಾಗುವುದಿಲ್ಲ. ಸಾಹಿತ್ಯ ಕಥನ ಮತ್ತು ಸಂಸ್ಕೃತಿಕಥನಗಳ ಸಂಕರತಳಿಯಾಗಿ ರೂಪಾಂತರ ಹೊಂದುತ್ತ ಹೋಗುತ್ತದೆ. ಕವಿಯ ಮೌಲ್ಯ ಮಾಪನವೂ, ಒಡನಾಟ ಕಥನವೂ, ಸಾಮಾಜಿಕ ಚಿಂತನೆಯೂ ಎಲ್ಲವೂ ಆಗುತ್ತ ಹೋಗುತ್ತದೆ. ಹಾಗಾಗಿ ಇದೊಂದು ಅಪ್ರಕಾರ ಮಾದರಿ. ತೇಜಸ್ವಿಯವರ ಅಣ್ಣನ ನೆನಪೂ ಕೂಡ ಹೀಗೆಯೇ ಅದಕ್ಕೆ ಕಾದಂಬರಿಯಾಗುವ ಗುಣವೂ, ಸಂಸ್ಕೃತಿಕಥನವಾಗುವ ಗುಣವೂ, ಜೀವನ ಚರಿತ್ರೆಯಾಗುವ ಆಯಾಮವೂ, ಒಡನಾಟ ಕಥನದ ರೂಪವೂ, ಆತ್ಮಚರಿತ್ರೆಯಾಗುವ ಸಾಮಾಜಿಕ ಚರಿತ್ರೆಯಾಗುವ ಸಾಧ್ಯತೆಯೂ ಇದೆ. ಹಾಗಾಗಿ ಅಣ್ಣನ ನೆನಪು ಕೃತಿ ಕೂಡ ಒಂದು ಅಪ್ರಕಾರ ಮಾದರಿ.

ಎಚ್.ಎಲ್.ನಾಗೇಗೌಡರ ಮಲೆನಾಡ ವಾಲ್ಮೀಕಿ ಕೂಡ ಸರಿಸುಮಾರು ಇದೇ ರೀತಿಯ ಕೃತಿ. ಇಲ್ಲಿ ನಾಗೇಗೌಡರ ದಿನಚರಿ, ಕುವೆಂಪು ವ್ಯಕ್ತಿತ್ವ, ಅವರ ಕುರಿತ ಅಪರೂಪದ ಪ್ರಸಂಗಗಳು, ಸಮಾಜ ವಿಮರ್ಶೆ, ಕುವೆಂಪು ಸಾಹಿತ್ಯ ಕುರಿತ ಅಭಿಪ್ರಾಯಗಳು ಹೀಗೆ ಎಲ್ಲವೂ ಸಂಗಮಿಸಿವೆ. ತುಂಡು ತುಂಡು ನೆನಪುಗಳನ್ನು ಹೊಲೆದ ಕೌದಿಯಂತೆ ಈ ಕೃತಿ ಇದೆ. ಇಲ್ಲಿ ಕೂಡ ಸಾಹಿತ್ಯ ವಿಮರ್ಶೆ, ಪ್ರೇರಣೆ–ಪ್ರಭಾವ, ಕವಿ ವ್ಯಕ್ತಿತ್ವ, ಒಡನಾಟದ ನೆನಪುಗಳ ನಿರೂಪಣೆ, ಸಾಮಾಜಿಕ ಚರಿತ್ರೆಯ ತುಣುಕುಗಳು, ಆತ್ಮಚರಿತ್ರೆಯ ತುಣುಕುಗಳು ಹೀಗೆ ಎಲ್ಲವೂ ಒಟ್ಟಿಗೆ ಸೇರಿಸಲ್ಪಟ್ಟಿವೆ. ಒಂದು ಕ್ರಮ ಎನ್ನುವುದು ಇಲ್ಲದ ಅಪ್ರಕಾರರೂಪಿ ಬರವಣಿಗೆಯಂತೆಯೇ ಇದು ಇದೆ. ಒಡನಾಟರೂಪಿ ಕಥನದಲ್ಲಿ ಸಾಹಿತ್ಯದ ವಿಶ್ಲೇಷಣೆ ನಡೆಯುವುದಾದರೂ ಇಲ್ಲಿ ಒಡನಾಟದ ಕಥನಕ್ಕೇ, ನೆನಪುಗಳ ನಿರೂಪಣೆಗೇ ಪ್ರಾಶಸ್ತ್ಯ ಹೆಚ್ಚು. ಆದರೆ ಬೇರೆಲ್ಲ ಕೃತಿಗಳಿಗೆ ಹೋಲಿಸಿದರೆ ಎಸ್.ಎಂ.ವೃಷಬೇಂದ್ರಸ್ವಾಮಿಯವರ ತರಗತಿಗಳಲ್ಲಿ ಕುವೆಂಪು ಕೃತಿ ಮಾತ್ರ ಭಿನ್ನವಾದದ್ದು (2688) ವಿದ್ಯಾರ್ಥಿಗಳಿಗೆ ಕುವೆಂಪು ತರಗತಿಗಳಲ್ಲಿ ಬೋಧಿಸಿದ ತೌಲನಿಕ ಕಾವ್ಯ ಮೀಮಾಂಸೆಯ, ದರ್ಶನ ವಿಮರ್ಶೆಯ ಪಾಠಗಳನ್ನು ಸಂಗ್ರಹಿಸಿ; ಅವರ ಮೀಮಾಂಸಾ ಚಿಂತನೆಗಳು ಉಳ್ಳ ಒಂದು ಕೃತಿಯನ್ನೇ ವೃಷಭೇಂದ್ರಸ್ವಾಮಿ ಸಿದ್ಧಪಡಿಸಿದ್ದಾರೆ. ಆ ಮೂಲಕ ಬೋಧನೆಯ ಒಂದು ಮಾದರಿಯನ್ನು ಇಲ್ಲಿ ನಿರ್ಮಿಸಿದ್ದಾರೆ. ಇದಲ್ಲದೆ ಇವರು 1950–55ರ ತಮ್ಮ ಮೈಸೂರಿನ ವಿದ್ಯಾರ್ಥಿಜೀವನದ ದಿನಚರಿಯ ಕನ್ನಡಿಯಲ್ಲಿ ಕುವೆಂಪುವನ್ನು ಬಿಂಬಿಸಿದ್ದಾರೆ. ಆ ಕಾಲದ ಸಾಹಿತ್ಯ–ಸಂಸ್ಕೃತಿಯ ದಾಖಲೆಗಳನ್ನು ಇಲ್ಲಿ ನಿರೂಪಿಸಿದ್ದಾರೆ. ಪೂರಾ ದಿನಚರಿಯ ಮಾದರಿಯಲ್ಲೇ ಈ ಕೃತಿಯು ರಚಿತವಾಗಿದೆ. ಅಪರೂಪದ ಹಲವು ಪ್ರಸಂಗಗಳು ಇಲ್ಲಿ ಇವೆ.

ಕುವೆಂಪು ಅವರನ್ನು ಕುರಿತು 'ಕೆ.ವಿ.ಪುಟ್ಟಪ್ಪಂದು ಎನೂ ಸುದ್ದಿ ಇಲ್ಲವೇನರೀ?' ಎಂದು ಕೆಲವರು ಕೇಳುತ್ತಿದ್ದರು. ನಮ್ಮ ತಂದೆಯವರು ಅದಕ್ಕೆ ಉತ್ತರವಾಗಿ 'ದಿನಾ ಎಂತ ಸುದ್ದಿ ಇರತದರಿ?' ಎನ್ನುತ್ತಿದ್ದರು. ಕುವೆಂಪು ಅವರು ಹೊಸ ಪುಸ್ತಕ ಬರೆದರೆ ಮೇಗರವಳ್ಳಿತನಕ ಸುದ್ದಿ ಬಂದು ಕೆಲವರು ಸಂತೋಷಪಟ್ಟರೆ ಕೆಲವರು ಅಸಮಾಧಾನದಿಂದ ಓಹೋ ಎನ್ನುತ್ತಿದ್ದರು. ಅಸಮಾಧಾನ ಏಕೆಂದರೆ ಕುವೆಂಪು ಅವರು ಕಾನೂರು ಹೆಗ್ಗಡಿತಿ ಕಾದಂಬರಿ ಬರೆದು ಮಲೆನಾಡಿನ ಒಕ್ಕಲಿಗರನ್ನು ಹರಾಜು ಹಾಕಿದರು ಎಂದು. ನನ್ನಜ್ಜನ ವಯಸ್ಸಿನವರು ಕೆಲವರು 'ಆ ಪುಟ್ಟಪ್ಪ ಇಲ್ಲಿ ಬಂದರೆ ಅವನನ್ನು ಮನೀಗೆ ಸೇರಿಸಬೇಡಿ' ಅನ್ನುತ್ತಿದ್ದರು. ಕಾನೂರು ಹೆಗ್ಗಡಿತಿ ಬರೆಯುವುದಕ್ಕಿಂತ ಮುಂಚೆ ಕುವೆಂಪು ಅವರು ಆಗಾಗ ನಮ್ಮೂರ ಕಡೆ ಬರುತ್ತಿದ್ದರು. ಜನ ಟೀಕೆ ಮಾಡಿದರೆಂದು ಕುವೆಂಪು ನಮ್ಮೂರಿಗೆ ಬರುವುದನ್ನು ನಿಲ್ಲಿಸಲಿಲ್ಲ. ಮದುವೆ ಮಕ್ಕಳು ಬರವಣಿಗೆ ಎಂದು ಹೆಚ್ಚಿನ ಜವಾಬದಾರಿ ಅವರಿಗೆ ಬಿದ್ದುದರಿಂದ ಅವರು ತಿರುಗಾಟವನ್ನು ನಿಲ್ಲಿಸಿದ್ದರು. ನಮ್ಮ ತಂದೆಯ ಜವಳಿ ಅಂಗಡಿಯಲ್ಲಿ ನಡೆಯುವ ಶೂದ್ರ ಮಹಾಸಭೆಯಲ್ಲಿ ಒಂದು ಪ್ರಶ್ನೆಯನ್ನು ಅಂತಿಮವಾಗಿ ಒಬ್ಬರು ಎತ್ತುತ್ತಿದ್ದರು. ಅದೇನೆಂದರೆ 'ಏನಾದರೂ ಪುಟ್ಟಪ್ಪನವರು ಕಾನೂರು ಹೆಗ್ಗಡತೀನ ಆ ಸೇರೆಗಾರ ರಂಗಪ್ಪಸೆಟ್ಟಿ ಜತೀಗೆ ಮಲಗಿಸಿದ್ದು ತಪ್ಪು. ಏನಂತೀರಾ?' ಎಂದು ಹೇಳಿದರೆ ಇನ್ನೊಬ್ಬರು 'ಹೌದೌದು, ತಪ್ಪು ತಪ್ಪು, ಪುಟ್ಟಪ್ಪನವರು ಆ ಕೆಲಸ ಮಾಡಬಾರದಾಗಿತ್ತು.' ಎಂದು ಹೇಳಿ ನಮ್ಮ ತಂದೆಯ ಮುಖ ನೋಡುತ್ತಿದ್ದರು. ನಮ್ಮ ತಂದೆಯ ಮುಖವನ್ನು ಅವರು ನೋಡಲು ಕಾರಣವೆಂದರೆ ನಮ್ಮ ತಂದೆಯವರಿಂದ ನಿರೀಕ್ಷಿತ ಉತ್ತರವನ್ನು ಅವರು ಅಪೇಕ್ಷಿಸುತ್ತಿದ್ದರು. ನಮ್ಮ ತಂದೆಯವರು ಗಹಗಹಿಸಿ ನಕ್ಕು 'ನೀವೆಲ್ಲ ಏನು ಭಾಳ ಅಪ್ಪಂತ ಜನಗಳಾ? ತ್ವಾಟದಾಗೆ ಕೆಲಸದ ಹೆಂಗಸರ ಜತೀಗೆ ಮಲಗದವರಲ್ಲವಾ? ಪೂಜಾರರ ಹೆಂಗಸರ ಬಿಡಾರನ ರಾತ್ರೆ ತಟ್ಟಿ ಅವರಿಂದ ಉಗಿಸಿಕೊಂಡವರಲ್ಲವಾ?' ಎಂದೆನ್ನುತ್ತಿದ್ದರು. ಅದರಿಂದ ಗೌಡರುಗಳಿಗೆ ಖುಷಿಯಾಗಿ ಹುಚ್ಚೆದ್ದು ನಕ್ಕು ಅವರು ಅಲ್ಲಿಂದ ಚದುರಿಬಿಡುತ್ತಿದ್ದರು. ಅಲ್ಲಿಗೆ ಅಂದಿನ ಶೂದ್ರ ಮಹಾಸಭೆ ಮುಗಿದು ಬಿಡುತ್ತಿತ್ತು. (1757–ಪುಟ; 181)

ಹೀಗೆ ಒಡನಾಟ ಕಥನದಲ್ಲಿ ತನ್ನ, ಮತ್ತು ಲೇಖಕನ ಜೊತೆಗಿನ ಒಡನಾಟ ಕಥನಗಳು ಮಾತ್ರವೆ ಇರುವುದಿಲ್ಲ. ಅವರಿವರಿಂದ ಕೇಳಿತಿಳಿದ ಸಂಗತಿಗಳೂ, ಸ್ವಾರಸ್ಯಕರವಾದ ಪ್ರಸಂಗಗಳೂ ನಿರೂಪಿತವಾಗುತ್ತವೆ. ಕೆಲವೊಮ್ಮೆ ಇಂತಹ ನಿರೂಪಣೆಗಳಲ್ಲಿ ಕುವೆಂಪು ಬಗೆಗೆ ಸಮಾಜದಲ್ಲಿ ಎಂತಹ ಪ್ರತಿಕ್ರಿಯೆ ಇತ್ತು; ಕುವೆಂಪು ಸಾಹಿತ್ಯ ಮತ್ತು ವ್ಯಕ್ತಿತ್ವ ಸಮಾಜದ ಮೇಲೆ ಬೀರಿದ ಪರಿಣಾಮ ಎಂಥದ್ದು ಎಂಬ ವಿಚಾರಗಳೂ ತಿಳಿಯುತ್ತವೆ. ಇಲ್ಲೆಲ್ಲ ಒಡನಾಟ ಕಥನವು ಸಾಂಸ್ಕೃತಿಕ ಚರಿತ್ರೆಯಾಗಿಯೇ ಸಂಭವಿಸುತ್ತಿರುತ್ತದೆ. ಇಂತಹ ಚಾರಿತ್ರಿಕ ನೆನಪುಗಳನ್ನು ನಿರೂಪಿಸಿರುವ ಕುವೆಂಪು ಅವರ ಸಂಬಂಧಿಯಾದ ಬಿಳುಮನೆ ರಾಮದಾಸರಲ್ಲಿ ಒಡನಾಟ ಕಥನವು ಲಲಿತ ಪ್ರಬಂಧ ಮಾದರಿಯಲ್ಲಿ ಸೃಷ್ಟಿಯಾಗಿದೆ. ಲಲಿತಪ್ರಬಂಧದ ಗುಣವು ವಿಮರ್ಶೆಗೆ ತಗಲಿಕೊಂಡರೆ ಏನಾಗಬಹುದು ಎಂಬುದಕ್ಕೆ ಇವರ ನಿರೂಪಣೆಗಳು ಉದಾಹರಣೆ. ಒಡನಾಟ ಕಥನದ ಒಂದು ಅನನ್ಯ ಲಕ್ಷಣ ಇದು. ಸಾಹಿತ್ಯ ಮತ್ತು ವಿಮರ್ಶೆಗಳು ಇಂತಹ ಕಡೆ ಕಲಸಿಕೊಳ್ಳುತ್ತವೆ. ಪ್ರಕಾರಗಳು ಕಲಸಿಕೊಳ್ಳುತ್ತವೆ. ವಿಮರ್ಶೆಯು ಸಮಾಜದ ಸಂಕಥನವಾಗಿ ಇಂತಹ ಕಡೆ ಆಗುತ್ತಿರುತ್ತದೆ.

ನಾನು ಚಿಕ್ಕವನಿದ್ದಾಗ ಪ್ರಥಮ ಬಾರಿಗೆ ಪುಟ್ಟಪ್ಪನವರ ಹೆಸರನ್ನು ಕೇಳಿದೆ. ಆಗೆಲ್ಲ ಕುವೆಂಪು ಅವರು ಕೆ.ವಿ.ಪುಟ್ಟಪ್ಪ ಎಂದೇ ಪ್ರಖ್ಯಾತರಾಗಿದ್ದರು. ಒಂದು ದಿನ ಕುವೆಂಪು ಅವರ ಕವನ ಠುವ್ವಿ ಠುವ್ವಿ ಎಂದು ನನ್ನ ಎದೆಯೊಳೊಂದು ಹಕ್ಕಿ ಹಾಡಿತು ಎಂದು ಮೇಷ್ಟರು ಸುಬ್ಬಾಭಟ್ಟರು ಓದಿ ಹೇಳಿ ಪಠ್ಯ ಪುಸ್ತಕವನ್ನು ಕವುಚಿಟ್ಟು ಒಂದು ಚಿಟಿಕೆ ನಶ್ಯ ಸೇದಿ 'ಶೂದ್ರ ಮುಂಡೇವೆಲ್ಲ ಕವನ ಬರೆಯವೆ. ಇವನ ಎದೇಲಿ ಹಕ್ಕಿ ಹಾಡಿಬಿಡತಂತೆ' ಎಂದು ಮೂದಲಿಸಿದರು. ನಾವು ಹುಡುಗರು ಕತೆ, ಕವನ, ಕಾದಂಬರಿ, ಪ್ರಬಂಧ ಬರೆಯುವುದು ಕೇವಲ ಬ್ರಾಹ್ಮಣರಿಗೆ ಮಾತ್ರ ಸಾಧ್ಯ. ಶೂದ್ರರು ಬರೆಯಕೂಡದೆಂದು ತಿಳಿದೆವು.

ಮಧ್ಯಾಹ್ನ ಊಟಕ್ಕೆ ಮನೆಗೆ ಬಂದಾಗ ನಮ್ಮ ತಂದೆಗೆ 'ಕೆ.ವಿ.ಪುಟ್ಟಪ್ಪನವರು ಶೂದ್ರರಂತೆ' ಎಂದೆ. ನಮ್ಮ ತಂದೆಯವರು ನಕ್ಕು 'ನೀನು ಯಾರು ಅಂತ ಮಾಡಿದಿಯಾ? ನೀನೂ ಶೂದ್ರನೆ' ಎಂದರು. ನಮ್ಮ ತಾಯಿಯವರು 'ಅದೆಲ್ಲ ಇರಲಿ, ಆ ಪ್ರಶ್ನೆ ಯಾಕೆ ಬಂತು? ಪುಟ್ಟಪ್ಪನವರು ಶೂದ್ರ ಅಂತ ಯಾರು ಹೇಳಿದರು ನಿನಗೆ?' ಎಂದರು. ನಾನು ವಿಷಯ ತಿಳಿಸಿದೆ. ನಮ್ಮ ತಂದೆಯವರು ವ್ಯಗ್ರರಾದರು. ಅವರು ನನ್ನನ್ನು ಕರೆದುಕೊಂಡು ಪುಟ್ಟಪ್ಪನವರ ಬಾಲ್ಯ ಗೆಳೆಯರೂ, ಅವರ ಷಡ್ಡಕನ

ತಮ್ಮನೂ ಆದ ರಾಮಪ್ಪಗೌಡರಲ್ಲಿಗೆ ಹೋದರು. 'ಸುಬ್ಬಾಭಟ್ಟರು ಏನೂ ಅರಿಯದ ಹುಡುಗರೆದುರಿಗೆ ಪುಟ್ಟಪ್ಪನವರನ್ನು ಶೂದ್ರ ಮುಂಡೇವು ಅನ್ನಬಹುದೇ? ಅವರಿಗೆ ಎಷ್ಟು ಸೊಕ್ಕು?' ಎಂದು ಹಾರಾಡಿದರು. ಮುಷ್ಟಿಯಲ್ಲಿ ಬೀಡಿಯನ್ನಿಟ್ಟುಕೊಂಡು ಸೇದುತ್ತಿದ್ದ ಗೌಡರು ಏನು ನಡೆಯಿತು ಎಂದು ನನ್ನಿಂದ ಹೊಸದಾಗಿ ಎಲ್ಲವನ್ನು ಕೇಳಿ ತಿಳಿದುಕೊಂಡು 'ಸಾಯಂಕಾಲ ಭಟ್ಟ ಇದೆ ರಸ್ತೇಲಿ ವಾಕಿಂಗ್ ಹೋಗತಾನಲ್ಲ, ಇಚಾರಣೆ ಮಾಡತೀನಿ. ನೀನು ಬಾ' ಎಂದರು. ನನಗೆ ಭಯವಾಗಿ ಹೋಯಿತು. ಭಟ್ಟರು ದಿನಾ ಸರಿಯಾಗಿ ಪಾಠ ಓದುತ್ತಿಲ್ಲ ಎಂದು ನನ್ನ ಕಿವಿ ಹಿಂಡುವುದು, ಶೂದ್ರ ಮುಂಡೇದೆ ಎಂದು ಬಯ್ಯುವುದು ಮಾಡುತ್ತಿದ್ದರು. ಗೌಡರೇನಾದರೂ ಭಟ್ಟರನ್ನು ತರಾಟೆಗೆ ತೆಗೆದುಕೊಂಡರೆ ಭಟ್ಟರು ನನಗೆ ಕೊಡುವ ಹಿಂಸೆಯನ್ನು ಇನ್ನೂ ಜಾಸ್ತಿ ಮಾಡಬಹುದೇನೋ ಎಂದು ದಿಗಿಲುಗೊಂಡೆ. ದಾರಿಯಲ್ಲಿ ಈಶ್ವರ ದೇವಸ್ಥಾನದೆದುರು ನಿಂತು ಇದೊಂದು ಪ್ರಕರಣದಲ್ಲಿ ನನ್ನನ್ನು ಬಚಾವ್ ಮಾಡಬೇಕೆಂದು, ಗೌಡರು ಭಟ್ಟರನ್ನು ಅವಮಾನ ಮಾಡದಿರಲಿ ಎಂದು ಪ್ರಾರ್ಥಿಸಿಕೊಂಡೆ.

ಸಂಜೆ ನಾನು ಶಾಲೆ ಬಿಟ್ಟು ಬರುವಾಗ ಗೌಡರು ಬಾ ಎಂದು ಕರೆದರು. ಸಾಲದ್ದಕ್ಕೆ ಭಟ್ಟರನ್ನು ವಾಚಾಮಗೋಚರವಾಗಿ ಬಯ್ಯುತ್ತ ಯಥೇಚ್ಚವಾಗಿ ಬೀಡಿ ಸೇದಿದರು. ಭಟ್ಟರು ಆರು ಗಂಟೆಗೆ ಸರಿಯಾಗಿ ವಿಹಾರ ಹೋಗುವವರು ಬಂದೇ ಬಿಟ್ಟರು. ಗೌಡರು ಭಟ್ಟರನ್ನು 'ಓ ಸುಬ್ಬಾಭಟ್ಟರ, ಬನ್ನಿರಿ ಇಲ್ಲಿ' ಎಂದು ಕರೆದರು. ಭಟ್ಟರು ನನ್ನನ್ನು ನೋಡಿ ದಿಗಿಲುಬಿದ್ದು ಗೌಡರ ಅಂಗಡಿ ಕಡೆಗೆ ಬಂದರು. ಗೌಡರೆದ್ದು ಮೈಮೇಲೆ ದೆವ್ವ ಬಂದವರಂತೆ ಹೂಂಕರಿಸಿ ಕುವೆಂಪು ಅವರನ್ನು ಭಟ್ಟರು ಅವಮಾನಿಸಿದ ಪ್ರಸಂಗ ಹೇಳಿ 'ನಿನಗೇನು ತಲೆಗಿಲೆ ಸರಿ ಇಲ್ಲವನೋ? ಏನು ನಮ್ಮ ಪುಟ್ಟಪ್ಪನ್ನ ಬಾರಿ ಆಡಕೊಳ್ಳತಿದ್ದಿಯಂತೆ? ಕಾಳಿದಾಸ, ಕನಕದಾಸ, ಪುರಂದರದಾಸ ಯಾವ ಜಾತೀನೋ? ಬ್ರಾಂಬರನೋ? ಹುಡುಗರ ಎದುರಿಗೆ ಹಾಗೆಯೆನೋ ಹೇಳಾದು? ಮೆಟ್ನಲ್ಲಿ ಹೊಡದರೆ ಹ್ಯಾಂಗೆ ಆಗಬಕು ಗೊತ್ತನು?' ಎಂದು ಭಟ್ಟರ ಜನ್ಮ ಜಾಲಾಡಿದರು. ಅಷ್ಟರಲ್ಲಿ ಬಹಳ ಜನ ಸೇರಿಬಿಟ್ಟಿತು. ಭಟ್ಟರು ಹುಲಿಯನ್ನು ಕಂಡ ಜಿಂಕೆಯಂತಾಗಿ ಕ್ಷಮಾಪಣೆ ಕೇಳಿ ಬಚಾವ್ ಆದರು. ಭಟ್ಟರು ಅಂದಿನಿಂದ ನನ್ನನ್ನು ಮಾತಾಡಿಸುವುದನ್ನು ಬಿಟ್ಟರು. ನನಗೆ ಕಿವಿ ಹಿಂಡುವುದು ತಪ್ಪಿತು. ಅವರು ಸಮಯ ಬಂದಾಗ 'ಪುಟ್ಟಪ್ಪ ದೊಡ್ಡ ಕವಿ. ಅವನ ವಿಚಾರ ನಮಗೆ ಬ್ಯಾಡ. ಇಲ್ಲೆಲ್ಲ ಚಾಡಿ ಹೇಳವರು ಇದಾರೆ' ಎಂದೆನ್ನಹತ್ತಿದರು. ನಾನು ಭಗವಂತನ ಮೊರೆ ಹೊಕ್ಕಿದುದು ಸಾರ್ಥಕವಾಯಿತು. (1757–ಪುಟ; 183–184)

ಇಂಥಹ ಒಡನಾಟ ಕಥನಗಳು ನಮ್ಮ ಸಮಾಜದ ಸಾಂಸ್ಕೃತಿಕ ಚರಿತ್ರೆಯನ್ನು ಹೇಳುತ್ತವೆ. ಸಾಹಿತ್ಯ–ಲೇಖಕ–ಸಮಾಜ ಮತ್ತು ಅಲ್ಲಿನ ವರ್ಗವಿನ್ಯಾಸಗಳು–ನಂಬಿಕೆಗಳು ಎಲ್ಲವೂ ಹೇಗೆ ಸಾಹಿತ್ಯದ ಅನುಸಂಧಾನದಲ್ಲಿ ಬೆರೆತುಕೊಂಡಿರುತ್ತವೆ ಎಂಬುದು ಇಂಥ ಉದಾಹರಣೆಗಳಿಂದ ತಿಳಿಯುತ್ತದೆ. ಜಾತಿಕುರುಡಿನಿಂದ ಹುಟ್ಟಿದ ಪ್ರತಿಕ್ರಿಯೆ (ವಿಮರ್ಶೆ) ಆಗಿಯೇ ಇಲ್ಲಿನ ಮೇಷ್ಟ್ರು ಸುಬ್ಬಾಭಟ್ಟರ ಮಾತನ್ನು ನಾವು ತೆಗೆದುಕೊಳ್ಳಬೇಕು. ಸಂಬಂಧಿಕತೆಯ ರಾಜಕಾರಣ ಹೇಗೆ ಸಾಹಿತ್ಯದ ಅನುಸಂಧಾನಗಳನ್ನು ಬಾಧಿಸುತ್ತದೆ ಎಂಬುದಕ್ಕೆ ಈ ಪ್ರಸಂಗ ಒಂದು ಉದಾಹರಣೆ. ಸಾಹಿತ್ಯವು ಸಮಾಜದ ಎಲ್ಲ ವರ್ಗಗಳಲ್ಲಿ ಮಾನ್ಯತೆ ಪಡೆಯುವುದು ವರ್ಗ–ವರ್ಣ–ಜಾತಿ ಪ್ರಜ್ಞೆ ಇರುವಾಗ ಎಷ್ಟು ಪ್ರಯಾಸಕರವಾದುದು ಎಂದು ಇದರಿಂದ ತಿಳಿಯುತ್ತದೆ.

ಕುವೆಂಪು ಅವರೊಂದಿಗಿನ ದೊಡ್ಡ ದೊಡ್ಡ ವ್ಯಕ್ತಿಗಳ ಒಡನಾಟದ ವಿವರಗಳನ್ನು ನಿರೂಪಿಸುವುದು ಕೂಡ ಈ ಕಥನದ ಒಂದು ಮುಖ್ಯವಾದ ವಲಯ. ಬೇಂದ್ರೆ, ಕಾರಂತ, ಆ.ನೆ.ಉಪಾಧ್ಯೆ, ಜಿ.ಪಿ.ರಾಜರತ್ನಂ, ಗೊರೂರು, ಪು.ತಿ.ನ, ನಿಜಲಿಂಗಪ್ಪ, ಬಸವಲಿಂಗಪ್ಪ, ಕೆಂಗಲ್ ಹನುಮಂತಯ್ಯ ಹೀಗೆ ಅನೇಕರ ಭೇಟಿಗಳನ್ನು ಈ ಕಥನವು ನಿರೂಪಿಸುತ್ತದೆ. ಇಂತಹ ಕಡೆ ಲೇಖಕನ ಘನತೆ–ಗೌರವ–ಹೆಚ್ಚುಗಾರಿಕೆಗಳನ್ನು ಗೌರವ ಪೂರ್ವಕವಾಗಿ ಸ್ಥಾಪಿಸುವ ಕೆಲಸವೇ ನಡೆಯುತ್ತಿರುತ್ತದೆ. ಕುವೆಂಪುವನ್ನು ಕರ್ನಾಟಕದ ಒಬ್ಬ ದೊಡ್ಡ ಸಾಂಸ್ಕೃತಿಕ ನಾಯಕನನ್ನಾಗಿ, ಶತಮಾನದ ಶ್ರೇಷ್ಠ ವ್ಯಕ್ತಿತ್ವವನ್ನಾಗಿ ಚಿತ್ರಿಸುವ ಹಂಬಲ ಇಂತಹ ಕಡೆ ಇರುತ್ತದೆ. ಅಪರೂಪಕ್ಕೆಂಬಂತೆ ಇಲ್ಲಿಯೂ ಕುವೆಂಪುವನ್ನು ದೇವಮಾನವನನ್ನಾಗಿ ಕಲ್ಪಿಸಿಕೊಳ್ಳದೆ; ರಸಋಷಿಯಾಗಿ ನೋಡದೆ ನಮ್ಮ ನಿಮ್ಮಂತೆ ಸಾಮಾನ್ಯ ಮನುಷ್ಯನಂತೆ ಪರಿಭಾವಿಸುವ ಒಂದೆರಡು ದೃಷ್ಟಿಗಳೂ ಇವೆ. ಒಟ್ಟಾರೆಯಾಗಿ ಕುವೆಂಪು ಅವರ ಒಡನಾಡಿಗಳು–ಆಪ್ತರನ್ನು ಚಿಕಿತ್ಸಕ ನೆಲೆಯಿಂದ ನೋಡುವ ದೃಷ್ಟಿಗಳೂ ಇವೆ. ನೋಡಿ;

ಕುವೆಂಪು ಸಾಂಸ್ಕೃತಿಕ ಕ್ರಾಂತಿಯ ವೈಚಾರಿಕ ಪ್ರಣಾಳಿಕೆಯನ್ನು ಯುವಜನರ ಮುಂದಿಟ್ಟು ನಿರಂಕುಶಮತಿಗಳಾಗಲು ಕರೆಕೊಟ್ಟು ಬಹಳ ಕಾಲವಾಯಿತು. ಮಾನಸ ಗಂಗೋತ್ರಿಯ ಆವರಣದಲ್ಲಿ

> ಕುವೆಂಪು ವಿಚಾರಕ್ರಾಂತಿ ಪಲ್ಲವಿಸಬೇಕಾಗಿತ್ತು. ವಿಶ್ವ ಮಾನವ ಸಂದೇಶ ಅನುಕರಣಗೊಳ್ಳಬೇಕಾಗಿತ್ತು. ಉದಯರವಿ ಸಾಂಸ್ಕೃತಿಕ ಯಾತ್ರಾಸ್ಥಳವಾಯಿತು. ಕನ್ನಡ ಅಧ್ಯಯನ ಸಂಸ್ಥೆ ಕುವೆಂಪು ಭಜನಾ ಮಂದಿರವಾಯಿತು. ಕುವೆಂಪು ಟ್ರಸ್ಟ್ ಕುವೆಂಪು ಮಠವಾಯಿತು. ಕುವೆಂಪು ಶಿಷ್ಯವರ್ಗಕ್ಕೆ ಸೇರಿದ ಅನೇಕರು ಕುವೆಂಪು ಪುರೋಹಿತಶಾಹಿಯಂತೆ ವರ್ತಿಸಿ, ಅವರ ವಿಚಾರ ಕ್ರಾಂತಿಯ ಸಂವಹನಕ್ಕೆ ಚಪ್ಪಡಿ ಎಳೆದರು. ಅವರ ಆರಾಧನೆಯ ಮೂಲಕ ಜಂಗಮ ಸ್ವರೂಪಿಯಾದ ಕುವೆಂಪು ಅವರ ಜೀವಿತಕಾಲದಲ್ಲೇ ಸ್ಥಾವರವಾಗಿಬಿಟ್ಟರು. (819–ಪುಟ; 71)

ಹೀಗೆ ಒಟ್ಟು ಕುವೆಂಪು ಅನುಸಂಧಾನವು ಹೇಗೆ ಹಾದಿ ತಪ್ಪಿದೆ ಎಂಬ ಎಚ್ಚರದ ಮಾತುಗಳೂ ಇಲ್ಲಿ ಪ್ರಕಟವಾಗಿವೆ.

ಕುವೆಂಪು ಅವರು ಬೇರೆ ಬೇರೆಯವರ ಜೊತೆ ಒಡನಾಡಿದ ವಿವರಗಳೂ ಇಲ್ಲಿ ಮೂರನೆ ವ್ಯಕ್ತಿಗಳ ನಿರೂಪಣೆಯಲ್ಲಿ ಕಥನಗೊಂಡಿವೆಯಾದರೂ ರಕ್ತ ಸಂಬಂಧ–ಸ್ನೇಹ ಸಂಬಂಧ, ಪ್ರಾಸಂಗಿಕ ಒಡನಾಟಗಳು, ಗುರುಶಿಷ್ಯ ಸಂಬಂಧಗಳು ಹೀಗೆ ಹಲವು ರೀತಿಯ ಸಂಬಂಧಗಳ ಒಡನಾಟಗಳು ಇಲ್ಲಿ ಕಥನಗೊಂಡಿವೆ. ರಕ್ತ ಸಂಬಂಧ–ಸ್ನೇಹ ಸಂಬಂಧ ಇವುಗಳಿಗಿಂತ ಅತಿ ಹೆಚ್ಚು ಒಡನಾಟ ಕಥನ ರಚಿತವಾಗಿರುವುದು ಗುರುಶಿಷ್ಯ ಸಂಬಂಧದಲ್ಲಿ. ಗೌರವಭಾವ, ಗುರುಭಕ್ತಿ, ಸ್ವಾರಸ್ಯವಾದ ಮತ್ತು ವಿಶಿಷ್ಟವಾದ ಅಪರೂಪದ ಘಟನೆಗಳ ನಿರೂಪಣೆಗಳು ಇಲ್ಲಿ ಮುಖ್ಯವಾಗಿ ಸಂಭವಿಸಿವೆ. ಇಂತಹ ಹಲವು ಬಗೆಗಳಲ್ಲಿ ಒಡನಾಟ ಕಥನವು ನೆನೆಪಿನ ಮರುನಿರೂಪಣೆಯಾಗಿ, ಕವಿ ವ್ಯಕ್ತಿತ್ವದ ನಿರ್ವಚನವಾಗಿ, ಸಾಹಿತ್ಯ ಸ್ವರೂಪದ ಹಿನ್ನೆಲೆ–ಸಾಹಿತ್ಯ ರಚನೆಯ ಪೂರ್ವಾಪರ ನಿರೂಪಣೆಯಾಗಿ, ಸಾಹಿತಿ ಮತ್ತು ಲೋಕ ಸಂಬಂಧಗಳ ಅನಾವರಣವಾಗಿ, ಸ್ವಾರಸ್ಯಕರವಾದ ಬದುಕಿನ ಪ್ರಸಂಗಗಳ ನಿರೂಪಣೆಯಾಗಿ, ಸಮಾಜವಿಮರ್ಶೆ–ಸಾಮಾಜಿಕ ಚರಿತ್ರೆ, ಸಾಹಿತ್ಯ ವಿಮರ್ಶೆಯಾಗಿ, ಐಕಾನು ನಿರ್ಮಾಣದ ಯತ್ನವಾಗಿ, ದೊಡ್ಡವರ ಸಂಗದ, ಸಹವಾಸದ ನಿರೂಪಣೆಯಾಗಿ, ಜೀವನಚರಿತ್ರೆ–ಆತ್ಮಚರಿತ್ರೆಗಳ ತುಣುಕುಗಳಾಗಿ, ಲಲಿತ ಪ್ರಬಂಧ–ವಿಚಾರ ಪ್ರಬಂಧ–ಹರಟೆ–ಲಹರಿ–ದಿನಚರಿ ರೂಪಗಳಾಗಿ ಸಂಬಂಧಿಕತೆಯ ಮತ್ತು ಸಾಂದರ್ಭಿಕತೆಯ ರಾಜಕಾರಣಗಳ ಪ್ರತಿನಿಧೀಕರಣವಾಗಿ, ಒಡನಾಟದ ವಿಮರ್ಶೆಯಾಗಿ; ಹೀಗೆ ಹತ್ತು ಹಲವು ವಿನ್ಯಾಸಗಳಲ್ಲಿ ಕಥಿತವಾಗಿದೆ.

### 5.2.3. ಸೂಕ್ತಿರೂಪಿ ವಿಮರ್ಶೆ

ಸಾಹಿತ್ಯ ಕೃತಿಗಳ ಸಂಗ್ರಹ ಕಾರ್ಯ ಕೂಡ ವಿಮರ್ಶೆಯ ಒಂದು ರೂಪವೇ. ಇಂತಹ ಸಂಗ್ರಹ, ಸಂಪಾದನಾ ಕಾರ್ಯಗಳ ಮೂಲಕವೇ ಸೂಕ್ತಿ ರೂಪಿ ವಿಮರ್ಶೆಯು ನಮ್ಮಲ್ಲಿ ಸಂಭವಿಸಿದೆ. ಸೂಕ್ತಿರೂಪಿ ವಿಮರ್ಶೆಯು ಸಂಪಾದನ ರೂಪಿ ವಿಮರ್ಶೆಯ ಒಂದು ಬಗೆ. ಇಲ್ಲಿ ಸುಭಾಷಿತ ರೂಪಿ ಮಾತುಗಳನ್ನು, ನೀತಿರೂಪಿ, ಮೌಲ್ಯರೂಪಿ, ಮಾತುಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸುವ ಕೆಲಸವೇ ಮುಖ್ಯವಾಗಿದೆ. ನಮ್ಮ ವಿಮರ್ಶೆಯಲ್ಲಿ ಅಪಸಾಂದರ್ಭೀಕರಣ ವಿಧಾನ ಅಥವಾ ಮಾರ್ಗವು ಒಂದು ಬಹು ಜನಪ್ರಿಯವಾದ ವಿಮರ್ಶಾ ಮಾರ್ಗವಾಗಿದೆ. ಇಲ್ಲಿ ಕೃತಿಯ ಬಿಡಿ ಬಿಡಿ ಮಾತುಗಳನ್ನು ಕತ್ತರಿಸಿ ತೆಗೆದು; ಕೃತಿಯ ಒಟ್ಟು ಆಕೃತಿಯ ಆಚೆ ಅದನ್ನು ವ್ಯಾಖ್ಯಾನಿಸಲಾಗುತ್ತದೆ. ಲೇಖಕನ ದೃಷ್ಟಿಯನ್ನು ನಿರ್ವಚಿಸಲು, ಸಾಹಿತ್ಯದ ಮೌಲ್ಯ ಮಾಪನವನ್ನು ಮಾಡಲು, ಸಮಾಜದ ನಡಾವಳಿಯನ್ನು ಪರಿಶೀಲಿಸಲು ಹೀಗೆ ಹತ್ತು ಹಲವು ಪರಿಶೀಲನೆಗಳಿಗೆ ಸಾಹಿತ್ಯದ ಕತ್ತರಿಸಿದ ಭಾಗಗಳನ್ನು ನಿದರ್ಶನಗಳನ್ನಾಗಿ ಎತ್ತಿ ಬಳಸುವ ಕಾರ್ಯ ಇಂತಹ ಕಡೆ ಜರುಗುತ್ತಿರುತ್ತದೆ. ಅಲ್ಲದೆ ಆಯ್ದ ಬಿಡಿ ಭಾಗಗಳ ಅಪಸಾಂದರ್ಭೀಕೃತ ವ್ಯಾಖ್ಯಾನಗಳಿಂದ ಲೇಖಕನ ನಿಲುವುಗಳನ್ನು ನಿರೂಪಿಸುವ, ಪರಿಕಲ್ಪಿಸುವ ಕೆಲಸ ಮಾಡುತ್ತಲೇ, ವಿಮರ್ಶಕ ಸಾಹಿತ್ಯದ ಬಗೆಗೆ ತನ್ನದೇ ನಿಲುವುಗಳನ್ನು ಮಂಡಿಸುತ್ತಿರುತ್ತಾನೆ. ಇದು ಅಪಸಾಂದರ್ಭೀಕರಣ ವಿಧಾನದ ಮಾರ್ಗ.

ಆದರೆ ಸೂಕ್ತಿ ರೂಪಿ ವಿಮರ್ಶೆಯಲ್ಲಿ ಹೀಗಾಗುವುದಿಲ್ಲ. ಇಲ್ಲಿ ಸಂಗ್ರಹ ಮತ್ತು ಸಂಯೋಜನೆಯೇ ಪ್ರಧಾವಾದುದು. ಆನುಷಂಗಿಕವಾಗಿ ಸಂಗ್ರಹ ಮತ್ತು ಟೀಕು, ಸಂಗ್ರಹ ಮತ್ತು ವರ್ಗೀಕರಣ, ಅಪಸಾಂದರ್ಭೀಕರಣ ಮತ್ತು ವ್ಯಾಖ್ಯಾನ ಹೀಗೆ ಹಲವು ರೀತಿಯ ಮಾದರಿಗಳು ಇಲ್ಲಿ ಸೃಷ್ಟಿಯಾಗಿವೆ. ಈ ವಿಮರ್ಶೆಯಲ್ಲಿ ಬಿಡಿಬಿಡಿಯಾಗಿ ಹಲವು ಯತ್ನಗಳು ಇದ್ದರೂ ಕೃತಿ ರೂಪದಲ್ಲಿ ಮುಖ್ಯವಾಗಿ ನಾಲ್ಕು ಯತ್ನಗಳು ಇವೆ. 1. ಕುವೆಂಪು ಸೂಕ್ತಿ ಮಾಲೆ (2669) 2. ಕುವೆಂಪು ಸೂಕ್ತಿಸುಧಾ (2670), 3. ಕುವೆಂಪು ಒಲವು ನಿಲುವು (2557), 4. ಶ್ರೀ ಕುವೆಂಪು ರಸಚಿಂತನೆಯ ಮಿಂಚುಗಳು (2773) ಇವೇ ಆ ನಾಲ್ಕು ಮಾದರಿಗಳು. ಈ ನಾಲ್ಕೂ ಯತ್ನಗಳು ಸೂಕ್ತಿ ರೂಪಿ ವಿಮರ್ಶೆಯಲ್ಲಿ ನಾಲ್ಕು ಮಾದರಿಗಳನ್ನು ಬಿಂಬಿಸುತ್ತವೆ.

ಇಲ್ಲಿ ಲೇಖಕನನ್ನು ಅಸಾಮಾನ್ಯವಾದ ವ್ಯಕ್ತಿ, ಋಷಿ, ಪ್ರವಾದಿ, ಸಂತನೆಂದು ಭಾವಿಸುವ; ಸುಭಾಷಿತ–ತತ್ವಗಳನ್ನು ಹೇಳುವ ಮಹಾಜ್ಞಾನಿ, ಎಲ್ಲ ಕಾಲ–ಎಲ್ಲ ದೇಶಕ್ಕೂ ಸಲ್ಲುವ ಪರಮ ತತ್ವಜ್ಞಾನಿಯೆಂದು ಭಾವಿಸುವ ಭಾವನೆಗಳಿವೆ. ಇವುಗಳು ಕುವೆಂಪು ಸಾಹಿತ್ಯದ ಸೂಕ್ತಿ ರೂಪಿ–ಸುಭಾಷಿತ ರೂಪಿ, ಮಾತುಗಳನ್ನು ಆಯ್ದು ಸಂಗ್ರಹಿಸಿ ಕೊಡುವ ಕೆಲಸ ಮಾಡುತ್ತವೆ. ಹರಿಹರಪ್ರಿಯರ 'ಕುವೆಂಪು ಒಲವು ನಿಲುವು' ಕೃತಿಯಲ್ಲಿ ಇದೇ ಜರುಗಿದೆ. ಕುವೆಂಪು ಅವರ ಎಲ್ಲ ಕೃತಿಗಳಲ್ಲಿನ ತಮಗೆ ಮೆಚ್ಚುಗೆಯಾದ; ವೈಚಾರಿಕ ಚಿಂತನೆಗಳು, ಮಾರ್ಗದರ್ಶಿ ಸಾಹಿತ್ಯ ಭಾಗಗಳು ಎನ್ನಿಸಬಹುದಾದ ಕಿರುಭಾಗಗಳನ್ನು ಕತ್ತರಿಸಿ, ಆರಿಸಿ ಇಲ್ಲಿ ಜೋಡಿಸಲಾಗಿದೆ. ಶ್ರಮಶೀಲ ಓದು ಇಲ್ಲಿನ ಸಂಗ್ರಹದಲ್ಲಿ ಎದ್ದು ಕಾಣುತ್ತದೆ. ಆದರೆ ಸಂಗ್ರಹ ಮಾಡಿದ ಬಿಡಿ ಬಿಡಿ ಭಾಗಗಳನ್ನು ಸಂಯೋಜಿಸಲು ಯಾವ ಸೂತ್ರಗಳನ್ನೂ ಇಲ್ಲಿ ಅನುಸರಿಸಿಲ್ಲ; ಅಲ್ಲದೆ ವಸ್ತು, ಸಂದೇಶ, ಪ್ರಕಾರ ಈ ಯಾವ ಮಾನದಂಡಗಳಿಂದಲೂ ಬಿಡಿಭಾಗಗಳನ್ನು ವರ್ಗೀಕರಿಸಿಯೂ ಇಲ್ಲ. ತಮಗೆ ತೋಚಿದ ಹಾಗೆ ಭಿನ್ನ ಭಿನ್ನ ಕೃತಿ ಭಾಗಗಳನ್ನು ಇಲ್ಲಿ ಒಂದೊಂದಾಗಿ ಇರಿಸಿಕೊಂಡು ಹೋಗಲಾಗಿದೆ. ಆಯ್ಕೆ ಮತ್ತು ಸಂಗ್ರಹಣೆ ಇಲ್ಲಿ ಇದೆಯಾದರೂ ಯಾವ ರೀತಿಯ ಸಂಯೋಜನಾ ಯೋಜನೆಯೂ ಇಲ್ಲ. ಬಿಡಿಭಾಗಗಳ ಆಯ್ಕೆ ಮತ್ತು ಸಂಗ್ರಹಣೆ ಇಲ್ಲಿದೆಯಾದರೂ ಯಾವ ಆಯ್ಕೆ ಅಲಕ್ಷ್ಯತೆಯ ರಾಜಕಾರಣವೂ ಇಲ್ಲಿ ಗೋಚರಿಸುವುದಿಲ್ಲ.

ಕುವೆಂಪು ಮಾನವ ಬದುಕಿನ ಯಾವ ಯಾವ ಸಂಗತಿಗಳಿಗೆ ಪ್ರತಿಕ್ರಿಯಿಸಿದ್ದಾರೆ. ಅವರ ಚಿಂತನೆಗಳು ಅವರ ಸಾಹಿತ್ಯದ ಭಿನ್ನ ಭಿನ್ನ ಕೃತಿಗಳಲ್ಲಿ, ಅವರದೇ ಮಾತುಗಳಲ್ಲಿ ಹೇಗೆ ಪ್ರಕಟವಾಗಿದೆ ಎಂಬ ಒಂದು ಪಕ್ಷಿನೋಟವನ್ನು ಇಲ್ಲಿ ಕಾಣಬಹುದು. ಕೃತಿಯ ಬಿಡಿ ಭಾಗಗಳ ಅಪಸಾಂದರ್ಭೀಕರಣದಿಂದಾಗಿ ಇಲ್ಲಿನ ಭಾಗಗಳು ಸ್ವತಂತ್ರವಾದ ಬಿಡಿ ಚಿಂತನೆಯ ಮಾತುಗಳಂತೆ ಕಾಣುತ್ತವೆ. ಒಟ್ಟಾರೆ ತಾವು ಇರುವ ಕೃತಿಗಳ ಮಯ್ಯಲ್ಲಿ ಮತ್ತು ಕೃತಿ ಸಂದರ್ಭದಲ್ಲಿ ಈ ಬಿಡಿ ಭಾಗಗಳು ಓದುಗನಿಗೆ ಒದಗುವ ರೀತಿಗೂ ಈ ಸಂಗ್ರಹದಲ್ಲಿ ಒದಗುವ ರೀತಿಗೂ ವ್ಯತ್ಯಾಸವಿದೆ. ಭಾವತೀವ್ರವಾದ–ತನ್ಮಯವಾದ ಕಾವ್ಯ ಭಾಗಗಳು ಇಲ್ಲಿ ಅಷ್ಟಾಗಿ ಸಂಕಲಿತವಾಗಿಲ್ಲ. ಬೌದ್ಧಿಕವಾದ–ವೈಚಾರಿಕ ಚಿಂತನೆಗಳಂತೆ ಕಾಣುವ ಬಿಡಿ ಭಾಗಗಳನ್ನು ಮಾತ್ರ ಇಲ್ಲಿ ಸಂಕಲಿಸಲಾಗಿದೆ. ಹಾಗಾಗಿ ಸೂಕ್ತಿ ದೃಷ್ಟಿಯ ಒಂದು ಓದು ಇದಾಗಿದೆ. ಹಾಗಾಗಿ ನಮ್ಮಲ್ಲಿನ ಹಲವು ರೀತಿಯ ಓದುಗಳ ಸಾಲಿಗೆ ಸೂಕ್ತಿ ದೃಷ್ಟಿಯ ಓದೆಂಬ ಒಂದು ಓದು ಈ ಮೂಲಕ ಸೇರ್ಪಡೆಯಾಗಿದೆ.

ಕುವೆಂಪು ಅವರ ನಿಲುವುಗಳನ್ನು ನಮ್ಮ ವಿಮರ್ಶಕರು ತಮ್ಮದೇ ದೃಷ್ಟಿಗಳಲ್ಲಿ ವ್ಯಾಖ್ಯಾನಿಸುವ, ನಿರ್ವಚಿಸುವ, ಒಮ್ಮೊಮ್ಮೆ ಪರಿಕಲ್ಪಿಸಿ ಹೇಳುವ ಮೂಲಕ ತಮ್ಮದೇ ನಿಲುವುಗಳನ್ನು ಪ್ರತಿಪಾದಿಸುವ ಕೆಲಸವನ್ನು ಮಾಡಿದ್ದಾರೆ. ಕೆಲವರು ಅರ್ಥವ್ಯಾಖ್ಯಾನ ಮಾಡುವ, ಅಭಿವ್ಯಕ್ತಿ ಕ್ರಮಗಳನ್ನು ಪರಿಶೀಲಿಸುವ ಕೆಲಸವನ್ನು ಮಾಡಿದ್ದಾರೆ. ಆ ಮೂಲಕ ಸಾಹಿತ್ಯದ ಕುರಿತ ತಮ್ಮದೇ ದೃಷ್ಟಿಧೋರಣೆಗಳನ್ನು ಅಭಿವ್ಯಕ್ತಿಸಿದ್ದಾರೆ. ಸಾಹಿತಿಯನ್ನು ಸ್ಥಾನ ನಿರ್ಣಯ ಮಾಡುವ, ಮೌಲ್ಯಮಾಪನ ಮಾಡುವ ಕೆಲಸವನ್ನೂ ಮಾಡಿದ್ದಾರೆ. ಆದರೆ ಸೂಕ್ತಿ ಸಂಗ್ರಹದಂತಹ ಓದುಗಳು ಹೀಗೇನೂ ಮಾಡಿಲ್ಲ. ಸಾಹಿತ್ಯದ ಉತ್ತಮ ಬಿಡಿಭಾಗಗಳನ್ನು ಬರಿದೆ ಆಯ್ದು ಸಂಕಲಿಸಿ ಕೊಡುವ ಮೂಲಕ ಲೇಖಕರ ಒಲವು–ನಿಲುವುಗಳನ್ನು ಓದುಗರಿಗೆ ಉಣಬಡಿಸುವ ಕೆಲಸ ಮಾಡಿವೆ. ವ್ಯಾಖ್ಯಾನರಾಹಿತ್ಯವೇ ಈ ಓದಿನ ಒಂದು ಲಕ್ಷಣವಾಗಿದೆ. ಕುವೆಂಪು ಭಿನ್ನ ಕೃತಿಗಳ ಭಿನ್ನ ಬಿಡಿ ಭಾಗಗಳನ್ನು ಕತ್ತರಿಸಿ ಒಟ್ಟುಗೂಡಿಸುವ ಮೂಲಕವೇ ತಮ್ಮ ಓದನ್ನಿಲ್ಲಿ ಸೂಕ್ತಿ ಸಂಗ್ರಹಕಾರರು ಪ್ರಕಟಿಸಿದ್ದಾರೆ. ಸಾಹಿತ್ಯದ ಧ್ವನಿಯ ಬಗೆಗೆ ತಮ್ಮದೇ ವ್ಯಾಖ್ಯಾನಗಳನ್ನು ನೀಡುವುದಕ್ಕಿಂತ ಅಲ್ಲಿನ ಧ್ವನಿಗಳನ್ನು ಗ್ರಹಿಸುವ ಮುಕ್ತ ಅವಕಾಶವನ್ನು ಓದುಗನಿಗೆ ಬಿಟ್ಟು ಕೊಡುವುದು ಇಲ್ಲಿನ ವಿಧಾನವಾಗಿದೆ. ಹಾಗೆ ಭಿನ್ನ ಬಿಡಿ ಭಾಗಗಳನ್ನು ಕತ್ತರಿಸಿ ಒಟ್ಟುಗೂಡಿಸುವ ಮೂಲಕ ಕುವೆಂಪು ಅವರ ಅಥವಾ ಯಾವುದೇ ಲೇಖಕನ ನಿಲುವುಗಳನ್ನು ಕಟ್ಟಿಕೊಳ್ಳಲು ಸಾಧ್ಯವೇ? ಇದು ಚರ್ಚಾರ್ಹ. ಯಾವುದಾದರೂ ಒಂದು ಆಕೃತಿಯ ಒಂದು ಬಿಡಿ ಭಾಗವನ್ನು ಅಲ್ಲಿಂದ ಬಿಡಿಸಿ; ಹಾಗೇ ಬಿಡಿಸಿದ ಇನ್ನೆಷ್ಟೊ ಹತ್ತಾರು ಆಕೃತಿಗಳ ನೂರಾರು ಬಿಡಿ ಭಾಗಗಳನ್ನು ಒಟ್ಟಿಗೆ ಒಟ್ಟಿದರೆ ಅದರಿಂದ ಆ ಎಲ್ಲ ಆಕೃತಿಗಳ ಹಿಂದಿನ ನಿಲುವುಗಳನ್ನು ಕಟ್ಟಿಕೊಳ್ಳಲು ಆಗುವುದೇ? ಇದೊಂದು ಹೊಸದೇ ಆಕೃತಿ (ಸಮನ್ವಯ?) ಆಗಬಹುದಲ್ಲವೇ? ಹೀಗೆ ಹತ್ತಾರು ಪಠ್ಯಗಳ ಬಿಡಿಭಾಗಗಳನ್ನು ತೆಗೆದು ಕಟ್ಟಿದ ಪಠ್ಯಗಳನ್ನೆ ನಮ್ಮ ಸೂಕ್ತಿಕಾರರು ನಿರ್ಮಿಸಿದ್ದಾರೆ. ಈ ದೃಷ್ಟಿಯಿಂದ ನೋಡಿದರೆ ನಮ್ಮ ವಿಮರ್ಶೆಯು ಒಂದೊಂದು ಸಾರಿ ಸಂಭವಿಸಿದಾಗಲೂ ಒಂದೊಂದು ಪಠ್ಯಗಳನ್ನು ಕಟ್ಟಲು ಯತ್ನಿಸಿದೆ ಎಂದು ಹೇಳಬಹುದು. ಪಠ್ಯಗಳ ವಿಮರ್ಶೆಯೇ ಉಪಪಠ್ಯವೊ, ಪ್ರತಿಪಠ್ಯವೊ ಆಗಿ ಪರಿಣಮಿಸುವುದೇ ವಿಮರ್ಶೆಯ ಲಕ್ಷಣ. ಇಂತಹ ಕಡೆ ವಿಮರ್ಶೆಯು ಪಠ್ಯವನ್ನು ಏಕಕಾಲಕ್ಕೆ ಒಡೆಯುತ್ತಿರುತ್ತದೆ

ಮತ್ತು ಕಟ್ಟುತ್ತಿರುತ್ತದೆ. ಪಠ್ಯ ನಿರಚನೆ ಮತ್ತು ಮರು ನಿರ್ಮಾಣಗಳೆರಡೂ ಸಂಭವಿಸುವುದನ್ನು ನಮ್ಮ ವಿಮರ್ಶೆಯೇ ಇಲ್ಲಿ ಅಭಿನಯಿಸಿ ತೋರಿದೆ. ಇಲ್ಲಿ ಯಾರೂ ಮುಖ್ಯರಲ್ಲ-ಇಲ್ಲಿ ಯಾರೂ ಅಮುಖ್ಯರಲ್ಲ ಎಂಬ ಕುವೆಂಪು ತತ್ವ ಇಂತಹ ಸಂಗ್ರಹ ಕಾರ್ಯಗಳಲ್ಲಿ ಮತ್ತೆ ಮತ್ತೆ ಭಂಗಗೊಂಡಿದೆ. ಕುವೆಂಪು ಅವರ ಪಠ್ಯಗಳಿಂದಲೇ ಕೆಲವು ಭಾಗಗಳನ್ನು ಆಯ್ದು ಮಿಕ್ಕವನ್ನು ಬಿಟ್ಟು ಬಿಡುವ ಹಿಂದೆ ದೃಷ್ಟಿ-ಧೋರಣೆಗಳಲ್ಲಿ ಯಾವುದು ಮುಖ್ಯ, ಯಾವುದು ಅಮುಖ್ಯವೆಂಬ ವಿಂಗಡಣೆಯ ರಾಜಕಾರಣವೇ ಕೆಲಸ ಮಾಡಿದೆ.

ಎಚ್.ನಂಜೇಗೌಡರು ತಮ್ಮ ಕುವೆಂಪು ಸೂಕ್ತಿ ಸುಧಾ ಸಂಕಲನದಲ್ಲಿ ಕುವೆಂಪುವನ್ನು ಭುವನದ ಭಾಗ್ಯ ಎಂದು ಕರೆದಿದ್ದಾರೆ. (2670: ಮುಮ್ಮಾತು, ಪುಟ: 10) ಹರಿಹರ ಪ್ರಿಯರು ಕುವೆಂಪು ಕೃತಿಗಳಿಂದ 1802 ಬಿಡಿ ಭಾಗಗಳನ್ನು ಆಯ್ದು ಸಂಕಲಿಸಿದ್ದರೆ ನಂಜೇಗೌಡರು 696 (697?) ಸೂಕ್ತಿಗಳನ್ನು ಸಂಗ್ರಹಿಸಿದ್ದಾರೆ. ನಂಜೇಗೌಡರು ಬರಿ ಸಂಗ್ರಹಿಸಿ-ಸಂಯೋಜಿಸಿ ಅಷ್ಟಕ್ಕೆ ಬಿಟ್ಟಿಲ್ಲ. ಪ್ರಾಚೀನ ಮಲ್ಲಕಾರ್ಜುನ, ಮಲ್ಲಕವಿ, ಅಭಿನವ ವಿದ್ಯಾನಂದರಂತೆ ಸೂಕ್ತಿಗಳಿಗೆ ಟೀಕು ಅಥವಾ ವ್ಯಾಖ್ಯಾನವನ್ನು ಬರೆದಿದ್ದಾರೆ. ತಮ್ಮ ಸಂಯೋಜನೆಯಲ್ಲಿ ಇವರು ಕುವೆಂಪು ಅವರ ಒಂದೊಂದೇ ಕೃತಿಗಳನ್ನು ಪ್ರತ್ಯೇಕವಾಗಿ ತೆಗೆದುಕೊಂಡು ಆಯಾ ಕೃತಿಗಳಿಂದ ಆಯ್ದ ಸೂಕ್ತಿಗಳನ್ನು ಒಂದೇ ಕಡೆ ಕೊಟ್ಟಿದ್ದಾರೆ. ಟೀಕು ಅಥವಾ ವ್ಯಾಖ್ಯಾನಗಳನ್ನು ತಮ್ಮ ಜೀವನಾನುಭವವನ್ನು ಬಳಸಿಕೊಂಡು ಕುವೆಂಪು ತತ್ವ ವಿಚಾರಗಳನ್ನು ಆಚರಿಸಬಹುದಾದ ಸಲಹೆಗಳ ರೂಪದಲ್ಲಿ ಬರೆದಿದ್ದಾರೆ. ಅಗತ್ಯವೆಂದು ಕಂಡು ಬಂದ ಒಂದೋ ಎರಡೋ ಕಡೆ ಮಾತ್ರ ದೇಜಗೌ ಮತ್ತು ಲಕ್ಕಪ್ಪಗೌಡರ ರಾಷ್ಟ್ರಕವಿ ಕುವೆಂಪು-ವಿಶ್ವಕವಿ ಕುವೆಂಪು ಕೃತಿಗಳಿಂದ ಕೆಲವು ವಾಕ್ಯಗಳನ್ನು ಬಳಸಿಕೊಂಡಿದ್ದಾರೆ. ಮಿಕ್ಕಂತೆ ವ್ಯಾಖ್ಯಾನಗಳೆಲ್ಲವೂ ಇವರದೇ ಆಗಿವೆ ಅನುಬಂಧದಲ್ಲಿ ಕೆಲವು ಕನ್ನಡ ಪರಗೀತೆಗಳ ಆಯ್ದ ಭಾಗಗಳನ್ನು ಅನಿಕೇತನ ಗೀತೆ, ವಿಶ್ವಮಾನವ ಸಂದೇಶ, ಸಪ್ತಸೂತ್ರ-ಪಂಚಮಂತ್ರಗಳನ್ನು ಕೊಟ್ಟಿದ್ದಾರೆ. ಆರಂಭದಲ್ಲಿ ಕುವೆಂಪು ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಬರೆದಿದ್ದಾರೆ.

ಕುವೆಂಪು ಅವರ ತತ್ವಗಳನ್ನು, ಬರಿ ಓದಿದರೆ ಸಾಹಿತ್ಯವನ್ನು ಬರಿ ಓದಿದರೆ ಸಾಲದು. ಅದನ್ನು ಅರಿತುಕೊಂಡು ಬಾಳಬೇಕು ಎಂಬ ತಾತ್ವಿಕತೆ ಇಲ್ಲಿ ಪ್ರಧಾನವಾಗಿ ಎದ್ದು ಕಾಣುತ್ತದೆ. ಸಾಹಿತ್ಯವು ಓದಿಗೆ ಗುರಿಯಾಗುವುದರ ಜೊತೆಗೆ ಅದು ಬಾಳಿಗೂ ಗುರಿಯಾಗಬೇಕು ಎಂಬ ತತ್ವವು ನಮ್ಮ ವಿಮರ್ಶೆಯ ಒಂದು ಉದಾತ್ತವಾದ ತತ್ವವಾಗಿದೆ. ಹೀಗಾಗಿ ಇಂತಹ ದೃಷ್ಟಿಯು ಸಾರ್ವಕಾಲಿಕವಾದ, ಸಾರ್ವತ್ರಿಕವಾದ ಆಚರಣಾರ್ಹ ತತ್ವಗಳನ್ನು ಸಾಹಿತ್ಯದ ಸೂಕ್ಷ್ಮ ಅವಲೋಕನದಿಂದ ಎತ್ತಿ ತೆಗೆಯುವ ಮತ್ತು ಅವುಗಳನ್ನು ತಮ್ಮ ದೃಷ್ಟಿಗಳಿಗೆ ಅನುಗುಣವಾಗಿ ಅರ್ಥೈಸುವ ಕೆಲಸವನ್ನು ಮಾಡಿದೆ. ಲೇಖಕನ ಬಗೆಗೆ ಗೌರವಾದರಗಳನ್ನು ಇಟ್ಟುಕೊಂಡು ಆತನ ತತ್ವಗಳನ್ನು ವರ್ತಮಾನೀಕರಿಸುವ ಮತ್ತು ಕಾಲಾತೀತಗೊಳಿಸುವ ಕೆಲಸವನ್ನು ನಂಜೇಗೌಡರು ಇಲ್ಲಿ ಮಾಡಿದ್ದಾರೆ. ಇಲ್ಲೆಲ್ಲ ಕುವೆಂಪು ನುಡಿಗಳನ್ನು ಒಪ್ಪಿ, ಮೆಚ್ಚಿ ವಿಸ್ತರಿಸುವ ಕೆಲಸ ಮಾಡಲಾಗಿದೆ. ಒಂದೊಂದು ನುಡಿಗಳನ್ನು ದೃಷ್ಟಾಂತಗಳ ಮೂಲಕ, ನಿದರ್ಶನಗಳ ಮೂಲಕ, ಲೋಕಾನ್ವಯದ ಮೂಲಕ ಅರ್ಥೈಸುವ, ವಿವರಿಸುವ ಕೆಲಸವನ್ನು ಮಾಡಲಾಗಿದೆ. ಕುವೆಂಪು ತಾತ್ವಿಕತೆಯನ್ನು ಪ್ರಶ್ನಿಸುವ-ನಿರಾಕರಿಸುವ ದೃಷ್ಟಿ ಇಲ್ಲಿ ಇಲ್ಲ.

ಸೂಕ್ತಿಗಳ ಆಯ್ಕೆಯಲ್ಲಿ ಇಲ್ಲಿ ಪಠ್ಯ ಸಂದರ್ಭಗಳ ಆಚೆಗೂ ಸ್ವತಂತ್ರವಾಗಿ ಸುಭಾಷಿತಗಳಂತೆ ಕಾಣಬಲ್ಲ ನುಡಿಗಳನ್ನು ಮಾತ್ರವೇ ಆಯ್ದುಕೊಳ್ಳಲಾಗಿದೆ. ಗಾದೆಮಾತು, ಅನುಭವದ ನುಡಿಗಳಂತೆ ಇರುವ ನುಡಿಗಳನ್ನು ಮಾತ್ರವೆ ಆಯ್ದುಕೊಳ್ಳಲಾಗಿದೆ. ಇಲ್ಲಿನ ಆಯ್ದ ನುಡಿಗಳಿಗೆ ಕಾಲಜ್ಞಾನ-ತತ್ವಜ್ಞಾನಗಳಾಗುವ ಸಾಧ್ಯತೆಯೂ ಇದೆ. ಒಟ್ಟು ಆಯ್ದಿರುವ ನುಡಿಗಳನ್ನು ಪ್ರಕಾರಗಳ ಪುಟಸಂಖ್ಯೆಗಳ ಆರೋಹಣ ಕ್ರಮದಲ್ಲಿಯೇ ಒಂದೊಂದಾಗಿ ಜೋಡಿಸಲಾಗಿದೆ. ಇಲ್ಲಿ ಯಾವುದೇ ರೀತಿಯ ವರ್ಗೀಕರಣವಾಗಲೀ ಮರುಜೋಡಣೆಯಾಗಲೀ ಇಲ್ಲ. ಹಾಗಾಗಿ ಕೃತಿ ಪಠ್ಯದ ಒಳಗೆ ಇರಬಹುದಾದ ತತ್ವಜ್ಞಾನ ಸಾರ ರೂಪಿ ಪಠ್ಯವನ್ನು ಪ್ರತ್ಯೇಕಿಸಿ ಕಟ್ಟಿಕೊಟ್ಟಂತೆ ಇಲ್ಲಿನ ಎಲ್ಲ ಭಾಗಗಳೂ ಇವೆ. ಒಟ್ಟಾರೆಯಾಗಿ ಕುವೆಂಪು ಜೀವನದರ್ಶನ, ಕಾಣ್ಕೆ ಅಥವಾ ಕುವೆಂಪು ತತ್ವದರ್ಶನ ಎನ್ನಬಹುದಾದ ಒಂದು ತತ್ವಜ್ಞಾನರೂಪಿ ಆಕೃತಿಯೊಂದನ್ನು ಕಟ್ಟುವ ಯತ್ನವು ಇಲ್ಲಿದೆ. ಕುವೆಂಪು ಸೂಕ್ತಿಗಳ ವ್ಯಾಖ್ಯಾನವೂ ಇಲ್ಲಿರುವುದರಿಂದ ಆಯ್ದ ಪಠ್ಯದ ಕ್ರಮಾಗತ ಪ್ರಾಯೋಗಿಕ ವಿಮರ್ಶೆಯು ಇಲ್ಲಿ ಸಂಭವಿಸಿದೆ. ಈ ಪ್ರಾಯೋಗಿಕ ವಿಮರ್ಶೆಯು ತತ್ವಗಳಿಗೆ ತತ್ವಾರ್ಥಗಳನ್ನು ಅನ್ವಯ ಮಾಡುವ ಅನ್ವಯೀಕರಣ ಪ್ರವೃತ್ತಿಯಾಗಿ ಇಲ್ಲಿ ಸಂಭವಿಸಿದೆ. ಈ ಪ್ರವೃತ್ತಿಯು ಸರಿ ಸಮಾರು ಶಾಲೆಗಳಲ್ಲಿ ಉಪಾಧ್ಯಾಯರು ಪಠ್ಯಗಳನ್ನು ಸಮಾಜಕ್ಕೆ ಅನ್ವಯಿಸಿ ಅರ್ಥೈಸುವ ರೀತಿಯ ಧಾಟಿಯನ್ನು ಪಡೆದುಕೊಂಡಿದೆ.

ತತ್ವರೂಪಿ-ಸೂಕ್ತಿರೂಪಿ ಸಾಹಿತ್ಯವನ್ನು ಮೆಚ್ಚುವ-ನೈತಿಕ ನೆಲೆಯ ಮೌಲ್ಯ ಜಿಜ್ಞಾಸೆಯನ್ನು ಹೊಂದಿರುವ ಕಾವ್ಯವನ್ನು ಇಷ್ಟಪಡುವ ಒಂದು ಜನವರ್ಗವೇ ನಮ್ಮಲ್ಲಿದೆ. ಡಿ.ವಿ.ಜಿಯವರು ಮಂಕುತಿಮ್ಮನ ಕಗ್ಗವನ್ನು, ಸರ್ವಜ್ಞನ ವಚನಗಳನ್ನು, ಸೋಮೇಶ್ವರನ ಶತಕವನ್ನು ಪವಿತ್ರ ನೀತಿಗ್ರಂಥಗಳೆಂಬಂತೆ ವಾಚಿಸುವವರು ನಮ್ಮಲ್ಲಿ ಅನೇಕರಿದ್ದಾರೆ. ಸಮಾಜದ ನೈತಿಕ ನೆಲೆಯನ್ನು ರೂಪಿಸುವ-ತತ್ವಜಿಜ್ಞಾಸೆ ರೂಪದ ಸಾಹಿತ್ಯಭಾಗಗಳನ್ನು ಆಯ್ದು ಅಂತಹ ಓದುಗವರ್ಗಕ್ಕೆ ಸಾಹಿತ್ಯ ಪಥ್ಯವೊಂದನ್ನು ಕುವೆಂಪು ಮೇಲಿನ ಪ್ರೀತಿಯಿಂದ ಕಟ್ಟಿಕೊಡುವ ಯತ್ನಗಳು ಈ ಸೂಕ್ತಿರೂಪಿ ಸಂಕಲನಗಳಲ್ಲಿ ನಡೆದಿವೆ, ಹಾಗಾಗಿ ಇದು ಕುವೆಂಪು ಸಾಹಿತ್ಯಕ್ಕೆ ಇರಬಹುದಾದ ಮುಖವೊಂದರ ಅನಾವರಣವೂ ಹೌದು. ಹಾಗೇ ಕುವೆಂಪು ಸಾಹಿತ್ಯವನ್ನು ಕುರಿತ ತತ್ವದೃಷ್ಟಿಯ ಓದೂ ಹೌದು. ಶಶಿಕಲಾ ಚಂದ್ರಶೇಖರ್ ಅವರ 'ಕುವೆಂಪು ಸೂಕ್ತಿ ಮಾಲೆ' ಈ ಮೊದಲಿನ ಎರಡಕ್ಕಿಂತಲೂ ಭಿನ್ನವಾದುದು. ಇಲ್ಲಿ 907 ಸೂಕ್ತಿಗಳಿವೆ. ಕೃತಿಯ ಆರಂಭದಲ್ಲಿ ದೇಜಗೌ ಪೀಠಿಕೆಯಲ್ಲಿ ಸೂಕ್ತಿ-ಸುಭಾಷಿತಗಳ ಸ್ವರೂಪ ವ್ಯಾಖ್ಯಾನವನ್ನು ಮಾಡಿದ್ದಾರೆ. ಈ ಕೃತಿಯ ಸುಮಾರು ಅರ್ಧಭಾಗ 'ಗಂಗೋತ್ರಿ' ಅಭಿನಂದನಾ ಗ್ರಂಥದಲ್ಲೇ ಪ್ರಕಟವಾಗಿದೆ. ಆನಂತರ ವಿಸ್ತೃತಗೊಂಡು ಇದು ಕೃತಿರೂಪ ತಾಳಿದೆ.

ಸೂಕ್ತಿಗಳು ಲೇಖಕನ ವ್ಯಕ್ತಿತ್ವದ ಬಿಂಬಗಳು; ಅವುಗಳ ಮೂಲಕ ಲೇಖಕನ ಆತ್ಮಚರಿತ್ರೆಯ ಅನುಕ್ತ ಸಂಗತಿಗಳನ್ನು ತಿಳಿಯಬಹುದು ಎಂಬ ಧೋರಣೆ ಇಲ್ಲಿದೆ. ಇಲ್ಲಿ ಹರಿಹರಪ್ರಿಯ ಮತ್ತು ನಂಜೇಗೌಡರಿಗಿಂತ ಭಿನ್ನವಾಗಿ ಕುವೆಂಪು ಸೂಕ್ತಿಗಳನ್ನು 1. ಕಲೆ-ಸಾಹಿತ್ಯ 2. ಪ್ರಕೃತಿ 3. ಕನಸು 4. ರೈತ 5. ಕನ್ನಡ-ಕರ್ನಾಟಕ 6. ಬಾಳು ಇತ್ಯಾದಿಯಾಗಿ ಒಟ್ಟು 26 ರೀತಿಗಳಲ್ಲಿ ವರ್ಗೀಕರಿಸಿ ಸಂಯೋಜಿಸಲಾಗಿದೆ. ನಿರ್ದಿಷ್ಟವಾಗಿ ವಿಷಯಾಧಾರಿತ ವಲಯಗಳನ್ನಾಗಿ ಸೂಕ್ತಿಗಳನ್ನು ಇಲ್ಲಿ ವರ್ಗೀಕರಿಸಿರುವುದರಿಂದ ಆಯಾಯಾ ವಿಷಯಕ್ಕೆ ಸಮಬಂಧಿಸಿದ ಕುವೆಂಪು ಸೂಕ್ತಿರೂಪಿ ಬರಹದ ತುಣುಕುಗಳು ಒಂದೆಡೆ ದೊರೆಯುತ್ತವೆ. ಇಂತಹ ಸಂಕಲನಗಳು ನಿರ್ದಿಷ್ಟ ವಿಚಾರಗಳಿಗೆ ಸಂಬಂಧಿಸಿದ ಲೇಖಕನ ದೃಷ್ಟಿ, ನಿಲುವು, ಜೀವನ ಸಿದ್ಧಾಂತಗಳನ್ನು ಹೀಗೆಯೇ ಎಂದು ನಿರ್ದೇಶಿಸಿ ಹೇಳುತ್ತವೆ. ಕೃತಿ ಸಂದರ್ಭಗಳಿಂದ ಕೆಲವು ನುಡಿಗಳನ್ನು ಆಯ್ದು ಅಪಸಾಂದರ್ಭೀಕರಿಸಿರುವುದರಿಂದ ಕೆಲವು ಮಿತಿಗಳೂ ಕೆಲವೆಡೆ ಉಂಟಾಗಿವೆ.

ಒಬ್ಬರ ದೃಷ್ಟಿಯಲ್ಲಿ ಸೂಕ್ತಿಯಂತೆ ಕಾಣುವಂಥವು ಮತ್ತೊಬ್ಬರ ದೃಷ್ಟಿಯಲ್ಲಿ ಸಾಮಾನ್ಯ ವಾಕ್ಯಗಳಂತೆ ತೋರಬಹುದು. ಅಂದ ಮೇಲೆ ಈ ಆಯ್ಕೆ ಸಂಗ್ರಹಕಾರನ ಮನೋಧರ್ಮ, ಸಂಸ್ಕಾರ, ಉದ್ದೇಶಗಳಿಂದ ನಿರ್ದೇಶಿತವಾಗಬಹುದು ಎಂಬ ಎಚ್ಚರ ಹಾಗೂ ಉತ್ತಮವಾದುದನ್ನು ಬೆರಳಿಟ್ಟು ತೋರುವುದು. ಹೇಗೆ ವಿಮರ್ಶೆಯೊ ಹಾಗೆಯೆ ಅನುತ್ತಮವಾದುದನ್ನು ಮುಚ್ಚುವುದೂ ಒಂದು ತೆರನಾದ ವಿಮರ್ಶೆಯೇ ಎಂಬ ಶ್ರೇಷ್ಠತೆಯ ತತ್ವಗಳೆರಡೂ ಈ ಸೂಕ್ತಿ ಸಂಕಲನದ ಹಿಂದೆ ಕೆಲಸ ಮಾಡಿವೆ. ಕೆಲವೊಮ್ಮೆ ನುಡಿಗಳನ್ನು ಸಂದರ್ಭದಿಂದ ಹೊರತೆಗೆದಾಗ ಅವು ಅರ್ಥಪೂರ್ಣ ಅನ್ನಿಸದೆ ಹೋಗಬಹುದು. ನುಡಿಗಳ ಸಾಹಿತ್ಯ ಸಂದರ್ಭವನ್ನು ಅರಿತರೆ ಅವುಗಳು ಹೆಚ್ಚು ಅರ್ಥಪೂರ್ಣ ಅನ್ನಿಸಬಹುದು ಎಂಬ ಎಚ್ಚರವೂ ಈ ಸಂಕಲನದಲ್ಲಿದೆ. (ನೋಡಿ: 2669-ಪುಟ: 5ರಿಂದ 10) ಸಾಹಿತ್ಯವು ರಚಿತವಾದ ಕಾಲದ ಸಂದರ್ಭ, ಸಾಹಿತ್ಯ ಕೃತಿಯಲ್ಲಿ ಸೂಕ್ತಿರೂಪಿ ನುಡಿಗಳು ಬಳಕೆಯಾಗುವ ಪಠ್ಯಸಂದರ್ಭ, ಸಾಹಿತ್ಯದ ಕಥನವು ಘಟಿಸಿರಬಹುದಾದ ಚಾರಿತ್ರಿಕ ಸಂದರ್ಭ ಹೀಗೆ ಹಲವು ಸಂದರ್ಭಗಳ ಹಿನ್ನೆಲೆಯಲ್ಲಿ ಸಾಹಿತ್ಯವನ್ನು ವಿಶ್ಲೇಷಿಸುವ ಮತ್ತು ಸಂದರ್ಭಾತೀತವಾಗಿ ಹಾಗೂ ಅಪಸಾಂದರ್ಭೀಕರಿಸಿ ವಿಶ್ಲೇಷಿಸುವ ಎಲ್ಲ ಕ್ರಮಗಳೂ ನಮ್ಮ ವಿಮರ್ಶೆಯಲ್ಲಿವೆ. ಇದೆಲ್ಲವನ್ನು ಒಟ್ಟಾಗಿ ಸಾಂದರ್ಭೀಕತೆಯ ರಾಜಕಾರಣ ಎನ್ನಬಹುದು. ಈ ಸಾಂದರ್ಭಿಕತೆಯ ರಾಜಕಾರಣದ ಬಗೆಗೆ ಕುವೆಂಪು ಸೂಕ್ತಿಮಾಲೆ ಸಂಕಲನದಲ್ಲಿ ಒಂದು ಎಚ್ಚರ ಇದೆ. ಅಂದರೆ ಸಾಂದರ್ಭಿಕ ರಾಜಕಾರಣದ ಅರಿವಿದ್ದೂ ಅದಕ್ಕೆ (ಅನಿವಾರ್ಯವೆಂಬಂತೆ) ಗುರಿಯಾಗುವ ಲಕ್ಷಣವು ಈ ವಿಮರ್ಶೆಯದಾಗಿದೆ.

'ಕುವೆಂಪು ರಸಚಿಂತನೆಯ ಮಿಂಚುಗಳು' ಕೃತಿ ಜಿ.ಎಸ್. ಶಿವರುದ್ರಪ್ಪನವರು ಕುವೆಂಪುರವರ ವಿದ್ಯಾರ್ಥಿಯಾಗಿ ತರಗತಿಯಲ್ಲಿ ಕೇಳಿದ ಅವರ ಮೀಮಾಂಸೆಯ ಪಾಠಗಳ ಆಯ್ದ ಮಾತುಗಳ ಸಂಕಲವಾಗಿದೆ. ಇದೊಂದು ಕಿರು ಹೊತ್ತಿಗೆಯಾಗಿದ್ದು ಇಲ್ಲಿ ಕುವೆಂಪು ಅವರು ಬೋಧನೆಯ ಸಂದರ್ಭದಲ್ಲಿ ತಮಗೆ ಮುಖ್ಯವೆನಿಸಿ ಹೇಳಿದ ಮಿಮಾಂಸಾ ವಿಚಾರಗಳನ್ನು ಜಿ.ಎಸ್. ಶಿವರುದ್ರಪ್ಪ ಇಲ್ಲಿ ಮರುನಿರೂಪಿಸಿದ್ದಾರೆ. ಎಸ್.ಎಂ. ವೃಷಬೇಂದ್ರ ಸ್ವಾಮಿ 'ತರಗತಿಗಳಲ್ಲಿ ಕಂಡ ಕುವೆಂಪು' ಕೃತಿ ಸಂಪೂರ್ಣವಾಗಿ ಒಡನಾಟ ಕಥನವಾದರೆ ಜಿ.ಎಸ್.ಎಸ್ ಅವರ ಈ ಕೃತಿ ಕುವೆಂಪು ಚಿಂತನೆಗಳನ್ನು ಮಾತ್ರ ಬಿಡಿ ಹರಳುಗಳಂತೆ ಸಂಕಲಿಸಿದ ಕೃತಿಯಾಗಿದೆ. ಕವಿ, ಸಹೃದಯ, ಕಾವ್ಯ , ಓದು-ಹೀಗೆ ಮೀಮಾಂಸೆಯ ಬಗೆಗಿನ ಹಲವು

ಒಳನೋಟಗಳು ಇಲ್ಲಿವೆ. ಕುವೆಂಪು ಅವರ ಒಂದೊಂದು ಮಾತೂ, ಬರೆಹವೂ, ಕ್ರಿಯೆಯೂ ಅಮೂಲ್ಯ ಎಂದು ಭಾವಿಸಿದ ದೃಷ್ಟಿ ಈ ಎಲ್ಲ ರೂಪಗಳಲ್ಲಿ ಕ್ರಿಯಾಶೀಲವಾಗಿದೆ.

ಸೂಕ್ತಿ ರೂಪಿ ವಿಮರ್ಶೆಯು ಕುವೆಂಪು ಮಾತು, ಬರೆಹಗಳ ತತ್ವರೂಪಿ ನುಡಿಗಳ ಸಂಗ್ರಹ ಕಾರ್ಯವಾಗಿ, ಟೀಕು–ವ್ಯಾಖ್ಯಾನ ರೂಪಿಯಾಗಿ, ವಿಷಯಾವಾರು ವರ್ಗೀಕರಣ ಮತ್ತು ಮರುಸಂಯೋಜನಾ ಮಾದರಿಯ ನಿರೂಪಣೆಯಾಗಿ, ಗತಿಸಿದ ನೆನಪುಗಳ ಮರುನಿರೂಪಣೆಯಾಗಿ, ಹೀಗೆ ಹಲವು ರೀತಿಗಳಲ್ಲಿ ಪ್ರಕಟವಾಗಿದೆ. ಹಾಗೇ ಇದೊಂದು ಸಾಹಿತ್ಯದ ತತ್ವಜ್ಞಾನ ದೃಷ್ಟಿಯ ಓದಿನ ಪ್ರಸ್ತುತಿಯೂ, ತಾವು ಮೆಚ್ಚುವ ಲೇಖಕನ ಸಾಹಿತ್ಯ ಸಾರವನ್ನು ಇನ್ನಷ್ಟು ಮತ್ತಷ್ಟು ಜನರಿಗೆ ತಲುಪಿಸುವ ಸಾಹಿತ್ಯ ಪ್ರಸಾರ–ಪ್ರಚಾರ ಕಾರ್ಯವೂ ಆಗಿದೆ. ಹಾಗೆಯೆ ನೈತಿಕ ನೆಲೆಯ ತತ್ವಜಿಜ್ಞಾಸೆಯ ಮತ್ತು ಸಾಹಿತ್ಯವನ್ನು ಬಾಳುವ ದೃಷ್ಟಿಯಿಂದ ಓದುವ ಸಾಹಿತ್ಯಕ ಅನುಸಂಧಾನವಾಗಿದೆ.

ವಿಮರ್ಶೆಯು ಸಾಹಿತ್ಯದ ಓದಿಗೆ ಪರ್ಯಾಯವೆಂಬಂತೆ: ಮೂಲ ಕೃತಿಯನ್ನು ಓದುಗ ಓದಬೇಕಾಗಿಲ್ಲ ಎಂಬಂತೆ ರಚಿತವಾಗಬಾರದು. ವಿಮರ್ಶೆಯು ಸಾಹಿತ್ಯದ ಓದನ್ನು ಪ್ರೇರೇಪಿಸಬೇಕು ಅಥವಾ ಓದುಗನಿಗೆ ಸಾಹಿತ್ಯ ಕೃತಿಯನ್ನು ಓದಲು ಮಾರ್ಗದರ್ಶಿಸಬೇಕು ಎಂಬ ನಂಬಿಕೆಯೊಂದು ನಮ್ಮ ವಿಮರ್ಶೆಯಲ್ಲಿ ಇದೆ. ಆದರೆ ಈ ಸೂಕ್ತಿರೂಪಿ ಸಂಗ್ರಹಗಳು–ವ್ಯಾಖ್ಯಾನಗಳು ಕೆಲವೆಡೆ ಮೂಲ ಕೃತಿಯ ಓದಿನಿಂದ ಓದುಗನನ್ನು ದೂರ ಮಾಡುವಂತೆ ಇವೆ. ಕೆಲವೆಡೆ ತತ್ವದೃಷ್ಟಿಯ ಓದನ್ನು ಸಾಹಿತ್ಯವನ್ನು ಅಪೇಕ್ಷಿಸುವ ಓದುಗರಿಗೆ ಸರಕನ್ನು ಒದಗಿಸುವ ಪ್ರತಿಪಠ್ಯಗಳಂತೆಯೂ ಇವೆ.

**5.2.4. ಸಂಪಾದನಾ ರೂಪಿ ವಿಮರ್ಶೆ**

ನಮ್ಮ ಸಂಪಾದನೆಗಳನ್ನು ಗಮನಿಸಿದರೆ ಅಲ್ಲಿ ಹಲವು ರೀತಿಯ ಸಂಪಾದನೆಗಳು ಇರುವುದನ್ನು ಕಾಣಬಹುದು. ಸಾಹಿತ್ಯದ ಸಂಪಾದನೆ, ವಿಮರ್ಶೆಯ ಸಂಪಾದನೆ, ಪತ್ರಿಕಾ ಬರವಣಿಗೆಯ ಸಂಪಾದನೆ, ವಿಶೇಷಾಂಕಗಳ ಸಂಪಾದನೆ, ಅಭಿನಂದನ ಗ್ರಂಥಗಳ ಸಂಪಾದನೆ, ಸ್ಮರಣ ಸಂಚಿಕೆಗಳ ಸಂಪಾದನೆ ಇತ್ಯಾದಿ.

1) ಸಾಹಿತ್ಯದ ಸಂಪಾದನೆಯಲ್ಲಿ 1.1) ಕುವೆಂಪು ಅವರು ಬರೆದಿರುವ ಆಯ್ದ ಕವಿತೆಗಳ ಸಂಪಾದನೆ ಮತ್ತು ಅದಕ್ಕೆ ಪೀಠಿಕೆ ಪ್ರಸ್ತಾವನೆ 1.2) ಸೂಕ್ತಿರೂಪಿ ತುಣುಕುಗಳ ಸಂಪಾದನೆ ಮತ್ತು ವ್ಯಾಖ್ಯಾನ, 1.3) ಕುವೆಂಪು ಮೇಲೆ ಬಂದಿರುವ ಕವನಗಳ (ಸಾಹಿತ್ಯರೂಪಿ ವಿಮರ್ಶೆಯ) ಸಂಪಾದನೆ, 1.4) ಭಾಷಣ, ಮುನ್ನುಡಿ, ವಿಚಾರ ಲೇಖನಗಳ ಸಂಪಾದನೆ, 1.5) ಸಮಗ್ರಗಳ ಸಂಪಾದನೆ ಇವು ಕುವೆಂಪು ಸಾಹಿತ್ಯ ಸಂಪಾದನೆಯ ಕೆಲವು ಬಗೆಗಳು. 2)ವಿಮರ್ಶೆಯ ಸಂಪಾದನೆಯಲ್ಲಿ 2.1) ಆಯ್ದ ಲೇಖನಗಳ ಸಂಪಾದನೆ 2.2) ಅಭಿನಂದನಾ ಗ್ರಂಥಗಳ ಸಂಪಾದನೆ 2.3) ಪ್ರಕಾರ ರೂಪಿ ವಿಮರ್ಶೆಗಳ ಸಂಪಾದನೆ ಉದಾ: ನಾಟಕದ ಮೇಲೆ ಬಂದಿರುವ ವಿಮರ್ಶೆಯನ್ನು ಒಂದು ಕಡೆ, ಮಹಾಕಾವ್ಯದ ಮೇಲೆ ಬಂದಿರುವ ವಿಮರ್ಶೆಯನ್ನು ಒಂದು ಕಡೆ, ಅಥವಾ ಒಂದೊಂದು ಕೃತಿ ಬಗ್ಗೆ ಬಂದಿರುವ ವಿಮರ್ಶೆಯನ್ನು ಒಂದೊಂದು ಕಡೆ ಸಂಪಾದಿಸುವುದು. 2.4) ವಿಚಾರ ಸಂಕಿರಣಗಳ ಕೃತಿರೂಪಿ ಸಂಪಾದನೆ (ಸಾಂದರ್ಭಿಕ ಉತ್ಪನ್ನಗಳ ಸಂಪಾದನೆ) ಇವು ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯ ಸಂಪಾದನೆಯ ಕೆಲವು ಬಗೆಗಳು.

3) ವಿಶೇಷಾಂಕಗಳ ಸಂಪಾದನೆಯಲ್ಲಿ: ಸಮನ್ವಯ, ವಿಶ್ವಮಾನವ, ಸಂಕ್ರಮಣ, ಶೂದ್ರ, ಸಂವಾದ, ಅನಿಕೇತನ, ಕರ್ನಾಟಕ ಭಾರತಿ, ಅಗ್ನಿ, ಕರ್ಮವೀರ, ಪುಸ್ತಕ ಪ್ರಪಂಚ, ಕನ್ನಡ ನುಡಿ ಮುಂತಾದ ಪತ್ರಿಕೆಗಳ ವಿಶೇಷಾಂಕಗಳು ಸಂಪಾದಿತವಾಗಿವೆ. ಇವು ವ್ಯಕ್ತಿ ಚಿತ್ರಗಳ, ಲೇಖನ ರೂಪಿ ವಿಮರ್ಶೆ ಮತ್ತು ಕಾವ್ಯರೂಪಿ ವಿಮರ್ಶೆಗಳ ಸಂಪಾದನೆಗಳೇ ಆಗಿವೆ. ಪತ್ರಿಕೆಯ ಸಂಪಾದನೆಯಲ್ಲಿ ಕುವೆಂಪು ವಿಮರ್ಶೆಗೆಂದೇ ಮೀಸಲಾದ ನಿಯತಕಾಲಿಕ ಕುವೆಂಪು ದರ್ಶನ ಎಂಬ ಪತ್ರಿಕೆಯೊಂದು ಆರಂಭವಾಯಿತು. ಆದರೆ ಇದು ಹೆಚ್ಚು ಕಾಲ ಬರಲಿಲ್ಲ. ಸ್ಮರಣ ಸಂಚಿಕೆಗಳ ಸಂಪಾದನೆಯಲ್ಲಿ ಕುವೆಂಪು ಅವರ 50ನೆ, 73ನೆ, 75ನೆ 77ನೇ ಹುಟ್ಟು ಹಬ್ಬಗಳಿಗೆ, ಶತಮಾನೋತ್ಸವಕ್ಕೆ, ಜ್ಞಾನಪೀಠ, ಪಂಪ, ಕರ್ನಾಟಕ ರತ್ನ ಪ್ರಶಸ್ತಿಗಳಿಗೆ ಹೀಗೆ ಹಲವು ಸಂದರ್ಭಗಳ ಸ್ಮರಣೆಗಾಗಿ ಹಲವು ಸ್ಮರಣ ಸಂಚಿಕೆಗಳು ಸಂಪಾದಿತವಾಗಿವೆ. ಇವುಗಳನ್ನೆಲ್ಲ ಅಭಿನಂದನಾ ರೂಪಿ ಎಂದೇ ಇಲ್ಲಿ ಕರೆಯಲಾಗಿದೆ. ಇವಲ್ಲದೆ; 4) ಸಂದರ್ಶನಗಳ ಸಂಪಾದನೆ 6) ಪತ್ರಗಳ ಸಂಪಾದನೆ 7) ಒಡನಾಟರೂಪಿ ಬರೆಹಗಳ

ಸಂಪಾದನೆ ಇತ್ಯಾದಿ ರೀತಿಯ ಇನ್ನು ಹಲವು ಸಂಪಾದನೆಗಳು ಇಲ್ಲಿವೆ. ಸೂಕ್ತಿ ರೂಪಿ, ಸಾಹಿತ್ಯ ರೂಪಿ, ಒಡನಾಟ ರೂಪಿಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಲಾಗಿದೆ. ಕುವೆಂಪು ಸಾಹಿತ್ಯದ ಸಂಪಾದನೆಗಳನ್ನು ಆಯ್ಕೆ ಮತ್ತು ಅಲಕ್ಷದ ರಾಜಕಾರಣದಲ್ಲಿ ಗಮನಿಸಲಾಗಿದೆ. ಇಲ್ಲಿ ಮಿಕ್ಕವನ್ನು ಗಮನಿಸಲಾಗುವುದು.

ಸಾಹಿತ್ಯ ಮತ್ತು ವಿಮರ್ಶೆ ಈ ಎರಡರ ಸಂಪಾದನೆಯಲ್ಲಿ ಆಯ್ಕೆ ಮತ್ತು ಅಲಕ್ಷ್ಯಗಳ ಹಿಂದಿನ ಮಾನದಂಡಗಳು ಏನಿರಬಹುದು? ಇದರ ಹಿಂದಿನ ರಾಜಕಾರಣ ಏನಿರಬಹುದು ? ಈ ಸಂಪಾದನಾ ಕೃತಿಗಳ ಸಂಪಾದಕರಲ್ಲಿ ಸ್ಪಷ್ಟವಾಗಿ ಎರಡು ವರ್ಗಗಳನ್ನು ಕಾಣಬಹುದು. ಒಂದು ಕುವೆಂಪು ಆಪ್ತ ವಲಯದ ವರ್ಗ. ಇನ್ನೊಂದು ಇತರೆ ವರ್ಗ. ಕುವೆಂಪು ಆಪ್ತವಲಯದ ವರ್ಗ ಏನಿದೆಯಲ್ಲ ಇವರು ಎಂ.ಜಿ.ಕೆ, ಅನಂತಮೂರ್ತಿ, ಜಿ.ಎಚ್.ನಾಯಕ, ಕುರ್ತಕೋಟಿ, ಗೋಕಾಕ, ಮಾಸ್ತಿ, ಜಿ.ಪಿ.ರಾಜರತ್ನಂ, ಕೆ.ಎಸ್.ನರಸಿಂಹಸ್ವಾಮಿ, ಜಿ.ರಾಮಕೃಷ್ಣ, ಬಿ.ಕೃಷ್ಣಪ್ಪ, ದೇವಯ್ಯ ಹರವೆ, ಇವರಿಗೆ ಜಾಗ ಕೊಟ್ಟಿಲ್ಲ. ಆದರೆ ಇತರೆ ವರ್ಗದವರಿದ್ದಾರಲ್ಲ ಇವರು ಕುವೆಂಪು ಸತ್ತಾನಂತರದ ಸಂಪಾದನಾ ಕೃತಿಗಳಲ್ಲಿ ಮಾತ್ರ ಕೆಲವರನ್ನು ಸೇರಿಸಿಕೊಂಡಿದ್ದಾರೆ. ಜಿ.ಎಚ್.ನಾಯಕ, ಯು.ಆರ್.ಅನಂತಮೂರ್ತಿ, ಕುರ್ತಕೋಟಿ, ಎಂ.ಜಿ.ಕೆ ಇವರನ್ನು ಮಾತ್ರ ಪ್ರಾತಿನಿಧಿಕವಾಗಿ ಸೇರಿಸಿಕೊಂಡಿದ್ದಾರೆ. ಆದರೆ ಗೋಕಾಕ, ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ, ಜಿ.ರಾಮಕೃಷ್ಣ, ಮಾಸ್ತಿ ಇವರನ್ನು ಯಾರೂ ಎಂದೂ ತಮ್ಮ ಸಂಪಾದನೆಗಳಲ್ಲಿ ಸೇರಿಸಿಕೊಂಡಿಲ್ಲ. ಅಂದರೆ ಕಟು ವಿಮರ್ಶೆಯನ್ನು, ಕವಿಯ ಇಮೇಜಿಗೆ ಧಕ್ಕೆ ತರಬಹುದಾದ ವಿಮರ್ಶೆಯನ್ನು ವಿವಾದಕ್ಕೆ-ಪ್ರಶ್ನೆಗಳಿಗೆ ಕಾರಣವಾಗಬಹುದಾದ ವಿಮರ್ಶೆಯನ್ನು ನಮ್ಮ ವಿಮರ್ಶೆಯ ಸಂಪಾದನಾ ಲೋಕ ದೂರ ಇಟ್ಟಿದೆ. ಈ ನಿರ್ಧಿಷ್ಟ ವಿಮರ್ಶೆಯ ಅಲಕ್ಷ್ಯದ ಹಿಂದೆ ಸ್ಟ್ರಾಂಗಾದ ಸೇಫ್ಟಿ ಮೆಝುರ್ಸ್ ಇರೋದನ್ನು ಕಾಣಬಹುದು.

ಇನ್ನು ಸೆಲೆಕ್ಷನ್ಸಲ್ಲಿ ವಿಮರ್ಶಾ ಲೇಖನಗಳ ಆರಾಧನಾ ಗುಣ, ಅಭಿನಂದನಾ ಗುಣ, ಹರಿಕಥಾ ಗುಣ ಮತ್ತು ಪ್ರಾತಿನಿಧಿಕ ಗುಣ-ಪ್ರಕಾರ ಪ್ರಾತಿನಿಧ್ಯದ ಗುಣಗಳನ್ನೇ ಆಯ್ಕೆಯ ಮಾನದಂಡಗಳನ್ನಾಗಿ ಆಪ್ತವಲಯದವರು ಇಟ್ಟುಕೊಂಡಿದ್ದಾರೆ. ಇತರೆ ವರ್ಗದವರು ಇದಕ್ಕಿಂತಾ ಸ್ವಲ್ಪ ಭಿನ್ನ. ಇವರಲ್ಲಿ ವಿಮರ್ಶಾ ಲೇಖನಗಳಿಗೆ ಇರುವ ತೂಕ, ಭಿನ್ನ ಪ್ರಕಾರಗಳ ಪ್ರಾತಿನಿಧ್ಯಕ್ಕಿಂತ ಭಿನ್ನ ಭಿನ್ನ ಅಪ್ರೋಚುಗಳಿಗೆ, ದೃಷ್ಟಿಕೋನಗಳಿಗೆ ಪ್ರಾತಿನಿಧ್ಯ ನೀಡಲಾಗಿದೆ. ಶ್ರೇಷ್ಠ ವಿಮರ್ಶಾ ಲೇಖನಗಳನ್ನ ಆಯ್ಕೆ ಮಾಡಬೇಕು ಅನ್ನುವುದು, ಆದಷ್ಟೂ ಪ್ರಖ್ಯಾತ ವಿಮರ್ಶಕರ ಬರವಣಿಗೆಗಳನ್ನೇ ಆಯ್ಕೆ ಮಾಡಬೇಕು ಅನ್ನುವುದು ಇಲ್ಲಿ ಎದ್ದು ಕಾಣುತ್ತದೆ. ಈ ವಲಯದಲ್ಲೂ ಕೂಡ ಸ್ವಲ್ಪ ಕವಿ ವಿಚಾರದಲ್ಲಿ ಗುಣಗ್ರಹಣ ಮಾದರಿ, ಸಾಹಿತ್ಯ ಸಮರ್ಥನ ಮಾದರಿ, ವಿವರಣಾತ್ಮಕ ಮಾದರಿ ವಿಮರ್ಶೆಗಳಿಗೇ ಒಲವು ಜಾಸ್ತಿ. ಆದರೆ ಎಲ್ಲದರಲ್ಲೂ ಕಾಣುವ ಒಂದು ಪ್ರಧಾನವಾದ ರೋಗವೆಂದರೆ ಪ್ರಸಿದ್ಧ ವಿಮರ್ಶಕರ ಬೆನ್ನು ಹತ್ತಿ ಹೋಗುವುದು. ಇಲ್ಲಿ ವಿಮರ್ಶೆಗಿಂತಾ ವಿಮರ್ಶಕನೇ ಮುಖ್ಯ ಆಗಿಬಿಡುತ್ತಾನೆ. ಹೀಗಾಗಿ ಹಲವೆ ಲೇಖನಗಳು ಅನೇಕ ಸಂಪಾದಿತ ಕೃತಿಗಳಲ್ಲಿ ರಿಪೀಟಾಗಿವೆ. ಈ ವಿಮರ್ಶಾ ಸಂಪಾದನೆಗಳಲ್ಲಿ ವಿಮರ್ಶೆ ಮತ್ತು ವಿಮರ್ಶಕರನ್ನು ಟ್ರೀಟು ಮಾಡಿರುವುದು ಇದೆಯಲ್ಲ ಇದೊಂಥರ ಸಾಹಿತ್ಯ ಲೋಕದಲ್ಲೂ ಸ್ತರವಿನ್ಯಾಸವನ್ನು ಕ್ರಿಯೇಟು ಮಾಡುವ ಯತ್ನವಾಗಿ ಕಾಣುತ್ತದೆ. ಲೊಕದಲ್ಲಿರುವ ಸಾಮಾಜಿಕ ಸ್ತರವಿನ್ಯಾಸವು ವಿಮರ್ಶೆ ಮತ್ತು ವಿಮರ್ಶಕ ಈ ಎರಡು ನೆಲೆಯಲ್ಲಿ ಇಲ್ಲಿ ಪ್ರತಿಬಿಂಬಿತವಾಗಿದೆ. ಬಹುಪಾಲು ಸಂಪಾದಿತ ಕೃತಿಗಳು ಅಭಿನಂದನಾ ಸಮಾರಂಭ, ವಿಚಾರ ಸಂಕಿರಣ, ಉತ್ಸವ, ಭಾಷಣ, ಹುಟ್ಟುಹಬ್ಬ, ಸಾವಿನ ಶೋಕ, ಶತಮಾನೋತ್ಸವ ಸಂಭ್ರಮ-ಸಮಾರಂಭ ಹೀಗೆ ಹಲವಾರು ಸಾಂದರ್ಭಿಕ ಕಾರಣಗಳಿಗೆ ಸೃಷ್ಟಿಯಾಗಿರುವುದರಿಂದ ಸಹಜವಾಗಿಯೇ ಸಂಪಾದನಾ ಸ್ವರೂಪ ಮತ್ತು ವಿಮರ್ಶೆಯ ಸ್ವರೂಪದ ಮೇಲೆ ಸಾಂದರ್ಭಿಕತೆಯ ರಾಜಕಾರಣ ಅನಿವಾರ್ಯವಾಗಿ ಪ್ರಭಾವ ಬೀರಿದೆ. ಹೀಗಾಗಿ ಈ ಸಾಂದರ್ಭಿಕತೆಯ ರಾಜಕಾರಣದಿಂದ ನಮ್ಮ ಸಂಪಾದನಾ ವಿಮರ್ಶೆಗಳು ತಪ್ಪಿಸಿಕೊಳ್ಳಲು ಆಗಿಲ್ಲ.

ಆಪ್ತರ ಕೆಲವು ಸಂಪಾದಿತ ಕೃತಿಗಳಲ್ಲಿ ಮತ್ತು ಅಭಿನಂದನ ಗ್ರಂಥಗಳಲ್ಲಿ ಸಾಕಷ್ಟು ಸಂಬಂಧಿಕತೆಯ ರಾಜಕಾರಣವೂ ಕೆಲಸ ಮಾಡಿದೆ. ನಿರ್ಧಿಷ್ಟ ಮನೋಧರ್ಮ, ಬಳಗದವರನ್ನು ಮಾತ್ರವೇ ಇಲ್ಲಿ ಪರಿಗಣಿಸಲಾಗಿದೆ. ಮೈಸೂರು ಸೀಮೆಯ ಕುವೆಂಪು ಆಪ್ತ ವಲಯದವರಿಗೆ ಇಲ್ಲಿ ಹೆಚ್ಚು ಪ್ರಾಶಸ್ತ್ಯ ಸಿಕ್ಕಿದೆ. ಹಂಪಿ ವಿ.ವಿ., ಲೋಹಿಯಾ, ಸಿ.ವಿ.ಜಿ, ಮೈಸೂರು ವಿ.ವಿ ಪ್ರಸಾರಾಂಗ, ಸಪ್ನ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ಹೀಗೆ ಹಲವು ಪ್ರಕಾಶನಗಳು ಮತ್ತು ವಿಶ್ವವಿದ್ಯಾಲಯಗಳು ತಮ್ಮ ಕರ್ತವ್ಯ ಎಂಬಂತೆ ಕುವೆಂಪು ಕುರಿತ ಸಂಪಾದಿತ ವಿಮರ್ಶಾ ಸಂಪುಟಗಳನ್ನು ಹುಟ್ಟುಹಬ್ಬ, ಪ್ರಶಸ್ತಿ ಸಂದರ್ಭ, ಶತಮಾನೋತ್ಸವ

ಹೀಗೆ ನಿರ್ಧಿಷ್ಟವಾದ ಸಂದರ್ಭಗಳಲ್ಲಿ ಪ್ರಕಟಿಸಿವೆ. ಪ್ರಕಟಿಸುತ್ತಿವೆ. ಸಿ.ವಿ.ಜಿ. ಪ್ರಕಾಶನವಂತೂ ಕುವೆಂಪು ಮೇಲಿನ ಗೌರವದಿಂದ ಶತಮಾನೋತ್ಸವ ಸಂದರ್ಭದಲ್ಲಿ ಒಮ್ಮೆಗೆ ನೂರ ಇಪ್ಪತ್ತು ಪುಸ್ತಕಗಳನ್ನು ಪ್ರಕಟಿಸಿದೆ. ಇವುಗಳಲ್ಲಿ ಕೆಲವು ಕುವೆಂಪು ಕುರಿತ ವಿಮರ್ಶೆಗಳಾದರೆ, ಮಿಕ್ಕವು ಬೇರೆ ಬೇರೆ ಸಾಹಿತ್ಯ ಪ್ರಕಾರಗಳಿಗೆ ಸೇರಿದವುಗಳಾಗಿವೆ.

ಅಧ್ಯಯನ ರೂಪಿ ವಿಮರ್ಶೆಗಳನ್ನು ಹೊರತುಪಡಿಸಿದರೆ ಮಿಕ್ಕಂತೆ ಇರುವ ನಮ್ಮಲ್ಲಿನ ವಿಮರ್ಶಾ ಕೃತಿಗಳು ಆಗಾಗ ಬರೆದ ವಿಮರ್ಶಾ ಲೇಖನಗಳ ಸಂಕಲನಗಳೇ ಆಗಿವೆಯಾದರೂ ಆಯಾ ವಿಮರ್ಶಕರ ವಯಕ್ತಿಕ ವಿಮರ್ಶಾ ಲೇಖನ ಸಂಕಲನಗಳನ್ನು ಸಂಪಾದನೆಗಳು ಎಂದು ಇಲ್ಲಿ ಕರೆದಿಲ್ಲ. ಬೇರೆ ಬೇರೆಯವರ ಲೇಖನಗಳನ್ನು ಸಂಪಾದಿಸಿ ಕೃತಿರೂಪದಲ್ಲಿ ಪ್ರಕಟಿಸಿರುವವನ್ನು ಮಾತ್ರ ಇಲ್ಲಿ ಸಂಪಾದನಾ ರೂಪಿ ವಿಮರ್ಶೆಯಲ್ಲಿ ಪರಿಗಣಿಸಲಾಗಿದೆ. ಕೆಲವು ಸಂಪಾದಕರು ತಮ್ಮ ಸಂಪಾದನೆಗಾಗಿಯೇ ಕೆಲವು ಹೊಸ ಲೇಖನಗಳನ್ನು ಬರೆಸಿದ್ದಾರೆ. ಆದರೂ ನಮ್ಮಲ್ಲಿನ ಬಹುಪಾಲು ಸಂಪಾದನೆಗಳು ಅಲ್ಲಿ ಇಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಆಯ್ಕೆ ಮಾಡಿಕೊಂಡು ಪ್ರಕಟಿಸಿದವೆ ಆಗಿವೆ. ಲೇಖನಗಳ ಆಯ್ಕೆ ಮತ್ತು ಹೊಸದಾಗಿ ಲೇಖನ ಬರೆಸುವಾಗಿನ ಲೇಖಕರ ಆಯ್ಕೆಯಲ್ಲಿ ಸಂಪಾದಕರ ದೃಷ್ಟಿಕೋನಗಳು ಹೆಚ್ಚು ಕೆಲಸ ಮಾಡಿರುವುದು ಕಾಣುತ್ತದೆ. ಆಯ್ದ ಲೇಖನಗಳ ಸಂಪಾದನೆಯ ಒಂದು ಸಂಪಾದನೆಯನ್ನು ಇಲ್ಲಿ ಉಲ್ಲೇಖಿಸಲೇಬೇಕು. ಅದು ಮರಿಗುದ್ದಿಯವರ ಕಾದಂಬರಿಗಳ ಕುರಿತ ಲೇಖನಗಳ ಸಂಪಾದನೆ. ಗುಣಪಕ್ಷಪಾತ, ಖ್ಯಾತನಾಮರ ಹುಡುಕಾಟ ಇಲ್ಲೂ ಇದೆ. ಆದರೆ ನಮ್ಮ ಶೂನ್ಯ ಸಂಪಾದನಾ ಮಾದರಿಯ ಮುಂದುವರಿಕೆಯನ್ನು ಇಲ್ಲಿ ಕಾಣಬಹುದು. ವಿಮರ್ಶಕರಲ್ಲಿ–ವಿಮರ್ಶೆಯಲ್ಲಿ ಇರುವ ಸಂವಾದಗುಣಕ್ಕೆ ತಕ್ಕಂತೆ ಲೇಖನಗಳನ್ನು ಇಲ್ಲಿ ಸಂಗ್ರಹಿಸಿ ಜೋಡಿಸಲಾಗಿದೆ.

ಕನ್ನಡ ಸಾಹಿತ್ಯ ಕುವೆಂಪು ಸಂಸ್ಕೃತಿ ಚಿಂತನೆ (2507), ಕುವೆಂಪು ಸಾಹಿತ್ಯ ತೌಲನಿಕ ಅಧ್ಯಯನ (2642) ಕುವೆಂಪು ವಿಚಾರಧಾರೆಯ ಪ್ರಸ್ತುತ್ತತೆ (2625) ರಾಷ್ಟ್ರ ನಿರ್ವಚನ: ಕುವೆಂಪು ವಾಙ್ಮಯ (2745), ಶ್ರೀ ಕುವೆಂಪು (2760), ಕುವೆಂಪು ಸಾಹಿತ್ಯಲೋಕ 1,2,3,4, (2646 ರಿಂದ 2649). ಇನ್ನು ಮುಂತಾದುವು ನಿರ್ಧಿಷ್ಟ ಸಂದರ್ಭಗಳಲ್ಲಿ ನಿರ್ಧಿಷ್ಟ ಉದ್ದೇಶಗಳಿಗಾಗಿ ನಡೆದ ವಿಚಾರಸಂಕಿರಣಗಳಲ್ಲಿ ಮಾಡಿದ ಭಾಷಣಗಳು ಮತ್ತು ಮಂಡಿಸಿದ ಪ್ರಬಂಧಗಳ ಸಂಕಲನಗಳಾಗಿವೆ. ಇಲ್ಲಿನ ಕೆಲವು ಸಂಪಾದಿತ ಕೃತಿಗಳಲ್ಲಿ ವಿಚಾರಸಂಕಿರಣಗಳಲ್ಲಿ ಮಂಡಿಸಿದ ವಿಚಾರಗಳು ಹಾಗೇ ಗಾಳಿಗೆ ಹೋಗಬಾರದು. ಅವು ದಾಖಲಾಗಬೇಕು ಎಂಬ ಉದ್ದೇಶವಿದ್ದರೆ; ಕೆಲವು ವಿಚಾರಸಂಕಿರಣಗಳನ್ನು ಪುಸ್ತಕ ಪ್ರಕಟಣೆಯ ಪೂರ್ವಯೋಜನೆ ಇಟ್ಟುಕೊಂಡೇ ನಡೆಸಲಾಗಿದೆ. ಕೆಲವು ಸಂಪಾದಿತ ಕೃತಿಗಳಲ್ಲಿ ವಿಚಾರಸಂಕಿರಣಗಳಲ್ಲಿ ಮಂಡಿತವಾದ ವಿಚಾರಗಳ ಜೊತೆಗೆ ಕೆಲವು ಲೇಖನಗಳನ್ನು ಬರೆಸಿಯೂ ಸೇರಿಸಲಾಗಿದೆ. (ನೋಡಿ 2648 ಮತ್ತು 2649) ಅಲ್ಲಲ್ಲಿ ಚದುರಿದಂತೆ ಇರುವ ವಿಮರ್ಶಾ ಲೇಖನಗಳನ್ನು ಪ್ರಕಾರಗಳ ಅನುಸಾರವಾಗಿ ಅಧ್ಯಯನದ ಅನುಕೂಲಕ್ಕೆ ಒದಗಿಸಲು ಕೆಲವು ಸಂಪಾದನೆಗಳನ್ನು ಕೈಗೊಳ್ಳಲಾಗಿದೆ. ಚಿತ್ರಾಂಗದಾಸಮೀಕ್ಷೆ (2683) ಕುವೆಂಪು ನಾಟಕ ಸಮೀಕ್ಷೆ (2606) ಚಂದ್ರಹಾಸ ಸಮೀಕ್ಷೆ (2680), ಕುವೆಂಪು ಕಾವ್ಯ ಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆ (2583), ಕುವೆಂಪು ಕಾದಂಬರಿಗಳು (2575), ಕುವೆಂಪು ರಾಮಾಯಣ ಬರಹಗಾರರ ಪ್ರತಿಕ್ರಿಯೆ (2619) ಇವು ಕೆಲವು ಇಂತಹ ಪ್ರಕಾರಾಧಾರಿತ ಸಂಪಾದನೆಗಳು. ಕುವೆಂಪು ಶಿಶು ಸಾಹಿತ್ಯ (2629) ಕುವೆಂಪು ಸಾಹಿತ್ಯ ತೌಲನಿಕ ಅಧ್ಯಯನ (2642) ಇವು ಕುವೆಂಪು ಸಾಹಿತ್ಯದ ಕೆಲವು ದೃಷ್ಟಿ–ಧೋರಣೆಗಳನ್ನು ಆಧರಿಸಿದ ವಿಮರ್ಶೆಯ ಸಂಪಾದನೆಗಳಾಗಿವೆ.

ಇಲ್ಲೆಲ್ಲ ಕುವೆಂಪು ಸಾಹಿತ್ಯವನ್ನು ಭಿನ್ನ ದೃಷ್ಟಿಗಳಿಂದ ವಿಮರ್ಶಿಸುವ ಪ್ರಯತ್ನಗಳಿವೆ. ಕುವೆಂಪುವನ್ನು ಸಮಕಾಲೀನ ಗೊಳಿಸುವ; ಸಾಹಿತ್ಯವನ್ನು ಪರಿಚಯಿಸುವ ಪ್ರಯತ್ನಗಳಿವೆ. ವಿಚಾರಸಂಕಿರಣಗಳ ಸಂಪಾದಿತ ಕೃತಿಗಳಲ್ಲಿ ರಾಷ್ಟ್ರ ಕವಿ (ಸಂ.ಹ.ಕ.ರಾಜೇಗೌಡ: 2731) ಕೃತಿ ಇಲ್ಲಿ ಉಲ್ಲೇಖಾರ್ಹ. ಕುವೆಂಪು ವ್ಯಕ್ತಿತ್ವದ ಬಗೆಗಿನ ನಾಡಿನ ಹಲವರ ತಮ್ಮ ಅಭಿಪ್ರಾಯ ಮತ್ತು ಒಡನಾಟ ಕಥನಗಳನ್ನು ಮಾತ್ರ ಇಲ್ಲಿ ಸಂಪಾದಿಸಲಾಗಿದೆ. ಸಾಹಿತ್ಯದ ವಿಮರ್ಶೆ–ಚರ್ಚೆ–ಆಸ್ವಾದನೆಗಾಗಿ ವಿಚಾರಸಂಕಿರಣಗಳನ್ನು ನಡೆಸುವುದು ಸರ್ವೇಸಾಮಾನ್ಯ. ಆದರೆ ಇಲ್ಲಿ ವ್ಯಕ್ತಿತ್ವ ವ್ಯಾಖ್ಯಾನಕ್ಕಾಗಿಯೇ ವಿಚಾರ ಸಂಕಿರಣವನ್ನು ನಡೆಸಲಾಗಿದೆ. ಕುಚೋದ್ಯವೆಂದರೆ ಇದನ್ನು ಮೊದಲಿಗೆ 1980ರಲ್ಲಿ ಪ್ರಕಟಿಸಿದ ಜಯಶ್ರೀ ಟ್ರಸ್ಟಿನ ಹೊ.ಶ್ರೀನಿವಾಸಯ್ಯ ಅವರೇ ಇದನ್ನು ತಮ್ಮ ಹೆಸರಿನಲ್ಲಿ 1999ರಲ್ಲಿ ಮುದ್ರಿಸಿಕೊಂಡಿದ್ದಾರೆ.

ರಕ್ಷಾಪುಟವನ್ನು ಬದಲಿಸಿ, ಒಳಗಿನ ಲೇಖನಗಳ ಕ್ರಮ ಬದಲಿಸಿ ತಮ್ಮನ್ನು ಸಂಪಾದಕ ಎಂದು ಕೂಡ ನಮೂದಿಸಿಕೊಳ್ಳದೆ; ಲೇಖಕ ಎಂದೇ ನಮೂದಿಸಿಕೊಂಡು ಪ್ರಕಟಿಸಿದ್ದಾರೆ!

ಇದೇ ರೀತಿಯ ಇನ್ನೊಂದು 'ಸಾಹಸ' ಸಂಪಾದನೆಯಲ್ಲಿ ನಡೆದಿರುವುದೆಂದರೆ; ಕಾಡಿನ ಕೊಳಲಿಗೆ ನಾಡಿನ ಸ್ವರ (2524) ಎಂಬ ಬಿಡಿ ಕವನಗಳ ಸಂಗ್ರಹ. ಇದು ಮೊದಲಿಗೆ 1971ರಲ್ಲಿ ಮಳಲಿ ವಸಂತಕುಮಾರ್ ಅವರಿಂದ ಸಂಪಾದಿತವಾಗಿ ಪ್ರಕಟವಾಯಿತು. ಆನಂತರ ಬೆರಳೆಣಿಕೆಯಷ್ಟು ಹೊಸ ಕವಿತೆಗಳನ್ನು ಸೇರಿಸಿ 2006ರಲ್ಲಿ ಸರಿಸುಮಾರು ಮಳಲಿಯವರ ಕವನಸಂಗ್ರಹವನ್ನೆ ನಿಂಗಪ್ಪ ಮುದೇನೂರು ಮತ್ತು ಶಿವಾನಂದ ಕೆಳಗಿನಮನಿ (2524)  ಇವರು ತಾವೇ ಸಂಪಾದಕರೆಂದು ತಮ್ಮ ಹೆಸರಲ್ಲಿ ಮುದ್ರಿಸಿಕೊಂಡರು. ಅದರ ಮುಖ ಪುಟ, ಕವನಗಳ ಅನುಕ್ರಮ, ಶೀರ್ಷಿಕೆಗಳನ್ನು ಬದಲಾಯಿಸಿದರು. ಆದರೆ 2007ರಲ್ಲಿ ಮತ್ತೆ ಕೆಲವು ಹೊಸ ಕವಿತೆಗಳನ್ನು ಸಂಗ್ರಹಿಸಿ (ದೇಜಗೌ ಬರೆದಿರುವ 12 ಕವನಗಳೂ ಸೇರಿದಂತೆ) ಮಳಲಿಯವರು ಯುಗದ ಕವಿಗೆ ಜಗದ ಕವಿಗೆ ಎಂಬ ಹೊಸ ಹೆಸರಿನಲ್ಲಿ ಪ್ರಕಟಿಸಿದರು. (2717) ಚೋದ್ಯವೆಂದರೆ ಈ ಸಂಪಾದನೆಯ ಪ್ರಸ್ತಾಪನೆಯಲ್ಲಿ ಮಳಲಿಯವರು (2717–ಪುಟ; 28) ತಮ್ಮನ್ನು ಕಾಡಿನ ಕೊಳಲಿಗೆ ನಾಡಿನ ಸ್ವರ ಸಂಕಲನದ ಪ್ರಧಾನ ಸಂಪಾದಕರೆಂದೂ: ಇನ್ನಿಬ್ಬರನ್ನು ಸಂಪಾದಕರೆಂದೂ ಹೇಳಿಕೊಂಡಿದ್ದಾರೆ. ಆದರೆ ನಿಂಗಪ್ಪ ಮುದೇನೂರರ ಈ 'ಕಳ್ಳ ಸಂಪಾದನೆ'ಯಲ್ಲಿ ಮಳಲಿಯವರ ಹೆಸರಂತೂ ಇಲ್ಲ. ಕುವೆಂಪು ದರ್ಶನಂ ಮತ್ತು ಕಾಡಿನ ಕೊಳಲಿಗೆ ನಾಡಿನ ಸ್ವರ ಎರಡೂ ಮುದ್ರಣಗಳ ಪ್ರಕಾಶಕರು ಒಬ್ಬರೇ ಆಗಿರುವುದು. (ಸಿ.ವಿ.ಜಿ ಪಬ್ಲಿಕೇಶನ್ಸ್!) ಇಲ್ಲಿನ ವಿಶೇಷ.

ಕುವೆಂಪು ಸಾಹಿತ್ಯದ ಪರಿಚಾರಿಕೆಯಲ್ಲಿ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು ಇದನ್ನು ವಿಶೇಷವಾಗಿ ಸ್ಮರಿಸಬೇಕು. ಇದರ ರೂವಾರಿ ದೇಜಗೌ ಅವರು ಅಭಿನಂದನಾ ಗ್ರಂಥಗಳೂ ಸೇರಿದಂತೆ ಸಾಕಷ್ಟು ಕೃತಿಗಳನ್ನು ಸಂಪಾದಿಸಿದ್ದಾರೆ. ವಿಶೇಷವೆಂದರೆ ಟ್ರಸ್ಟಿನಿಂದ ಪ್ರಕಟವಾಗುವ ಬಹುಪಾಲು ಸಂಪಾದಿತ ಕೃತಿಗಳಿಗೆ ತಮ್ಮ ಹೆಸರನ್ನು ಪ್ರಧಾನ ಸಂಪಾದಕರು ಎಂದು ಮುದ್ರಿಸಿಕೊಂಡಿದ್ದಾರೆ. ಪ್ರಕಟಣೆ ಮಾತ್ರಕ್ಕೆ ತಮ್ಮನ್ನು ಪ್ರಧಾನ ಸಂಪಾದಕರೆಂದು ಗೌರವ ಸಂಪಾದಕರೆಂದು ಕರೆದುಕೊಳ್ಳುವ (ನೋಡಿ; 2649) ಚಾಳಿಯೂ ಈ ಸಂಪಾದನಾ ಲೋಕದಲ್ಲಿ ಇದೆ.

ಕುವೆಂಪು ಕೃತಿ ವಿಮರ್ಶೆ, (2589) ಸಹ್ಯಾದ್ರಿಯ ಸೂರ್ಯ, (2800) ಅನಿಕೇತನ, (2483) ಇಂಥ ಕೆಲವು ಸಂಪಾದಿತ ಕೃತಿಗಳು ಕುವೆಂಪು ಶತಮಾನೋತ್ಸವದ ಅಂಗವಾಗಿ ಪ್ರಕಟವಾಗಿರುವ ಸಂಪಾದನೆಗಳಾಗಿವೆ. ಇಲ್ಲಿ ಈಗಾಗಲೇ ಪ್ರಕಟವಾಗಿರುವ ವಿಮರ್ಶಾ ಲೇಖನಗಳನ್ನು ಸಂಗ್ರಹಿಸಿ–ಆಯ್ದು ಜೋಡಿಸುವ ಕೆಲಸವೇ ಇಲ್ಲಿ ಹೆಚ್ಚಾಗಿ ನಡೆದಿದೆ. ಕುವೆಂಪು  ಕುವೆಂಪು ದರ್ಶನ (2596), ಕುವೆಂಪು ಒಂದು ಪುನರನ್ವೇಷಣೆ (2556), ಕುವೆಂಪು ಸಾಹಿತ್ಯ ಸಮೀಕ್ಷೆ (2656) ಇವು ಹೊಸದಾಗಿ ಲೇಖನಗಳನ್ನು ಬರೆಸಿ ಸಂಪಾದಿಸಿರುವ ಕೃತಿಗಳಾಗಿವೆ.

ಕುವೆಂಪು ಕೃತಿ ವಿಮರ್ಶೆ (2589) ಎಂಬ ತಮ್ಮ ಸಂಪಾದಿತ ಕೃತಿಗೆ ಅರವಿಂದ ಮಾಲಗತ್ತಿಯವರು ದೀರ್ಘವಾದ ಪ್ರಸ್ತಾವನೆ ಬರೆದು ಕುವೆಂಪು ಅವರ ವಿಮರ್ಶೆಯ ಸಮೀಕ್ಷಾತ್ಮಕ ವಿಶ್ಲೇಷಣೆ ಮಾಡಿದ್ದಾರೆ. ಅದರ ಜೊತೆಗೆ ಆಧುನಿಕ ಕನ್ನಡ ವಿಮರ್ಶೆಯ ವಿಶ್ಲೇಷಣಾತ್ಮಕ ಸಮೀಕ್ಷೆಯನ್ನೂ ಮಾಡಿದ್ದಾರೆ. (ಪ್ರಸ್ತಾವನೆ, ಪುಟ: 12ರಿಂದ 20). ಇಲ್ಲಿ ಕುವೆಂಪು ವಿಮರ್ಶಾ ಲೋಕವನ್ನು ವಸ್ತುನಿಷ್ಠವಾಗಿ ನೋಡುವ ಯತ್ನ ಮಾಡಲಾಗಿದೆ. ಕುವೆಂಪು ಕುರಿತ ವಿಮರ್ಶೆಯ ಬಹುಪಾಲು ಸಂಪಾದನೆಗಳಲ್ಲಿ ಕವಿತೆಗಳನ್ನು ಕಾವ್ಯ ನಮನ–ನುಡಿನಮನ ಇತ್ಯಾದಿ ಹೆಸರುಗಳಲ್ಲಿ ಸೇರಿಸಿಕೊಳ್ಳಲಾಗಿದೆ. ವಿಮರ್ಶೆಯ ಲೇಖನಗಳ ಸಂಕಲನಗಳಲ್ಲಿ ಕುವೆಂಪು ಕುರಿತ ಕವನಗಳನ್ನು ಯಾಕೆ ಸೇರಿಸಿಕೊಂಡಿದ್ದಾರೆ? ಅಪ್ರಜ್ಞೆಯಲ್ಲಿ–ಆಚರಣೆಯಲ್ಲಿ ನಾವು ಕವನಗಳನ್ನು ಕೂಡ ವಿಮರ್ಶೆ ಎಂದೇ ತಿಳಿದಿದ್ದೇವೆ. ಆದರೆ ವಿಮರ್ಶೆ ಎಂದರೆ ಏನು ಎಂಬ ನಮ್ಮ ವ್ಯಾಖ್ಯಾನದಲ್ಲಿ ಲೇಖನರೂಪ–ಗದ್ಯ ಕೃತಿರೂಪಗಳೇ ಇವೆ. ಕುವೆಂಪು ಕುರಿತು ಬಂದಿರುವ ಕವನ–ಕಾವ್ಯ–ಕಥೆ–ನಾಟಕಗಳೆಲ್ಲವೂ ವಿಮರ್ಶೆಗಳೇ. (ಹೆಚ್ಚಿನ ವಿವರಗಳಿಗೆ ನೋಡಿ; ಸಾಹಿತ್ಯರೂಪಿ ವಿಮರ್ಶೆ)

ಇಲ್ಲಿ ಪತ್ರಿಕಾ ಮಾಧ್ಯಮದಲ್ಲಿ ಕುವೆಂಪು (2694) ಕೃತಿಯು ಒಂದು ವಿಶೇಷವಾದ ಸಂಪಾದನೆಯಾಗಿದೆ. ಇದರಲ್ಲಿ ಎರಡು ಭಾಗಗಳಿದ್ದು ಮೊದಲ ಭಾಗದಲ್ಲಿ ಕುವೆಂಪು ಅಲ್ಲಲ್ಲಿ ಮಾಡಿದ ಭಾಷಣಗಳ ವರದಿಗಳು ಸಂಕಲಿತವಾಗಿವೆ. ಎರಡನೆ ಭಾಗದಲ್ಲಿ ಕುವೆಂಪು ಬಗ್ಗೆ ಬೇರೆ ಬೇರೆಯವರು

ಮಾತನಾಡಿದ ವರದಿಗಳು-ಬರೆದ ಪ್ರತಿಕ್ರಿಯೆಗಳು ಸಂಕಲಿತವಾಗಿವೆ. 1952ರಿಂದ 1965ರವರೆಗಿನ ಪತ್ರಿಕಾ ವರದಿಗಳನ್ನು ಇಲ್ಲಿ ಆಯ್ದು ಸಂಪಾದಿಸಲಾಗಿದೆ. ಕುವೆಂಪು ಭಾಗವಹಿಸಿದ ಬೇರೆ ಬೇರೆ ಸಭೆ-ಸಮಾರಂಭಗಳು; ಕನ್ನಡನಾಡಿನ ಬೇರೆ ಬೇರೆ ಜನ ಕುವೆಂಪುಗೆ ಪ್ರತಿಕ್ರಿಯಿಸಿರುವ ಮಾದರಿಗಳು ಇಲ್ಲಿವೆ. ಸಾಮಾಜಿಕ ಚರಿತ್ರೆ-ಕವಿ-ಸಾಹಿತ್ಯಗಳ ಪರಸ್ಪರ ಒಡನಾಟಗಳು ಇಲ್ಲಿ ಬಿಂಬಿತವಾಗಿವೆ.

ಸಂಪಾದನಾರೂಪಿ ವಿಮರ್ಶೆಗೂ ಇತರ ವಿಮರ್ಶೆಗೂ ಅಂಥ ಭಿನ್ನತೆ ಏನೂ ಇಲ್ಲ. ಇಲ್ಲಿನ ಕೆಲ ಲೇಖನಗಳು ಸಾಂದರ್ಭಿಕತೆಯ ರಾಜಕಾರಣದಿಂದ, ಸ್ಮರಣೆ, ನಮನ, ಗೌರವ, ಅಭಿನಂದನಾ ರೂಪವನ್ನು ತಾಳಿವೆ. ಕೆಲವು ಲೇಖನಗಳು ಸಂಬಂಧಿಕತೆಯ ರಾಜಕಾರಣದಿಂದ ಗುಣಗ್ರಹಣ-ವಿವರಣಾ ರೂಪ ತಾಳಿವೆ. ಕೆಲವೊಮ್ಮೆ ಸಂಬಂಧಿಕತೆಯ ಮತ್ತು ಸಾಂದರ್ಭಿಕತೆಯ ರಾಜಕಾರಣದಿಂದಾಗಿ ಅನೇಕ ಲೇಖನಗಳಿಗೆ ಪೂರ್ವವಿಮರ್ಶೆಯನ್ನು ಖಂಡಿಸುವ-ಕುವೆಂಪು ಸಾಹಿತ್ಯವನ್ನು ಸಮರ್ಥಿಸುವ ಧಾಟಿಯೂ ಪ್ರಾಪ್ತಿಯಾಗಿದೆ. ಹೀಗಾಗಿ ವಿವಿಮರ್ಶೆ ಇವುಗಳ ಒಂದು ಸಾಮಾನ್ಯವಾದ ಪ್ರವೃತ್ತಿಯಾಗಿದೆ. ಸಂಪಾದನಾ ಕೃತಿಗಳ ಮುನ್ನುಡಿ, ಸಂಪಾದಕೀಯಗಳನ್ನು ನೋಡಿದರೆ ಕುವೆಂಪು ಅವರ ಸಾಂಸ್ಕೃತಿಕ ಅನುಸಂಧಾನಗಳ ಸ್ವರೂಪ, ಅದರ ಹಿಂದಿನ ಆರ್ಥಿಕ ಕ್ರೋಢೀಕರಣ-ಉದ್ಯಮ ಪ್ರವೃತ್ತಿ-ಪಡಿಪಾಟಲುಗಳು; ಸಂಘಟನೆ ಮತ್ತು ಸಾಹಿತ್ಯಕ ಅನುಸಂಧಾನಗಳ ಸಂಬಂಧಗಳು, ಕುವೆಂಪು ಬಗೆಗಿನ ಅಭಿಮಾನ ಕೀರ್ತಿಶನಿಯ ಕಾಟಗಳೆಲ್ಲ ಕಂಡುಬರುತ್ತವೆ. ಹ.ಕ.ರಾಜೇಗೌಡ, ದೇ.ಜವರೇಗೌಡ, ಮಳಲಿ, ಸಿ.ಪಿ.ಕೆ, ಇವೆರೆಲ್ಲ ಕನ್ನಡ ವಿಮರ್ಶೆಯಲ್ಲಿ ತುಂಬಾ ಅನಿವಾರ್ಯವಾಗಿ ಪರಿಗಣಿಸಲೇಬೇಕಾದ ವಿಮರ್ಶಕರೇನೂ ಅಲ್ಲ. ಆದರೂ ಕುವೆಂಪು ಸಂಪಾದನಾ ವಿಮರ್ಶೆಯಲ್ಲಿ ಮಾತ್ರ ಇವರ ಪಾತ್ರ ಹಿರಿದು. ಇವರೆಲ್ಲ ಗೌಡರುಗಳೇ ಆಗಿರುವುದೂ ಕೂಡ ಇಲ್ಲಿ ಗಮನಾರ್ಹ.

**5.2.5. ಸಾಹಿತ್ಯರೂಪಿ ವಿಮರ್ಶೆ**

ಕುವೆಂಪು ಜೀವನ, ಸಾಹಿತ್ಯವನ್ನು ಆಧರಿಸಿ ಇದುವರೆಗೆ ಎಂಟು ಕವಿತಾ ಸಂಗ್ರಹಗಳು, ಎಂಟು ನಾಟಕಗಳು, 30ಕ್ಕೂ ಹೆಚ್ಚು ಜೀವನ ಚಿತ್ರಗಳು ರಚಿತವಾಗಿವೆ. ಬಿಡಿ ಕವಿತೆ-ಕಾವ್ಯ-ನಾಟಕ, ಜೀವನ ಚರಿತ್ರೆ-ಜೀವನ ಚಿತ್ರಗಳ ರೂಪದಲ್ಲಿ ಪ್ರಕಟವಾಗಿರುವ ಈ ಎಲ್ಲ ಸಾಹಿತ್ಯವನ್ನು ಇಲ್ಲಿ ಸಾಹಿತ್ಯರೂಪಿ ವಿಮರ್ಶೆ ಎಂದು ಕರೆಯಲಾಗಿದೆ. ಒಡನಾಟ ಕಥನಗಳು, ಸರಳರೂಪಿ ಅನುಸಂಧಾನಗಳು, ರಂಗ ರೂಪ-ಗದ್ಯಾನುವಾದಗಳು ಕೂಡ ಸಾಹಿತ್ಯರೂಪಿ ವಿಮರ್ಶೆಗಳೇ ಆದರೂ ಅವನ್ನು ಪ್ರತ್ಯೇಕವಾಗಿ ಪರಿಶೀಲಿಸಲಾಗುವುದು. ಇವನ್ನೆಲ್ಲ ವಿಮರ್ಶೆ ಎನ್ನಬಹುದೋ? ಈ ಬಗ್ಗೆ ಯಾವ ಎರಡನೆ ಯೋಚನೆಯೆ ಇಲ್ಲದೆ ಇವನ್ನೆಲ್ಲ ವಿಮರ್ಶೆಯೆಂದೇ ಇಲ್ಲಿ ಕರೆಯಲಾಗಿದೆ. ಸಾಹಿತ್ಯರೂಪದಲ್ಲಿ (ಕಾವ್ಯ ರೂಪದಲ್ಲಿ) ವಿಮರ್ಶೆಯು ಪ್ರಾಚೀನರಲ್ಲಿ ಈಗಾಗಲೇ ಪ್ರಕಟವಾಗಿರುವ ಉದಾಹರಣೆ ನಮ್ಮಲ್ಲಿದೆ. ಇದು ಆಧುನಿಕರಲ್ಲೂ ಮುಂದುವರಿದಿದೆ ಅಷ್ಟೆ.

ಬಸವಣ್ಣನ ಮೇಲೆ ಹಲವಾರು ಪುರಾಣಗಳು ರಚಿತವಾಗಿವೆ. ಗಾಂಧಿ, ಅಂಬೇಡ್ಕರ್ ಕುರಿತು ಲಾವಣಿ-ನಾಟಕಗಳು ಸಾಕಷ್ಟು ರಚಿತವಾಗಿವೆ. ಬಹಳ ಹಿಂದಿನಿಂದಲೂ ಸಾಧಕರನ್ನು ನಮ್ಮ ಸಮಾಜವು ದೈವಾಂಶ ಸಂಭೂತರೆಂದೇ ಭಾವಿಸಿ ಅವರ ಬಗ್ಗೆ ಸಾಹಿತ್ಯ-ಪುರಾಣ ರಚಿಸುತ್ತ ಬಂದಿದೆ. ಈ ಸಂಪ್ರದಾಯದ ಮುಂದುವರಿಕೆ ಎಂಬಂತೆ ಕುವೆಂಪು ಬದುಕು ಬರಹ ಆಧರಿಸಿಯೂ ಹಲವಾರು ನಾಟಕ-ಜೀವನ ಚರಿತ್ರೆ-ಕವಿತೆಗಳು ರಚನೆಯಾಗಿವೆ. ವಿಮರ್ಶೆಯ ಮಹಾ ಸಂಪುಟಗಳೂ ರಚನೆಯಾಗಿವೆ. ಸಾಹಿತಿಯ ಸಾಹಿತ್ಯ ಮತ್ತು ಬದುಕುಗಳೆರಡನ್ನು ಆನಂತರದ ಸಮಾಜ ಅನುಸಂಧಾನ ಮಾಡುವ ಹಲವು ಬಗೆಗಳಲ್ಲಿ ಈ ನಾಟಕ, ಕಾವ್ಯ-ಜೀವನ ಚಿತ್ರಗಳೂ ಕೆಲವು. ಇವೆಲ್ಲ ವಿಮರ್ಶೆಯ ರೂಪಗಳೇ. ಹಾಗಾಗಿ ವಿಮರ್ಶೆ ಎಂದರೆ ಬರಿ ಗುಣದೋಷ ಚರ್ಚೆ-ಸಾಹಿತ್ಯದ ಕುರಿತ ಗದ್ಯರೂಪಿ ವ್ಯಾಖ್ಯಾನ ಎಂದು ಮಾತ್ರ ತಿಳಿಯಬೇಕಿಲ್ಲ. ಅದು ನಿಜವಾದ ಅರ್ಥದಲ್ಲಿ-ಆಚರಣೆಯಲ್ಲಿ ಸಾಂಸ್ಕೃತಿಕ ಅನುಸಂಧಾನವಾಗಿದೆ. ಗದ್ಯ, ಪದ್ಯ, ನಾಟಕ, ಜೀವನ ಚರಿತ್ರೆ, ಸಿನಿಮಾ, ಟೆಲಿಧಾರವಾಹಿ, ಕಿರುಚಿತ್ರ, ರೂಪಕ, ರೇಡಿಯೋ ರೂಪಕ, ವಿಚಾರ ಗೋಷ್ಠಿ, ಸಂವಾದ, ಶೂನ್ಯ ಸಂಪಾದನೆ, ಒಡನಾಟ ಕಥನ, ಸರಳ ರೂಪ, ನೃತ್ಯ ರೂಪಕ, ಸಂಗ್ರಹ, ಸೂಕ್ತಿ, ಹರಿಕತೆ, ಭಜನೆ, ಟೀಕು, ಅನುವಾದ ಹೀಗೆ ಹಲವು ಅವತಾರಗಳಲ್ಲಿ ವಿಮರ್ಶೆಯು ಸಂಭವಿಸಬಹುದು. ಹೀಗಾಗಿಯೇ ವಿಮರ್ಶೆಯು ಒಂದು ಸಾಹಿತ್ಯ ಪ್ರಕಾರ ಮಾತ್ರ ಅಲ್ಲ. ಇದೊಂದು ಶಿಸ್ತು. ಇದೊಂದು ಸಂಸ್ಕೃತಿ ಸಂಕಥನ.

ಕೆಂಪೊನ್ನಾತ್ಮಜ (2741) ಮತ್ತು ರಾಜಾನಂದ್(2513) ಕುವೆಂಪು ಬಗ್ಗೆ ಎರಡು ಕವಿತಾ ಸಂಕಲನಗಳನ್ನೇ ಬರೆದಿದ್ದಾರೆ. ಅಶೋಕ ನರೋಡೆಯವರು (2516) ಕವಿ ಮತ್ತು ಕವಿಶೈಲ ಎರಡನ್ನೂ ಕುರಿತು ಒಂದು ಕವಿತಾ ಸಂಕಲನವನ್ನೇ ಪ್ರಕಟಿಸಿದ್ದಾರೆ. ಭಿನ್ನ ಕವಿಗಳು ಕುವೆಂಪು ಬಗ್ಗೆ 400ಕ್ಕೂ ಹೆಚ್ಚು ಕವನಗಳನ್ನು ಬರೆದಿದ್ದಾರೆ. ಎ. ಕರಿಯಪ್ಪನವರು (2679) ಕುವೆಂಪು ಕುರಿತು (ವಿಶ್ವಮಾನವ ಧರ್ಮ ಪ್ರತಿಪಾದನೆಗಾಗಿ) ಒಂದು ನಾಟಕವನ್ನೆ ಬರೆದಿದ್ದಾರೆ. ಬಿಡಿ ಕವಿತೆಗಳ ಹಲವು ಸಂಗ್ರಹಗಳೂ ಪ್ರಕಟವಾಗಿವೆ. ಎಚ್.ಆರ್. ಸುಲೋಚನ (2689), ಎಚ್. ಬಿ. ರಮೇಶ್ (2558), ಎಚ್. ನಂಜೇಗೌಡ (2727), ಜಯಂತಿ ಮನೋಹರ್ (2728), ಸಾ.ಶಿ. ಮರುಳಯ್ಯ (2746) ಇವರು ರಾಮಾಯಣದರ್ಶನಂ ಕಾವ್ಯಭಾಗಗಳನ್ನು ಆಧರಿಸಿ ಒಂದೊಂದು ನಾಟಕಗಳನ್ನು ಬರೆದಿದ್ದಾರೆ. ಜೆ.ಗೋ. ರಮೇಶ್ ನೆನಪಿನದೋಣಿ (2690) ಎಂಬ ಮಕ್ಕಳ ನಾಟಕ ಬರೆದಿದ್ದಾರೆ. ಸತ್ಯನಾರಾಯಣರಾವ್ ಅಣತಿಯವರು (2804) ಧನ್ವಂತರಿ ಚಿಕಿತ್ಸೆ ಆಧರಿಸಿದ ನಾಟಕವೊಂದನ್ನು ಬರೆದಿದ್ದಾರೆ. ದೇಜಗೌ, ಶಿವಾರೆಡ್ಡಿ, ಮಂಜನಾಥ ಮೇಗರವಳ್ಳಿ, ಮಲ್ಲೇಶ್ ಬಾರ್ಕರ್, ಡಿಟಿ ರಂಗಸ್ವಾಮಿ, ರಮಾನಂದ ಹೀಗೆ ಹಲವರಿಂದ 30ಕ್ಕೂ ಹೆಚ್ಚು ಜೀವನಚಿತ್ರ–ಜೀವನ ಚರಿತ್ರೆ–ಕಿರು ಪರಿಚಯಗಳು ರಚನೆಯಾಗಿವೆ. ಇವುಗಳಲ್ಲಿ ಕೆಲವು ಬಜಾರ್ ಎಡಿಶನ್ನುಗಳೂ, ಕೆಲವು ಮಕ್ಕಳಿಗಾಗಿ ಬರೆದ ಕಿರುಹೊತ್ತಿಗೆಗಳೂ ಇವೆ. ವಿಶೇಷವೆಂದರೆ ಕುವೆಂಪು ಬಜಾರ್ ಎಡಿಶನ್ನುಗಳು ಅಡಿಗೆ ಪುಸ್ತಕಗಳ ಜೊತೆ, ಹನುಮಸ್ತೋತ್ರ–ಮಹಾಲಕ್ಷ್ಮಿವ್ರತ–ನಿಮ್ಮ ಮಗುವಿಗೊಂದು ಹೆಸರು ಇಂತಹ ಬಜಾರ್ ಪುಸ್ತಕಗಳ ಜೊತೆ ಮಾರಾಟವಾಗುತ್ತವೆ. ಪುರಂದರದಾಸ, ಕನಕದಾಸ, ಸರ್ವಜ್ಞ, ಶಿಶುನಾಳ ಷರೀಫ, ಬಸವಣ್ಣ, ಗಾಂಧಿ, ಅಂಬೇಡ್ಕರ್, ಏಸುಕ್ರಿಸ್ತ, ಬುದ್ಧ ಇಂಥವರ ಬಜಾರ್ ಎಡಿಶನ್ನುಗಳ ಸಾಲಿನಲ್ಲಿ ಕುವೆಂಪು ಬಜಾರ್ ಎಡಿಶನ್ನುಗಳೂ ಇವೆ. ಇದು ಕುವೆಂಪುವನ್ನು ನಮ್ಮ ಸಮಾಜವು ತೆಗೆದುಕೊಳ್ಳುತ್ತಿರುವ ವರಸೆಯ ಒಂದು ಜನಪ್ರಿಯ ಮುಖವಾಗಿದೆ.

ಕುವೆಂಪು ವ್ಯಕ್ತಿತ್ವದ ಚಿತ್ರಣ, ಕುವೆಂಪು ವ್ಯಕ್ತಿತ್ವದ ನಿರ್ವಚನ, ಕುವೆಂಪು ಜೀವನದ ಕೆಲವು ಮುಖ್ಯ ಘಟನೆಗಳಿಗೆ ನೀಡಿದ ಪ್ರತಿಕ್ರಿಯೆ, ಕುವೆಂಪುವನ್ನು ಗುರುವಾಗಿ ಕಲ್ಪಿಸಿಕೊಂಡ ಬರವಣಿಗೆ, ಕುವೆಂಪು ಕೃತಿಗಳನ್ನು ಓದಿದಾಗ ಉಂಟಾದ ಪ್ರತಿಕ್ರಿಯೆಗಳ ದಾಖಲೆ, ಕವಿ–ಕೃತಿ–ಸಮಾಜಗಳ ಸಂಬಂಧಗಳ ವ್ಯಾಖ್ಯಾನ, ಲೇಖಕನು ಸಮಾಜದ ಮೇಲೆ ಮಾಡಿರುವ ಪರಿಣಾಮದ ವ್ಯಾಖ್ಯಾನ, ಲೇಖಕ ಮತ್ತು ತಮ್ಮೊಡನಾಟದ ನೆನಪುಗಳ ಚಿತ್ರಣ, ಲೇಖಕನದರ್ಶನ–ವೈಚಾರಿಕತೆ–ನಿಸರ್ಗಪ್ರಜ್ಞೆ–ಅಭಿವ್ಯಕ್ತಿ ಕ್ರಮ–ದೃಷ್ಟಿ, ಧೋರಣೆಗಳ ಕುರಿತ ಪ್ರತಿಕ್ರಿಯೆ ಹೀಗೆ ಹತ್ತು ಹಲವು ನೆಲೆಗಳಲ್ಲಿ ಬಿಡಿಕವಿತೆಗಳ ಮೂಲಕ ವಿಮರ್ಶೆಯು ಸಂಭವಿಸಿದೆ.

ಈ ಜಾತಿಮರಗಳ ಮಧ್ಯೆ ನಮ್ಮ ನಿಮ್ಮಂತೆಯೇ ಹುಟ್ಟಿದೀ ಮರ (2717–ಪುಟ: 43)
ಮಲೆನಾಡಿನ ಹುಲ್ಲೆಸಳ ಮೇಲೆ ಮಿನುಗಿದ ಆ ಹನಿ ಮಿಸುನಿ
ಜಗತ್ತಿನ ಮಹಾತಿಮಿರಕ್ಕೆ ಬೆಂಕಿ ಕೋಲಾಗಿ ಬೆಳಕ ಹಾಲಾಗಿ ನಿಂತಾಗ
ಕತ್ತಲಲ್ಲಿ ಸಂತರಂತೆ ನಿಂತವರು ಬೆಚ್ಚಿದರು (2716–ಪುಟ: 159)

ಹೀಗೆ ವಿಮರ್ಶೆಯು ಇಲ್ಲಿ ಕಾವ್ಯರೂಪದಲ್ಲಿ ಪ್ರಕಟವಾಗಿರುವುದರಿಂದ ಸಹಜವಾಗಿಯೆ ತಾನು ಪ್ರತಿಮೆ–ರೂಪಕ–ಉಪಮೆ–ದೃಷ್ಟಾಂತ ಪ್ರಾಸ–ನಾದಾದಿಗಳ ಮೂಲಕವೇ ವ್ಯಕ್ತವಾಗಿದೆ. ಕುವೆಂಪು ಪರಾಕಿನ ರೀತಿಯಲ್ಲಿಯೇ ಕುವೆಂಪು ಪೂಜೆ, ಅರ್ಚನೆಗಳೂ ಕಾವ್ಯರೂಪದಲ್ಲಿ ನಡೆದಿವೆ.

ಕನ್ನಡನಾಡಿನ ಹೆಮ್ಮೆಯ ಕವಿವರ ಪುಟ್ಟಪ್ಪಾರ್ಯಗೆ ನಮೋ ನಮೋ
ಗಿರಿವನ ಸೊಬಗಿನ ಮಡಿಲೊಳು ಬೆಳೆದಾ ನಿಸರ್ಗಪ್ರೇಮಿಗೆ ನಮೋ ನಮೋ
ಮಾನವ ವರ್ಗಕೆ ಸನ್ಮಾರ್ಗವ ತೋರಿದ ಹಿತೋಪದೇಶಿಗೆ ನಮೋ ನಮೋ (2741–ಪುಟ: 22)

ಹೀಗೆ ಕುವೆಂಪು ವಿಮರ್ಶೆಯಲ್ಲಿ ಭಕ್ತಿ–ಆರಾಧನೆ ಕೂಡ ಒಂದು ಮುಖ. ಇಷ್ಟೇ ಅಲ್ಲ ಕಾವ್ಯರೂಪದಲ್ಲಿ ಕುವೆಂಪುವನ್ನು ಸಾಮಾನ್ಯ ಮನುಷ್ಯಂತೆ ಕಾಣುವ ಭಾವಗಳೂ ಇವೆ. ಕುವೆಂಪು ಸಾಹಿತ್ಯದಿಂದ ಈ ಸಮಾಜದ ಮೇಲಾದ ಪರಿಣಾಮ ವ್ಯಾಖ್ಯಾನಗಳೂ ಇಲ್ಲಿವೆ.

ಎಡದ ಕಯ್ಯಲಿದೆ ಕೋ ನಿನ್ನದೇ ಜಾತಿ ಮಠ ಪೀಠ
ಬಲದ ಕಯ್ಯಲಿದೆ ಕೋ ಶ್ರೀ ಹರಿಯ ಶೂದ್ರಾವತಾರ ಪದವಿ
ಮುಂದೆ ಕಾದಿದೆ ಗಾದಿ ಗಾಂಧಿ ಬುದ್ಧರ ಪಕ್ಕ ಖಾಲಿ ಜಾಗ
ಹಿಂದೆ ಇದ್ದೇ ಇದ್ದಾರೆ ಜನ ಮಂತ್ರ ಪಠಣಕ್ಕೆ

ಅದೋ ಕುಲಸ್ಥರೆಲ್ಲ ಒಗ್ಗೂಡಿ ರಾಗವಾಗಿ ಹಾಡುತ್ತದ್ದಾರೆ
ನೂರು ನಾಯಕರನೆಲ್ಲ ನೂಕಾಚೆದೂರ
ನೀನೇ ಹೀರೋ ನಮಗಿಂದು ದೇವ ಪೂಜೆಗೇ ಬಾರಾ....! (2729–ಪುಟ: 75)

ಹೀಗೆ ಕುವೆಂಪುವನ್ನು ಈ ಸಮಾಜವು ಸ್ವೀಕರಿಸುತ್ತಿರುವ ಮತ್ತು ಸ್ವೀಕರಿಸಬಹುದಾದ ಬಗೆಯನ್ನು ವ್ಯಂಗ್ಯವಾಗಿ ಗೇಲಿ ಮಾಡುವ ಮೂಲಕವೂ ಲೇಖಕ ಮತ್ತು ಸಮಾಜದ ನಡುವಿನ ಸಂಬಂಧದ ಕುರಿತ ಪ್ರತಿಕ್ರಿಯೆಗಳು ಇಲ್ಲಿ ದಾಖಲಾಗಿವೆ. ಕುವೆಂಪು ಮನೆ, ಕಾಡು–ಕವಿಶೈಲಗಳನ್ನು ನೋಡಿ ಪ್ರತಿಕ್ರಿಯಿಸುವ ರೀತಿಯಲ್ಲೂ ಇಲ್ಲಿ ವಿಮರ್ಶೆಗಳು ಹುಟ್ಟಿವೆ. 'ಕವಿಶೈಲವೇ ನಮ್ಮ ಕವಿಗಳಿಗೆ ಶ್ರೀಶೈಲವಾಗಲಿ' (2729–ಪುಟ: 79) ಎಂಬ ಆಶಯಗಳೂ

ಕವಿಶೈಲ ಎಷ್ಟು ಸುಂದರ ಸೃಷ್ಟಿ
ಹೆಸರೆತ್ತಿದರೆ ಬಾನು ಜೇನು
ಮಾವು ಮಲ್ಲಿಗೆಹೂ ಮಳೆ
ಮನಸು ಮಡಿ ಬೆಳ್ಳಕ್ಕಿಯಂತೆ ಬೆಳ್ಳಗೆ (2516–ಪುಟ: 26)

ಎಂಬ ಅಭಿಪ್ರಾಯಗಳೂ ಇಲ್ಲಿವೆ. ಕುವೆಂಪು ಬೆಳೆದ ಓಡಾಡಿದ ಜಾಗಗಳಲ್ಲಿ ಓಡಾಡಿ ತಾವೂ ಪುಳಕಗೊಳ್ಳುತ್ತ–ತನ್ಮಯಗೊಳ್ಳುತ್ತ; ಕುವೆಂಪುವಂತೆ ತಾವೂ ಪ್ರಕೃತಿ ಆರಾಧಕರಾಗುವ ಭಾವಗಳೂ ಇಲ್ಲಿ ಪ್ರಕಟವಾಗಿವೆ. ನಿಸರ್ಗದೆದುರು ಕವಿಸಮಾನ ಅನುಭೂತಿಯನ್ನು ಪಡೆಯುವ ಯತ್ನಗಳೂ ಇಲ್ಲಿ ನಡೆದಿವೆ. ಕವಿಯ ಹುಟ್ಟೂರಿಗೇ ಹೋಗಿ ಅಲ್ಲಿನ ಪರಿಸರ ನೋಡಿ ಕಾವ್ಯ ಬರೆಯುವ ಪ್ರಯೋಗವೂ ಇಲ್ಲಿ ನಡೆದಿದೆ. (ನೋಡಿ: 2516)

ಶ್ರೀ ಕುವೆಂಪು ದರ್ಶನಂ ಅರ್ಥಾತ್ ವಿಶ್ವಮಾನವ ಧರ್ಮಂ ಎಂಬ ನಾಟಕವು ಕುವೆಂಪು ಅವರ ವಿಶ್ವಮಾನವ ಸಂದೇಶವನ್ನು ಜಾತ್ಯತೀತ–ಧರ್ಮಾತೀತ, ವಿಶ್ವಧರ್ಮ ಎಂಬಂತೆ ಸ್ಥಾಪಿಸಲು ಯತ್ನಿಸುತ್ತದೆ. ವಾಯು, ವರುಣ, ಅಗ್ನಿ, ಗಗನ, ವಸುಂಧರೆಯರ ಜೊತೆ ಕುವೆಂಪು ಕೂಡ ಒಂದು ಪಾತ್ರವಾಗಿ–ಅವತಾರ ಪುರುಷನಾಗಿ ಬಂದು ವಿಶ್ವಮಾನವ ಧರ್ಮವನ್ನು ಒಂದು ಪರ್ಯಾಯ ಧರ್ಮವನ್ನಾಗಿ ನೀಡುತ್ತಾರೆ. ಪೌರಾಣಿಕ ನಾಟಕದಂತೆ ಇರುವ ಈ ನಾಟಕವು ಕುವೆಂಪು ರಾಮಾಯಣದರ್ಶನದ ಭಾಷೆ ಮತ್ತು ಛಂದಸ್ಸನ್ನು ಅನುಕರಿಸಿದೆ. ಕುವೆಂಪು ವ್ಯಕ್ತಿತ್ವ–ಭಾಷೆ–ತಾತ್ವಿಕತೆಗಳಿಗೆ ನಾಟಕಕಾರರು ಸಾಕಷ್ಟು ಪರವಶಗೊಂಡಿದ್ದಾರೆ. ವಿಶ್ವಮಾನವ ತತ್ವವನ್ನು ಒಂದು ಧರ್ಮವಾಗಿ ಜಗತ್ತಿನ ಎಲ್ಲರೂ ಆಚರಿಸಬೇಕು ಎಂಬ ಉದ್ದೇಶ ಇಲ್ಲಿ ಮುಖ್ಯವಾಗಿದೆ.

ಇನ್ನು ಮಿಕ್ಕೆಲ್ಲ ನಾಟಕಗಳೂ ಕುವೆಂಪು ಅವರ ಸಾಹಿತ್ಯ–ಪಾತ್ರಗಳನ್ನು ಆಧರಿಸಿ ರಚಿತವಾಗಿರುವ ನಾಟಕಗಳಾಗಿವೆ. ದೀಕ್ಷಾ ಮಂಥರೆ ನಾಟಕದಲ್ಲಿ ಕಾವ್ಯಾಂಶ, ನಾಟ್ಯಾಂಶ, ವಿಮರ್ಶಾ ಪ್ರಜ್ಞೆ, ರಂಗ ಪ್ರಜ್ಞೆಗಳೆಲ್ಲ ಒಟ್ಟು ಗೂಡಿವೆ. ಮಂಥರೆಯನ್ನು ಮುಖ್ಯ ಪಾತ್ರವಾಗಿ ಇಟ್ಟುಕೊಂಡು ರಾಮಾಯಣದರ್ಶನದ ಮಂಥರಾ ವ್ಯಕ್ತಿತ್ವವನ್ನು ಸ್ಫೂರ್ತಿಯಾಗಿ ಇರಿಸಿಕೊಂಡು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಈ ನಾಟಕ ರಚಿಸಲಾಗಿದೆ. ರಾಮಾಯಣ ದರ್ಶನಂ ಕಾವ್ಯದ ಮಂಥರಾ ಪ್ರಸಂಗ ಈ ನಾಟಕದ ವಸ್ತು ಎನ್ನುವುದಕ್ಕಿಂತ ಅದು ಈ ನಾಟಕಕ್ಕೆ ಸ್ಫೂರ್ತಿ ಎನ್ನುವುದೇ ಸರಿ. (2689)

ರಾವಣಾಸುರನ ಕನಸು ಖಳನಾಯಕರಲ್ಲಿಯೂ ಮಾತೃವಾತ್ಸಲ್ಯವನ್ನು ಕಂಡ ದೃಷ್ಟಿಯಿಂದ ಪ್ರೇರಿತವಾಗಿ ರಚಿತವಾಗಿರುವ ನಾಟಕ. ದಶಾನನ ಸ್ವಪ್ನ ಸಿದ್ಧಿ ಈ ನಾಟಕದ ಕೇಂದ್ರವಸ್ತು. ರಾಕ್ಷಸೀಯ ಗುಣಗಳುಳ್ಳ ವ್ಯಕ್ತಿತ್ವದಲ್ಲೂ ಪರಿವರ್ತನೆ ಸಾಧ್ಯವೆಂಬ ಕಾಣ್ಕೆ ಇಲ್ಲಿದೆ. (2728) ಶ್ರೀ ರಾಮಾಯಣ ದರ್ಶನದ ಮಂಡೋದರಿ ಪಾತ್ರವನ್ನು ಆಧರಿಸಿದ ಕಿರುನಾಟಕ ಲಂಕೇಶ್ವರಿ. ಇಲ್ಲಿ ಮಂಡೋದರಿಯನ್ನೇ ಕೇಂದ್ರ ಪಾತ್ರವನ್ನಾಗಿ ಇಟ್ಟುಕೊಂಡು ಸ್ತ್ರೀ ದೃಷ್ಟಿಯಿಂದ ಲಂಕಾಯಣವನ್ನು ಏಕಾಂಕವನ್ನಾಗಿ ರೂಪಿಸಲಾಗಿದೆ. (2746) ಒಟ್ಟಾರೆಯಾಗಿ ಕುವೆಂಪು ಸಾಹಿತ್ಯವನ್ನು ಆಧರಿಸಿದ ನಾಟಕಗಳೆಲ್ಲವೂ ಅವರ ಸಾಹಿತ್ಯದಲ್ಲಿ ಅನೇಕ ನಾಟಕಗಳು ಅಡಗಿರುವುದನ್ನು ಸೂಚಿಸುತ್ತವೆ.

ಕುವೆಂಪು ಬದುಕು ಮತ್ತು ಬರಹಗಳೆರಡನ್ನು ಒಟ್ಟಿಗೇ ನೋಡುವ ದೃಷ್ಟಿಯು ಅವರ ಜೀವನ ಚರಿತ್ರೆಗಳಲ್ಲಿದೆ. ಲೇಖಕನ ಜೀವನ ಚರಿತ್ರೆಯೆಂದರೆ ಅದು ಬಹುಪಾಲು ಅವನ ಸಾಹಿತ್ಯದ ಹಿಂದಿನ ಪ್ರೇರಣೆ ಪ್ರಭಾವಗಳು, ಸಾಹಿತ್ಯ ರಚನೆಯ ಹಿನ್ನೆಲೆ, ಕೌಟುಂಬಿಕ ವಿಚಾರಗಳು, ಸಾಹಿತ್ಯದ ಹೊರತಾದ

ಆತನ ಇನ್ನಿತರ ಸಾಧನೆಗಳು ಹೀಗೆ ಇವೆಲ್ಲವನ್ನೂ ಕಟ್ಟಿಕೊಡುವಂತೆ ಇವರ ಜೀವನ ಚಿತ್ರಗಳು ಇವೆ. (1181–ಪುಟ: 1ರಿಂದ192) ಪತ್ರ–ಚಿತ್ರ–ವರದಿ–ವಿವರ–ಕಥನ ಹೀಗೆ ಹಲವು ವಲಯುಗಳ ವ್ಯಕ್ತಿ ಚಿತ್ರಗಳಾಗಿಯೂ, ಕಥನ ಧಾಟಿಯ ನಿರೂಪಣೆಗಳಾಗಿಯೂ, ಕಾವ್ಯ–ಬಿಡಿ ಕಾವ್ಯ ರೂಪದ ಕಿರುಚಿತ್ರಗಳಾಗಿಯೂ, ಹುಟ್ಟು–ಬಾಲ್ಯ–ಮುಪ್ಪು–ಬರಹ–ಪ್ರಶಸ್ತಿ ಹೀಗೆ ಜೀವನ ವಿಕಾಸ ಮತ್ತು ಸಾಹಿತ್ಯ ವಿಕಾಸಗಳ ಸರಳರೇಖಾತ್ಮಕ ಕಥನಗಳಾಗಿಯೂ, (2540) ಆಯ್ದು ಕುವೆಂಪು ಜೀವನಘಟ್ಟಗಳ ಮತ್ತು ಕೃತಿಗಳ ಪರಿಚಯದ ಕಿರು ಹೊತ್ತಿಗೆಗಳಾಗಿಯೂ ಇವರ ಕುರಿತ ಜೀವನ ಚಿತ್ರಗಳಿವೆ. ಕುವೆಂಪು ಬಗೆಗೆ ಒಟ್ಟಾರೆಯಾಗಿ ಒಂದು ಚಿತ್ರ ಮೂಡುವಂತೆ ಸಂಕ್ಷಿಪ್ತವಾಗಿ ಅವರ ಬದುಕು ಬರಹಗಳನ್ನು ಕಟ್ಟಿಕೊಡುವ; ಕುವೆಂಪು ಅವರ ಬದುಕು ಬರಹಗಳ ವಿಸ್ತೃತ ವಿವರಗಳನ್ನು ನೀಡುವ, ಸಮಾಜದ ಭಿನ್ನ ವರ್ಗಗಳಿಗಾಗಿ ಅಂದರೆ ಸಾಹಿತ್ಯೇತರ ವರ್ಗದ ಓದುಗರಿಗೆ, ಮಕ್ಕಳಿಗೆ, ವಿದ್ಯಾರ್ಥಿಗಳಿಗಾಗಿ ಕುವೆಂಪು ಕುರಿತ ಕಥನ ಕಟ್ಟಿಕೊಡುವ ಯತ್ನಗಳಾಗಿಯೂ ಇವರ ಜೀವನ ಚಿತ್ರಗಳು ಸಂಭವಿಸಿವೆ. (2702) ಪಂಪ ಪಶಸ್ತಿ ವಿಜೇತರು ಜ್ಞಾನಪೀಠ ಪ್ರಶಸ್ತಿ ವಿಜೇತರು, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು ಹೀಗೆ ಪ್ರಶಸ್ತಿ ದೃಷ್ಟಿಯಿಂದ ಲೇಖಕರನ್ನು ಪರಿಚಯಿಸುವ ಅಂಗವಾಗಿ ರಚಿತವಾದ ಜೀವನ ಚಿತ್ರಣಗಳೂ ಇಲ್ಲಿವೆ. (2678, 2534) ಹಾಗೆಯೇ ಕನ್ನಡದ ಮುಖ್ಯ ಕವಿಗಳನ್ನು ಒಟ್ಟಿಗೇ ಪರಿಚಯಿಸಿಕೊಳ್ಳುವ ಕುವೆಂಪು–ಬೇಂದ್ರೆ, ಕುವೆಂಪು–ಬೇಂದ್ರೆ–ಕಾರಂತ, ನವೋದಯ ಕವಿಗಳು ಇಂತಹ ಕೂಟ ಚಿತ್ರಗಳೂ–ತೌಲನಿಕ ಬರಹಗಳೂ ಇಲ್ಲಿವೆ. ಕುವೆಂಪು ಅವರ ಕುಪ್ಪಳಿ, ಕವಿಶೈಲ, ಕುವೆಂಪು ಜೀವನ, ಸಾಹಿತ್ಯಗಳನ್ನು ಚಿತ್ರ–ಬರಹಗಳ ಮೂಲಕ ಕಟ್ಟಿಕೊಡುವ(2802, 2614, 2615) ಕಿರು ಹೊತ್ತಿಗೆಗಳೂ ಇವೆ. (2538) ಕುವೆಂಪು ಕುರಿತ ಕಿರು ಪರಿಚಯ ಮಾಡಿ ಕೊಡುವ ಲೇಖನರೂಪಿ ಜೀವನ ಚಿತ್ರಣಗಳೂ ಇವೆ. (400) ಎತ್ತರದ ವ್ಯಕ್ತಿಗಳು(397), ಕನ್ನಡ ಕುಲರಸಿಕರು (399), ಸಾಹಿತ್ಯ ಸಾಧಕರು (391), ಸಾಹಿತ್ಯ ರತ್ನಗಳು (402), ಹೀಗೆ ಹಲವು ವ್ಯಕ್ತಿ ಚಿತ್ರಗಳೂ ಇವೆ. ಅಭಿನಂದನಾ ಗ್ರಂಥಗಳಿಗಾಗಿ ಬರೆದ ಜೀವನ ಚಿತ್ರಗಳೂ ಇವೆ.

ಕುವೆಂಪು ಬಗೆಗಿನ ಗೌರವ–ಪ್ರೀತಿ–ಭಕ್ತಿಗಳು ಈ ರೀತಿಯ ಬಹುಪಾಲು ಕೃತಿಗಳ ಹುಟ್ಟಿನ ಹಿಂದೆ ಇವೆ. ಪರಿಚಯಾತ್ಮಕ, ವಿಶ್ಲೇಷಣಾತ್ಮಕ, ತೌಲನಿಕ, ಕಥನಾತ್ಮಕ ಬರಹಗಳು, ಬದುಕು–ಬರಹಗಳೆರಡನ್ನೂ ಒಟ್ಟಿಗೇ ತೌಲನಿಕವಾಗಿ ನೋಡುವ ಬರಹಗಳೂ, (ಕನ್ನಡ–ವಿಶ್ವ) ಪರಂಪರೆಗಳೊಂದಿಗೆ ಕುವೆಂಪುವನ್ನು ತೌಲನಿಕವಾಗಿ ತೂಗಿ ನೋಡುವ–ಮಹಾನ್ ಸಾಧಕರೊಂದಿಗೆ ತೂಗಿ ನೋಡುವ ತೌಲನಿಕ ದೃಷ್ಟಿಯ ಬರವಣಿಗೆಗಳೂ ಇಲ್ಲಿವೆ. ಪ್ರಶಸ್ತಿ ದೃಷ್ಟಿ, ಅಭಿನಂದನ ದೃಷ್ಟಿ, ವಿಚಾರ ದೃಷ್ಟಿ ಹೀಗೆ ಹಲವು ದೃಷ್ಟಿಗಳಿಂದ ಇಲ್ಲಿ ಕುವೆಂಪು ಬದುಕು ಬರಹಗಳನ್ನು ನೋಡಲಾಗಿದೆ. ಸಮಾಜದ ಮುಖ್ಯ ವಲಯಗಳಾದ ಸ್ತ್ರೀ ಲೋಕ, ಮಕ್ಕಳ ಲೋಕ, ಶಿಕ್ಷಣ ವಲಯ, ಕರ್ನಾಟಕ ಏಕೀಕರಣ, ಕನ್ನಡ ಭಾಷಾ ಮಾಧ್ಯಮ ಹೀಗೆ ಹಲವು ವಲಯಗಳಿಗೆ ಕುವೆಂಪು ನೀಡಿರುವ ಕಾಣಿಕೆ ಏನು ಎಂದು ಪರಿಶೀಲಿಸುವ ದೃಷ್ಟಿಯ ಬರಹಗಳೂ ಇಲ್ಲಿವೆ. ಹಾಗಾಗಿ ಇಲ್ಲಿ ಕೆಲವೆಡೆ ಸಾಹಿತ್ಯ ವಿಮರ್ಶೆ ಮತ್ತು ಜೀವನ ಚರಿತ್ರೆಗಳು ಪ್ರತ್ಯೇಕವಾಗಿ ನಿರೂಪಿತವಾಗಿರುವುದೂ ಉಂಟು. ಕೆಲವೆಡೆ ಇವೆರಡೂ ಪರಸ್ಪರ ಬೆರತು ಹೋಗಿರುವುದೂ ಉಂಟು. ಕುವೆಂಪು ಜೀವನ–ಸಾಧನೆಗಳನ್ನು ಅನುಕರಣೀಯ ಮಾದರಿಯಾಗಿ ಜನಕ್ಕೆ ಬಿಂಬಿಸುವ, ಕನ್ನಡದ ಉನ್ನತ ಸಾಧಕರಲ್ಲಿ ಒಬ್ಬರನ್ನಾಗಿ ಗುರ್ತಿಸುವ, ಕನ್ನಡದ ಹೆಮ್ಮೆಯ ಪ್ರತೀಕವನ್ನಾಗಿ ಚಿತ್ರಿಸುವ, ಹಾಗೇ ಕುವೆಂಪುವನ್ನು ಹೆಚ್ಚು ಹೆಚ್ಚು ಜನಕ್ಕೆ ತಲುಪಿಸಬೇಕೆಂಬ, ಜೊತೆಗೆ ಕುವೆಂಪು ಬಗೆಗೆ ಪುಸ್ತಕ ಬರೆದು ಕೀರ್ತಿ ಗಳಿಸುವ–ಕಾಸು ಮಾಡಿಕೊಳ್ಳುವ ಪ್ರವೃತ್ತಿಗಳೂ ಇಲ್ಲಿವೆ. ವಿಮರ್ಶೆಯು ಸಾಹಿತ್ಯ ರೂಪಿಯಾಗಿಯೂ, ಸಾಮಾಜಿಕ ಅನುಸಂಧಾನವಾಗಿಯೂ, ಬಾಳ್ವೆ ಮತ್ತು ಬರಹಗಳ ತಾಳೆ ನೋಡುವಿಕೆಯಾಗಿಯೂ ಸಂಭವಿಸಬಹುದಾದ ಬಗೆ ಇದು.

ಈ ನೆಲೆಗಳಲ್ಲಿ ಸಾಹಿತ್ಯ ರೂಪಿ ವಿಮರ್ಶೆಯು ಒಡನಾಟ ಕಥನವಾಗಿ, ಸರಳರೂಪಿ ಕಥನವಾಗಿ, ಬಿಡಿ ಕವನ ರೂಪವಾಗಿ, ಕಾವ್ಯರೂಪವಾಗಿ, ಲೇಖನ ರೂಪವಾಗಿ, ಕಿರುಹೊತ್ತಿಗೆ-ಹೆಬ್ಬೊತ್ತಿಗೆ ರೂಪದ ಜೀವನ ಚರಿತ್ರೆ, ವ್ಯಕ್ತಿಚಿತ್ರಗಳಾಗಿ, ನಾಟಕ, ಕಥನಗಳಾಗಿ, ಸಂಪಾದಿತ ರೂಪವಾಗಿ ಹೀಗೆ ಹತ್ತು ಹಲವು ರೂಪಗಳಲ್ಲಿ ಪ್ರಕಟವಾಗಿದೆ.

**5.2.6. ಸರಳರೂಪಿ ವಿಮರ್ಶೆ**

ಕುವೆಂಪು ಸಾಹಿತ್ಯದ ಭಾಷೆಯು ಸಂಸ್ಕೃತ ಭೂಯಿಷ್ಟ, ಅದು ಸಂವಹನದ ತೊಡಕನ್ನು ಹೊಂದಿದೆ ಎಂಬುದು ಕುವೆಂಪು ಭಾಷೆಯ ಬಗೆಗಿನ ಒಂದು ಆಕ್ಷೇಪ. ವಿಮರ್ಶೆಯಲ್ಲಿ ಇದಕ್ಕೆ ಕಾರಣಗಳೂ, ಸಮರ್ಥನೆಗಳೂ, ನಿರಾಕರಣೆಗಳೂ ಹುಟ್ಟಿವೆ. ಅದರೆ ಇಂತಹ ಆಕ್ಷೇಪಗಳಿಗೆ ತಕ್ಕ ಕ್ರಮಗಳನ್ನು ತೆಗೆದುಕೊಳ್ಳುವ ರೀತಿಯಲ್ಲಿ ಕೆಲವು ಗದ್ಯಾನುವಾದಗಳು, ವಚನರೂಪಗಳು, ಸರಳ ಪಠ್ಯ-ರಂಗಪಠ್ಯಗಳು, ಟೀಕು-ವ್ಯಾಖ್ಯಾನಗಳು, ಕಥಾರೂಪಗಳು, ಸಾರಾಂಶೀಕರಣಗಳು ನಮ್ಮ ವಿಮರ್ಶೆಯಲ್ಲಿ ಸಂಭವಿಸಿವೆ. ಮಹಾಕಾವ್ಯವನ್ನು ಕಥಾರೂಪಕ್ಕೆ ಪ್ರಕಾರಾಂತರಿಸುವ (2755, 2788), ಗದ್ಯಾನುವಾದ ಮಾಡುವ (2618) ಆಯ್ದ ಸೂಕ್ತಿರೂಪಿ ಮಾತುಗಳಿಗೆ ಟೀಕುಗಳನ್ನು ಬರೆಯುವ (2670), ನಾಟಕಗಳನ್ನು ಕಥಾರೂಪಕ್ಕೆ ಪ್ರಕಾರಾಂತರಿಸುವ (2604), ರಂಗಪಠ್ಯ-ಸರಳಪಠ್ಯ ಸಿದ್ಧಪಡಿಸುವ, ಮಕ್ಕಳಿಗಾಗಿ ನಾಟಕಗಳನ್ನು ಕಥಾರೂಪಕ್ಕೆ ರೂಪಾಂತರಿಸುವ, ಸಾಹಿತ್ಯವನ್ನು ಸಾರಾಂಶೀಕರಿಸಿ ಮರುರೂಪಿಸುವ (2721 ರಿಂದ 2725)ಯತ್ನಗಳು ನಡೆದಿವೆ. ಇಂತಹ ಎಲ್ಲ ಯತ್ನಗಳನ್ನು ಇಲ್ಲಿ ಸರಳರೂಪಿ ವಿಮರ್ಶೆ ಎಂದು ಕರೆಯಲಾಗಿದೆ.

ಭಿನ್ನ ಭಿನ್ನ ಓದುಗ ವರ್ಗಕ್ಕೆ ಕುವೆಂಪು ಸಾಹಿತ್ಯವನ್ನು ಸಿದ್ಧಪಡಿಸಿ ಕೊಡುವ; ಸಾಹಿತ್ಯವನ್ನು ಪ್ರಸಾರ ಮಾಡುವ ಉದ್ದೇಶಗಳಿಂದ ಈ ಅನುಸಂಧಾನಗಳು ನಡೆದಿವೆ. ನಾಟಕಗಳ ಕಥಾರೂಪ, ರಂಗರೂಪ ಸಿದ್ಧಪಡಿಸುವಾಗ ನಾಟಕಗಳಲ್ಲಿ ಪ್ರಯೋಗಸಾಧ್ಯತೆ ಕಡಿಮೆಯಿದೆ. ಅವು ಮನೋರಂಗಭೂಮಿಯ ನಾಟಕಗಳು. ಅವುಗಳ ಭಾಷೆ ಸಂಭಾಷಣಾ ಸ್ನೇಹಿ ಅಲ್ಲ; ಸಂವಹನ ಸ್ನೇಹಿ ಅಲ್ಲ ಎಂಬಿತ್ಯಾದಿ ನಂಬಿಕೆಗಳು ಕೆಲಸ ಮಾಡಿವೆ. ಇದಕ್ಕೆ ಸಾಕಷ್ಟು ವಿರೋಧವೂ ನಮ್ಮ ವಿಮರ್ಶೆಯಲ್ಲಿ ವ್ಯಕ್ತವಾಗಿದೆ. (ಭಾಷೆಯ ಕುರಿತ ಪರಿಕರ ಚರ್ಚೆಯಲ್ಲಿ ಇದನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ) ರಾಮಾಯಣ ದರ್ಶನದ ವಚನ ಚಂದ್ರಿಕೆ, ಗದ್ಯಾನುವಾದಗಳು ಕೂಡ ಸಾಹಿತ್ಯವನ್ನು ಭಿನ್ನ ವಲಯದ ಓದುಗರಿಗೆ ತಲುಪಿಸುವ ಯತ್ನಗಳೇ ಆಗಿವೆ. ಅಲ್ಲದೆ ನಮ್ಮಲ್ಲಿ ಯಾವಾಗ ಬೇಕಾದರೆ ಆವಾಗ, ಯಾವ ಭಾಗ ಬೇಕೋ ಆ ಭಾಗವನ್ನು ಓದುವ ಓದುಗರು ಇರುವಂತೆಯೆ ಶಿಕ್ಷಣ ಪಠ್ಯದ ಭಾಗವಾಗಿ, ಅಧ್ಯಯನದ ಕಾರಣಕ್ಕಾಗಿ 'ಒಂದು ಓದಿಗೆ' ಓದುವ ಓದುಗರೂ ಇದ್ದಾರೆ. ಅಲ್ಲದೆ ನಮ್ಮಲ್ಲಿ ಮಕ್ಕಳು-ನವಸಾಕ್ಷರರೂ ಇದ್ದಾರೆ. ಹಾಗಾಗಿ ಕಾದಂಬರಿ, ಗದ್ಯಬರಹ, ಮಹಾಕಾವ್ಯಗಳನ್ನು ಸಾರಾಂಶೀಕರಿಸಿ ಗದ್ಯರೂಪಕ್ಕೆ ಪ್ರಕಾರಾಂತರ ಮಾಡುವ ಕೆಲಸಗಳೂ ನಡೆದಿವೆ. (2623, 2755) ಕೆಲವೊಮ್ಮೆ ಓದುಗರು ಲೇಖಕನ ಕೃತಿಗಳನ್ನು ಓದುವುದಕ್ಕಿಂತ ವಿಮರ್ಶಕನ ಅಧ್ಯಯನಗಳನ್ನೆ ಓದುವ ಸಾಧ್ಯತೆಯೂ (ಅಪಾಯವೂ) ಇರುತ್ತದೆ. ಇಂತಹ ಸಾಧ್ಯತೆಯ ಬಗೆಗೆ ಸ್ವತಃ ಕುವೆಂಪು ಅವರೇ ಆತಂಕ ವ್ಯಕ್ತಪಡಿಸಿದ್ದಾರೆ ಕೂಡ. (ನೋಡಿ: 2725-ಬೆನ್ನುಡಿ) ಕುವೆಂಪು ಕೃತಿಗಳನ್ನು ಓದಿ ಅರಗಿಸಿಕೊಳ್ಳಲಾರದ ಶ್ರೀ ಸಾಮಾನ್ಯರಿಗೆ ಸಾಹಿತ್ಯವನ್ನು ಸರಳವಾಗಿ ತಲುಪಿಸುವ ಉದ್ದೇಶವು (2788-ಪುಟ: 34) ಇಂತಹ ಗದ್ಯರೂಪಿ ಸಾರಾಂಶೀಕರಣ-ಅಧ್ಯಯನಗಳಿಗೆ ಇದ್ದಂತಿದೆ. ಇಲ್ಲಿ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವುದಕ್ಕಿಂತ ವರ್ಗೀಕರಿಸಿ ಮರುನಿರೂಪಿಸುವ ಭಾವವೇ ಪ್ರಧಾನವಾಗಿದೆ.

ಕೆಲವೊಮ್ಮೆ ಈ ಮರುನಿರೂಪಣೆಯು ಗದ್ಯಾನುವಾದ-ಸಾರಾಂಶೀಕರಣ-ವಿವರಣಾತ್ಮಕ ವಿಮರ್ಶೆಗಳ ಕಲಸು ಮೇಲೋಗರವೂ (2723) ಆಗಿದೆ. ಕಾವ್ಯಭಾಷೆಯಿಂದ, ಛಂದಸ್ಸಿನಿಂದ, ಪ್ರಕಾರಗಳಿಂದ ಸಾಹಿತ್ಯ ಕಥನವನ್ನು ಬಿಡುಗಡೆಗೊಳಿಸುವ ಕೆಲಸವು ವಿಮರ್ಶೆಯ ಒಂದು ಮುಖ್ಯವಾದ ಕಾರ್ಯವೂ, ಲಕ್ಷಣವೂ ಆಗಿ ಸರಳರೂಪಿ ವಿಮರ್ಶೆಯಲ್ಲಿ ಅಭಿನಯಗೊಂಡಿದೆ. ಭಿನ್ನ ಸಂವೇದನೆ-ಭಿನ್ನ ವಯೋಮಾನ-ಭಿನ್ನ ವಿದ್ಯೆ, ವೃತ್ತಿಗಳ ಓದುಗ ವಲಯಗಳು ಸಮಾಜದಲ್ಲಿ ಇರುತ್ತವೆ. ಅಂತಹ ಭಿನ್ನ ಓದುಗ ವಲಯಗಳಿಗೆ ಸಾಹಿತ್ಯವನ್ನು ತಲುಪಿಸುವ ಜವಾಬ್ದಾರಿ ಕೂಡ ವಿಮರ್ಶೆಯ ಹೆಗಲಿನಲ್ಲಿದೆ ಎಂಬ ವಿಮರ್ಶೆಯ ಕಾರ್ಯದ ಪರಿಕಲ್ಪನೆ ಈ

ವಿಮರ್ಶೆಯಲ್ಲಿ ಚೆನ್ನಾಗಿ ಅಭಿನಯಗೊಂಡಿದೆ. ಪ್ರಕಾರಗಳಲ್ಲಿ ಮತ್ತು ಛಂದಸ್ಸುಗಳಲ್ಲಿ ಅನುಭವವನ್ನು ಅಭಿವ್ಯಕ್ತಿಸುವ ಕವಿಕಾರ್ಯ ಮತ್ತು ಅವುಗಳಿಂದ ಅನುಭವ ಕಥನವನ್ನು ಬಿಡುಗಡೆಗೊಳಿಸುವ ಸಹೃದಯ ಕಾರ್ಯಗಳು ನಮ್ಮಲ್ಲಿ ಆದಿಕಾಲದಿಂದಲೂ ಸಾಹಿತ್ಯ ಸಂಕಥನದ ಸಹಜ ವ್ಯಾಪಾರವೆಂಬಂತೆ ನಡೆಯುತ್ತಾ ಬಂದಿವೆ.

ಹಾಗೆ ಸಾಹಿತ್ಯ ಕೃತಿಯೊಂದನ್ನು ಅದರೆಲ್ಲ ಮೂಲ ವಾಸನೆಗಳೊಂದಿಗೆ ಕುಗ್ಗಿಸಿ ಸಾರಾಂಶೀಕರಿಸಲು ಆಗುತ್ತದೆಯೆ? ಸಾರಾಂಶಿಕರಣವು ಸಾಹಿತ್ಯದ ಕಿರುರೂಪ ಆಗಲು ಸಾಧ್ಯವೇ? ಅದು ಅಸಂಭವ. ಯಾವುದೇ ಕಥನ ಮರುನಿರೂಪಣೆಗೊಂಡಾಗ ಅದು ಕಿರಿದಾಗಿರಲಿ ಹಿರಿದಾಗಿರಲಿ ಅದಕ್ಕೆ ಪ್ರತ್ಯೇಕ ಅಸ್ತಿತ್ವವೇ ಬಂದುಬಿಡುತ್ತದೆ. ಹಾಗಾಗಿ ಸರಳರೂಪಿ ವಿಮರ್ಶೆಗಳೆಲ್ಲವೂ ಕುವೆಂಪು ಸಾಹಿತ್ಯಕ್ಕೆ ಕಟ್ಟಿರುವ ಭಿನ್ನ ಪಠ್ಯಗಳೇ ಹೌದು.

**5.2.7. ಅಭಿನಂದನಾ ರೂಪಿ**

ಕುವೆಂಪು ಬಗೆಗೆ ಬಂದಿರುವ ವಿಮರ್ಶೆಯಲ್ಲಿ ಬಹುಪಾಲು ಗುಣಗ್ರಹಣರೂಪಿ, ನುಡಿ ನಮನರೂಪಿಯಾಗಿದೆ. ಸಾಹಿತ್ಯದ ಪರಿಚಯ–ಆಸ್ವಾದನೆ–ವ್ಯಾಖ್ಯಾನ–ಅಧ್ಯಯನ–ವಿವರಣೆ–ಸಂಗ್ರಹ–ಪ್ರಸಾರಗಳು ಹೆಚ್ಚಾಗಿ ನಡೆದಿವೆ. ಕುವೆಂಪು ಬಗೆಗೆ ಅಭಿಮಾನ–ಗೌರವ–ಪ್ರೀತಿಗಳು ಅನೇಕ ರೀತಿಯಲ್ಲಿ ಪ್ರಕಟವಾಗಿವೆ. ಅವರಿಗೆ ಬಂದಿರುವಷ್ಟು ಅಭಿನಂದನ ಗ್ರಂಥಗಳು ಬಹುಶಃ ಕನ್ನಡದಲ್ಲಿ ಬೇರಾರಿಗೂ ಬಂದಿರಲಾರವು. ನುಡಿನಮನ, ಶ್ರದ್ಧಾಂಜಲಿ, ನುಡಿದೀಪ, ಧಾಟಿಯಲ್ಲಿ ಹಲವು ಬಿಡಿ ಲೇಖನಗಳು ಪ್ರಕಟವಾಗಿರುವ ಜೊತೆಗೆ ಹಲವಾರು ಸಂಪಾದಿತ ಲೇಖನಗಳ ಅಭಿನಂದನ ಗ್ರಂಥಗಳು ಕುವೆಂಪು ಅವರಿಗೆ ಅರ್ಪಿತವಾಗಿವೆ.

ನೆನಪಿನ ಸಂಚಿಕೆ, ಸ್ಮರಣ ಸಂಚಿಕೆ, ಪತ್ರಿಕೆಗಳ ವಿಶೇಷ ಸಂಚಿಕೆಗಳ ಮೂಲಕವೂ ಕುವೆಂಪುವನ್ನು ಅಭಿನಂದಿಸಲಾಗಿದೆ. ಕುವೆಂಪು ಸಾಹಿತ್ಯ ಮತ್ತು ವ್ಯಕ್ತಿತ್ವದ ಕುರಿತಾದ ನಾಟಕೋತ್ಸವ, ಸಾಹಿತ್ಯೋತ್ಸವ, ಗಮಕವಾಚನ, ಕಾವ್ಯವಾಚನ, ಕವಿಗೋಷ್ಠಿ ಇತ್ಯಾದಿಗಳನ್ನು ನಡೆಸುವ ಮೂಲಕವೂ ಕುವೆಂಪುವನ್ನು ಅಭಿನಂದಿಸಲಾಗಿದೆ. ಸಾಹಿತ್ಯದ ಸಾಂಸ್ಕೃತಿಕ ಅನುಸಂಧಾನವು ಅಭಿಮಾನ ಪೂರ್ವಕವಾಗಿ ನಡೆಯುವಾಗ ಹುಟ್ಟುಹಬ್ಬದ ಆಚರಣೆಗಾಗಿ ಸಮಾರಂಭ–ವಿಚಾರಗೋಷ್ಠಿ ನಡೆಸುವುದು; ವಿಮರ್ಶಾಲೇಖನಗಳ–ಅಭಿನಂದನ ಗ್ರಂಥಗಳ, ಸ್ಮರಣ ಸಂಚಿಕೆಗಳ, ವಿಶೇಷ ಪುರವಣಿಗಳ ಸಂಪಾದನೆ–ಅರ್ಪಣೆ ಮಾಡುವುದು ಇವೆಲ್ಲವೂ ಅಭಿನಂದನೆಯನ್ನು ಸಲ್ಲಿಸುವ ಬಗೆಗಳೇ ಆಗಿವೆ. ಹಾಗಾಗಿ ಇಲ್ಲಿ ಅಭಿನಂದನ ರೂಪಿ ವಿಮರ್ಶೆ ಎಂದರೆ 1. ಅಭಿನಂದನ ಗ್ರಂಥಗಳು 2. ಸ್ಮರಣ ಸಂಚಿಕೆ–ನೆನಪಿನ ಸಂಚಿಕೆಗಳು 3. ಪತ್ರಿಕೆಗಳ ವಿಶೇಷ ಸಂಚಿಕೆಗಳು ಇವೆಲ್ಲವುಗಳಲ್ಲಿನ–ಸಾಹಿತ್ಯದ ಅನುಸಂಧಾನಗಳೆ ಆಗಿದೆ.

ಅಭಿನಂದನ ಗ್ರಂಥಗಳ ಹೆಸರಿನಲ್ಲೆ ಅವಲೋಕನ (2489), ಉಡುಗೊರೆ (2494), ಉಪಾಯನ ಕೃತಿ ಕರಂಡ (2497), ಕವಿಶೈಲ (2520), ಗಂಗೋತ್ರಿ (2677), ಸಹ್ಯಾದ್ರಿ (2799) ಹೀಗೆ ಹಲವಾರು ಅಭಿನಂದನ ಗ್ರಂಥಗಳು ಸಮರ್ಪಿತವಾಗಿವೆ. ಅಭಿನಂದನ ರೂಪದಲ್ಲೆ ಕುವೆಂಪು ಮೇಲಿನ ಅಭಿಮಾನದಿಂದ ಅಗ್ನಿ (2630), ಅನಿಕೇತನ (2484), ಕನ್ನಡ ನುಡಿ (2506), ಕರ್ಮವೀರ (2514), ಕರ್ನಾಟಕ ಭಾರತಿ (2512), ಪುಸ್ತಕ ಪ್ರಪಂಚ, (2698, 2699), ಸಮನ್ವಯ (2753), ಶೂದ್ರ (2593), ಸಂಕ್ರಮಣ (2794), ಸಮರ್ಪಣೆ (2798) ಹೀಗೆ ಹಲವಾರು ಪತ್ರಿಕೆಗಳು ನಾಡಿನಾದ್ಯಂತ ಕುವೆಂಪು ವಿಶೇಷ ಸಂಚಿಕೆಗಳಾಗಿ ಪ್ರಕಟವಾಗಿವೆ. ಇವಲ್ಲದೆ ಕುವೆಂಪು ಅವರ ಹುಟ್ಟು ಹಬ್ಬಗಳ ಸಂದರ್ಭಗಳಲ್ಲಿ, ಪ್ರಶಸ್ತಿ ಪುರಸ್ಕಾರ ಸಂದರ್ಭಗಳಲ್ಲಿ, ಅರ್ಧ ಶತಮಾನ, ಮುಕ್ಕಾಲು ಶತಮಾನ, ಶತಮಾನಗಳ ಸಂದರ್ಭಗಳಲ್ಲಿ ಉದಯ ರವಿ (2495), ಕವಿಶೈಲ (2520), ಕಾಮಳ್ಳಿ (2530), ರಾಷ್ಟ್ರ ಕವಿ (2730), ವಿಶ್ವಮಾನವ ಕುವೆಂಪು ನೂರು (2754) ಹೀಗೆ ಹಲವಾರು ಅಭಿನಂದನ ರೂಪಿ ಸ್ಮರಣ ಸಂಚಿಕೆಗಳು ಪ್ರಕಟವಾಗಿವೆ. ಸ್ಮರಣ ಸಂಚಿಕೆಗಳು, ಪತ್ರಿಕಾ ವಿಶೇಷಾಂಕಗಳು ಇವನ್ನೆಲ್ಲ ಅಭಿನಂದನಾ ಗ್ರಂಥಗಳೆನ್ನಲು ಬರುವುದಿಲ್ಲವಾದರೂ ಇವೆಲ್ಲ ಅಭೀನಂದನಾ ರೂಪದ ವಿಮರ್ಶೆಗಳೇ ಆಗಿವೆ. ಕೆಲವು ವಿಮರ್ಶಾ ಲೇಖನಗಳ ಸಂಪಾದಿತ ಸಂಪುಟಗಳಿಗು, ಅಭಿನಂದನಾ ಗ್ರಂಥಗಳಿಗೂ ಸ್ವರೂಪದಲ್ಲಿ ಅಂತಹ

ವ್ಯತ್ಯಾಸವೇನೂ ಇಲ್ಲ. ಹಾಗಾಗಿ ಒಟ್ಟಾರೆ ಅಭಿನಂದನರೂಪಿ ವಿಮರ್ಶೆಯು ಸಾಂದರ್ಭಿಕತೆಯ, ಸಂಬಂಧಿಕತೆಯ ರಾಜಕಾರಣದಿಂದ ಜನಿಸಿರುವ ವಿಮರ್ಶೆಯೂ ಆಗಿದೆ.

ಉಡುಗೊರೆ (2494) ಕುವೆಂಪು ಅವರ ಮೊದಲ ಅಭಿನಂದನಾ ಗ್ರಂಥ. ಇದಕ್ಕೆ ನಿರ್ದಿಷ್ಟ ಕಾರಣವಾಗಲೀ, ಸಂದರ್ಭವಾಗಲಿ ಇಲ್ಲ. ಇದು ಅವರ ಶಿಷ್ಯರು ಮತ್ತು ಅಧ್ಯಾಪಕ ಬಂಧುಗಳು ಸೇರಿ ಅರ್ಪಿಸಿದ ಅಭಿನಂದನಾ ಗ್ರಂಥ. ಇಲ್ಲಿ ಮೂರು ವಲಯಗಳಿವೆ. 1. ಕುವೆಂಪು ವ್ಯಕ್ತಿತ್ವ ಬಿಂಬಿಸುವ ಒಡನಾಟ ಕಥನ 2. ಕುವೆಂಪು ಸಾಹಿತ್ಯದ ವಿಮರ್ಶೆ ಅನ್ಯ ಲೇಖನಗಳು. ಮೊದಲೆರಡು ವಲಯಗಳಲ್ಲಿ ಕುವೆಂಪು ಮತ್ತು ಅವರ ಸಾಹಿತ್ಯದ ಮೇಲೆ ಪ್ರೀತಿ–ಗೌರವ–ಅಭಿಮಾನ–ಭಕ್ತಿಗಳೇ ಎದ್ದು ಕಾಣುತ್ತವೆ. ಕುವೆಂಪು ಸಾಹಿತ್ಯ ವಿಮರ್ಶೆಯಲ್ಲಿ ಸಾಧ್ಯವಾದಷ್ಟು ಅವರ ಎಲ್ಲ ಸಾಹಿತ್ಯ ಪ್ರಕಾರಗಳನ್ನು ಪರಿಶೀಲಿಸಲು ಯತ್ನಿಸಲಾಗಿದೆ.

ಕವಿಶೈಲ (2520) ಕೂಡ ಕುವೆಂಪು ಅವರ ವಿದ್ಯಾರ್ಥಿಗಳು ಮತ್ತು ಅಧ್ಯಾಪಕ ಮಿತ್ರರು ಕವಿಗೆ 60 ತುಂಬಿದಾಗ ಅರ್ಪಿಸಿದ ಅಭಿನಂದನ ಗ್ರಂಥ. ಇಲ್ಲಿನ ಲೇಖಕರೂ ವಿದ್ಯಾರ್ಥಿ ಬಳಗ ಮತ್ತು ಅಧ್ಯಾಪಕರೇ ಆಗಿದ್ದಾರೆ. ಇಲ್ಲಿ ಕವಿಯನ್ನು ದೈವಾಂಶ ಸಂಭೂತ–ಅವತಾರ ಪುರುಷ ಎಂದೇ ಭಾವಿಸಲಾಗಿದೆ. ಕವಿಶೈಲವನ್ನು ಕವಿನಮನಗ್ರಂಥ ಎಂದೇ ಕರೆಯಲಾಗಿದೆ. ಭಕ್ತಿಯ ಕಾಣಿಕೆ ಎಂದೂ ಹೇಳಲಾಗಿದೆ. ಇಲ್ಲಿ ಕುವೆಂಪು ಕುರಿತ ಒಡನಾಟ ಕಥನ ಮತ್ತು ಸಾಹಿತ್ಯದ ಪರಿಶೀಲನೆ ಎರಡೇ ವಲಯಗಳಿವೆ. ಅನ್ಯ ಬರಹಗಳಿಲ್ಲ.

ಆಗ್ಗೆ ಪ್ರಥಮ ಬಿಎ ವಿದ್ಯಾರ್ಥಿಯಾಗಿದ್ದ ಶ್ರೀಕೃಷ್ಣ ಆಲನಹಳ್ಳಿ ಬೆರಳ್‌ಗೆ ಕೊರಳ್ ವಿಶ್ಲೇಷಣೆ ಮಾಡುತ್ತ subjective correlative, immortal values of humanity, sensibility, unified sensibility, ಸಾವಯವ ಸಮಗ್ರೀಕರಣ, ಪ್ರತಿಮಾ ವಿಧಾನ, ಸಾಹಿತ್ಯದ ಅಸಲು ಕಸುಬು, ತನ್ಮಯತೆ, ರೊಮ್ಯಾಂಟಿಕ್ ತತ್ವ ಇತ್ಯಾದಿ ಪರಿಭಾಷೆಗಳ ಮೂಲಕ ನಾಟಕವನ್ನು ಮರುಮೌಲ್ಯಮಾಪನಕ್ಕೆ ಗುರಿಮಾಡಿದ್ದಾರೆ. ಕೊನೆಗೆ ಇದು ಕನ್ನಡ ಸಾಹಿತ್ಯದಲ್ಲಿ ಪರಮೋತ್ಕೃಷ್ಟ ಕೃತಿಯಾಗಿ ಚಿರಕಾಲ ನಿಲ್ಲುತ್ತದೆ ಎಂಬ ನಿಲುವಿಗೆ ಬರುತ್ತಾರೆ. (2520–ಪುಟ: 1–7) ಸರಿಸುಮಾರು ನವ್ಯದ ಪರಿಭಾಷೆ ಬಳಸಿ ಕೃತಿ ಸಮರ್ಥನೆಯನ್ನು ಇಲ್ಲಿ ಮಾಡಲಾಗಿದೆ. ವಿವರಣಾತ್ಮಕ ವಿಧಾನ, ರಸಾಸ್ವಾದನ ವಿಧಾನ, ಮೌಲ್ಯೀಕರಣದೃಷ್ಟಿ ಹೀಗೆ ಯಾವುದೇ ರೀತಿಗಳನ್ನು ಬಳಸಿದರೂ ಕೃತಿ ಸಮರ್ಥನೆ ಮತ್ತು ಲೇಖನ ಸಮರ್ಥನಾ ಗುಣ ಇಲ್ಲಿನ ಎಲ್ಲ ವಿಮರ್ಶೆಗಳ ಅಂತಃ ಸತ್ವವಾಗಿದೆ.

ಗಂಗೋತ್ರಿ (2677) 42 ಲೇಖನಗಳುಳ್ಳ ಸಾವಿರದ ಒಂದು ನೂರು ಪುಟಗಳ ಬೃಹತ್ ಅಭಿನಂದನಾ ಗ್ರಂಥ. ಇದಕ್ಕೆ ಸಂಪಾದನಾ ಸಮಿತಿಯ ಪರವಾಗಿ ಸಂಪಾದಕೀಯ ಬರೆದಿರುವ ದೇಜಗೌ ಅವರು ಅದುವರೆಗಿನ ಅಭಿನಂದನಾ ಗ್ರಂಥಗಳ ಕಿರು ಇತಿಹಾಸವೊಂದನ್ನೆ ಬರೆದಿದ್ದಾರೆ. ಕುವೆಂಪು ಸಾಹಿತ್ಯದ ಎಲ್ಲ ಪ್ರಕಾರಗಳ ವಿಮರ್ಶೆಯೂ ಇಲ್ಲಿ ಸಂಕಲಿತವಾಗಿದೆ. ಸುಮಾರು ಹನ್ನೆರಡು ವರ್ಷಗಳ ದೀರ್ಘ ಯೋಜನೆ–ಸಿದ್ಧತೆಗಳು ಈ ಗ್ರಂಥದ ಹಿನ್ನೆಲೆಗೆ ಇವೆ. ಇಲ್ಲಿನ ಎಲ್ಲ ವಿಮರ್ಶೆಯನ್ನು ಕೊನೆಯಲ್ಲೂ: ಅದುವರೆಗಿನ ಕುವೆಂಪು ಜೀವನ ಚರಿತ್ರೆಯನ್ನು ಮೊದಲಲ್ಲೂ ನೀಡಲಾಗಿದೆ. ಈ ಗ್ರಂಥದಲ್ಲಿ ಕೃತಿಕೇಂದ್ರಿತ, ಪ್ರಕಾರಕೇಂದ್ರಿತ, ಲೇಖಕ ಕೇಂದ್ರಿತ, ರಸ ನಿಷ್ಠ, ಪಾತ್ರ ಕೇಂದ್ರಿತ, ಭಾಷೆ–ಛಂದಸ್ಸು ಇತ್ಯಾದಿ ಪರಿಕರ ಕೇಂದ್ರಿತ, ಒಡನಾಟ ರೂಪಿ, ಸಮೀಕ್ಷಾ ರೂಪಿ, ತೌಲನಿಕ ರೂಪಿ, ಲೇಖಕನ ದೃಷ್ಟಿ ಧೋರಣೆಗಳ ಪರಿಶೀಲನೆ ಹೀಗೆ ಹಲವು ನೆಲೆಯ ವಿಮರ್ಶಾ–ಸಮೀಕ್ಷಾ ಲೇಖನಗಳು ಇವೆ. ಗ್ರಂಥದ ಮೊದಲಿಗೆ ಬೇಂದ್ರೆಯವರ ಯುಗದ ಕವಿಗೆ ಕವಿತೆ ನೀಡಲಾಗಿದೆ.

ಉಪಾಯನ ಕೃತಿಕರಂಡ(497) ಕೃತಿಯು ಚಿಕ್ಕಮಗಳೂರಿನ ಕುವೆಂಪು ಸನ್ಮಾನ ಸಮಿತಿಯಿಂದ ಅರ್ಪಿತವಾಗಿರುವ ಗ್ರಂಥ. ಇದನ್ನು ಸ್ಮರಣ ಗ್ರಂಥ ಎಂದೇ ಕರೆಯಲಾಗಿದೆ. ನಾಡಿನಾದ್ಯಂತ ಹಲವು ಲೇಖಕರಿಂದ ಲೇಖನ ತರಿಸಿಕೊಂಡು ಗ್ರಂಥ ಸಂಪಾದಿಸಲಾಗಿದೆ. ಕುವೆಂಪು ಸಾಹಿತ್ಯ ಸಪ್ತಾಹ ನಡೆಸಿ; ಚಿಕ್ಕಮಗಳೂರಿನಲ್ಲಿ ಕುವೆಂಪು ಕೃತಿ ಶ್ರವಣ–ಗಾಯನ–ನಾಟಕ ಪ್ರದರ್ಶನ ಏರ್ಪಡಿಸಿ: ಸಮಾರಂಭದಲ್ಲಿ ಕುವೆಂಪುವಿಗೆ ಸನ್ಮಾನ ಮಾಡಿ ಗ್ರಂಥ ಅರ್ಪಿಸಲಾಗಿದೆ. ಜ್ಞಾನಪೀಠ ಪ್ರಶಸ್ತಿ ಬಂದ ನೆನಪಿಗೆ ಈ ಗ್ರಂಥ ಅರ್ಪಿಸಲಾಗಿದೆ. ಅಭಿನಂದನೆ, ಅರ್ಪಣೆ, ನಮನ, ಸ್ಮರಣೆ, ಸನ್ಮಾನ, ದರ್ಶನ, ಶ್ರವಣ ಎಂದಾಗ ಸಹಜವಾಗಿಯೆ ವಿಮರ್ಶೆ ಎನ್ನುವುದು ಈ ಎಲ್ಲ ಪರಿಭಾಷೆಗಳಿಗೆ ವೈರಿ ಎಂದು ಅನ್ನಿಸುತ್ತದೆ. ಆದರೆ ಹಾಗೇನೂ ಭಾವಿಸಬೇಕಿಲ್ಲ. ನಮ್ಮ ವಿಮರ್ಶೆಯಲ್ಲಿ ಇವೆಲ್ಲವೂ ಇದ್ದದ್ದೇ. ಇವೆಲ್ಲ ಅನುಸಂಧಾನಗಳು ಸೇರಿಯೇ ನಮ್ಮ ವಿಮರ್ಶೆ

ಸಂಭವಿಸಿದೆ. ಅಲ್ಲದೆ ನಾಡಿನ ಹಲವು ಕಡೆಗಳಿಂದ ಲೇಖಕರು ಲೇಖನಗಳನ್ನು ಕಳಿಸಿರುವುದರಿಂದ ! ಅಭಿನಂದನಾ ಗ್ರಂಥಕ್ಕೆ ಲೇಖನ ಕಳಿಸುತ್ತಿದ್ದೇವೆ ಎಂಬ ಎಚ್ಚರ ಇದ್ದರೂ ನಮನ, ಅಭಿನಂದನೆ-ಅರ್ಪಣೆ ಭಾವಗಳನ್ನು ಮೀರಿದ ಎನ್ನುವುದು ಕೂಡ ಈ ಗ್ರಂಥಗಳ ಸಂದರ್ಭದಲ್ಲಿ ಗಮನಾರ್ಹವಾದುದು.

ಇಲ್ಲಿನಂತೆ ಎಲ್ಲ ಅಭಿನಂದನ ಗ್ರಂಥಗಳಲ್ಲು ವಸ್ತುನಿಷ್ಠವಾದ ವಿಮರ್ಶೆಗಳೂ ಇವೆ. ಹಾಗೇ ಅಭಿನಂದನೆ-ಸಮೀಕ್ಷೆ-ಪ್ರಜೆ-ಭಕ್ತಿ ಭಾವದ ವಿಮರ್ಶೆಗಳೂ ಇವೆ. ಈ ಹಿಂದಿನ ಗ್ರಂಥಗಳಂತೆ ಇಲ್ಲಿಯೂ 1. ಒಡನಾಟ ಕಥನಗಳು 2. ಸಾಹಿತ್ಯ ವಿಮರ್ಶೆಗಳೂ 3. ಅನ್ಯ ಲೇಖನಗಳೂ ಇವೆ. ಆದರೆ ಮೊದಲಿನ ಗ್ರಂಥಗಳಿಗಿಂತ ಭಿನ್ನವಾಗಿ ಇಲ್ಲಿ ಹರಕೆ, ಹಾರೈಕೆ, ಆಶೀರ್ವಚನ, ಸಂದೇಶಗಳೆಲ್ಲ ಇವೆ. ಮೊದಲಿನ ಸುಮಾರು 33 ಪುಟಗಳಷ್ಟು ಇವೇ ತುಂಬಿಕೊಂಡಿವೆ. ರಾಜಕಾರಣಿಗಳು, ವ್ಯಾಪಾರಿಗಳು, ಮಠಾಧೀಶರು, ವ್ಯಾಪಾರಿಗಳು ಹರಕೆ-ಸಂದೇಶ-ಆಶೀರ್ವಚನಗಳನ್ನು ನೀಡಿದ್ದಾರೆ. ವಿಚಿತ್ರವೆಂದರೆ ಕುವೆಂಪು ಸಾಹಿತ್ಯದ ವಿಮರ್ಶಾಲೇಖನಗಳು ಮತ್ತು ಅನ್ಯ ಲೇಖನಗಳನ್ನು ಇಲ್ಲಿ ಕಲಸಿ ನೀಡಿದ್ದಾರೆ. ಅಲ್ಲದೆ ಇಲ್ಲಿ ಕಾರ್ಯಕಾರಿ ಸಮಿತಿಯವರು ಕುವೆಂಪುಗಿಂತಲೂ ದೊಡ್ಡದಾದ ಫೋಟೋಗಳನ್ನು ಹಾಕಿಕೊಂಡಿದ್ದಾರೆ! ಕವಿಯು ಅಭಿನಂದನೆ ಎಂದರೆ ಬರಿ ಕವಿಯನ್ನು ಮೆರೆಸುವುದು ಮಾತ್ರ ಅಲ್ಲ. ತಮ್ಮನ್ನು ತಾವು ಮೆರೆಸಿಕೊಳ್ಳುವುದು ಕೂಡ ಹೌದು. ವಿಮರ್ಶೆ ಅಂದರೆ ಹಾಗೆಯೇ ಅದು ಲೇಖಕನ ಮೆರೆಸುವಿಕೆ-ಪರೀಕ್ಷೆ ಮಾತ್ರ ಅಲ್ಲ: ವಿಮರ್ಶಕನ ಮೆರೆಯುವಿಕೆ-ಪರೀಕ್ಷೆ ಕೂಡ.

ಅವಲೋಕನ (2489) ಗ್ರಂಥವು ಕುವೆಂಪು ಅವರಿಗೆ ಜ್ಞಾನಪೀಠ ಪ್ರಶಸ್ತಿ ಬಂದುದರ ಸ್ಮರಣೆ-ಅಭಿನಂದನೆಗಾಗಿ ಪ್ರಕಟವಾಗಿರುವ ಗ್ರಂಥ. ಮೈಸೂರಿನ ವಿದ್ಯಾರ್ಥಿಗಳ ಬಳಗವೇ ಕುವೆಂಪು ಸನ್ಮಾನ ಸಮಿತಿ ರಚಿಸಿಕೊಂಡು ಈ ಗ್ರಂಥ ಹೊರತಂದಿದೆ. ವಿಶೇಷವಾಗಿ ರಾಮಾಯಣದರ್ಶನಂ ಬಗೆಗಿನ ಅದಾಗಲೇ ಪ್ರಕಟವಾಗಿದ್ದ ಲೇಖನಗಳನ್ನು ಆಯ್ಕೆ ಮಾಡಿ-ಸಂಪಾದಿಸಿ ಇಲ್ಲಿ ನೀಡಲಾಗಿದೆ. ಕೆಲವು ಅಪ್ರಕಟಿತ ಲೇಖನಗಳೂ ಇಲ್ಲಿ ಸೇರಿವೆ. ರಾಮಾಯಣದರ್ಶನದ ವಿಮರ್ಶಾ ಲೇಖನಗಳನ್ನು ಅವಲೋಕನವೆಂದು ಕರೆಯಲಾಗಿದೆ. ಇಲ್ಲಿ ಮೂರು ಭಾಗಗಳನ್ನಾಗಿ ಲೇಖನಗಳನ್ನು ವಿಂಗಡಿಸಿಕೊಂಡು ಮೊದಲ ಭಾಗದಲ್ಲಿನ ಲೇಖನಗಳನ್ನು ಇಡಿಯಾಗಿ ನೀಡದೆ ಸಂಗ್ರಹಿಸಿ ನೀಡಲಾಗಿದೆ. ಮಹಾಕಾವ್ಯದ ಗುಣಗ್ರಹಣವನ್ನು ಉಳಿಸಿಕೊಳ್ಳಲಾಗಿದೆ. ವಿಶೇಷವೆಂದರೆ ವಿಮರ್ಶಾಲೇಖನಗಳ ಸಂಗ್ರಹ (ಸಂಕ್ಷಿಪ್ತೀಕರಣ) ನಡೆದಿರುವುದು ಇಲ್ಲಿಮಾತ್ರ, ಇನ್ನಾವ ಅಭಿನಂದನಾ ಗ್ರಂಥಗಳಲ್ಲೂ ನಡೆದಿಲ್ಲ. ಮೊದಲ ಭಾಗದಲ್ಲಿ ರಾಮಾಯಣದರ್ಶನದ ಅಖಂಡ ಅವಲೋಕನಗಳನ್ನು-ಸಾಮಾನ್ಯ ವಿವೇಚನೆಗಳನ್ನು ಸೀರಿಸಲಾಗಿದೆ. ಎರಡನೇ ಭಾಗದಲ್ಲಿ ವಿಸ್ತೃತವಾದ, ಸಂಕ್ಷೇಪಿಸಿದ ಗಂಭೀರ ವಿಮರ್ಶೆಗಳಿವೆ. ಮೂರನೇ ಭಾಗದಲ್ಲಿ ಮಹಾಕಾವ್ಯದ ಪಾತ್ರಗಳ ಅಭ್ಯಾಸಗಳಿವೆ. ಮಹಾಕಾವ್ಯದ ಕುರಿತಂತೆ ಭಿನ್ನ ಲೇಖಕರ ಭಿನ್ನದೃಷ್ಟಿಗಳ ಒಂದು ಸಮಗ್ರ ಅವಲೋಕನ ದೊರಕುವಂತೆ ಈ ಕೃತಿಯನ್ನು ಸಂಯೋಜಿಸಲಾಗಿದೆ. ಅಭಿನಂದನಾ ಗ್ರಂಥಕ್ಕೆಂದೇ ಲೇಖನಗಳನ್ನು ಬರೆಸದೆ ಬೇರೆ ಬೇರೆ ಸಂದರ್ಭಗಳಲ್ಲಿ ಬರೆಯಲ್ಪಟ್ಟ ಲೇಖನಗಳನ್ನು ಆಯ್ಕೆ ಮಾಡಿ ಸಂಪಾದಿಸಿರುವುದರಿಂದ ಈ ಗ್ರಂಥದ ವಿಮರ್ಶೆಯು ಅಭಿನಂದನಾರೂಪಿ ಆಗಿರದೆ; ಬೇರೆಲ್ಲ ವಿಮರ್ಶೆಯಂತೆಯೆ ಇದೆ.

ಎರಡು ದಿನಗಳ ಕಾರ್ಯಕ್ರಮ ಏರ್ಪಾಟುಮಾಡಿ ಕುವೆಂಪು ಕೃತಿಗಳ ಗಾಯನ-ವಾಚನ-ಅಭಿನಯಗಳನ್ನು ಆಯೋಜಿಸುವುದರ ಜೊತೆಗೆ ಶ್ರೀರಾಮಾಯಣದರ್ಶನವನ್ನು ಮೈಸೂರಿನ ಮುಖ್ಯ ಬೀದಿಗಳಲ್ಲಿ ಆನೆಯ ಮೇಲಿಟ್ಟು ಮೆರವಣಿಗೆ ಮಾಡುವ ಕಾರ್ಯಕ್ರಮವನ್ನು ಸನ್ಮಾನ ಸಮಿತಿಯು ಆಯೋಜಿಸಿ-ನಡೆಸಿದೆ. ವಿಶೇಷವೆಂದರೆ ಶ್ರೀಕೃಷ್ಣ ಆಲನಹಳ್ಳಿ (ಎಂ.ಎ. ವಿದ್ಯಾರ್ಥಿ) ಸಂಪಾದಕರಾಗಿರುವ ಇಲ್ಲಿ ಸಾಹಿತ್ಯದ ಅಭಿಮಾನಪೂರ್ವಕ ಅನುಸಂಧಾನ ಮತ್ತು ವಸ್ತುನಿಷ್ಠ ವಿಮರ್ಶೆಗಳೆರಡೂ ಒಟ್ಟಿಗೆ ಸಂಭವಿಸಿವೆ.

ಸಹ್ಯಾದ್ರಿ (2799) ಗಂಗೋತ್ರಿಯ ನಂತರ ಪ್ರಕಾಟವಾದ ಇನ್ನೊಂದು ಬೃಹತ್ ಅಭಿನಂದನಾ ಗ್ರಂಥ. ಕುವೆಂಪು ಅವರ 72ನೇ ಜನ್ಮದಿನೋತ್ಸವದ ನೆನಪಿಗೆ ಅರ್ಪಿಸಲಾಗಿರುವ ಗ್ರಂಥ. ಇಲ್ಲಿ 72 ಲೇಖಕರ 74 ಲೇಖನಗಳಿವೆ. ಪಾತ್ರದೃಷ್ಟಿ, ಪ್ರಕಾರದೃಷ್ಟಿ, ಪರಿಕರದೃಷ್ಟಿ, ಕೃತಿದೃಷ್ಟಿ, ಸ್ತ್ರೀದೃಷ್ಟಿ, ವರ್ಗದೃಷ್ಟಿ, ವಿವಿಮರ್ಶಾದೃಷ್ಟಿ, ಒಡನಾಟದೃಷ್ಟಿ, ತೌಲನಿಕದೃಷ್ಟಿ, ಅನ್ಯಜ್ಞಾನದೃಷ್ಟಿ, ವಸ್ತುದೃಷ್ಟಿ, ಸಂವೇದನಾದೃಷ್ಟಿ, ಕವಿಕೇಂದ್ರಿತ ದೃಷ್ಟಿ ಹೀಗೆ ಹತ್ತು ಹಲವು ದೃಷ್ಟಿಯ ವಿಮರ್ಶಾಲೇಖನಗಳು ಇಲ್ಲಿವೆ. ಅಭಿನಂದನಾರೂಪಿ, ಪ್ರತಿಭಾಣರೂಪಿ, ಗುಣಗ್ರಹಣರೂಪಿ, ವಸ್ತುನಿಷ್ಟ, ವಿವರಣಾತ್ಮಕ, ಸಮೀಕ್ಷಾ ರೂಪಿ ಹೀಗೆ ಎಲ್ಲ ರೀತಿಯ ವಿಮರ್ಶೆಗಳೂ ಇಲ್ಲಿವೆ. ಕುವೆಂಪು ಅವರ ಮಲೆನಾಡಿನ ಚಿತ್ರಗಳು, ಖಂಡಕಾವ್ಯ, ಕಥೆಗಳ ಬಗ್ಗೆ ಅಷ್ಟಾಗಿ ವಿಮರ್ಶೆಗಳು

ಇಲ್ಲಿ ಇಲ್ಲ. ಮಿಕ್ಕ ಪ್ರಕಾರಗಳ ಬಗ್ಗೆ ವಿಫುಲವಾದ ವಿಮರ್ಶೆ ಇಲ್ಲಿ ಇದೆ. ಒಟ್ಟಾರೆ ಇಲ್ಲಿನ ವಿಮರ್ಶೆಯು ಬಹುಮುಖಿಯಾಗಿದೆ. ಕುವೆಂಪು ಕುರಿತ ಸಮಗ್ರನೋಟ ಕೊಡುವಂತೆ ಈ ಗ್ರಂಥ ಸಂಪಾದಿತವಾಗಿದೆ. ಕುವೆಂಪು ಅವರ ಎಲ್ಲ ಅಭಿನಂದನಾ ಗ್ರಂಥಗಳಲ್ಲೂ ಕರ್ನಾಟಕದ ಎಲ್ಲ ಕಡೆಯ ವಿಮರ್ಶಕರೂ ಸರಿಸುಮಾರು ಲೇಖನಗಳನ್ನು ನೀಡಿದ್ದಾರೆ. ಆದರೆ ಮೈಸೂರು ಸೀಮೆಯ ಲೇಖಕರ ಪ್ರಾತಿನಿಧ್ಯ ಡಾಳಾಗಿ ಕಾಣಿಸುವಷ್ಟು ಹೆಚ್ಚಾಗಿದೆ. ಸಮಾಜದ ಆರೋಗ್ಯಕ್ಕಾಗಿ ಅವಿರತವಾಗಿ ದುಡಿದ ಲೇಖಕನಿಗೆ ಉಪಕೃತವಾದ ಜನರು ಅಭಿನಂದನೆಯನ್ನು ಪ್ರತಿಯಾಗಿ ಸಲ್ಲಿಸುವುದು ಅವರ ಕರ್ತವ್ಯ ಎಂಬ ಆಶಯ ಈ ಗ್ರಂಥದ್ದಾಗಿದೆ. (ನೋಡಿ: 2799 ಮೂರನೆ ರಕ್ಷಾ ಪುಟ)

ಕುವೆಂಪು ಹುಟ್ಟೂರೆಂಬ ಕಾರಣಕ್ಕೆ ಚಿಕ್ಕಮಗಳೂರಿನಿಂದ ಒಂದು ಅಭಿನಂದನಾ ಗ್ರಂಥ ಬಂದಿರುವುದು ಬಿಟ್ಟರೆ ಮಿಕ್ಕೆಲ್ಲವೂ ಮೈಸೂರಿನಿಂದಲೇ ಬಂದಿವೆ. ಆದರೆ ವಿಮರ್ಶೆಗೆ ಪ್ರಾದೇಶಿಕ ಗುಣವೇನೂ ಅಂಟಿಬಂದಿಲ್ಲ. ಇಲ್ಲಿನ ವಿಮರ್ಶೆಯಲ್ಲಿ ಪ್ರಾದೇಶಿಕ ಗುಣ ಇಲ್ಲ. (ಸಾಹಿತ್ಯಕ್ಕೆ ಇರುವಂತೆ ನಮ್ಮಲ್ಲಿ ವಿಮರ್ಶೆಗೆ ಪ್ರಾದೇಶಿಕ ಗುಣ ಇಲ್ಲ) ವಿಮರ್ಶಕರ ಪ್ರಾತಿನಿಧ್ಯದಲ್ಲಿ ಮಾತ್ರ ಪ್ರಾದೇಶಿಕ ತಾರತಮ್ಯ ಇದೆ. ಅಲ್ಲದೆ ಕುವೆಂಪುಗೆ ಅಭಿನಂದನೆ ಗ್ರಂಥಗಳನ್ನು ಅರ್ಪಿಸಲು ಮಂಚೂಣಿಯಲ್ಲಿರುವವರು ಬಹುಪಾಲು ಎಲ್ಲರೂ ಕುವೆಂಪು ಶಿಷ್ಯರೇ ಆಗಿದ್ದಾರೆ. ಅಭಿನಂದನಾ ರೂಪಿ ವಿಮರ್ಶೆ-ಸಮಾರಂಭ-ಗಾಯನ-ವಾಚನ-ಶ್ರವಣ-ಅಭಿನಯ-ದರ್ಶನ-ಇತ್ಯಾದಿಗಳಿಗೂ ಗುರುಶಿಷ್ಯ ಸಂಬಂಧಕ್ಕೂ ನಮ್ಮ ವಿಮರ್ಶಾ ಸಂಸ್ಕೃತಿಯಲ್ಲಿ ಒಂದು ಬಿಡಿಸಲಾಗದ ಬಂಧ ಇರುವಂತೆ ಕಾಣುತ್ತದೆ. ಸಂಬಂಧಿಕತೆಯ ರಾಜಕಾರಣ, ಸಾಂದರ್ಭಿಕತೆಯ ರಾಜಕಾರಣಗಳು ಈ ವಿಮರ್ಶೆಯನ್ನು ರೂಪಿಸಿ ಬೆಳೆಸಿವೆ. ವಸ್ತುನಿಷ್ಠ ವಿಮರ್ಶೆ ಇದ್ದರೂ ಗುಣಗ್ರಹಣ ಮತ್ತು ಸಮರ್ಥನಾ ಧಾಟಿಯ ವಿಮರ್ಶೆಯೇ ಇಲ್ಲಿ ಅಧಿಕವಾಗಿ ಸೃಷ್ಟಿಯಾಗಿದೆ. ವಿಶೇಷವೆಂದರೆ ಕುವೆಂಪು ಸ್ಮರಣೆ-ನಮನ-ಅಭಿನಂದನೆಗಳಲ್ಲಿ ಸಹಜವೇ ಎಂಬಂತೆ ಜಾತಿಪ್ರೇಮವೂ (ಶೂದ್ರಪ್ರಜ್ಞೆ?) ಸಾಕಷ್ಟು ಕಾಣಿಕೆ ನೀಡಿದೆ.

ಕುವೆಂಪು ನಾಟಕ ಚಕ್ರ-ಸವಿನೆನಪು (2604) 1967ರಲ್ಲಿ ಬೆಂಗಳೂರಿನಲ್ಲಿ ನಡೆದ ಕುವೆಂಪು ನಾಟಕೋತ್ಸವದ ಸವಿನೆನಪಿಗೆ ಹೊರತಂದಿರುವ ನೆನಪಿನ ಸಂಚಿಕೆ. ಇದಕ್ಕೆ ಅಭಿನಂದನ ಗ್ರಂಥದ ಸ್ವರೂಪ ಇಲ್ಲ. ನಾಟಕಗಳ ಕುರಿತ ಒಂದು ವಿಮರ್ಶಾ ಲೇಖನ (1408) ಮತ್ತು ಕುವೆಂಪು ನಾಟಕಗಳ ಸಂಕ್ಷಿಪ್ತ ಕಥಾರೂಪಗಳು ಇಲ್ಲಿವೆ. ಮಿಕ್ಕಂತೆ ನಾಟಕೋತ್ಸವದ ವಿವರಗಳಿವೆ. ಕವಿಶೈಲ ನೆನಪಿನ ಸಂಚಿಕೆಯು (2520) 1973ರಲ್ಲಿ ಕುವೆಂಪು ವಿದ್ಯಾವರ್ಧಕ ಟ್ರಸ್ಟಿನಿಂದ ಪ್ರಕಟವಾಗಿರುವ ಸಾಹಿತ್ಯ ಪತ್ರಿಕೆಯ ಮೊದಲ ಸಂಚಿಕೆ. ಇದನ್ನು ಸಂಪಾದಕರು ಸ್ಮರಣ ಸಂಚಿಕೆ ಎಂದೇ ಕರೆದಿದ್ದಾರೆ. ಕುವೆಂಪು ಸಾಹಿತ್ಯ ಕುರಿತ ಐದು ವಿಮರ್ಶಾ ಲೇಖನಗಳೂ, ಟ್ರಸ್ಟಿನ ಬಗ್ಗೆ ಮಾಹಿತಿ ನೀಡುವ ಒಂದು ಲೇಖನವೂ, 1952ರಿಂದ 1972ರವರೆಗೆ ಕುವೆಂಪುಗೆ ಅರ್ಪಿಸಿದ ಎರಡು ಅಭಿನಂದನ ಗ್ರಂಥಗಳ ಸಿದ್ಧತೆ ವಿವರ ಮತ್ತು ಟ್ರಸ್ಟಿನ ಮನವಿಗಳಲ್ಲಿ ಕೆಲವನ್ನು ಇಲ್ಲಿ ಮುದ್ರಿಸಲಾಗಿದೆ. ಟ್ರಸ್ಟಿನ ಕುರಿತಾದ ಲೇಖನ ಹೊರತುಪಡಿಸಿದರೆ ಕುವೆಂಪು ಸಾಹಿತ್ಯದ ವಿಮರ್ಶಾ ಲೇಖನಗಳ ಸಂಪಾದಿತ ಕಿರುಹೊತ್ತಿಗೆ ಇದಾಗಿದೆ.

ಉದಯರವಿ (2495) ಕುವೆಂಪು ಅವರ 75ನೆ ಹುಟ್ಟು ಹಬ್ಬದ ನೆನಪಿನ ಸಂಚಿಕೆ. ಇಲ್ಲಿ ಕುವೆಂಪು ಸಾಹಿತ್ಯದ ಕುರಿತ ಕೆಲ ವಿಮರ್ಶಾ ಲೇಖನಗಳೂ, ಒಡನಾಟ ಕಥನಗಳೂ ಇವೆ. ಮಿಕ್ಕಂತೆ ಹಾರೈಕೆ, ಹರಕೆ, ಜಾಹಿರಾತುಗಳಿವೆ. ಟ್ರಸ್ಟಿನ ಕಾರ್ಯಗಳ ಬಗ್ಗೆ ವಿವರಗಳಿವೆ. ಅಭಿನಂದನಾ ಸಂಚಿಕೆಯ ಲಕ್ಷಣಗಳು ಇದಕ್ಕಿವೆ. ರಾಷ್ಟ್ರಕವಿ ನೆನಪಿನ ಸಂಚಿಕೆ (2730) 1982ರಲ್ಲಿ ಪ್ರಕಟವಾದ ಕುವೆಂಪು ಅವರ 77ನೇ ಜನ್ಮೋತ್ಸವದ ನೆನಪಿನ ಸಂಚಿಕೆ. ಕುವೆಂಪು ಟ್ರಸ್ಟಿನ ಜಮೀನಿನಲ್ಲಿ ಕುವೆಂಪು ವಸತಿ ವಿದ್ಯಾಲಯ ಶಂಕುಸ್ಥಾಪನೆ ಮತ್ತು 77ನೇ ಹುಟ್ಟುಹಬ್ಬ ಆಚರಣೆಯ ಸಲುವಾಗಿ ಈ ಸಂಚಿಕೆ ರೂಪಗೊಂಡಿದೆ. ನೆನಪಿನ ದೋಣಿಯ ಬಗ್ಗೆ ಎರಡು ಪರಿಚಯಾತ್ಮಕ-ಜೀವನಚಿತ್ರಣ ರೂಪಿ ವಿಮರ್ಶೆಗಳಿವೆ. ಮಿಕ್ಕಂತೆ ಸಂಚಿಕೆಯಲ್ಲಿ ಹಾರೈಕೆ, ಹರಕೆ, ಜಾಹಿರಾತುಗಳು ತುಂಬಿಕೊಂಡಿವೆ.

ವಿಶ್ವಮಾನವ ಕುವೆಂಪು ನೂರು (2754) ಶ್ರೀರಂಗಪಟ್ಟಣದ ಕನ್ನಡ ಸಾಹಿತ್ಯ ಪರಿಷತ್ ಪ್ರಕಟಿಸಿರುವ ಶತಮಾನೋತ್ಸವ ನೆನಪಿನ ಸಂಚಿಕೆ. ಇಲ್ಲಿ 27 ಲೇಖನಗಳು ಮತ್ತು ಕವನಗಳಿವೆ. ಒಡನಾಟ ಕಥನಗಳು, ವಿಮರ್ಶಾ ಲೇಖನಗಳಿಂದ ಇದೊಂದು ಚಿಕ್ಕ ಅಭಿನಂದನಾ ಗ್ರಂಥದಂತೆಯೇ ಇದೆ. ಇವು ಕೆಲವು ಮಾತ್ರ. ಕುವೆಂಪು ಬಗ್ಗೆ ಇನ್ನೂ ಹಲವಾರು ಸ್ಮರಣ ಸಂಚಿಕೆಗಳಿವೆ. ಕುವೆಂಪು ನಮನ, ಯುಗದ ಕವಿ ನಮನ,

ಕವಿದರ್ಶನ ಮುಂತಾದ ಹಲವು ಕೃತಿಗಳು ಶ್ರದ್ಧಾಂಜಲಿ, ಸ್ಮರಣ ರೂಪಿಗಳೇ ಆಗಿವೆ. ಅವನ್ನೆಲ್ಲ ಇಲ್ಲಿ ಅವಲೋಕಿಸಿಲ್ಲ. ಒಟ್ಟಾರೆ ಅಭಿನಂದನಾ ಗ್ರಂಥಗಳ ಮತ್ತು ಸ್ಮರಣ ಸಂಚಿಕೆಗಳ ವಿಮರ್ಶೆಗಳಿಗೂ ಅಂತಹ ವ್ಯತ್ಯಾಸವೇನೂ ಇಲ್ಲ. ಅಭಿನಂದನಾ ರೂಪಿಯಾದ-ಅಭಿಮಾನಪೂರ್ವಕವಾದ ವಿಮರ್ಶೆಯೇ ಇಲ್ಲಿ ಸಂಭವಿಸಿದೆ. ಕುವೆಂಪು ಸಾಹಿತ್ಯದ ಅನುಸಂಧಾನವನ್ನು ಒಂದು ಸಾಂಸ್ಕೃತಿಕ ಚಟುವಟಿಕೆಯಾಗಿ-ಸಾಮುದಾಯಿಕ ನಾಡ ಹಬ್ಬವೆಂಬಂತೆ ನಮ್ಮವರು ಆಚರಣೆಗಳ ಮೂಲಕ ಮಾಡಿರುವ ದಾಖಲೆಗಳು ಇವಾಗಿವೆ.

ವಿಮರ್ಶಾ ಸಂಪುಟಗಳ ಸಂಪಾದನೆಗಳಿಗು ಅಭಿನಂದನಾ ಗ್ರಂಥಗಳ ಸಂಪಾದನೆಗು ಇಲ್ಲಿ ಅಂತಹ ದೊಡ್ಡ ಪ್ರಮಾಣದ ವ್ಯತ್ಯಾಸ ಇಲ್ಲ. ಹೆಸರುಗಳು ಬೇರೆ ಅಷ್ಟೆ. ಸನ್ನಿವೇಶಗಳು ಬೇರೆ ಅಷ್ಟೆ. ಕೆಲವು ಪತ್ರಿಕೆಗಳು ವಿಶೇಷ ಸಂಚಿಕೆಗಳನ್ನು ಪ್ರಕಟಿಸಿವೆ. ಈ ವಿಶೇಷ ಸಂಚಿಕೆಗಳಿಗು ಅಭಿನಂದನಾ ಗ್ರಂಥಗಳಿಗು ಗುಣದಲ್ಲಿ ಸ್ವರೂಪದಲ್ಲಿ ಅಂತಹ ವ್ಯತ್ಯಾಸವೇನೂ ಇಲ್ಲ. ಗಾತ್ರದಲ್ಲಿ ಕೆಲವೊಮ್ಮೆ ವ್ಯಾತ್ಯಾಸವಾಗಬಹುದು. ಈ ಎಲ್ಲ ಸಂಪಾದನೆಗಳಲ್ಲಿ ಕುವೆಂಪು ಬಗೆಗಿನ ಪ್ರೀತಿ ಗೌರವಗಳು ವಿಮರ್ಶೆಯ ರೂಪದಲ್ಲಿ ಪ್ರಕಟವಾಗಿವೆ ಎನ್ನುವುದನ್ನು ಬಿಟ್ಟರೆ ಮಿಕ್ಕಂತೆ ಸಂಪಾದನಾ ರೂಪಿ ವಿಮರ್ಶೆಗು ಇತರ ವಿಮರ್ಶೆಗೂ ಅಂತಹ ವ್ಯತ್ಯಾಸ ಇಲ್ಲ. ಭಿನ್ನ ಭಿನ್ನ ಅನುಸಂಧಾನಗಳು ಭಿನ್ನ ಭಿನ್ನ ಸಂದರ್ಭಗಳಲ್ಲಿ ಪ್ರಕಟವಾಗಿವೆ. ಅಭಿನಂದನೆ-ವಿಶೇಷ ಪುರವಣೆ-ಸ್ಮರಣ ಸಂಚಿಕೆ-ಸಂಪಾದನೆ ಈ ಎಲ್ಲ ಕಡೆಗು ಸಂಪಾಧಕರು-ಸಮಿತಿಗಳು ಇದ್ದೇ ಇರುತ್ತವೆ. ಕೆಲವೊಮ್ಮೆ ಸಮಾರಂಭಗಳು ಇರುತ್ತವೆ. ಹಾಗಾಗಿ ಇಲ್ಲಿ ಸಂಪಾಧಕರ ಅಭಿರುಚಿ ಮತ್ತ ಸಾಂದರ್ಭಿಕತೆಯ ರಾಜಕಾರಣಗಳು ವಿಮರ್ಶೆಯಲ್ಲಿ ಎದ್ದು ಕಾಣುತ್ತವೆ. ಇನ್ನೊಂದು ಅಂಶ ಇಲ್ಲಿ ಗಮನಾರ್ಹ. 1. ಕುವೆಂಪು ಆಪ್ತ ವಲಯದವರ ಅಭಿನಂದನೆ-ಸ್ಮರಣ ಸಂಚಿಕೆ-ಸಂಪಾಧನೆಗಳಿಗು ಇತರರ ಸಂಪಾಧನೆಗಳಿಗು ಗುಣ-ಸ್ವರೂಪದಲ್ಲಿ ವ್ಯತ್ಯಾಸ ಇದೆ. 2. ಕುವೆಂಪು ಮರಣಾನಂತರದ ವಿಮರ್ಶೆಯ ಸ್ವರೂಪಕ್ಕೂ ಮುಂಚಿನ ವಿಮರ್ಶೆಯ ಸ್ವರೂಪಕ್ಕೂ ಪರಸ್ಪರ ಗುಣಾತ್ಮಕ ವ್ಯಾತ್ಯಾಸ ಎದ್ದು ಕಾಣುತ್ತದೆ. ಇದಕ್ಕೆ ಮುಖ್ಯವಾಗಿ ಮೂರು ಕಾರಣ ಇರಬಹುದು. 1. ಕುವೆಂಪು ಬದುಕಿದ್ದ ಸಮಕಾಲೀನ ಸಾಂದರ್ಭಿಖತೆ ಮತ್ತು ಆಪ್ತ ಬಳಗದವರ ಧೋರಣೆ ವಿಮರ್ಶೆಯಲ್ಲಿ ನಿಯಂತ್ರಕ ಪ್ರಜ್ಞೆಯಾಗಿ ಕೆಲಸ ಮಾಡಿದೆ. 2. ಕುವೆಂಪು ಮರಣಾನಂತರ ಸಮಕಾಲೀನತೆಯಿಂದ ಬಿಡಿಸಿಕೊಂಡ ಕಾಲದ ಅಂತರ ವಿಮರ್ಶೆಗೆ ಸಾಧ್ಯವಾಗಿದೆ ಮತ್ತು ತಲೆಮಾರಿನ ಅಂತರವೂ ವಿಮರ್ಶೆಯ ಸ್ವರೂಪದಲ್ಲಿ ಗುಣ-ಸ್ವರೂಪದಲ್ಲಿ ಬದಲಾವಣೆಗೆ ಕಾರಣವಾಗಿದೆ. 3. ಕುವೆಂಪು ಸಾಹಿತ್ಯದ ಕುರಿತ ಜನಸ್ಪಂದನ ಕೂಡ ವಿಮರ್ಶೆಯ ಮೇಲೆ ಪರಿಣಾಮ ಬೀರಿದೆ. ಹಾಗಾಗಿ ಭಿನ್ನ ಕೋನಗಳಿಂದ ಕುವೆಂಪುವನ್ನು ಆಸ್ವಾದಿಸುವ, ಗುಣ ಗ್ರಹಿಸುವ, ಸಮರ್ಥಿಸುವ ನೆಲೆಯಿಂದ ಭಿನ್ನ ಕೋನಗಳಿಂದ ಪರೀಕ್ಷಿಸುವ-ಪರಿಶೀಲಿಸುವ, ವ್ಯಾಖ್ಯಾನಿಸುವ, ಮೌಲ್ಯೀಕರಿಸುವ ನೆಲೆಗೆ ಚಲಿಸಿದೆ. ಇದು ನಮ್ಮ ವಿಮರ್ಶೆಯ ಎರಡು ಭಿನ್ನ ಕಾಲಘಟ್ಟಗಳ ಸ್ಥಿತಿ ಅಲ್ಲ. ಎರಡು ಭಿನ್ನ ವಿನ್ಯಾಸಗಳ ಸ್ಥಿತಿ. ಇವೆರಡರಲ್ಲೂ ಒಂದೊಂದು ಸಂದರ್ಭದಲ್ಲಿ ಒಂದೊಂದು ಮೇಲುಗೈ ಸಾಧಿಸುತ್ತ ನಡೆದಿವೆ. ಇಲ್ಲಿ ಇನ್ನೊಂದು ಮಾತನ್ನು ಗಮನಿಸಬೇಕು. ಕುವೆಂಪು ಮರಣಿಸಿದ ಸಂದರ್ಭದಲ್ಲಿ ಮತ್ತು ಆನಂತರದ ಸಾವಿನ ಶೋಕ ಆರದಿರುವ ಕಾಲಮಾನದಲ್ಲಿ ಬಂದ ಸ್ಮರಣ ಸಂಚಿಕೆ-ವಿಶೇಷ ಪುರವಣೆಗಳಲ್ಲಿ ವಿಮರ್ಶೆಯು ಕೇವಲ ಗುಣಗಾನ-ಶ್ರದ್ಧಾಂಜಲಿ ರೂಪಿಯಾಗಿ ಮಾತ್ರ ಬಂದಿಲ್ಲ. ಸತ್ವಪರೀಕ್ಷಾ ಧಾಟಿಯಲ್ಲೂ ಬಂದಿದೆ. ಈ ಮೇಲಿನ ಎಲ್ಲ ಮಾತುಗಳ ಸಮರ್ಥನೆಗೆ ನಿದರ್ಶನವೆಂಬಂತೆ ಪುಸ್ತಕ ಪ್ರಪಂಚ, ಕನ್ನಡ ನುಡಿಗಳನ್ನು (2506, 2698, 2699) ಶೂದ್ರ ಮತ್ತು ಸಂಕ್ರಮಣ (2593, 2794) ವಿಶೇಷಾಂಕಗಳನ್ನು ಅಕ್ಕಪಕ್ಕ ಇಟ್ಟು ನೋಡಿದರೆ ವ್ಯತ್ಯಾಸ ತಿಳಿಯುತ್ತದೆ. ಅವುಗಳ ಕಾಲಮಾನ ಮತ್ತು ಬಳಗವೇ ಬೇರೆ. ಇವುಗಳ ಕಾಲಮಾನ ಮತ್ತು ಬಳಗವೇ ಬೇರೆ. ತಲೆಮಾರುಗಳೂ ಬೇರೆ. ಸಂವೇದನೆಗಳು, ಅನುಸಂಧಾನಗಳೂ ಭಿನ್ನ.

ಎಲ್ಲ ಅಭಿನಂದನಾ ವಿಮರ್ಶೆಯು ನಿರ್ಧಿಷ್ಟವಾದ ಸಂದರ್ಭ-ಬಳಗಗಳ ಉತ್ಪನ್ನವೇ ಆಗಿದೆ. ಇಲ್ಲಿ ಒಟ್ಟಾರೆಯಾಗಿ ಒಂದು ಸಾಮಾನ್ಯ (ಪ್ಯಾಟರ್ನು) ವಿನ್ಯಾಸ ಇರುವಂತೆ ಕಾಣುತ್ತದೆ. 1. ಕುವೆಂಪು ಸಾಹಿತ್ಯದ ವಿಮರ್ಶೆಯನ್ನು ಉತ್ಪಾದಿಸುವ ಲೇಖಕನಿಗೆ ತೋರುವ ನಿಜವಾದ ಗೌರವ ಎಂಬ ಭಾವನೆಯಿಂದ 'ಉತ್ತಮ' ವಿಮರ್ಶೆಯನ್ನು ಪ್ರಕಟಿಸುವುದು. 2. ನಾಳಿನ ಪೀಳಿಗೆಗೆ ಲೇಖಕನ ವ್ಯಕ್ತಿತ್ವವನ್ನು-ಬಾಳ್ವೆಯನ್ನು ಪರಿಚಯಿಸುವುದು ಅಗತ್ಯವಾದುದು ಎಂಬ ಭಾವನೆಯಿಂದ ಒಡನಾಟ ಕಥನವನ್ನು ಪ್ರಕಟಿಸುವುದು. ಗುರು-ಶಿಷ್ಯ ಸಂಬಂಧ, ಸ್ನೇಹ ಸಂಬಂಧ, ಪ್ರಾಸಂಗಿಕ ಒಡನಾಟಗಳ ಬರೆಹವೂ ಕೂಡ ಕವಿಯ ಸಾಹಿತ್ಯಕ ವ್ಯಕ್ತಿತ್ವದ ಬೇರೆ ಬೇರೆ ಮುಖಗಳನ್ನು ತೋರುತ್ತದೆಂಬ ಭಾವನೆ ಇಲ್ಲಿದೆ. 3. ಅಭಿನಂದಿಸುವ

ಲೇಖಕನ ಸಾಹಿತ್ಯದ ವಿಮರ್ಶೆಯ ಜೊತೆಗೆ ನಾಡಿನ ಸಾಹಿತ್ಯ-ಸಂಸ್ಕೃತಿಯ ಕುರಿತಾದ ಪರಾಮರ್ಶನ ಲೇಖನ-ಅನ್ಯ ವಿಮರ್ಶಾ ಲೇಖನಗಳನ್ನು ಪ್ರಕಟಿಸುವುದು. ಹೀಗೆ ಈ ಮೂರು ಮುಖಗಳ ವಿನ್ಯಾಸವು ಇಲ್ಲಿ ಸಾಮಾನ್ಯವಾದ ವಿನ್ಯಾಸವಾಗಿದೆ. ಈ ವಿನ್ಯಾಸದ ಹಿನ್ನೆಲೆಯಲ್ಲಿ ಲೇಖಕನ ಪ್ರಕಾರಗಳನ್ನು, ಕೃತಿಗಳ ಪರಿಶೀಲನೆಯನ್ನು ಪ್ರಾತಿನಿಧಿಕವಾಗಿ ಒಳಗೊಳ್ಳುವ, 2. ಹೊಸ ಪೀಳಿಗೆ-ಸಮಕಾಲೀನ ಸಮಾಜ ಕುವೆಂಪು ಸಾಹಿತ್ಯವನ್ನು ಎದುರುಗೊಳ್ಳುವ ಬಗೆಯನ್ನು ದಾಖಲಿಸುವ, 3. ಸಾಹಿತ್ಯ ವಿಮರ್ಶೆ ಮತ್ತು ವ್ಯಕ್ತಿತ್ವ-ಜೀವನಗಳನ್ನು ಅಖಂಡವಾಗಿ ಪರಿಭಾವಿಸುವ, 4. ಕುವೆಂಪು ಸಾಹಿತ್ಯದ ಅಧ್ಯಯನಕ್ಕೆ ಬೇಕಾದ ಪರಾಮರ್ಶನ ಆಕರ ಗ್ರಂಥಗಳನ್ನು ನಿರ್ಮಿಸುವ ಹಲವು ಉದ್ದೇಶಗಳು ಇವೆ. ನಮ್ಮಲ್ಲಿನ ಅಭಿನಂದನಾ ಗ್ರಂಥಗಳ ಪರಂಪರೆಯಲ್ಲಿ ಲೇಖಕನ ಸಾಹಿತ್ಯದ ಹೊರಾತಾಗಿ ನಾಡಿನ ಸಾಹಿತ್ಯ-ಸಂಸ್ಕೃತಿಯ ಕುರಿತ ಆಕರ ಗ್ರಂಥಗಳನ್ನು ನಿರ್ಮಿಸುವ ಪ್ರಜ್ಞೆ ಹೆಚ್ಚಾಗಿ ಕಂಡು ಬರುತ್ತದೆಯಾದರೂ ಕುವೆಂಪು ವಿಚಾರದಲ್ಲಿ ಈ ವಿಮರ್ಶೆಯು ಹೆಚ್ಚು ಕುವೆಂಪು ಕೇಂದ್ರಿತವಾಗಿದೆ.

**5.2.8. ಇತರೆ ರೂಪಗಳು**

ಇದುವರೆಗೆ ಚರ್ಚಿಸಿದ ರೂಪಗಳಷ್ಟೇ ಅಲ್ಲದೆ; ನಿಘಂಟು ರೂಪಿ, ನಮನ ರೂಪಿ, ಮುನ್ನುಡಿ-ಪ್ರಸ್ತಾವನಾ ರೂಪಿ, ಪತ್ರರೂಪಿ, ವಿವಿಮರ್ಶಾ ರೂಪಿ, ಸಂದರ್ಶನ ರೂಪಿ ಹೀಗೆ ಇನ್ನೂ ಹಲವಾರು ರೂಪಗಳು ಇಲ್ಲಿ ಇವೆ. ಸೂಕ್ತಿ ಸಂಗ್ರಹ, ಸಾರಾಂಶೀಕರಣ, ಗದ್ಯಾನುವಾದ. ಸರಳರೂಪಿ, ರಂಗರೂಪಿ, ನಿಘಂಟು ರೂಪಿ ಇವುಗಳಿಗೆ ಸಾಹಿತ್ಯವನ್ನು ಇನ್ನಷ್ಟು ಮತ್ತಷ್ಟು ಓದುಗರಿಗೆ ತಲುಪಿಸುವ ಉದ್ದೇಶ ಇರುವಂತೆಯೇ. ಸಾಹಿತ್ಯದ ಅಧ್ಯಯನಕ್ಕೆ ಪರಿಕರಗಳನ್ನು ನಿರ್ಮಾಣಮಾಡುವ ಉದ್ದೇಶವೂ ಇದೆ. ಸಾಹಿತ್ಯದ ಅಧ್ಯಯನಕ್ಕೆ ಛಂದಸ್ಸು, ಮೀಮಾಂಸೆ, ನಿಘಂಟು ಇತ್ಯಾದಿ ಪರಿಕರಗಳನ್ನು ನಿರ್ಮಾಣ ಮಾಡುವುದು ನಮ್ಮ ಪ್ರಾಚೀನರ ಒಂದು ಜನಪ್ರಿಯ ಕ್ರಿಯೆ. ಕುವೆಂಪು ಸಾಹಿತ್ಯದ ಬಗೆಗೂ ಇಂತಹ ಕೆಲಸಗಳು ನಡೆದಿವೆ. ಪ್ರೊ.ದೇಜಗೌ ಅವರು ಕುವೆಂಪು ಅವರ ಎಲ್ಲ ಸಾಹಿತ್ಯ ಕೃತಿಗಳನ್ನು ಶ್ರದ್ಧೆಯಿಂದ ಅವಲೋಕಿಸಿ, ಅರ್ಥ ನೀಡಬೇಕು ಅನ್ನಿಸಿದ ಅನೇಕ ಶಬ್ದಗಳಿಗೆ ಅರ್ಥ ನೀಡಿ ನಿಘಂಟೊಂದನ್ನು (2607) ರಚಿಸಿದ್ದಾರೆ. ಕುವೆಂಪು ಸಾಹಿತ್ಯವನ್ನು ಅಭ್ಯಾಸ ಮಾಡುವ ಅನ್ಯಸಂಸ್ಕೃತಿಯ ಜನರಿಗೆ-ಅನುವಾದಕರಿಗೆ; ಪ್ರಾದೇಶಿಕ ಪದಗಳ ಅರ್ಥ ಗೊತ್ತಿಲ್ಲದವರಿಗೆ ಈ ನಿಘಂಟು ತುಂಬಾ ಉಪಯುಕ್ತವಾದುದು.

ಸಾಹಿತ್ಯ ಕೃತಿಗಳಲ್ಲಿ ಪದಗಳು ಪ್ರಯೋಗವಾಗಿರುವ ಪ್ರಯೋಗ ಭಾಗಗಳನ್ನು ಆಯ್ದು ನೀಡಿ; ಸಾಹಿತ್ಯ ಸಂದರ್ಭದಲ್ಲಿ ಪದಗಳ ಪ್ರಯೋಗಕ್ಕೆ ಇರುವ ಅರ್ಥವನ್ನು; ಸಾಂಸ್ಕೃತಿಕವಾದ ನೆಲೆಯಲ್ಲಿನ ಮತ್ತು ನಿಘಂಟಿನ ನೆಲೆಯಲ್ಲಿಯೂ ಪದಗಳಿಗೆ ಇರುವ ಅರ್ಥಗಳನ್ನು ಇಲ್ಲಿ ನೀಡಲಾಗಿದೆ. ಕುವೆಂಪು ಅವರ ಪದಪ್ರಯೋಗ-ಪದನಿರ್ಮಾಣ ಕ್ರಮಗಳನ್ನು ಅಧ್ಯಯನ ಮಾಡುವವರಿಗು ಕೂಡ ಇದೊಂದು ಆಕರ ಗ್ರಂಥವಾಗಿದೆ. ಸಾಹಿತ್ಯದ ಓದು-ಆಸ್ವಾದನೆಗೆ ಮಾತ್ರವೆ ಅಲ್ಲದೆ ಭಾಷಿಕ ನೆಲೆಯ ಅಧ್ಯಯನಕ್ಕೂ ಇದು ಒದಗುತ್ತದೆ. 2001ನೇ ಇಸವಿಯಲ್ಲಿ ಈ ಗ್ರಂಥ ಪ್ರಕಟವಾಗಿದೆ. ತಡವಾಗಿಯಾದರೂ ಈ ಕಾರ್ಯ ಆಗಿರುವುದು ಸ್ತುತ್ಯಾರ್ಹ. ಆದರೆ ಕುವೆಂಪು ಬದುಕಿರುವಾಗಲೇ ಈ ಕೆಲಸ ಆಗಿ; ಇದು ಅವರ ಪರಿಶೀಲನೆಗೂ ಒದಗಿದ್ದರೆ ಇದರಲ್ಲಿನ ನ್ಯೂನತೆಗಳನ್ನು ಲೇಖಕರೇ ಸರಿಪಡಿಸುವ ಅವಕಾಶವಿತ್ತು.

ಕುವೆಂಪು ಸಾಹಿತ್ಯದಲ್ಲಿ ಪ್ರಯೋಗವಾಗಿರುವ ಪದಗಳ ನಿಘಂಟಿನ ರಚನೆಯು ಅವರ ಸಾಹಿತ್ಯದ ವಿಮರ್ಶೆಯ ಒಂದು ಬಗೆಯೂ ಹೌದು. ಗ್ರಾಮೀಣ ಪದಗಳನ್ನು ಲೇಖಕ ಬಳಸುವ ಕ್ರಮ; ಹೊಸ ಪದಗಳನ್ನು ಆತ ಟಂಕಿಸುವ ಕ್ರಮ; ಹಳೆ ಪದಗಳನ್ನು ಹೊಸ ಹೊಸ ಅರ್ಥಗಳಲ್ಲಿ ಪ್ರಯೋಗಿಸುವ ಕ್ರಮ ಹೀಗೆ ಪದವಿಜ್ಞಾನದ ಮತ್ತು ಭಾಷಾವಿಜ್ಞಾನದ ಹಲವು ನೆಲೆಯ ವಿಶ್ಲೇಷಣೆಗಳಿಗೆ ಇಲ್ಲಿ ಅವಕಾಶವಿದೆ. ಏನೇ ಆದರೂ ಪ್ರಧಾನವಾಗಿ ಸಾಹಿತ್ಯದ ಬಗೆಗಿನ ಪ್ರೀತಿ ಗೌರವ ಇಂತಹ ಕಡೆ ಎದ್ದು ಕಾಣುತ್ತದೆ.

ಕುವೆಂಪು ತೀರಿಕೊಂಡಾಗ, ಅವರ ಶತಮಾನೋತ್ಸವ ಸಂದರ್ಭದಲ್ಲಿ, ಅವರ ಸಾವಿನ ನಂತರ ಪ್ರತಿ ವರ್ಷ ಆಚರಿಸುವ ಪುಣ್ಯ ತಿಥಿಯ ಸಂದರ್ಭದಲ್ಲಿ ಶ್ರದ್ಧಾಂಜಲಿ ರೂಪಿಯಾಗಿ/ನಮನ ರೂಪಿಯಾಗಿ ನಮ್ಮಲ್ಲಿ ಸಾಕಷ್ಟು ವಿಮರ್ಶೆ ಸೃಷ್ಟಿಯಾಗಿದೆ. ಸೃಷ್ಟಿಯಾಗುತ್ತಿದೆ. ಕುವೆಂಪು ಸಿರಿಮುಡಿಗೆ ನುಡಿ ನಮನ, ಶ್ರೀ ಕುವೆಂಪು ಅವರಿಗೆ ನುಡಿದೀವಿಗೆ ಈ ರೀತಿಯ ಹಲವು ಬರಹಗಳಲ್ಲಿ ಕುವೆಂಪು ಅವರ ವ್ಯಕ್ತಿತ್ವ, ಸಾಧನೆ,

ಸಾಹಿತ್ಯದ ಅಗ್ಗಳಿಕೆಗಳನ್ನು ಕೊಂಡಟಡುವ; ಗೌರವದಿಂದ ಸ್ಮರಿಸುವ, ಗೌರವಾರ್ಪಣೆ ಮಾಡುವ ಧಾಟಿಯ ಪ್ರತಿಕ್ರಿಯೆಗಳು ಸೃಷ್ಟಿಯಾಗಿವೆ. ಒಡನಾಟಕಥನಗಳೂ, ವರ್ಣನಾತ್ಮಕ ವಿಮರ್ಶೆಗಳೂ ಸೃಷ್ಟಿಯಾಗಿವೆ. ಕುವೆಂಪು ಈ ನಾಡು ನುಡಿಗೆ ನೀಡಿರುವ ಕಾಣಿಕೆ–ಕೊಡುಗೆ ಏನು ಎಂಬ ವ್ಯಾಖ್ಯಾನಗಳೂ ಸೃಷ್ಟಿಯಾಗಿವೆ. ಇಲ್ಲೆಲ್ಲ ಕುವೆಂಪು ಕುರಿತ ಪ್ರೀತಿ–ಗೌರವಗಳೇ ಪ್ರಕಟವಾಗಿವೆ. ಗುಣಗಾನದ ಜೊತೆಗೆ ಕುವೆಂಪು ಸಾಹಿತ್ಯದ ಶಕ್ತಿ–ಪ್ರಸ್ತುತತೆಗಳನ್ನು ವಸ್ತುನಿಷ್ಠವಾಗಿ ವಿವರಿಸುವ ಬರಹಗಳೂ ಸೃಷ್ಟಿಯಾಗಿವೆ. ಸಾಂದರ್ಭಿಕತೆಯ ರಾಜಕಾರಣವನ್ನು ಮೀರಿದ ಬರಹಗಳೂ, ಸಾಂದರ್ಭಿಕತೆಯ ರಾಜಕಾರಣದಿಂದ ರೂಪಿತಗೊಂಡ ಬರಹಗಳೂ ಈ ನಮನ ರೂಪಿ ವಿಮರ್ಶೆಯಲ್ಲಿ ಪ್ರಕಟವಾಗಿವೆ.

ನಮ್ಮಲ್ಲಿ ಪ್ರಕಟವಾಗಿರುವ ಹಲವು ರೂಪಗಳಲ್ಲಿ ವಿವಿಮರ್ಶೆ ಕೂಡ ಒಂದು. ಇದಕ್ಕೆ ಒಂದು ಪಂಥವಾಗುವ ವ್ಯಾಪ್ತಿ ಇದೆ. ಎಲ್ಲ ವಿಮರ್ಶೆಗಳಲ್ಲಿ ಅಂತರ್ಗತವಾಗಿ ಇರುವ ಒಂದು ಮನೋಧರ್ಮವಾಗಿ ಮತ್ತು ಪ್ರತ್ಯೇಕ ಪ್ರಕಾರವಾಗಿ ಹೀಗೆ ಎರಡೂ ಬಗೆಗಳಲ್ಲಿ ಇದು ಪ್ರಕಟವಾಗಿದೆ. ಅನ್ಯವಿಮರ್ಶೆಯ ನಿಲುವುಗಳನ್ನು ಖಂಡಿಸುವ; ಸ್ವವನ್ನು ಮಂಡಿಸುವ ಮನೋಧರ್ಮ ನಮ್ಮ ಬಹುಪಾಲು ಎಲ್ಲ ದೃಷ್ಟಿ, ಪಂಥ, ಮಾರ್ಗಗಳಲ್ಲೂ ಇದೆ. ಹಾಗೆಯೇ ಪ್ರತ್ಯೇಕವಾಗಿ ಅನ್ಯರ ವಿಮರ್ಶೆಯನ್ನು ವಿಮರ್ಶಿಸುವ, ಅಧ್ಯಯನಕ್ಕೆ, ಅವಲೋಕನಕ್ಕೆ ಗುರಿಪಡಿಸುವ ಆಚರಣೆಯೂ ನಮ್ಮಲ್ಲಿದೆ. ಹಾಗಾಗಿ ವಿವಿಮರ್ಶೆಯು ನಮ್ಮಲ್ಲಿನ ಒಂದು ಲಕ್ಷಣವೂ ಹೌದು, ವಿಮರ್ಶಾ ರೂಪವೂ ಹೌದು. (ಇದನ್ನು ಪ್ರತ್ಯೇಕವಾಗಿ ಮೂರನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.)

ಪತ್ರರೂಪಿ ವಿಮರ್ಶೆಯು ಕೂಡ ನಮ್ಮಲ್ಲಿ ಸಾಕಷ್ಟು ಸೃಷ್ಟಿಯಾಗಿದೆ. ಕುವೆಂಪುಗೆ ಬೇರೆಯವರು ಬರೆದಿರುವ ಮತ್ತು ಕುವೆಂಪು ಬೇರೆಯವರಿಗೆ ಬರೆದಿರುವ ನೂರಾರು ಪತ್ರಗಳಿವೆ. ಇವುಗಳನ್ನೆಲ್ಲ ಸಂಪಾದಿಸಿ ಪ್ರಕಟಿಸಿದರೆ ಇವೇ ಎರಡು ಬೃಹತ್ ಸಂಪುಟಗಳಾಗಬಹುದು. ಕೆಲವು ಪತ್ರಗಳನ್ನು ಹರಿಹರಪ್ರಿಯ ಅವರು ಈಗಾಗಲೇ ಸಂಕಲಿಸಿ ಪ್ರಕಟಿಸಿದ್ದಾರೆ. (ನೋಡಿ: 2609) ಕವಿಗೆ ಬರೆದಿರುವ ಕೆಲವು ಪತ್ರಗಳ ಮಾದರಿಗಳನ್ನು ಈ ಅದ್ಯಯನದಲ್ಲಿ ಕೂಡ ನೀಡಲಾಗಿದೆ. ಕುವೆಂಪು ಮತ್ತು ಇತರರ ನಡುವಿನ ಪತ್ರವ್ಯವಹಾರಗಳಲ್ಲಿ ಕುವೆಂಪು ಕಾಲದ ಸಾಹಿತ್ಯ ಸಂಸ್ಕೃತಿ, ಸಮಾಜ, ಒಡನಾಟವಿವರ, ಕಾಲಧರ್ಮ, ಸಾಂದರ್ಭಿಕತೆ–ಸಂಬಂಧಿಕತೆಗಳು ಹೀಗೆ ಅಸಂಖ್ಯ ಸಂಗತಿಗಳು ವ್ಯಕ್ತವಾಗುತ್ತವೆ. ಇವೆಲ್ಲವುಗಳ ಈ ಅಂಗವಾಗಿಯೇ ವಿಮರ್ಶೆಯು ವ್ಯಕ್ತವಾಗಿದೆ. ಪತ್ರಗಳೆಲ್ಲ ಕವಿಯೊಂದಿಗಿನ ವ್ಯವಹಾರ ಆದುದರಿಂದ ಅನ್ಯ ವಿಮರ್ಶೆಗಿಂತ ಭಿನ್ನವಾದ ಆಪ್ತ ಅನುಸಂಧಾನಗಳೇ ಇಲ್ಲಿ ಇರುತ್ತವೆ. ಇವುಗಳ ಅಧ್ಯಯನವೇ ಒಂದು ಪ್ರತ್ಯೇಕ ಸಾಂಸ್ಕೃತಿಕ ಅಧ್ಯಯನವಾಗಬಲ್ಲದು. ಹಾಗಾಗಿ ಇದನ್ನು ಇಲ್ಲಿ ಲಂಬಿಸಿಲ್ಲ. ಆದರೆ ಈಗೀಗ ಮೀಡಿಯಾಗಳ ಭರಾಟೆಯಲ್ಲಿ, ಬ್ಲಾಗುಗಳ, ಈ–ಮೇಲುಗಳ ಭರಾಟೆಯಲ್ಲಿ ಪತ್ರರೂಪಿ ವಿಮರ್ಶೆಯು ನಶಿಸುತ್ತಿದೆ. ಹೊಸ ಹೊಸ ಮೀಡಿಯಾ ರೂಪಗಳು ಅದರ ಬದಲಿಗೆ ಹುಟ್ಟುತ್ತಿವೆ.

ಕುವೆಂಪು ಸಾಹಿತ್ಯದ ಸಂಪಾದಿತ ಕೃತಿಗಳಿಗೆ, ಅಧ್ಯಯನ ಗ್ರಂಥಗಳಿಗೆ, ಕುವೆಂಪು ಕುರಿತ ವಿಮರ್ಶಾ ಲೇಖನಗಳ ಸಂಪಾದಿತ ಕೃತಿಗಳಿಗೆ, ಸೂಕ್ತಿರೂಪಿ–ಸರಳರೂಪಿ–ಅಭಿನಂದನ ರೂಪಿ ವಿಮರ್ಶಾ ಕೃತಿಗಳ ಸಂಪಾದನೆಗಳಿಗೆ, ಸ್ಮರಣ ಸಂಚಿಕೆಗಳಿಗೆ ಬರೆದಿರುವ ಮುನ್ನುಡಿ, ಬೆನ್ನುಡಿ, ಪ್ರಸ್ತಾವನೆ, ಪೀಠಿಕೆ, ಸಂಪಾದಕೀಯಗಳನ್ನೆಲ್ಲ ಒಟ್ಟಾರೆಯಾಗಿ ಮುನ್ನುಡಿ ರೂಪಿ ವಿಮರ್ಶೆ ಎಂದು ಕರೆಯಬಹುದು. ಇಂತಹ ಮುನ್ನುಡಿ–ಪೀಠಿಕೆಗಳಲ್ಲಿ ಅವಲೋಕನ ಮಾದರಿ, ಸಮೀಕ್ಷಾ ಮಾದರಿ, ವ್ಯಾಖ್ಯಾನ ಮಾದರಿ, ಶ್ರೇಣೀಕರಣ ಮಾದರಿ, ಗುಣಗ್ರಹಣ ಮಾದರಿ, ವರ್ಣನಾತ್ಮಕ–ವಿವರಣಾತ್ಮಕ–ಪರಿಚಯಾತ್ಮಕ ಮಾದರಿ ಹೀಗೆ ಹಲವು ಮಾದರಿಯ ವಿಮರ್ಶೆಗಳು ಸಂಭವಿಸಿವೆ. ಸಂಪಾದನೆ, ಸಂಕಲನಗಳ ಕಾರಣ–ಉದ್ದೇಶಗಳನ್ನು ವಿವರಿಸುವ ಧಾಟಿ ಸಾಹಿತ್ಯದ ಸಂಪದನೆಗಳ ಪೀಠಿಕೆಗಳಲ್ಲಿ ಇದ್ದರೆ, ವಿಮರ್ಶಾ ಲೇಖಕರ ಗುಣ ಸಾಧನೆಗಳನ್ನು ಪರಿಚಯಿಸಿ ವ್ಯಾಖ್ಯಾನಿಸುವ ಮಾದರಿಯು ವಿಮರ್ಶಾ ಗ್ರಂಥಗಳ ಮುನ್ನುಡಿ–ಪೀಠಿಕೆಗಳಲ್ಲಿ ಇರುತ್ತದೆ. ಸಂಕಲಿತ ವಿಮರ್ಶಾ ಗ್ರಂಥಗಳಿಗೆ ಸಂಪಾದಕರೇ ಸಾಂದರ್ಭಿಕ ಕಾರಣ–ಉದ್ದೇಶಗಳನ್ನು ವಿವರಿಸಿದರೆ ಅನ್ಯರ ಗ್ರಂಥಗಳಿಗೆ ಬರೆದ ಮುನ್ನುಡಿಗಳಲ್ಲಿ ಹರಕೆ–ಹಾರೈಕೆ ಧಾಟಿಗಳೇ ಇರುತ್ತವೆ. 'ಕುವೆಂಪು ಕೃತಿವಿಮರ್ಶೆ' ಎಂಬ ಗ್ರಂಥವನ್ನು ಸಂಪಾದಿಸಿರುವ ಅರವಿಂದ ಮಾಲಗತ್ತಿ ಅವರು ತಮ್ಮ ಸಂಪಾದನೆಗೆ ಸುದೀರ್ಘ ಪ್ರಸ್ತಾವನೆ ಬರೆದು (2589) ಅಲ್ಲಿ ಕನ್ನಡ ವಿಮರ್ಶೆಯ ಚಾರಿತ್ರಿಕ ಅವಲೋಕನ ಮಾಡಿದ್ದಾರೆ. ಸುಧಾಕರ ಅವರ 'ಕುವೆಂಪು ಸಾಹಿತ್ಯ ಸಂವೀಕ್ಷಣೆ', (2654) ಎ.ಎಸ್.ವೇಣುಗೋಪಾಲರಾವ್ ಅವರ 'ಶ್ರೀ ಕುವೆಂಪು ಅವರ ಕಾವ್ಯದಲ್ಲಿ ವಾತ್ಸಲ್ಯ ಭಾವ' (2761) ಕೃತಿಗಳಿಗೆ ಮುನ್ನುಡಿಗಳನ್ನು ಬರೆದಿರುವ ದೇಜಗೌ ತಾವೇ

ಪ್ರತ್ಯೇಕ ವಿಮರ್ಶಾ ಲೇಖನಗಳಂತೆ ಮುನ್ನುಡಿಗಳನ್ನು ಬರೆದಿದ್ದಾರೆ. ಹೀಗೆ ಕೆಲವು ಕಡೆ ಮುನ್ನುಡಿ ರೂಪಿ ವಿಮರ್ಶೆಯು ನೆಪಕ್ಕೆ ಮುನ್ನುಡಿಯಂತೆ ಇರುತ್ತದೆ. ಆದರೆ ಅದಕ್ಕೂ ಬೇರೆ ವಿಮರ್ಶಾ ಲೇಖನಗಳಿಗು ಅಂತಹ ವ್ಯತ್ಯಾಸವೇನೂ ಇಲ್ಲವೆಂಬ ಲಕ್ಷಣವೂ ಅವುಗಳಿಗೆ ಇರುತ್ತದೆ. ಆಧುನಿಕ ಕನ್ನಡ ವಿಮರ್ಶೆಯಲ್ಲಿ ಮುನ್ನುಡಿ–ಬೆನ್ನುಡಿಗಳದ್ದೇ ಒಂದು ವಿಮರ್ಶಾ ಪಂಥ ಆಗುವಷ್ಟು ಇದು ಬೆಳೆದಿದೆ. ಈಗೀಗ ಹೊಸ ಲೇಖಕರಿಗಂತೂ ಇದೊಂದು ಅಗತ್ಯ ರಿಚುವಲ್ಲೆಂಬಂತೆ ಆಗಿಹೋಗಿದೆ. ಮುನ್ನುಡಿ ರೂಪಿ ವಿಮರ್ಶೆಯನ್ನೆ ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದಾದಷ್ಟು ವ್ಯಾಪ್ತಿ ಇದಕ್ಕೆ ಇದೆ. ಇವಲ್ಲದೆ ಇನ್ನೂ ಹಲವಾರು ವಿಮರ್ಶಾ ರೂಪಗಳು ನಮ್ಮ ವಿಮರ್ಶೆಯಲ್ಲಿ ಇವೆ. ಅವನ್ನೆಲ್ಲ ಇಲ್ಲಿ ಲಂಬಿಸಿಲ್ಲ. ಕುವೆಂಪು ಕುರಿತ ವಿಮರ್ಶೆಯಲ್ಲಿ ಕಂಡುಬರುವ ರೂಪಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ.

**5.3. ವಿಮರ್ಶೆಯ ಪಂಥಗಳು:**

ನಮ್ಮಲ್ಲಿ ಅನೇಕ ರೀತಿಯ ವಿಮರ್ಶಾ ಪಂಥಗಳು ಆಗಾಗ ಪ್ರಸ್ತಾಪವಾಗಿವೆ. ಬಳಕೆಯಾಗಿವೆ. ಪ್ರಾಯೋಗಿಕ ವಿಮರ್ಶೆ, ಅನ್ವಯಿಕ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ಅಭಿಜಾತ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ, ಆಂತರಿಕ/ಬಾಹ್ಯ ವಿಮರ್ಶೆ, ಮನಸ್‌ಶಾಸ್ತ್ರೀಯ ವಿಮರ್ಶೆ, ಸಮಾಜ ಶಾಸ್ತ್ರೀಯ ವಿಮರ್ಶೆ, ರೂಪನಿಷ್ಠ ವಿಮರ್ಶೆ, ರಸನಿಷ್ಠ ವಿಮರ್ಶೆ, ನಿರಚನವಾದಿ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ತೌಲನಿಕ ವಿಮರ್ಶೆ, ಪರಿಸರವಾದಿ ವಿಮರ್ಶೆ, ರಮ್ಯವಾದಿ ವಿಮರ್ಶೆ, ವಾಸ್ತವವಾದಿ ವಿಮರ್ಶೆ, ನವೋದಯ ವಿಮರ್ಶೆ, ನವ್ಯ ವಿಮರ್ಶೆ, ದಲಿತ ಬಂಡಾಯ ವಿಮರ್ಶೆ, ನೈತಿಕ ವಿಮರ್ಶೆ..ಇತ್ಯಾದಿ ಅನೇಕ ರೀತಿಯ ವಿಮರ್ಶಾಮಾರ್ಗ/ಪಂಥ/ಪ್ರಕಾರಗಳು ನಮ್ಮಲ್ಲಿ ಚಾಲ್ತಿಯಲ್ಲಿವೆ. ಇವೆಲ್ಲವೂ ಖಚಿತವಾದ ಪ್ರತ್ಯೇಕ ಲಕ್ಷಣಗಳನ್ನು ಹೊಂದಿ ಆಚರಣೆಗೆ ಗುರಿಯಾಗಿವೆಯೇ? ಬಹುತೇಕ ಇಲ್ಲ.

ಅಂತರ್‌ಶಿಸ್ತೀಯ ಅಧ್ಯಯನ, ತಳಸಂಸ್ಕೃತಿ ಅಧ್ಯಯನ, ಸಾಂಸ್ಕೃತಿಕ ಅಧ್ಯಯನ, ಮಹಿಳಾ ಅಧ್ಯಯನ, ಭಾಷಾಂತರ ಅಧ್ಯಯನ, ತೌಲನಿಕ ಅಧ್ಯಯನ ಹೀಗೆ ವಿಮರ್ಶೆಯ ಬದಲಾಗಿ ಅಧ್ಯಯನ ಎಂಬ ಪರಿಭಾಷೆಯೂ ನಮ್ಮಲ್ಲಿ ಸೃಷ್ಟಿಯಾಗಿದೆ. ಪಿಎಚ್.ಡಿ ಪದವಿಗಾಗಿ ನಡೆಯುವ ಸಾಹಿತ್ಯದ ಅಧ್ಯಯನಗಳನ್ನು ಸಂಶೋಧನೆ ಎಂಬ ಹೆಸರಿನಿಂದ ಕರೆಯುವ ನಮ್ಮಲ್ಲಿನ ಪರಿಪಾಟಕ್ಕೆ ಬದಲಿಯಾಗಿ ಈ 'ಅಧ್ಯಯನ'ವೆಂಬ ಪರಿಭಾಷೆಯನ್ನು ಬಳಸಲಾಗುತ್ತಿದೆ. ವಿಮರ್ಶೆ, ಅಧ್ಯಯನಗಳ ಸ್ಥಾನದಲ್ಲಿ ವಸಾಹತುವಾದ, ಪೌರ್ವಾತ್ಯವಾದ, ಆಧುನಿಕೋತ್ತರವಾದ, ರಚನಿಕವಾದ, ನಿರಚನವಾದ, ಸ್ತ್ರೀವಾದ, ನವಚಾರಿತ್ರಿಕವಾದ ಇಂತಹ 'ವಾದ' ರೂಪಿ ಪರಿಭಾಷೆಯೂ ನಮ್ಮಲ್ಲಿ ಬಳಕೆಯಲ್ಲಿದೆ. ಅಷ್ಟೇ ಅಲ್ಲ, ಇವೆಲ್ಲವುಗಳ ಜೊತೆಗೆ ವಾಚಕ ಸ್ಪಂದನ ಸಿದ್ಧಾಂತ, ಧ್ವನಿಸಿದ್ಧಾಂತ, ರಸ ಸಿದ್ಧಾಂತ, ರಸಪ್ರಸ್ಥಾನ, ಧ್ವನಿ ಪ್ರಸ್ಥಾನ ಇತ್ಯಾದಿಯಾಗಿ 'ಸಿದ್ಧಾಂತ', 'ಪ್ರಸ್ಥಾನ'ಗಳೆಂಬ ಪರಿಭಾಷೆಗಳೂ ಬಳಕೆಯಲ್ಲಿವೆ. ಅಲ್ಲದೆ, ದೇಸಿ ಓದು, ಕಥನ ಶಾಸ್ತ್ರೀಯ ಓದು, ವಾಚಕ ನಿಷ್ಠ ಓದು, ರೂಪನಿಷ್ಠ ಓದು, ನಿರಚನವಾದಿ ಓದು, ಮಾರ್ಕ್ಸ್‌ವಾದಿ ಓದು, ಸ್ತ್ರೀವಾದಿ ಓದು, ಹಸಿರು ಓದು ಇತ್ಯಾದಿಯಾಗಿ 'ಓದು' ಎಂಬ ಪರಿಭಾಷೆಯೂ ನಮ್ಮಲ್ಲಿ ಬಳಕೆಯಲ್ಲಿದೆ. ಕೃತಿಕೇಂದ್ರಿತ, ಲೇಖಕಕೇಂದ್ರಿತ, ಧ್ವನಿಕೇಂದ್ರಿತ, ರಸಕೇಂದ್ರಿತ ದೃಷ್ಟಿಯೆಂಬ ವಿಮರ್ಶಾ ಪರಿಭಾಷೆಯೂ ನಮ್ಮಲ್ಲಿ ಚಾಲ್ತಿಯಲ್ಲಿದೆ. ಅಲ್ಲದೆ ಜ್ಞಾನ ಮೀಮಾಂಸೆ, ಭಾಷಾ ಮೀಮಾಂಸೆ, ಸಾಹಿತ್ಯ ಮೀಮಾಂಸೆ, ಕಾವ್ಯ ಮೀಮಾಂಸೆ ಎಂಬಂತೆ 'ಮೀಮಾಂಸೆ' ಎಂಬ ಪರಿಭಾಷೆಯೂ ಬಳಕೆಯಲ್ಲಿದೆ. ಹೀಗೆ ವಿಮರ್ಶೆ, ಅಧ್ಯಯನ, ಓದು, ವಾದ, ಪ್ರಸ್ಥಾನ, ಸಿದ್ಧಾಂತ, ಮೀಮಾಂಸೆ, ಇವಲ್ಲದೆ ರೂಪ, ಪಂಥ, ಮಾರ್ಗ, ಹೀಗೆ ಹಲವಾರು ಪರಿಭಾಷೆಗಳು ನಮ್ಮಲ್ಲಿ ಮಾರ್ಗವೆಂಬ ಅರ್ಥದಲ್ಲಿ ಬಳಕೆಯಾಗಿವೆ.

ಇವೆಲ್ಲವುಗಳ ನಡುವೆ ಕೆಲವು ಪಂಥಗಳು ಬೇರೆ ಬೇರೆ ಪರಿಭಾಷೆಗಳಲ್ಲಿ ಪುನರಾವರ್ತನೆಯಾಗುತ್ತಲೂ, ಕೆಲವು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ರೂಪಾಂತರಿತವಾಗಿಯೂ ಕಾಣಿಸಿಕೊಳ್ಳುತ್ತವೆ. ಕೆಲವು ಹೆಸರಿಗಷ್ಟೆ ಇದ್ದು; ಕೆಲವು ಸಿದ್ಧಾಂತಗಳಾಗಿ–ತತ್ವಗಳಾಗಿ ಚಾಲ್ತಿಯಾಗಿವೆ. ಆಚರಣೆಯಲ್ಲಿ ಇಲ್ಲ. ಒಟ್ಟಂದದಲ್ಲಿ ಹೊಸಬರನ್ನು ಬೆಚ್ಚಿಬೀಳಿಸುವ ತತ್ವ–ಸಿದ್ಧಾಂತ–ಪಂಥ–ಓದುಗಳ ಕಗ್ಗಾಡೇ ನಮ್ಮಲ್ಲಿ ಸೃಷ್ಟಿಯಾಗಿದೆ. ಇವುಗಳಲ್ಲಿ ಕೆಲವು ಹೆಚ್ಚು ಬಳಕೆಯಾಗಿವೆ, ಕೆಲವು ಕಡಿಮೆ ಬಳಕೆಯಾಗಿವೆ, ಕೆಲವು ಪ್ರಯೋಗಕ್ಕಾಗಿ ಪ್ರಯೋಗವಾಗಿವೆ, ಕೆಲವು ನಾಮಮಾತ್ರವಾಗಿ ಚಾಲ್ತಿಯಾಗಿವೆ. ಹಾಗಾಗಿ ಕುವೆಂಪು ಸಾಹಿತ್ಯ ವಿಮರ್ಶೆಯಲ್ಲಿ ಪ್ರಯೋಗವಾಗಿರುವ ಕೆಲವನ್ನು ಮಾತ್ರ ಇಲ್ಲಿ ಅವಲೋಕಿಸಲಾಗುವುದು. ಒಂದೊಂದು ಮಾರ್ಗಗಳನ್ನೂ ಇಲ್ಲಿ ಪ್ರತ್ಯೇಕವಾಗಿ ವಿವರಿಸುವುದಿಲ್ಲ.

ಸರಿಸುಮಾರು 80ರ ದಶಕದವರೆಗೆ ಕುವೆಂಪು ಮೇಲೆ ಬಂದಿರುವ ವಿಮರ್ಶೆಯಲ್ಲಿ ಮೂರು ಮುಖ್ಯವಾದ ಧಾರೆಗಳಿವೆ. 1.ವರ್ಣನಾತ್ಮಕ ವಿಮರ್ಶೆ 2. ರೂಪನಿಷ್ಠ ವಿಮರ್ಶೆ 3. ಪ್ರಾಯೋಗಿಕ ವಿಮರ್ಶೆ. ಈ ಮೂರು ಮಾರ್ಗಗಳಲ್ಲಿ ಕುವೆಂಪು ಆಪ್ತ ವಲಯದವರು ವರ್ಣನಾತ್ಮಕ ಮತ್ತು ಪ್ರಾಯೋಗಿಕ ವಿಮರ್ಶೆಗಳನ್ನು ಹೆಚ್ಚಾಗಿ ಬಳಸಿದ್ದಾರೆ. ನವ್ಯರು ರೂಪನಿಷ್ಠ ವಿಮರ್ಶೆಯನ್ನು ಹೆಚ್ಚಾಗಿ ಬಳಸಿದ್ದಾರೆ. ಕುರ್ತಕೋಟಿ, ಜಿ.ಎಚ್.ನಾಯಕ, ಅನಂತಮೂರ್ತಿ, ನಾಡಿಗ, ಎಂ.ಜಿ.ಕೃಷ್ಣಮೂರ್ತಿ ಮೊದಲಾದವರು ರೂಪನಿಷ್ಠ ನೆಲೆಯಲ್ಲಿ ಸಾಹಿತ್ಯವು ಹೇಗೆ ರಚಿತವಾಗಿದೆ ಎಂಬ ಚರ್ಚೆಗಳನ್ನು ಬೆಳೆಸಿದ್ದಾರೆ. ಆಪ್ತರಾದ ದೇಜಗೌ, ಸುಧಾಕರ, ಎನ್.ಬೋರಲಿಂಗಯ್ಯ, ಸಿಪಿಕೆ, ಎಸ್.ವಿ.ಪರಮೇಶ್ವರ ಭಟ್ಟ, ಮಳಲಿ ವಸಂತಕುಮಾರ್ ಮೊದಲಾದವರು ನವ್ಯರ ನಿಲುವುಗಳನ್ನು ವಿರೋಧಿಸಿ ಲೇಖಕರನ್ನು ಸಮರ್ಥಿಸಲು ಹೊರಟಿದ್ದಾರೆ. ಅಂತಹ ಸಂದರ್ಭಗಳಲ್ಲಿ ವರ್ಣನಾತ್ಮಕ ವಿಮರ್ಶೆಯನ್ನು ಇವರೆಲ್ಲ ಹೆಚ್ಚಾಗಿ ಬಳಸಿದ್ದಾರೆ. ಸಾಹಿತ್ಯದ ಲಕ್ಷಣ, ಹೆಚ್ಚುಗಾರಿಕೆಗಳನ್ನು ವಿವರಿಸುವುದು; ಮಂಡಿಸುವುದು; ಆ ಮೂಲಕ ಲೇಖಕನನ್ನು ಸೋದಾಹರಣವಾಗಿ ಸಮರ್ಥಿಸುವುದು ಇಲ್ಲಿ ಮುಖ್ಯ ಲಕ್ಷಣ. ಕೆಲವೊಮ್ಮೆ ಸಾಹಿತ್ಯದ ಮರುನಿರೂಪಣೆ, ವಸ್ತು ವಿಶ್ಲೇಷಣೆ, ನೀತಿ-ತತ್ವ-ವೈಚಾರಿಕತೆಗಳನ್ನು ಕ್ರೋಡೀಕರಿಸಿ ಮರುಕಥಿಸುವ ಕೆಲಸವನ್ನೂ ಈ ವಿಮರ್ಶೆಯು ಮಾಡಿದೆ. ಎನ್.ಬೋರಲಿಂಗಯ್ಯ, ಎಚ್.ಎಂ.ಚೆನ್ನಯ್ಯ, ಶ್ರೀಕೃಷ್ಣ ಆಲನಹಳ್ಳಿ ಇಂತಹ ಕೆಲವರು ರೂಪನಿಷ್ಠ ಹತ್ಯಾರಗಳಿಂದಲೆ (ಬಂಧ, ಭಾಷೆ, ಕೇಂದ್ರ ಪ್ರಜ್ಞೆ, ಅಭಿವ್ಯಕ್ತಿ ಕ್ರಮ, ಪ್ರಕಾರದ ಶಿಲ್ಪ, ಕೃತಿ ಶಿಲ್ಪ ಇತ್ಯಾದಿ ಹತ್ಯಾರಗಳಿಂದಲೆ) ನವ್ಯರಿಗಿಂತ ಭಿನ್ನವಾದ ನಿಲುವುಗಳನ್ನು ತಳೆಯುತ್ತಾರೆ. ನವ್ಯರು ಯಾವ ನಿಲುವುಗಳಿಗೆ ತಲುಪುತ್ತಾರೋ ಅವಕ್ಕೆ ತದ್ವಿರುದ್ಧವಾದ ನಿಲುವುಗಳಿಗೆ ಇವರು ತಲುಪಿದ್ದಾರೆ. ಭಾಷೆ ಸಂಸ್ಕೃತಭೂಯಿಷ್ಠ, ಅದು ಅರ್ಥವಾಗುವುದಿಲ್ಲ ಮತ್ತು ಸಂವಹನವಾಗುವುದಿಲ್ಲ; ಕೇಂದ್ರಪ್ರಜ್ಞೆ, ಬಂಧಗಳು ಕಾದಂಬರಿಗಳಲ್ಲಿ ಇಲ್ಲ ಎಂಬಂಥ ತೀರ್ಮಾನಗಳನ್ನು ವಿರೋಧಿಸಿ ಇವೆಲ್ಲವೂ ಇವೆಯೆಂದು ಸಮರ್ಥಿಸಿದ್ದಾರೆ.

ರೂಪನಿಷ್ಠರು ಹೆಚ್ಚಾಗಿ ಕೃತಿಕೇಂದ್ರಿತವಾಗಿ ಚರ್ಚೆ ಬೆಳೆಸಿದ್ದಾರೆ. ಮತ್ತು ಬೇಂದ್ರೆ, ಅಡಿಗರ ಸಾಹಿತ್ಯ ರಚನಾ ಮಾರ್ಗಗಳನ್ನು ಮಾನದಂಡವಾಗಿ ಇಟ್ಟುಕೊಂಡು ಕುವೆಂಪುವನ್ನು ವಿಮರ್ಶಿಸಿದ್ದಾರೆ. ವರ್ಣನಾತ್ಮಕ ಮಾರ್ಗವನ್ನು ಸಾಕಷ್ಟು ಆಶ್ರಯಿಸಿದ ದೇಜಗೌ, ಸಿಪಿಕೆ, ಕೊ.ಚೆನ್ನಬಸಪ್ಪ, ಎಸ್.ವಿ.ಪರಮೇಶ್ವರ ಭಟ್ಟ ಇಂತಹ ವಿಮರ್ಶಕರು ಸಾಹಿತ್ಯವನ್ನು ಪರಿಚಯಿಸುವ-ಪ್ರಸ್ತುತಪಡಿಸುವ-ಗುಣಗ್ರಹಿಸುವ ನೆಲೆಯಲ್ಲಿ ವಿಮರ್ಶೆ ರಚಿಸಿದ್ದಾರೆ. ಅಧ್ಯಯನ, ಅಭ್ಯಾಸ, ನಿರೂಪಣೆ, ಪ್ರಸ್ತುತಪಡಿಸುವಿಕೆಯನ್ನು ವರ್ಣನಾತ್ಮಕ ವಿಮರ್ಶೆಯ ಲಕ್ಷಣಗಳಾಗಿಯೂ; ಪರೀಕ್ಷೆ, ಸ್ಥಾನನಿರ್ಣಯ, ಮೌಲ್ಯಮಾಪನ, ಆಶಯ-ಅಭಿವ್ಯಕ್ತಿಗಳ ಚರ್ಚೆ ಇತ್ಯಾದಿಗಳನ್ನು ರೂಪನಿಷ್ಠ ವಿಮರ್ಶೆಯ ಲಕ್ಷಣಗಳಾಗಿಯೂ ನಮ್ಮವರು ಬಳಸಿರುವುದು ಆಚರಣೆಯಿಂದ ತಿಳಿಯುತ್ತದೆ. ನಾವು ವರ್ಣನಾತ್ಮಕ ವಿಮರ್ಶೆಯನ್ನು ಮಾಡುತ್ತಿದ್ದೇವೆ ಎಂಬ ಅಥವಾ ನಾವು ರೂಪನಿಷ್ಠ ವಿಮರ್ಶೆಯನ್ನು ಮಾಡುತ್ತಿದ್ದೇವೆ ಎಂಬ ಎಚ್ಚರವು ಈ ಎರಡೂ ವಲಯದವರಲ್ಲಿ ಇಲ್ಲ ಎಂಬುದು ಇಲ್ಲಿ ಗಮನಾರ್ಹ.

ಈ ಎರಡೂ ವಲಯಗಳಲ್ಲಿ ಬಿಡಿ ಕೃತಿಗಳೇ ಹೆಚ್ಚಾಗಿ ಚರ್ಚೆಯ ಕೇಂದ್ರ ವಲಯಗಳಾಗಿವೆ. ಸಮಗ್ರ ದೃಷ್ಟಿಯು ಇಲ್ಲಿ ಗೈರುಹಾಜರಾಗಿದೆ. ಸಾಹಿತ್ಯವನ್ನು ಸಮಗ್ರ ದೃಷ್ಟಿಯಿಂದ ನೋಡುವ ವಿಮರ್ಶಾ ದೃಷ್ಟಿ ರೂಪನಿಷ್ಠ ಮಾರ್ಗದಲ್ಲಿ ಇಲ್ಲದಿದ್ದರೂ ಕುವೆಂಪು ಅವರ ಅಖಂಡ ದರ್ಶನ, ಸಮಗ್ರ ಜೀವನ ದೃಷ್ಟಿಗಳನ್ನು ನವ್ಯರು ಬಿಡಿ ಕೃತಿಗಳ ಮೂಲಕವೇ ತರ್ಕಿಸಲು ಯತ್ನಿಸಿದ್ದಾರೆ. ರೂಪನಿಷ್ಠರ ಇನ್ನೊಂದು ಮುಖ್ಯವಾದ ಲಕ್ಷಣವೆಂದರೆ: ತಾವು ನಂಬುವ ಪ್ರಕಾರ ಮೀಮಾಂಸೆಯ ಮೂಲಕ ಸಾಹಿತ್ಯಕೃತಿಯ ಶಿಲ್ಪ-ಕಟ್ಟಾಣಿಕೆಗಳನ್ನು ವ್ಯಾಖ್ಯಾನಿಸಿ ಲೇಖಕನನ್ನು ಮೌಲ್ಯೀಕರಿಸುವುದು. ಇಂತಹ ಮೌಲ್ಯಮಾಪನಗಳಲ್ಲಿ ಸಾಹಿತ್ಯದ ವಸ್ತುಸಾಮಗ್ರಿಗಿಂತ ಸಾಹಿತ್ಯದ ರಚನಾವಿನ್ಯಾಸ(ಅಭಿವ್ಯಕ್ತಿ ಕ್ರಮ) ಭಾಷೆ, ಶೈಲಿಗಳೇ ಮುಖ್ಯವಾಗುತ್ತವೆ. ಸಾಹಿತ್ಯದ ಉಪಯುಕ್ತತೆ, ಪ್ರಸ್ತುತತೆ, ಸಾಮಾಜಿಕ ಮಹತ್ವಗಳಿಗಿಂತ ರಸಾನುಭವ-ಸೌಚಿದರ್ಯಾನುಭವಗಳೇ ಮುಖ್ಯವಾಗುತ್ತವೆ. ಆದರೆ 90ರ ದಶಕದಲ್ಲಿ ಈ ಆದ್ಯತೆಗಳು ಸಂಸ್ಕೃತಿನಿಷ್ಠ, ಮಾರ್ಕ್ಸ್‌ವಾದಿ, ಸ್ತ್ರೀವಾದಿ, ಆಧುನಿಕೋತ್ತರ ನೆಲೆಗಳಿಂದ ಪಲ್ಲಟಗೊಂಡಿವೆ. ಲೇಖಕನ ಸಾಂಸ್ಕೃತಿಕ ಸಂದರ್ಭ, ಚಾರಿತ್ರಿಕ ಸಂದರ್ಭ, ವರ್ಗಪ್ರಜ್ಞೆ, ಲಿಂಗರಾಜಕಾರಣ, ಕಾಲಧರ್ಮ ಇತ್ಯಾದಿಗಳು ಸಾಹಿತ್ಯ ಸೃಷ್ಟಿಯ ಹಿನ್ನೆಲೆಯಲ್ಲಿ ಪರಿಗಣನೆಗೆ ಗುರಿಯಾಗಿವೆ. ಸಾಹಿತ್ಯದ ಪ್ರಸ್ತುತತೆ, ಪರಂಪರೆಯ ಪರಿಷ್ಕಾರ ಪ್ರಜ್ಞೆ, ಪ್ರತಿರೋಧ ಪ್ರಜ್ಞೆ, ಉಪಯುಕ್ತತೆ, ಸಾಹಿತ್ಯದ ಸಾಮಾಜಿಕ ಮಹತ್ವ ವೈಚಾರಿಕತೆ ಇತ್ಯಾದಿಗಳು ಆದ್ಯತೆ ಪಡೆದಿವೆ.

ಕುವೆಂಪು ಕವನಗಳು ಅನ್ವಯಿಕ ವಿಮರ್ಶೆ(2568) ಎಂಬ ಒಂದು ಪುಸ್ತಕವೇ ಕುವೆಂಪು ಕವಿತೆಗಳ ಪ್ರಾಯೋಗಿಕ ವಿಮರ್ಶೆಯ ಪ್ರಯೋಗವಾಗಿ ಪ್ರಕಟವಾಗಿದೆ. ಇಲ್ಲಿ ಕುವೆಂಪು ಅವರ ಆಯ್ದ ಕವನಗಳ ಪ್ರಾಯೋಗಿಕ ವಿಮರ್ಶೆ ಇದೆ. ಅನ್ವಯಿಕ ವಿಮರ್ಶೆಗೂ ಪ್ರಾಯೋಗಿಕ ವಿಮರ್ಶೆಗೂ ಅರ್ಥವ್ಯಾಖ್ಯಾನ ರೂಪಿ ವಿಮರ್ಶೆಗೂ ಇಲ್ಲಿ ವ್ಯತ್ಯಾಸವಿಲ್ಲದಂತೆ ವಿಮರ್ಶೆಯನ್ನು ಸೃಷ್ಟಿಸಲಾಗಿದೆ. ಪ್ರಾಯೋಗಿಕ ವಿಮರ್ಶೆಯ ಹೆಸರಿನಲ್ಲಿ ಒಂದೆರಡು ಪ್ರಯೋಗಗಳು ಬಿಡಿ ಕವಿತೆಗಳನ್ನು ಆಶ್ರಯಿಸಿ ನಡೆದಿವೆ. (1341, 1342) ಇವಲ್ಲದೆ, ಬಿಡಿ ಕೃತಿ, ಕವಿತೆಗಳ ಅನೇಕ ವಿಮರ್ಶೆಗಳೂ ಸೃಷ್ಟಿಯಾಗಿವೆ. ಇಲ್ಲೆಲ್ಲ ಅರ್ಥ, ಭಾವ, ಧ್ವನಿ, ಪದಪ್ರಯೋಗ, ಭಾಷೆ ಇತ್ಯಾದಿಗಳನ್ನು ಆಧರಿಸಿಯೇ ಚರ್ಚೆ ಬೆಳೆಸಲಾಗಿದೆ. ಕೃತಿನಿಷ್ಠ, ಲೇಖಕನಿಷ್ಠ ದೃಷ್ಟಿಗಳೂ ಪ್ರಾಯೋಗಿಕ ವಿಮರ್ಶೆಯ ಮತ್ತು ರೂಪನಿಷ್ಠ ವಿಮರ್ಶೆಯ ಮಾರ್ಗಗಳೂ ಕಲಸಿಕೊಂಡು ಪ್ರಯೋಗವಾಗಿವೆ. ರೂಪನಿಷ್ಠ ವಿಮರ್ಶೆಯನ್ನೆ ನವ್ಯ ವಿಮರ್ಶೆ ಎಂದೂ, ನವೋದಯ ವಿಮರ್ಶೆಯನ್ನೆ ವರ್ಣನಾತ್ಮಕ ಮತ್ತು ಪ್ರಾಯೋಗಿಕ ಹಾಗೂ ಅಭಿಜಾತ ಮಾರ್ಗಗಳ ಮಿಶ್ರಣವೆಂದು ಆಚರಣೆಗಳಲ್ಲಿ ಹಲವರು ಭಾವಿಸಿದ್ದಾರೆ. ಇಲ್ಲೆಲ್ಲ ವಿಮರ್ಶೆಯು ಬಿಡಿ ಕೃತಿಗಳ ಅನುಸಂಧಾನವಾಗಿದ್ದು; ಕೃತಿಯ ಅಭಿವ್ಯಕ್ತಿ ಕ್ರಮ, ಅರ್ಥಸಾಧ್ಯತೆಗಳು, ಪದ-ಪದಗುಚ್ಛಗಳ ಧ್ವನಿಶಕ್ತಿಗಳು, ಶೈಲಿ ಪಾತ್ರಗಳ ಅಭ್ಯಾಸಗಳು, ಕೃತಿ-ಕಥನದ ಆಶಯಗಳು ಚರ್ಚೆಯ ಕೇಂದ್ರವಾಗಿವೆ.

80ರ ದಶಕದ ನಂತರದಲ್ಲಿ ಡಿ.ಆರ್.ನಾಗರಾಜ್(718), ಬಿ.ಕೃಷ್ಣಪ್ಪ(698), ದೇವಯ್ಯ ಹರವೆ(2344), ಕೆ.ಎಸ್.ಭಗವಾನ್(635), ಜಿ.ರಾಮಕೃಷ್ಣ(1099), ರಹಮತ್ ತರೀಕೆರೆ(717, 67), ಮೊಗಳ್ಳಿ ಗಣೇಶ್(488), ಬಿ.ಎಂ.ಪುಟ್ಟಯ್ಯ(693), ಬೆಸಗರಹಳ್ಳಿ ರಾಮಣ್ಣ(700), ಚಂದ್ರಶೇಖರ ನಂಗಲಿ(687,63), ಎಚ್.ಕೆ.ವೆಂಕಟೇಶ್(451), ಧರಣಿದೇವಿ ಮಾಲಗತ್ತಿ (1074), ಮನು ಬಳಿಗಾರ್(1092), ಮಲ್ಲಿಕಾ ಘಂಟಿ(1079), ಎಸ್.ಶಿವಾನಂದ(1085), ಆರ್ಕೆ ಮಣಿಪಾಲ(813), ಮುರಾರಿ ಬಲ್ಲಾಳ(1030), ಮನಜ(66), ಹಿ.ಶಿ.ರಾಮಚಂದ್ರೇಗೌಡ(2345), ಲೋಕೇಶ ಅಗಸನಕಟ್ಟೆ(2343), ಕೆ.ಆರ್.ದುರ್ಗಾದಾಸ್ (699) ಮೊದಲಾದವರು ವರ್ಣ-ವರ್ಗ ದೃಷ್ಟಿ, ಸಾಮಾಜಿಕ-ಸಾಂಸ್ಕೃತಿಕ ಚರಿತ್ರೆ ದೃಷ್ಟಿಗಳಿಂದ ಕುವೆಂಪುವನ್ನು ವಿಮರ್ಶಿಸಿದ್ದಾರೆ. ಇದನ್ನೆ ಮಾರ್ಕ್ಸ್‌ವಾದಿ ವಿಮರ್ಶೆ ಎಂದು ಕರೆಯಬಹುದು. ಪುರೋಹಿತಶಾಹಿ ಮತ್ತು ಶೂದ್ರ ಶಾಹಿಗಳ ನಡುವಿನ ಸಂಘರ್ಷಗಳ ಕಥನವಾಗಿ ಕುವೆಂಪು ಸಾಹಿತ್ಯವನ್ನು ಇವರೆಲ್ಲ ನೋಡಿದ್ದಾರೆ. ಬ್ರಾಹ್ಮಣ ಶೂದ್ರ ಎಂಬ ಎರಡು ವರ್ಗ ಸಂಘರ್ಷಗಳು ಶೂದ್ರ-ದಲಿತ ಎಂಬ ಎರಡು ವರ್ಗಗಳ ನಡುವಿನ ಸಮಘರ್ಷವಾಗಿಯೂ ಈ ವಿಮರ್ಶೆಯಲ್ಲಿ ಬೆಳೆದಿದೆ. ಆಳು ಬದುಕಿನ ವಿನ್ಯಾಸಗಳು, ಶೂದ್ರಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಮಾನವೀಯ ಮೌಲ್ಯಗಳು, ಸಾಮಾಜಿಕ ಅಸ್ತ್ರವಾಗಿ ಕುವೆಂಪು ಸಾಹಿತ್ಯ, ಹೆಗ್ಗಡಿತಿ ಮತ್ತು ಬಂಡಾಯ ಇಂತಹ ವಿಮರ್ಶೆಗಳಲ್ಲಿ ವಿಮರ್ಶೆಯು ಬಹುಪಾಲು ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ರೂಪಿತವಾಗಿದೆ. ಬಂಡಾಯ ಪಂಥದ ಹಿನ್ನೆಲೆಯಲ್ಲಿ ಪ್ರತಿಭಟನೆ, ಪ್ರತಿರೋಧದ ಶೋಧವಾಗಿ ಕೂಡ ವಿಮರ್ಶೆಯು ಇಲ್ಲಿ ಬೆಳೆದಿದೆ. ಈ ದೃಷ್ಟಿಯು ಸಾಹಿತ್ಯವನ್ನು ಗತಿಶೀಲ(ಚಲನಶೀಲ) ಸಮಾಜದ ಪ್ರಾತಿನಿಧಿಕ ಚಿತ್ರಣವಾಗಿ ಗ್ರಹಿಸುತ್ತದೆ. ಲೇಖಕನನ್ನು ವರ್ಗದ ಪ್ರತಿನಿಧಿಯಾಗಿ, ಕಾಲಘಟ್ಟವೊಂದರ ಸಂವೇದನೆಯ ಪ್ರತಿನಿಧಿಯಾಗಿ, ಸಾಂಸ್ಕೃತಿಕ ಒತ್ತಡಗಳ ಉತ್ಪನ್ನವಾಗಿ ನೋಡುವ ದೃಷ್ಟಿಕೋನ ಇಲ್ಲಿ ಪ್ರಧಾನವಾಗಿದೆ. ಈ ದೃಷ್ಟಿಯಲ್ಲಿ ರಸನಿಷ್ಠ, ಕೃತಿನಿಷ್ಠ, ರೂಪನಿಷ್ಠ ದೃಷ್ಟಿಗಳು ಬದಿಗೆ ಸರಿದಿವೆ. ಸಾಂಸ್ಕೃತಿಕ ಪ್ರತಿಧೀಕರಣವೆಂಬಂತೆ ಸಾಹಿತ್ಯವನ್ನು ಇವರ ವಿಮರ್ಶೆಯು ಭಾವಿಸಿದೆ. ಸಾಹಿತ್ಯವನ್ನು ಇತಿಹಾಸದ ನೆರಳಾಗಿ, ಸಮಾಜದ ನೆರಳಾಗಿ, ಸಮುದಾಯದ ದನಿಯಾಗಿ ನೋಡುವ ದೃಷ್ಟಿಯು-ಸಾಹಿತ್ಯವನ್ನು ಇತಿಹಾಸವಾಗಿ-ಸಮಾಜಶಾಸ್ತ್ರವಾಗಿ-ಮನಸ್ಶಾಸ್ತ್ರವಾಗಿ ನೋಡುವ ಕಡೆಗೂ ಸಾಗಿದೆ! ಬಹುಶಿಸ್ತೀಯವಾದ-ಅಂತರ್ ಶಿಸ್ತೀಯವಾದ ಅನುಸಂಧಾನಗಳು ಇಲ್ಲಿ ನಡೆದಿವೆ. ಜಾಗತೀಕರಣ, ಆಧುನೀಕರಣ, ವಸಾಹತೀಕರಣಗಳ ಎದುರಿನ ಪ್ರತಿಕ್ರಿಯೆಯಾಗಿ-ಪ್ರತಿರೋಧವಾಗಿ ಸಾಹಿತ್ಯವನ್ನು ನೋಡುವ ದೃಷ್ಟಿಗಳು 80ರ ದಶಕದ ನಂತರದಲ್ಲಿ ಬೆಳೆದಿವೆ.

ರಾಜಾರಾಮ ಹೆಗಡೆ(328,719,1383), ಎಸ್.ಚಂದ್ರಶೇಖರ್(692,724,2374), ಕೆ.ಸತ್ಯನಾರಾಯಣ(628), ವೈ.ಆರ್.ಮೋಹನ್(331), ಎನ್.ಬಿ.ಪರಿಮಳಾಬಾಯಿ(534), ಅಶ್ವತ್ಥನಾರಾಯಣ (1853), ಕುಪ್ಪುಸ್ವಾಮಿ(311) ಮೊದಲಾದವರು ಅಂತರ್ ಶಿಸ್ತೀಯ ನೆಲೆಯಲ್ಲಿ ಕುವೆಂಪುವನ್ನು ವಿಮರ್ಶಿಸಲು ಯತ್ನಿಸಿದ್ದಾರೆ. ಸಮಾಜ ಶಾಸ್ತ್ರೀಯ ಹಿನ್ನೆಲೆಯಿಂದ, ಚರಿತ್ರೆ ಹಿನ್ನೆಲೆಯಿಂದ, ರಾಷ್ಟ್ರೀಯತೆಯ ಹಿನ್ನೆಲೆಯಿಂದ, ಮನೋವೈಜ್ಞಾನಿಕ ಹಿನ್ನೆಲೆಯಿಂದ ಇಲ್ಲಿ ವಿಮರ್ಶೆಗಳು ಸಂಭವಿಸಿವೆ. ಚರಿತ್ರೆ, ಮನೋವಿಜ್ಞಾನ, ರಾಷ್ಟ್ರೀಯತೆಗಳ ಕುರಿತಾದ ತಮ್ಮ ಚರ್ಚೆಯ ಆಕರವನ್ನಾಗಿ ಸಾಹಿತ್ಯವನ್ನು ಬಳಸುವ ದೃಷ್ಟಿಗಳು ಇಲ್ಲಿವೆ. ಇಲ್ಲಿ ವಿಮರ್ಶೆಯು

ಬಹುಶಿಸ್ತೀಯ ಮಾನದಂಡಗಳಿಂದ ಸಾಹಿತ್ಯವನ್ನು ಚರ್ಚಿಸುವ ಮೌಲ್ಯಮಾಪನವಾಗಿಯೂ ಸಂಭವಿಸಿದೆ ಕೂಡ. ಸಿ.ಎನ್.ರಾಮಚಂದ್ರನ್(691), ರಾಜೇಂದ್ರ ಚೆನ್ನಿ(900), ಎಚ್.ಎಸ್.ರಾಘವೇಂದ್ರರಾವ್(596),ಗುರುಪಾದ ಮರಿಗುದ್ದಿ(1061), ಕುಂ.ವೀರಭದ್ರಪ್ಪ(68), ಜಿ.ಎಸ್.ಆಮೂರ(705), ವಿ.ಬಿ.ತಾರಕೇಶ್ವರ(170), ಕೆ.ಸಿ.ಶಿವಾರೆಡ್ಡಿ(689) ಮೊದಲಾದವರು ವಸಾಹತೋತ್ತರ ಚಿಂತನೆ, ಆಧುನಿಕತೆಯ ದಾಳಿ, ಜಾಗತೀಕರಣದ ಪರಿಣಾಮಗಳ ಹಿನ್ನೆಲೆಗಳಲ್ಲಿ ಕುವೆಂಪು ಸಾಹಿತ್ಯವನ್ನು ಪರಿಶೀಲಿಸಿದ್ದಾರೆ. ಇವರಲ್ಲಿ ನಿರಚನವಾದ, ಚಾರಿತ್ರಿಕ ವಿಮರ್ಶೆ, ಸಾಂಸ್ಕೃತಿಕ ಅಧ್ಯಯನ, ವಾಚಕ ಸ್ಪಂದನ ಸಿದ್ಧಾಂತ, ನವಚಾರಿತ್ರಿಕವಾದ ಇತ್ಯಾದಿಗಳೆಲ್ಲವೂ ಬೇರ್ಪಡಿಸಲಾಗದಂತೆ ಬೆರೆತುಹೋಗಿವೆ.

ವಿಶೇಷವೆಂದರೆ ವಸಾಹತೋತ್ತರ ಚಿಂತನೆಗಳ (ದೃಷ್ಟಿಕೋನಗಳ) ಮೂಲಕ ಸಾಹಿತ್ಯವನ್ನು ನೋಡುವ ಇವರಲ್ಲಿ ನವೋದಯ, ನವ್ಯ, ಬಂಡಾಯ ಎಂಬ ಸಾಹಿತ್ಯ ಚರಿತ್ರೆ ರಚನಾಶಾಸ್ತ್ರೀಯ ಪರಿಭಾಷೆಗಳು ವಿಮರ್ಶೆಯ ದೃಷ್ಟಿಗಳಾಗಿಲ್ಲ. ಇವೆಲ್ಲ ವಿಮರ್ಶಾ ಮಾರ್ಗಗಳು ಎಂಬುದಕ್ಕಿಂತ ಲೇಖಕ ಸಮುದಾಯಗಳು ಎಂಬಂತೆಯೇ ಇವರ ಆಚರಣೆಯಲ್ಲಿ ಬಳಕೆಯಾಗಿವೆ. ವರ್ಣ-ವರ್ಗ ದೃಷ್ಟಿಯು ಇವರುಗಳಲ್ಲಿ ಸಾಂಸ್ಕೃತಿಕ ಪರಿಶೀಲನೆಯಾಗಿ ಬದಲಾಗಿದೆ. ಕುವೆಂಪು ಸಾಹಿತ್ಯ ಮತ್ತು ವಿಚಾರಧಾರೆಯ ಪ್ರಸ್ತುತತೆ, ಸಮಕಾಲೀನತೆಗಳ ಪ್ರಶ್ನೆಗಳು ಇವರಲ್ಲಿ ಚರ್ಚಿತವಾಗಿವೆ. ಇವರೂ ಕೂಡ ಸೈದ್ಧಾಂತಿಕವಾಗಿ ನಿರಚನಾವಾದವನ್ನಾಗಲೀ, ಸಾಂಸ್ಕೃತಿಕ ಅಧ್ಯಯನವನ್ನಾಗಲೀ ವಸಾಹತೋತ್ತರ ವಾದವನ್ನಾಗಲೀ ಸಾಹಿತ್ಯ ವಿಮರ್ಶೆಯ ಮಾರ್ಗವನ್ನಾಗಿ ನಾವು ಆಚರಿಸುತ್ತಿದ್ದೇವೆಂದು ಘೋಷಿಸಿಲ್ಲ. ಹಾಗೆ ಯಾವುದೇ ವಿಮರ್ಶೆಯ ಮಾರ್ಗವು ಆಚರಣೆಯಲ್ಲಿ ಸ್ವಯಂಭೂ ಆಗಿ ಏಕೈಕ ಮಾರ್ಗವೆಂಬಂತೆ ಬಳಕೆಯಾಗದೆ ಇರುವುದೇ ನಮ್ಮ ವಿಮರ್ಶೆಯ ಆಚರಣೆಯ ಲಕ್ಷಣವಾಗಿದೆ.

### 5.4. ಸಾಂಸ್ಕೃತಿಕ ಅನುಸಂಧಾನಗಳು

ಯಾವುದೇ ಸಾಹಿತ್ಯಕೃತಿ ಕೇವಲ ಓದಿಗೆ ಮಾತ್ರವೇ ಗುರಿಯಾಗುವುದಿಲ್ಲ. ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಸಾಹಿತ್ಯ ಕಥನಗಳನ್ನು ಅನೇಕ ಅನುಸಂಧಾನಗಳಿಗೆ ಗುರಿಯಾಗಿಸುತ್ತ ಬರಲಾಗಿದೆ. ಹರಿಕತೆ, ಭಜನೆ, ಗಾಯನ, ಕೇಳಿಕೆ, ಗಮಕ, ವ್ಯಾಖ್ಯಾನ(ಟೀಕು), ವಾಚನ, ನೋಂಪಿ, ಅಧ್ಯಯನ, ವಾದ, ಪಾರಾಯಣ(ಪಠಣ), ಪುನರ್ಕಥನ ಹೀಗೆ ಅನೇಕ ರೀತಿಯ ಅನುಸಂಧಾನಗಳು ನಡೆಯುತ್ತ ಬಂದಿವೆ. ಅದೇ ರೀತಿ ಕುವೆಂಪು ಸಾಹಿತ್ಯ ಕೂಡ ಅನೇಕ ರೀತಿಯ ಅನುಸಂಧಾನಗಳಿಗೆ ಗುರಿಯಾಗಿದೆ. ಗುರಿಯಾಗುತ್ತಿದೆ. ವಿಚಾರಸಂಕಿರಣ, ಗಾಯನ, ಗಮಕ, ಪಠಣ, ಸ್ಪರ್ಧೆಗಳು, ಅಧ್ಯಯನ, ವಿಮರ್ಶೆ, ಅಭಿನಂದನೆ, ಕಾವ್ಯವಾಚನ, ಪುಸ್ತಕ ಬಿಡುಗಡೆ, ಪ್ರಶಸ್ತಿ ಪ್ರದಾನ, ಸ್ಮರಣೆ, ನಾಟಕೋತ್ಸವ, ಜನ್ಮದಿನಾಚರಣೆ, ಪುಣ್ಯತಿಥಿ ಹೀಗೆ ಅನೇಕ ಅನುಸಂಧಾನಗಳಿಗೆ ಗುರಿಯಾಗಿದೆ. ಸಂಬಂಧಿಕತೆಯ ರಾಜಕಾರಣ, ಸಾಂದರ್ಭಿಕತೆಯ ರಾಜಕಾರಣಗಳು, ಸಾಂಸ್ಕೃತಿಕ ಕಾರಣಗಳು ಹೀಗೆ ಹಲವು ಕಾರಣ-ರಾಜಕಾರಣಗಳು ಇಲ್ಲಿನ ಅನುಸಂಧಾನಗಳನ್ನು ನಿತಂತ್ರಿಸಿವೆ. ಇವೆಲ್ಲವುಗಳಲ್ಲಿ ಬಹುಪಾಲು ಸಂದರ್ಭಗಳಲ್ಲಿ ಭಾಷಣರೂಪಿ-ಬರಹರೂಪಿ ಸಾಹಿತ್ಯ ವಿಮರ್ಶೆಯೂ ಸಂಭವಿಸುತ್ತ ಬಂದಿದೆ.

ಸಾಹಿತ್ಯ ಮತ್ತು ಸಾಹಿತಿ ಹಾಗೂ ಸಾಮಾಜವು ಕೆಲವು ಅನುಸಂಧಾನಗಳಲ್ಲಿ ಅಭೇದವೆಂಬಂತೆ ಬೆರೆತು ಹೋಗುತ್ತ ಪರಸ್ಪರ ಆದಾನ ಪ್ರದಾನ ನಡೆಯುತ್ತಿರುತ್ತದೆ. ಅಂತಿಮವಾಗಿ ಲೇಖಕನ ಮತ್ತು ಆತನ ಸಾಹಿತ್ಯದ ಮೌಲ್ಯಮಾಪನವೇ ಇಂಥ ಕಡೆ ಜರುಗುತ್ತಿರುತ್ತದೆ. ಮತ್ತೆ ಮತ್ತೆ ಲೇಖಕನೊಬ್ಬ ಸಾಂಸ್ಕೃತಿಕವಾಗಿ ಅನುಸಂಧಾನಕ್ಕೆ ಗುರಿಯಾಗುತ್ತಾನೆ. ಸಮಾಜದ ನೆನಪಿನಿಂದ ಮರೆಯಾಗುವುದಿಲ್ಲ ಎಂಬುದೇ ಆತನ ಪ್ರಸ್ತುತತೆ ಮತ್ತು ಸತ್ವ ಆಗಿರುತ್ತದೆ. ಈ ದೃಷ್ಟಿಯಿಂದ ಕುವೆಂಪು ಸತ್ವಯುತ ಲೇಖಕ ಎಂಬುದು ಇದುವರೆಗಿನ ಅನುಸಂಧಾನಗಳ ಮೂಲಕ ಪ್ರಕಟವಾಗಿದೆ. ಕುವೆಂಪು ಹೆಸರಿನಲ್ಲಿ ಅನೇಕ ಸಂಘ ಸಂಸ್ಥೆಗಳು, ವಿಚಾರ ವೇದಿಕೆಗಳು ನಮ್ಮಲ್ಲಿ ಹುಟ್ಟಿಕೊಂಡಿವೆ. ಸಾಹಿತ್ಯದ ಅಧ್ಯಯನ, ಪ್ರಚಾರ, ವಿಮರ್ಶೆ ಮಾತ್ರ ಇಂಥವುಗಳ ಉದ್ದೇಶ ಅಲ್ಲ. ಕುವೆಂಪು ಹೆಸರಿನ ಮೂಲಕ ಸಾಂಸ್ಕೃತಿಕವಾದ ತಮ್ಮದೇ ಕೆಲಸವನ್ನು ಮಾಡುವುದು ಇಂಥ ಸಂಘ-ಸಂಸ್ಥೆ-ವೇದಿಕೆಗಳ ಕಾರ್ಯವಾಗಿದೆ. ಕುವೆಂಪು ಕುರಿತ ಅನುಸಂಧಾನಗಳೇ ಸಾಂಸ್ಥಿಕ ರೂಪ ಪಡೆದಿರುವುದೂ; ಕುವೆಂಪು ಅನುಸಂಧಾನಕ್ಕಾಗಿಯೇ ಸಂಸ್ಥೆಗಳು ಹುಟ್ಟಿರುವೂ ಉಂಟು. ಮೈಸೂರಿನ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಮತ್ತು ಕುಪ್ಪಳಿಯಲ್ಲಿರುವ ಹಂಪಿ ವಿಶ್ವವಿದ್ಯಾಲಯದ ಅಂಗಸಂಸ್ಥೆಯಾದ ಕುವೆಂಪು ಕನ್ನಡ ಅಧ್ಯಯನ ಕೇಂದ್ರ ಇದಕ್ಕೆ ಎರಡು ಉದಾಹರಣೆಗಳು.

ಮೈಸೂರಿನಲ್ಲಿ ಆರಂಭವಾದ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಹಲವು ಜನ ಕುವೆಂಪು ಶಿಷ್ಯರು ಮತ್ತು ಅಭಿಮಾನಿಗಳ ಪ್ರಯತ್ನದಿಂದ ಹುಟ್ಟಿರುವ ಸಂಸ್ಥೆ. ಇಲ್ಲಿನ ಶಾಲೆ, ಕುವೆಂಪು ವನ, ಗ್ರಂಥಾಲಯ, ಜಮೀನು, ಎಲ್ಲವೂ ಸಾಮೂಹಿಕ ಪರಿಶ್ರಮದ ಫಲಗಳೆ. ಆದರೆ ಅದರ ಬೆನ್ನೆಲುಬು ದೇಜಗೌ. ಕನ್ನಡದಲ್ಲಿ ಕುವೆಂಪುಗೆ ಬಿಟ್ಟರೆ ಬೇರಾರಿಗೂ ಲೇಖಕರಿಗೆ ಅಂತಹ ದೊಡ್ಡ ಸಂಸ್ಥೆ-ಆಸ್ತಿ ಇಲ್ಲ. ಕವಿ ಮತ್ತು ಸಮಾಜದ ಸಂಬಂಧದ ಸಂಕೇತವಾಗಿ ಆ ಟ್ರಸ್ಟ್ ಇದೆ. ಸಾಹಿತ್ಯ ಮತ್ತು ಸಾಹಿತ್ಯೋಪಜೀವಿಗಳ ಸಂಬಂಧವಾಗಿ ಸಾಹಿತ್ಯದ ಅನುಸಂಧಾನಗಳ ಸ್ವರೂಪದ ಸಾಕ್ಷಿಪ್ರಜ್ಞೆಯಾಗಿ ಆ ಟ್ರಸ್ಟ್ ಇದೆ. ಇದು ಪ್ರಕಾಶನವಾಗಿಯೂ ಕೆಲಸ ನಿರ್ವಹಿಸಿ ಹಲವಾರು ಪುಸ್ತಕಗಳನ್ನು ಪ್ರಕಟಿಸಿದೆ. ವಿಚಾರ ಸಂಕಿರಣಗಳನ್ನು ಏರ್ಪಡಿಸಿ, ಅಧ್ಯಯನ ಯೋಜನೆಗಳನ್ನು ನೀಡಿ ಪುಸ್ತಕಗಳನ್ನು ಪ್ರಕಟಿಸಿದೆ. ವಿವಿಧ ಸ್ಪರ್ಧೆಗಳನ್ನು ನಡೆಸಿ ಬಹುಮಾನ ನೀಡುವ ಸಂಪ್ರದಾಯವನ್ನು ನಡೆಸುತ್ತ ಬಂದಿದೆ. ಆದರೆ ಈಗ ಈ ಟ್ರಸ್ಟ್ ತನ್ನ ಮೊದಲಿನ ವೈಭವವನ್ನು ಕಳೆದುಕೊಂಡಿದೆ. ದೇಜಗೌ ಅಂಥವರು ನಮ್ಮ ಬೇಂದ್ರೆ, ಅಡಿಗ, ನರಸಿಂಹಸ್ವಾಮಿ ಇಂಥವರಿಗೂ ಒಬ್ಬೊಬ್ಬ ಶಿಶುಮಕ್ಕಳು ಇದ್ದಿದ್ದರೆ ಬಹುಶಃ ಸಾಹಿತ್ಯ ಪ್ರಚಾರ, ಸಾಹಿತ್ಯ ಪ್ರಸಾರಗಳು ಇನ್ನಷ್ಟು ಆಗುತ್ತಿದ್ದುವೇನೊ!

ಇದೇ ರೀತಿಯಲ್ಲಿ ಕುಪ್ಪಳಿಯಲ್ಲಿನ ಕುವೆಂಪು ಟ್ರಸ್ಟ್ ಮತ್ತು ಕುವೆಂಪು ಕನ್ನಡ ಅಧ್ಯಯನ ಕೇಂದ್ರಗಳು ಇಲ್ಲಿ ಉಲ್ಲೇಖಾರ್ಹ. ಕುವೆಂಪು ಮನೆಯನ್ನು ಒಂದು ರಾಷ್ಟ್ರೀಯ ಸ್ಮಾರಕವನ್ನಾಗಿ ಮಾಡಿ ಅದರ ಉಸ್ತುವಾರಿಯನ್ನು ಕುಪ್ಪಳಿಯ ಕುವೆಂಪು ಟ್ರಸ್ಟಿಗೆ ವಹಿಸಲಾಗಿದೆ. ಕುವೆಂಪು ಮೇಲಿನ ಪ್ರೀತಿ-ಅಭಿಮಾನಗಳು ಇಲ್ಲಿಯೂ ಕಾಣುತ್ತವೆ. ಇಲ್ಲಿನ ಕುವೆಂಪು ಟ್ರಸ್ಟ್ ಕೂಡ ಸಮುದಾಯದ ಫಲವೇ ಆದರೂ ಅದರ ಮುಖ್ಯ ಶ್ರಮಿಕರು ಕಡಿದಾಳ್ ಪ್ರಕಾಶ್ ಅವರು. ಸಾಹಿತ್ಯ ಪ್ರಚಾರ-ಕುವೆಂಪು ಪುಸ್ತಕಗಳ ಮತ್ತು ಕುವೆಂಪು ಕುರಿತ ವಿಮರ್ಶೆಯ ಪುಸ್ತಕಗಳ ಮಾರಾಟವನ್ನು ಈ ಸಂಸ್ಥೆಯು ನಡೆಸುತ್ತಲಿದೆ. ಜೊತೆಗೆ ಕುವೆಂಪು ಸಾಹಿತ್ಯ ಕುರಿತ ಪ್ರಸಾರ, ಓದು, ವಿಚಾರ ವಿನಿಮಯ, ನಾಟಕ ಪ್ರದರ್ಶನ ಇತ್ಯಾದಿ ಕಾರ್ಯಕ್ರಮಗಳನ್ನು ಈ ಸಂಸ್ಥೆಯು ನಡೆಸುತ್ತದೆ. ಕುವೆಂಪು ಮನೆ ಮತ್ತು ಕುಪ್ಪಳಿ ಪರಿಸರವನ್ನು ಪ್ರವಾಸೋದ್ಯಮ ಕೇಂದ್ರವವನ್ನಾಗಿ ಬೆಳೆಸುವ ಉದ್ದೇಶವೂ ಈ ಟ್ರಸ್ಟಿಗಿದೆ. ಒಂದು ವೇಳೆ ಕಾಡಿನ ಈ ಪರಿಸರವನ್ನು ವಾಣಿಜ್ಯೀಕರಣಗೊಳಿಸಿ ಪ್ರವಾಸೋದ್ಯಮ ಕೇಂದ್ರವನ್ನಾಗಿ ಮಾರ್ಪಡಿಸಿದ್ದೇ ಆದರೆ ಅದರಿಂದ ಆರ್ಥಿಕವಾಗಿ ಲಾಭ ಆಗಬಹುದೇನೋ ಸಾಂಸ್ಕೃತಿಕವಾಗಿ ನಷ್ಟವಂತೂ ಖಂಡಿತಾ ಆಗುತ್ತದೆ. ಅಲ್ಲದೆ ಪರಿಸರ ನಾಶ ಕೂಡ ಖಂಡಿತಾ ಆಗುತ್ತದೆ.

ಕುಪ್ಪಳಿಯಲ್ಲಿ ಇರುವ ಹಂಪಿ ವಿಶ್ವವಿದ್ಯಾಲಯದ ಶಾಖೆಯಾದ ಕುವೆಂಪು ಕನ್ನಡ ಅಧ್ಯಯನ ಕೇಂದ್ರವು ವಿಶ್ವವಿದ್ಯಾಲಯದ ಅಂಗ ಸಂಸ್ಥೆಯಾದರೂ ಇದರ ಬೆನ್ನೆಲುಬು ಡಾ.ಕೆ.ಸಿ.ಶಿವಾರೆಡ್ಡಿ. ಇವರ ಅಪಾರವಾದ ಶ್ರದ್ಧೆ, ಪರಿಶ್ರಮ ಮತ್ತು ಪುಸ್ತಕ ಪ್ರೀತಿಯಿಂದಾಗಿ ಇಲ್ಲಿ ಕುವೆಂಪು ಗ್ರಂಥಾಲಯ, ಕುವೆಂಪು ಆರ್ಕೈವ್ಸ್‌ಗಳು ನಿಧಾನಕ್ಕೆ ಅರಳುತ್ತಿವೆ. ಆಗಾಗ ಇಲ್ಲಿ ನಡೆಯುವ ಸಾಹಿತ್ಯ ರಸಗ್ರಹಣ ಶಿಬಿರಗಳು, ಅಭಿರುಚಿ ಶಿಬಿರಗಳು, ಅಧ್ಯಯನ-ವಿಮರ್ಶಾ ಕಮ್ಮಟಗಳು ಕುವೆಂಪು ಸಾಹಿತ್ಯವನ್ನು ನಾಡಿನ ಮೂಲೆ ಮೂಲೆಗೆ ತಲುಪಿಸುವ ಕೆಲಸ ಮಾಡುತ್ತಿವೆ. ಕುವೆಂಪು ಸಾಹಿತ್ಯದ ಸಾಂಸ್ಕೃತಿಕ ಅನುಸಂಧಾನಕ್ಕೆ ಸಾಂಸ್ಥಿಕ ರೂಪ ಬಂದಾಗ ಅದು ಹೇಗಿರಬೇಕೆಂಬ ಒಂದು ಮಾದರಿಯನ್ನು ಇಲ್ಲಿ ಕಾಣಬಹುದು. ವಿಮರ್ಶೆಯು ಅಕಾಡೆಮಿಕ್ಕಾದ ಅಥವಾ ನಾಲ್ಕು ಗೋಡೆಗಳ ನಡುವಿನ ಬರೆಹದ ಚಟುವಟಿಕೆ ಅಲ್ಲ. ಅದೊಂದು ಸಾಂಸ್ಕೃತಿಕ ಶಿಸ್ತು ಎಂಬುದು ಇಂಥ ಚಟುವಟಿಕೆಗಳ ಮೂಲಕ ಸಾಬೀತಾಗುತ್ತಿದೆ. ಆದರೂ ಚೋದ್ಯವೆಂದರೆ ವಿಮರ್ಶೆಯನ್ನು ನಾವು ಆಚರಿಸುವಾಗ ಅದೊಂದು ಸಾಂಸ್ಕೃತಿಕ ಅನುಸಂಧಾನವೆಂಬಂತೆ ನಡೆದುಕೊಳ್ಳುತ್ತೇವೆ. ಆದರೆ ವಿಮರ್ಶೆ ಎಂದರೆ ಏನು ಎಂದಾಗ ಅದೊಂದು ಅಕಾಡೆಮಿಕ್ಕಾದ ಸಾಹಿತ್ಯದ ಪ್ರಕಾರ ಎಂದು ನಂಬುತ್ತೇವೆ! ಸಾಹಿತ್ಯದ ಅಧ್ಯಯನ, ಆಸ್ವಾದನೆಗಳಿಗೆ ಪ್ರಕೃತಿಯನ್ನು ಒಳಗೊಳ್ಳುವ, ಸ್ಥಳೀಯ ಸಮಾಜವನ್ನು ಒಳಗೊಳ್ಳುವ, ಇಡೀ ನಾಡನ್ನು ಒಳಗೊಳ್ಳುವ ಕ್ರಿಯೆ ಇಲ್ಲಿ ನಡೆಯುತ್ತಿದೆ.

ಬೆಂಗಳೂರಿನ ಕುವೆಂಪು ಅಧ್ಯಯನ ಕೇಂದ್ರ ಕೂಡ ಇಲ್ಲಿ ಗಮನಾರ್ಹ. ಈ ಅಧ್ಯಯನ ಕೇಂದ್ರವು 1980ರಲ್ಲಿ ಪ್ರಾರಂಭವಾಗಿದೆ. "ಕುವೆಂಪು ಅವರ ಸಮಗ್ರ ಸಾಹಿತ್ಯ ಗ್ರಂಥಗಳು ವಾಚಕರಿಗೆ ಒಂದೆಡೆ ದೊರೆಯುವಂತೆ ಮಾಡುವುದು, ಅವರ ಕೃತಿಗಳ ಗಾಯನ-ವಾಚನ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ಅವರ ನಾಟಕಗಳ ಪ್ರದರ್ಶನವನ್ನು ನಡೆಸುವುದು, ಕುವೆಂಪು ಕೃತಿಗಳ ಪರಿಚಯ, ವಿಮರ್ಶೆ ಬರೆಸಿ ಪ್ರಕಟಿಸುವುದು ಇತ್ಯಾದಿ ಉದ್ದೇಶಗಳು ಈ ಕೇಂದ್ರದವಾಗಿವೆ." (2646-ಪುಟ: 12 ಪ್ರಕಾಶಕರ ಮಾತು)

ಎಚ್.ಆರ್.ದಾಸೇಗೌಡರು ಇದರ ರೂವಾರಿ. 1984-85ರಲ್ಲಿ ಕಾಲೇಜಿನಿಂದ ಕಾಲೇಜಿಗೆ ಎಂಬ ಯೋಜನೆ ರೂಪಿಸಿ ಕುವೆಂಪು ಸಾಹಿತ್ಯವನ್ನು ಯುವಜನತೆಗೆ ತಲುಪಿಸುವ ಕೆಲಸವನ್ನು ಈ ಕೇಂದ್ರವು ಮಾಡಿದೆ. ಅಲ್ಲದೆ ಕುವೆಂಪು ಸಾಹಿತ್ಯದ ಕುರಿತ ಅಧ್ಯಯನಗಳಿಗೆ ಸಹಾಯ ನೀಡುವ, ಪ್ರಕಟಣೆಗೆ ಸಹಾಯ ನೀಡುವ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಹಕರಿಸುವ ಕೆಲಸವನ್ನು ಈ ಸಂಸ್ಥೆಯು ಮಾಡುತ್ತ ಬಂದಿದೆ. ಇದುವರೆಗೆ ಈ ಕೇಂದ್ರವು 18 ಪುಸ್ತಕಗಳನ್ನು ಪ್ರಕಟಿಸಿದೆ. ಆದರೆ ಸದ್ಯಕ್ಕೆ ಇದರ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿವೆ.

ಶತಮಾನೋತ್ಸವದ ಅಂಗವಾಗಿ ಶ್ರೀರಂಗಪಟ್ಟಣದ ತಾಲ್ಲೂಕು ಸಾಹಿತ್ಯ ಪರಿಷತ್ತು ಕುವೆಂಪು ಅವರ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಲೇಖನದ ಜೊತೆಗೆ ಅವರ ವೈಚಾರಿಕತೆಯನ್ನು ಬಿಂಬಿಸುವ ಕೆಲವು ಆಯ್ದ ಭಾಗಗಳನ್ನು ಸೇರಿಸಿ ಒಂದು ಕಿರುಹೊತ್ತಿಗೆ ರೂಪಿಸಿ ಪ್ರಕಟಿಸಿದ್ದಾರೆ. ಅದರ ಜೊತೆಗೆ ವಿಶ್ವಮಾನವ ಕುವೆಂಪು ನೂರು ಎಂಬ ಸ್ಮರಣ ಸಂಚಿಕೆಯನ್ನು ಪ್ರಕಟಿಸಿದ್ದಾರೆ. ಇವೆರಡನ್ನೂ ಉಚಿತವಾಗಿ ನಾಡಿನಾದ್ಯಂತ ವಿತರಿಸಿದ್ದಾರೆ. ಕುವೆಂಪು ಮೇಲಿನ ಪ್ರೀತಿಗೌರವ-ಅಭಿಮಾನಗಳು ಪ್ರಕಟವಾಗಿರುವ ಬಗೆ ಇದು. ಹಾಗೇ ಕುವೆಂಪು ಸಾಹಿತ್ಯದ ಅನುಸಂಧಾನದ ಒಂದು ಮಾದರಿಯೂ ಇದಾಗಿದೆ. ಎಚ್.ಪಿ.ಮೂಡ್ಲಪ್ಪ ಮತ್ತು ತಿಮ್ಮೇಶ್ ಪ್ರಭು ಎಂಬ ಕುವೆಂಪು ಸಾಹಿತ್ಯದ ಇಬ್ಬರು ಅಭಿಮಾನಿಗಳು ನಾಡಿನಾದ್ಯಂತ ಅವರ ಪುಸ್ತಕಗಳನ್ನು ಮಾರುವ-ಪ್ರಚಾರ-ಪ್ರಸಾರ ಮಾಡುವ ಕೆಲಸವನ್ನು ಮಾಡಿದ್ದಾರೆ. ಸಿ.ಆರ್.ಸಿಂಹ ಅವರು ರಸಋಷಿ ಎಂಬ ನಾಟಕವನ್ನು ನಾಡಿನಾದ್ಯಂತ ಪ್ರದರ್ಶಿಸಿದ್ದಾರೆ. ಇದೇ ಹೆಸರಿನ ಚಲನ ಚಿತ್ರವೊಂದನ್ನು ತಯಾರಿಸಲೂ ಇವರು ಉದ್ದೇಶಿಸಿದ್ದಾರೆ. ಸರ್ಕಾರಿ ಡಾಕ್ಯುಮೆಂಟರಿಗಳು ಕೂಡ ಕುವೆಂಪು ಬದುಕು ಬರಹ ಆಧರಿಸಿ ತಯಾರಾಗಿವೆ. ಕುವೆಂಪು ಕಾದಂಬರಿಗಳನ್ನು ಆಧರಿಸಿ ಟೆಲಿಚಿತ್ರ, ಧಾರವಾಹಿಗಳು ನಿರ್ಮಾಣವಾಗಿವೆ. ಕಾದಂಬರಿಗಳನ್ನು ನಾಟಕಗಳನ್ನಾಗಿ ರೂಪಾಂತರಿಸಿ ಹಲವಾರು ಬಾರಿ ಪ್ರದರ್ಶಿಸಲಾಗಿದೆ.

ಕುವೆಂಪು ಅವರಿಗೆ ಅಭಿನಂದನೆಗಾಗಿ ನಡೆದ ಬಹುಪಾಲು ಎಲ್ಲ ಸಮಾರಂಭಗಳಲ್ಲಿ, ಅವರ ಹುಟ್ಟುಹಬ್ಬದ ಆಚರಣೆಯ ಸಂದರ್ಭಗಳಲ್ಲಿ ನಾಟಕ ಪ್ರದರ್ಶನಗಳನ್ನು ಏರ್ಪಡಿಸುವುದು; ಕವಿಗೋಷ್ಠಿ, ಗಾಯನ ಕಾರ್ಯಕ್ರಮಗಳನ್ನು ಏರ್ಪಡಿಸುವುದನ್ನು ಅಗತ್ಯ ಚಟುವಟಿಕೆ ಎಂಬಂತೆ ಮಾಡುತ್ತ ಬರಲಾಗಿದೆ. ಹಾಸನದಲ್ಲಿ, ಬೆಂಗಳೂರಿನಲ್ಲಿ ಕುವೆಂಪು ನಾಟಕಗಳ ಉತ್ಸವಗಳನ್ನೇ ನಡೆಸಲಾಗಿದೆ. ಅವರ ಕಥನ ಕವನ, ಭಾವಗೀತೆಗಳನ್ನು, ರಾಮಾಯಣದ ಭಾಗಗಳನ್ನು ಆಧರಿಸಿ ಅನೇಕ ಸಾರಿ ಗೀತರೂಪಕ ನೃತ್ಯ ರೂಪಕಗಳನ್ನು ಪ್ರದರ್ಶಿಸಲಾಗಿದೆ. ಕುವೆಂಪು ಅವರ ಸಾಹಿತ್ಯವನ್ನು ಆಧರಿಸಿ ಹಲವಾರು ಕಲಾವಿದರು ಹಲವಾರು ವರ್ಣಚಿತ್ರಗಳನ್ನು ರಚಿಸಿದ್ದಾರೆ. ಅವುಗಳನ್ನು 'ಕುವೆಂಪು ಸಾಹಿತ್ಯ ಚಿತ್ರ ಸಂಪುಟ' ಎಂಬ ಪುಸ್ತಕವನ್ನಾಗಿಯೂ ಪ್ರಕಟಿಸಲಾಗಿದೆ. ಕುವೆಂಪು ಮೇಲೆ ಅನೇಕ ಕವಿತೆಗಳನ್ನು, ಹಲವಾರು ನಾಟಕಗಳನ್ನೂ, ಜೀವನ ಚಿತ್ರಗಳನ್ನು, ಕಾವ್ಯಗಳನ್ನೂ ರಚಿಸಲಾಗಿದೆ. 'ಅವಲೋಕನ' ಅಭಿನಂದನಾ ಗ್ರಂಥ ಅರ್ಪಿಸುವ ಸಂದರ್ಭದಲ್ಲಿ ಶ್ರೀರಾಮಾಯಣ ದರ್ಶನಂ ಗ್ರಂಥವನ್ನು ಆನೆಯ ಮೇಲೆ ಇಟ್ಟು ಮೈಸೂರಿನ ಬೀದಿಗಳಲ್ಲಿ ಮೆರವಣಿಗೆ ಮಾಡಿದ್ದಾರೆ.

ವಿಶೇಷವೆಂದರೆ ಕರ್ನಾಟಕದ ಅನೇಕ ಬಡಾವಣೆಗಳಿಗೆ, ರಸ್ತೆಗಳಿಗೆ, ಅಧ್ಯಯನ ಕೇಂದ್ರಗಳಿಗೆ ಕುವೆಂಪು ಹೆಸರನ್ನು ಹೆಮ್ಮೆಯಿಂದ ಇಡಲಾಗಿದೆ. ಮೈಸೂರು ವಿ.ವಿ.ಯ ಕನ್ನಡ ಅಧ್ಯಯನ ಕೇಂದ್ರವನ್ನು ಕುವೆಂಪು ಅಧ್ಯಯನ ಕೇಂದ್ರ ಎಂದೇ ಹೆಸರಿಸಲಾಗಿದೆ. ಕುವೆಂಪು ಹೆಸರಿನಲ್ಲಿ ಶಿವಮೊಗ್ಗೆಯಲ್ಲಿ ಒಂದು ವಿಶ್ವವಿದ್ಯಾಲಯವೇ ಇದೆ. ಕುವೆಂಪು ಹೆಸರಿನಲ್ಲಿ ಅನೇಕ ಸಂಘಸಂಸ್ಥೆಗಳು ವಿಚಾರವೇದಿಕೆಗಳು ಹುಟ್ಟಿವೆ. ಸಾಹಿತ್ಯ ಪ್ರಚಾರ ಮಾಡುತ್ತ, ಸಾಹಿತ್ಯ ಸ್ಪರ್ಧೆಗಳನ್ನು ನಡೆಸುತ್ತ, ಪ್ರಶಸ್ತಿ, ಬಹುಮಾನಗಳನ್ನು ನೀಡುತ್ತಲಿವೆ. ವಿಶೇಷವೆಂದರೆ ಕುವೆಂಪು ಒಬ್ಬರನ್ನೇ ಅಧ್ಯಯನ ಮಾಡಿರುವ ಕುವೆಂಪು ತಜ್ಞರು ನಮ್ಮಲ್ಲಿ ಇಂದು ತಯಾರಾಗಿದ್ದಾರೆ. ಕುವೆಂಪು ಬದುಕು ಬರಹಗಳನ್ನು ಆಧರಿಸಿ ಕೆಲಸ ಮಾಡುವ ಸರ್ಕಾರಿ, ಖಾಸಗಿ ಸಂಸ್ಥೆಗಳೇ ನಮ್ಮಲ್ಲಿಂದು ಸೃಷ್ಟಿಯಾಗಿವೆ. ಇವೆಲ್ಲವೂ ಲೇಖಕನ ಪ್ರಸ್ತುತತೆಯ ಪ್ರತೀಕಗಳೇ; ಲೇಖಕನನ್ನು ಸಮಾಜವು ವಿಮರ್ಶೆಗೆ ಗುರಿಪಡಿಸುವ (ಗೌರವಿಸುವ) ವಿಧಾನಗಳೇ; ವಿಮರ್ಶೆಯ ಬೇರೆ ಬೇರೆ ಮುಖಗಳೇ ಆಗಿವೆ.

## ಕೊನೆಗೆ ಮೊದಲು

ಯಾವುದಾದರೂ ಒಂದು ವಸ್ತು, ವಾದ, ಕ್ರಮ, ಪಾತ್ರ, ಪ್ರಕಾರ, ಪಂಥ, ಸಾಹಿತ್ಯ, ಕಾಲ, ಕೃತಿ, ಕೃತಿಕಾರ, ಪರಂಪರೆ, ಪ್ರದೇಶ, ಸಂವೇದನೆ, ಸಂಸ್ಕೃತಿ ಇತ್ಯಾದಿಗಳನ್ನು ಪರಿಗಣನೆಯ ಕೇಂದ್ರವಾಗಿ ಇಟ್ಟುಕೊಂಡು ಅದರ ಮೂಲಕ ಅಥವಾ ಅದರ ಸುತ್ತಮುತ್ತಲೆ ಚರ್ಚೆ ಬೆಳೆಸುವುದು ನಮ್ಮ ವಿಮರ್ಶೆಯ ಒಂದು ಸರ್ವಸಾಮಾನ್ಯ ವಿನ್ಯಾಸ. ಈ ವಿನ್ಯಾಸದಲ್ಲಿಯೆ ಸಾಹಿತ್ಯವನ್ನು ಪರಿಶೀಲಿಸುವ ಹಲವಾರು ಬಗೆಗಳು ಸಂಭವಿಸಿವೆ. ಅವನ್ನೆ ಇಲ್ಲಿ ವಿಮರ್ಶೆಯ ದೃಷ್ಟಿಗಳು ಎನ್ನಲಾಗಿದೆ. ಈಗ ಉದಾಹರಣೆಗೆ ವೈಚಾರಿಕತೆ ಸಾಹಿತ್ಯದ ಒಂದು ಪ್ರಧಾನವಾದ ಸಂವೇದನೆ, ವಸ್ತು, ಪ್ರಕಾರ ಎಲ್ಲವೂ ಹೌದು. ಇಂಥ ವೈಚಾರಿಕತೆಯನ್ನು ಕೇಂದ್ರವಾಗಿ ಇಟ್ಟುಕೊಂಡು ಸಾಹಿತ್ಯವನ್ನು ಚರ್ಚಿಸುವ ಕ್ರಮವನ್ನು ವಿಚಾರ ದೃಷ್ಟಿ ಎನ್ನಬಹುದು. ಹೀಗೆಯೇ ಪರಿಸರ ಪ್ರಜ್ಞೆಯನ್ನು ಪ್ರಧಾನವಾಗಿ ಪರಿಗಣಿಸಿದ ಅಥವಾ ಪರಿಸರ ಪ್ರಜ್ಞೆಯ ದೃಷ್ಟಿಯನ್ನು ಇಟ್ಟುಕೊಂಡು ನಡೆಸಿದ ಸಾಹಿತ್ಯ ಪರಿಶೀಲನೆಯನ್ನು ಪರಿಸರ ದೃಷ್ಟಿ ಎನ್ನಬಹುದು. ಇದೇ ನೆಲೆಯಲ್ಲಿಯೇ ಇಲ್ಲಿ ವಿಮರ್ಶೆಯ ಪ್ರಧಾನ ಕೇಂದ್ರ, ಗಮನ, ಪರಿಗಣನೆಗಳನ್ನು ಆಧರಿಸಿ ವಿಮರ್ಶೆಯ ದೃಷ್ಟಿಗಳು ಯಾವುವು ಇವೆಯೆಂದು ಕಟ್ಟಿಕೊಳ್ಳಲಾಗಿದೆ.

ವಿಮರ್ಶೆಯ ಮಾರ್ಗಗಳಾಗಿ ಬೆಳೆದಿರುವ; ಬೆಳೆಯಬಹುದಾದ; ತಮ್ಮದೇ ಗುಣಲಕ್ಷಣಗಳನ್ನು ಹೊಂದಿರುವ ವಿಮರ್ಶೆಯ ಕೆಲವು ಪ್ರಕಾರಗಳನ್ನು ವಿಮರ್ಶೆಯ ರೂಪಗಳು ಎಂದು ಇಲ್ಲಿ ಗುರ್ತಿಸಿಕೊಳ್ಳಲಾಗಿದೆ. ಉದಾಹರಣೆಗೆ ಅಭಿನಂದನ ರೂಪಿ, ಸಾಹಿತ್ಯರೂಪಿ, ಅಧ್ಯಯನ ರೂಪಿ ಹೀಗೆ ಕನ್ನಡದಲ್ಲಿ (ಕುವೆಂಪುಗೂ ಅನ್ವಯಿಸುವಂತೆ) ವಿಮರ್ಶೆಯ ಧಾರೆಗಳಾಗಿಯೇ ಸ್ಥಾಪಿತವಾಗಿರುವ ಕೆಲವು ಒಳಪ್ರಕಾರಗಳಿವೆ. ಇವುಗಳಿಗೆ ವಿಮರ್ಶೆಯ ಪ್ರಕಾರಗಳಾಗಬಲ್ಲ ವ್ಯಾಪ್ತಿ ಇದೆ. ಹಾಗಾಗಿ ಇವುಗಳನ್ನು ವಿಮರ್ಶೆಯ ರೂಪಗಳು ಎನ್ನಲಾಗಿದೆ. ಈ ರೂಪಗಳನ್ನು ನಮ್ಮಲ್ಲಿ ವಿಮರ್ಶೆಯ ಪ್ರಕಾರಗಳಾಗಿ, ಬಗೆಗಳಾಗಿ, ಧಾರೆಗಳಾಗಿ, ಪಂಥಗಳಾಗಿ ಇನ್ನೂ ಸೈದ್ಧಾಂತಿಕವಾಗಿ ನಮ್ಮವರು ಮಾನ್ಯ ಮಾಡಿಲ್ಲ. ಮಾಡಬೇಕಾದ ಅಗತ್ಯವಿದೆ. ಮಾಡಲೇಬೇಕಾದಂತೆ ಇವು ನಮ್ಮಲ್ಲಿ ಬೆಳೆದಿವೆ ಕೂಡ.

ಈಗಾಗಲೇ ಸ್ಥಾಪಿತವಾದ ಕೆಲವು ಮಾರ್ಗಗಳು ನಮ್ಮಲ್ಲಿವೆ. ಉದಾಹರಣೆಗೆ ವರ್ಣನಾತ್ಮಕ ವಿಮರ್ಶೆ, ಅನ್ವಯಿಕ ವಿಮರ್ಶೆ, ರೂಪನಿಷ್ಠ ವಿಮರ್ಶೆ ಇಂತಹ ಓದುಗಳನ್ನು ಅಥವಾ ಮಾರ್ಗಗಳನ್ನು ವಿಮರ್ಶಾ ಪಂಥಗಳು ಎಂದು ಇಲ್ಲಿ ಕರೆಯಲಾಗಿದೆ. ಹಾಗೆ ನೋಡಿದರೆ ರೂಪಗಳಿಗು, ಪಂಥಗಳಿಗು ಅಂತಹ ವ್ಯತ್ಯಾಸವೇನೂ ಇಲ್ಲ. ಪಂಥಗಳು ಈಗಾಗಲೇ ಅಂಗೀಕೃತಗೊಂಡ ಮಾರ್ಗಗಳಾಗಿದ್ದರೆ, ರೂಪಗಳು ಅಷ್ಟಾಗಿ ಮಾನ್ಯಗೊಂಡಿರದ ಪಂಥಗಳಾಗಿವೆ. ರೂಪಗಳನ್ನು ನಾವು ತಾತ್ವಿಕವಾಗಿ ಕಟ್ಟಿಕೊಂಡಿಲ್ಲ ಮತ್ತು ಆಚರಣೆಯಲ್ಲಿ ಅವು ಇರುವುದರಿಂದ ಇವನ್ನು ಸೈದ್ಧಾಂತೀಕರಿಸಿಲ್ಲ. ಆಚರಣೆಯ ತಾತ್ವೀಕರಣ ಇನ್ನೂ ನಮ್ಮಲ್ಲಿ ಒಂದು ಜವಾಬ್ದಾರಿಯಾಗಿ ಬೆಳವಣಿಗೆ ಆಗಬೇಕಿದೆ. ವಿಮರ್ಶೆಯ ಚರಿತ್ರೆಯನ್ನು ಕಟ್ಟಲು ತೊಡಗಿದಾಗಲೇ ಈ ಜವಾಬ್ದಾರಿಯ ಅರಿವಾಗುವುದು. ನಮ್ಮಲ್ಲಿ ವಿಮರ್ಶಾಚರಿತ್ರೆ ಕಟ್ಟಾಣಿಕೆಯ ತಾತ್ವಿಕತೆಯ ಬಗೆಗೆ ಕೂಡ ಅಷ್ಟಾಗಿ ಜಿಜ್ಞಾಸೆ ನಡೆದಿಲ್ಲ. ವಿಮರ್ಶಾ ಚರಿತ್ರೆ ರಚನಾಶಾಸ್ತ್ರದ ಪರಿಕಲ್ಪನೆಯಲ್ಲಿ ಆಚರಣೆಯ ತಾತ್ವೀಕರಣ ಒಂದು ಅಗತ್ಯವಾದ ಮಾರ್ಗ ಆಗಬೇಕಿದೆ ಎಂಬುದನ್ನು ಈ ಅಧ್ಯಯನವು ನಮ್ರವಾಗಿ ಸೂಚಿಸುತ್ತದೆ.

ಇಲ್ಲಿ ಗುರ್ತಿಸಿರುವ ಎಲ್ಲ ವಿಮರ್ಶೆಯ ರೂಪಗಳಿಗೂ ಅವುಗಳದ್ದೇ ಆದ ಪ್ರತ್ಯೇಕ ಲಕ್ಷಣಗಳಿವೆ. ಭಿನ್ನತೆಯನ್ನು ಪ್ರಕಟಿಸುವ ಲಕ್ಷಣಗಳಿವೆ. ಹಾಗಾಗಿ ಇವುಗಳನ್ನು ವಿಮರ್ಶಾ ಮಾರ್ಗಗಳೆಂದು ಮಾನ್ಯ ಮಾಡುವುದರಲ್ಲಿ ಯಾವ ತಕರಾರೂ/ಶಿಫಾರಸೂ ಅಗತ್ಯವಿಲ್ಲ.

ಕೆಲವು ವಿಮರ್ಶಾ ನೆಲೆಗಳು ನಮ್ಮಲ್ಲಿ ದೃಷ್ಟಿಕೋನಗಳಾಗಿಯೂ, ಪಂಥಗಳಾಗಿಯೂ, ಮನೋಧರ್ಮಗಳಾಗಿಯೂ, ವಿಧಾನಗಳಾಗಿಯೂ ಬಳಕೆಯಲ್ಲಿವೆ. ಉದಾಹರಣೆಗೆ ಸ್ತ್ರೀವಾದಿ ವಿಮರ್ಶೆಯು ನಮ್ಮಲ್ಲಿ ಈಗಾಗಲೇ ಒಂದು ವಿಮರ್ಶಾ ಪಂಥವಾಗಿ ಸ್ಥಾಪಿತವಾಗಿದೆ. ಹಾಗೇ ತೌಲನಿಕ ವಿಮರ್ಶೆ ಕೂಡ ಒಂದು ವಿಮರ್ಶಾ ಪಂಥವಾಗಿ ಸ್ಥಾಪಿತವಾಗಿದೆ. ಆದರೆ ಇವುಗಳು ಏಕಕಾಲಕ್ಕೆ ವಿಮರ್ಶಾ ದೃಷ್ಟಿಗಳಾಗಿಯೂ, ಮನೋಧರ್ಮಗಳಾಗಿಯೂ, ವಿಧಾನಗಳಾಗಿಯೂ, ಪಂಥಗಳಾಗಿಯೂ ಚಾಲ್ತಿಯಲ್ಲಿವೆ. ಹಾಗಾಗಿ ಇಂಥವುಗಳಿಗೆ ಬಹುರೂಪಿ ಅಸ್ತಿತ್ವ ಇದೆ. ಆದ್ದರಿಂದಲೇ ಪ್ರಸ್ತುತ ಅದ್ಯಯನದಲ್ಲಿ ಇಂಥವನ್ನು ಎಲ್ಲ ಕಡೆಯೂ ಚರ್ಚಿಸಿಲ್ಲ. ಒಂದೊಂದೆಡೆ ಮಾತ್ರ ಚರ್ಚಿಸಲಾಗಿದೆ. ಈಗಾಗಲೇ ಗಮನಿಸಿರುವಂತೆ ನಮ್ಮಲ್ಲಿ ಕೆಲವು ವಿಮರ್ಶಾ

ಮಾರ್ಗಗಳು ಬರಿ ಮಾರ್ಗಗಳಾಗಿ ಮಾತ್ರ ಚಾಲ್ತಿಯಲ್ಲಿವೆ. ಆದರೆ ಅವುಗಳನ್ನು ಅಷ್ಟಾಗಿ ನಾವು ಬಳಸುತ್ತಿಲ್ಲ. ಕೆಲವೊಮ್ಮೆ ಪ್ರಯೋಗಕ್ಕಾಗಿ ಪ್ರಯೋಗಿಸಿರುವುದುಂಟು. ವಾಚಕ ಕೇಂದ್ರಿತ ಓದು, ತಳಸಂಸ್ಕೃತಿಯ ನೆಲೆ, ಇಂಥವು ನಮ್ಮಲ್ಲಿ ಪ್ರಯೋಗವಾಗಿವೆಯಾದರೂ ಇವು ಪ್ರತ್ಯೇಕ ಪಂಥಗಳಾಗುವಷ್ಟು ಬೆಳೆದಿಲ್ಲ. ನಿರಚನವಾದಿ ವಿಮರ್ಶೆ, ಆಧುನಿಕೋತ್ತರ ವಿಮರ್ಶೆ, ಸಮಾಜಶಾಸ್ತ್ರೀಯ ವಿಮರ್ಶೆ, ಪೌರ್ವಾತ್ಯವಾದಿ ನೆಲೆ ಇಂಥವು ನಮ್ಮಲ್ಲಿ ತತ್ವ–ಸಿದ್ಧಾಂತಗಳಾಗಿ ಚರ್ಚೆಯಾಗಿವೆ. ಮತ್ತು ಪ್ರಯೋಗಕ್ಕಾಗಿ ಕೆಲವೊಮ್ಮೆ ಪ್ರಯೋಗವಾಗಿವೆ. ಆದರೂ ಇವಕ್ಕೆ ನಮ್ಮಲ್ಲಿ ಪಂಥಗಳಾಗುವ ವ್ಯಾಪ್ತಿ ಇಲ್ಲ. ಕೆಲವನ್ನು ಸೈದ್ಧಾಂತಿಕವಾಗಿ ನಿರ್ವಚಿಸಿಕೊಳ್ಳುವ ಕೆಲಸ ಶೈಕ್ಷಣಿಕವಾಗಿ ಆಗಿದೆಯಾದರೂ ಪ್ರಾಯೋಗಿಕವಾಗಿ ಅವುಗಳ ಬಳಕೆ ಅಷ್ಟಕ್ಕಷ್ಟೆ. ಹಾಗಾಗಿ ನಮ್ಮಲ್ಲಿ ಆಚರಣೆಯಲ್ಲಿನ ಮಾರ್ಗಗಳಿಗೂ ತತ್ವರೂಪಿ ಮಾರ್ಗಗಳಿಗೂ ಸಾಕಷ್ಟು ಅಂತರವಿದೆ.

ಅಧ್ಯಾಯ–ಆರು

# ವಿಮರ್ಶಾ ಸಂಸ್ಕೃತಿ: ವಿನ್ಯಾಸ ಮತ್ತು ತಾತ್ವಿಕತೆ

## ವಿಮರ್ಶೆಯ ವಿಧಾನಗಳು, ವಿನ್ಯಾಸಗಳು, ತಾತ್ವೀಕರಣ ಮಾದರಿಗಳು

# 6. ವಿಮರ್ಶೆಯ ವಿಧಾನಗಳು, ವಿನ್ಯಾಸಗಳು, ತಾತ್ವೀಕರಣ ಮಾದರಿಗಳು

ವಿಮರ್ಶೆಯ ಆಚರಣೆಯಲ್ಲಿ ದೃಷ್ಟಿಗಳು, ರೂಪಗಳು, ಪಂಥಗಳು ಇರುವಂತೆಯೇ ಅವುಗಳಲ್ಲಿ ಹಲವು ಪ್ರವೃತ್ತಿಗಳು, ವಿಧಾನಗಳು, ವಿನ್ಯಾಸಗಳು, ಮಾರ್ಗಗಳು, ಮೆತೆಡ್ಡುಗಳು, ಅಪ್ರೋಚುಗಳು, ತಾತ್ವೀಕರಣ ಮಾದರಿಗಳು ಇತ್ಯಾದಿಗಳು ಇವೆ. ವಿಮರ್ಶೆಯಲ್ಲಿ ಇಂಥವುಗಳನ್ನು ವಿಮರ್ಶಕರು ಉದ್ದೇಶಿಸಿ, ಹೆಸರಿಸಿ ಅನುಸರಿಸಿಲ್ಲ. ಆದ್ದರಿಂದ ಆಚರಣೆಯಲ್ಲಿ ಸೂಚಿತವಾಗುವ; ಅಂತರ್ಗತವಾಗಿರುವ ಇಂತಹ ವಿಧಾನ, ಪ್ರವೃತ್ತಿ, ವಿನ್ಯಾಸಗಳನ್ನು ಪರಿಕಲ್ಪಿಸಿ, ಕಟ್ಟಿಕೊಳ್ಳಲು ಇಲ್ಲಿ ಯತ್ನಿಸಲಾಗಿದೆ. ಅಪಸಾಂದರ್ಭೀಕರಣ ವಿಧಾನ, ವರ್ಗೀಕರಣ–ನಾಮಕರಣ ವಿಧಾನ, ಮರುಸಂಯೋಜನೆ–ಮುಖಾಮುಖಿ ವಿಧಾನ, ಪ್ರಕಾರಾಂತರ ಮಾದರಿ, ನಾಮಕರಣ–ಸಮೀಕರಣ ಪ್ರವೃತ್ತಿ, ಅನ್ವಯೀಕರಣ ಪ್ರವೃತ್ತಿ–ಜೀಸುತನಗಳು, ಉಪಮಾ ರೂಪಕ ಮಾರ್ಗ, ಪ್ರಸ್ತುತತೆಯ–ಉಪಯುಕ್ತತೆಯ ಮಾರ್ಗ ಇತ್ಯಾದಿ ಹತ್ತು ಹಲವು ವಿಧಾನ, ವಿನ್ಯಾಸ, ತಾತ್ವೀಕರಣ ಮಾದರಿಗಳು ನಮ್ಮ ವಿಮರ್ಶೆಯ ಆಚರಣೆಯಲ್ಲಿ ಪ್ರಕಟವಾಗಿವೆ. ಈ ವಿಧಾನ, ವಿನ್ಯಾಸಗಳನ್ನು ಒಂದೊಂದಾಗಿ ಪ್ರತ್ಯೇಕವಾಗಿ ಬಳಸುವ ಪ್ರವೃತ್ತಿ ನಮ್ಮಲ್ಲಿ ಇಲ್ಲ. ಹಲವು ವಿನ್ಯಾಸ ವಿಧಾನಗಳನ್ನು ಸಾಂದರ್ಭಿಕವಾಗಿ ಬೇಕೆಂದಾಗ ಬಹುನೆಲೆಯಲ್ಲಿ ಬಳಸುವ ಪ್ರವೃತ್ತಿ ನಮ್ಮಲ್ಲಿ ಇದೆ. ಇಂತಹ ಬಳಕೆಯಿಂದ ಇವುಗಳನ್ನು ಆಯ್ದು ಪರಿಕಲ್ಪಿಸಿ, ಕಟ್ಟಿಕೊಳ್ಳುವ ಯತ್ನ ಇಲ್ಲಿದೆ. ಆಚರಣೆಯಲ್ಲಿನ ಬಹುಮುಖಿ ವಿಧಾನಗಳನ್ನೇ ತಾತ್ವೀಕರಿಸಿಕೊಳ್ಳುವ ಯತ್ನ ಇದಾಗಿದೆ. ಹಾಗಾಗಿ ಇಲ್ಲಿ ಪರಿಕಲ್ಪನೀಕರಣ, ತಾತ್ವೀಕರಣ ವಿಧಾನಗಳನ್ನು ಬಳಸುವ ಮತ್ತು ಕಟ್ಟಿಕೊಳ್ಳುವ ಎರಡೂ ಕೆಲಸಗಳನ್ನು ನಿರ್ವಹಿಸಲು ಯತ್ನಿಸಲಾಗಿದೆ.

## 6.1. ಅಪಸಾಂದರ್ಭೀಕರಣ ವಿಧಾನ

ಪಠ್ಯ ಸಮದರ್ಭದಿಂದ ಪಠ್ಯದ ಬಿಡಿ ಭಾಗಗಳನ್ನು ಎತ್ತಿ–ಬಿಡಿಸಿ ತನ್ನದೇ ತತ್ವಪ್ರತಿಪಾದನೆಗಾಗಿ ವಿಮರ್ಶಕರು ಅದನ್ನು ಅನ್ಯ ಸಂದರ್ಭಗಳಲ್ಲಿಟ್ಟು ವ್ಯಾಖ್ಯಾನಿಸುವುದನ್ನು ಅಪಸಾಂದರ್ಭೀಕರಣ ಎನ್ನಬಹುದು. ಒಂದೊಂದು ಪಠ್ಯದ ತುಣುಕುಗಳಿಗೂ ಅವುಗಳದ್ದೇ ಆದ ಪಠ್ಯ ಸಂದರ್ಭಗಳು ಇರುತ್ತವೆ. ಅಷ್ಟೆ ಯಾಕೆ ಕೆಲವೊಮ್ಮೆ ಕೃತಿಗಳಿಗೆ ಇಡಿಯಾಗಿ ಒಂದೊಂದು ಸಾಂಸ್ಕೃತಿಕ ಸಂದರ್ಭಗಳಿರುತ್ತವೆ. ಅಂತಹ ಸಂದರ್ಭಗಳಿಂದ ಅವುಗಳನ್ನು ಬಿಡುಗಡೆಗೊಳಿಸಿ ತನ್ನದೇ ಸಂದರ್ಭಗಳಲ್ಲಿಟ್ಟು ವ್ಯಾಖ್ಯಾನ–ವಿಶ್ಲೇಷಣೆ–ಅನ್ವಯಗಳನ್ನು ಮಾಡುತ್ತಿರುತ್ತದೆ. ಇಂಥ ಪ್ರವೃತ್ತಿಯನ್ನು ಅಪಸಾಂದರ್ಭೀಕರಣ ಎಂದು ಕರೆಯಬಹುದು.

ಇದು ಬಹಳಷ್ಟು ವ್ಯಾಪಕವಾಗಿ ಬಳಕೆಯಾಗಿರುವ ಮಾದರಿ. ನಾಟಕ–ಕಾವ್ಯ ವಿಮರ್ಶೆಯ ಸಂದರ್ಭದಲ್ಲಿ, ಸೂಕ್ತಿರೂಪಿ–ದರ್ಶನರೂಪಿ ವಿಮರ್ಶೆಗಳಲ್ಲಿ ಹೇರಳವಾಗಿ ಮತ್ತು ಬೇರೆ ಪ್ರಕಾರಗಳಲ್ಲಿ ಆಗಾಗೊಮ್ಮೆ ಬಳಕೆಯಾಗಿರುವ ಮಾದರಿ ಇದು. ಉದಾಹರಣೆಗೆ; 'ಕತ್ತಿ ಪರದೇಶಿಯಾದರೆ ಮಾತ್ರ ನೋವೆ ನಮ್ಮವರೆ ಹದ ಹಾಕಿ ತಿವಿದರದು ಹೂವೇ?' ಇಂಥ ಒಂದು ತುಣುಕು ಎತ್ತಿಕೊಂಡು ಇದಕ್ಕೊಂದು ಫಿಲಸಾಫಿಕಲ್ಲಾದ ಚರ್ಚೆ ಬೆಳೆಸುವುದು ಮತ್ತು ಆ ಮೂಲಕ ತಮ್ಮದೇ ನಿಲುವುಗಳನ್ನು ಮಂಡಿಸುವಂತಹ ಮಾದರಿಯನ್ನು ಅಪಸಾಂದರ್ಭೀಕರಣ ಎನ್ನಬಹುದು. ಕೆಲವೊಮ್ಮೆ ಇಂಥ ಮಾದರಿಯಿಂದ ಭಿನ್ನಾರ್ಥ ಸಾಧ್ಯತೆಗಳ ಅನಾವರಣ ಆಗುತ್ತದೆ. ಕೆಲವೊಮ್ಮೆ ಅಪವ್ಯಾಖ್ಯಾನಗಳಾಗುವ ಸಾಧ್ಯತೆಯೂ ಇರುತ್ತದೆ. 'ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನೋ?' ಎಂಬ ಒಂದು ಮಾತು ತೆಗೆದುಕೊಂಡು ಅದಕ್ಕೆ ತತ್ವಶಾಸ್ತ್ರೀಯವಾಗಿ ಒಂದಷ್ಟು ವ್ಯಾಖ್ಯಾನ ಮಾಡುವುದು, ಬಿಡಿ ಉದಾಹರಣೆಗಳಿಂದ ಜನರಲೈಸ್ಡ್ ಆದ ಸ್ಟೇಟ್‌ಮೆಂಟುಗಳನ್ನು ನೀಡುವುದು, ಇಂಥ ಬಿಡಿ ಬಿಡಿ ಉದಾಹರಣೆಗಳ ಮೂಲಕವೇ ಒಟ್ಟಂದದ ಅಭಿಪ್ರಾಯಕ್ಕೆ–ನಿರ್ಣಯಗಳಿಗೆ ಬರುವುದು, ಒಂದೊಂದು ವಾಕ್ಯ ತೆಗೆದುಕೊಂಡು ಒಟ್ಟಾರೆ ಕುವೆಂಪು ಬಗ್ಗೆಯೆ ಒಂದು ಅಭಿಪ್ರಾಯ ಕೊಟ್ಟುಬಿಡುವುದು ಹೀಗೆ ಇಂತಹ ಅಪಸಾಂದರ್ಭೀಕರಣ ಪ್ರವೃತ್ತಿ ನಮ್ಮಲ್ಲಿ ಸಾಕಷ್ಟು ಬಳಕೆಯಾಗಿದೆ. ಬಿಡಿ ಮಾತುಗಳ ಅಪಸಾಂದರ್ಭೀಕರಣದ ಅಪಾಯಕ್ಕೆ ಇದೊಂದು ಮಾದರಿ. ಇದೊಂದು ನಮ್ಮ ಒಟ್ಟಾರೆ ಕನ್ನಡ ವಿಮರ್ಶೆಯ ಜನಪ್ರಿಯ ಮಾದರಿ

ಈ ಅಪಸಾಂದರ್ಭೀಕರಣ ವಿಧಾನದಲ್ಲಿ ಪಠ್ಯದ್ದೇ ಆದ ಆಶಯ–ಆಕೃತಿ ಸಂದರ್ಭವನ್ನು ಮುರಿದು ವಿಮರ್ಶಕ ತನ್ನದೇ ಆದ ಆಶಯಗಳನ್ನು ಅಲ್ಲಿ ಕಾಣುತ್ತಾ ಇರುತ್ತಾನೆ. ಇದು ವಿಮರ್ಶೆಯ ಸೃಜನಶೀಲತೆ ಪ್ರಕಟವಾಗುವ ಒಂದು ಆಯಾಮವೂ ಹೌದು. ಹಾಗೇ ಸಾಹಿತ್ಯಕ ಸಂದರ್ಭಗಳಿಂದ ಕಾಲ, ದೇಶಗಳಿಂದ ಸಾಹಿತ್ಯವನ್ನು ಬಿಡಿಸಿಕೊಳ್ಳುವ ಯತ್ನವೂ ಹೌದು. ಹಾಗೇ ಭಿನ್ನ ವಾಚಕ ಸ್ಪಂದನ ಸಾಧ್ಯತೆಗಳನ್ನು ಅನ್ವೇಷಿಸುವ ವಿಧಾನವೂ ಹೌದು.

### 6.2. ವರ್ಗೀಕರಣ–ನಾಮಕರಣ ವಿಧಾನ

ಲೇಖಕನ ಅಖಂಡವಾಗಿ ನೋಡುವ ಮತ್ತು ಬಿಡಿಬಿಡಿಯಾಗಿ ನೋಡುವ ಪ್ರವೃತ್ತಿ ನಮ್ಮಲ್ಲಿ ಇರುವಂತೆಯೇ ವರ್ಗೀಕರಿಸಿ–ನಾಮಾಂಕಿಸಿ ನೋಡುವ ಪ್ರವೃತ್ತಿಯೂ ಇದೆ. ಲೇಖಕನ ಸಾಹಿತ್ಯವನ್ನಷ್ಟೆ ಅಲ್ಲ ಕಾಲಘಟ್ಟ–ಸಂವೇದನೆ–ಪರಂಪರೆ (ಚರಿತ್ರೆ)ಗಳನ್ನೆಲ್ಲ ಅಧ್ಯಯನದ ಅನುಕೂಲಕ್ಕಾಗಿ ವಿಭಾಗೀಕರಿಸಿ–ನಾಮಾಂಕಿಸಿ ಅಧ್ಯಯನ ಮಾಡುವ ಪ್ರವೃತ್ತಿ ನಮ್ಮಲ್ಲಿದೆ. ನಮ್ಮ ಸಾಹಿತ್ಯ ಚರಿತ್ರೆ ರಚನೆಯ ಪ್ರಯತ್ನಗಳನ್ನು ನೋಡಿದರೆ ಈ ಪ್ರವೃತ್ತಿಯ ಆಚರಣೆಯನ್ನು ಕಾಣಬಹುದು. ಕುವೆಂಪುಗೆ ಸಂಬಂಧಿಸಿದಂತೆ ಪ್ರಕಾರ ದೃಷ್ಟಿ, ಪರಿಕರ ದೃಷ್ಟಿ, ವಿಚಾರ ದೃಷ್ಟಿ, ವಸ್ತು ಸಾಮಾಗ್ರಿ ದೃಷ್ಟಿ ಹೀಗೆ ಹಲವು ದೃಷ್ಟಿಗಳಿಂದ ಸಾಹಿತ್ಯವನ್ನು ವರ್ಗೀಕರಿಸಿ ವಿಮರ್ಶಿಸಲಾಗಿದೆ. ಒಂದೊಂದು ಪ್ರಕಾರಗಳನ್ನು ಬೇರೆ ಬೇರೆ ದೃಷ್ಟಿಗಳಿಂದ ವರ್ಗೀಕರಿಸಿ ವಿಮರ್ಶಿಸುವ ಆಚರಣೆ ಇಲ್ಲಿ ಸಂಭವಿಸಿದೆ. ಕಾವ್ಯವನ್ನು ಕುರಿತಂತೆ ಕುವೆಂಪು ಅವರ ನಿಸರ್ಗ ಕವಿತೆಗಳು, ಆಧ್ಯಾತ್ಮ ಗೀತೆಗಳು, ದಾಂಪತ್ಯ ದರ್ಶನದ ಕವಿತೆಗಳು, ಭಾವಗೀತೆಗಳು, ಖಂಡ ಕಾವ್ಯಗಳು, ಕಥನಕವಿತೆಗಳು ಹೀಗೆ ಭಿನ್ನ ಭಿನ್ನವಾಗಿ ವರ್ಗಿಕರಿಸಿಕೊಂಡು ವಿಮರ್ಶೆ ಮಾಡಲಾಗಿದೆ. ನಾಟಕಗಳನ್ನು ಐತಿಹಾಸಿಕ ನಾಟಕಗಳು, ಸಾಮಾಜಿಕ ನಾಟಕಗಳು, ಪೌರಾಣಿಕ ನಾಟಕಗಳು ಹೀಗೆ ಹಲವು ರೀತಿಯಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ. ವಸ್ತು ವಲಯಗಳನ್ನು ಆಧರಿಸಿ ಕುವೆಂಪು ಅವರ ಶಿಕ್ಷಣ ತತ್ವ ವಿಚಾರ, ಕುವೆಂಪು ಅವರ ನಾಡು ನುಡಿ ಚಿಂತನೆ, ಕುವೆಂಪು ಅವರ ಸ್ತ್ರೀದೃಷ್ಟಿ ಹೀಗೆ ಭಿನ್ನ ವಲಯಗಳನ್ನು ಪ್ರತ್ಯೇಕಿಸಿಕೊಂಡು ಆ ಬಗೆಗಿನ ಕುವೆಂಪು ದೃಷ್ಟಿಗಳನ್ನು ಪರಿಶೀಲಿಸಲಾಗಿದೆ. ಇಂತಹ ಕಡೆ ವರ್ಗೀಕರಣವು ಪ್ರತ್ಯೇಕೀಕರಣ ಪ್ರಜ್ಞೆಯಾಗಿ, ಖಂಡ ಪ್ರಜ್ಞೆಯಾಗಿ ಮಾಡಿದೆ. "ನಿಸರ್ಗದರ್ಶನ, ವೇದಾಂತದರ್ಶನ ಮತ್ತು ಮಾನವ ದರ್ಶನ ಎಂಬ ಮೂರು ಮಾತುಗಳಲ್ಲಿ ಕುವೆಂಪು ಜೀವನ ಮತ್ತು ಸಾಹಿತ್ಯಗಳ ಸ್ವರೂಪಲಕ್ಷಣಗಳನ್ನು ಸಂಗ್ರಹಿಸಬಹುದೆಂದು ತೋರುತ್ತದೆ." (2638–ಪುಟ: 16) ಹೀಗೆ ಕುವೆಂಪು ಸಾಹಿತ್ಯ ಲಕ್ಷಣನಿರ್ವಚನ ಸಂದರ್ಭದಲ್ಲಿಯೂ ತಮ್ಮ ನಿಲುವುಗಳನ್ನು ವರ್ಗೀಕರಣ ವಿಧಾನದ ಮೂಲಕ ಅಭಿವ್ಯಕ್ತಿಸುವ ಕ್ರಮ ನಮ್ಮಲ್ಲಿದೆ.

ತೌಲನಿಕ ಕ್ರಮದಲ್ಲಿ ಅಚಳಿಯಾಗಿ ವಿಭಾಗಿಸಿ ನೋಡುವ, ಬಹುನೆಲೆಯಲ್ಲಿ ವರ್ಗೀಕರಿಸಿ ತುಲನೆಮಾಡುವ ದೃಷ್ಟಿಗಳು ನಮ್ಮಲ್ಲಿವೆ. ಸ್ತ್ರೀವಾದಿ ದೃಷ್ಟಿಯಲ್ಲಿ ಪಾತ್ರಗಳನ್ನು ವರ್ಗೀಕರಿಸುವ, ಸಂವೇದನೆಗಳನ್ನು ವರ್ಗೀಕರಿಸುವ ದೃಷ್ಟಿಗಳೂ ಇವೆ. ಹೀಗೆ ವರ್ಗೀಕರಣ–ನಾಮಕರಣ ವಿನ್ಯಾಸದಲ್ಲಿ ಅಸಂಖ್ಯ ಮಾದರಿಯ ವರ್ಗೀಕರಣಗಳಿವೆ. ಈ ವಿನ್ಯಾಸವು ನಮ್ಮ ಆಧುನಿಕ ವಿಮರ್ಶೆಯ ಒಂದು ಬಹು ಮುಖ್ಯ ವಿನ್ಯಾಸವೂ, ಲಕ್ಷಣವೂ ಆಗಿದೆ.

### 6.3. ನಾಮಕರಣ–ಸಮೀಕರಣ ಪ್ರವೃತ್ತಿ

ಸಂಸ್ಕೃತ, ಇಂಗ್ಲಿಷ್ ಇಂತಹ ಅನ್ಯ ಸಂಸ್ಕೃತಿಯ ಪ್ರಮುಖರ ಜೊತೆ ನಮ್ಮವರನ್ನು ಸಮೀಕರಿಸಿ ನೋಡುವ ಪ್ರವೃತ್ತಿಯೊಂದು ನಮ್ಮ ತೌಲನಿಕ ವಿಮರ್ಶೆಯಲ್ಲಿ ಚಾಲ್ತಿಯಲ್ಲಿದೆ. ಇವನು ಕನ್ನಡದ ಕಾಳಿದಾಸ, ಇವನು ಕನ್ನಡದ ಶೇಕ್ಸ್‌ಪಿಯರ್, ಇವನು ಕನ್ನಡದ ವರ್ಡ್ಸ್‌ವರ್ತ್ ಹೀಗೆ ಇಂತಹ ಸಮೀಕರಣಗಳು ಸಾಕಷ್ಟು ವ್ಯಾಪಾಕವಾಗಿ ನಮ್ಮಲ್ಲಿ ಇವೆ. ನಾಮಕರಣ ವಿನ್ಯಾಸದಲ್ಲಿ ಇದೊಂದು ಪ್ಯಾಶನ್ನು. ವ್ಯಕ್ತಿಯ ಬಗೆಗಿನ ಪ್ರೀತಿ, ಶ್ರೇಷ್ಠತೆಯ ಹಂಬಲ, ಕೀಳರಿಮೆಯ ಭಾವಗಳಿಂದ ಇಂಥ ವಿನ್ಯಾಸಗಳು ಜನಿಸಿರಬಹುದು. ಕುವೆಂಪುವನ್ನು ಕನ್ನಡದ ವರ್ಡ್ಸ್‌ವರ್ತ್, ಮಲೆನಾಡಿನ ವಾಲ್ಮೀಕಿ ಎಂದೆಲ್ಲ ಹಲವರು ಬಣ್ಣಿಸಿದ್ದಾರೆ. ಸಾಹಿತ್ಯ ಸೃಷ್ಟಿ ಮತ್ತು ಜೀವನ ದೃಷ್ಟಿಗಳಲ್ಲಿನ ಸಾಮ್ಯತೆಯನ್ನೇ ಹಿಡಿದು ಇಂಥ ಸಮೀಕರಣಗಳನ್ನು ಮಾಡಲಾಗಿದೆ. ಇದು ಫಾರಿನ್ ಎಲಿಮೆಂಟೊಂದನ್ನು ಶ್ರೇಷ್ಠವೆಂದು ಭಾವಿಸುತ್ತ ಅಂಥ ಶ್ರೇಷ್ಠವಾದುದು ನಮ್ಮಲ್ಲಿ ಇದೆ ಎಂದು ಗುರ್ತಿಸುವ ಪ್ರವೃತ್ತಿಯಾಗಿದೆ. ಕೀಳರಿಮೆಯೇ ಇದಕ್ಕೆ ಕಾರಣ. ಇಂಥದ್ದನ್ನು ಮೇಲರಿಮೆಯಿಂದ ಎದುರಾಗುವ ಪ್ರವೃತ್ತಿಯೂ ನಮ್ಮಲ್ಲಿದೆ. 'ಕುವೆಂಪು ಅವರನ್ನು ಕನ್ನಡದ ವರ್ಡ್ಸ್‌ವರ್ತ್ ಅನ್ನುವುದಕ್ಕಿಂತ ವರ್ಡ್ಸ್‌ವರ್ತ್‌ನನ್ನೇ ಇಂಗ್ಲಿಷಿನ ಕುವೆಂಪು ಎನ್ನುವುದು ಹೆಚ್ಚು ಉಚಿತವೆನಿಸೀತು' (514–ಪುಟ: 71) ಎಂಬಂತಹ ಹೇಳಿಕೆಗಳೂ ಇಲ್ಲಿ ಪ್ರಕಟವಾಗಿವೆ. ಗುಂಡ್ಮಿ ಚಂದ್ರಶೇಖರ ಐತಾಳರು ರಾಮಾಯಣ ದರ್ಶನವನ್ನು ಪ್ರಕೃತಿರಾಮಾಯಣ ಎಂದು ಕರೆದರೆ (514–ಪುಟ: 69) ಹಲವಾರು ವಿಮರ್ಶಕರು ಕುವೆಂಪು ಕಾದಂಬರಿಗಳನ್ನು ಗದ್ಯ ಮಹಾಕಾವ್ಯಗಳೆಂದು ಕರೆದಿದ್ದಾರೆ. ಕುವೆಂಪು ಕೃತಿಗಳನ್ನು ಹೀಗೂ ವ್ಯಾಖ್ಯಾನಿಸುವ ಪರಿಪಾಠವಿದೆ. ಈ ವಿಮರ್ಶಾ ವಿನ್ಯಾಸಗಳನ್ನು ಕ್ರಮವಾಗಿ ಕವಿ ನಿರ್ವಚನ, ಕಾವ್ಯ ನಿರ್ವಚನ ಎನ್ನಬಹುದು. (ಹೆಚ್ಚಿನ ವಿವರಗಳಿಗೆ ನೋಡಿ; ಕವಿ ನಿರ್ವಚನ ಮತ್ತು ಸಾಹಿತ್ಯ ಲಕ್ಷಣ ನಿರ್ವಚನ)

ಕುವೆಂಪು ಅವರನ್ನು ದಾರ್ಶನಿಕ ಕವಿ, ಋಷಿಕವಿ, ಪ್ರವಾದಿ ಸಂತ, ನಿಸರ್ಗಾರಾಧಕ ಎಂದೆಲ್ಲ ಕೂಡ ಕರೆಯಲಾಗಿದೆ. ಇಂಥವು ಪ್ರತಿಮೆ-ಪ್ರತೀಕ-ಅನ್ವರ್ಥನಾಮಗಳಂತೆ ಬಳಕೆಯಾಗಿವೆ. ಕಡಲತೀರದ ಭಾರ್ಗವ, ವರಕವಿ, ಕನ್ನಡದ ಕಣ್ವ, ಕನ್ನಡದ ಆಸ್ತಿ, ದಲಿತಕವಿ ಇಂಥ ನಾಮಾಂಕಿತಗಳನ್ನು ನಮ್ಮಲ್ಲಿ ಬೇರೆ ಬೇರೆಯವರಿಗೂ ಕೊಡಲಾಗಿದೆ. ಕವಿಗಳಿಗೆ ಹಣೆಪಟ್ಟಿ ಅಂಟಿಸುವ, ಒಂದೊಂದು ಇಮೇಜು ಕಟ್ಟುವ ಪ್ರವೃತ್ತಿ ಇದು.

ಬೇಂದ್ರೆ ಕುವೆಂಪುರನ್ನು ಹೋಲಿಸುತ್ತ ಜಿ.ಎಸ್.ಶಿವರುದ್ರಪ್ಪನವರು ಬೇಂದ್ರೆಯನ್ನು ಶ್ರಾವಣದ ಕವಿ ಎಂದರೆ ಕುವೆಂಪುವನ್ನು ಸೂರ್ಯೋದಯ ಕವಿ ಎಂದು ಹೇಳುತ್ತಾರೆ.(294-ಪುಟ: 300) ಹಾಗೆಯೆ ಮುಂದುವರಿದು ಕುವೆಂಪುವನ್ನು ಭಾವಗೀತೆಯ ಕವಿ ಎನ್ನುವುದಕ್ಕಿಂತ ಕಥನ ಕವಿ ಎಂದು ಕರೆಯುವುದು ಉಚಿತ ಎಂದೂ ಹೇಳುತ್ತಾರೆ. (294-ಪುಟ: 305) ಇಲ್ಲು ಕೂಡ ಕುವೆಂಪುವನ್ನು ಕಥನ ಕವಿ ಎಂದು ಬೇಂದ್ರೆಯನ್ನು ಶ್ರಾವಣದ ಕವಿ ಎಂದು ಕರೆಯುವುದಕ್ಕೆ ಹಿನ್ನೆಲೆಯಾಗಿ ವಯಕ್ತಿಕ ವಿಶಿಷ್ಟತೆಯ ಜೊತೆಗೆ ತೌಲನಿಕ ಮಾದರಿಗಳು ಮಾನದಂಡಗಳಾಗಿ ನಮ್ಮವರಿಗೆ ಒದಗಿ ಬಂದಿವೆ. ಗುಂಡ್ಮಿ ಚಂದ್ರಶೇಖರ ಐತಾಳರು ಕುವೆಂಪು ಪ್ರಕೃತಿ ಪ್ರಜ್ಞೆಯನ್ನು ವಿವರಿಸುತ್ತ ಕುವೆಂಪುವನ್ನು ನಡೆದಾಡುವ ಮಲೆನಾಡು ಎಂದು ಕರೆದಿದ್ದಾರೆ. ಕುವೆಂಪುವನ್ನು ಬೇರೆ ಬೇರೆ ಪ್ರತೀಕಗಳಲ್ಲಿ ಬಣ್ಣಿಸುವ ಪ್ರವೃತ್ತಿ ಇದು. ಸಾಹಿತ್ಯ ವಿಮರ್ಶೆಯು ಕವಿಯ ಬಗೆಗಿನ ಗೌರವ, ಮೆಚ್ಚುಗೆ, ಪ್ರೀತಿಗಳಿಂದ ತುಂಬಿಕೊಂಡಾಗ ಇಂತಹ ಬಣ್ಣನೆಗಳು (ಭಿನ್ನ ನಾಮಾಂಕಿತಗಳು) ವಿಮರ್ಶೆಯಲ್ಲಿ ಉಂಟಾಗುತ್ತವೆ. ಇದು ಕೆಲವೊಮ್ಮೆ ಆರಾಧನೆ-ಪರಾಕು ಮಾದರಿಯಾಗಿಯೂ ನಮ್ಮಲ್ಲಿ ಬೆಳೆದಿದೆ.

**6.4. ಕವಿ ನಿರ್ವಚನ (ಪರಾಕು ಮಾದರಿ)**

ಸಾಹಿತ್ಯರೂಪಿ ವಿಮರ್ಶೆಯಲ್ಲಿ ಮತ್ತು ಅನೇಕ ಲೇಖನಗಳಲ್ಲಿ ಕವಿಕೇಂದ್ರಿತವಾಗಿ ಚರ್ಚಿಸುವುದು ನಮ್ಮ ವಿಮರ್ಶೆಯ ಒಂದು ಬಹು ವ್ಯಾಪಕವಾದ ಲಕ್ಷಣವಾಗಿದೆ. ಇಂತಹ ಕಡೆ ಸಾಹಿತ್ಯದ ಗುಣ ಲಕ್ಷಣಗಳನ್ನು ನಿರ್ವಚಿಸುವ ಜೊತೆಗೆ ಕವಿಯನ್ನು ನಿರ್ವಚಿಸುವ ಕೆಲಸವನ್ನು ನಮ್ಮ ವಿಮರ್ಶೆಯು ಮಾಡಿದೆ. ಇಲ್ಲೆಲ್ಲ ಕುವೆಂಪುವನ್ನು ಆರಾಧನಾ ಭಾವದಿಂದ, ಪ್ರೀತಿ-ಗೌರವಗಳಿಂದ ನಿರ್ವಚಿಸಿರುವುದೇ ಹೆಚ್ಚು. ಕುವೆಂಪು ವ್ಯಕ್ತಿತ್ವ-ವೈಚಾರಿಕ ನಿಲುವುಗಳನ್ನು ಪ್ರಶ್ನೆ ಮಾಡಿರುವ ಉದಾಹರಣೆಗಳು ಬೆರಳೆಣಿಕೆಯಷ್ಟು ಇದ್ದರೆ; ಇಲ್ಲಿ ಹೊಗಳಿ ಅಟ್ಟಕ್ಕೇರಿಸಿರುವ ನಿದರ್ಶನಗಳು ನೂರಾರಿವೆ. ಕುವೆಂಪು ಕುರಿತ ಬಿಡಿ ಕವನಗಳಲ್ಲಿ ಮತ್ತು ಕೆಲವು ಲೇಖನಗಳಲ್ಲಿ ಕುವೆಂಪುವನ್ನು ಹೇಗೆಲ್ಲ ಕರೆಯಲಾಗಿದೆ; ವರ್ಣಿಸಲಾಗಿದೆ; ಉಪಮಿಸಿ-ಪ್ರತಿಮಿಸಲಾಗಿದೆ ಎಂಬುದನ್ನು ಕ್ರೋಡೀಕರಿಸಿ ಈ ಕೆಳಗೆ ನೀಡಲಾಗಿದೆ, ಗಮನಿಸಿ.

ಅಭಿನವ ಪಂಪ, ಅಭಿನವ ಆನಂದವರ್ಧನ, ಅಭಿಜಾತ ವಿಡಂಬನಕಾರ, ಮಹಾನ್ ಮಾನವತಾವಾದಿ, ಅಭಿನವ ವಾಲ್ಮೀಕಿ, ಮಲೆನಾಡ ವಾಲ್ಮೀಕಿ, ಕನ್ನಡದ ವಾಲ್ಮೀಕಿ, ಕನ್ನಡದ ಕಣ್ಣು, ಕನ್ನಡದ ಕಲ್ಪವೃಕ್ಷ, ಕನ್ನಡದ ಕಾಮಧೇನು, ಕನ್ನಡದ ತ್ರಿವಿಕ್ರಮ, ಕನ್ನಡದ ಶಿಖರ, ಕನ್ನಡದ ಮೇರು, ಕನ್ನಡಮ್ಮನ ಶಿರದ ಮಾಣಿಕ, ಸಿರಿಗನ್ನಡ ವಾಲ್ಮೀಕಿ, ಕಾಡಿನ ಕೊಳಲು, ಮಲೆನಾಡ ಹಕ್ಕಿ, ಮಲೆನಾಡ ಕೋಗಿಲೆ, ನಡೆದಾಡುವ ಮಲೆನಾಡು, ಕುಪ್ಪಳಿಯ ಕೋಗಿಲೆ, ನಾಡ ನಂದನ, ಸಹ್ಯಾದ್ರಿಯ ಸೂರ್ಯ, ಸರಸತಿಯ ಆಭರಣ, ಪ್ರತಿಭಾ ಸೂರ್ಯ, ಉದಯರವಿ ಬೆಳಕು, ಸೂರ್ಯ ಚಂದ್ರ ಚಿಕ್ಕೆ, ನಕ್ಷತ್ರಖಚಿತ ನಭ, ಮಲೆನಾಡ ಕಾಡು ಹುಡುಗ, ಮೇರು ಭವ್ಯ ಕವಿ, ಪ್ರತಿಭಾನ ಶ್ರೀ ಸೂರ್ಯ, ಮಲೆಮಗ, ರಾಜಹಂಸ, ಮಲೆನಾಡಿನ ಕವಿ, ಮಲೆಯ ಕವಿ, ಕನ್ನಡದ ಭಾಗ್ಯ, ಕನ್ನಡದ ಪುಣ್ಯ, ಕನ್ನಡದ ಪೆಂಪು, ಕನ್ನಡದ ಕಂಪು, ಕನ್ನಡದ ಕಣ್ಮಣಿ, ಕನ್ನಡದ ಕಾರಣ ಪುರುಷ, ಕನ್ನಡದ ಕಾಯಕ ಜೀವಿ, ಕಾಡಿನ ಕವಿ, ಮಹಾಕವಿ, ಮೇರು ಕವಿ, ರಾಷ್ಟ್ರಕವಿ, ಅಮರ ಕವಿ, ಅನಿಕೇತನ ಕವಿ, ಮೇರು ಭವ್ಯ ಕವಿ, ಮಹೋನ್ನತ ಕವಿ, ಹೀರೆಯ ಹೂವಿನ ಕವಿ, ಶತಮಾನದ ಕವಿ, ಸಹಸ್ರಮಾನದ ಕವಿ, ಸರ್ವಕಾಲದ ಕವಿ, ಯುಗದ ಕವಿ-ಜಗದ ಕವಿ, ಕಾವ್ಯ ಕಲ್ಪತರು, ಕವಿಬ್ರಹ್ಮ, ಕವಿದೈವ, ಕಬ್ಬಿಗ ದೈವ, ಕವಿಕುಲಗುರು, ಕವಿಕುಲದೀಪ, ಕವಿಕುಲಪ್ರದೀಪ, ಕಾವ್ಯರ್ಷಿ, ಕಾವ್ಯ ಸಿಂಧು, ವಿಶ್ವ ಕವಿ, ಋಷಿ ಕವಿ, ಮಹಾಕವಿ, ರಸಋಷಿ, ಚೈತನ್ಯ ತಂದೆ, ಗೌರಿಶಂಕರ, ನುಡಿ ರೂವಾರಿ, ಜೀವದ ಬುಗುರಿ, ಜೀವನದಿ, ಮಹಾಗುರು, ಪ್ರಾಚಾರ್ಯೋತ್ತಮ, ಮಹಾಂಬುಧಿ, ಆಧುನಿಕ ಕಲ್ಕಿ, ಕವಿಕಾಮಧೇನು, ಕವಿಸಾಮ್ರಾಟ್, ಕವಿಶೈಲ, ನಿಸರ್ಗಾರಾಧಕ, ನಿಸರ್ಗೋಪಾಸಕ, ಮಹಾಧನ್ವಂತರಿ, ಮೋಕ್ಷವಾಹಕ ರಥ, ರವಿಚಿನ್ನ, ಗುರು, ಮಹಾಗುರು, ಲೋಕಗುರು, ಬೆರಗು, ಬೆಂಕಿಯ ಹಕ್ಕಿ, ರಸಯೋಗಿ, ಯುಗವಾಣಿ,

ಚೈತನ್ಯ ರೂಪಿ, ಅಕ್ಷಯನಿಧಿ, ನಿಜದ ಜಲಗಾರ, ಜಗದ ಜಲಗಾರ, ವಿಶ್ವಬಂಧು, ವಿಶ್ವಮಾನವ, ವಿಶ್ವಾಮಿತ್ರ, ಶಾಶ್ವತ ಬಂಧು, ವೃಕ್ಷರಾಜ, ಶಾಶ್ವತ ಕಂಪು, ಶಿವಶೃತಿ, ಶಿವಚಿಂತನದುಸಿರು, ಸರಸತಿಯ ಆಭರಣ, ಸಿರಿಸಾರ, ವಿಶ್ವವಜ್ರ, ಕರ್ನಾಟಕ ರತ್ನ, ದಾರ್ಶನಿಕ, ದಾರ್ಶನಿಕ ವಿಜ್ಞಾನಿ, ದಾರ್ಶನಿಕ ಸಂತ, ಕವಿಸಾರ್ವಭೌಮ, ಬಡ್ಡೆ ಬೇರು, ಕಿಂದರಿ ಜೋಗಿ, ಸೌಂದರ್ಯ ಯೋಗಿ, ಶೂದ್ರ ತಪಸ್ವಿ, ಗೊಮ್ಮಟಸಮ, ದೂರದ ಸಿಡಿಲು, ದಿವ್ಯ ದ್ರಷ್ಟಾರ, ಭಾವತಾಪಸಿ, ಪೂರ್ಣದೃಷ್ಟಿಯ ಹರಿಕಾರ, ತ್ರಿವಿಕ್ರಮ ಸ್ವರೂಪಿ, ಲೋಕೋತ್ತರ ಮಾನ್ಯ, ವಿಶ್ವಕವಿಯೋಗಿ, ಧೀರ ಧಿಷಣಿ, ನಮ್ಮ ಮನೆಯ ವಿಶ್ವಮಾನವ, ಮಾನವತಾವಾದಿ ರಸಋಷಿ, ನವಕನ್ನಡತ್ವ ನಿರ್ಮಾಣದ ಆಚಾರ್ಯ, ಅಸಮಾನತೆಯ ವಿರುದ್ಧದ ಅಪ್ರತಿಮ ಸೇನಾನಿ, ದೇಶೀ ಸಂಸ್ಕೃತಿಯ ಚಿಂತಕ, ಪುನಃ ದೃಷ್ಟಿಯ ವಲ್ಮೀಕ, ರಮ್ಯ ಪ್ರಜ್ಞೆಯ ಉನ್ನತ ಶಿಖರ, ಸಹ್ಯಾದ್ರಿ ಶೃಂಗದಿಂದಿಳಿದು ಬಂದ ಕಾವ್ಯ ಗಂಗೆ, ಭವ್ಯ ನಿತ್ಯಗಳ ಅಪೂರ್ವ ಸಂಗಮ....

ಹೀಗೆ ನೂರಾರು ರೀತಿಯಲ್ಲಿ ಕುವೆಂಪುವನ್ನು ಪರಾಕು ಮಾಡಲಾಗಿದೆ. ಇಂತಹ ಪರಾಕುಲಕ್ಷಣ ಕೂಡ ನಮ್ಮ ವಿಮರ್ಶೆಯಲ್ಲಿ ಅಲ್ಲಲ್ಲಿ ಅಂತರ್ಗತವಾಗಿ ಇದೆ. ಕೆಲವನ್ನು ಮಾತ್ರ ಇಲ್ಲಿ ಕ್ರೋಡೀಕರಿಸಿ ನೀಡಲಾಗಿದೆ. ಎಲ್ಲವನ್ನು ಕ್ರೋಡೀಕರಿಸಿ ಕೊಂಡರೆ ಇದೇ ಒಂದು ಪರಾಕು ಮಹಾಕಾವ್ಯ ಆಗುವಷ್ಟು ಪರಾಕು ವಿಮರ್ಶೆ ಕುವೆಂಪು ಕುರಿತು ಬಂದಿದೆ. ಕುವೆಂಪು ಕುರಿತ ಪ್ರೀತಿ-ಅಭಿಮಾನ, ಗೌರವ, ಭಕ್ತಿ, ಆರಾಧನಾ ಭಾವಗಳೆಲ್ಲ ಇಲ್ಲಿವೆ. ಇದು ವಿಮರ್ಶೆಯಲ್ಲಿನ ಕಾವ್ಯ ಪ್ರಜ್ಞೆಯ ಒಂದು ಮುಖ ಕೂಡ ಹೌದು. ಗುಣವಚನಗಳ ಮೂಲಕ ಆಗಿರುವ ಕವಿನಿರ್ವಚನದ ಒಂದು ಮುಖ ಕೂಡ ಹೌದು. ಉಪಮೆ, ರೂಪಗಳ ಮೂಲಕ ಕವಿಯನ್ನು ಬಣ್ಣಿಸುವ, ನಿರ್ವಚಿಸುವ, ವ್ಯಾಖ್ಯಾನಿಸುವ, ಲಕ್ಷಣೀಕರಿಸುವ, ನಾಮಾಂಕಿಸುವ ಹಲವು ಪ್ರವೃತ್ತಿಗಳು ಇಂತಹ ಕಡೆ ಪ್ರಕಟವಾಗಿವೆ.

### 6.5. ಗುಣ-ಲಕ್ಷಣ ವ್ಯಾಖ್ಯಾನ ವಿಧಾನ

ಸಾಹಿತ್ಯವನ್ನು ವಿಮರ್ಶಿಸುವಾಗ ಸಾಹಿತ್ಯದ ಗುಣಗಳನ್ನು, ಲಕ್ಷಣಗಳನ್ನು ವ್ಯಾಖ್ಯಾನಿಸುವ; ನಿರ್ವಚಿಸುವ ಕೆಲಸವನ್ನು ನಮ್ಮ ವಿಮರ್ಶೆಯು ಮಾಡುತ್ತದೆ. ಇದು ಕೆಲವೊಮ್ಮೆ ಕವಿಲಕ್ಷಣ ನಿರ್ವಚನವೂ ಆಗಿ ಕಾಣಿಸಿಕೊಳ್ಳುವುದುಂಟು. ನಮ್ಮ ಪ್ರಾಚೀನರಲ್ಲಿ ಇರುವ ಕವಿ, ಕಾವ್ಯದ ಗುಣ ನಿರ್ವಚನಕ್ಕೆ ಹತ್ತಿರವಾದ ಪ್ರಕ್ರಿಯೆ ಇದು. ಕವಿ, ಕಾವ್ಯ ಲಕ್ಷಣವನ್ನು ನಿರ್ವಚಿಸುವಾಗ, ಸಾಹಿತ್ಯದ ಲಕ್ಷಣವನ್ನು ನಿರ್ವಚಿಸುವಾಗ, ಕವಿಯ ಧೋರಣೆ-ಸಂವೇದನೆಗಳನ್ನು ನಿರ್ವಚಿಸುವಾಗ ಎರಡು ಕ್ರಮಗಳು ಸಾಮಾನ್ಯವಾಗಿ ನಮ್ಮಲ್ಲಿ ಕಂಡುಬರುತ್ತವೆ. 1. ಒಂದೇ ಮಾತಿನಲ್ಲಿ ಒಟ್ಟಾರೆ ಲಕ್ಷಣವನ್ನು ಬೀಸಾಗಿ ನಿರ್ವಚಿಸುವುದು. ಏಕಲಕ್ಷಣ ನಿರ್ವಚನ ಎಂದು ಇದನ್ನು ಕರೆಯಬಹುದು. 2. ಬಹುಲಕ್ಷಣಗಳನ್ನು ಗುರ್ತಿಸುವುದು. ಬಹುಗುಣ ನಿರ್ವಚನ ಎಂದು ಇದನ್ನು ಕರೆಯಬಹುದು. ಇಲ್ಲೆಲ್ಲ ವಿವರಿಸುವ ಮೂಲಕ ಮತ್ತು ಪರಿಕಲ್ಪಿಸಿ ವ್ಯಾಖ್ಯಾನಿಸುವ ಮೂಲಕ ಇಂತಹ ಕ್ರಿಯೆ ನಡೆಯುತ್ತಿರುತ್ತದೆ. ಈ ಗುಣ-ಲಕ್ಷಣ ವ್ಯಾಖ್ಯಾನವು ವಿಮರ್ಶಕನ ದೃಷ್ಟಿ, ಧೋರಣೆ, ವ್ಯುತ್ಪತ್ತಿ, ಪ್ರತಿಭೆಗಳ ಸೂಚಕವಾಗಿಯೂ ಕಾಣುತ್ತಿರುತ್ತದೆ. ಈ ಗುಣಲಕ್ಷಣ ವ್ಯಾಖ್ಯಾನದ ಒಂದೆರಡು ಮಾದರಿಗಳನ್ನು ಈ ಕೆಳಗೆ ನೀಡಿದೆ.

ಮಾದರಿ 1.

ಕಾಡಿನ ಕವಿ ಕುವೆಂಪು ಎಂಬ ಲೇಖನದಲ್ಲಿ 1. ಪುರೋಹಿತಶಾಹಿ ಶೋಷಣೆಯ ವಿರುದ್ಧ ಸಮುದಾಯವನ್ನು ಎಚ್ಚರಿಸುವ ಗುಣ 2. ಹೊಸ ಭಾಷೆಯ ನಿರ್ಮಾಣ 3. ವಾಸ್ತವ ಸಮಾಜವನ್ನು ವಸ್ತುನಿಷ್ಠವಾಗಿ ಚಿತ್ರಿಸುವ ಪ್ರಾಮಾಣಿಕತೆ, ದಿಟ್ಟತೆ, ಅಲಿಪ್ತತೆ ಮುಂತಾದ ಗುಣಗಳು 4. ನಿರಂಕುಶಮತಿತ್ವ, ಪ್ರಶ್ನೆ ಮಾಡುವ ಗುಣ 5. ವಿಚಾರವಂತಿಕೆ-ಬಂಡಾಯ ಮನೋಧರ್ಮ 6. ತಮಗೆ ಅಗತ್ಯವಾದ ಪರಂಪರೆಯನ್ನು ಕಟ್ಟಿಕೊಳ್ಳುವ ಮನೋಧರ್ಮ 7. ಪರಂಪರೆಯನ್ನು ಚಿಕಿತ್ಸೆ ಮಾಡುವ, ಪುನರ್ ವ್ಯಾಖ್ಯಾನಿಸುವ ಗುಣ 8. ಯುಗಧರ್ಮಕ್ಕೆ ಸ್ಪಂದಿಸುವ ಲಕ್ಷಣ 9. ಸರ್ವೋದಯ, ಸಮನ್ವಯ ಇತ್ಯಾದಿ ತತ್ವ ಪ್ರತಿಪಾದನೆ 10. ಅರಣ್ಯ ಪರಿಸರ ಚಿತ್ರಣ, ನಿಸರ್ಗ ಪ್ರೀತಿ ಇನ್ನು ಮುಂತಾದ ಹಲವಾರು ಲಕ್ಷಣಗಳು ಕುವೆಂಪು ಮತ್ತು ಅವರ ಸಾಹಿತ್ಯದ ಗುಣಗಳು ಎಂದು ವ್ಯಾಖ್ಯಾನಿಸಲಾಗಿದೆ. (294)

ಹೀಗೆ ಲಕ್ಷಣ ಅಥವಾ ಗುಣಗಳನ್ನು ಗುರ್ತಿಸುವುದು ನಮ್ಮ ಆಧುನಿಕ ವಿಮರ್ಶೆಯ ಒಂದು ಪ್ರಧಾನವಾದ ಲಕ್ಷಣವಾಗಿದೆ. ಆಧುನಿಕ ವಿಮರ್ಶೆಯ ಕಾರ್ಯಗಳಲ್ಲಿ ಇದೊಂದು ಮುಖ್ಯವಾದ ಕಾರ್ಯ.

ಯಾವುದೇ ಕವಿ, ಕಾಲಘಟ್ಟ, ಪರಂಪರೆಗಳ ವಿಮರ್ಶೆಗೆ ತೊಡಗುವಾಗ ಆಯಾ ಕವಿ, ಪರಂಪರೆ, ಕಾಲಘಟ್ಟಾದಿಗಳ ಗುಣ–ಲಕ್ಷಣಗಳನ್ನು ತಮ್ಮದೇ ವಿಧಾನಗಳಲ್ಲಿ ವ್ಯಾಖ್ಯಾನಿಸುವುದು ನಮ್ಮ ವಿಮರ್ಶೆಯ ಪ್ರಧಾನ ಕೆಲಸವಾಗಿ ನಡೆಯುತ್ತ ಬಂದಿದೆ. ಈ ಕೆಲಸವು ಪರೋಕ್ಷವಾಗಿ ಸಾಹಿತ್ಯ ತತ್ವ ಮಂಡನೆಯೂ; ಸಾಹಿತ್ಯ ಲಕ್ಷಣಗಳ ನಿರೂಪಣೆಯೂ ಆಗಿ ಪರಿಣಮಿಸುತ್ತ ಬಂದಿದೆ. ಸಾಹಿತ್ಯ ಎಂದರೆ ಏನು? ಒಳ್ಳೆಯ ಕವಿ ಎಂದರೆ ಯಾರು? ಎಂಬ ಪ್ರಶ್ನೆಗಳೆಲ್ಲ ಇಲ್ಲಿ ಚರ್ಚೆಯಾಗಿವೆ. ನಮ್ಮ ವಿಮರ್ಶೆಯ ಪ್ರಾಗ್ರೂಪಗಳಲ್ಲಿ ಗುಣ ನಿರ್ವಚನವು ಒಂದು ಅಗತ್ಯ ಕಾರ್ಯವೆಂಬಂತೆ ನಡೆದಿದೆ. ಕವಿಗಳನ್ನು ಅವರುಗಳ ಗುಣಗಳಿಂದಲೆ (ಓಜೆ, ಇಂಪು, ಒಳ್ನುಡಿ ಇತ್ಯಾದಿಗಳಿಂದ) ಗುರ್ತಿಸುವ ಪರಿಪಾಟ ಪ್ರಾಚೀನರಲ್ಲಿ ರೂಡಿಯಲ್ಲಿದೆ. ಗುಣ ಗ್ರಹಣವು ನಮ್ಮ ಸಂಭವಕಾಲೀನ ವಿಮರ್ಶೆಯ ಒಂದು ಪ್ರಧಾನ ಲಕ್ಷಣವೇ ಆಗಿದೆ. ಇಡೀ ಸಂಭವಕಾಲೀನ ವಿಮರ್ಶೆಯನ್ನು ಕೆಲವರು ಗುಣಗ್ರಹಣ ರೂಪಿ ಎಂದು ವ್ಯಾಖ್ಯಾನಿಸಿಯೂ ಇದ್ದಾರೆ.

ಮಾದರಿ–2

> ಕುವೆಂಪುರವರ ಸಾಹಿತ್ಯದಲ್ಲಿ ಆಧ್ಯಾತ್ಮ, ವೈಚಾರಿಕತೆ, ನಿಸರ್ಗಪ್ರಿಯತೆ– ಇವು ಒಂದರೊಡನೊಂದು ಬೆಸೆದುಕೊಂಡು ಬರುತ್ತವೆ. ಅವನ್ನು ಎಷ್ಟೋ ಸಂದರ್ಭಗಳಲ್ಲಿ ಪ್ರತ್ಯೇಕಿಸಿ ನೋಡುವುದು ಅಸಾಧ್ಯವಾಗುತ್ತದೆ. ವೈಚಾರಿಕತೆ, ವೈಜ್ಞಾನಿಕತೆ, ಪ್ರತಿಭೆ–ಒಂದುಗೂಡಿ ಸಮಪ್ರಮಾಣದಲ್ಲಿ ಹರಿದು ಬರುತ್ತವೆ. ಕುವೆಂಪುರವರ ಸೌಂದರ್ಯಮೀಮಾಂಸೆ, ಪ್ರಕೃತಿಮೀಮಾಂಸೆಗಳನ್ನು ಎಚ್ಚರಿಕೆಯಿಂದ ವ್ಯಾಖ್ಯಾನಿಸಿದರೆ, ಆಧುನಿಕ ಕವಿಗಳ ಸಂದರ್ಭದಲ್ಲಿ ಅವರೊಬ್ಬ ಬಹು ದೊಡ್ಡ ಪರಿಸರವಾದಿಗಳಾಗುತ್ತಾರೆ. (991–ಪುಟ: 79)

ಇಲ್ಲಿ ಕುವೆಂಪು ಅವರ ಸ್ಥಾನೀಕರಣ, ಮೌಲ್ಯಮಾಪನ, ಕವಿ ನಿರ್ವಚನಗಳನ್ನು ಕಾವ್ಯ ಲಕ್ಷಣಗಳ ಮೂಲಕವೇ ಮಾಡಲಾಗಿದೆ. ಇಂಥ ಸಾಹಿತ್ಯ ಲಕ್ಷಣ ನಿರ್ವಚನಗಳ ಮೂಲಕ ವಿಮರ್ಶಕರು ಕವಿಯ ಬಗ್ಗೆ–ಕವಿಯ ಬರವಣಿಗೆಯ ಬಗ್ಗೆ ತಮ್ಮದೇ ನಿಲುವುಗಳಿಗೆ, ತೀರ್ಮಾನಗಳಿಗೆ ತಲುಪುತ್ತಿರುತ್ತಾರೆ. ಸಾಹಿತ್ಯ ಲಕ್ಷಣಗಳು ವಿಮರ್ಶಾ ನಿಲುವುಗಳನ್ನು ರೂಪಿಸುವ ಸಾಧ್ಯತೆ ಇಂತಹ ಕಡೆ ಇರುತ್ತದೆ. ಬೇರೆ ಬೇರೆ ವಿಮರ್ಶಕರ ಇಂತಹ ಗುಣ–ಲಕ್ಷಣಗಳ ನಿರ್ವಚನಗಳಲ್ಲಿ ಮತ್ತೆ ಮತ್ತೆ (ಕುವೆಂಪು ಅವರ) ಅದದೇ ಲಕ್ಷಣಗಳು ಪುನರಾವರ್ತನೆ ಆಗುತ್ತಿರುತ್ತವೆ. ಹೇಳಿದುದನ್ನೇ ಮತ್ತೆ ಮತ್ತೆ ಬೇರೆ ಬೇರೆ ರೀತಿಗಳಲ್ಲಿ ಹೇಳುವ ಮತ್ತು ಭಿನ್ನವಾಗಿ ವ್ಯಾಖ್ಯಾನಿಸುವ ಎರಡೂ ಲಕ್ಷಣಗಳು ನಮ್ಮಲ್ಲಿವೆ. ಈ ಲಕ್ಷಣೀಕರಣ ವಿಧಾನದಲ್ಲಿ ಸಾಹಿತ್ಯವನ್ನು ಕುರಿತ ಮೆಚ್ಚುಗೆ, ಪ್ರೀತಿಗಳು ಹೆಚ್ಚಾಗಿ ಕಾಣಬರುತ್ತವೆ.

ಮಾದರಿ–3

> ಕುವೆಂಪು ಅವರ ವ್ಯಕ್ತಿತ್ವದಲ್ಲಿ ಭಾರತೀಯ ಸಂಸ್ಕೃತಿಯ ಬಗ್ಗೆ ಅಭಿಮಾನ, ಆಧ್ಯಾತ್ಮ ಜ್ಯೋತಿಯ ವಿಷಯದಲ್ಲಿ ಅಚಲ ಶ್ರದ್ಧೆ, ವಿಭೂತಿ ಪ್ರಜೆಯಲ್ಲಿ ನಿಷ್ಠೆ, ಸಾಹಿತ್ಯದ ಪರಮ ಪ್ರಯೋಜನದಲ್ಲಿ ಪೂರ್ಣ ವಿಶ್ವಾಸ, ಪ್ರಕೃತಿಯ ಬಹು ಮುಖ್ಯ ವಿನ್ಯಾಸದಲ್ಲಿ ಒಂದು ಆತ್ಮೀಯತೆ, ಭವ್ಯತೆಯ ಅನುಭವದಲ್ಲಿ ಭಕ್ತಿ, ಜೀವನದಲ್ಲಿ ಧರ್ಮದ ಮೂಲಭೂತ ಅಗತ್ಯವನ್ನು ಒಪ್ಪುವ ಮನೋಧರ್ಮ, ಜನತೆಯ ಉದ್ಧಾರಕ್ಕಾಗಿ ಹಂಬಲಿಸುವ ಚೇತನ, ಆತ್ಮಸಾಕ್ಷಾತ್ಕಾರದ ಲಕ್ಷ್ಯ, ಇವೆಲ್ಲ ಒಂದು ಸುಂದರ ಪಾಕದಲ್ಲಿ ಸಮರಸವಾಗಿ ಐಕ್ಯಗೊಂಡಿವೆ. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನದ, ಟಾಗೋರ್, ಶ್ರೀ ಅರವಿಂದ, ರಮಣ ಮಹರ್ಷಿ, ಗಾಂಧೀಜಿ ಇತ್ಯಾದಿ ಭಾರತೀಯ ಮಹಾತ್ಮರ ವಿಚಾರಗಳಿಂದ ಪ್ರಭಾವಿತವೂ ಆದ ಈ ಪ್ರಫುಲ್ಲ ವ್ಯಕ್ತಿತ್ವದಲ್ಲಿ ಕೇವಲ ಸಂಪ್ರದಾಯ ಜಡರ ಅಂಧಶ್ರದ್ಧೆ, ಸಂಕುಚಿತ ಅಭಿಮಾನಗಳಿಗೆ ಆಸ್ಪದವಿಲ್ಲದಂತಾಗಿದೆ. ಆಧ್ಯಾತ್ಮಿಕ ಅನುಭವಕ್ಕಾಗಿ ಉಕ್ತವಾಗಿರುವ ವಿವಿಧ ಯೋಗಮಾರ್ಗಗಳಲ್ಲಿ ಕುವೆಂಪು ಅವರಿಗೆ ಅಪರಿಚಿತವಾದುದು ಆವುದೂ ಇಲ್ಲ. ತಮ್ಮದೇ ಆದ ರೀತಿಯಿಂದ ಇವುಗಳಲ್ಲಿ ಸಮನ್ವಯವನ್ನು ಕಂಡುಕೊಂಡ ಮೇಲೆ ಕಾವ್ಯ ದರ್ಶನಕ್ಕೂ ಆತ್ಮದರ್ಶನಕ್ಕೂ ಇರುವ ಸಾಮೀಪ್ಯವನ್ನು ಮನಗಂಡು ತಮ್ಮ ಕವಿಸಹಜ ವಾಣಿಯಿಂದಲೇ 'ಕವಿನಿರ್ಮಿತಿ', ರಸ, ಅಲಂಕಾರ, ಭವ್ಯತೆ, ಪ್ರಕೃತಿಸೌಂದರ್ಯ ಮುಂತಾದವುಗಳ ಆಳದಲ್ಲಿ ಹುದುಗಿರುವ ತತ್ವಗಳನ್ನು ಹೊಸ ಪರಿಯಿಂದ ವಿವರಿಸಿರುವ ಯಶಸ್ಸು ಕುವೆಂಪು ಅವರದು. (350–ಪುಟ: 25)

ಹೀಗೆ ಕುವೆಂಪು ಅವರ ಸಾಹಿತ್ಯ ಪ್ರತಿಭೆ ಮತ್ತು ಮೀಮಾಂಸಾ ಪ್ರತಿಭೆಗಳನ್ನು ಹಾಗೂ ಅವರ ದೃಷ್ಟಿಧೋರಣೆಗಳನ್ನು ವ್ಯಾಖ್ಯಾನಿಸುವಾಗ; ಅವರ ಮೇಲಿನ ಪ್ರಭಾವ ಮತ್ತು ಪ್ರೇರಣೆಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ವ್ಯಾಖ್ಯಾನಿಸುವುದು ಒಂದು ಪ್ರವೃತ್ತಿಯೆಂಬಂತೆ ನಮ್ಮಲ್ಲಿ ನಡೆದುಬಂದಿದೆ. ಕುವೆಂಪು

ಪ್ರಜ್ಞೆಯನ್ನು ಪರಿಷ್ಕರಣ ಪ್ರಜ್ಞೆ ಎಂದು ಡಿ.ಆರ್.ನಾಗರಾಜರೂ, ಇವರ ಸಾಹಿತ್ಯ ಸ್ವರೂಪವನ್ನು ಪಂಚಲೋಹ ಮಾದರಿ ಎಂದು ಪುಣೇಕರರೂ, ಕುವೆಂಪು ಅವರ ಪ್ರತಿಭೆಯು ಭವ್ಯ ನಿತ್ಯಗಳ ಅಪೂರ್ವ ಸಂಗಮ ಎಂದು ಯು.ಆರ್.ಅನಂತಮೂರ್ತಿ ಅವರೂ, ಕುವೆಂಪು ಮೀಮಾಂಸೆಯನ್ನು ಸಮನ್ವಯ ಮಾದರಿ, ದರ್ಶನ ವಿಮರ್ಶೆ ಎನ್ನುವ ಕೆ.ಕೃಷ್ಣಮೂರ್ತಿಯವರೂ ಹೀಗೆ ನಮ್ಮ ಹಲವಾರು ವ್ಯಾಖ್ಯಾನಕಾರರು ಕುವೆಂಪುವನ್ನು ಸಮನ್ವಯ ಸ್ವರೂಪಿ ಎಂದು ನಿರ್ವಚಿಸಿದ್ದಾರೆ.

ಮಾದರಿ–4

> ಶ್ರೀಕುವೆಂಪು ಅವರ ಹೃದಯ ಸಾಮ್ರಾಜ್ಯದಲ್ಲಿ ಎಲ್ಲ ದರ್ಶನಗಳಿಗೂ ಎಡೆಯುಂಟು. ಎಲ್ಲವನ್ನೂ ಮೈಗೂಡಿಸಿಕೊಂಡು ಸಮನ್ವಯವನ್ನು ಮೆರೆಯುವ ಸಿದ್ಧಿ ಅವರದು. ಮಹಾಕವಿಗಳ ಕೃತಿಗಳಲ್ಲಿ ಎಲ್ಲ ಬಗೆಯ ವ್ಯಾಖ್ಯಾನಕ್ಕೂ ಅವಕಾಶವುಂಟು. ದ್ವೈತಾದ್ವೈತ ದರ್ಶನಗಳೆಲ್ಲ ವೇದೋಪನಿಷತ್ತುಗಳಲ್ಲು ರಾಮಾಯಣ ಭಾರತಗಳಲ್ಲೂ ಆಧಾರಗಳನ್ನು ಕಾಣುತ್ತವೆ. ಎಲ್ಲ ಆಚಾರ್ಯರೂ ತಂತಮ್ಮ ದೃಷ್ಟಿಯಿಂದ ಅವಕ್ಕೆ ಅರ್ಥವನ್ನು ಕಾಣುತ್ತಾರೆ. ವ್ಯಾಸರು ಬರೆದ ಬ್ರಹ್ಮಸೂತ್ರಗಳೇ ಎಲ್ಲರಿಗೂ ಆಕರ. ಒಬ್ಬೊಬ್ಬರೂ ತಮ್ಮ ದೃಷ್ಟಿಯಿಂದ ಅದಕ್ಕೆ ಭಾಷ್ಯಗಳನ್ನು ಬರೆದಿದ್ದಾರೆ. ಕುವೆಂಪು ಅವರ ಕೃತಿಗಳಲ್ಲೂ ಎಲ್ಲ ದರ್ಶನಗಳನ್ನೂ ಕಾಣಬಹುದು. ತಂತಮ್ಮ ದರ್ಶನಗಳನ್ನೇ ಅವರು ಎತ್ತಿಹಿಡಿದಿದ್ದಾರೆಂದು ಪ್ರತಿಯೊಬ್ಬರೂ ಸಾಧಿಸಬಹುದು. (2780–ಪುಟ: 62)

ಕುವೆಂಪು ಅವರ ಸಾಹಿತ್ಯದಲ್ಲಿನ ವಿಶಿಷ್ಟಾದ್ವೈತ ದರ್ಶನವನ್ನು ಕುರಿತ ತಮ್ಮ ಉಪನ್ಯಾಸದಲ್ಲಿ ಎಚ್.ಎಸ್.ಕೆ.ಯವರು ಕೊನೆಗೆ ತೆಗೆದುಕೊಳ್ಳುವ ನಿರ್ಣಯ ಕೂಡ ಸಮನ್ವಯ ಎಂಬುದೇ ಆಗಿದೆ. ಕುವೆಂಪು ದರ್ಶನ, ದೃಷ್ಟಿ–ಧೋರಣೆ, ಅಭಿವ್ಯಕ್ತಿ ಕ್ರಮವನ್ನೆಲ್ಲ ಸಮನ್ವಯ ಗುಣವೆಂಬ ಒಂದು ಪರಿಕಲ್ಪನೆಯ ಮೂಲಕ ವ್ಯಾಖ್ಯಾನಿಸುವ ಪ್ರವೃತ್ತಿ ನಮ್ಮ ವಿಮರ್ಶೆಯಲ್ಲಿ ಪ್ರಕಟವಾಗಿದೆ. ಸಾಹಿತ್ಯದ–ಲೇಖಕನ ಲಕ್ಷಣವನ್ನು ಲಾಕ್ಷಣೀಕರಿಸುವ ಪ್ರವೃತ್ತಿ ಇದು. ಲಕ್ಷಣ ನಿರ್ವಚನ ಅಥವಾ ಲಕ್ಷಣ ವ್ಯಾಖ್ಯಾನ ಎಂದು ಇದನ್ನು ಕರೆಯಬಹುದು. ನಮ್ಮ ವಿಮರ್ಶೆಯ ಒಂದು ಬಹು ಮುಖ್ಯವಾದ ಪ್ರವೃತ್ತಿ ಇದು.

ಮಾದರಿ–5

> ನಾದದ ನೃತ್ಯವು ಕುವೆಂಪು ಅವರ ಗೀತೆಗಳ ಮುಖ್ಯ ಲಕ್ಷಣ, ಕಾವ್ಯ ಕಲೆಯ ಅಂತರಂಗವು ಭಾವಲಯವಾದರೆ ಬಾಹ್ಯಾಂಗವು ನಾದಲಯ....ಜೀವನದ ಸ್ವಾರಸ್ಯವು ಲಯದಲ್ಲಿದೆ....ಕಾವ್ಯವು ಕಲೆಗಳಲ್ಲೆಲ್ಲ ಶ್ರೇಷ್ಠವಾದ ಕಲೆಯಾಗಿದೆ...ಕುವೆಂಪು ಕಾವ್ಯದ ಇಂಪು ಸೊಂಪುಗಳಿಗೆ ಲಯವೇ ಮುಖ್ಯ ಕಾರಣ. (790–ಪುಟ: 55)

ಎಂಬ ವ್ಯಾಖ್ಯಾನವೂ ನಮ್ಮಲ್ಲಿದೆ. ಇಂತಹ ಕಡೆ ಲಾಕ್ಷಣೀಕರಣವು ಲಕ್ಷಣದ ಕಾರಣಗಳನ್ನು ಶೋಧಿಸುತ್ತದೆ. ಗುಣ ಲಕ್ಷಣಗಳ ಕಾರಣಗಳೂ ಕೂಡ ಸಾಹಿತ್ಯದ ವ್ಯಾಖ್ಯಾನ ವಿಶ್ಲೇಷಣೆಗಳೇ ಆಗಿರುವುದು ಇಲ್ಲಿನ ವಿಶೇಷ. ಹೀಗೆ ಸಾಹಿತ್ಯಲಕ್ಷಣ–ಕವಿಲಕ್ಷಣಗಳನ್ನು ನಿರ್ವಚಿಸುವುದು; ವ್ಯಾಖ್ಯಾನಿಸುವುದು ನಮ್ಮ ವಿಮರ್ಶೆಯ ಒಂದು ಮುಖ್ಯ ವಿನ್ಯಾಸವಾಗಿದೆ.

### 6.6. ಉಲ್ಲೇಖ ಉದ್ಧರಣೆ–ನಿದರ್ಶನ–ವ್ಯಾಖ್ಯಾನ ಪ್ರವೃತ್ತಿ

ಸಾಹಿತ್ಯ ವಿಮರ್ಶೆ ಮಾಡುವಾಗ ತಮ್ಮ ನಿಲುವುಗಳ ಸಮರ್ಥನೆಗಾಗಿ ಅನ್ಯ ವಿಮರ್ಶಕರ ಅಭಿಪ್ರಾಯಗಳನ್ನು ಕೃತಿಭಾಗಗಳನ್ನು ಎತ್ತಿ ಕೊಡುವುದು ನಮ್ಮಲ್ಲಿನ ಒಂದು ಜನಪ್ರಿಯ ಪ್ರವೃತ್ತಿ. ಕೃತಿಭಾಗಗಳನ್ನು ಆಯ್ದು ಉದ್ಧರಿಸುವುದೂ ಕೂಡ ನಮ್ಮಲ್ಲಿ ರೂಢಿಗೆ ಬಂದಿದೆ. ಇಚಿಥದ್ದನ್ನು ನಿದರ್ಶನ–ವ್ಯಾಖ್ಯಾನ ಪ್ರವೃತ್ತಿ ಎನ್ನಬಹುದು ಸಮರ್ಥನೆಗಲ್ಲದೆ ಪರಿಚಯ, ಖಂಡನೆ, ಮರುಪರಿಶೀಲನೆ ಇತ್ಯಾದಿ ಉದ್ದೇಶಗಳಿಗೆ ಕೂಡ ಉದ್ಧರಣೆಗಳನ್ನು ನೀಡುವುದುಂಟು. ಅನ್ಯಭಾಷೆ–ಸಂಸ್ಕೃತಿಯ ಕವಿ–ಚಿಂತಕರನ್ನು ಉಲ್ಲೇಖಿಸುವುದುಂಟು. ನಮ್ಮ ಎಲ್ಲಾ ವಿಮರ್ಶಾ ಮಾರ್ಗಗಳಲ್ಲಿಯೂ ಸಾಮಾನ್ಯವಾಗಿ ಕಂಡುಬರುವ ಒಂದು ಲಕ್ಷಣ ಇದು. ಆದರೆ ಇಂಗ್ಲಿಷ್ ಶಿಕ್ಷಣ ಪಡೆದ ಸಂಭವಕಾಲೀನರಲ್ಲಿ ಇಂಗ್ಲಿಷಿನ ಜ್ಞಾನಲೋಕದಿಂದ (ಕೆಲವೊಮ್ಮೆ ಸಂಸ್ಕೃತಕ್ಕೆ ಪರ್ಯಾಯವೆಂಬಂತೆ) ಉದ್ಧರಣೆಗಳನ್ನು ನೀಡುವುದು; ಹೆಸರಿಸುವುದು; ಇಂಗ್ಲಿಷಿನಲ್ಲಿ ಚಾಲ್ತಿಯಾಗಿರುವ ತತ್ವ ವಿಚಾರಗಳನ್ನು ಅರಗಿಸಿಕೊಂಡು ಅವುಗಳನ್ನು ಕನ್ನಡದಲ್ಲಿ ಚಾಲ್ತಿಗೆ ತರುವುದು; ಸಾಧ್ಯವಾದೆಡೆ ಅನುವಾದಿಸುವುದು, ಅನುಸರಿಸುವುದು ಇಂಥವೆಲ್ಲ ನಮ್ಮ ವಿಮರ್ಶೆಯಲ್ಲಿ ಸಾಮಾನ್ಯ ಆಗಿಬಿಟ್ಟಿವೆ. ಬರಿದೆ ಅವರು ಹೀಗೆ ಹೇಳುತ್ತಾರೆ, ಇವರು ಹೀಗೆ ಹೇಳುತ್ತಾರೆ ಎಂದು ಅವರಿವರ (ದೊಡ್ಡವರ) ಹೆಸರುಗಳನ್ನು

ಉಲ್ಲೇಖಿಸಿ (ನೇಮ್ ಡ್ರಾಪಿಂಗಿನ ರೀತಿ) ತಮ್ಮ ವ್ಯಾಖ್ಯಾನವನ್ನು ಸಮರ್ಥಿಸಿ ಕೊಳ್ಳುವುದು ಕೂಡ ನಮ್ಮ ಒಂದು ಸಾಮಾನ್ಯ ಪ್ರವೃತ್ತಿಯಾಗಿದೆ.

ಇಂಗ್ಲಿಷ್ ಲೋಕದ ಉದ್ಧರಣೆಗಳನ್ನು ನೀಡುವುದು; ಉಲ್ಲೇಖಿಸಿ-ಹೆಸರಿಸುವುದು ಇಂದು ಸರಿಸುಮಾರು ಗೌರವದ ಸಂಕೇತ ಎಂಬಂತೆ, ಕಲ್ಪಿತವಾಗಿ ಹೋಗಿದೆ. ಕೆಲವರು ಇಂಗ್ಲಿಷ್ ಭಾಷೆಯಲ್ಲೆ ಉದ್ಧರಣೆಗಳನ್ನು ನೀಡಿದರೆ ಕೆಲವರು ಅನುವಾದಿಸಿ ನೀಡುತ್ತಾರೆ. ವಿಶಿಷ್ಟವಾದ ಒಳನೋಟ, ಸಿದ್ಧಾಂತಗಳಿಗಾಗಿ, ಸಾಮ್ಯಗಳನ್ನು ವಿವರಿಸಲಿಕ್ಕಾಗಿ, ವೈರುಧ್ಯಗಳನ್ನು ವಿವರಿಸಲಿಕ್ಕಾಗಿ, ನಿಲುವುಗಳನ್ನು ಸಮರ್ಥಿಸಲಿಕ್ಕಾಗಿ, ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಲಿಕ್ಕಾಗಿ, ಇಂಗ್ಲಿಷಿನಲ್ಲಿ ಹೇಳಿದ್ದರೆ ಶ್ರೇಷ್ಠ ಎಂಬ ಕೆಲವರ ಸಂಜಿಕೆಯನ್ನು ಎನ್‌ಕ್ಯಾಶು ಮಾಡಿಕೊಳ್ಳಲಿಕ್ಕಾಗಿ, ಕೇವಲ ಉಲ್ಲೇಖಕ್ಕಾಗಿ (ನೇಮ್ ಡ್ರಾಪಿಂಗು ಎಂಬಂತೆ) ಹೀಗೆ ಹಲವು ಉದ್ದೇಶಗಳಿಂದ ಉದ್ಧರಣೆಗಳನ್ನು ನೀಡುವುದು ನಮ್ಮಲ್ಲಿ ಬೆಳೆದಿದೆ. ಕೆಲವೊಮ್ಮೆಯಂತೂ ಇಂಗ್ಲಿಷ್ ಉದ್ಧರಣೆಗಳನ್ನು ನೀಡುವುದು ಒಂದು ಚಾಳಿ ಎಂಬಷ್ಟರ ಮಟ್ಟಿಗೆ ಆಗಿ ಹೋಗಿದೆ. (ಇದಕ್ಕೆ ಅಪವಾದಗಳೂ ಉಂಟು)

ಪಿಎಚ್.ಡಿ ಅಧ್ಯಯನಗಳಲ್ಲಂತೂ/ಅಧ್ಯಯನರೂಪಿ ವಿಮರ್ಶೆಗಳಲ್ಲಂತೂ ಕೃತಿಭಾಗಗಳನ್ನು, ಅನ್ಯ ವಿಮರ್ಶೆಯ ತುಣುಕುಗಳನ್ನು ಎತ್ತಿ ಉದಾಹರಿಸುವುದು ಒಂದು ಸಾಮಾನ್ಯ ವ್ಯಾಪಾರ ಎಂಬಂತೆ ಮತ್ತು ತಾಂತ್ರಿಕ ಅಗತ್ಯವೇ ಹೌದು ಎಂಬಂತೆ ರೂಢಿಯಾಗಿದೆ. ಕೆಲವೆಡೆ ಇಂತಹ ಉದ್ಧರಣೆಗಳು ಎಷ್ಟಿರುತ್ತವೆ ಎಂದರೆ ಸ್ವಂತ ಅಭಿಪ್ರಾಯದ ಮೊತ್ತಕ್ಕಿಂತ ಇವೇ ಜಾಸ್ತಿ ಇರುತ್ತವೆ. ಸ್ವಂತಿಕೆಯನ್ನು ಸಾಬೀತು ಮಾಡುವ ಸಹಾಯಕ ಸಾಮಗ್ರಿಯೇ ಯಜಮಾನಿಕೆ ನಡೆಸಿದರೆ! ಕೆಲವೊಮ್ಮೆ ತಾವು ಹೇಳುತ್ತಿರುವ ವಿಚಾರವನ್ನು ಬೇರೆಯವರು ಈಗಾಗಲೇ ಹೇಳಿದ್ದಾರೆ ಎಂದು ಒಪ್ಪಿಕೊಳ್ಳುವ ವಿಮರ್ಶಾ ಸೌಜನ್ಯ-ಸಜ್ಜನಿಕೆಯ ಪ್ರತೀಕವಾಗಿಯೂ ಉದ್ಧರಣೆಗಳು ಬರುವುದುಂಟು. ಏನೇ ಆದರೂ ಒಟ್ಟಿನಲ್ಲಿ ಉದ್ಧರಣೆ ಮತ್ತು ಮಂಡನೆಯ ವಿಧಾನವು ನಮ್ಮ ವಿಮರ್ಶೆಯ ಒಂದು ಸ್ಥಾಪಿತ ಸಂಪ್ರದಾಯ ಎಂಬಂತೆ ಆಗಿಬಿಟ್ಟಿದೆ. ಈ ವಿಚಾರದಲ್ಲಿ ಉಲ್ಲೇಖಗಳೇ ಇಲ್ಲದ ಅತಿ ಮತ್ತು ಉಲ್ಲೇಖಗಳೇ ತುಂಬಿ ಹೋಗುವ ಅತಿ ಹಾಗೂ ಉಲ್ಲೇಖ-ಉದ್ಧರಣೆಗಳು ಹಿತಮಿತವಾಗಿರುವ ಮಧ್ಯಮ ಮಾರ್ಗ ಈ ರೀತಿಯ ಮೂರೂ ವರಸೆಗಳು ನಮ್ಮಲ್ಲಿವೆ.

ಶೂನ್ಯ ಸಂಪಾದನೆಗಳಲ್ಲಿ ವಚನಗಳನ್ನು ಸಂಕಲಿಸಿ ಸಂವಾದರೂಪಿ ಮಹಾ ಕಥನವನ್ನಾಗಿ ನಿರ್ಮಿಸುವ ಪ್ರವೃತ್ತಿ ನಮ್ಮ ಪ್ರಾಚೀನರಲ್ಲಿ ಇದೆ. ಶೂನ್ಯ ಸಂಪಾದನಾಕಾರರು ತಮ್ಮ ಶೂನ್ಯಸಂಪಾದನೆಗಳಲ್ಲಿ ಶರಣರ ವಚನಗಳನ್ನು ಸಂವಾದ ಸಾಧ್ಯತೆಗೆ ಅನುಗುಣವಾಗಿ ಜೋಡಿಸಿ ಅವುಗಳನ್ನು ಹೆಣಿಗೆಯಲ್ಲಿ ಒಂದುಗೂಡಿಸಲು ನಡುನಡುವೆ ಒಂದೋ ಎರಡೋ ಮಾತುಗಳನ್ನು ಗದ್ಯದಲ್ಲಿ ಸೇರಿಸಿದ್ದಾರೆ. ನಮ್ಮ ಹಲವು ಸಂಶೋಧಕರು ತಮ್ಮ ಸಂಶೋಧನೆಗಳಲ್ಲಿ ಹಲವೆಡೆ ಇಂಥ ಬರವಣಿಗೆ ಮಾದರಿಯನ್ನೆ ಅತಿಯಾಗಿ ಅನುಸರಿಸಿರುವಂತೆ ಕಾಣುತ್ತದೆ. ಬೇರೆ ಬೇರೆ ವಿಮರ್ಶಕರ ವಿಮರ್ಶೆಯ ತುಣುಕುಗಳನ್ನು ಆರಿಸಿ ತಮ್ಮದೇ ಸಂಶೋಧನೆ ಎಂಬಂತೆ ಕಟ್ಟಿಕೊಡುವ ಕ್ರಮ ಇದು. ತೆಲುಗಿನಲ್ಲಿ 'ತೀಸೀಸಂಟೆ ತೀಸಿ ತೀಸಿ ರಾಸೇದಿ' ಎಂಬ ಜನಪ್ರಿಯ ನುಡಿಯೊಂದು ಇದೆ. ಇದಕ್ಕೆ ತಕ್ಕಂತೆ ನಮ್ಮಲ್ಲಿ ಸಂಶೋಧನೆಯ ಕೆಲವು ಭಾಗಗಳಿವೆ. (2581-ಪುಟ: 214-216) ಕೋಟುಗಳನ್ನು ಕೊಡಲೇಬೇಕು ಎಂಬ ನಂಬುಗೆಯಲ್ಲಿ ಬರಿ ಕೋಟುಗಳೇ ತುಂಬಿದ್ದು ಷರಟುಗಳೇ ಇಲ್ಲದ ಸಂಶೋಧನೆಯ ಭಾಗಗಳನ್ನು ಶೂನ್ಯ ಸಂಶೋಧನೆಗಳು ಎಂದೇ ಕರೆಯಬಹುದು. (ಕೋಟು ಷರಟು ಪರಿಭಾಷೆ ಬರಗೂರರದು)

ಐಡಿಯಾಲಜಿಗಳನ್ನು, ಕನ್ನಡಕಗಳನ್ನು ಇಂಗ್ಲಿಷಿನಿಂದ ಪಡೆದು ನಾವೇ ಮೊದಲಿಗೆ ಹೊಸದೇನನ್ನೋ ಕಂಡುಹಿಡಿದಿದ್ದೇವೆ ಎಂಬಂತೆ ಬರೆಯುವ ಚಾಲೂಕೂ ನಮ್ಮಲ್ಲಿದೆ. (ಅನ್ಯ ಕಣ್ಣುಗಳಿಂದ ನೋಡುವ ವಿಧಾನ ಎಂದು ಇದನ್ನು ಮುಂದೆ ಚರ್ಚಿಸಲಾಗಿದೆ) ಇಂಗ್ಲಿಷ್ ಲೋಕದಲ್ಲಿ ಹಳಸಲಾಗಿರುವ ಪಾಂಡಿತ್ಯವನ್ನು ಕನ್ನಡದಲ್ಲಿ ಚಲಾವಣೆಗೆ ತಂದು ಪ್ರಯೋಗಿಸುವ ಪ್ರವೃತ್ತಿಯೂ ನಮ್ಮಲ್ಲಿ ಚಾಲ್ತಿಯಲ್ಲಿದೆ. ಸಾಮ್ಯ ಪ್ರಭಾವಗಳ ತೌಲನಿಕ ಅಧ್ಯಯನದಲ್ಲಂತೂ ಇಂಗ್ಲಿಷ್ ಲೋಕದ ಜೊತೆ ಕನ್ನಡವನ್ನು ಇಟ್ಟು ತೂಗುವುದು ನಮ್ಮಲ್ಲಿ ಸಾಮಾನ್ಯ ವ್ಯಾಪಾರವಾಗಿದೆ. ವಿಮರ್ಶೆಯಲ್ಲಿ ನಮ್ಮಲ್ಲೆ ತತ್ವ ಸಿದ್ಧಾಂತಗಳನ್ನು ರೂಪಿಸುವ ಯತ್ನಗಳು ತೀರಾ ಕಡಿಮೆ. ನಿರಚನವಾದಿ ಓದು, ಆಧುನಿಕೋತ್ತರ ಓದು, ವಾಚಕ ಕೇಂದ್ರಿತ ಓದು, ಮಾರ್ಕ್ಸ್‌ವಾದಿ ಓದು, ಹಸಿರು ಓದು, ಇಂತಹ ಹಲವು ಓದುಗಳು ನಮ್ಮಲ್ಲಿ ಪ್ರಯೋಗವಾಗಿವೆ. ಭಿನ್ನ ಓದಿನ ಸಿದ್ಧಾಂತಗಳ ಮೂಲಕ ಕನ್ನಡ ಕೃತಿ-ಸಾಹಿತ್ಯಗಳನ್ನು ಪರೀಕ್ಷಿಸುವ ಯತ್ನಗಳೂ ಇಲ್ಲಿ ನಡೆದಿವೆ. ತತ್ವ ಸಿದ್ಧಾಂತಗಳನ್ನು ಸ್ಥಳೀಯವಾಗಿ ರೂಪಿಸಿಕೊಳ್ಳುವುದಕ್ಕಿಂತ ಕಡ ತಂದು ಪ್ರಯೋಗಿಸುವ ಪ್ರವೃತ್ತಿಯೇ ನಮ್ಮಲ್ಲಿ ಪ್ರಧಾನವಾಗಿ ಇದೆ. ಪರಕೀಯ ಮತ್ತು ಸ್ವ ಎಂಬ ಭೇದವಿಲ್ಲದ ಜಾಗತಿಕವಾಗಿ ಅನ್ವಯವಾಗಬಹುದಾದ ಸಿದ್ಧಾಂತಗಳು

ಕ್ರಮದಲ್ಲಿ ಬೆಳೆಯುತ್ತವೆ. ಈ ಮಾದರಿಯ ಒಂದು ದೌರ್ಬಲ್ಯವೆಂದರೆ; ಕವಿತೆಯು ಓದುಗನ ಅನುಭವವೂ ಆಗಬಲ್ಲ ಚಲನೆ ಪಡೆಯದೆ ಕವಿಯ ಅನುಭವದ ಅಭಿವ್ಯಕ್ತಿ ಮಾತ್ರವೇ ಆಗಿ ಉಳಿದುಬಿಡುವುದು. ಇಲ್ಲಿ ಕವಿತೆಯ ಮಾದರಿಗೂ ಮತ್ತು ಅದು ಓದುಗನೊಂದಿಗೆ ಸಂವಾದಿಸುವುದಕ್ಕೂ ಕೃಷ್ಣೇಗೌಡರು ಸಂಬಂಧ ಕಲ್ಪಿಸಿ, ಇದು ಕುವೆಂಪು ಕವಿತೆಗಳ ದೌರ್ಬಲ್ಯ ಎನ್ನುತ್ತಾರೆ. ಕವಿತೆಯು ಓದುಗನಿಗೆ ಬರಿ ಶಬ್ದ ಮಾತ್ರ ಆಗಬಾರದು, ಅದು ಓದುಗನ ಅನುಭವವೂ ಆಗಿ ವಿಸ್ತರಣೆಗೊಳ್ಳುವ ಸಾಧ್ಯತೆ ಕವಿತೆಯಲ್ಲಿಯೇ ಇರಬೇಕು ಎಂಬ ತತ್ವವನ್ನು ಇಲ್ಲಿ ಮಂಡಿಸಲಾಗಿದೆ. ಹೀಗೆ ಮಾದರಿಗಳ ಹುಡುಕಾಟ ಮತ್ತು ವಿಶ್ಲೇಷಣೆಯಲ್ಲಿ ವಿಮರ್ಶಕರು ತಲುಪುವ ನಿಲುವುಗಳು ಉತ್ತಮ ಕಾವ್ಯದ ಲಕ್ಷಣಗಳನ್ನು ನಿರ್ವಚಿಸುವ ಕಡೆಗೆ ಚಲಿಸುತ್ತವೆ.

ಕುವೆಂಪು ನಿಸರ್ಗ ಕವಿತೆಗಳ ರಚನಾ ಕ್ರಮವನ್ನು ವಿವರಿಸುತ್ತ ಡಿ.ಆರ್. ನಿಸರ್ಗಾನುಭವದ ಚಕ್ರ ಒಂದನ್ನು ಅವರಲ್ಲಿ ಗುರ್ತಿಸುತ್ತಾರೆ. 1.ಪ್ರಕೃತಿಯ ಹೊರಗೆ ನಿಂತು ವ್ಯಾಖ್ಯಾನಿಸುವ ಘಟ್ಟ 2.ಉನ್ಮತ್ತತೆಯ ಘಟ್ಟ 3.ತನ್ಮಯಗೊಳ್ಳುವ ಘಟ್ಟ 4.ಶಾಂತಿಯ ಘಟ್ಟ ಹೀಗೆ ಕವಿಯ ಅನುಭವದ ಚಕ್ರ ಪೂರ್ಣವಾಗಿ ಒಂದು ಸುತ್ತು ಬಂದಂತೆ ಕುವೆಂಪು ನಿಸರ್ಗ ಕವಿತೆಗಳ ಮಾದರಿಯನ್ನು ಡಿ.ಆರ್.ನಾಗರಾಜ್ (750– ಪುಟ: 90) ವ್ಯಾಖ್ಯಾನಿಸುತ್ತಾರೆ. ಕೃಷ್ಣೇಗೌಡರ (1991) ಮಾತುಗಳು ಸಂಪೂರ್ಣವಾಗಿ ಡಿ.ಆರ್.ನಾಗರಾಜರ ಮಾತುಗಳನ್ನು (1987) ಹೋಲುತ್ತವೆ. ಡಿ.ಆರ್. ಚಕ್ರೀಯ ವಿನ್ಯಾಸವನ್ನು ಕುವೆಂಪು ಕವಿತೆಗಳ ಕಟ್ಟಾಣಿಕೆಯ ಮಾದರಿಯಾಗಿ ಗುರ್ತಿಸಿದರೆ ಕೃಷ್ಣೇಗೌಡರು ಅದನ್ನೇ ಆರೋಹಣ ಕ್ರಮ ಎಂದಿದ್ದಾರೆ. ಅಭಿಪ್ರಾಯ–ನಿಲುವು–ಕ್ರಮ–ವ್ಯಾಖ್ಯಾನಗಳಲ್ಲಿನ ಸಾಮ್ಯವು ನಮ್ಮ ವಿಮರ್ಶೆಯ ಒಂದು ಲಕ್ಷಣವೇ ಆಗಿದೆ. ಸಿ.ಪಿ.ಕೆ ಮತ್ತು ದೇಜಗೌ ನಿಲುವುಗಳಲ್ಲಿ ಸಾಕಷ್ಟು ಸಾಮ್ಯ ಇದೆ. ಭಗವಾನ್ ಮತ್ತು ಎಸ್.ಜಿ.ಸಿದ್ದರಾಮಯ್ಯ (2617–312) ಇವರ ನಿಲುವುಗಳಲ್ಲಿ ಸಾಕಷ್ಟು ಸಾಮ್ಯ ಇದೆ. ಚಂದ್ರಶೇಖರ ನಂಗಲಿ ಮತ್ತು ಟಿ.ಎಸ್.ಸತ್ಯನಾಥ್ ನಿಲುವುಗಳಲ್ಲಿ ಸಾಮ್ಯತೆ ಇದೆ. ಹೀಗೆ ಹಲವಾರು ವಿಮರ್ಶಕರ ವಿಮರ್ಶಾ ನಿಲುವುಗಳಲ್ಲಿ ಅಲ್ಲಲ್ಲಿ ಸಾಮ್ಯತೆಗಳು ಕಾಣುತ್ತವೆ. ಈ ಸಾಮ್ಯತೆಯನ್ನೆಲ್ಲ ಕೃತಿಚೌರ್ಯ ಎನ್ನಲು ಬರುವುದಿಲ್ಲ. ಹೋಲಿಕೆಗಳು ಇರುವುದು ಸೋಜಿಗವೂ ಅಲ್ಲ. ಸಾಮ್ಯತೆಗಳೇ ಇಲ್ಲದಿರುವುದು ಸಾಧ್ಯವೂ ಇಲ್ಲ. ಹಾಗೆ ನಮ್ಮಲ್ಲಿ ಐಡಿಯಾಗಳನ್ನು ಎತ್ತಿ ಹಾಕುವ ಚೌರ್ಯಗಳಿಗೂ ಕೊರತೆ ಇಲ್ಲ. ಈ ಲಕ್ಷಣದಿಂದ ಕೆಲವು ಕಲ್ಪಿತಗಳಿಗೆ (ಹೈಪಾತೀಸೀಸುಗಳಿಗೆ) ಬರಬಹುದು. 1. ನಮ್ಮ ವಿಮರ್ಶೆಯಲ್ಲಿ ಬೇರೆಯವರ ಅಭಿಪ್ರಾಯ ಎತ್ತಿಹಾಕಿ ನಾವೇ ಮೊದಲಿಗೆ ಇದನ್ನು ಹೇಳುತ್ತಿದ್ದೇವೆ ಎಂದು ಹೇಳುವ ಧೋರಣೆ ಸಾಕಷ್ಟು ಇದೆ. 2. ಬೇರೆ ಬೇರೆ ವಿಮರ್ಶಕರು ಒಂದೇ ವಸ್ತು, ವಲಯಗಳ ಬಗ್ಗೆ ಮಾತನಾಡುವಾಗ ಒಂದೇ ರೀತಿಯಲ್ಲಿ ಯೋಚಿಸುವ ಸಾಧ್ಯತೆಯೂ ಇದೆ. 3. ಒಂದೇ ನಿಲುವು–ತತ್ವವನ್ನು ಹಲವು ಕ್ರಮಗಳಲ್ಲಿ ಮಂಡಿಸುವ ರೀತಿಯೂ ನಮ್ಮಲ್ಲಿದೆ. 4. ಬೇರೆಯವರ ನಿಲುವುಗಳನ್ನು ಉಲ್ಲೇಖಿಸಿ–ಅನ್ಯವಿಮರ್ಶಕರ ಒಳನೋಟಗಳನ್ನು ಕದಿಯದೆ ಗೌರವದಿಂದ ಬಳಸಿಕೊಳ್ಳುವ ಸೌಜನ್ಯತೆಯೂ ನಮ್ಮಲ್ಲಿದೆ. ಇತ್ಯಾದಿ..

**6.12. ಮರುಸಂಯೋಜನೆ–ಮುಖಾಮುಖಿ ವಿಧಾನ.**

ಸಾಹಿತ್ಯ ಕೃತಿಗಳಲ್ಲಿ ಕೃತಿಕಾರನು ತನ್ನದೇ ಆದ ಒಂದು ಸಂಯೋಜನೆಯನ್ನು ಸೃಷ್ಟಿಸಿರುತ್ತಾನೆ. ಪದ, ಪದಕೂಟ, ದೃಶ್ಯ, ಭಾವ, ವಿಚಾರ, ಹೀಗೆ ಹಲವು ರೀತಿಯ ಸಂಯೋಜನೆಗಳನ್ನು ಸೃಷ್ಟಿಸಿರುತ್ತಾನೆ. ಹಾಗೆಯೇ ಪಾತ್ರ, ಮಾತು, ಸಾಮ್ಯತೆ, ವೈರುಧ್ಯತೆಗಳನ್ನು ತನ್ನದೇ ದೃಷ್ಟಿಯಲ್ಲಿ ಮುಖಾಮುಖಿ ಮಾಡಿರುತ್ತಾನೆ. ಇಂತಹ ಸಂಯೋಜನೆ ಮತ್ತು ಮುಖಾಮುಖಿ ವಿಧಾನವು ಸಾಹಿತ್ಯರಚನೆಯ ಒಂದು ಸಾಮಾನ್ಯ ವಿಧಾನವಾಗಿದೆ. ಇದು ವಿಮರ್ಶೆಯಲ್ಲಿ ಕೂಡ ಕಾಣಿಸಿಕೊಳ್ಳುತ್ತದೆ. ಕೃತಿಕಾರನ ಸಂಯೋಜನೆಯನ್ನು ಮುರಿದು ತನಗೆ ಬೇಕಾದ ಹಾಗೆ, ತನ್ನ ವ್ಯಾಖ್ಯಾನ–ಪ್ರಮೇಯಗಳ ಮಂಡನೆಗೆ ತಕ್ಕಾದ ಹಾಗೆ ವಿಮರ್ಶಕನು ಕೃತಿಯನ್ನು ಮರುಸಂಯೋಜಿಸಿ ಓದುತ್ತಾನೆ. ಪಠ್ಯವನ್ನು–ಪಠ್ಯದ ಕ್ರಮವನ್ನು ನಿರಚನೆಗೆ ಗುರಿಪಡಿಸಿ ತನ್ನದೇ ದೃಷ್ಟಿಯಲ್ಲಿ ಮರು ರಚಿಸಿಕೊಳ್ಳುತ್ತಿರುತ್ತಾನೆ. ಕೃತಿಭಾಗದ ನಿದರ್ಶನ ಮತ್ತು ವ್ಯಾಖ್ಯಾನ ಮಾದರಿಯನ್ನು ಅನುಸರಿಸುವ ನಮ್ಮ ಬಹುಪಾಲು ವಿಮರ್ಶೆಗಳಲ್ಲಿ ಈ ಮರುಸಂಯೋಜನೆಯ ವಿಧಾನವು ಬಹು ವ್ಯಾಪಕವಾಗಿ ಬಳಕೆಯಾಗಿದೆ. ಪ್ರಾಯೋಗಿಕ ವಿಮರ್ಶೆಯಿರಲಿ, ತೌಲನಿಕ ವಿಮರ್ಶೆಯಿರಲಿ, ವಿವರಣಾತ್ಮಕ ವಿಮರ್ಶೆಯಿರಲಿ ಎಲ್ಲ ಕಡೆಯೂ ಈ ಪಠ್ಯದ ಮರುಸಂಯೋಜನೆ ಮತ್ತು ವ್ಯಾಖ್ಯಾನ ವಿಧಾನವು ಬಳಕೆಯಾಗಿದೆ. ಸಾಹಿತ್ಯಗಳು ವಿಮರ್ಶೆಯಾಗಿ ಪ್ರಕಾರಾಂತರವಾಗುವಲ್ಲಿ ಈ ವಿಧಾನವು ಪ್ರಧಾನವಾದ ಪಾತ್ರವನ್ನು ವಹಿಸುತ್ತದೆ. (512–

ಪುಟ: 298) ಇಂಥ ಕಡೆ ಕೃತಿಯ ಸೊಗಸಾದ ಭಾಗಗಳನ್ನು ವಿಮರ್ಶಕನು ಸ್ವತಃ ಆಸ್ವಾದಿಸುತ್ತ ತನ್ನ ಮೆಚ್ಚಿನ ಅಸ್ವಾದಿತ ಭಾಗಗಳ ರುಚಿಯನ್ನು ಓದುಗರಿಗೂ ಉಣಬಡಿಸುವ ಶ್ರದ್ಧೆ ಮತ್ತು ಸಾಹಿತ್ಯ ಪ್ರೀತಿಯೇ ಹೆಚ್ಚಾಗಿ ವ್ಯಕ್ತವಾಗುತ್ತಿರುತ್ತದೆ. ಸಾಹಿತ್ಯದ ಕುರಿತಾದ ವಿಮರ್ಶೆಯ ನಿಲುವುಗಳು ಸಾಹಿತ್ಯವನ್ನು ಆಯ್ದು ಮಂಡಿಸುವ ಮೂಲಕವೇ–ಮರುಜೋಡಿಸುವ ಮೂಲಕವೇ ಇಂಥ ಕಡೆ ಪ್ರಕಟವಾಗುತ್ತಿರುತ್ತವೆ.(514–ಪುಟ: 81–85)

ತೌಲನಿಕ ವಿಧಾನದಲ್ಲಿ ಎರಡು ಭಿನ್ನ ಕಾಲಘಟ್ಟ, ಭಿನ್ನಭಾಷೆ, ಭಿನ್ನ ಸಂಸ್ಕೃತಿಗಳಿಗೆ ಸೇರಿದ ಕವಿಕೃತಿಗಳ ಸಾದೃಶ್ಯ, ವೈದೃಶ್ಯ, ಪೂರಕತೆ–ವೈರುಧ್ಯತೆ, ಮಾತು, ಪಾತ್ರ, ಪ್ರಸಂಗಗಳನ್ನು ಪರಸ್ಪರ ಎದುರು ಬದುರು ಇಟ್ಟು ಮುಖಾಮುಖಿ ಮಾಡುವ ವಿಧಾನವೂ ನಮ್ಮಲ್ಲಿ ಬಳಕೆಯಾಗಿದೆ. ಕುವೆಂಪು ಅವರ ರಾಮಾಯಣ ದರ್ಶನದ ಯಾವುದೋ ಮಾತಿನೊಂದಿಗೆ ಪಕ್ಷಿಕಾಶಿಯ ಇನ್ನಾವುದೊ ಮಾತೊಂದನ್ನು ಎದುರು ಬದುರು ಇಟ್ಟು ಆ ಮೂಲಕ ಕುವೆಂಪು ಅವರ ನಿಸರ್ಗ ದೃಷ್ಟಿಯನ್ನು ವ್ಯಾಖ್ಯಾನಿಸುವ ಮುಖಾಮುಖಿ ಮಾದರಿಯೂ ನಮ್ಮಲ್ಲಿ ಒಂದು ಆಂತರಿಕ ತೌಲನಿಕ ಮಾದರಿ ಎಂಬಂತೆ ಬಳಕೆಯಾಗಿದೆ. (512–ಪುಟ: 300–301) (757–ಪುಟ: 128–129)

ನಮ್ಮ ಪ್ರಾಚೀನರಲ್ಲಿ ಭಿನ್ನ ವಚನಗಳನ್ನು ತಮ್ಮದೇ ದೃಷ್ಟಿಯಲ್ಲಿ ಎದುರು ಬದುರಾಗಿಸಿ ಮುಖಾಮುಖಿ ಮಾಡುವ ವಿನ್ಯಾಸವು ಶೂನ್ಯಸಂಪಾದನೆಗಳಲ್ಲೂ; ಭಿನ್ನ ಕವಿಗಳ ಭಿನ್ನ ವರ್ಣನಾ ಭಾಗಗಳನ್ನು ಒಟ್ಟೊಟ್ಟಿಗೆ ಮರುಸಂಯೋಜಿಸುವ ವಿನ್ಯಾಸವು ಕಾವ್ಯಸಾರಗಳಲ್ಲೂ; ಏಕೀಕೃತ ಸಂಗ್ರಹಣ–ಸಂಕಲನ ವಿನ್ಯಾಸವು ತಿಮ್ಮಕವಿಯ ನವರಸಾಲಂಕಾರದಲ್ಲೂ ಪ್ರಕಟವಾಗಿವೆ. ಕುವೆಂಪು ಅವರ ಕಾವ್ಯ–ನಾಟಕ–ಕಾದಂಬರಿಗಳನ್ನು ವಿಮರ್ಶೆ ಮಾಡುವ ನೂರಾರು ವಿಮರ್ಶಕರು ತಮಗೆ ಇಷ್ಟವಾದ ಮತ್ತು ತಮ್ಮ ಪ್ರಮೇಯ–ವ್ಯಾಖ್ಯಾನಗಳಿಗೆ ಪೂರಕವಾದ ಭಾಗಗಳನ್ನು ಮತ್ತೆ ಮತ್ತೆ ನಿದರ್ಶನಗಳಾಗಿ ಉದಾಹರಿಸುತ್ತಾರೆ. ಹೀಗೆ ಉದಾಹರಿಸುವಾಗ ಅನೇಕರಲ್ಲಿ ಮತ್ತೆ ಮತ್ತೆ ಅದದೇ ಭಾಗಗಳು ಉದಾಹೃತವಾಗುತ್ತವೆ. ಕುವೆಂಪು ಕಾವ್ಯವನ್ನು, ಕಾದಂಬರಿಯನ್ನು ಓದುತ್ತಿದ್ದಾಗ; ಯಾವುದೋ ಭಾಗದ ಓದಿನ ಸಂದರ್ಭದಲ್ಲಿ ತಾನು ಓದಿದ ಇನ್ನಾವುದೋ ಕವಿಯ ಯಾವುದೋ ಕೃತಿಭಾಗ ವಿಮರ್ಶಕನಿಗೆ ನೆನಪಾಗುತ್ತಿರುತ್ತದೆ. ಇದನ್ನು ಭಾವ ಸಾಹಚರ್ಯ ಅಥವಾ ಸಹಯೋಗ ಎನ್ನಬಹುದು. ಇದಕ್ಕೆ ಸಾಮ್ಯತೆ–ವೈರುಧ್ಯತೆಗಳು ಕಾರಣವಿರಬಹುದು. ಆದರೆ ವಿಮರ್ಶಕನ ಓದಿನ ವ್ಯಾಪ್ತಿ ಮತ್ತು ಮರುಸಂಯೋಜನಾ ಪ್ರತಿಭೆಗಳು ಇದರ ಸಂಭವದಲ್ಲಿ ಮುಖ್ಯ ಪಾತ್ರ ವಹಿಸುತ್ತವೆ ಎಂಬುದು ಮಾತ್ರ ನಿಜ. ಇಂಥ ಸಂದರ್ಭಗಳಲ್ಲಿ ವಿಮರ್ಶಕ ತೌಲನಿಕವಾಗಿ ತನಗೆ ನೆನಪಾಗುವ ಅನ್ಯಗಳನ್ನೆಲ್ಲ ಉಲ್ಲೇಖಿಸುತ್ತ ಹೋಗುತ್ತಾನೆ. (758–ಪುಟ: 71–72) ಇಂತಹ ಉಲ್ಲೇಖಗಳು ಭಿನ್ನ ಸಾಹಿತ್ಯ ಸನ್ನಿವೇಶಗಳ ಮರುಸಂಯೋಜನೆ ಅಥವಾ ಮುಖಾಮುಖಿಯನ್ನೇ ಮಾಡುತ್ತಿರುತ್ತವೆ. ಈ ಮರುಸಂಯೋಜನೆ ಅಥವಾ ಮುಖಾಮುಖಿ ವಿಧಾನವು ಕೆಲವೊಮ್ಮೆ ತೌಲನಿಕವಾದ ಸಂವೇದನೆಗಳ–ಅಭಿವ್ಯಕ್ತಿ ವಿಧಾನಗಳ ಚರ್ಚೆಗೆ ತೊಡಗಿದರೆ, ಕೆಲವೊಮ್ಮೆ ಕೇವಲ ಕಾಣಿಸುವ–ತೋರಿಸುವ ಕೆಲಸಕ್ಕಷ್ಟೇ ತೊಡಗುತ್ತದೆ. ಕೆಲವೊಮ್ಮೆ ವ್ಯತ್ಯಾಸಗಳನ್ನು ಗುರ್ತಿಸಿಕೊಳ್ಳುತ್ತ ಆ ಮೂಲಕವೇ ವಿಶಿಷ್ಟತೆಯನ್ನು ಗುರ್ತಿಸಲೂ ತೊಡಗುತ್ತದೆ. (923–ಪುಟ: 1–4) ವಿಮರ್ಶಕನು ತಾನು ಬಲ್ಲ ಸಾಹಿತ್ಯ ಜಗತ್ತಿನಲ್ಲಿ ಎಲ್ಲಿಂದ ಎಲ್ಲಿಗೋ ಜಿಗಿಯುವ ಈ ಪ್ರವೃತ್ತಿಯು ತೌಲನಿಕ ವಿಧಾನದಲ್ಲಿ ಹೆಚ್ಚಾಗಿ ಜರುಗುತ್ತಿರುತ್ತದೆ. ಮುಖಾಮುಖಿ ಮತ್ತು ಮರುಸಂಯೋಜನೆ ಮಾದರಿ ಇಂತಹ ಕಡೆ ಸೃಷ್ಟಿಯಾಗುತ್ತಿರುತ್ತದೆ ಮತ್ತು ಬಳಕೆಯಾಗುತ್ತಿರುತ್ತದೆ.

### 6.13. ಸಂಸ್ಕೃತಿ ವಿಕಾಸ ದೃಷ್ಟಿ

ಕವಿಯ ವ್ಯಕ್ತಿತ್ವದ ವಿಕಾಸ ಮತ್ತು ಸಮಾಜದ ವ್ಯಕ್ತಿತ್ವದ ವಿಕಾಸಗಳನ್ನು ಗುರ್ತಿಸುವ ಆಕರವೆಂಬಂತೆ ಕುವೆಂಪು ಕಾವ್ಯ–ಕಾದಂಬರಿಗಳನ್ನು ನಮ್ಮ ವಿಮರ್ಶೆಯು ಗ್ರಹಿಸಿದೆ. ಇಲ್ಲಿನ ಪರಿಸರ ಚಿತ್ರಣಗಳಲ್ಲಿ ಸಂಸ್ಕೃತಿಯ ವಿಕಾಸದ ಮತ್ತು ಕುವೆಂಪು ವ್ಯಕ್ತಿತ್ವದ ವಿಕಾಸದ ಹೆಜ್ಜೆಗಳನ್ನು ಗುರ್ತಿಸುವ ಅಧ್ಯಯನಗಳು ನಡೆದಿವೆ. (1078–ಪುಟ: 150) (528–ಪುಟ: 71) ವ್ಯಕ್ತಿಯ ವ್ಯಕ್ತಿತ್ವ ಮತ್ತು ಸಮಾಜದ ಸಂಸ್ಕಾರಗಳಲ್ಲಿನ ಚಲನಶೀಲತೆಯನ್ನು ದಾಖಲಿಸುವ ಕಾರ್ಯವು ಸಾಹಿತ್ಯದ ಒಂದು ಮುಖ್ಯ ಕಾರ್ಯ ಮತ್ತು ಪ್ರಯೋಜನ ಎಂದು ಈ ವಿಮರ್ಶೆಯು ತಾತ್ವಿಕವಾಗಿ ನಂಬುತ್ತದೆ. ವ್ಯಕ್ತಿಯ ವ್ಯಕ್ತಿತ್ವದ ವಿಕಾಸವು ಸಮಾಜ ವಿಕಾಸದ

ಒಂದು ಅಂಗವೇ. ವ್ಯಕ್ತಿ ಎಂದರೆ ಇಲ್ಲಿ ಕವಿ ಮತ್ತು ಕವಿ ಸೃಷ್ಟಿಸುವ ಪಾತ್ರಗಳು. ಗುತ್ತಿ, ಐತ, ಪೀಂಚಲು, ತಿಮ್ಮಿ, ಹೂವಯ್ಯ, ಈ ಎಲ್ಲರ ವಿಕಾಸವು ಒಟ್ಟಾರೆ ಮಲೆನಾಡಿನ ವಿಕಾಸದ ಚರಿತ್ರೆಯಾಗಿದೆ. ಹಾಗೇ ಅದು ಕುವೆಂಪು ವಿಕಾಸದ ಚರಿತ್ರೆಯ ದಾಖಲೆಯೂ ಮತ್ತು ನಾಡಿನ ವಿಕಾಸದ ರೂಪಕವೂ ಹೌದು. ಸಾಂಸ್ಕೃತಿಕ ಮತ್ತು ಚಾರಿತ್ರಿಕ ದೃಷ್ಟಿಗಳು ಈ ವಿಮರ್ಶೆಯಲ್ಲಿ ಮುಖ್ಯವಾಗಿ ಕೆಲಸ ಮಾಡಿವೆ.

ಸಾಹಿತ್ಯವನ್ನು ಸಂಸ್ಕೃತಿ ಕಥನ ಎಂದು ಗ್ರಹಿಸುವ; ಸಾಂಸ್ಕೃತಿಕ ಚರಿತ್ರೆಯ ಆಕರವೆಂದು ಗ್ರಹಿಸುವ ದೃಷ್ಟಿಕೋನವು ಇಲ್ಲಿದೆ. 'ಕಳೆದು ಹೋದ ಜಗತ್ತೊಂದನ್ನು ದರ್ಶಿಸುವ ಬೆಳಕಿಂಡಿ'ಯಾಗಿ ಸಾಹಿತ್ಯವನ್ನು ನೋಡುವ ದೃಷ್ಟಿ ಇಲ್ಲಿದೆ. ಈ ವಿಮರ್ಶೆಯು ದಟ್ಟವಾದ ಸ್ಥಳೀಯ ಸಂಸ್ಕೃತಿಯ ಚಿತ್ರಣವು ಸಾಹಿತ್ಯ ಕೃತಿಯ ವಸ್ತು ಸಾಮಗ್ರಿಯಲ್ಲಿ ಬೆರೆತಿದ್ದರೆ ಅದನ್ನು ಉತ್ತಮ ಸಾಹಿತ್ಯವೆಂದು ತಿಳಿಯುವ ಧೋರಣೆಯನ್ನು ಹೊಂದಿದೆ. ಉತ್ತಮ ಸಾಹಿತ್ಯದ ಲಕ್ಷಣಗಳಲ್ಲಿ ಅದು ತನ್ನ ಕಾಲದ ಸಾಮಾಜಿಕ ಸಾಂಸ್ಕೃತಿಕ ದಾಖಲೆಯಾಗಿರುವುದೂ ಒಂದೆಂದು ಈ ಧೋರಣೆಯು ನಂಬುತ್ತದೆ. ವಾಸ್ತವವಾದಿ ಧೋರಣೆಯ ವಿಮರ್ಶೆ ಇದು.

ಕುವೆಂಪು ಅವರ ಸಾಹಿತ್ಯ ರಚನೆಯ ಕಾಲವನ್ನು ಲೀನಿಯರ್‌ರಾಗಿ ಗಮನಿಸುತ್ತ ಕಾಲಾನುಕ್ರಮದಲ್ಲಿ ಕುವೆಂಪು ಅವರ ದೃಷ್ಟಿ ಧೋರಣೆಗಳು ವಿಕಾಸವಾಗುತ್ತ ನಡೆದಿವೆ ಎಂದು ಕೂಡ ನಮ್ಮ ವಿಮರ್ಶೆಯಲ್ಲಿ ನಂಬಿ ವ್ಯಾಖ್ಯಾನಿಸಲಾಗಿದೆ. ಸುಜನಾ ಅವರು ಕಾದಂಬರಿಗಳನ್ನು ಶ್ರೀರಾಮಾಯಣದರ್ಶನದ ಮಂದ್ರ ಸ್ವರ ಎಂದು ಕರೆದರೆ, ಜಿ.ಎಸ್.ಎಸ್. ಅವರು ಖಂಡಕಾವ್ಯಗಳನ್ನು ಮಹಾಕಾವ್ಯಗಳ ಪೂರ್ವತಯಾರಿ ಎಂದು ಕರೆಯುತ್ತಾರೆ. ಈ ಅಭಿಪ್ರಾಯಗಳು ನಮ್ಮ ವಿಮರ್ಶೆಯಲ್ಲಿ ಒಪ್ಪಿತವೆಂಬಂತೆ ಮಾನ್ಯಗೊಂಡಿವೆ. ಕುವೆಂಪು ಅವರ ಸಪ್ತಸೂತ್ರ ಮತ್ತು ವಿಶ್ವಮಾನವ ಸಂದೇಶವನ್ನು ಹಾಗೂ ಅವರ ಪೂರ್ಣದೃಷ್ಟಿ, ಸರ್ವೋದಯ, ಸಮನ್ವಯ, ಇತ್ಯಾದಿ ಪಂಚಮಂತ್ರಗಳನ್ನು ಕುವೆಂಪು ಅವರ ಚಿಂತನೆಯ ಶಿಖರ ಎಂದು ನಮ್ಮ ವಿಮರ್ಶೆಯು ಭಾವಿಸುತ್ತದೆ. ದೃಷ್ಟಿ ಧೋರಣೆ; ತಾತ್ವಿಕತೆ ಮತ್ತು ಸಾಹಿತ್ಯ ರಚನೆಯಲ್ಲಿ ವಯಸ್ಸು ಮತ್ತು ಮಾಗುವಿಕೆಗಳ ನಡುವೆ ಸಂಬಂಧ ಕಲ್ಪಿಸುತ್ತ ನಮ್ಮ ವಿಮರ್ಶೆಯು ವಿಕಾಸದ ಅಂತ್ಯ ಮತ್ತು ಇಳಿಮುಖಗಳನ್ನು ಕೂಡ ಗುರ್ತಿಸುವ ಪರಿಪಾಠವನ್ನು ಆಚರಿಸಿದೆ.

ಕುವೆಂಪು ಅವರ ವಿಶ್ವಮಾನವ ದೃಷ್ಟಿಯು ಇದ್ದಕ್ಕಿದ್ದ ಹಾಗೆ ಉದ್ಭವಿಸಲಿಲ್ಲ. ಕುವೆಂಪು ಅವರ ವಿಚಾರ ದೃಷ್ಟಿಯು ಬೇರೆ ಬೇರೆ ಆಯಾಮಗಳಲ್ಲಿ, ಮೊದಲಿಗೆ ಅವರ ಬೇರೆ ಬೇರೆ ವಿಚಾರ ಲೇಖನಗಳಲ್ಲಿ ಪ್ರಕಟವಾಗುತ್ತ ಬಂದು ಕೊನೆಯಲ್ಲಿ ವಿಶ್ವಮಾನವ ದೃಷ್ಟಿಯಾಗಿ ವಿಕಾಸಗೊಂಡಿದೆ ಎಂದು ಹೇಳುವ ವಿಚಾರ ದೃಷ್ಟಿಯ ವಿಕಾಸದ ಅಧ್ಯಯನವು ನಮ್ಮ ವಿಮರ್ಶೆಯಲ್ಲಿ ನಡೆದಿದೆ. (ನೋಡಿ: 2551) ಕುವೆಂಪು ಅವರ ಕಾಲಕಾಲದ ವಿಚಾರ ದೃಷ್ಟಿಗಳಲ್ಲಿನ ಬಹುರೂಪತೆಗಳಲ್ಲಿ ಕಾಣುವ ವೈರುಧ್ಯ ಭಿನ್ನತೆಗಳನ್ನು ಅರ್ಥಮಾಡಿಕೊಳ್ಳುವ ಒಂದು ಉತ್ತಮ ಹೊರದಾರಿಯಾಗಿ ವಿಕಾಸವಾದಿ ದೃಷ್ಟಿಯು ಇಲ್ಲಿ ಸಂಭವಿಸಿದೆ. ವಿಕಾಸವಾದಿ ಪ್ರಕ್ರಿಯೆಯಲ್ಲಿ ವೈರುಧ್ಯಗಳಿರುವುದು ಸಹಜ ಎಂದು ಈ ದೃಷ್ಟಿಯು ಭಾವಿಸುತ್ತದೆ.

ಸಾಹಿತ್ಯವನ್ನು ವ್ಯಕ್ತಿಯ ದೃಷ್ಟಿಧೋರಣೆಗಳ ಮಾಗುವಿಕೆಯ ದಾಖಲೆಯಾಗಿ ಕಾಣುವ ಮತ್ತು ಸಂಸ್ಕೃತಿ ಚರಿತ್ರೆಯ ರೂಪಕವಾಗಿ ಕಾಣುವ ಎರಡೂ ದೃಷ್ಟಿಗಳು ನಮ್ಮಲ್ಲಿವೆ. ಹಾಗೆಯೇ ಕುವೆಂಪು ಸಾಹಿತ್ಯವನ್ನು ಪರಂಪರೆಯ (ಸಂಸ್ಕೃತಿ ಚರಿತ್ರೆಯ) ವೈಭವೀಕರಣವೂ ಅಲ್ಲದ ಪರಂಪರೆಯ ತಿರಸ್ಕಾರವೂ ಅಲ್ಲದ ಪರಿಷ್ಕಾರ ಕಾರ್ಯವನ್ನಾಗಿ ಕಾಣುವ; ಚಿಕಿತ್ಸಕ ವಿವೇಕವನ್ನಾಗಿ ಕಾಣುವ ದೃಷ್ಟಿಯೂ ನಮ್ಮಲ್ಲಿದೆ. ಚರಿತ್ರೆಯ ಚಿಕಿತ್ಸೆಯ ಕೆಲಸವನ್ನು ಮತ್ತು ಪರಂಪರೆಯನ್ನು ಪರಿಷ್ಕರಿಸಿ ಪ್ರಸ್ತುತಗೊಳಿಸುವ ಕೆಲಸಗಳನ್ನು ಸಾಹಿತ್ಯ ಮಾಡುತ್ತದೆ ಎಂದೂ ಸಂಸ್ಕೃತಿ ಚರಿತ್ರೆ (ವಿಕಾಸ)ಗಳನ್ನು ದಾಖಲಿಸುವ ಕಾರ್ಯವನ್ನು ಸಾಹಿತ್ಯ ಮಾಡುತ್ತದೆ ಎಂದೂ ಈ ದೃಷ್ಟಿಯು ಭಾವಿಸುತ್ತದೆ. ವಿಕಾಸವನ್ನು ದಾಖಲಿಸುವ ಪಾತ್ರ ಮತ್ತು ವಿಕಾಸವನ್ನು ನಿಯಂತ್ರಿಸಿ-ನಿರ್ವಹಿಸುವ ಪಾತ್ರಗಳೆರಡನ್ನು ಸಾಹಿತಿಯ ಕರ್ತವ್ಯವೆಂದು ತಿಳಿಸುವ ತತ್ವವನ್ನು ನಮ್ಮ ವಿಮರ್ಶೆಯು ಈ ದೃಷ್ಟಿಗಳ ಮೂಲಕ ಮಂಡಿಸಿದೆ. (ನಮ್ಮಲ್ಲಿ ಪರಂಪರೆ ಎಂಬ ಪರಿಭಾಷೆಗೂ ಸಂಸ್ಕೃತಿ ಚರಿತ್ರೆ ಎಂಬ ಪರಿಭಾಷೆಗೂ ಅಂತಹ ವ್ಯತ್ಯಾಸವೇನೂ ಇಲ್ಲ. ಹೂರಣ ಒಂದೆ. ಪರಿಭಾಷೆ ಬೇರೆ.) ಈ ವಿಕಾಸವಾದಿ ದೃಷ್ಟಿಯು ನಮ್ಮ ವಿಮರ್ಶೆಯ ಹಲವು ಚಹರೆಗಳಲ್ಲೊಂದು.

**6.14. ಅನ್ವಯೀಕರಣ ಪ್ರವೃತ್ತಿ–ಬೀಸುತನಗಳು**

ಬಿಡಿ ನೆಲೆಯ ವಿಶ್ಲೇಷಣೆಗಳಿಂದ ಹೊರಟು ಇಡಿ ನೆಲೆಯ ತೀರ್ಮಾನಗಳಿಗೆ ತಲುಪುವ ಪ್ರವೃತ್ತಿಯು ನಮ್ಮ ವಿಮರ್ಶೆಯಲ್ಲಿ ಇದೆ. ಇದು ಆಧುನಿಕ ವಿಮರ್ಶೆಯ ಒಂದು ಪ್ರಧಾನ ವಿಧಾನ. ಇದು ನಮ್ಮ ವಿಮರ್ಶೆಯ ಗುಣವೂ ಹೌದು. ದೌರ್ಬಲ್ಯವೂ ಹೌದು. ಬಿಡಿ ನೆಲೆಯ ಮೂಲಕ ತರ್ಕಿಸಬಹುದಾದ ಆಂಶಿಕ ತತ್ವಗಳನ್ನು ಸಾಧಾರಣೀಕೃತ ಬೀಸು ಹೇಳಿಕೆಗಳನ್ನಾಗಿ ಪರಿವರ್ತಿಸಿ ಹೇಳುವ ಅಪಾಯ ಇಲ್ಲಿರುತ್ತದೆ. ಅಂಗಾಂಶದ ಲಕ್ಷಣವನ್ನು ಅಂಗಕ್ಕೆ ಮತ್ತು ಆ ಮೂಲಕ ಒಟ್ಟು ಸೃಜನಶೀಲ ಅಖಂಡತೆಗೆ ಅನ್ವಯಿಸಿ ಹೇಳುವ ಬೀಸುತನ ಇದು. ಬಿಡಿಯ ಸತ್ವವನ್ನು ಇಡಿಗೆ ಅನ್ವಯಿಸಿದಾಗ ಆ ಮಾತು ಬೀಸು ಹೇಳಿಕೆಯಾಗುವ ಅಪಾಯ ಇದ್ದೇ ಇರುತ್ತದೆ. ಇಂತಹ ಬೀಸು ಹೇಳಿಕೆಗಳನ್ನು ನೀಡುವ ಅನ್ವಯೀಕರಣ ಪ್ರವೃತ್ತಿಯು ನಮ್ಮ ವಿಮರ್ಶೆಯ ಒಂದು ಮಾಮೂಲು ಲಕ್ಷಣವಾಗಿದೆ.

> ಕುವೆಂಪು ಅವರ ಕಾವ್ಯದ ಪ್ರಕೃತಿದರ್ಶನಕ್ಕೂ ಮತ್ತು ಕಾವ್ಯೇತರ ವೈಚಾರಿಕತೆಗೂ ಸಾಕಷ್ಟು ಅಂತರವಿದೆ. ಅವರ ಕಾವ್ಯದ ಪ್ರಕೃತಿ ದರ್ಶನ ಆನಂದದ ನೆಲೆಯಲ್ಲಿ ಕೇಂದ್ರೀಕೃತವಾಗುವಂಥದು. ಈ ದರ್ಶನದ ಅಂತಿಮ ಪರಿಣಾಮ ಭಾರತೀಯ ಕಾವ್ಯಮೀಮಾಂಸೆಯ ರಸಾನಂದ ಪರಿಕಲ್ಪನೆಯ ಭಾವುಕ ಗುರಿಗಳ ಜೊತೆಗೆ ಸಾಮರಸ್ಯ ಸಾಧಿಸುತ್ತದೆ. ಈ ಶುದ್ಧ ಆನಂದದ ಸ್ವರೂಪ ಆಳವಾದ ಚರ್ಚೆಗೆ ಯೋಗ್ಯವಾದದ್ದು. ಏಕೆಂದರೆ, ತಾರ್ಕಿಕವಾಗಿ ಈ ಆನಂದದ ನೆಲೆ ವೈಚಾರಿಕ ಶೋಧನೆಗಳನ್ನು ನಿರಾಕರಿಸುವಂಥದು. ಅನುಭವದ ಎಲ್ಲ ಹಂತಗಳು ಕರಗಿ ಒಂದು ಸಮಗ್ರ ನೆಲೆಯಾಗಿ ಈ ಆನಂದ ರೂಪಗೊಳ್ಳುತ್ತದೆ ಎಂದು ಈ ಲೇಖಕನಿಗೆ ಅನ್ನಿಸಿದೆ. 'ರಸಾನಂದ' ಪರಿಕಲ್ಪನೆಯ ಪ್ರಕಾರ ಉತ್ಕಟ ವೈಚಾರಿಕ ಅನುಭವಕ್ಕೆ ಕೂಡ ಸ್ಥಾನವಿದೆ ಎಂದು ವಾದಿಸಲು ಅವಕಾಶವಿದೆಯಾದರೂ, ಭಾರತೀಯ ಕಾವ್ಯಗಳ ನೆಲೆಯಲ್ಲಿ ಈ ಪರಿಕಲ್ಪನೆ ಪ್ರಕಟಗೊಂಡಿದ್ದು ಮೇಲಿನ ನೆಲೆಯಲ್ಲಿಯೇ. ಕುವೆಂಪು ಕಾವ್ಯದ ಪ್ರಮುಖ ನೆಲೆ ಕೂಡ ಇದೇ ಆಗಿದೆ. ಬಹುಶಃ ಈ ಕಾರಣಕ್ಕೋ ಏನೋ ಬೇಂದ್ರೆಯವರ ಕಾವ್ಯಕ್ಕೆ ಇರುವಷ್ಟು ಬೌದ್ಧಿಕ ವ್ಯಾಪ್ತಿ ಕುವೆಂಪು ಕಾವ್ಯಕ್ಕೆ ಇಲ್ಲ (750–ಪುಟ: 93)

ಇಲ್ಲಿ ಡಿ.ಆರ್. ನಾಗಾರಾಜ್ ಅವರು ಕುವೆಂಪು ಅವರ ಪ್ರಕೃತಿದರ್ಶನದ ನಿರ್ವಚನಕ್ಕೆ ತೊಡಗಿ ಅದರ ಲಕ್ಷಣವನ್ನೇ ಕುವೆಂಪು ಅವರ ಒಟ್ಟಾರೆ ಕಾವ್ಯದ ಲಕ್ಷಣ ಎಂಬಂತೆ ಸಾಧಾರಣೀಕರಿಸಿ ಅನ್ವಯಿಸಿದ್ದಾರೆ. ಒಂದು ಘಟಕದ ಪರಿಶೀಲನೆಯಿಂದ ಇಡಿ ಆಕೃತಿಯ ಲಕ್ಷಣವನ್ನು ಬಯಾಪ್ಸಿ ಮಾಡಿ ಲಕ್ಷಣೀಕರಿಸುವ ಪ್ರವೃತ್ತಿ ಇದು. ನಮ್ಮ ವಿಮರ್ಶೆಯ ಪ್ರಾಗ್ರೂಪಗಳಲ್ಲು ಈ ಅನ್ವಯೀಕರಣ ಪ್ರವೃತ್ತಿ ಇದೆ. ಕಾವ್ಯದ ಗುಣದೋಷ ಚರ್ಚೆಯ ಸಂದರ್ಭದಲ್ಲಿ ಇಂತಹ ಅನ್ವಯೀಕರಣಗಳನ್ನು ನಮ್ಮವರು ಮಾಡಿದ್ದಾರೆ. (ನೋಡಿ: ಗುಣದೋಷ ಚರ್ಚೆ ಮತ್ತು ಲಕ್ಷಣ ನಿರ್ವಚನ)

> ಕುವೆಂಪು ಅವರ 'ಜಗತ್ತೆಲ್ಲವು ಜಗನ್ಮಾತೆಯ ರೂಪವಾದರೂ ಪ್ರಕೃತಿಯ ಹೊದಿಕೆಯಲ್ಲಿ ಅಂತರ್ಯಾಮಿಯಾಗಿರುವ ಪರಮ ಪುರುಷನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಜೀವನದ ಗುರಿ'(ಕವಿಯ ಜೀವನ ದೃಷ್ಟಿ ಮತ್ತು ಕಾವ್ಯಸೃಷ್ಟಿ ಎನ್ನುವ ಪ್ರಬಂಧ: ದ್ರೌಪದಿಯ ಶ್ರೀಮುಡಿ, ಪುಟ 39) ಈ ಮಾತಿನಲ್ಲಿ ಜಗತ್ತಿಗೂ ಪ್ರಕೃತಿಗೂ ಇರುವ ಸಂಬಂಧ ಸ್ಪಷ್ಟವಾಗುವುದಿಲ್ಲ. ಪ್ರಕೃತಿಯ ಹೊದಿಕೆಯಲ್ಲಿ ಎನ್ನುವ ರೂಪಕವಂತೂ ಇಲ್ಲಿನ ವಿಚಾರದ ಮಂಡನೆ ಎಷ್ಟು ಅಸ್ಪಷ್ಟವಾಗಿದೆ ಎನ್ನುವುದನ್ನು ಎತ್ತಿ ತೋರಿಸುತ್ತದೆ. ಕುವೆಂಪು ಅವರ ಗದ್ಯ ಬಹಳಷ್ಟು ಕಡೆ ಇದೇ ರೀತಿಯದ್ದಾಗಿದೆ. ಶಬ್ದಗಳು ಕಿವಿಯನ್ನು ತುಂಬುತ್ತಾ, ಒಂದು ರೀತಿಯ ಮಂಪರನ್ನು ಸೃಷ್ಟಿಸುತ್ತಾ, ವಿಚಾರಗಳನ್ನು ಇಲ್ಲಿ ಅಸ್ಫುಟಗೊಳಿಸುತ್ತವೆ 671–ಪುಟ: 41)

ಹೀಗೆ ನಾಡಿಗರು ಒಂದು ತುಣುಕನ್ನು ಉದಾಹರಣೆ ಕೊಡುವ ಮೂಲಕ ಕುವೆಂಪು ಅವರ ಒಟ್ಟಾರೆ ಗದ್ಯ ಭಾಷೆಯ ಬಗೆಗೆ ಅದು ಅಸ್ಫುಟವೆಂಬ ನಿಲುವಿಗೆ ಬರುತ್ತಾರೆ. ತಮ್ಮ ನಿಲುವಿಗೆ ಅನುಕೂಲವಾಗುವ ಒಂದೋ ಎರಡೋ ನಿದರ್ಶನಗಳನ್ನು ಕೊಟ್ಟು ಆ ನಿದರ್ಶನಗಳ ಮೂಲಕವೇ ಸಾಧಾರಣೀಕೃತ ಹೇಳಿಕೆ–ನಿಲುವುಗಳಿಗೆ ತಲುಪುವ ವಿಧಾನ ಇದು. ಆದರೆ ತದ್ವಿರುದ್ಧವಾದ ಇಲ್ಲವೆ ಬೇರೆಯದೇ ಆದ ನಿಲುವಿಗೆ ತಲುಪಲು ಕೂಡ ನಿದರ್ಶನಗಳು ಅದೇ ಆಕರದಿಂದಲೇ ಸಿಗುತ್ತಿರುತ್ತವೆ ಕೂಡ. ಆದರೆ ಅನ್ವಯೀಕರಣಕ್ಕೆ ಬಿದ್ದ ವಿಮರ್ಶೆಗೆ ಇಂತಹವುಗಳು ಆ ಕ್ಷಣಕ್ಕೆ ಕಾಣುವುದಿಲ್ಲ ಮಾತ್ರ. ಭಿನ್ನ ನಿದರ್ಶನಗಳ ಮೂಲಕ ಭಿನ್ನ ನಿಲುವುಗಳಿಗೆ ತಲುಪುವಂತೆಯೇ ಒಂದೇ ನಿದರ್ಶನವನ್ನು ಭಿನ್ನ ವ್ಯಾಖ್ಯಾನಗಳಿಗೆ ಗುರಿಪಡಿಸಿರುವ ಉದಾಹರಣೆಗಳೂ ನಮ್ಮಲ್ಲಿ ಇವೆ. (ನೋಡಿ; ಭಿನ್ನ ವ್ಯಾಖ್ಯಾನ ಸಾಧ್ಯತೆ)

ಅನ್ವಯೀಕರಣದಲ್ಲಿ ಇನ್ನೊಂದು ಪ್ರವೃತ್ತಿ ಇದೆ. ಅದು ಯಾವುದಾದರೂ ಒಂದು ದೃಷ್ಟಿ ಅಥವಾ ನಿಲುವಿಗೆ ಇಡೀ ಕುವೆಂಪು ಸಾಹಿತ್ಯ ಪ್ರಕಾರಗಳನ್ನು ಅಥವಾ ಸಾಹಿತ್ಯವನ್ನು ಅನ್ವಯಿಸುತ್ತ ಹೋಗುವುದು. ಇದಕ್ಕೆ ಹಲವಾರು ನಿದರ್ಶನಗಳನ್ನು ಗಮನಿಸಬಹುದು 1. ಉದಾಹರಣೆಗೆ ಕುವೆಂಪು ಕಾದಂಬರಿಗಳನ್ನು ಬಂಧ ಮತ್ತು ವಿನ್ಯಾಸದ ದೃಷ್ಟಿಯಿಂದ ವಿಶ್ಲೇಷಿಸುವಾಗ ನಮ್ಮ ವಿಮರ್ಶೆಯು ಕುವೆಂಪು ಕಾದಂಬರಿಗಳ ವಿನ್ಯಾಸವನ್ನು (ಪ್ಯಾಟರ್ನು) 'ಆಸೆ'ಯ ಅನಾವರಣ ಎಂದು ವ್ಯಾಖ್ಯಾನಿಸಿದೆ. (676–ಪುಟ: 152–163) ಮದುಮಗಳು ಕಾದಂಬರಿಯ ಬಂಧದ ಆಂತರ್ಯದಲ್ಲಿ ಮಾನವ ಸ್ವಭಾವವೊಂದು ಇದೆ. ಅದೇ 'ಆಸೆ' ಎನ್ನುತ್ತ ಇಲ್ಲಿ ಹೆಣ್ಣಿನ ಆಸೆ, ಮಣ್ಣಿನ ಆಸೆ, ಮತಾಂತರದ ಆಸೆ, ಜೀವಿತದ ಆಸೆ ಹೀಗೆ ಕಾದಂಬರಿಯ ಎಲ್ಲ ಆಯಾಮಗಳನ್ನು 'ಆಸೆ' ಎಂಬ ಮಾನವ ಸ್ವಭಾವದ ಅನಾವರಣ ಎಂದು ಅನ್ವಯೀಕರಿಸಿ ವ್ಯಾಖ್ಯಾನಿಸಿದೆ. 2. ಕುವೆಂಪು ಭಾಷೆಯ ಕುರಿತ ಚರ್ಚೆಯಲ್ಲಿ ಭಾಷೆಯ ಸ್ವರೂಪವನ್ನು ಒಂದು ಮಾತಿನಿಂದ ನಿರ್ವಚಿಸಿ ಹೇಳುವ ಪ್ರವೃತ್ತಿಯು ನಮ್ಮಲ್ಲಿದೆ. ಭಾಷೆಯನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವ್ಯಾಖ್ಯಾನಿಸಿರುವ ನಿದರ್ಶನವೂ ನಮ್ಮಲ್ಲಿದೆ. ಉದಾಹರಣೆಗೆ ಕುವೆಂಪು ಅವರ ಕಾವ್ಯಭಾಷೆ ಎಂಬ ಲೇಖನದಲ್ಲಿ ಭಾಷೆಯ ಕುರಿತು ಬೇರೆ ಬೇರೆ ವಿಮರ್ಶಕರ ಅಭಿಪ್ರಾಯಗಳನ್ನು ಚರ್ಚಿಸುತ್ತ; ಆ ಎಲ್ಲ ಅಭಿಪ್ರಾಯಗಳನ್ನು ನಿರಾಕರಿಸುತ್ತ; ಕುವೆಂಪು ಕಾವ್ಯದ ಭಾಗಗಳನ್ನು ಆಯ್ದು, ಉದಾಹರಿಸುತ್ತ; ತಮ್ಮ ದೃಷ್ಟಿಗೆ ತಕ್ಕಂತೆ ಕಾವ್ಯವನ್ನು ವ್ಯಾಖ್ಯಾನಿಸುತ್ತ ಅಂತಿಮವಾಗಿ ಕಾವ್ಯ ಭಾಷೆಯ ಸ್ವರೂಪವು 'ಕಥನ ಭಾಷೆ' ಎಂಬ ನಿಲುವಿಗೆ ಬರಲಾಗಿದೆ. ಕಾವ್ಯವನ್ನು ತಮ್ಮ ದೃಷ್ಟಿಗೆ ತಕ್ಕಂತೆ ಸಾರಾಸಗಟಾಗಿ ಅನ್ವಯಿಸಿ ವ್ಯಾಖ್ಯಾನಿಸುವ ಪ್ರವೃತ್ತಿ ಇದು. (462–ಪುಟ: 141–163)

ಇದಕ್ಕೆ ಇನ್ನೊಂದು ಉದಾಹರಣೆ ಗಮನಿಸುವುದಾದರೆ, ಕುವೆಂಪು ಕಾವ್ಯದಲ್ಲಿ ವಾತ್ಸಲ್ಯಭಾವ (2545) ಎಂಬ ರಸನಿಷ್ಠ ಅಧ್ಯಯನದಲ್ಲಿ ಕುವೆಂಪು ಕವಿತೆಗಳು ಮತ್ತು ಮಹಾಕಾವ್ಯಗಳಲ್ಲಿನ ಪ್ರಧಾನವಾದ ಸ್ಥಾಯಿಭಾವವು ವಾತ್ಸಲ್ಯಭಾವ ಎಂಬ ನಿಲುವನ್ನು ಮಂಡಿಸಲಾಗಿದೆ. ಈ ನಿಲುವನ್ನು ಸಮರ್ಥಿಸಲು ಒಂದೊಂದು ಕವನಸಂಕಲನದಿಂದಲೂ ಆಯ್ದ ಭಾಗಗಳನ್ನು ಉದಾಹರಿಸಿ ತಮ್ಮ ದೃಷ್ಟಿಗೆ ಅನುಗುಣವಾಗಿ ಅವನ್ನೆಲ್ಲ ಅನ್ವಯಿಸಿಕೊಂಡು ವ್ಯಾಖ್ಯಾನಿಸಲಾಗಿದೆ. ಬೇರೆಯ ರಸಭಾವಗಳು ಉದಾಹೃತ ಭಾಗಗಳಲ್ಲೆ ಎದ್ದು ಕಾಣುತ್ತಿದ್ದರೂ ನಿಲುವಿಗೆ ತಕ್ಕಂತೆಯೇ ಅವುಗಳನ್ನೆಲ್ಲ ಅನ್ವಯಿಸಲಾಗಿದೆ. ಕುವೆಂಪು ಸಾಹಿತ್ಯದಲ್ಲಿ ಮಾನವತಾವಾದ ಎಂಬ ತಮ್ಮ ಅಧ್ಯಯನದಲ್ಲಿ ದೇಜಗೌ ಕೂಡ ಇದೇ ರೀತಿಯ ವಿಧಾನವನ್ನು ಅನುಸರಿಸಿದ್ದಾರೆ. ದೃಷ್ಟಿಕೋನವೊಂದಕ್ಕೆ ಒಗ್ಗಿಸಿ ಸಾಹಿತ್ಯವನ್ನು ಅನ್ವಯೀಕರಿಸುವ–ಸಮೀಕರಿಸುವ ಪೆಡೆಗಾಗಿಕ್ಕಾದ ವಿಧಾನವಿದು. ಸಾಹಿತ್ಯದಿಂದ ತತ್ವಕ್ಕೆ ಚಲಿಸಿರುವಂತೆ ಮೇಲ್ನೋಟಕ್ಕೆ ಇಲ್ಲಿ ಕಾಣುತ್ತದಾದರೂ ಸಾಹಿತ್ಯವನ್ನು ತತ್ವಕ್ಕೆ ಹೊಂದಿಸುವ ಕೆಲಸವೇ ಇಲ್ಲಿ ನಡೆದಿದೆ. ಇಂತಹ ಅನ್ವಯೀಕರಣ ನಮ್ಮ ವಿಮರ್ಶೆಯ ದುರ್ಬಲತೆಯ ಒಂದು ಮುಖ್ಯ ಲಕ್ಷಣವಾಗಿದೆ.

ಒಂದೊ ಅಥವಾ ಎರಡೊ ಉದಾಹರಣೆ ನೀಡಿ ಇದು ಕನ್ನಡ ವಿಮರ್ಶೆಯ ಲಕ್ಷಣ ಎಂದ ಕೂಡಲೆ ಆ ಮಾತಿಗು ಒಂದು ಸಾರ್ವತ್ರಿಕ ಅನ್ವಯೀಕರಣ ಗುಣ ಒಂದು ಬಿಡುತ್ತದೆ ಅನ್ನಿಸಬಹುದು. ಯಾವುದೇ ಇಡಿತನ ಸಂಭವಗೊಳ್ಳುವುದೇ ಕೆಲವೊಮ್ಮೆ ಬಿಡಿ ಬಿಡಿಗಳ ಕೂಡುವಿಕೆಯಿಂದ. ಇಡಿತನ ಅಥವಾ ಅಖಂಡ ಆಕೃತಿಯು ಬಿಡಿನೆಲೆಗಳ ಒಟ್ಟಂದದ ಮನೋಗ್ರಹಿಕೆಯೇ ಆಗಿರುತ್ತದೆ. ಆದರೆ ಬಿಡಿ ಬಿಡಿಯು ಕೂಡಿ ಇಡಿಯಾಗುವ ಪ್ರತಿಕ್ರಿಯೆಯೇ ಬೇರೆ; ಬಿಡಿಯ ಲಕ್ಷಣವನ್ನೇ ಇಡಿಯ ಸ್ವರೂಪವೆಂದು ಸಾಮಾನ್ಯೀಕರಿಸಿ ಹೇಳುವ ವಿಧಾನವೇ ಬೇರೆ. ಒಂದು ಅಂಗಾಂಶದ ಗುಣವು ಇಡೀ ಅಂಗದ ಗುಣಗಳಲ್ಲಿ ಒಂದು ಎಂದು ಹೇಳುವುದಕ್ಕೂ ಇದೇ ಇಡಿ ಅಂಗಲಕ್ಷಣ ಎಂದು ಹೇಳುವುದಕ್ಕೂ ವ್ಯತ್ಯಾಸವಿದೆ. ಜೀವಶಾಸ್ತ್ರದಲ್ಲಿ ಅಂಗಾಂಶದಿಂದ ಅಂಗವನ್ನು ಪರೀಕ್ಷಿಸುವ ಒಂದು ವಿಧಾನವಿದೆ. ಅದನ್ನು ಬಯಾಪ್ಸಿ ಎಂದು ಕರೆಯುತ್ತಾರೆ. ಜೀವಶಾಸ್ತ್ರದಲ್ಲಿ ಇದು ಯಶಸ್ವಿ ವಿಧಾನ ಎನ್ನಿಸಬಹುದು ಆದರೆ ಇದು ಸಾಹಿತ್ಯ ವ್ಯಾಖ್ಯಾನಕ್ಕೂ ಎಲ್ಲ ಕಡೆ ಯತಾರ್ಥವಾಗಿ ಅನ್ವಯವಾಗುತ್ತದೋ?

ತನ್ನ ಉತ್ಕಟವಾದ ಭಾವನೆಗಳನ್ನು ಅಭಿವ್ಯಕ್ತಿಸಲು ಕವಿಯಾದವನು ಕೆಲವೊಮ್ಮೆ ತನ್ನ ಮಾನವ ಲೋಕದ ಉತ್ಕಟ ಅನುಭವ ಪ್ರಾಮಾಣ್ಯಗಳನ್ನು ಪ್ರತೀಕಗಳಾಗಿ ಬಳಸುತ್ತಿರುತ್ತಾನೆ. ತಾಯಿ, ದೈವ, ಸುರತ, ದಾಂಪತ್ಯ, ಶಿಶುತನ ಇಂತಹ ಕಡೆಯ ತನ್ನ ಕೆಲ ಉತ್ಕಟವಾದ ಅನುಭವಗಳನ್ನೆ ಕಾವ್ಯದಲ್ಲಿ ಅಭಿವ್ಯಕ್ತಿಗೆ ಕವಿಯು ಬಳಸುವುದುಂಟು. ಇಂಥ ಅನುಭವ ತದ್ರೂಪಗಳ ಬಳಕೆಯಿಂದ ಕವಿಗೆ ಒದಗಿ ಬರಬಹುದಾದ ಅಭಿವ್ಯಕ್ತಿ ಕ್ರಮಗಳಿಗೆ ಅವುಗಳದ್ದೆ ಆದ ಮಿತಿ ಇರುತ್ತದೆ. ವಿಮರ್ಶಕರು ಇವುಗಳನ್ನೆ ಆಧರಿಸಿ ದ್ಯಾವಾಪೃಥಿವೀ

ಪ್ರಜ್ಞೆ ಎಂತಲೋ, ಸತಿಪತಿ ಭಾವ ಎಂತಲೋ, ಪ್ರಕೃತಿಯ ದೈವೀಕರಣ, ಪ್ರಣಯ ಪ್ರತೀಕ, ಪ್ರಾಣಿ ರೂಪಕ, ಅದ್ವೈತದರ್ಶನ ಎಂತಲೋ ವ್ಯಾಖ್ಯಾನಿಸುತ್ತಾರೆ. ಆದರೆ ಅಭಿವ್ಯಕ್ತಿ ಕ್ರಮಗಳಿಗೇ ಇರಬಹುದಾದ ಮಿತಿಗಳ ಬಗ್ಗೆ ವಿಮರ್ಶೆಗೆ ಕೆಲವೊಮ್ಮೆ ಅರಿವು ಇರುವುದಿಲ್ಲ. ಇಂತಹ ನೆಲೆಯಲ್ಲಿ ನಮ್ಮ ವಿಮರ್ಶೆಯು ಸೈದ್ಧಾಂತಿಕವಾಗಿ ಚಿಂತಿಸಿರುವುದು ಕಡಿಮೆ. ವಿಮರ್ಶೆಯಲ್ಲಿನ ಕೆಲವು ಅಭಿವ್ಯಕ್ತಿ ಕ್ರಮಗಳಿಗೂ ಕೂಡ ಸಹಜವಾಗಿಯೆ ಕೆಲವು ಮಿತಿಗಳಿರುತ್ತವೆ. ಅನ್ವಯೀಕರಣ ವಿಧಾನ ಕೂಡ ಒಂದು ವಿಮರ್ಶೆಯ ಕ್ರಮ. ಕೆಲವೊಮ್ಮೆ ಕ್ರಮಕ್ಕೆ ಇರುವ ಮಿತಿಗಳು ವಿಮರ್ಶೆಗೂ ತಗಲಿಕೊಳ್ಳುತ್ತವೆ. ಈ ಮಾತು ಕೇವಲ ಅನ್ವಯೀಕರಣ ವಿಧಾನಕ್ಕೆ ಮಾತ್ರ ಅನ್ವಯಿಸುವ ಮಾತಲ್ಲ. ಅವಳಿ ವೈರುಧ್ಯ ವಿಧಾನ, ಅಪಸಾಂದರ್ಭೀಕರಣ ವಿಧಾನ ಹೀಗೆ ಹಲವು ಕ್ರಮಗಳಿಗೂ ಅನ್ವಯಿಸುವ ಮಾತಿದು. ಈ ಮಿತಿಗಳಿಂದ ಪಾರಾಗುವುದು ಹೇಗೆ? ಇದಕ್ಕೊಂದು ಸುಲಭ ಮಾರ್ಗವೆಂದರೆ; ಮಿತಿಯುಳ್ಳ ಅಭಿವ್ಯಕ್ತಿ ಕ್ರಮಗಳಿಂದಲೇ ಪಾರಾಗುವುದು. ಹೊಸ ಕ್ರಮಗಳನ್ನು ಶೋಧಿಸಿಕೊಳ್ಳುವುದು. ಇದನ್ನೇ ನಿರಂತರ ಮಾರ್ಗಾಂತರ ಎನ್ನಬಹುದು. ಅದಾಗಲೇ ಹಲವರು ನಡೆದಿರುವ ದಾರಿಗಳನ್ನು ತುಳಿಯದೆ ಹೊಸದಾರಿಗಳನ್ನು ಹಿಡಿಯುವ ಪರಿ ಇದು.

ಮಾರ್ಗಾಂತರವೆಂದರೆ ದಾರಿ ತಪ್ಪುವುದು ಎಂಬ ಅರ್ಥಕೂಡ ಇದೆ. ವಿಮರ್ಶೆಯಲ್ಲಿ ತಾವು ಉದ್ದೇಶಿಸುವುದೇ ಒಂದು ಹೇಳುವುದೇ ಇನ್ನೊಂದು; ತಾವು ಏನನ್ನು ಹೇಳಬೇಕೋ ಅದನ್ನು ಹೇಳದೆ ಇನ್ನೇನೇನೋ ಹೇಳತೊಡಗುವುದು ಕೆಲವೊಮ್ಮೆ ಆಗುತ್ತಿರುತ್ತದೆ. ಇಂತಹ ಮಾರ್ಗಾಂತರ ಅಪಾಯಕಾರಿ. ದಾರಿ ತಪ್ಪದೆ ಹೊಸಹೊಸ ದಾರಿಗಳನ್ನು ಕಂಡುಕೊಳ್ಳುವುದು ನಿಜವಾದ ಮಾರ್ಗಾಂತರ. ಕನ್ನಡ ಸಾಹಿತ್ಯದಲ್ಲಿ ಆಗಿರುವ ಮಾರ್ಗಾಂತರಗಳನ್ನು ತನ್ನದೇ ಪರಿಭಾಷೆಗಳಲ್ಲಿ ಕನ್ನಡ ವಿಮರ್ಶೆ ಗುರ್ತಿಸಿದೆ. ಕನ್ನಡ ವಿಮರ್ಶೆಯಲ್ಲಿ ಆದಿಯಿಂದ ನಡೆದಿರುವ ಮಾರ್ಗಾಂತರಗಳನ್ನು ನಾವು ಇನ್ನೂ ಗುರ್ತಿಸಿಕೊಳ್ಳಬೇಕಾಗಿದೆ. (ಮಾರ್ಗಾಂತರಗಳನ್ನು ಗುರ್ತಿಸಿಕೊಳ್ಳುವುದೇ ಬೇರೆ; ಹೊಸ ಮಾರ್ಗಗಳನ್ನು ಹಿಡಿಯುವುದೇ ಬೇರೆ. ಆದರೂ ಚರಿತ್ರೆಯ ಹೆಣವನ್ನು ಕೊಯ್ದಾಗಲೂ ಹೊಸ ದಾರಿಗಳು ಗೋಚರಿಸಬಹುದಲ್ಲವೇ?) ಆಧುನಿಕ ವಿಮರ್ಶೆ; ಪ್ರಾಚೀನ ವಿಮರ್ಶೆ ಎಂಬ ಎರಡು ಮಾರ್ಗ–ವರ್ಗಗಳಾಗಿ ವಿಮರ್ಶೆಯನ್ನೂ ಈಗಾಗಲೇ ಕಾಣಲಾಗಿದೆ. ಆಧುನಿಕ ವಿಮರ್ಶೆಯನ್ನು ನವೋದಯ ಪೂರ್ವ, ನವೋದಯ, ನವ್ಯ, ಎಂಬ ಸಾಹಿತ್ಯದ ಪರಿಭಾಷೆಯಲ್ಲೆ ವರ್ಗೀಕರಿಸಿ ಗುರ್ತಿಸಿಕೊಂಡು ವ್ಯಾಖ್ಯಾನಿಸುವ ಪರಿಪಾಟ ಈಗಾಗಲೇ ನಮ್ಮಲ್ಲಿ ಜಾರಿಯಲ್ಲಿದೆ. ಈ ಚರಿತ್ರೆಯ ವರ್ಗೀಕರಣ–ನಾಮಕರಣ–ವ್ಯಾಖ್ಯಾನವೇ ತುಂಬಾ ಸಾಪೇಕ್ಷ ಮತ್ತು ಪ್ರಶ್ನಾರ್ಹವಾದುದು. ಹೀಗಿರುವಾಗ ಇದನ್ನು ವಿಮರ್ಶೆಯ ಮಾರ್ಗಗಳನ್ನು ಗುರ್ತಿಸಲು ಬಳಸುವುದು ಎಷ್ಟು ಯುಕ್ತವಾದುದು? ಚರಿತ್ರೆಯ ಮರುರಚನೆ ಮತ್ತೆ ಮತ್ತೆ ಆಗುತ್ತಿರಬೇಕಲ್ಲವೇ?

**6.15. ಭಿತ್ತಿ ನಿರ್ಮಾಣ ಮತ್ತು ವ್ಯಾಖ್ಯಾನ ವಿಧಾನ**

ನಿರ್ದಿಷ್ಟವಾದ ಕ್ಯಾನ್ವಾಸು ಒಬ್ಬ ಚಿತ್ರಕಲಾವಿದನಿಗೆ ಹೇಗೆ ಚಿತ್ರಕ್ಕೆ ಒದಗಿ ಬರುತ್ತದೋ ಹಾಗೆ ವಿಮರ್ಶೆಯಲ್ಲಿ ಹಲವು ರೀತಿಯ ಕ್ಯಾನ್ವಾಸುಗಳು ವಿಮರ್ಶೆಗೆ ಒದಗಿ ಬರುತ್ತವೆ. ಹಲವಾರು ಸಿದ್ಧ ಭಿತ್ತಿಗಳನ್ನು ವಿಮರ್ಶೆಗೆ ನಮ್ಮವರು ಬಳಸಿಕೊಳ್ಳುವ ಜೊತೆಗೆ ಹೊಸ ಭಿತ್ತಿಗಳನ್ನು ನಿರ್ಮಿಸುವ ಪ್ರವೃತ್ತಿಯನ್ನೂ ತೋರಿದ್ದಾರೆ.

ಒಂದು ಸಾವಿರ ವರ್ಷದ ಕನ್ನಡ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿಟ್ಟು ಕುವೆಂಪು ಸಾಹಿತ್ಯವನ್ನು ನೋಡುವುದು (2696), ಆಧುನಿಕ ಕನ್ನಡ ಕಾವ್ಯದ ಭಿತ್ತಿಯಲ್ಲಿ ಕುವೆಂಪು ಕಾವ್ಯವನ್ನು ಇಟ್ಟು ನೋಡುವುದು (757–ಪುಟ: 127), ಮಲೆನಾಡಿನ ಪರಿಸರದ ಹಿನ್ನೆಲೆಯಲ್ಲಿ ಕುವೆಂಪು ಸಾಹಿತ್ಯದಲ್ಲಿ ಚಿತ್ರಿತವಾಗಿರುವ ಪರಿಸರವನ್ನು ಇಟ್ಟು ನೋಡುವುದು (708–ಪುಟ: 91), ವಿಶ್ವದ ಮಹಾಕಾವ್ಯಗಳ ಹಿನ್ನೆಲೆಯಲ್ಲಿ ಇಟ್ಟು ಕುವೆಂಪು ರಾಮಾಯಣ ದರ್ಶನವನ್ನು ಮತ್ತು ಕುವೆಂಪು ಪ್ರಕೃತಿ ಕವಿತೆಗಳನ್ನು ನೋಡುವುದು (923–ಪುಟ: 1ರಿಂದ8) ಹೀಗೆ ಇದಕ್ಕೆ ಅಸಂಖ್ಯ ಉದಾಹರಣೆಗಳನ್ನು ನೀಡಬಹುದು. ಎಲ್ಲ ವಿಮರ್ಶಾ ವಿಧಾನಗಳಲ್ಲಿ ಪ್ರಕಟವಾಗುವ ಒಂದು ಸಾಮನ್ಯ ಪ್ರವೃತ್ತಿಯಂತೆಯೂ, ಒಂದು ಪ್ರತ್ಯೇಕ ವಿಮರ್ಶಾ ವಿಧಾನದಂತೆಯೂ ಇದನ್ನು ನೋಡಬಹುದಾಗಿದೆ. ಆದರೆ ತೌಲನಿಕ ವಿಧಾನದಲ್ಲಿ ಪ್ರಕಟವಾಗುವ ಒಂದು ಮುಖ್ಯವಾದ ಪ್ರವೃತ್ತಿ ಇದಾಗಿದ್ದು ಒಂದರ ಮೂಲಕ ಇನ್ನೊಂದನ್ನು ಪರಿಶೀಲಿಸುವ ಕೆಲಸ ಇಲ್ಲಿ ಪ್ರಧಾನವಾಗಿ ನಡೆಯುತ್ತಿರುತ್ತದೆ. ಇಲ್ಲಿ ತೌಲನಿಕ ವಿಧಾನದ ಪರಿಕರಗಳು ಯಥಾವತ್ ಬಳಕೆಯಾಗದಿದ್ದರೂ ತುಲನೆಯಂತೂ ನಡೆಯುತ್ತಿರುತ್ತದೆ. ಸಾಹಿತ್ಯವನ್ನು ರೂಪನಿಷ್ಠವಾಗಿ ವ್ಯಾಖ್ಯಾನಿಸುವುದಕ್ಕಿಂತ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುವ ಪ್ರವೃತ್ತಿ ಇಂತಹ ಕಡೆ ಹೆಚ್ಚಾಗಿ ಕಂಡು ಬರುತ್ತದೆ.

ಕೃತಿಯನ್ನು ಕೃತಿಕಾರನ ಕಾಲ, ಸ್ಥಳಗಳ ಹಿನ್ನೆಲೆಯಲ್ಲಿ ಇಟ್ಟು ಅಧ್ಯಯನ ಮಾಡುವ ಮತ್ತು ಕೃತಿಕಾರನ ಕಾಲ ಸ್ಥಳಗಳಿಂದ ಕೃತಿಯನ್ನು ಬಿಡುಗಡೆಗೊಳಿಸಿ ಅಧ್ಯಯನ ಮಾಡುವ ಎರಡೂ ಕ್ರಮಗಳು ನಮ್ಮಲ್ಲಿ ಇವೆ. ಕುವೆಂಪು ಕಾದಂಬರಿಗಳನ್ನು ಕಾಲ ಮತ್ತು ಪ್ರಾದೇಶಿಕ (708–ಪುಟ: 91) ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಹಾಗೇ ಅವನ್ನು ಕಾಲೈಕ್ಯ–ಸ್ಥಳೈಕ್ಯ ನೆಲೆಯಲ್ಲಿ ಅಧ್ಯಯನ ಮಾಡುವ (2525) ಎರಡೂ ಕ್ರಮಗಳು ನಮ್ಮಲ್ಲಿ ಆಚರಣೆಯಾಗಿವೆ. ವಿಮರ್ಶಕನ ಓದಿನ ವ್ಯಾಪ್ತಿ–ತಿಳುವಳಿಕೆ ಮತ್ತು ಆತನ ಅಭಿರುಚಿಗಳು–ದೃಷ್ಟಿಕೋನಗಳು ಹೀಗೆ ಈ ಎರಡು ಸಂಗತಿಗಳೇ ಇಲ್ಲಿ ಭಿತ್ತಿ ನಿರ್ಮಾಣವನ್ನು ನಿರ್ಧರಿಸುತ್ತವೆ. ಸಾಹಿತ್ಯವು ಯಾವ ಭಿತ್ತಿಯನ್ನು ಬೇಡುತ್ತದೆ ಎಂಬ ತತ್ವ ಚರ್ಚೆ ಈ ಪ್ರವೃತ್ತಿಯಲ್ಲಿ ಇಲ್ಲ. ಇದಕ್ಕೆ ಎರಡು ಉದಾಹರಣೆ ಕೊಡಬಹುದು. ಜಾನಪದದ ತಿಳುವಳಿಕೆ ಇರುವ ಹಿ.ಶಿ.ರಾಮಚಂದ್ರೇಗೌಡರು ಜಾನಪದ ಭಿತ್ತಿಯ ಮೂಲಕ ವಿಮರ್ಶೆಗೆ ತೊಡಗಿದರೆ ಇಂಗ್ಲೀಶ್ ತಿಳುವಳಿಕೆ ಉಳ್ಳ ಸಿ.ನಾಗಣ್ಣ ಇಂಗ್ಲೀಶ್ ಭಿತ್ತಿಯ ಮೂಲಕ ಕುವೆಂಪು ವಿಮರ್ಶೆಗೆ ತೊಡಗುತ್ತಾರೆ. ಅಂದರೆ ಇದು ಬಹುಪಾಲು ವಿಮರ್ಶಕನ ವ್ಯುತ್ಪತ್ತಿ ಜ್ಞಾನವನ್ನು ಅವಲಂಬಿಸಿದ ಕ್ರಿಯೆಯಾಗಿದೆ.

ಕುವೆಂಪು ತಮ್ಮ ಕಾವ್ಯಮೀಮಾಂಸೆಯ ವಿಚಾರಗಳನ್ನು ಹೇಗೆ ರೂಪಿಸಿಕೊಂಡಿದ್ದಾರೆ? ಅವರ ಕಾವ್ಯಮೀಮಾಂಸೆ ಮತ್ತು ವಿಮರ್ಶೆಯನ್ನು ನಾವು ಯಾವ ಹಿನ್ನೆಲೆಯಿಂದ ನೋಡಬೇಕು? ಎಂಬ ಅಂಶಗಳನ್ನು ಚರ್ಚಿಸುತ್ತ ಡಾ.ಕೆ.ಕೃಷ್ಣಮೂರ್ತಿ ಅವರು ಕುವೆಂಪು ದರ್ಶನ ವಿಮರ್ಶೆಯನ್ನು ಪಾಶ್ಚಾತ್ಯ ವಿಮರ್ಶೆ, ಸೌಂದರ್ಯ ಮೀಮಾಂಸೆ ಮತ್ತು ಪೌರ್ವಾತ್ಯ ತತ್ವಶಾಸ್ತ್ರ–ಮೀಮಾಂಸೆಗಳೆಲ್ಲವುಗಳ ಸಮನ್ವಯರೂಪಿ ಎಂಬಂತೆ ವ್ಯಾಖ್ಯಾನಿಸುತ್ತಾರೆ. ಒಟ್ಟು ಪೂರ್ವಪಶ್ಚಿಮಗಳ ಮೀಮಾಂಸಾ ಪರಂಪರೆಯನ್ನು ಕುವೆಂಪು ಮೀಮಾಂಸೆಯ ಭಿತ್ತಿಯನ್ನಾಗಿ ಇಟ್ಟು ಕೊಂಡರೆ ಈ ಕ್ಷೇತ್ರದ ಕುವೆಂಪು ಕೊಡುಗೆಯನ್ನು ಅರಿಯಲು ಸಾಧ್ಯ ಎಂಬ ಗ್ರಹಿಕೆಯ ವಿಧಾನವೊಂದನ್ನು ಸೂಚಿಸುತ್ತಾರೆ. (1672–ಪುಟ: 282)

ಕನ್ನಡ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ಇಟ್ಟು ನೋಡುವುದು ಈ ವಿನ್ಯಾಸದ ಒಂದು ಜನಪ್ರಿಯ ಆಚರಣೆ. ಇಲ್ಲಿ ಎರಡು ತೆರನ ತೌಲನಿಕತೆಗಳಿವೆ. ಆಧುನಿಕ ಕಾವ್ಯದ ಭಿತ್ತಿಯಲ್ಲಿ ಕುವೆಂಪುವನ್ನು ನೋಡುವುದು; ಪ್ರಾಚೀನ ಸಾಹಿತ್ಯದ ಹಿನ್ನೆಲೆಯಲ್ಲಿ ಕುವೆಂಪುವನ್ನು ಇಟ್ಟು ನೋಡುವುದು. ಚಳುವಳಿ ದೃಷ್ಟಿ, ಪ್ರಾದೇಶಿಕ ದೃಷ್ಟಿ, ಪರಿಸರ ದೃಷ್ಟಿ, ಪ್ರಕಾರ ದೃಷ್ಟಿ, ಹೀಗೆ ಹಲವು ದೃಷ್ಟಿಯ ವಿಮರ್ಶೆಗಳಲ್ಲಿ ಬೇರೆ ಬೇರೆ ಭಾಷೆ, ಪ್ರದೇಶ, ಸಂಸ್ಕೃತಿ, ಪರಂಪರೆಗಳ ಜೊತೆಗೆ ಇಟ್ಟು ಕುವೆಂಪುವನ್ನು ತುಲನೆ ಮಾಡುವುದು ನಮ್ಮ ಒಂದು ಸಾಮಾನ್ಯವಾದ ವಿಮರ್ಶಾ ವ್ಯಾಪಾರವಾಗಿದೆ. ಇಲ್ಲಿ ಹಲವು ತೆರನ ತೌಲನಿಕತೆಗಳಿವೆ. ಈ ರೀತಿಯ ತುಲನೆ ನಮ್ಮ ವಿಮರ್ಶೆಯ ಒಂದು ಚಹರೆಯೂ ಹೌದು.

ಸಾಹಿತ್ಯ ಪರಂಪರೆಗಳ ಹಿನ್ನೆಲೆಯಿಂದ ಕುವೆಂಪುವನ್ನು ತುಲನೆ ಮಾಡುವಾಗ ಕುವೆಂಪು ಸಾಹಿತ್ಯವು ಅನ್ಯದೊಂದಿಗೆ ಪಡೆದಿರುವ ಸಾಮ್ಯ ಮತ್ತು ಭೇದಗಳನ್ನು ಗುರ್ತಿಸಿಕೊಳ್ಳುವುದು; ಮತ್ತು ಆ ಮೂಲಕ ಅನ್ಯರಿಗಿಂತ ಭಿನ್ನವಾದ ಲಕ್ಷಣಗಳನ್ನು ಕುವೆಂಪುವಿನ ವಿಶಿಷ್ಟತೆ ಎಂದು ಗುರ್ತಿಸುವುದು ಇಲ್ಲಿ ಒಂದು ಸಾಮಾನ್ಯ ವ್ಯಾಪಾರವಾಗಿದೆ. (294–ಪುಟ: 81) ವೈಚಾರಿಕತೆಯ ವಿಶ್ಲೇಷಣೆಯಲ್ಲಿ ಸಾಮಾನ್ಯವಾಗಿ ಭಾರತೀಯ ವಿಚಾರ ಪರಂಪರೆ, ಜಾಗತಿಕ ವಿಚಾರ ಪರಂಪರೆ, ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ಚರಿತ್ರೆಯ ಉದ್ದಕ್ಕು ಪ್ರಕಟವಾಗಿರುವ ವೈಚಾರಿಕತೆಯ ಭಿತ್ತಿ, ತತ್ವಜ್ಞಾನ–ದರ್ಶನಗಳ ಭಿತ್ತಿ ಹೀಗೆ ಹಲವು ಬಿತ್ತಿಗಳ ಹಿನ್ನೆಲೆಯಲ್ಲಿಟ್ಟು ಕುವೆಂಪುವನ್ನು ತೌಲನಿಕವಾಗಿ ಚರ್ಚಿಸುವ ಮತ್ತು ಆಮೂಲಕ ಕುವೆಂಪು ವಿಶಿಷ್ಟತೆಯನ್ನು ಗುರ್ತಿಸುವ ಕೆಲಸ ನಡೆದಿದೆ. (2663) ಕುವೆಂಪು ವಿಚಾರವನ್ನು ದರ್ಶನಗಳ ಹಿನ್ನೆಲೆಯಲ್ಲಿ ಗುರ್ತಿಸುವಾಗ ಕುವೆಂಪುವನ್ನು ದಾರ್ಶನಿಕ, ತತ್ವಜ್ಞಾನಿ, ದಾರ್ಶನಿಕ ಕವಿ, ಸಂತ, ಸೌಂದರ್ಯ ಯೋಗಿ ಎಂದೆಲ್ಲ ಕರೆದಿರುವ ನಮ್ಮ ವಿಮರ್ಶೆಯು ಅವರ ಚಿಂತನೆಯನ್ನು ಭಾರತೀಯ, ಜಾಗತಿಕ, ಕನ್ನಡ ಸಾಹಿತ್ಯಕ, ಪ್ರಾದೇಶಿಕ, ಪುನರುಜ್ಜೀವನ ಕಾಲೀನ, ಸ್ವಾತಂತ್ರ್ಯ ಹೋರಾಟ ಮತ್ತು ಸುಧಾರಣಾವಾದಿ ಚಳುವಳಿಗಳ ಬಿತ್ತಿಗಳಲ್ಲಿ ಇಟ್ಟು ಪರಿಶೀಲಿಸಿದೆ. (2763) ಹೀಗೆ ಭಿನ್ನ ಬಿತ್ತಿಗಳಲ್ಲಿ ಇಟ್ಟು ಸಾಹಿತ್ಯವನ್ನು (ಲೇಖಕನನ್ನು) ಪರಿಶೀಲಿಸುವುದು ನಮ್ಮ ವಿಮರ್ಶೆಯ ಒಂದು ವಿಧಾನ ಮತ್ತು ಲಕ್ಷಣವಾಗಿದೆ.

**6.16. ಆಶಯದ ಅನ್ವೇಷಣೆ**

ಕಾವ್ಯದ ಆಶಯವೇನು? ಕಾದಂಬರಿಯ ಆಶಯವೇನು? ಕತೆಯ ಆಶಯವೇನು ಎಂಬಂತೆ ಸಾಹಿತ್ಯ ಘಟಕಗಳ ಆಶಯವನ್ನು/ಗಳನ್ನು ಕಂಡುಕೊಳ್ಳುವ ಮತ್ತು ಇದನ್ನೆ ಲೇಖಕ ಕೇಂದ್ರಿತವಾಗಿ ಕುವೆಂಪು ಅವರ ಆಶಯಗಳೇನು ಎಂದು ಚರ್ಚಿಸುವ ವಿಮರ್ಶಾ ವಿನ್ಯಾಸವೊಂದು ನಮ್ಮಲ್ಲಿದೆ. ಕವಿಯ ಆಶಯ–

ಕೃತಿಯ ಆಶಯಗಳ ನಡುವೆ ಅಭೇದ ಕಲ್ಪಿಸುವ ಪ್ರವೃತ್ತಿ ಇಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಈ ಆಶಯಗಳ ಹುಡುಕಾಟದಲ್ಲಿ ಕಾವ್ಯ ಕಾದಂಬರಿ ಇತ್ಯಾದಿ ಪ್ರಕಾರಗಳನ್ನು ಇಲ್ಲವೆ; ನಿರ್ದಿಷ್ಟವಾದ ಕೃತಿಗಳು ಮತ್ತು ಕೃತಿಭಾಗಗಳನ್ನು ತೆಗೆದುಕೊಂಡು ಪ್ರಾಯೋಗಿಕವಾಗಿ ವಿಮರ್ಶಿಸುವ ಮೂಲಕ ಅವುಗಳಲ್ಲಿ ವ್ಯಕ್ತವಾಗುವ ತತ್ವ-ಚಿಂತನೆಗಳನ್ನು ವ್ಯಾಖ್ಯಾನಿಸಿ ಹೇಳುವ ಪ್ರವೃತ್ತಿ ಕಾಣುತ್ತದೆ. (56-ಪುಟ: 10-17) ಇಂಥ ಪ್ರವೃತ್ತಿಯಲ್ಲಿ ಕವಿಯ ಆಶಯ, ಕೃತಿಯ ಆಶಯ, ಓದುಗನು ತಾನು ಕಾಣುತ್ತಿದ್ದೇನೆನ್ನುವ ಆಶಯಗಳ ನಡುವೆ ಭೇದ ಅಳಿಸಿಹೋಗುತ್ತದೆ. ವಿಮರ್ಶಕ ತಾನು ಕಾಣುವುದನ್ನೆ ಕವಿಯ ಆಶಯವೆಂದು ಹೇಳುತ್ತಿರುತ್ತಾನೆ.

ಈ ಆಶಯಗಳ ಅನ್ವೇಷಣೆಯಲ್ಲಿ ಸಾಹಿತ್ಯ ಕೃತಿಯ ಭಾವ, ಕಲ್ಪನೆ, ಅಭಿವ್ಯಕ್ತಿ ಕ್ರಮಗಳು ಹಿನ್ನೆಲೆಗೆ ಸರಿದು ಕೃತಿಯ ತತ್ವ-ವಿಚಾರಗಳು ಮುನ್ನೆಲೆಗೆ ಬರುತ್ತವೆ. ಇಲ್ಲಿ ಕೃತಿಯನ್ನು ವೈಚಾರಿಕ ಆಕೃತಿಯನ್ನಾಗಿ ಕಟ್ಟುವ ಕೆಲಸ ನಡೆಯುತ್ತಿರುತ್ತದೆ. ಕೃತಿಯು ಇಲ್ಲಿ ಧ್ವನಿ ಕೇಂದ್ರಿತ ಅಧ್ಯಯನಕ್ಕೆ ಗುರಿಯಾಗುತ್ತಿರುತ್ತದೆ. ನೀತಿ-ಅನೀತಿ, ಒಳಿತು-ಕೆಡುಕು, ಧರ್ಮ-ಅಧರ್ಮ, ಆಧುನಿಕತೆ-ಸಾಂಪ್ರದಾಯಿಕತೆ ಹೀಗೆ ಸಾಹಿತ್ಯ ಕೃತಿಯನ್ನು ನೀತಿತತ್ವ ಜಿಜ್ಞಾಸೆಯ ಸಾಧನ ಸಾಮಗ್ರಿ ಎಂಬಂತೆ ಭಾವಿಸುವ ಪ್ರವೃತ್ತಿ ಇಲ್ಲಿ ಇರುತ್ತದೆ. ಬಿಡಿ ಕವಿತೆ, ಕಾವ್ಯ, ಕಾದಂಬರಿಗಳ ಅರ್ಥವ್ಯಾಖ್ಯಾನವು ಕೆಲವೊಮ್ಮೆ ಇಂತಹ ಕಡೆ ವೈಚಾರಿಕ ಆಕೃತಿಯಾಗಿ ರೂಪ ತಳೆಯುತ್ತಿರುತ್ತದೆ.

ಇಂಥ ಭಾವನೆಯು ಸಮಾಜದ ನಡಾವಳಿ-ಸಮುದಾಯದ ನಡಾವಳಿಗಳನ್ನು ರೂಪಿಸುವ ನೀತಿ ನಿರ್ದೇಶಕ ತತ್ವಗಳ ಚರ್ಚಾಕೇಂದ್ರವನ್ನಾಗಿ ಸಾಹಿತ್ಯವನ್ನು ಭಾವಿಸುತ್ತಿರುತ್ತದೆ. ಸಾಹಿತ್ಯವು ಸಾಮಾಜಿಕ ಬದಲಾವಣೆಯ ಸಾಧನ; ಪ್ರಜ್ಞಾವಿಕಾಸದ-ಮೌಲ್ಯ ವ್ಯವಸ್ಥೆಯ ರೂಪಣಾಶಕ್ತಿ ಎಂಬ ನಂಬಿಕೆಗಳು ಇಂಥ ವಿಮರ್ಶೆಯ ಹಿನ್ನೆಲೆಯಲ್ಲಿ ಕೆಲಸ ಮಾಡುತ್ತಿರುತ್ತವೆ. ಇಂಥ ವಿಮರ್ಶೆಯಲ್ಲಿ ಕೆಲವೊಮ್ಮೆ ನೈತಿಕ ಜಿಜ್ಞಾಸೆಯೇ ದಾರ್ಶನಿಕ ಸಿದ್ಧಾಂತಗಳ ಚರ್ಚೆಯಾಗಿ ಹೊರಳಿಕೊಳ್ಳುತ್ತಿರುತ್ತದೆ. ತತ್ವಜ್ಞಾನ ಮತ್ತು ಸಾಹಿತ್ಯದ ನಡುವಿನ ಸಂಬಂಧಗಳು ಇಂಥ ಸಂದರ್ಭದಲ್ಲಿ ಚರ್ಚೆಗೆ ಬರುತ್ತಿರುತ್ತವೆ. ಕುವೆಂಪು ಅವರ ಸಾಹಿತ್ಯವನ್ನು ಅವರ ಸಮನ್ವಯ ತತ್ವ, ಪೂರ್ಣತೆಯ ದೃಷ್ಟಿ, ವಿಶ್ವಮಾನವ ತತ್ವ, ಅದ್ವೈತ ತತ್ವ, ಅನಿಕೇತನ ತತ್ವ, ಸರ್ವೋದಯ ತತ್ವಗಳನ್ನು ಚರ್ಚಿಸುವ ಆಧಾರ ಸಾಮಾಗ್ರಿಯಾಗಿ ಇಲ್ಲಿ ಭಾವಿಸಲಾಗಿದೆ. ಇಂಥ ಚರ್ಚೆಗಳು ಒಟ್ಟಾರೆ ಕುವೆಂಪು ಪ್ರತಿಪಾದಿಸುವ ತತ್ವಜ್ಞಾನ ಎಂಥದ್ದು ಎಂದು ವಿವರಿಸುತ್ತಿರುತ್ತವೆ. (56-ಪುಟ: 16-17) ನಮ್ಮ ಬಹುಪಾಲು ವಿಮರ್ಶೆಗಳು ಕೊನೆ ಕೊನೆಗೆ ಬರುವುದು ಕುವೆಂಪು ದರ್ಶನ-ತತ್ವಗಳ ಚರ್ಚೆಗೇ ಹೀಗಾಗಿ ನಮ್ಮ ವಿಮರ್ಶೆ ಮತ್ತು ತತ್ವಜ್ಞಾನಗಳ ನಡುವೆ ಗಮ್ಯ ಗಮನ ಸಂಬಂಧವೊಂದು ಏರ್ಪಟ್ಟಿದೆ.

### 6.17. ಪ್ರಸ್ತುತತೆ-ಉಪಯುಕ್ತತೆಯ ಮಾರ್ಗ

ಸಾಹಿತ್ಯವನ್ನು ಅದು ಉತ್ತಮವೋ ಅಲ್ಲವೋ ಎಂದು ನಿರ್ಧರಿಸುವ ಹಲವು ಮಾನದಂಡಗಳಲ್ಲಿ ಅದು ನಾವು ಓದುತ್ತಿರುವ ಕಾಲಕ್ಕೆ ಪ್ರಸ್ತುತವೋ ಅಲ್ಲವೋ ಎಂದು ಪರೀಕ್ಷಿಸುವುದು ಒಂದು ಮುಖ್ಯ ಮಾನದಂಡವಾಗಿದೆ. ಕುವೆಂಪು ಸಾಹಿತ್ಯವನ್ನು ಕಾಲದೇಶ ಬದ್ಧವಾಗಿ; ಸಂಸ್ಕೃತಿ-ಪ್ರಕೃತಿ ಕಥನವಾಗಿ ನೋಡುವ ದೃಷ್ಟಿ ಇರುವಂತೆಯೇ ಅದನ್ನು ಸಾರ್ವಕಾಲಿಕ-ಸಾರ್ವತ್ರಿಕ ಗುಣವುಳ್ಳ ಸಂಕಥನವಾಗಿ ನೋಡುವ ದೃಷ್ಟಿಯೂ ಇದೆ. ನಮ್ಮ ಬದುಕಿಗೆ ಬೇಕಾದ ಮೌಲ್ಯಗಳನ್ನು ಸಾಹಿತ್ಯದಿಂದ ನಾವು ಪಡೆಯಲು ಸಾಧ್ಯವೇ? ಪ್ರಸ್ತುತ ಸಮಾಜವು ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರಗಳು ಕುವೆಂಪು ಸಾಹಿತ್ಯದಲ್ಲಿ ಸಿಗುತ್ತವೆಯೇ? ಎಂಬ ನೆಲೆಗಳಲ್ಲಿ ಸಾಹಿತ್ಯದ ಪ್ರಸ್ತುತತೆಯನ್ನು ನಿರ್ಧರಿಸುವ ಕೆಲಸಗಳು ಇಲ್ಲಿ ಜರುಗಿವೆ. ಸದಾ ಕಾಲಕ್ಕೂ ಸಲ್ಲುವ, ಸರ್ವಜನಕ್ಕೂ ಸಲ್ಲುವ ಮೌಲ್ಯಗಳು; ಉದಾಹರಣೆಗೆ ಸರ್ವೋದಯ, ಪೂರ್ಣದೃಷ್ಟಿ, ಸಮನ್ವಯ, ಅನಿಕೇತನ ಪ್ರಜ್ಞೆ, ವಿಶ್ವಮಾನವ ಪ್ರಜ್ಞೆ ಇಂತಹ ಮೌಲ್ಯಗಳು ಕುವೆಂಪು ಸಾಹಿತ್ಯದಲ್ಲಿ ಇರುವುದರಿಂದ ಅದು ಇಂದಿಗೆ ಮಾತ್ರ ಅಲ್ಲ ಎಂದೆಂದಿಗೂ ಪ್ರಸ್ತುತ ಎಂಬ ಪ್ರಮಾಣ ಪತ್ರಗಳೂ ಇಲ್ಲಿ ನೀಡಲ್ಪಟ್ಟಿವೆ. (296) ಎಚ್.ಎಂ.ಚೆನ್ನಯ್ಯ, ಕೆ.ವಿ.ನಾರಾಯಣ ಇಂಥವರು ಶ್ರೇಷ್ಠತೆಗೂ, ಉಪಯುಕ್ತತೆಗೂ ಸಂಬಂಧವಿಲ್ಲ; ಶ್ರೇಷ್ಠವಲ್ಲದ ಸಾಹಿತ್ಯವು ಮಹತ್ವದ ಸಾಹಿತ್ಯ ಆಗಿರಬಹುದು; ಉಪಯುಕ್ತ ಆಗಿರಬಹುದು ಎಂಬ ತತ್ವಗಳನ್ನು ಮಂಡಿಸಿದ್ದಾರೆ. ಸಾಹಿತ್ಯದ ಶ್ರೇಷ್ಠತೆಗಿಂತ ಅದರ ಸಮಾಜಿಕ ಉಪಯುಕ್ತತೆ ಹೆಚ್ಚು ಮುಖ್ಯವಾದುದು ಎಂಬ ತತ್ವಗಳೂ ಇಲ್ಲಿ ಮಂಡಿತವಾಗಿವೆ.

ಸಾಹಿತ್ಯದ ಪ್ರಯೋಜನದ ಬಗ್ಗೆ ತಾತ್ವಿಕವಾಗಿ ನಮ್ಮ ಪ್ರಾಗ್ವಿಮರ್ಶೆಯಲ್ಲಿ ಸಾಕಷ್ಟು ಚರ್ಚೆಯಾಗಿದೆ. ಸಾಹಿತ್ಯದಿಂದ ಸಮಾಜಕ್ಕೆ ಆಗುವ ಪ್ರಯೋಜನವೇನು? ಎಂಬ ಪ್ರಶ್ನೆಯನ್ನು ಕುವೆಂಪು ವಿಮರ್ಶೆ ಕೂಡ

ಕೇಳಿಕೊಂಡಿದೆ. ಈ ಹಿನ್ನೆಲೆಯಲ್ಲಿ ಕುವೆಂಪು ಸಾಹಿತ್ಯವನ್ನು 1. ಜ್ಞಾನ ವ್ಯವಸ್ಥೆ ಎಂದು ನೋಡುವ (870–ಪುಟ: 142) ಉಪಯುಕ್ತತೆಯನ್ನು ಚರ್ಚಿಸುವಾಗ ಇದನ್ನು 2. ಲೋಕೋಪಯೋಗಿ ಮತ್ತು ಭಾವೋಪಯೋಗಿ ಎಂದು ಎರಡು ನೆಲೆಗಳಲ್ಲಿ ನೋಡುವ (5281–ಪುಟ: 214) 3. ಸಂಸ್ಕೃತಿ ಚರಿತ್ರೆಯ ದಾಖಲಾತಿ ಎಂದು ನೋಡುವ (2573–ಪುಟ: 264) ಮುಂತಾದ ದೃಷ್ಟಿಗಳು ನಮ್ಮಲ್ಲಿವೆ. ಹಾಗೆ ನೋಡಿದರೆ ಪ್ರಸ್ತುತತೆಯ ಚರ್ಚೆ ಕೂಡ ಉಪಯುಕ್ತತೆಯ ಚರ್ಚೆಯೇ ಆಗಿದೆ. ಕುವೆಂಪು ಸಾಹಿತ್ಯದ ಉಪಯುಕ್ತತೆಯ ಒಂದು ಮಾದರಿಯನ್ನು ಪಿ.ಎನ್.ಜವರಪ್ಪಗೌಡ ಅವರ ಒಂದು ಲೇಖನದಲ್ಲಿ ನೋಡಬಹುದು.

> ಕುವೆಂಪು ಸಾಹಿತ್ಯ ಸಾಮಾಜಿಕ ರೋಗ ರುಜಿನಗಳಿಗೆ ಮಾರಕಾಸ್ತ್ರವಾಗಿಯೇ ಮೂಡಿ ಬಂದುದೆಂದು ಅನೇಕರು ಗುರುತಿಸಲೇ ಇಲ್ಲ. ಇದು ಅವರಿಗೆ ಅರ್ಥವಾಗಲಿಲ್ಲವೊ ಅಥವಾ ಉದ್ದೇಶಪೂರ್ವಕವಾಗಿಯೇ ಹೀಗೆ ಮಾಡಿದರೂ ಅಂತೂ ಅವರು ಸಾಹಿತ್ಯದ ಕ್ರಾಂತಿಶಕ್ತಿ ಜನರಿಗೆ ತಲುಪದಂತೆ ವಿಮರ್ಶೆಯ ಹೆಸರಿನಲ್ಲಿ ಅನೇಕ ಅಡೆತಡೆಗಳನ್ನು ತಂದೊಡ್ಡಿರುವುದು ಕಂಡು ಬರುತ್ತದೆ... ಒಂದು ಆಶ್ಚರ್ಯದ ಸಂಗತಿ ಎಂದರೆ ಕುವೆಂಪು ಅವರ ಸ್ವಾತಂತ್ರ್ಯ ಹೋರಾಟದ ಸಾಹಿತ್ಯಕ ಶಕ್ತಿಯನ್ನು ಆ ಕಾಲದ ಯಾರೂ ಎತ್ತಿ ಹೇಳದಿರುವುದು. ಈಗಾಗಲೇ ಅನೇಕರು ಸ್ವಾತಂತ್ರ್ಯ ಹೋರಾಟದ ಬಗ್ಗೆ ಬರೆದಿದ್ದಾರೆ. ಆದರೆ ಇವರಾರೂ ಈ ವಿಚಾರವನ್ನು ಹೇಳಿದಂತೆ ಕಾಣೆ. ಈ ವಿಷಯ ನಾನಿಲ್ಲೇಕೆ ಪ್ರಸ್ತಾಪಿಸಿದ್ದೇನೆಂದರೆ ಪಾಶ್ಚಿಮಾತ್ಯರಲ್ಲಿ ಅಲ್ಲಿನ ಕವಿಗಳ ಕಾವ್ಯದಿಂದ ರಾಜಕೀಯ ಕ್ರಾಂತಿಗಳು, ಸ್ವಾತಂತ್ರ್ಯ ಹೋರಾಟಗಳು ಆದುವೆಂದು ನಮ್ಮಲ್ಲಿ ಹಾಗಾಗಲಿಲ್ಲವೆಂದು ಒಂದು ನಂಜಿಕೆಯಿದೆ. ಅದು ತಪ್ಪು ಗ್ರಹಿಕೆ. ಆ ಕಾಲದಲ್ಲಿ ಕುವೆಂಪು ಅವರ ಪಾಂಚಜನ್ಯ ಸರ್ಕಾರದ, ಜನತೆಯ ನಿತ್ಯ ಗಾಯತ್ರಿ ಆಗಿತ್ತು. ಆ ಕವನಗಳನ್ನು ಕೇಳಿ ಅನೇಕರು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದ್ದಾರೆ. ನನಗೆ ಒಂದು ವರ್ಷ ಕಾರಾಗೃಹ ವಾಸ ವಿಧಿಸಿ ಶಿವಮೊಗ್ಗ ಮತ್ತು ತೀರ್ಥಹಳ್ಳಿಯ ಕಾರಾಗೃಹಗಳಲ್ಲಿ ಇಡಲಾಗಿತ್ತು.... ಅಲ್ಲಿ 300–400 ಮಂದಿ ಸತ್ಯಾಗ್ರಹಿಗಳಿದ್ದವೆಂದು ಕಾಣುತ್ತದೆ. ಆಗ ನಾನು ಕುವೆಂಪು ಸಾಹಿತ್ಯ ಬಳಸಿಕೊಂಡು ಜನರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಹುರಿದುಂಬಿಸಬಹುದಾದ ಬಗೆಯನ್ನು ವಿವರಿಸುತ್ತಿದ್ದೆ. ಕುವೆಂಪು ಸಾಹಿತ್ಯ ಸಾಗರದಲ್ಲಿ ಮುಳುಗಿದ್ದ ನನಗೆ ಅದು ಕಾರಾರಗೃಹ ವಾಸ ಅನ್ನಿಸಲೇ ಇಲ್ಲ. ಕಡೆಗೆ 1940ರಲ್ಲಿ ಕಾರಾಗೃಹದಿಂದ ಶಿಕ್ಷೆ ಮುಗಿಸಿ ಹೊರಬಂದೆ. (2799–ಪುಟ: 1050ರಿಂದ 1056)

ಕುವೆಂಪು ಸಾಹಿತ್ಯವನ್ನು ತಾವು ಸ್ವಾತಂತ್ರ್ಯ ಹೋರಾಟಕ್ಕಾಗಿ ಜನರನ್ನು ಬಡಿದೆಬ್ಬಿಸಲು ಬಳಸಿಕೊಂಡುದ್ದನ್ನು ಜವರಪ್ಪಗೌಡರು ಇಲ್ಲಿ ವಿವರಿಸಿದ್ದಾರೆ. ಇವರು ಕುವೆಂಪು ಕೃತಿಗಳಲ್ಲಿ ಅಸಮಾನತೆಯ, ದಾಸ್ಯದ ವಿರುದ್ಧ ಇರುವ ದನಿಗಳನ್ನು ಸ್ವಾತಂತ್ರ್ಯ ಹೋರಾಟದ ಅಸ್ತ್ರಗಳಾಗಿ ಬಳಸಿದ್ದಾರೆ. ಕುವೆಂಪು ಸಾಹಿತ್ಯ ಬಳಸಿ ಪ್ರಚೋದನಕಾರಿ ಭಾಷಣಗಳನ್ನು ಮಾಡಿದ ಕಾರಣಕ್ಕೆ ಇವರನ್ನು ಒಂದು ವರ್ಷ ಜೈಲಿಗೆ ಕಳಿಸಲಾಗುತ್ತದೆ. ಜೈಲಿನಲ್ಲಿಯೂ ಇವರು ಕುವೆಂಪು ಸಾಹಿತ್ಯದಲ್ಲಿನ ಕ್ರಾಂತಿಕಾರಿ ಗುಣಗಳನ್ನು ಸಹವಾಸಿಗಳಿಗೆ ತಿಳಿಸುತ್ತಾರೆ. ಕುವೆಂಪು ಸಾಹಿತ್ಯದ ಅರ್ಥ–ಧ್ವನಿಗಳು ಹೊರಬರುವಂತೆ ಅದನ್ನು ಬಳಸಿ ವ್ಯಾಖ್ಯಾನಿಸಿದ್ದಷ್ಟಕ್ಕೆ ಇವರನ್ನು ಜೈಲಿಗೆ ಕಳಿಸಿದರು ಎಂದರೆ ಕುವೆಂಪು ಸಾಹಿತ್ಯದ ಸಾಮಾಜಿಕ ಉಪಯುಕ್ತತೆಯ ಆಯಾಮವೊಂದು ಇಲ್ಲಿ ವ್ಯಕ್ತವಾಗುತ್ತದೆ.

ಆಸ್ವಾದಿಸುವ ದೃಷ್ಟಿಯಿಂದ, ಅರ್ಥವ್ಯಾಖ್ಯಾನವನ್ನು ಮಾಡುವ ದೃಷ್ಟಿಯಿಂದ ಸಾಹಿತ್ಯವನ್ನು ಅಧ್ಯಯನ ಮಾಡುವ ಕೆಲಸ ಅನಾದಿಕಾಲದಿಂದಲೂ ನಡೆದುಕೊಂಡು ಬಂದಿದೆ. ಪ್ರಾಚೀನ ಸಾಹಿತ್ಯದ ಅನುಸಂಧಾನಕ್ಕೆ ತೊಡಗಿದ ಸಂಭವಕಾಲೀನ ವಿಮರ್ಶಕರು ಬಹುಪಾಲು ಇಂತಹ ನಡೆಗಳನ್ನೆ ನಡೆದಿದ್ದಾರೆ. ರಸನಿಷ್ಠ, ಧ್ವನಿನಿಷ್ಠ ವಿಮರ್ಶೆಯನ್ನು ಬಿ.ಎಂ.ಶ್ರೀ, ತೀ.ನಂಶ್ರೀ, ವೆಂಕಣ್ಣಯ್ಯ, ಎ.ಆರ್.ಕೃ. ಇವರೆಲ್ಲ ಬೆಳೆಸಿದ್ದಾರೆ. ಇವರ ಮಾರ್ಗವನ್ನು ಬಹುವಾಗಿ ಅನುಸರಿಸಿದ ಮತ್ತು ರೂಪನಿಷ್ಠ ತತ್ವಗಳನ್ನು ನಂಬಿದ ನವ್ಯರು ಕೂಡ ಇದೇ ನೆಲೆಯಲ್ಲಿ ವಿಮರ್ಶೆಯನ್ನು ಬೆಳೆಸಿದ್ದಾರೆ. ಆದರೆ ಆನಂತರದಲ್ಲಿ ಅಂದರೆ 80ರ ದಶಕದಾಚೆಗೆ ನಮ್ಮ ವಿಮರ್ಶೆಯು ಹೊಸ ಹತಾರಗಳೊಂದಿಗೆ ಸಾಹಿತ್ಯದ ಮುಖಾಮುಖಿ ನಡೆಸತೊಡಗಿದೆ. ಕಾಲ, ಕಾಮ, ಭೂಮಿ, ಸಮಾಜ ಇಂಥ ವಸ್ತುಗಳ ಅಭ್ಯಾಸವು ಸಾಹಿತ್ಯ ವಿಮರ್ಶೆಯನ್ನು ಸಮಾಜ ವಿಮರ್ಶೆಯನ್ನಾಗಿಯೆ ರೂಪಿಸಿದೆ. ವಿಮರ್ಶೆಯು ತುಳಿಯಬೇಕಾದ ಹೊಸ ದಾರಿಗಳನ್ನು ಹುಡುಕುವ ಯತ್ನಗಳು ಇಲ್ಲಿಂದ ನಡೆದಿವೆ. ಹೊಸ ಮತ್ತು ಹಳೆಯ ದಾರಿಗಳನ್ನು ಬೆಸೆದು ಬೇರೊಂದೇ–ಹಾಡೆ ಹಾದಿಯ ತೋರುವುದೆಂಬ–ದಾರಿಯನ್ನೂ ಇಲ್ಲಿ ನಿರ್ಮಿಸಿಕೊಳ್ಳಲಾಗಿದೆ. ಅಲ್ಲದೆ ಹೊಸ ದಾರಿಗಳು ಶೋಧನೆಗೊಳ್ಳುವಾಗ ಹಳೆ ದಾರಿಗಳು ಸಂಪೂರ್ಣ ನಷ್ಟವಾಗಿಲ್ಲ. ದಾರಿಗಳ ಸಂಖ್ಯೆ ಹೆಚ್ಚಾಗಿವೆಯಷ್ಟೆ.

ಸಮಾಜವು ಪ್ರಜಾಪ್ರಭುತ್ವ–ಜಾಗತೀಕರಣಗಳಿಗೆ ತೆರೆದುಕೊಂಡಂತೆಲ್ಲ; ಆಧುನಿಕ, ಆಧುನಿಕೋತ್ತರ ಪರಿಸ್ಥಿತಿಗಳಿಗೆ ತೆರೆದುಕೊಂಡಂತೆಲ್ಲ ತನ್ನ ಸಾಂಸ್ಕೃತಿಕ ಅನನ್ಯತೆ ಮತ್ತು ಅಸ್ತಿತ್ವಗಳ ಪ್ರಶ್ನೆಗಳನ್ನು ಎದುರಿಸತೊಡಗಿದೆ. ಹೊಸ ಹೊಸ ಬಿಕ್ಕಟ್ಟುಗಳನ್ನೂ ಎದುರಿಸತೊಡಗಿದೆ. ರಸ, ಧ್ವನಿ, ಅರ್ಥ, ಕಲಾವಂತಿಕೆಗಳನ್ನೇ ಹಿಡಿದು ವಿಮರ್ಶೆಯು ಇವತ್ತೂ ಕೂರಬೇಕೆ ಎಂಬ ಪ್ರಶ್ನೆಯನ್ನು ಗಂಭೀರವಾಗಿ ನಮ್ಮ ವಿಮರ್ಶೆ ಕೇಳಿಕೊಳ್ಳುತ್ತಲೇ ಬಂದಿದೆ. ಧರ್ಮ, ಶಿಕ್ಷಣ, ಭಾಷೆ, ಮಾಧ್ಯಮ, ಚರಿತ್ರೆ, ಜೀವನವಿಧಾನ, ಸಂಸ್ಕೃತಿ ಹೀಗೆ ಹಲವು ನೆಲೆಗಳಿಂದ ಸಾಹಿತ್ಯವನ್ನು ಚರ್ಚಿಸುವ ಕೆಲಸವನ್ನು ವಿಮರ್ಶೆಯು ಕೈಗೆ ಎತ್ತಿಕೊಂಡಿದೆ. ವಿಮರ್ಶೆಯ ಕಾರ್ಯ ಮತ್ತು ಸ್ವರೂಪಗಳಿಗೆ ಇದರಿಂದ ಹೊಸ ಚಹರೆಗಳು ಮೂಡಿವೆ. ವಿಮರ್ಶೆಯಲ್ಲಿ ಪ್ರಸ್ತುತತೆಯ ಪ್ರಶ್ನೆಗಳು ಮತ್ತೆ ಮತ್ತೆ ಎದುರಾಗಿವೆ. ಪ್ರಸ್ತುತತೆಯ ಚರ್ಚೆಗೆ ಒಂದು ಮಾದರಿಯನ್ನು ಇಲ್ಲಿ ನೋಡಬಹುದು.

> ಇಂದು ನಾವು ವಿಪರೀತ ಕಷ್ಟಕರ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿದ್ದೇವೆ ಎನ್ನುವುದನ್ನು ಅರ್ಥ ಮಾಡಿಕೊಳ್ಳಿ. ತಮ್ಮ ಆದರ್ಶ ಸಾಧನೆಗಾಗಿ ಪ್ರಾಣ ಕೊಡಲು ಸಹ ತಯ್ಯಾರಿರುವಂಥ ಭಯೋತ್ಪಾದಕರ ಮನಃಪರಿವರ್ತನೆ ಮಾಡುವುದು ನಮ್ಮಂಥ ಸರಳ ಸಾಮಾನ್ಯರ ಕೈಯಲ್ಲಿ ಸಾಧ್ಯವಿಲ್ಲ... ಶಬ್ದಗಳ ಅರ್ಥವನ್ನು ಅಂತಿಮವಾಗಿ ನಿರ್ಣಯಿಸುವುದು ನಮ್ಮ ಕ್ರಿಯೆ ಮತ್ತು ಪ್ರತಿಕ್ರಿಯೆಗಳೇ ಹೊರತು ಡಿಕ್ಷನರಿಗಳಲ್ಲ... ಗೋದ್ರಾ ನರಬಲಿ ಮತ್ತು ಗುಜರಾತ್ ಹತ್ಯಾಕಾಂಡಗಳು ನಮಗೆ ಜಿಹಾದ್ ಮತ್ತು ಹಿಂದುತ್ವದ ಅರ್ಥವೇನೆಂದು ಹೇಳುತ್ತವೆಯೇ ಹೊರತು ಡಿಕ್ಷನರಿಗಳಲ್ಲ... ಮೊನ್ನೆ ಮೊನ್ನೆಯವರೆಗೂ ಮೂಲಭೂತವಾದದ ಸೋಂಕೇ ಇಲ್ಲದಿದ್ದ ಧರ್ಮಗಳು ಸಹ ಇಸ್ಲಾಮಿಕ್ ಮೂಲಭೂತವಾದದ ದೆಸೆಯಿಂದ ಮೂಲ ಭೂತವಾದಿ ಧರ್ಮಗಳಾಗಿ ನಿಧಾನವಾಗಿ ಮಾರ್ಪಡುತ್ತಿರುವುದನ್ನು ನೋಡಬಹುದು... ಮೀಸಲಾತಿಯ ಪರಿಣಾಮವಾಗಿ ಜಾತಿಯ ಸಂಘಟನೆಗಳು ಶುರುವಾಗಿವೆ. ಅಸಂಘಟಿತರಾಗಿ ಕರ್ನಾಟಕದಾದ್ಯಂತ ಚದುರಿದ್ದ ಪ್ರತಿಯೊಂದು ಜಾತಿಯೂ ತನ್ನ ಅಸ್ತಿತ್ವವನ್ನು ಬಲಪಡಿಸಿಕೊಳ್ಳಲು ತಮತಮಗೆ ಒಂದು ಮಠವನ್ನೂ ಅದಕ್ಕೊಬ್ಬ ಜಗದ್ಗುರುವನ್ನೂ ನಿರ್ಮಿಸತೊಡಗಿದ್ದಾರೆ... ನಾನು ಮೀಸಲಾತಿಯನ್ನು ತಿರಸ್ಕರಿಸುತ್ತಿಲ್ಲ. ನಿಷ್ಪ್ರಯೋಜಕವೆಂದು ಅಲ್ಲಗಳೆಯುತ್ತಿಲ್ಲ. ಮೀಸಲಾತಿ ಜಾತಿಗಳಲ್ಲಿ ಒಂದು ಮಟ್ಟದ ಆರ್ಥಿಕ ಮತ್ತು ಸಾಮಾಜಿಕ ಸಮಾನತೆಯನ್ನು ತರುವುದರಲ್ಲಿ ಸಫಲವಾಗಿದೆ. ಆದರೆ ಇದು ಜಾತ್ಯತೀತ ರಾಷ್ಟ್ರವನ್ನು ನಿರ್ಮಿಸುವತ್ತ ಸಾಗುತ್ತಿದೆಯೇ ಇಲ್ಲವೇ? ಎಂಬುದು ಈಗಿರುವ ಪ್ರಶ್ನೆ. ಕಳೆದ ಐವತ್ತು ವರ್ಷಗಳ ಮೀಸಲಾತಿಯ ಪರಿಣಾಮವಾಗಿ ಜಾತೀಯತೆ ಸಡಿಲವಾಗುವುದರ ಬದಲು ಇನ್ನಷ್ಟು ಬಿಗಿಯಾಗುತ್ತಾ ಉಲ್ಬಣಗೊಳ್ಳುತ್ತಾ ಬಂದುದೇಕೆ?.... ಇದಕ್ಕೆ ನಿಜವಾದ ಬದಲಿ ರಾಷ್ಟ್ರೀಯ ನಾಗರೀಕ ಸಂಹಿತೆ ಮಾತ್ರ.... ಆಧ್ಯಾತ್ಮಿಕತೆ, ದೇವರು, ಆತ್ಮ ಇತ್ಯಾದಿಗಳ ಕುರಿತ ಆಧ್ಯಾತ್ಮಿಕ ಅನುಭೂತಿಗೂ ಈ ಎಲ್ಲ ಧರ್ಮಗಳೂ ಉಪದೇಶಿಸುವ ಗೊಡ್ಡು ಶಾಸ್ತ್ರಾಚಾರಗಳಿಗೂ ಯಾವ ರೀತಿಯ ಸಂಬಂಧವೂ ಇಲ್ಲ ಎನ್ನುವುದರ ಅರಿವು ಎಲ್ಲರಲ್ಲೂ ಮೂಡುತ್ತಿದೆ. ಯವನೋ ಆಚಾರ್ಯನೋ ಪ್ರವಾದಿಯೋ ಯಾವುದೋ ಕಾಲದ ಸಮಾಜಕ್ಕೆ ಹಾಕಿಕೊಟ್ಟ ಆಚಾರ ಸಂಹಿತೆಯನ್ನು ಪುರೋಹಿತಶಾಹಿ ಸರ್ವಕಾಲಿಕ ಎಂದು ಬೋಧಿಸಿ ಅನ್ವಯಿಸಲು ಹೋಗುವುದರಿಂದ ಕಾಲ ಕಳೆದಂತೆ ಬಿಕ್ಕಟ್ಟು, ಘರ್ಷಣೆ ಬಿಗಡಾಯಿಸುತ್ತಲೆ ಹೋಗುತ್ತದೆ... ಆಧುನಿಕ ನಾಗರಿಕತೆಯ ಅವ್ಯಕ್ತ ಪ್ರಭಾವ ಧರ್ಮಾಚಾರಕ್ಕೆ ಇನ್ನೂ ಹೆಚ್ಚಿನ ಅಪಾಯಕಾರಿಯಾಗಿದೆ... ಸದಾ ಕಡೆಯುವ ಕಲ್ಲು, ಬೀಸುವ ಕಲ್ಲು, ಒಲೆ ಮೇಲಿನ ಗಡಿಗೆಗೆ ಬಂಧಿಯಾಗಿದ್ದ ಹೆಂಗಸಿಗೆ ಒಂದು ಮಿಕ್ಸಿ, ಒಂದು ಪ್ರೆಶರ್ ಕುಕ್ಕರ್, ಒಂದು ಗ್ಯಾಸ್ ಒಲೆ ಸ್ವಾತಂತ್ರ್ಯದ ಆಕಾಂಕ್ಷೆಯನ್ನು ಚಿಗುರೊಡೆಯುವಂತೆ ಮಾಡುತ್ತದೆ. (2625–ಪುಟ: 89–98)

ಹಂಪಿ ಕನ್ನಡ ವಿಶ್ವವಿದ್ಯಾಲಯದವರು 2002 ರಲ್ಲಿ ಏರ್ಪಡಿಸಿದ ಕುವೆಂಪು ವಿಚಾರಧಾರೆಯ ಪ್ರಸ್ತುತತೆ ಎಂಬ ವಿಚಾರ ಸಂಕಿರಣದಲ್ಲಿ ತೇಜಸ್ವಿ ಆಡಿದ ಮಾತುಗಳಿವು. ಇಲ್ಲಿ ಎಲ್ಲೂ ತೇಜಸ್ವಿಯವರು ಕುವೆಂಪು ಸಾಹಿತ್ಯವನ್ನು ಉಲ್ಲೇಖಿಸಿಯೇ ಇಲ್ಲ. ಅಲ್ಲದೆ ತಾನು ಸಾಹಿತ್ಯ ವಿಮರ್ಶೆ ಮಾಡುತ್ತಿದ್ದೇನೆ ಎಂಬ ಮಾತೂ ಇಲ್ಲಿ ಎಲ್ಲೂ ಇಲ್ಲ. ಆದರೆ ತಮ್ಮದೇ ವಿಚಾರ ಪ್ರಚೋದಕ ಧಾಟಿಯಲ್ಲಿ ಸಾಹಿತ್ಯ ವಿಮರ್ಶೆಯ ಕಾಳಜಿಗಳು ಯಾವುದಾಗಿರಬೇಕು, ವಿಮರ್ಶೆಯ ಸ್ವರೂಪವು ಇರಬೇಕಾದ ಬಗೆ ಎಂಥದ್ದು ಎಂಬ ಬಗ್ಗೆ ಇಲ್ಲಿ ಸೂಚಿಸಿದ್ದಾರೆ. ಕುವೆಂಪು ಚಿಂತನೆ, ಸಾಹಿತ್ಯ, ಬದುಕು ಈ ಮೂರನ್ನು ಒಟ್ಟಿಗೆ ಪ್ರಸ್ತುತತೆಯ ಹಿನ್ನೆಲೆಯಲ್ಲಿ ವಿವೇಚಿಸುವ ಯತ್ನವು ಇಲ್ಲಿದೆ. ಈ ಯತ್ನವು ಇಡೀ ವಿಚಾರ ಸಂಕಿರಣದ ಆಶಯವಾಗಿದ್ದು, ಅದು ಒಟ್ಟಾರೆ ಕೃತಿಯಲ್ಲಿ ಚೆನ್ನಾಗಿ ಬಿಂಬಿತವಾಗಿದೆ. (2625) ಧರ್ಮ, ಭಾಷೆ, ಶಿಕ್ಷಣ, ಚರಿತ್ರೆ, ಸಂಸ್ಕೃತಿ, ದೇಸಿ, ಚಿಂತನೆ ಹೀಗೆ ಇಂದಿನ ನಮ್ಮ ಸಮಾಜದ ಮುಖ್ಯ ಆದ್ಯತೆಯ ಕೆಲ ವಲಯಗಳನ್ನು ಕೇಂದ್ರವಾಗಿ

ಇಟ್ಟುಕೊಂಡು; ಕುವೆಂಪು ಸಾಹಿತ್ಯವನ್ನು ಸಮಾಜ ವಿಮರ್ಶೆಯ ಮೀಟುಗೋಲಿನಂತೆ ಬಳಸಿ ಇಲ್ಲಿ ವಿಮರ್ಶೆ ನಡೆಸಲಾಗಿದೆ. ವಿಮರ್ಶೆಯು ಸಾಹಿತ್ಯದ ಸಾಹಿತ್ಯಗುಣವನ್ನು ಚರ್ಚಿಸುವ ವೇದಿಕೆ ಆಗಬಾರದು; ಅದು ಸಮಾಜದ ಪ್ರಸ್ತುತ ಜ್ವಲಂತ ಬಿಕ್ಕಟ್ಟುಗಳನ್ನು ಚರ್ಚಿಸುವ ದಾರಿಯಾಗಬೇಕು ಎಂಬ ತತ್ವವು ಇಲ್ಲಿ ಆಚರಣೆಯ ಮೂಲಕ ಮಂಡಿತವಾಗಿದೆ. ವಿಮರ್ಶೆಯ ಕಾರ್ಯವು ಸಾಹಿತ್ಯದ ಮೂಲಕ ಸಮಾಜವನ್ನು ಪರಶೀಲಿಸುವುದು ಮತ್ತು ವರ್ತಮಾನದ ಸಾಮಾಜಿಕ ವಿಚಾರಗಳ ಮೂಲಕ ಸಾಹಿತ್ಯವನ್ನು ಸಮಕಾಲೀನಗೊಳಿಸುವುದು ಆಗಬೇಕು. ಹಾಗೆಯೇ ಪ್ರಸ್ತುತತೆ ಉಪಯುಕ್ತತೆಗಳು ಸಾಹಿತ್ಯವನ್ನು ಮೌಲ್ಯ ಮಾಪನ ಮಾಡುವ ಮಾನದಂಡಗಳೂ ಆಗಬೇಕು ಎಂಬ ತತ್ವವು ಇಲ್ಲಿ ಮಂಡಿತವಾಗಿದೆ.

### 6.18. ಅವಲೋಕನ–ವಸ್ತುವಿಶ್ಲೇಷಣಾ ವಿಧಾನ

ದೇಜಗೌ, ಸಿಪಿಕೆ, ಮಳಲಿ, ನರಹಳ್ಳಿ, ವೀರಣ್ಣ ರಾಜೂರ ಇಂಥ ಹಲವಾರು ವಿಮರ್ಶಕರು ಈ ಮಾದರಿಗೆ ಸೇರುತ್ತಾರೆ. ಕುವೆಂಪು ಸಾಹಿತ್ಯ ಕುರಿತು ಸೃಷ್ಟಿಯಾಗಿರುವ ಒಟ್ಟು ವಿಮರ್ಶೆಯಲ್ಲಿ ಬಹುಪಾಲುಭಾಗ ಈ ರೀತಿಯ ವಿಮರ್ಶೆಯೇ ಆಗಿದೆ. ವಿವರಣಾತ್ಮಕ, ರಸನಿಷ್ಠ, ರೂಪನಿಷ್ಠ, ಕೃತಿನಿಷ್ಠ ವಿಮರ್ಶೆಗಳ ಒಂದು ಪ್ರಧಾನ ವಿಧಾನವಾಗಿ ಇದು ಬಳಕೆಯಾಗಿದೆ. ಹಾಗೆ ನೋಡಿದರೆ ಎಲ್ಲ ಪ್ರಕಾರಗಳ ವಿಮರ್ಶೆಯಲ್ಲೂ ಈ ಮಾದರಿ ಕಾಣಿಸಿಕೊಂಡಿದೆ. ಇದು ಸಮಗ್ರವಾದ ವಿಶ್ಲೇಷಣೆಗೆ ತೊಡಗುವುದಿಲ್ಲ. ಬಿಡಿ ಬಿಡಿಯಾದ ನಿರ್ಧಿಷ್ಟವಾದ ಕತೆ ನಾಟಕ, ಕವಿತೆ, ಕಾವ್ಯಭಾಗಗಳನ್ನು ತೆಗೆದುಕೊಂಡು ಸಾದ್ಯಂತವಾಗಿ; ಸ್ಥೂಡಿಯಸ್ಸಾಗಿ ವಿವರಿಸಿಕೊಂಡು ಹೋಗುವ ಮಾದರಿ ಇದು. ಉದಾಹರಣೆಗೆ ನಾಟಕ ವಿಮರ್ಶೆಗಳನ್ನು ತೆಗೆದುಕೊಂಡರೆ ನೀವು ತಿಪ್ಪೇರುದ್ರಸ್ವಾಮಿ ಕುವೆಂಪು ನಾಟಕಗಳು ಒಂದು ಅಧ್ಯಯನ ಪುಸ್ತಕ ಓದಿದರೆ ನರಹಳ್ಳಿಯವರ ಕುವೆಂಪು ನಾಟಕಗಳ ಅಧ್ಯಯನ ಪುಸ್ತಕ ಓದಬೇಕಾಗಿಲ್ಲ. ನರಹಳ್ಳಿಯವರ ಪುಸ್ತಕ ಓದಿದರೆ ಮಳಲಿಯವರ ಕುವೆಂಪು ನಾಟಕಗಳು ಒಂದು ಅಧ್ಯಯನ ಪುಸ್ತಕ ಓದಬೇಕಾಗಿಲ್ಲ.

ಕತೆ ಹೇಳುವ ಮಾದರಿಯ, ಪಠ್ಯ ಪರಿಚಯ, ಪಠ್ಯ ವಿಶ್ಲೇಷಣೆಯ ಮಾದರಿಯ ವಿಮರ್ಶೆಗಳಿವು. ಇವನ್ನು ವರ್ಣನಾತ್ಮಕ ವಿಮರ್ಶೆ ಎಂದು ಕರೆಯಬಹುದು. ಕೆಲವಂತೂ ಹರಿಕತಾ ಮಾದರಿ ಅಂದರೂ ನಡೆಯುತ್ತದೆ. ಇಂಥ ವಿಮರ್ಶೆಯಲ್ಲಿ ವಸ್ತುವನ್ನು ಭಿನ್ನ ಭಿನ್ನ ದೃಷ್ಟಿಕೋನಗಳಿಂದ ನೋಡಿರುವುದು ಇದೆಯಾದರೂ ಕತೆ ಹೇಳುವುದೇ ಹೆಚ್ಚು. ನಿದರ್ಶನಗಳಂತೂ ಇಂಥ ವಿಮರ್ಶೆಯಲ್ಲಿ ಹೇರಳವಾಗಿ ಇರುತ್ತವೆ. ಕೆಲವು ಕಡೆ ಅತಿ ನಿದರ್ಶನಗಳಿದ್ದರೆ, ಕೆಲವು ಕಡೆ ಮಿತ ನಿದರ್ಶನಗಳೂ, ಕೆಲವು ಕಡೆ ಹಿತಮಿತ ನಿದರ್ಶನಗಳೂ ಇರುತ್ತವೆ. ನಿದರ್ಶನಗಳನ್ನು ಕೊಡುವುದು ನಮ್ಮ ಎಲ್ಲ ವಿಮರ್ಶಾ ಮಾರ್ಗಗಳ ಲಕ್ಷಣವೇ ಆಗಿದ್ದರೂ ಇಲ್ಲಿ ಮಾತ್ರ ಸಾಹಿತ್ಯ ಮತ್ತು ಅನ್ಯ ವಿಮರ್ಶೆಯ ನಿದರ್ಶನಗಳಿಲ್ಲದೆ ವಿಮರ್ಶೆಯ ಅಸ್ತಿತ್ವವೇ ಇರುವುದಿಲ್ಲ.

### 6.19. ಭಿನ್ನ ವ್ಯಾಖ್ಯಾನ ಸಾಧ್ಯತೆ

ನಮ್ಮ ವಿಮರ್ಶೆಯಲ್ಲಿ ಒಂದೇ ವಲಯ, ವಿಷಯ, ವಿಚಾರ, ನಿದರ್ಶನಗಳನ್ನು ಭಿನ್ನ ಭಿನ್ನವಾದ ವ್ಯಾಖ್ಯಾನಗಳಿಗೆ; ಅರ್ಥವಿನ್ಯಾಸಗಳಿಗೆ ಗುರಿಪಡಿಸುವ ನಿದರ್ಶನಗಳೂ ಇವೆ. ಸಾಹಿತ್ಯದ ಭಾಗ ಮತ್ತು ಸಾಹಿತ್ಯಕ್ಕೆ ಭಿನ್ನಾರ್ಥ ಸಾಧ್ಯತೆ, ಬಹು ಅರ್ಥ ಸಾಧ್ಯತೆ, ಧ್ವನ್ಯಾರ್ಥ ಸಾಧ್ಯತೆಗಳು ಇರುತ್ತವೆಂಬುದು ಇಂತಹ ವ್ಯಾಖ್ಯಾನಗಳಿಂದ ಎದ್ದು ಕಾಣುತ್ತದೆ. ಅಲ್ಲದೆ ವ್ಯಾಖ್ಯಾನಕಾರನ ದೃಷ್ಟಿ–ಧೋರಣೆಗಳಿಗೆ ಅನುಗುಣವಾಗಿ ಪಠ್ಯ–ಪಠ್ಯಭಾಗಗಳಿಗೆ ಭಿನ್ನಾರ್ಥಪ್ರಾಪ್ತಿ ಆಗಬಲ್ಲುದು ಎಂಬುದೂ ಇಂತಹ ವ್ಯಾಖ್ಯಾನಗಳಿಂದ ಕಾಣುತ್ತದೆ.

ನಮ್ಮ ವಿವಿಮರ್ಶೆಯಲ್ಲಿ ಒಂದೇ ವಿಚಾರದ ಭಿನ್ನ ನಿರ್ವಚನ–ವ್ಯಾಖ್ಯಾನಗಳನ್ನು ಸಮೃದ್ಧವಾಗಿ ಕಾಣಬಹುದು. ಬಿ.ಕೃಷ್ಣಪ್ಪನವರು ಕುವೆಂಪು ಕಾದಂಬರಿಗಳ ದಲಿತ ದೃಷ್ಟಿಯನ್ನು ಕುರಿತು ಮಾತಾಡುತ್ತ ಕುವೆಂಪು ದಲಿತ ವಿರೋಧಿ ಎಂಬ ನಿಲುವಿಗೆ ಬಂದರೆ; ಇದೇ ನಿದರ್ಶನದ ಮೂಲಕ ರಹಮತ್ ತರೀಕೆರೆಯವರು ಕೃಷ್ಣಪ್ಪನವರ ಓದನ್ನು ಒಡೆದು ಹಾಕಿ ತಾವು ಬೇರೆಯದೇ ಆದ ಕುವೆಂಪು ಶೋಷಿತ

ಪರ ಎಂಬ ನಿಲುವಿಗೆ ತಲುಪುತ್ತಾರೆ. ಕುವೆಂಪು ಅವರ ಭಾಷೆಯ ಬಗೆಗೆ ಎದ್ದಿರುವ ಸಂಸ್ಕೃತ ಭೂಯಿಷ್ಠತೆಯ ಮಾತನ್ನು ಸಂವಹನದ ತೊಡಕು ಎಂದು ಎಂ.ಜಿ.ಕೆ ವಾದಿಸಿದರೆ ಅದು ಮಾಂತ್ರಿಕತೆ ಮತ್ತು ಅದೇ ಭಾಷಿಕ ಸೌಂದರ್ಯ; ಅದು ಸಂವಹನದ ತೊಡಕೂ ಅಲ್ಲ, ಕಾವ್ಯ ಭಾಷೆಯ ದೌರ್ಬಲ್ಯವೂ ಅಲ್ಲ ಎಂಬ ನಿಲುವಿಗೆ ಸುಧಾಕರ ಅವರು ಬರುತ್ತಾರೆ. ಇದೇ ವಿಚಾರದಲ್ಲಿ ಕುವೆಂಪು ಭಾಷೆಯು ಸಂಸ್ಕೃತ ಭೂಯಿಷ್ಠ ಅಲ್ಲ; ಅವರು ಸಂಸ್ಕೃತದಿಂದ ಪದಗಳನ್ನು ಯಥಾವತ್ತಾಗಿ ಅಷ್ಟಾಗಿ ಸ್ವೀಕರಿಸಿಲ್ಲ ಕನ್ನಡದ ನಿಯಮಗಳನ್ನು ಬಳಸಿಯೇ ನವ ಪದಗಳನ್ನು ನಿರ್ಮಿಸಿ ಕೊಂಡಿದ್ದಾರೆ ಎಂಬ ನಿಲುವಿಗೆ ಕೆ.ವಿ. ನಾರಾಯಣ ಬರುತ್ತಾರೆ. ಅಂದರೆ ಹೀಗೆ ಒಂದೇ ವಿಚಾರದಲ್ಲಿ ಭಿನ್ನ ವ್ಯಾಖ್ಯಾನ (ಇಂಟರ್ ಪ್ರಿಟೇಶನ್ನು) ಸಾಧ್ಯತೆಗಳು ನಮ್ಮ ವಿಮರ್ಶೆಯಲ್ಲಿ ಪ್ರಕಟಗೊಂಡಿವೆ. ಇದು ನಮ್ಮ ವಿಮರ್ಶೆಯ ಸಾಧ್ಯತೆಯೂ, ಲಕ್ಷಣವೂ ಆಗಿದೆ.

### 6.20. ಪ್ರತಿಸಂಸ್ಕೃತಿ–ತಳಸಂಸ್ಕೃತಿಯ ದೃಷ್ಟಿಕೋನ

ಬಿ.ಕೃಷ್ಣಪ್ಪ, ದೇವಯ್ಯ ಹರವೆ, ರಹಮತ್ ತರೀಕೆರೆ ಮುಂತಾದವರು ಕುವೆಂಪು ಅವರ ಸಾಹಿತ್ಯ ಮತ್ತು ವ್ಯಕ್ತಿತ್ವಗಳನ್ನು ಪ್ರತಿಸಂಸ್ಕೃತಿ, ತಳಸಂಸ್ಕೃತಿಗಳ ಹಿನ್ನೆಲೆಯಿಂದ ಪರಿಶೀಲಿಸಿದ್ದಾರೆ. ಇಂಥ ಪರಿಶೀಲನೆಯಲ್ಲಿ ಕುವೆಂಪು ಅವರ ವ್ಯಕ್ತಿತ್ವ ಮತ್ತು ವೈಚಾರಿಕತೆಗಳನ್ನು ಅವರು ಎಲ್ಲಿಂದ ರೂಪಿಸಿಕೊಂಡರು? ಅವುಗಳ ಮೇಲಿನ ಪ್ರಭಾವಗಳು ಯಾವುವು? ಎಂಬ ಚರ್ಚೆ ನಡೆದಿದೆ. ಇಲ್ಲಿ ಕುವೆಂಪುವಿಗೆ ತಳಸಂಸ್ಕೃತಿಯಲ್ಲಿನ ತತ್ವದರ್ಶನ ಮಹತ್ವದ್ದಾಗಿ ಕಾಣಲಿಲ್ಲ. ಅವರು ಉಪನಿಷತ್ತು, ವೇದಾಂತ, ಅದ್ವೈತ, ಪಾಶ್ಚಾತ್ಯ ವಿಜ್ಞಾನದೃಷ್ಟಿಗಳಿಂದಲೇ ತಮ್ಮ ದರ್ಶನವನ್ನು ರೂಪಿಸಿಕೊಂಡರು ಎಂಬ ನಿಲುವನ್ನು ಪ್ರಕಡಿಸಲಾಗಿದೆ. (994) ದರ್ಶನಗಳನ್ನು ರೂಪಿಸಿಕೊಳ್ಳುವಾಗ ತನ್ನ ವಿಚಾರ ಪ್ರಪಂಚವನ್ನು ಆಯ್ದುಕೊಳ್ಳುವ ಸ್ವಾತಂತ್ರ ಲೇಖಕನದ್ದೆ ಆಗಿರುತ್ತದೆ ಮತ್ತು ಕುವೆಂಪು ಇಲ್ಲಿ ತಪ್ಪು ಆಯ್ಕೆಯನ್ನು ಮಾಡಿದ್ದಾರೆ. ಎಂಬ ನಿಲುವು ಇಲ್ಲಿ ಪ್ರಕಟವಾಗಿದೆ. ಹಾಗೆಯೇ ವ್ಯಕ್ತಿಯ ತಾತ್ವಿಕತೆ, ಅಭಿವ್ಯಕ್ತಿ ಕ್ರಮಗಳು ಕೂಡ ಪರಿಸರ, ಪರಂಪರೆ, ವರ್ತಮಾನದ ಸಾಂಸ್ಕೃತಿಕ ಒತ್ತಡಗಳಿಂದ ರೂಪಗೊಳ್ಳುತ್ತವೆ. ಅವು ವಯಕ್ತಿಕ ಆಯ್ಕೆಗಳಂತೆ ಗೋಚರಿಸಿದರೂ ಅದು ಸಂಪೂರ್ಣ ನಿಜವಲ್ಲ ಎಂಬ ನಿಲುವುಗಳೂ ಇಲ್ಲಿ ಪ್ರಕಟವಾಗಿವೆ. ವಿಶೇಷವೆಂದರೆ ಕುವೆಂಪು ಅವರ ಸಾಹಿತ್ಯ ಮತ್ತು ವಿಚಾರಗಳಲ್ಲಿ ವೈರುಧ್ಯಗಳನ್ನು ಕಾಣುವ ವಿಮರ್ಶೆಯಲ್ಲೂ ಕೂಡ ವೈರುಧ್ಯಗಳಿವೆ. ಭಿನ್ನ ದೃಷ್ಟಿಕೋನಗಳು ಭಿನ್ನ ನಿಲುವುಗಳಿಗೆ ಒಯ್ಯುತ್ತವೆ ಎಂಬ ತತ್ವ ಮತ್ತು ಭಿನ್ನ ಓದುಗಳು ಸಾಹಿತ್ಯದ ಭಿನ್ನ ವ್ಯಾಖ್ಯಾನಗಳೇ ಆಗಿದ್ದು ಅವು ಸಾಹಿತ್ಯದಲ್ಲಿನ ಬಿಂಬಗಳೂ ಆಗಿರುವಂತೆ ಓದುಗನಲ್ಲಿನ ಸಂವೇದನೆಗಳೂ ಆಗಿರುತ್ತವೆ ಎಂಬ ತತ್ವಗಳು ನಮ್ಮ ವಿಮರ್ಶೆಯಲ್ಲಿ ಮತ್ತೆ ಮತ್ತೆ ಅಭಿನಯಗೊಂಡಿವೆ.

> ಶೇಕಡ ಮೂರೂವರೆ ಪ್ರಮಾಣದ ಲಿಪಿಸಂಸ್ಕೃತಿಯ ಎಷ್ಟೊ ದರ್ಶನ ದೃಷ್ಟಿಗಳನ್ನು ಪ್ರಜ್ಞಾಪೂರ್ವಕವಾಗಿ ತಮ್ಮದಾಗಿಸಿಕೊಂಡು ಅವುಗಳನ್ನು ಉದಾತ್ತೀಕರಿಸಿದ ಭಾವದಲ್ಲಿ ಅವುಗಳನ್ನು ಕುವೆಂಪು ತಮ್ಮ ಕೃತಿಗಳಲ್ಲಿ ಬಿಂಬಿಸುವುದಕ್ಕೆ ತೊಡಗುತ್ತಾರೆ. ಇಂಥ ಪ್ರಯತ್ನಗಳಿಂದ ಅವರ ಬರಹಕ್ಕೆ ಗುಣಶಕ್ತಿ ಪ್ರಾಪ್ತವಾಗುವುದಕ್ಕಿಂತ ಹೊಡೆತ ಬಿದ್ದಿರುವುದೇ ಹೆಚ್ಚು. (450–ಪುಟ: 32)

ಇಂತಹ ಅಭಿಪ್ರಾಯಗಳಲ್ಲಿ ಪುರೋಹಿತಶಾಹಿ ಮತ್ತು ಶೂದ್ರ ಶಾಹಿ ಎಂಬ ಎರಡಾದ ನಾವು ಮತ್ತು ಅನ್ಯವೆಂಬ ಭೇದಗಳಿವೆ. ಉಪನಿಷತ್ತು, ಅದ್ವೈತ, ಇವುಗಳ ತತ್ವಗಳನ್ನೇ ಕುವೆಂಪು ಹೊಸ ನುಡಿಗಟ್ಟಿನಲ್ಲಿ ಪುನಾರಚಿಸಿ ಕೊಡುತ್ತಾರೆ. ಇದು ನಮ್ಮ ವೈಚಾರಿಕತೆ ಅಲ್ಲ. ಇದು ಕುವೆಂಪು ಸಾಹಿತ್ಯಕ್ಕೆ ಅಂಟಿರುವ ಅರ್ಬುದರೋಗ (450–ಪುಟ 41) ಎಂಬುದು ಇಲ್ಲಿನ ವಾದ. ಸಂಸ್ಕೃತಿಯನ್ನು ಶೂದ್ರಸಂಸ್ಕೃತಿ–ಪುರೋಹಿತ ಸಂಸ್ಕೃತಿ ಎಂದು; ಇಲ್ಲವೆ ಪ್ರಧಾನಸಂಸ್ಕೃತಿ–ಪ್ರತಿಸಂಸ್ಕೃತಿ ಎಂದು ಒಡೆದು ನೋಡುವ ಈ ದೃಷ್ಟಿಯು ಕುವೆಂಪು ಪ್ರತಿಪಾದಿಸಿದ ತತ್ವಗಳು ಶೂದ್ರ ತತ್ವಗಳಲ್ಲ ಎಂಬ ನಿಲುವಿಗೆ ತಲುಪುತ್ತದೆ. ಇಲ್ಲಿನ ನಿಲುವುಗಳು ತಪ್ಪುಗ್ರಹಿಕೆಗಳಾದರೂ ದೃಷ್ಟಿಕೋನವನ್ನು ತಪ್ಪಾಗಿ ಗ್ರಹಿಸಿವುದರಿಂದ ಮತ್ತು ತಾವು ಗ್ರಹಿಸಿದ ದೃಷ್ಟಿಕೋನವನ್ನು ಸಾಹಿತ್ಯಕ್ಕೆ ಅನ್ವಯಿಸುವುದರಿಂದ ಒದಗಿರುವ ನಿಲುವುಗಳಾಗಿವೆ. ದೃಷ್ಟಿಕೋನದ ಮಿತಿಗಳಿವು.

ಗೊಬ್ಬರ, ಹೀರೆಹೂವು, ಕರಿಸಿದ್ದ, ನಾಗಿ, ಐತ, ಪೀಂಚಲು, ಸೇಸಿ ಮೊದಲಾದ ಅಲಕ್ಷಿತ ಸಂಸ್ಕೃತಿಯ ಜೀವ ಮತ್ತು ಸಂಗತಿಗಳು ಕುವೆಂಪು ಸಾಹಿತ್ಯದಲ್ಲಿ ಮುನ್ನೆಲೆಗೆ ಬರುತ್ತವೆ ಮತ್ತು ಕುವೆಂಪು ಸಾಹಿತ್ಯದಲ್ಲಿ ಪುರೋಹಿತಶಾಹಿ ತತ್ವಜ್ಞಾನದ ಸುಳಿಗಳಿವೆ ಎಂಬ ನಿಲುವುಗಳನ್ನು ಏಕಕಾಲಕ್ಕೆ ಪ್ರಕಟಿಸುವ ಈ ದೃಷ್ಟಿಯಲ್ಲಿ ಕುವೆಂಪು ವೈಚಾರಿಕತೆಯಲ್ಲಿ ವೈರುಧ್ಯಗಳಿವೆ ಎಂಬ ತಿಳುವಳಿಕೆ ಇದೆ. ಆದರೆ ವಿಮರ್ಶಕರು ಈ ಮಾತುಗಳನ್ನು

ತಮ್ಮ ಬಗೆಗೇ ಹೇಳಿಕೊಂಡಂತೆ ಕಾಣುತ್ತದೆ. ಯಾಕೆಂದರೆ ಅವರ ವಿಮರ್ಶೆಯಲ್ಲೂ ವೈರುಧ್ಯಗಳಿವೆ. ಹಿಂದೂ ಸಂಸ್ಕೃತಿಯ ಜಾಹಿರಾತುದಾರರು ಎಂಬ ಅನಂತಮೂರ್ತಿಯವರ ಮಾತು (ಪ್ರಜ್ಞೆ ಮತ್ತು ಪರಿಸರ) ಮತ್ತು ಕುವೆಂಪು ಅವರು ಜಾತಿಪದ್ಧತಿಯ ವಿರುದ್ಧ ಬಂಡಾಯ ಹೂಡುವಂತೆ ಕಂಡರೂ ಆಳದಲ್ಲಿ ಅವರ ಮನಸ್ಸು ಹಿಂದೂ ಆಗಿದೆ. ಎಂಬ ಡಿ.ಆರ್.ನಾಗರಾಜ ಅವರ ಮಾತುಗಳು (781), ನಮ್ಮ ವಿಮರ್ಶೆಯನ್ನು ಬಹುವಾಗಿ ಪ್ರಭಾವಿಸಿವೆ. ಸಾಹಿತ್ಯದಲ್ಲಿ ಪ್ರಭಾವ ಪ್ರೇರಣೆಗಳನ್ನು ಅನ್ವೇಷಿಸುವ ನಮ್ಮ ವಿಮರ್ಶೆಯಲ್ಲೂ ಅನೇಕ ಪ್ರಭಾವ, ಪ್ರೇರಣೆಗಳಿವೆ.

ಕುವೆಂಪು ಸಾಹಿತ್ಯವನ್ನು ಅಲಕ್ಷಿತ ಸಂಸ್ಕೃತಿಯ ನೆಲೆಯಿಂದ ನೋಡಿರುವ ನಮ್ಮ ವಿಮರ್ಶೆಯು ನೇರವಾಗಿ ಲೇಖಕನನ್ನೇ ತಪ್ಪಿತಸ್ಥ ಎಂಬಂತೆ ಕಂಡಿದೆ. ಕುವೆಂಪುಗೆ ಜಾನಪದದ ಬಗೆಗೆ ಗೌರವ ಇಲ್ಲ, ದಲಿತರ ಬಗೆಗೆ ಆದರ ಇಲ್ಲ, ಸ್ತ್ರೀಯರ ಬಗೆಗೆ ಸಾಂಪ್ರದಾಯಿಕವಾಗೇ ಇವರು ಯೋಚಿಸುತ್ತಾರೆ ಎಂಬೆಲ್ಲ ಮಾತುಗಳನ್ನು ಆಡಿದೆ. ಚೋದ್ಯವೆಂದರೆ ನಮ್ಮ ವಿಮರ್ಶೆಯಲ್ಲೆ ವಿವಿಮರ್ಶೆ ರೂಪದಲ್ಲಿ ಇದಕ್ಕೆ ಹಲವರು ಉತ್ತರವನ್ನೂ ಕೊಟ್ಟಿದ್ದಾರೆ. ಸಾದಾರಪೂರ್ವಕವಾಗಿ ಅಲ್ಲಗಳೆದು ಲೇಖಕರ ಸಮರ್ಥನೆಯನ್ನೂ ಮಾಡಿದ್ದಾರೆ. ಲೇಖಕನ್ನು ಕಟಕಟೆಯಲ್ಲಿ ನಿಲ್ಲಿಸುವ ಮತ್ತು ಪ್ರಮಾಣಪತ್ರ ನೀಡುವ ಮಾದರಿಯ ವಿಮರ್ಶೆಗಳೆರಡೂ ಈ ದೃಷ್ಟಿಯಲ್ಲಿ ಬಂದಿವೆ.

**6.21. ಅವಳಿ ವೈರುಧ್ಯದ ದೃಷ್ಟಿ**

ಭೂಮಿ ಮತ್ತು ಮನುಷ್ಯ (ಡಿ.ಆರ್) ಪ್ರಕೃತಿ ಹಾಗೂ ಸಂಸ್ಕೃತಿ (ಜಿ.ಎಸ್.ಆಮೂರ) ಕಾಡು ಮತ್ತು ಕಡಲು (ಸುಮಿತ್ರ) ಶಬ್ದ ಬಿಂಬ (ನಂಗಲಿ) ಹೀಗೆ ಅನೇಕರರ ವಿಮರ್ಶೆಯಲ್ಲಿ ಈ ಅವಳಿ ವೈರುಧ್ಯವು ಒಂದು ವಿಧಾನವಾಗಿ, ವಿಮರ್ಶೆಯಲ್ಲಿ ಅಂತರ್ಗತವಾಗಿರುವ ದೃಷ್ಟಿಕೋನವಾಗಿ ಬಳಕೆಯಾಗಿದೆ. ಈ ವಿಧಾನವನ್ನೆ ಮಾರ್ಗವೆಂದೂ ಕರೆಯಬಹುದು. ಒಂದು ಸ್ವತಂತ್ರ ಮಾರ್ಗ ಆಗಬಲ್ಲ ಶಕ್ತಿಯೂ ಇದಕ್ಕೆ ಇದೆ. ದ್ವಂದ್ವಾತ್ಮಕ ವಸ್ತುಗತಿ ತತ್ವದ ಛಾಯೆಯಂತೆಯೂ ಇದು ಕಾಣುತ್ತದೆ. ಡಿ.ಆರ್.ನಾಗರಾಜರ ಶಕ್ತಿಶಾರದೆಯ ಮೇಳ ಕೃತಿ (ಶಕ್ತಿ ಮತ್ತು ಶಾರದೆ) ದ್ವಂದ್ವ ವೈರುಧ್ಯ ಅಥವಾ ಅವಳಿ ವೈರುಧ್ಯದ ಮಾರ್ಗವನ್ನು ನಂಬಿದ ಕಾವ್ಯದ ಅಧ್ಯಯನವಾದರೆ ಅಮೂರರ ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಹಾಗೂ ಸಂಸ್ಕೃತಿ ಅವಳಿ ವೈರುಧ್ಯ ಮಾರ್ಗವನ್ನು ನಂಬಿದ ಕಾದಂಬರಿಗಳ ಅಧ್ಯಯನವಾಗಿದೆ. (705–80ಪುಟ)

ಸಾಹಿತ್ಯ ಚರ್ಚೆಯಲ್ಲಿ ಎರಡು ಅಸಮಾನ ವೈರುಧ್ಯಗಳ ತುಲನೆಯೆಂಬಂತೆ ನೋಡುವ ವಿಮರ್ಶಾ ವಿಧಾನವಿದು. ಇದನ್ನೊಂದು, ಗ್ರಹಿಕೆಯ ನೆಲೆಯೆಂದೂ, ದೃಷ್ಟಿಕೋನವೆಂದೂ, ಅಧ್ಯಯನ–ವ್ಯಾಖ್ಯಾನ ವಿಧಾನವೆಂದೂ ಕರೆಯಬಹುದು. ನಮ್ಮ ಕನ್ನಡ ವಿಮರ್ಶೆಯ ಆದಿಪ್ರಾಚೀನ ಮತ್ತು ನಿತ್ಯನೂತನವಾದ ಒಂದು ವಿಧಾನ ಮತ್ತು ದೃಷ್ಟಿಕೋನ ಇದಾಗಿದೆ. ವಸ್ತು ನಿಷ್ಟತೆ ಮತ್ತು ವ್ಯಕ್ತಿನಿಷ್ಟತೆ, ಆಗುವಿಕೆ–ಇರುವಿಕೆ ಎಂಬ ಎರಡು ಬೈನರಿ ದೃಷ್ಟಿಗಳಿಂದ ಕುವೆಂಪು ಸಾಹಿತ್ಯವನ್ನು ಮಂಗಳಾ ಪ್ರಿಯದರ್ಶಿನಿ ವ್ಯಾಖ್ಯಾನಿಸುತ್ತಾರೆ. (2483–ಪುಟ: 78) ಚಂದ್ರಶೇಖರ ನಂಗಲಿಯವರು ಕುವೆಂಪು ಕುರಿತ ವಿಮರ್ಶೆಯನ್ನು ಮನುಷ್ಯ ಕೇಂದ್ರಿತ ಎಂದು ಕರೆದು ಅದನ್ನು ಜೀವ ಕೇಂದ್ರಿತ ನೆಲೆಯಿಂದ ನೋಡಬೇಕು ಎನ್ನುತ್ತಾರೆ. ಕುವೆಂಪು ಕಾದಂಬರಿಗಳನ್ನು ಸೂಕ್ಷ್ಮ–ಸಮಗ್ರ, ನಿರ್ದಿಷ್ಟ–ಸಾಮಾನ್ಯ, ವಯಕ್ತಿಕ–ಸಾಮಾಜಿಕ, ಆಂತರಿಕ–ಬಾಹ್ಯ, ಸ್ವಕೀಯ ಪರಕೀಯಗಳೆಂಬ 'ದ್ವಂದ್ವಾತ್ಮಕ ಪಂಚಕ' ನೆಲೆಯಿಂದ ಪರಿಶೀಲಿಸುತ್ತಾರೆ. (2577–ಪುಟ: 3,9)

ತೌಲನಿಕ ಸಂದರ್ಭದಲ್ಲಂತೂ ಬಹಳಷ್ಟು ಸಾರಿ ತೌಲನಿಕ ವಿಮರ್ಶೆ ನಡೆಯುವುದೇ ಅವಳಿಗಳ ಮೂಲಕ. ಕೆಲವೊಮ್ಮೆ ಅಪರೂಪಕ್ಕೆಂಬಂತೆ ಆಧುನಿಕ ಕವಿಗಳು, ಪ್ರಾಚೀನ ಕವಿಗಳು, ವಿಶ್ವದ ಕವಿಗಳು ಹೀಗೆ ಹಲವರೊಂದಿಗೆ ಹೋಲಿಸಿ ವಿಮರ್ಶಿಸುವ ಪ್ರಯತ್ನಗಳಿವೆಯಾದರೂ ಅವೆಲ್ಲವೂ ಬೇಂದ್ರೆ–ಕುವೆಂಪು; ಕಾರಂತ–ಕುವೆಂಪು ಇಂತಹ ದ್ವಿಮಾನ ಅವಳಿ ತುಲನೆಗಳಿಗೇ ಮರಳುತ್ತಿರುತ್ತವೆ. ಕೆಲವೊಮ್ಮೆ ಕನ್ನಡ ಸಾಹಿತ್ಯ ಪರಂಪರೆ ಮತ್ತು ಕುವೆಂಪು; ಕುವೆಂಪು ಅವರಲ್ಲಿ ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ, ಆಧುನಿಕ ಕಾವ್ಯ ಮತ್ತು ಕುವೆಂಪು ಕಾವ್ಯ; ನವೋದಯ ಮತ್ತು ಕುವೆಂಪು ಹೀಗೆ ಪ್ರತಿಯೊಮ್ಮೆಯೂ ಎರಡಾಗಿಯೇ ನೋಡುವ ಅವಳಿ ದೃಷ್ಟಿಯು ನಮ್ಮ ವಿಮರ್ಶೆಯಲ್ಲಿ ಬಹು ವ್ಯಾಪಕವಾಗಿ ಬಳಕೆಗೊಂಡಿದೆ.

ಒಟ್ಟಾರೆಯಾಗಿ ಭಾರತೀಯ ಮತ್ತು ಜಾಗತಿಕ ಮೀಮಾಂಸೆಗೆ ಕನ್ನಡದ ಕೊಡುಗೆ ಏನು; ಕನ್ನಡದ ಕಾವ್ಯ ಮೀಮಾಂಸೆಗೆ ಕುವೆಂಪು ಕೊಡುಗೆ ಏನು ಎಂಬ ಪ್ರಶ್ನೆಗಳು ಮೀಮಾಂಸಾ ದೃಷ್ಟಿಯಲ್ಲಿ ಸಾಕಷ್ಟು ಚರ್ಚಿತವಾಗಿವೆ. ಇಂತಹ ಚರ್ಚೆಯಲ್ಲಿ ಜಗತ್ತು–ಭಾರತ ಮತ್ತು ಕನ್ನಡ; ಕನ್ನಡ–ಕುವೆಂಪು; ಮೀಮಾಂಸಾ ಪರಂಪರೆ ಮತ್ತು ಕುವೆಂಪು ಇಂತಹ ಹಲವು ಅವಳಿಗಳು ನಿರ್ಮಾಣವಾಗಿವೆ. ಇವುಗಳ ಮೂಲಕ ಮೀಮಾಂಸೆಯ ವಲಯದಲ್ಲಿ ಕುವೆಂಪು ಅವರ ವಿಶಿಷ್ಟತೆ ಏನು ಎಂಬ ಚರ್ಚೆಯು ನಡೆದಿದೆ. ದರ್ಶನ, ವಿಮರ್ಶೆ, ರಸದೃಷ್ಟಿ, ನವೀನ ಕಾವ್ಯ ಮೀಮಾಂಸೆ ಇತ್ಯಾದಿ ರೀತಿಯಲ್ಲಿ ಕುವೆಂಪು ಅವರ ಕಾವ್ಯ ಮೀಮಾಂಸೆಯನ್ನು ನಿರ್ವಚಿಸುವ ಕೆಲಸವೂ ಇಲ್ಲಿ ನಡೆದಿದೆ. (ನೋಡಿ: 2773– ಮುನ್ನುಡಿ ಪುಟ: 1ರಿಂದ 15)

**6.22. ವಿವಿಮರ್ಶೆ**

ಸಂಶೋಧನಾ ಅಧ್ಯಯನದ ಚೌಕಟ್ಟಿನಲ್ಲಿ ಒಂದು ವಿಧಿ ಆಚರಣೆಯಂತೆಯೂ, ಸಾಮಾನ್ಯ ವಿಮರ್ಶೆಯ ಒಂದು ಅಂಗವಾಗಿಯೂ; ವಿಧಾನಗಳಿಗೆ ನಮ್ಮಲ್ಲಿ ವಿವಿಮರ್ಶೆಯು ಪ್ರಕಟವಾಗಿದೆ. (ಈಗಾಗಲೇ ಇದನ್ನು ಸ್ಥೂಲವಾಗಿ ಚರ್ಚಿಸಲಾಗಿದೆ. ಹೆಚ್ಚಿನ ವಿವರಗಳಿಗೆ ನೋಡಿ; ವಿವಿಮರ್ಶೆ ಅಧ್ಯಾಯ) ಸಂಶೋಧನಾ ಅಧ್ಯಯನದ ಚೌಕಟ್ಟಿನಲ್ಲಿ ಇದು ಎರಡು ರೀತಿಗಳಲ್ಲಿ ಪ್ರಕಟವಾಗುತ್ತದೆ. 1. ಸಂಶೋಧನೆಯ ಆರಂಭದಲ್ಲಿ ಅಧ್ಯಯನದ ಒಂದು ವಿಧಿ ಆಚರಣೆಯಂತೆ ಮತ್ತು ಪಾಲಿಸಲೇಬೇಕಾದ ಕಡ್ಡಾಯ ನಿಯಮದಂತೆ ಇದು ಪೂರ್ವ ಅಧ್ಯಯನಗಳ ಸಮೀಕ್ಷೆಯ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಹಾಗೆಯೇ 2. ಅಧ್ಯಯನದ ಒಡಲಿನಲ್ಲಿ ಸ್ವ ಅಭಿಪ್ರಾಯದ ಸಮರ್ಥನೆಗೆ ನಿದರ್ಶನವಾಗಿ, ಅನ್ಯ ನಿಲುವುಗಳ ಖಂಡನೆಗೆ ಸಾಧನವಾಗಿ, ಭಿನ್ನಾಭಿಪ್ರಾಯ–ಭಿನ್ನ ವ್ಯಾಖ್ಯಾನಗಳ ಮಂಡನೆಯ ಕಾರಣಕ್ಕಾಗಿ ಇದು ಕಾಣಿಸಿಕೊಳ್ಳುತ್ತದೆ. ಸಂಶೋಧನೆಗಳಲ್ಲಿ ಪೂರ್ವ ಅಧ್ಯಯನಗಳ ಸಮೀಕ್ಷೆಯು 'ಸ್ವ'ದ ವಿಧಾನ–ದೃಷ್ಟಿಗಳನ್ನು ರೂಪಿಸಿಕೊಳ್ಳಲು ಮತ್ತು ತನ್ನ ಅಧ್ಯಯನದ ವಿಶಿಷ್ಟತೆಗಳನ್ನು ಕಂಡುಕೊಳ್ಳಲು; ತನ್ನದೇ ತಾತ್ವಿಕತೆಗಳನ್ನು ಕಟ್ಟಿಕೊಳ್ಳಲು ಮತ್ತು ಪೂರ್ವವನ್ನು ಮೌಲ್ಯ ಮಾಪನಕ್ಕೆ ಗುರಿಪಡಿಸಲು ನಡೆಯುತ್ತ ಬಂದಿದೆ. ಅಧ್ಯಯನ ಮಾದರಿ ವಿಮರ್ಶೆಯಲ್ಲಿನ ಬಹುಪಾಲು ವಿವಿಮರ್ಶೆಯು ಸಾಹಿತ್ಯ ವಿಮರ್ಶೆಯೇ ಆಗಿದೆ. ಇದು ಕುವೆಂಪು ಸಾಹಿತ್ಯದ ಕುರಿತ ತಮ್ಮ ನಿಲುವುಗಳ ಮಂಡನೆ ಮತ್ತು ಕುವೆಂಪು ಸಾಹಿತ್ಯದ ಸಮರ್ಥನೆಯಾಗಿಯೇ ಸಂಭವಿಸಿದೆ. ಅನ್ಯ ನಿಲುವು–ಧೋರಣೆಗಳನ್ನು, ಅನ್ಯ ಪ್ರಮೇಯಗಳನ್ನು ನಿರಾಕರಿಸುವಾಗ ತಮ್ಮದೇ ನಿಲುವುಗಳನ್ನು ಮಂಡಿಸುವುದು ನಮ್ಮ ವಿವಿ ಮರ್ಶೆಯ ಒಂದು ಲಕ್ಷಣ. ಇಂತಹ ಕ್ರಿಯೆಗಳಲ್ಲಿ ಸಾಹಿತ್ಯತತ್ತ್ವಗಳೂ, ವಿಮರ್ಶೆಯ ತತ್ವಗಳೂ ಮಂಡನೆಯಾಗುತ್ತಿರುತ್ತವೆ. ಭಿನ್ನ ನಿಲುವುಗಳ ಮಂಡನೆ ಎಂದರೆ ಭಿನ್ನ ತಾತ್ವಿಕತೆಗಳ ಮಂಡನೆ ಎಂದೇ ಅರ್ಥ. ಹಾಗಾಗಿ ಭಿನ್ನ ನಿಲುವು, ದೃಷ್ಟಿ, ತತ್ವಗಳ ನಡುವಿನ ಸಂಘರ್ಷ ಸದಾ ನಮ್ಮಲ್ಲಿ ಜರುಗುತ್ತ ಬಂದಿದೆ. ಈ ಸಂಘರ್ಷದ ಪ್ರಕ್ರಿಯೆಯು ನಮ್ಮ ವಿಮರ್ಶೆಯ ಒಂದು ಮುಖ್ಯ ಚಹರೆಯೂ ಆಗಿದೆ.

ತನ್ನ ಸಾಹಿತ್ಯದ ಕುರಿತ ವಿಮರ್ಶೆಯಲ್ಲಿ ಕವಿಯೂ ಪ್ರವೇಶ ಮಾಡುವುದು ನಡೆದಿದೆ. ಕುವೆಂಪು ಉದ್ದೇಶಪೂರ್ವಕವಾಗಿ ಈ ಕೆಲಸ ಮಾಡದಿದ್ದರೂ ಅವರ ಆಪ್ತರು ಅವರನ್ನು ಸಂದರ್ಶಿಸಿ ಪ್ರತಿಕ್ರಿಯೆಯಿಸುವಂತೆ ಮಾಡಿದ್ದಾರೆ. ಕವಿಯ ಪ್ರತಿಕ್ರಿಯೆಗಳಿಗೆ ಇಲ್ಲಿ ಮಾರುತ್ತರಗಳೂ ಬಂದಿವೆ. ನವ್ಯರು ಕುವೆಂಪು ಭಾಷೆಯ ಕುರಿತು ಮಂಡಿಸಿದ ನಿಲುವು ಆರೋಪದ ಕುರಿತು (ಭಾಷೆ ಸೋಲುತ್ತದೆ) ಕುವೆಂಪು ತಮ್ಮ ಒಂದು ಸಂದರ್ಶನದಲ್ಲಿ ಉತ್ತರ ಕೊಟ್ಟಿದ್ದಾರೆ. ಆ ಉತ್ತರಕ್ಕೆ ನಾಡಿಗರು ಕುವೆಂಪು ಕವಿತೆಗಳಲ್ಲಿ ರಮ್ಯತೆ ಎಂಬ ತಮ್ಮ ಲೇಖನದಲ್ಲಿ ಮಾರುತ್ತರ ಕೊಟ್ಟಿದ್ದಾರೆ.(ವಿ.ದಾ.44)

ಗೋಕಾಕ ವಿಕೃತಗಳ್ ಕಾಲ್ಗೊಳ್ಗೆ ಚಿಕಿತ್ಸೆಯಂ
ಪಲ್ ಕೋಡು ಕೊಕ್ಕಿಗಿದೆ ಮೆದುಳಿಗುಂಟೇಶ್ರಮಂ? (ಮಂತ್ರಾಕ್ಷತೆ)

ಕುವೆಂಪು ತಮ್ಮ ವಿಮರ್ಶೆಗೆ ಪ್ರತಿಕ್ರಿಯಿಸಿದ್ದಾರೆ. ಗ್ರಾಮಸಿಂಹ ಕೂಡ ವಿಮರ್ಶೆಗೆ ತೋರಿದ ಪ್ರತಿಕ್ರಿಯೆಯೇ. ಕುವೆಂಪು ಕುರಿತಂತೆ ಅಡಿಗರ ಪ್ರತಿಕ್ರಿಯೆಯಂತೂ ಸಾಕಷ್ಟು ಪ್ರಸಿದ್ಧವೇ ಆಗಿದೆ. "ಕುವೆಂಪು ಕವಿ ಎಂದಾದರೆ ನಾನು ಕವಿಯೇ ಅಲ್ಲ. ನಾನು ಕವಿ ಎಂದಾದರೆ ಕುವೆಂಪು ಕವಿಯೇ ಅಲ್ಲ.' 'ಶ್ರೇಷ್ಠತೆ ಎಂಬುದು ನನ್ನ ಜೀವನ್ಮರಣದ ಪ್ರಶ್ನೆ' ಎಂಬ ಅಡಿಗರ ಮಾತುಗಳು ಅವರ ವ್ಯಕ್ತಿನಿಷ್ಠ ಕಾವ್ಯಕಲ್ಪನೆಯ ಸಿದ್ಧಾಂತಗಳಿಂದ

ಹೊರಟ ಮಾತುಗಳಾಗಿವೆ. ತಮ್ಮ ಅಸ್ತಿತ್ವ ಮತ್ತು ಸ್ಥಾನೀಕರಣದ ವೇದಿಕೆಯಿದು ಎಂಬಂತೆ ನಮ್ಮ ವಿಮರ್ಶಾಲೋಕದಲ್ಲಿ ಕವಿಗಳೂ ಕೂಡ ಪಾಲ್ಗೊಂಡಿದ್ದಾರೆ. ಸಮಕಾಲೀನತೆಗೆ ಇರುವ ಸಾಧ್ಯತೆ-ಮಿತಿ ಇದು.

**6.23. ಪೂರ್ವವಿಮರ್ಶೆಯ ಅವಜ್ಞೆ-ಅಪ್ರಜ್ಞೆ**

ವಿವಿಮರ್ಶೆಯು ನಮ್ಮ ವಿಮರ್ಶೆಯ ಒಂದು ಲಕ್ಷಣವೂ-ಅಂಗವೂ-ಮಾರ್ಗವೂ ಹೇಗೆ ಆಗಿ ಇದೆಯೊ ಹಾಗೆಯೆ ಪೂರ್ವವಿಮರ್ಶೆಯ ಅವಜ್ಞೆ-ಅಪ್ರಜ್ಞೆಗಳೂ ನಮ್ಮಲ್ಲಿ ಇವೆ. ಕೆಲವು ವಿಮರ್ಶಕರು ತಾವು ಹೇಳುವ ವಿಚಾರಗಳನ್ನು ಇತರರು ಈಗಾಗಲೇ ಹೇಳಿದ್ದರೂ ಅದರ ಕಡೆಗೆ ಗಮನ ಕೊಡದೆ; ಕಂಡರೂ ಕಾಣದಂತೆ; ಈ ವಿಚಾರವನ್ನೂ ನಾನೇ ಮೊದಲ ಬಾರಿಗೆ ಹೇಳುತ್ತಿದ್ದೇನೆ ಎಂಬಂತೆ ಹೇಳುತ್ತಿರುತ್ತಾರೆ. ಇದನ್ನೇ ಪೂರ್ವ ವಿಮರ್ಶೆಯ ಅವಜ್ಞೆ-ಅಪ್ರಜ್ಞೆ ಎನ್ನಬಹುದು. ಸಂಶೋಧನಾ ಅಧ್ಯಯನಗಳಲ್ಲಿ ಪೂರ್ವ ಅಧ್ಯಯನಗಳ ಅವಲೊಕನವು ಒಂದು ಕಡ್ಡಾಯ ವಿಧಿ ಆಚರಣೆ ಎಂಬಂತೆ ನಡೆಯುವುದರಿಂದ ಇಲ್ಲಿ ಮಾತ್ರ ಅವಜ್ಞೆಗೆ ವಿನಾಯಿತಿ ಇದೆ. ಮಿಕ್ಕಂತೆ ನಮ್ಮ ಬಹುಪಾಲು ವಿಮರ್ಶೆಯಲ್ಲಿ ಅನ್ಯ ವಿಮರ್ಶೆಯ ಕುರಿತಾದ ಅಪ್ರಜ್ಞೆ ಅಲಕ್ಷ್ಯಗಳು ಇದ್ದೇ ಇವೆ. ಅನ್ಯ ವಿಮರ್ಶೆಯನ್ನು ನಿದರ್ಶನಕ್ಕೆ-ಸಮರ್ಥನೆಗೆ ತೆಗೆದು ಕೊಳ್ಳುವ ಮತ್ತು ವಿವಿಮರ್ಶಿಸುವ ಪರಿಪಾಠವು ನಮ್ಮಲ್ಲಿ ಇರುವಂತೆಯೇ ಚೌರ್ಯ ಮಾಡುವ, ಕಂಡೂ ಕಾಣದಂತೆ ಅಲಕ್ಷ ಮಾಡುವ, ಕಂಡೂ ಅವಲೋಕಿಸದೆ ಸೋಮಾರಿತನ ತೋರುವ, ಅನ್ಯ ವಿಮರ್ಶೆಯನ್ನು ಪ್ರಭಾವ ಮಾಡೀತೆಂದು ಉದ್ದೇಶಪೂರ್ವಕವಾಗಿ ಅಲಕ್ಷಿಸುವ ಪ್ರವೃತ್ತಿಗಳು ನಮ್ಮಲ್ಲಿ ಇವೆ. ವಿವಿಮರ್ಶೆಯಲ್ಲಿ ಅಸಡ್ಡೆ, ವೈರ, ಪೂರ್ವಾಗ್ರಹಗಳು ಇದ್ದರೆ; ಅವಜ್ಞೆಯಲ್ಲಿ ಸೋಮಾರಿತನ, ಜಾಣಕುರುಡು, ಹುಂಬತನ, ಹಿಂಜರಿಕೆಗಳೆಲ್ಲ ಇರುತ್ತವೆ. ಇವೆಲ್ಲವೂ ನಮ್ಮ ವಿಮರ್ಶೆಯ ಲಕ್ಷಣಗಳೇ.

***

ಅಧ್ಯಾಯ–ಏಳು

# ವಿಮರ್ಶಾ ಸಂಸ್ಕೃತಿ: ರಾಜಕಾರಣಗಳು

7.1. ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣ

7.2. ಸಂಬಂಧಿಕತೆಯ ರಾಜಕಾರಣ

7.3. ಸಾಂದರ್ಭಿಕತೆಯ ರಾಜಕಾರಣ

## ವಿಮರ್ಶಾ ಸಂಸ್ಕೃತಿ: ರಾಜಕಾರಣಗಳು

ಸ್ಥೂಲವಾಗಿ ಮನುಷ್ಯ ಸಂಬಂಧಗಳ ರಾಜಕಾರಣವನ್ನು, ಸಂಬಂಧಿಕತೆಯ ರಾಜಕಾರಣ ಎಂದೂ ಚಾರಿತ್ರಿಕ ಸಂದರ್ಭಗಳ ರಾಜಕಾರಣಗಳನ್ನೆ ಸಾಂದರ್ಭಿಕತೆಯ ರಾಜಕಾರಣ ಎಂದೂ ಇಲ್ಲಿ ಕರೆದುಕೊಳ್ಳಲಾಗಿದೆ. ಕುವೆಂಪು ಕುರಿತ ವಿಮರ್ಶೆಯಲ್ಲಿ ಸಂಬಂಧಗಳು ಕೆಲವೊಮ್ಮೆ ನಿಯಂತ್ರಕಗಳಾಗಿ ಕೆಲಸ ಮಾಡಿವೆ. ವಿಮರ್ಶೆಯ ಸ್ವರೂಪವನ್ನು ನಿರ್ಯಂತ್ರಿಸಿವೆ. ವಿಮರ್ಶೆಗೆ ವಿಮರ್ಶಕನು ಈ ಎರಡೂ ರಾಜಕಾರಣದಿಂದ ಕೃತಿಯನ್ನು ಆಯ್ಕೆ ಮಾಡಿಕೊಳ್ಳಬಹುದು. ಕೆಲವೊಮ್ಮೆ ಕೆಲವನ್ನು ಅಲಕ್ಷ್ಯ ಮಾಡಬಹುದು. ಹಾಗೇ ಕೆಲವೊಮ್ಮೆ ಆಯ್ಕೆಯಲ್ಲಿ ಪ್ರಜ್ಞಾಪೂರ್ವಕ ಮತ್ತು ಅಪ್ರಜ್ಞಾಪೂರ್ವಕ ನಿಯಂತ್ರಕಗಳು ಕೆಲಸ ಮಾಡಬಹುದು. ಹಲವು ಸಾಮಾಜಿಕವಾದ ಸಂಗತಿಗಳು ವಿಮರ್ಶೆಯ ಆಯ್ಕೆಯನ್ನು ನಿಯಂತ್ರಿಸಬಹುದು. ಇಂತಹದ್ದನ್ನು ಆಯ್ಕೆ ಮತ್ತು ಅಲಕ್ಷದ ರಾಜಕಾರಣ ಎಂದು ಕರೆದುಕೊಳ್ಳಲಾಗಿದೆ. ಈ ಮೂರೂ ಕೂಡ ಪರಸ್ಪರ ಅಂತಃಸಂಬಂಧ ಉಳ್ಳವು.

### 7.1. ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣ

ವಿಮರ್ಶಕನು ಏನಾದರೊಂದನ್ನು ವಿಮರ್ಶೆಗೆ ಎತ್ತಿಕೊಳ್ಳುವ ಮತ್ತು ನಿರ್ಲಕ್ಷಿಸುವ ಕ್ರಿಯೆಯ ಹಿಂದಿನ ನಿಯಂತ್ರಕಗಳು, ಅಭಿರುಚಿಗಳು, ಮಾನದಂಡಗಳು, ಪ್ರಭಾವಗಳು, ಒತ್ತಡಗಳು ಇತ್ಯಾದಿಗಳ ಪಾತ್ರವನ್ನು ಇಲ್ಲಿ ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣ ಎಂದು ಕರೆದುಕೊಳ್ಳಲಾಗಿದೆ. ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣವು ಒಟ್ಟಾರೆ ವಿಮರ್ಶೆಯ ಆಚರಣೆಯಲ್ಲಿ ಅಂತರ್ಗತವಾಗಿರುವ ಒಂದು ಮನೋಧರ್ಮ ಮತ್ತು ವಿದ್ಯಮಾನ. ಇದು ನಮ್ಮ ವಿಮರ್ಶೆಯಲ್ಲಿ ಹಲವಾರು ರೀತಿಯಲ್ಲಿ ಪ್ರಕಟವಾಗಿದೆ. ಕೆಲವೊಮ್ಮೆ ಪ್ರಜ್ಞಾ ಪೂರ್ವಕವಾಗಿಯೂ–ಉದ್ದೇಶ ಪೂರ್ವಕವಾಗಿಯೂ ಕೆಲವೊಮ್ಮೆ ಅಪ್ರಜ್ಞಾ ಪೂರ್ವಕವಾಗಿಯೂ ಈ ವಿದ್ಯಮಾನವು ಕೆಲಸ ಮಾಡಿದೆ.

ಮಾಸ್ತಿ ಮತ್ತು ಕುವೆಂಪು ನಡುವೆ ಶೂದ್ರ ತಪಸ್ವಿಯ ವಿಚಾರಕ್ಕೆ ವಿವಾದ ಉಂಟಾದ ನಂತರ ಕುವೆಂಪು ನಾಟಕಗಳ ಬಗ್ಗೆ ಸುಮಾರು ವರ್ಷಗಳ ಕಾಲ ಒಂದು ದೀರ್ಘಕಾಲದ ಮೌನ ನಮ್ಮ ವಿಮರ್ಶೆಯಲ್ಲಿ ಸೃಷ್ಟಿಯಾಗಿದೆ. ನಮ್ಮವರು ಕಾದಂಬರಿ–ಕಾವ್ಯದ ಬಗ್ಗೆ ಚರ್ಚಿಸುವಾಗ ಶೂದ್ರ ತಪಸ್ವಿ–ಬೆರಳ್ಗೆ ಕೊರಳ್‌ಗಳನ್ನು ವಿಮರ್ಶೆಗೆ ಎತ್ತಿಕೊಂಡಿಲ್ಲ. ವಿವಾದ ಮತ್ತು ಸಮಸ್ಯಾತ್ಮಕ ನಿಲುವುಗಳನ್ನು ಚರ್ಚಿಸುವುದಕ್ಕಿಂತ ಮೌನ ಲೇಸೆನ್ನುವ ಭಾವ ಇಲ್ಲಿ ಕೆಲಸ ಮಾಡಿರಬಹುದು. ದೊಡ್ಡವರ ಜಗಳ ಕಂಡು ಮಿಕ್ಕವರು ಆ ಬಗ್ಗೆ ಮೌನತಾಳಿರಬಹುದು. ಜಾತಿ–ವರ್ಗ–ಪುರಾಣಗಳು ಸ್ವಲ್ಪ ಸೆನ್ಸಿಟೀವಾದ ವಿಷಯಗಳು; ಸಾಮಾಜಿಕ ಕ್ಷೋಭೆಗೆ ಕಾರಣವಾಗುವ ವಿಷಯಗಳು ಹಾಗಾಗಿ ಇಂಥ ಸಾಮಾಜಿಕ ಕ್ಷೋಭೆಗೆ ತಮ್ಮನ್ನು ಕಾರಣ ಮಾಡಿಕೊಳ್ಳದಿರುವ ಎಚ್ಚರ ಈ ಅಲಕ್ಷ್ಯತೆಯ ಹಿಂದೆ ಕೆಲಸ ಮಾಡಿರಬಹುದು.

ಸಾಹಿತಿಯನ್ನು ಋಷಿಕವಿ, ರಸಋಷಿ, ಕಾವ್ಯಶಿವ, ಶೂದ್ರತಪಸ್ವಿ, ಕಬ್ಬಿಗದೈವ ಇತ್ಯಾದಿಯಾಗಿ ಉನ್ನತವಾದ ಸ್ಥಾನದಲ್ಲಿಟ್ಟು; ಪೂಜ್ಯಾರ್ಹ ವ್ಯಕ್ತಿ ಎಂಬಂತೆ ನಮ್ಮ ವಿಮರ್ಶಾ ಸಂಸ್ಕೃತಿಯು ಭಾವಿಸಿದೆ. ಸಾಮಾನ್ಯ ಜನರಿಗಿಂತ ಈತ ಭಿನ್ನ ಮತ್ತು ಅಸಾಧಾರಣ ವ್ಯಕ್ತಿ ಎಂದು ಯಾವ ಸಾಹಿತಿಯನ್ನು ವಿಮರ್ಶೆಯು ಭಾವಿಸುತ್ತದೋ ಅಂತಹ ವ್ಯಕ್ತಿಯ ಸಾಹಿತ್ಯವನ್ನು ಕೂಡ ಉನ್ನತ ಸ್ಥಾನದಲ್ಲೆ ಇರಿಸಿ ನೋಡುತ್ತದೆ. ಹಾಗಾಗಿ ಈ ಭಾವನೆಯು ಕೂಡ ವಿಮರ್ಶೆಯ ಆಯ್ಕೆ ಮತ್ತು ಅಲಕ್ಷತೆಯ ರಾಜಕಾರಣದಲ್ಲಿ ಪಾಲ್ಗೊಂಡಿದೆ. ಕುವೆಂಪು ಅವರ ಆತ್ಮಕಥನ ನೆನಪಿನ ದೋಣಿಯಲ್ಲಿಯನ್ನು ನಮ್ಮ ವಿಮರ್ಶೆಯು ಎಷ್ಟು ಚರ್ಚಿಸಬಹುದಿತ್ತೋ ಅಷ್ಟು ಚರ್ಚಿಸಿಲ್ಲ. ಆತ್ಮಕಥನವು ನಮ್ಮ ನಿಮ್ಮಂತೆ ಕುವೆಂಪು ಕೂಡ ಒಬ್ಬ ಮನುಷ್ಯ ಎಂದು ತಿಳಿಸುವುದರಿಂದ ಇದು ಹೆಚ್ಚು ವಿಮರ್ಶೆಗೆ ಗುರಿಯಾಗಿಲ್ಲ. ಅಲ್ಲದೆ ಸಾಹಿತ್ಯ ವಿಮರ್ಶೆ ಎಂದರೆ ಅದು ಸಾಹಿತ್ಯದ ವಿಮರ್ಶೆ ಮಾತ್ರ. ಕವಿಯ ಜೀವನ ಚರಿತ್ರೆಯ ವಿಮರ್ಶೆಯಲ್ಲ ಎಂದು ನಮ್ಮ ವಿಮರ್ಶೆಯು ವಿಮರ್ಶೆಯ ಪರಿಕಲ್ಪನೆಯ ಬಗ್ಗೆ ತನ್ನದೇ ಕಲ್ಪನೆಯನ್ನು ಪಾಲಿಸುತ್ತ ಬಂದಿದೆ. ಹಾಗಾಗಿ ಆತ್ಮ ಚರಿತ್ರೆಯು ಕಡಿಮೆ ಲಕ್ಷ್ಯಕ್ಕೆ ಗುರಿಯಾಗಿದೆ. ಅಂದರೆ ನಮ್ಮಲ್ಲಿ ಚಾಲ್ತಿಯಲ್ಲಿರುವ ಸಾಹಿತ್ಯ ವಿಮರ್ಶೆಯ ಪರಿಕಲ್ಪನೆ ಕೂಡ ಈ ರಾಜಕಾರಣದ ಹಿಂದೆ ಕೆಲಸ ಮಾಡಿದೆ.

ಕುವೆಂಪು ತಮ್ಮ ಆತ್ಮ ಕಥನವನ್ನು ಬರೆದು ಕೊಂಡಿದ್ದರೂ ನಮ್ಮಲ್ಲಿ ಕುವೆಂಪು ಜೀವನವನ್ನು ಆಧರಿಸಿ ಹಲವು ಸಾಹಿತ್ಯ ಕೃತಿಗಳು ಸೃಷ್ಟಿಯಾಗಿದೆ. 30ಕ್ಕೂ ಹೆಚ್ಚು ವ್ಯಕ್ತಿಚಿತ್ರಗಳೂ ಜೀವನ ಚರಿತ್ರೆಗಳೂ

ರಚನೆಯಾಗಿವೆ. ಇವೆಲ್ಲವೂ ಕುವೆಂಪುವನ್ನು ಸಾಮಾನ್ಯರಿಗಿಂತ ಭಿನ್ನವಾದ ಅಸಾಧಾರಣ ವ್ಯಕ್ತಿತ್ವವೆಂದು ಗ್ರಹಿಸಿದ ಬರವಣಿಗೆಗಳು. ವ್ಯಕ್ತಿಯನ್ನು ಸಂಸ್ಥೆಯಾಗಿ; ಜ್ಞಾನ ವ್ಯವಸ್ಥೆಯಾಗಿ ಬೆಳೆಸುವ ಸಂರಚನೆಗಳು ಇವು. ಇಂತಹ ಕಡೆ ವ್ಯಕ್ತಿಯನ್ನು ಪೂಜ್ಯಾರ್ಹನನ್ನಾಗಿ ಕಾಣುವ ಬಗೆಯೇ ವ್ಯಕ್ತಿಯ ತತ್ವಗಳನ್ನು ಆಚಾರಾರ್ಹವೆಂದು ಸ್ವೀಕರಿಸುವ ಬಗೆ ಕೂಡ ಆಗಿರುತ್ತದೆ.

ವಿಮರ್ಶಕನು ವಿಮರ್ಶೆಗೆ ಯಾವುದಾದರೂ ಕವಿಯನ್ನು, ಕೃತಿಯನ್ನು ಆರಿಸಿಕೊಳ್ಳುವಾಗಲೆ ಹಲವು ರೀತಿಯ ಉದ್ದೇಶ, ಮಾನದಂಡಗಳಿಂದ ನಿರ್ದೇಶಿತನಾಗಿರುತ್ತಾನೆ. ಹಲವು ಪೂರ್ವಗ್ರಹೀತಗಳಿಂದ ನಿರ್ದೇಶಿತನಾಗಿರುತ್ತಾನೆ. ಆ ಉದ್ದೇಶ, ಮಾನದಂಡ, ಪೂರ್ವಗ್ರಹೀತಗಳನ್ನು ಕೆಲವು ಸಾಂಸ್ಕೃತಿಕ ರಾಜಕಾರಣಗಳು ನಿರ್ದೇಶಿಸಿರುತ್ತವೆ. ಹೀಗಾಗಿ ವಿಮರ್ಶೆಗೆ ಕೈಗೆತ್ತಿಕೊಳ್ಳುವ ಆಯ್ಕೆಯ ಹಿಂದೆ ರಾಜಕಾರಣವೊಂದು ಸದಾ ಕ್ರಿಯಾಶೀಲವಾಗಿರುತ್ತದೆ. ಕೆಲವರು ವಿಮರ್ಶೆಗೇ ತೊಡಗದೆ ಸಾರಾಸಗಟಾಗಿ ಕುವೆಂಪು ಸಾಹಿತ್ಯಕ್ಕೆ ಮೌನ ನಿರ್ಲಕ್ಷ್ಯ ತೋರಿದ್ದಾರೆ. ಇಂಥವರನ್ನು ಮೌನವರ್ಗ ಅಥವಾ ಸಮಕಾಲೀನವರ್ಗ ಎಂಬ ತಲೆಬರಹದಲ್ಲಿ ವಿವಿಮರ್ಶೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕೆಲವರು ಕುವೆಂಪು ಅವರ ಕಾದಂಬರಿಗಳನ್ನು ಚರ್ಚೆಗೆ ತೆಗೆದುಕೊಂಡಿದ್ದಾರೆ. ಅವನ್ನು ಗಂಭೀರವಾಗಿಯೆ ಚರ್ಚಿಸಿದ್ದಾರೆ. ಆದರೆ ಅವರ ಕಾವ್ಯವನ್ನು ಮುಟ್ಟಿಲ್ಲ. ಇಲ್ಲಿ ನಮ್ಮ ವಿಮರ್ಶೆಯ ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣದಲ್ಲಿ ಪ್ರಕಾರ ಮೀಮಾಂಸೆಯ ಕಾಲಧರ್ಮಿ ಗ್ರಹೀತಗಳು ಮತ್ತು ಶ್ರೇಷ್ಠತೆಯ ಪ್ರಶ್ನೆಗಳು ಸಾಕಷ್ಟು ಕೆಲಸ ಮಾಡಿವೆ. ಪ್ರಕಾರಗಳು ಮತ್ತು ಶ್ರೇಷ್ಠತೆಯನ್ನು ಕುರಿತ ಅವರದೇ ನಂಜಿಕೆಗಳು ಇಲ್ಲಿ ಕೆಲಸ ಮಾಡಿವೆ. ಅನಂತಮೂರ್ತಿ, ಕುರ್ತಕೋಟಿ, ಎಂ.ಜಿ.ಕೃಷ್ಣಮೂರ್ತಿ ಇಂತಹವರು ಕೆಲವು ಕಡೆ ಆಧುನಿಕ ಕಾವ್ಯದ ಬಗ್ಗೆ, ಆಧುನಿಕ ಕನ್ನಡ ಸಾಹಿತ್ಯದ ಬಗ್ಗೆ ಚರ್ಚೆ ಮಾಡುವಾಗ ಕುವೆಂಪುವನ್ನು ಮರೆತಂತೆ ಚರ್ಚೆಯ ವಲಯಕ್ಕೇ ತರದೆ ಅಲಕ್ಷ್ಯ ಮಾಡಿದ್ದಾರೆ. ಯಾಕೆ ಹೀಗೆ ಮಾಡಿದ್ದಾರೆ ಎಂಬ ಬಗ್ಗೆ ನಮ್ಮಲ್ಲಿ ವಿವಿಮರ್ಶೆಯಲ್ಲಿ ಸಾಕಷ್ಟು ಮಾತಿನ ಗುದ್ದಾಟವೂ ನಡೆದಿದೆ. ಈ ಅಲಕ್ಷ್ಯದ ಹಿಂದಿನ ರಾಜಕಾರಣದಲ್ಲಿ ಶ್ರೇಷ್ಠತೆಯ ಪ್ರಶ್ನೆಗಳು; ಅಪ್ರಜ್ಞೆಯಲ್ಲಿರಬಹುದಾದ ವರ್ಗ ಹಿತಾಸಕ್ತಿಗಳು ಕೆಲಸ ಮಾಡಿರಬಹುದು.

ಬೇರೆ ಬೇರೆ ಕೃತಿಗಳ ಬಗ್ಗೆ ಬಂದಿರುವ ವಿಮರ್ಶೆಗೆ ಹೋಲಿಸಿದರೆ ನಮ್ಮಲ್ಲಿ ಕುವೆಂಪು ಅವರ ಕತೆಗಳು ಮತ್ತು ಪ್ರಬಂಧಗಳ ಬಗ್ಗೆ ಬಂದಿರುವ ವಿಮರ್ಶೆ ಕಡಿಮೆ. ತೀರಾ ಕಡಿಮೆ. ಯಾಕೆ ಹೀಗಾಗಿರಬಹುದು? ಕೆಲವು ಪ್ರಕಾರಗಳನ್ನು ಗಂಭೀರವಾಗಿ ಚರ್ಚಿಸಿ, ಕೆಲವು ಪ್ರಕಾರಗಳನ್ನು ನಮ್ಮ ವಿಮರ್ಶಾ ಸಂಸ್ಕೃತಿಯು ಅಲಕ್ಷಿಸಲು ಕಾರಣವೇನು? ಇದರ ಹಿಂದೆಯೂ ಶ್ರೇಷ್ಠತೆಯ ರಾಜಕಾರಣವೇ ಕೆಲಸಮಾಡಿದೆ. ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣಕ್ಕು ಶ್ರೇಷ್ಠತೆಯ ಕಲ್ಪನೆಗೂ ಒಂದು ಅನ್ಯೋನ್ಯ ಸಂಬಂಧ ಇದೆ. ಅಲ್ಲದೆ ನಮ್ಮಲ್ಲಿ ಪ್ರಕಾರಗಳ ಬಗ್ಗೆ ಕೂಡ ಒಂದು ತರತಮ ಶ್ರೇಣೀಕರಣ ಇದೆ. ಈ ತರತಮ ಶ್ರೇಣೀಕರಣದ ರಾಜಕಾರಣದಿಂದ ಪ್ರಬಂಧಗಳು ವಿಮರ್ಶೆಯಲ್ಲಿ ಮುನ್ನೆಲೆಗೆ ಬರದೆ ಹೋಗಿವೆ.

ವಾಸ್ತವವಾದಿ ಬರವಣಿಗೆಯು ಕಲಾಕೃತಿಯಾಗಿದೆಯೋ ಅಥವಾ ನೆನಪುಗಳ ದಾಖಲೆಯಷ್ಟಕ್ಕೆ ಅದು ಉಳಿದುಹೋಗಿದೆಯೋ ಎಂಬ ದೃಷ್ಟಿ ಕೂಡ ವಿಮರ್ಶೆಯ ಆಯ್ಕೆ ಅಲಕ್ಷ್ಯಗಳ ಹಿಂದೆ ಕೆಲಸ ಮಾಡಿದೆ. ಅಂದರೆ ಸಾಹಿತ್ಯ ಸ್ವರೂಪ ಮೀಮಾಂಸೆಯ ಗ್ರಹೀತಗಳು ಕೂಡ ಸಾಹಿತ್ಯ ವಿಮರ್ಶೆಯ ಆಯ್ಕೆ ಅಲಕ್ಷ್ಯಗಳ ರಾಜಕಾರಣದ ಸಂವೇದಿ ಸೂಚ್ಯಂಕಗಳಾಗಿ ಕೆಲಸಮಾಡಿವೆ.

> ಶ್ರೀ ಕೀರ್ತಿನಾಥ ಕುರ್ತಕೋಟಿಯವರು ನಮ್ಮಲ್ಲಿ ರೊಮ್ಯಾಂಟಿಕ್ ಎಂಬ ಹೆಸರು ಯಾರಿಗಾದರೂ ಸಲ್ಲುವುದಿದ್ದರೆ ಅದು ಕುವೆಂಪು ಅವರಿಗೆ ಸಲ್ಲಬೇಕು ಎಂಬರ್ಥದ ಮಾತನ್ನು ಬರೆದರು. ಸಹಜವಾಗಿಯೇ ರೊಮ್ಯಾಂಟಿಕ್ ಕಾವ್ಯದ ದೋಷಗಳನ್ನು ನವ್ಯ ಕಾವ್ಯದ ಸಮರ್ಥನೆಗಾಗಿ ಹುಡುಕಲಾಯಿತು. (ನೋಡಿ: ಸುಮತೀಂದ್ರ ನಾಡಿಗ: ಗೋಪಾಲಕೃಷ್ಣ ಅಡಿಗ–ಒಂದು ಕಾವ್ಯಾಭ್ಯಾಸ) ಇದು ವಿಮರ್ಶೆಯ ಒಂದು ವಿಪರ್ಯಾಸ. ನವೋದಯ ಕಾವ್ಯ ಮತ್ತು ಕುವೆಂಪು ಅವರ ಕಾವ್ಯ ಪ್ರಭಾವಗಳಿಗೆ ಒಳಗಾಗಿದ್ದರೂ ಕನ್ನಡ ಕಾವ್ಯ ಪರಂಪರೆಯೊಡನೆ ಪಡೆದಿರುವ ಸಂಬಂಧಗಳನ್ನು ಗುರುತಿಸದೇ ಹೋದರು. ಇದರ ಒಂದು ಅತಿಯಲ್ಲಿ ಶ್ರೀ ಕುರ್ತಕೋಟಿಯವರು 'ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು' ಎಂಬ ಗ್ರಂಥದಲ್ಲಿನ ತಮ್ಮ ಪ್ರಬಂಧದಲ್ಲಿ (ಪರಂಪರೆ ಮತ್ತು ಕನ್ನಡ ಕಾವ್ಯ) ಪರಂಪರೆಯ ಹಿನ್ನೆಲೆಯಲ್ಲಿ ಕುವೆಂಪು ಅವರ ಕಾವ್ಯವನ್ನು ಚರ್ಚಿಸಲೇ ಇಲ್ಲ. ಪರಂಪರೆಯ ಸಂಬಂಧ ಕುವೆಂಪು ಅವರ ಕಾವ್ಯಕ್ಕೆ ಇಲ್ಲವೆಂದು ಹೇಳಲಿಕ್ಕೆ ಇದ್ದರೆ ಅದಕ್ಕಾದರೂ ಉಲ್ಲೇಖಿಸುವುದು ಅವಶ್ಯವಿತ್ತು. ಅಥವಾ ಅದು ಕಾವ್ಯವೇ ಅಲ್ಲವೆಂಬುದು ಅವರ ಅಭಿಪ್ರಾಯವೋ? (776–ಪುಟ: 95)

ಹೀಗೆ ಒಬ್ಬ ಲೇಖಕನನ್ನೇ ವಿಮರ್ಶೆಗೆ ಎತ್ತಿಕೊಳ್ಳದೆ ಅಲಕ್ಷಿಸುವ ಪ್ರವೃತ್ತಿಯೂ ನಮ್ಮ ವಿಮರ್ಶೆಯಲ್ಲಿ ಇದೆ. ಈ ಅಲಕ್ಷ್ಯದ ಹಿಂದೆ ಕೇವಲ ಸಾಹಿತ್ಯಕವಾದ ಮಾನದಂಡಗಳು ಮಾತ್ರ ಇವೆಯೋ? ಖಂಡಿತಾ ಇರಲಾರವು. ವಿಮರ್ಶಕನ ಅಭಿರುಚಿ, ಸಾಹಿತ್ಯದ ಕುರಿತ ಕಲ್ಪನೆಗಳು, ಜಾತಿ ರಾಜಕಾರಣ, ತಾನು ಗುರುತಿಸಿಕೊಂಡಿರುವ ಬಳಗ ಅಥವಾ ಗುಂಪಿನ ಜೊತೆಗಿನ ಒಡನಾಟದ ರಾಜಕಾರಣಗಳೆಲ್ಲ ಇಲ್ಲಿ ಆಯ್ಕೆ ಮತ್ತು ಅಲಕ್ಷ್ಯದ ರಾಜಕಾರಣವನ್ನು ಪ್ರಭಾವಿಸುತ್ತವೆ.

ಕೆಲವೊಮ್ಮೆ ವಿಮರ್ಶೆಯು ಒಡಲಲ್ಲೆ ಆಯ್ಕೆ ಮತ್ತು ಅಲಕ್ಷ್ಯತೆಯು ರಾಜಕಾರಣ ಚಲಾವಣೆಯಲ್ಲಿರುತ್ತದೆ. ಕಾವ್ಯದ ಬಗೆಗೆ ಮಾತನಾಡುವಾಗ ಕೆಲ ನಿರ್ದಿಷ್ಟ ಭಾಗಗಳು ಮಾತ್ರವೇ ಆಯ್ಕೆಗೆ ಗುರಿಯಾಗುತ್ತಿರುತ್ತವೆ. ಮತ್ತೆ ಮತ್ತೆ ಉಲ್ಲೇಖಿತವಾಗುತ್ತಿರುತ್ತವೆ. ಮತ್ತು ಕೆಲವೊಮ್ಮೆ ಕೆಲವು ನಿರ್ದಿಷ್ಟ ಕವಿತೆಗಳು ಮಾತ್ರವೇ ವಿಮರ್ಶೆಗೆ ಒಳಗಾಗುತ್ತ ಮಿಕ್ಕವು ಗಮನದ ಆಚೆಗೆ ಹೋಗಿಬಿಡುತ್ತವೆ. ಇಲ್ಲೆಲ್ಲ ಆಯ್ಕೆ ಮತ್ತು ಅಲಕ್ಷ್ಯಕ್ಕೆ ಶ್ರೇಷ್ಠತೆಯ ಕಲ್ಪನೆಯಷ್ಟೆ ಅಲ್ಲದೆ; ಪ್ರಮೇಯಗಳಿಗೆ ನಿದರ್ಶನವಾಗಬಲ್ಲ ಸಾಹಿತ್ಯದ ಗುಣ; ನೆನಪಿಡಲು ಅನುಕೂಲವಾಗಬಲ್ಲ ನಾದ-ಲಯಗಾರಿಕೆ; ವಿಮರ್ಶಕನ ದೃಷ್ಟಿಕೋನಗಳ ಬಿಂಬರೂಪದಂತೆ ಇರುವ ಸಾಹಿತ್ಯ ಭಾಗಗಳ ಗುಣ ಇತ್ಯಾದಿಗಳು ಕಾರಣವಾಗುತ್ತವೆ. ವಿಮರ್ಶೆಯ ಆಯ್ಕೆ ಮತ್ತು ಸಂಯೋಜನೆಯ ಹಿಂದೆ ಹೀಗೆ ಹಲವು ಮೆಕೆನಿಸಮ್ಮುಗಳು ಕೆಲಸ ಮಾಡಬಹುದು.

ಕುವೆಂಪು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣದ ಇನ್ನೊಂದು ದೊಡ್ಡ ಲೋಕವೇ ಇದೆ. ಅದು ಸಂಪಾದನಾ ರೂಪಿ ವಿಮರ್ಶೆಯಲ್ಲಿ ಕಾಣುವ ರಾಜಕಾರಣದ ಲೋಕ. ಇದು ಆಯ್ದ ಕವಿತೆಗಳು, ಕಥಾ ಸಂಕಲನಗಳು, ಪ್ರಬಂಧಗಳು, ನಾಟಕಗಳು, ವಿಚಾರ ಬರಹಗಳು, ಕಾವ್ಯಭಾಗಗಳು ಇತ್ಯಾದಿಗಳಿಗೆ ಸಂಬಂಧಿಸಿದ ಚರ್ಚೆ. ಮತ್ತು ವಿಮರ್ಶಾ ಲೇಖನಗಳ ಸಂಪಾದನೆಗಳಿಗೆ ಸಂಬಂಧಿಸಿದ ಚರ್ಚೆ.

ಕುವೆಂಪು ಅವರ ಕವಿತೆಗಳನ್ನು ಆಯ್ದು ಸಂಗ್ರಹಮಾಡಿ ಅದಕ್ಕೆ ಪ್ರಸ್ತಾವನೆ ಬರೆದು ಓದುಗರಿಗೆ ಒದಗಿಸುವ ಕೆಲಸಗಳು ಸಾಕಷ್ಟು ನಡೆದಿವೆ. ಶೈಕ್ಷಣಿಕ ಉದ್ದೇಶಗಳಿಗು ಇಂತಹ ಕೆಲಸಗಳು ಸಾಕಷ್ಟು ನಡೆದಿವೆ. ಇಂಥ ಕಡೆ ಇರುವ ಆಯ್ಕೆ ಮತ್ತು ಅಲಕ್ಷ್ಯಗಳ ರಾಜಕಾರಣವೇನು? ಕವಿತೆಗಳಿಗೆ ಇರುವ ವೈಚಾರಿಕ ನೆಲೆಗಟ್ಟು, ತರಗತಿ ಚರ್ಚೆಗೆ ಅನುಕೂಲವಾಗಬಹುದಾದ ಕವಿತೆಯ ಅಕಾಡೆಮಿಕ್ ಗುಣ, ಜಾತಿ-ವರ್ಗ ವಿವಾದಗಳಿಲ್ಲದ ಸಮನ್ವಯತೆ-ಸರ್ಕಾರಿ ಗುಣ ಇತ್ಯಾದಿಗಳು ಪಠ್ಯದೃಷ್ಟಿಯ ಆಯ್ಕೆಗಳ ಹಿಂದೆ ಕೆಲಸ ಮಾಡಿವೆ. ಅಲ್ಲದೆ ಎಲ್ಲ ಆಯ್ಕೆಗಳಲ್ಲಿಯೂ ಇರುವಂತೆ ಇಂಥಲ್ಲಿಯೂ ಆಯ್ಕೆಗಾರರ ಅಭಿರುಚಿಗಳು ಕೆಲಸ ಮಾಡಿವೆ. ಅಲ್ಲದೆ ಈ ಆಯ್ಕೆಗಳ ಹಿಂದೆ ಶ್ರೇಷ್ಠತೆ, ಪ್ರಾತಿನಿಧಿಕತೆ, ಪ್ರಮುಖ ಅಪ್ರಮುಖ ಕವನಗಳು ಎಂಬ ತಿಳುವಳಿಕೆ ಇತ್ಯಾದಿಗಳೂ ಕೆಲಸ ಮಾಡಿವೆ. ಶೈಕ್ಷಣಿಕವಾದ ಕತಾಸಂಕಲನಗಳಲ್ಲಂತೂ ಕುವೆಂಪುಗೆ ಪ್ರಾತಿನಿಧ್ಯ ಸಿಕ್ಕಿರುವುದು ತೀರಾ ಕಡಿಮೆ. ಕವಿಯಾಗಿ, ವಿಚಾರವಾದಿಯಾಗಿ ಕಾದಂಬರಿಕಾರರಾಗಿ ಕುವೆಂಪುವನ್ನು ನೋಡಿರುವ ನಮ್ಮ ವಿಮರ್ಶಾ ಸಂಸ್ಕೃತಿ ಕುವೆಂಪುವನ್ನು ಕತೆಗಾರರಾಗಿ ಗಂಭೀರವಾಗಿ ಪರಿಗಣಿಸಿಲ್ಲ. ಒಂದೊಂದು ಪ್ರಕಾರಕ್ಕೂ ಶ್ರೇಷ್ಠರಾದ ಲೇಖಕರ ವಲಯವೊಂದನ್ನು ಕಟ್ಟುವ ರಾಜಕಾರಣವು ಶೈಕ್ಷಣಿಕ ಆಯ್ದ ಸಂಕಲನಗಳಲ್ಲಿ ಇರುವುದನ್ನು ಕಾಣಬಹುದು. ಕುವೆಂಪು ಕತೆಗಳನ್ನು ಆಯ್ಕೆ ಮಾಡದೇ ಇರುವುದೂ ಕೂಡ ಅವರನ್ನು ಕೆಲವು ಪ್ರಕಾರಗಳಲ್ಲಿ ಮಾತ್ರ ಶ್ರೇಷ್ಠರೆಂದು ಭಾವಿಸುವ ಭಾವನೆಯೇ ಆಗಿದೆ. ಇಡೀ ಆಧುನಿಕ ಕನ್ನಡ ಸಾಹಿತ್ಯದ ಭಿತ್ತಿ ಇಲ್ಲಿ ಆಯ್ಕೆಯ ಹಿನ್ನೆಲೆಗೆ ಕೆಲಸ ಮಾಡಿರುತ್ತದೆ. ಅಲ್ಲದೆ ಒಮ್ಮೆ ಒಂದು ಪ್ರಕಾರದಲ್ಲಿ ಓದಿಗೆ ಗುರಿಯಾಗುವ ಲೇಖಕ ಇನ್ನೊಮ್ಮೆ ಇನ್ನೊಂದು ಕಡೆ ಓದಿಗೆ ಗುರಿಯಾಗುವ ಅಗತ್ಯವಿಲ್ಲ. ಎಲ್ಲ ಲೇಖಕರಿಗೂ ಪ್ರಾತಿನಿಧ್ಯ ಸಿಕ್ಕಬೇಕು ಎಂಬ ಪ್ರಾತಿನಿಧಿಕ ದೃಷ್ಟಿ ಕೂಡ ಇಂತಹ ಶೈಕ್ಷಣಿಕ ಆಯ್ಕೆಗಳಲ್ಲಿ ಕೆಲಸ ಮಾಡಿರಬಹುದು. ಶ್ರೇಷ್ಠತೆ ಮತ್ತು ಪ್ರಜಾಪ್ರಭುತ್ವವಾದಿ ಪ್ರತಿನಿಧೀಕರಣದ ಸಂಘರ್ಷದ ರಾಜಕಾರಣವಿದು.

ಕಾವ್ಯಕ್ಕೆ ಸಂಬಂಧಿಸಿದಂತೆ ಶೈಕ್ಷಣಿಕ ಉದ್ದೇಶದ ಹೊರತಾಗಿಯೂ ಹಲವಾರು ಆಯ್ದ ಸಂಗ್ರಹಗಳು ಪ್ರಕಟವಾಗಿವೆ. ಆಯ್ದ ಕುವೆಂಪು ಕವನಗಳು (2491-ಸಿ.ಪಿ.ಕೆ.), ಕುವೆಂಪು ಅವರ ಆಯ್ದ ಕವಿತೆಗಳು (2544-ಸುಬ್ಬಣ್ಣ ನೆನಪಿನ ಮೊದಲ ಓದು), ಕುವೆಂಪು ಗದ್ಯಸಂಚಯ (ಸಹ್ಯಾದ್ರಿ ಪ್ರಕಾಶನ), ವಿಚಾರಕ್ರಾಂತಿಗೆ ಕುವೆಂಪು ಕರೆ (2749), ರಾಮಾಯಣದರ್ಶನಂ ವಚನಸಾರ ಸಂಗ್ರಹ

(2755), ದಾಂಪತ್ಯದರ್ಶನದ ನಾಲ್ಕು ಮಹಾಕವನಗಳು, ಸೆಲೆಕ್ಟೆಡ್ ಪೊಯಮ್ಸ್ ಆಫ್ ಕುವೆಂಪು (2805) ಹೀಗೆ ಹಲವು ಸಂಗ್ರಹಗಳನ್ನು ಉದಾಹರಣೆ ಕೊಡಬಹುದು. ಈ ಎಲ್ಲ ಸಂಗ್ರಹಗಳ ಹಿಂದೆ ಇರುವ ಮುಖ್ಯವಾದ ಮಾನದಂಡ ಶ್ರೇಷ್ಠತೆ ಮತ್ತು ಪ್ರಾತಿನಿಧಿಕತೆಗಳು. ಯಾವುದು ಮುಖ್ಯ ಯಾವುದು ಅಮುಖ್ಯ; ಯಾವುದು ಪ್ರಸ್ತುತ ಯಾವುದು ಅಪ್ರಸ್ತುತ ಎಂಬ ಮಾನದಂಡಗಳೂ ಈ ಆಯ್ಕೆಗಳಲ್ಲಿ ಕೆಲಸಮಾಡಿವೆ.

ಇಷ್ಟಕ್ಕೂ ಆಯ್ದ ಸಂಗ್ರಹಗಳು ಯಾಕೆ ಸೃಷ್ಟಿಯಾಗುತ್ತವೆ. ಸಾಹಿತಿ ಬರೆದ ಎಲ್ಲವೂ ಚಿನ್ನ ಅಲ್ಲ. ಬರೆದದ್ದೆಲ್ಲವೂ, ಪ್ರಕಟವಾದದ್ದೆಲ್ಲವೂ ಅಧ್ಯಯನಾರ್ಹವಲ್ಲ. ಅದರಲ್ಲಿ ಯಾವುದು ಬೇಕೋ, ಎಷ್ಟು ಬೇಕೋ ಅದನ್ನು ಆರಿಸಿಕೊಂಡು ಓದಿದರೆ ಸಾಕು ಎಂಬ ಗ್ರಹೀತಗಳು ಇಲ್ಲಿ ಕೆಲಸಮಾಡಿವೆ. ಈ ಗ್ರಹೀತಗಳು ಯಾವುದನ್ನು ಮುಖ್ಯವೆಂದು; ಯಾವುದನ್ನು ಅಮುಖ್ಯವೆಂದು; ಪ್ರಸ್ತುತ ಅಪ್ರಸ್ತುತವೆಂದು, ಆಯ್ಕೆಗೆ ಅರ್ಹ ಮತ್ತು ಅಲ್ಲವೆಂದು ಭಾವಿಸುತ್ತವೆ ಎಂಬುದರಲ್ಲೆ ಸಾಂಸ್ಕೃತಿಕ ರಾಜಕಾರಣವು ಅಡಗಿರುತ್ತದೆ. ಪಠ್ಯದ ಪ್ರಮಾಣೀಕರಣ ಮತ್ತು ಪ್ರಮಾಣ ಪಠ್ಯಗಳ ನಿರ್ಮಾಣ ಕ್ರಿಯೆಗಳ ಹಿಂದೆ ಇರುವ ಈ ಸಾಂಸ್ಕೃತಿಕ ರಾಜಕಾರಣವು ವರ್ಗರಾಜಕಾರಣ; ಅಭಿರುಚಿ ರಾಜಕಾರಣಗಳಿಂದಲೂ ಕೂಡಿರಬಹುದು. ಆಯ್ದ ಕೃತಿಯ ಪ್ರಕಟಣೆಯ ಉದ್ದೇಶ, ಗಾತ್ರ, ಪ್ರಕಟಣೆಯ ಸನ್ನಿವೇಶಗಳೂ ನಿಯಂತ್ರಣಗಳಾಗಿ ಇಂಥ ಸಂಕಲನಗಳ ಹಿಂದೆ ಕೆಲಸ ಮಾಡಿರಬಹುದು. ಅಲ್ಲದೆ ನಿರ್ಧಿಷ್ಟ ವಲಯ/ವರ್ಗಗಳಿಗೆ ಬೇಕಾಗುವಂತೆ ಸಾಹಿತ್ಯ ಪಠ್ಯಗಳನ್ನು ಆಯ್ದು ಕಟ್ಟುವ ಕೆಲಸಗಳೂ ನಡೆದಿವೆ. ಸೂಕ್ತಿಸಂಗ್ರಹ, ಸಾರ ಸಂಗ್ರಹಗಳು ಇಂತಹದ್ದಕ್ಕೆ ಉದಾಹರಣೆಗಳು ಇಲ್ಲೆಲ್ಲ ಆಯ್ಕೆ ಮತ್ತು ಅಲಕ್ಷ್ಯಗಳ ಹಿಂದೆ ಸಾಹಿತ್ಯ ಸಂಕಲನಕಾರ್ಯದ ಹಿಂದಿನ ಉದ್ದೇಶ–ದೃಷ್ಟಿಕೋನ–ಓದುಗವಲಯಗಳೆಲ್ಲ ಕೆಲಸ ಮಾಡಿವೆ.

ಸಿಪಿಕೆ ಸಂಗ್ರಹದಲ್ಲಿ ನೂರು ಕವಿತೆಗಳಿದ್ದರೆ, ಸುಬ್ಬಣ್ಣ ನೆನಪಿನ ಸಂಗ್ರಹದಲ್ಲಿ 43 ಕವಿತೆಗಳಿವೆ. ಕುವೆಂಪು ಅವರೇ ಸ್ವತಃ ಕಬ್ಬಿಗನ ಕೈಬುಟ್ಟಿ ಎಂಬ ಹೆಸರಿನಲ್ಲಿ ಕವಿತೆಗಳ ಆಯ್ದ ಸಂಕಲನ ಪ್ರಕಟಿಸಿದ್ದಾರೆ. ಅದರಲ್ಲಿ 51 ಕವನಗಳಿವೆ. ಕುವೆಂಪು ಸಂಕಲನದ ಅರ್ಧದಷ್ಟು ಪದ್ಯಗಳು ಸಿಪಿಕೆ ಸಂಕಲನದಲ್ಲಿವೆ. ಸಿಪಿಕೆ ಸಂಕಲನದಲ್ಲಿರುವ ನೂರು ಪದ್ಯಗಳಲ್ಲಿ 14 ಪದ್ಯಗಳನ್ನು ಮಾತ್ರ ಸುಬ್ಬಣ್ಣ ನೆನಪಿನ ಸಂಕಲನದಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ಮೂರೂ ಕಡೆಗಳಲ್ಲಿ ಆಯ್ಕೆಯ ಮಾನದಂಡ, ಅಭಿರುಚಿ, ಶ್ರೇಷ್ಠತೆಯ ಕಲ್ಪನೆ, ಮುಖ್ಯ ಅಮುಖ್ಯತೆಯ ಕಲ್ಪನೆ, ಪ್ರಾತಿನಿಧಿಕತೆಯ ಕಲ್ಪನೆಗಳು ಭಿನ್ನವಾಗಿವೆ. ಅನಿಕೇತನ, ಕೋಗಿಲೆ ಮತ್ತು ಸೋವಿಯತ್ ರಷ್ಯಾ ಇಂತಹ ಕವಿತೆಗಳನ್ನು ಸಿಪಿಕೆ ಆಯ್ಕೆ ಮಾಡಿಲ್ಲ. ಜಯಹೇ ಕರ್ನಾಟಕ ಮಾತೆ, ಸುಗ್ಗಿ ಬರುತಿದೆ, ರೈತನ ದೃಷ್ಟಿ ಇಂತಹ ಕವಿತೆಗಳನ್ನು ಹೆಗ್ಗೋಡಿನವರು ಆಯ್ಕೆ ಮಾಡಿಲ್ಲ. ಅಲ್ಲದೆ ಇವೆರಲ್ಲರ ಕವಿತೆಗಳನ್ನು ಜೋಡಿಸುವ ಕ್ರಮಗಳು ಕೂಡ ಭಿನ್ನವಾಗಿವೆ. ಒಂದೊಂದು ಆಯ್ಕೆಗಳು ಕೂಡ ಒಂದೊಂದು ಓದುಗಳೇ ಆಗಿವೆ.

ಸುಬ್ಬಣ್ಣ ನೆನಪಿನ ಸಂಕಲನದಲ್ಲಿ ಕೊನೆಯಲ್ಲಿ ಕುವೆಂಪು ಅವರ ಮುಖ್ಯ ಕೃತಿಗಳ ಪಟ್ಟಿಯೊಂದನ್ನು ಕೊಡಲಾಗಿದೆ. ಇಲ್ಲಿ 14 ನಾಟಕಗಳಲ್ಲಿ 8ನ್ನು ಮಾತ್ರ ಉಲ್ಲೇಖಿಸಲಾಗಿದೆ. 25ಕ್ಕೂ ಹೆಚ್ಚು ಕವನ ಸಂಕಲನಗಳಲ್ಲಿ 11ನ್ನು ಮಾತ್ರ ಉಲ್ಲೇಖಿಸಲಾಗಿದೆ. ಮುಖ್ಯ ಮತ್ತು ಅಮುಖ್ಯತೆಯ ರಾಜಕಾರಣಗಳು ಇಲ್ಲಿ ಕೆಲಸಮಾಡಿದೆ. ಇಲ್ಲಿ ಯಾರೂ ಮುಖ್ಯರಲ್ಲ ಎನ್ನುವುದು ಒಂದು ಆದರ್ಶತತ್ವವಾಗಿ ಮಾತ್ರ ಕಾಣೆಯಾಗಿದೆ. ಆಯ್ದ ಓದು ಎಂದು ಇವನ್ನು ಕರೆಯಬಹುದು. ಇಂತಹ ಬೇಕಾದುದನ್ನು ಆಯ್ದು ಓದಿಕೊಳ್ಳುವ ಮತ್ತು ಓದಿಗೆ ಒದಗಿಸುವ ಈ 'ಆಯ್ದ ಓದು' ನಮ್ಮ ವಿಮರ್ಶೆಯ ಒಂದು ವಿನ್ಯಾಸವಾಗಿದೆ. ಇದಕ್ಕೆ ಮುಖಾಮುಖಿ ಎಂಬಂತೆ ಸಮಗ್ರ ಓದು ಕೂಡ ಇದೆ.

ಇನ್ನು ಕುವೆಂಪು ಅವರ ಸಮಗ್ರ ಸಂಪಾದನೆಗಳೂ ಪ್ರಕಟವಾಗಿವೆ. ಯಾವುದನ್ನೂ ಬಿಡದ ಎಲ್ಲವನ್ನೂ ಆಯ್ದು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸುವ ಕೆಲಸ ನಡೆದಿದೆ ಮತ್ತು ಇನ್ನೂ ನಡೆಯುತ್ತಿದೆ. (ಸಂ.ಡಾ.ಕೆ.ಸಿ.ಶಿವಾರೆಡ್ಡಿ) ಈಗೀಗ ನಮ್ಮಲ್ಲಿ ಮುಖ್ಯವೆಂದು ನಾವು ಭಾವಿಸುವ ಎಲ್ಲ ಲೇಖಕರ ಸಮಗ್ರ ರಚನೆಗಳನ್ನು ಸಂಪಾದಿಸುವ ಸಂಸ್ಕೃತಿಯು ಚಾಲ್ತಿಗೆ ಬರುತ್ತಿದೆ. ಕುವೆಂಪು ಅವರ ಸಮಗ್ರ ಸಂಪಾದನೆಯ ಹಿಂದೆ ಹೀಗೆ ಮುಖ್ಯ ಲೇಖಕರ ಸಮಗ್ರ ಸಂಪಾದನೆಯ ಸಂಸ್ಕೃತಿ ಮುಖ್ಯವಾಗಿ ಕೆಲಸ ಮಾಡಿದೆ. ನಮಗೆ

ಸಮಗ್ರಗಳು ಬೇಕೇ? ಎಂಬುದು ಒಂದು ಚರ್ಚಾರ್ಹ ಪ್ರಶ್ನೆ. ಅಲ್ಲದೆ ಸಮಗ್ರವೆನ್ನುವುದು ಒಂದು ಕಡೆ ಪರಾಮರ್ಶನಕ್ಕೆ ಇದ್ದರೆ ಯಾರಿಗೆ ಯಾವುದು ಬೇಕೋ ಅದನ್ನು ಪಡೆಯಲು ಒಂದು ಕಡೆ ಸಾಮಗ್ರಿ ಸಿಗುತ್ತದೆ ಎಂಬುದು ಅನುಕೂಲದ ಸಂಗತಿ. ಅಧ್ಯಯನಕಾರರನ್ನು ಬಿಟ್ಟರೆ ಯಾರೂ ಸಮಗ್ರವಾಗಿ ಓದುವುದಿಲ್ಲ. ಅಲ್ಲದೆ ಒಟ್ಟಿಗೆ ಒಬ್ಬ ಲೇಖಕನ ರಚನೆಗಳನ್ನು ನೋಡಲು ವಿಮರ್ಶೆಗೆ ಅವು ಒದಗುವುದು ಕೂಡ ಒಂದು ಅನುಕೂಲವೇ ಆಗಿದೆ.

ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣದಲ್ಲಿ ಇನ್ನೊಂದು ಲೋಕ ಕೂಡ ಇದೆ. ಅದು ಸೂಕ್ತಿ ರೂಪಿ ವಿಮರ್ಶೆಯ ಲೋಕ. ದರ್ಶನ ರೂಪಿ, ಸೂಕ್ತಿ ರೂಪಿ, ಸುಭಾಷಿತ ರೂಪಿ ಮಾತುಗಳನ್ನು; ತತ್ವರೂಪಿ, ನೀತಿ, ಗಾದೆ, ನುಡಿಗಟ್ಟು ರೂಪಿ ವಿಚಾರ ರೂಪಿ ಮಾತುಗಳನ್ನು ಆಯ್ಕೆ ಮಾಡಿ ಒಂದು ಕಡೆ ಓದುಗರ ಅವಲೋಕನಕ್ಕೆ ಸಂಪಾದಿಸಿ ಕೊಡುವುದು ನಮ್ಮಲ್ಲಿ ಸಾಕಷ್ಟು ನಡೆದಿದೆ. ಇಂತಹ ಸಂಪಾದಿತ ಆಯ್ಕೆಗಳಲ್ಲಿ ಮಾತುಗಳ ಸೂಕ್ತಿ, ಸುಭಾಷಿತ, ನೀತಿ, ತತ್ವ ಗುಣವೇ ಆಯ್ಕೆಯ ಮಾನದಂಡವಾಗಿದೆ. ರಸಾಸ್ವಾದನೆಗಾಗಿ ಸಾಹಿತ್ಯವನ್ನು ಓದದೆ ನೈತಿಕ ನೆಲೆಯಿಂದ ಸಾಹಿತ್ಯವನ್ನು ನೀತಿ ತತ್ವಗಳಿಗಾಗಿಯೆ ಓದುವ ಒಂದು ಓದು ವಿಧಾನ ನಮ್ಮಲ್ಲಿದೆ. ಸಾಹಿತ್ಯದ ಆಶಯ ಇಲ್ಲವೆ ತಾತ್ವಿಕತೆಯು ನಿರ್ದಿಷ್ಟವಾದ ಯಾವೋ ಕೆಲವು ಮಾತುಗಳಲ್ಲಿ ಅಡಗಿರುತ್ತದೆ. ಮೌಲ್ಯಾತ್ಮಕ ನೀತಿಯೇ ಸಾಹಿತ್ಯದ ನಿಜವಾದ ಆಶಯವಾಗಿರುತ್ತದೆ ಎಂದು ಇಂತಹ ಓದು ಭಾವಿಸುತ್ತದೆ. ಇಂತಹ ಓದನ್ನು ಅಪೇಕ್ಷಿಸುವ ಓದುಗರ ಓದಾಣಿಕೆಗೆ ಸಾಹಿತ್ಯದಲ್ಲಿ ಅಡಗಿಕೊಂಡ ನೀತಿ, ತತ್ವಗಳನ್ನು ಬಿಡಿಸಿ ಇಡುವ ವಿಮರ್ಶೆಯೊಂದು ಹೀಗೆ ಸೂಕ್ತಿರೂಪಿ ಸಂಪಾದನೆಯಾಗಿ ಸಂಭವಿಸಿದೆ. ಆ ಮೂಲಕ ಇಂತಹ ಸೂಕ್ತಿ ಸಂಪಾದನಾ ವಿಮರ್ಶೆಯು ಕೂಡ ತಾನೊಂದು ಸೂಕ್ತಿರೂಪಿ ಓದು ಆಗಿ ಸಂಭವಿಸಿದೆ. ಹೀಗೆ ಆಯ್ಕೆ ಮತ್ತು ಅಲಕ್ಷತೆಯ ರಾಜಕಾರಣದಲ್ಲಿ ವಿಮರ್ಶೆಯ ಸ್ವರೂಪವನ್ನು ರೂಪಿಸುವಲ್ಲಿ ಓದಿನ ದಾರಿಗಳು ಮತ್ತು ಸಹೃದಯರ ಅಪೇಕ್ಷೆಗಳು ಕೂಡ ಸಕ್ರಿಯವಾಗಿ ಕೆಲಸ ಮಾಡಿವೆ.

ಹೀಗಾಗಿ ಆಯ್ಕೆ ಮತ್ತು ಅಲಕ್ಷತೆಯ ರಾಜಕಾರಣವು ನಮ್ಮ ವಿಮರ್ಶೆಯನ್ನು ಬಾಧಿಸಿರುವ ಒಂದು ವಿದ್ಯಮಾನವೂ, ವಿಮರ್ಶೆಯ ಆಚರಣೆಯಲ್ಲಿ ಅಂತರ್ಗತವಾಗಿರುವ ಒಂದು ಮನೋಧರ್ಮವೂ, ವಿಮರ್ಶೆಯ ಒಂದು ವಿನ್ಯಾಸವೂ, ಲಕ್ಷಣವೂ ಆಗಿದೆ.

### 7.2. ಸಾಂದರ್ಭಿಕತೆಯ ರಾಜಕಾರಣ

ಯಾವ ವ್ಯಕ್ತಿಯೂ ಏಕಾಂಗಿ ದ್ವೀಪ ಅಲ್ಲ. ವ್ಯಕ್ತಿಗಳ ವರ್ತನೆಗಳಿಗೆ ಅವರದೇ ಆದ ಜಾತಿ, ಗುಂಪು, ಬಳಗ, ಕಾಲ, ದೇಶ, ಸಮಯ, ಸನ್ನಿವೇಶ, ಕಾರಣಗಳು ಇದ್ದೇ ಇರುತ್ತವೆ. ವಿಮರ್ಶೆಗೂ ಇವೆಲ್ಲ ಅನ್ವಯಿಸುತ್ತವೆ. ಕಾಲದಿಂದ, ಸಂದರ್ಭಗಳಿಂದ, ಸಂಬಂಧಗಳಿಂದ, ಮನುಷ್ಯಪ್ರಾಣಿ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಒಂದಲ್ಲ ಒಂದು ಸಮಯ ಸಂದರ್ಭಗಳ, ಸಂಬಂಧಗಳ, ಕಾರಣ-ಉದ್ದೇಶಗಳ ಒತ್ತಡಗಳು ಒಂದಲ್ಲ ಒಂದು ರೀತಿ ಎಲ್ಲ ಕಾಲಕ್ಕೂ ವಿಮರ್ಶಕನ ಆಲೋಚನಾ ವಿಧಾನವನ್ನು ನಿಯಂತ್ರಿಸುತ್ತಲೇ ಇರುತ್ತವೆ. ಬಾಧಿಸುತ್ತಲೇ ಇರುತ್ತವೆ. ಹಾಗಾಗಿ ಇವೆಲ್ಲ ವಿಮರ್ಶೆಯ ಸ್ವರೂಪದ ಮೇಲೆ ಪ್ರಭಾವ ಬೀರಿಯೇ ಬೀರುತ್ತವೆ. ಹಾಗಾಗಿ ವಿಮರ್ಶೆಯಲ್ಲಿ ವಸ್ತುನಿಷ್ಠತೆ ಇರುತ್ತದೆ ಎಂಬುದು ಒಂದು ಆದರ್ಶದ ಕಲ್ಪನೆ. ವಿಮರ್ಶೆಯು ಯಾವ ಕಾಲಕ್ಕೂ ವಸ್ತುನಿಷ್ಠವಾಗಿ ಇರಲು ಸಾಧ್ಯವಿಲ್ಲ. ಅಲ್ಲದೆ ಯಾರೇ ಆಗಲಿ ಪಠ್ಯವನ್ನು ನಿರ್ವಾತದಲ್ಲಿ ಓದಲು ಆಗವುದಿಲ್ಲ. ಕೆಲವೊಮ್ಮೆ ಸಂಸ್ಕೃತಿಯ ಚೌಕಟ್ಟಿನಲ್ಲಿ, ಭಾಷೆಯ ಚೌಕಟ್ಟಿನಲ್ಲಿ, ಅಂತರ್‌ಭಾಷೀಯ, ಜಾಗತಿಕ ಪಠ್ಯ-ಸನ್ನಿವೇಶಗಳ ಜೊತೆಗೆ ಮುಖಾಮುಖಿ ಮಾಡುತ್ತ ಪಠ್ಯಗಳನ್ನು ಓದುತ್ತೇವೆ. ಹೀಗೆ ಓದುವಾಗ ತೌಲನಿಕತೆ ಸಾಮಾನ್ಯವಾಗಿ ವಿಧಾನವಾಗಿ ಬರುತ್ತಿರುತ್ತದೆ. ಇಲ್ಲಿ ಭಿನ್ನ ಭಿತ್ತಿಗಳ ಹಿನ್ನೆಲೆಯ ಓದು, ಭಿನ್ನ ರೀತಿಯ ಸಂಯೋಜನಾ ವಿಧಾನ, ಅಂತರ್‌ಪಠ್ಯಗಳ ಮುಖಾಮುಖಿ ವಿಧಾನ ಇತ್ಯಾದಿ ವಿಧಾನಗಳು ಆಗಾಗ ಪ್ರಯೋಗವಾಗುತ್ತಿರುತ್ತವೆ.

ಸಾಹಿತ್ಯವೇ ಸಾಂದರ್ಭಿಕ ರಾಜಕಾರಣದ ಕೂಸು ಎಂಬ ನಂಬಿಕೆ ನಮ್ಮಲ್ಲಿದೆ. ಈ ನಂಬಿಕೆಯುಳ್ಳ ವಿಮರ್ಶೆಯು ಕವಿಯ ಸಾಹಿತ್ಯ ಸ್ವರೂಪ, ಆಲೋಚನೆ, ದೃಷ್ಟಿಕೋನಗಳ ಮೇಲೆ ಆಗಿರಬಹುದಾದ ಪ್ರಭಾವಗಳನ್ನು ಕೊಂಡುಕೊಳ್ಳುವ ಕಡೆ ಹೆಚ್ಚು ಆಸಕ್ತಿ ವಹಿಸುತ್ತದೆ. ಕವಿಯು ತಾನು ಬದುಕುತ್ತಿರುವ ಕಾಲ-ಕಾಲಧರ್ಮ, ಪರಿಸರ (ಭೌಗೋಳಿಕ ಪರಿಸರ ಮತ್ತು ಸಾಸ್ಕೃತಿಕ ಪರಿಸರ)ಗಳು ಕವಿಯ ಪ್ರಜ್ಞೆ ಮತ್ತು

ಸಾಹಿತ್ಯ ಸೃಷ್ಟಿಯ ಮೇಲೆ ತಮ್ಮದೇ ಪ್ರಭಾವಗಳನ್ನು ಬೀರುತ್ತವೆ; ತಾನು ಬಾಳಿದ ಕಾಲ ಮತ್ತು ಸಂಸ್ಕೃತಿಗೆ ಇರುವ ಮಿತಿಗಳು ಆತನ ಕೃತಿಗಳಿಗೂ ತಗಲಿಕೊಳ್ಳುತ್ತವೆ; ಸಾಹಿತ್ಯವು ಸಂಸ್ಕೃತಿ, ಕಾಲಮಾನದ ಅಗತ್ಯ ಹಾಗೂ ಒತ್ತಡಗಳ ಫಲಿತವಾಗಿಯೆ ಸೃಷ್ಟಿಯಾಗುತ್ತದೆ; ಸಾಹಿತಿ ಏನಿದ್ದರೂ ಕಾಲಮಾನ ಮತ್ತು ಸಂಸ್ಕೃತಿಯ ಒಂದು ಸಾಧನ ಮಾತ್ರ ಎಂಬಿತ್ಯಾದಿ ನಂಬಿಕೆಗಳು ನಮ್ಮಲ್ಲಿವೆ. ಸಾಹಿತ್ಯದ ಅನುಸಂಧಾನ ಮತ್ತು ಸಂಗೋಪನೆಗಳು ತಮ್ಮದೇ ಆದ ಸಾಂಸ್ಕೃತಿಕ-ಸಾಂದರ್ಭಿಕ ರಾಜಕಾರಣಗಳಿಂದ ರೂಪಗೊಳ್ಳುತ್ತಿರುತ್ತವೆ ಎಂಬಂತೆಯೇ ಸಾಹಿತ್ಯದ ಸೃಷ್ಟಿಯೂ ಚಾರಿತ್ರಿಕ ಸಂದರ್ಭಗಳಿಂದ ನಿಯಂತ್ರಿತಗೊಳ್ಳುತ್ತಿರುತ್ತದೆ ಎಂದೂ ನಮ್ಮ ವಿಮರ್ಶೆಯು ನಂಬುತ್ತದೆ. ಇಂತಹ ನಂಬಿಕೆಯಲ್ಲಿ ಸಾಹಿತ್ಯವು ಚಾರಿತ್ರಿಕ ಹಿನ್ನೆಲೆಗಳಿಂದ ವಿಮರ್ಶೆಗೆ ಗುರಿಯಾಗುತ್ತಿರುತ್ತದೆ. ಇಲ್ಲೆಲ್ಲ ಸಾಹಿತ್ಯ ಮತ್ತು ಸಾಹಿತ್ಯವು ರಚಿತವಾದ ಸಂದರ್ಭಗಳ ನಡುವಿನ ಸಂಬಂಧಗಳೇ ವಿಮರ್ಶೆಯ ಸ್ವರೂಪವನ್ನು ನಿರ್ಧರಿಸುತ್ತಿರುತ್ತವೆ.

ಸಾಂದರ್ಭಿಕ ರಾಜಕಾರಣ ಮತ್ತು ಅನ್ವಯೀಕರಣ ಪ್ರವೃತ್ತಿಗಳ ಜೊತೆ ಒಂದು ಅನ್ಯೋನ್ಯ ಸಂಬಂಧ ಇದೆ. ನಮ್ಮ ಹಲವಾರು ವಿಚಾರಸಂಕಿರಣಗಳು ಒಂದೊಂದು ನಿರ್ದಿಷ್ಟ ದೃಷ್ಟಿಕೋನಗಳಿಗೆ ಬದ್ಧವಾಗಿ ರೂಪಿತಗೊಂಡಿರುತ್ತವೆ. ಉದಾಹರಣೆಗೆ ಮೂಡಬಿದರೆಯ ಆಳ್ವಾಸ್ ಕಾಲೇಜಿನಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ರಾಷ್ಟ್ರೀಯತೆಯ ನಿರ್ವಚನದ ಹಿನ್ನೆಲೆಯಲ್ಲಿ ಕುವೆಂಪು ವಾಙ್ಮಯವನ್ನು ನೋಡಲಾಗಿದೆ. (2745) ಕುವೆಂಪು ಅವರ ಎಲ್ಲ ಸಾಹಿತ್ಯವನ್ನೂ ರಾಷ್ಟ್ರ ನಿರ್ವಚನದ ಹಿನ್ನೆಲೆಯಲ್ಲಿ ನೋಡಬಹುದೇ? ಕುವೆಂಪು ರಾಮಾಯಣ ದರ್ಶನವನ್ನೂ ರಾಷ್ಟ್ರ ನಿರ್ವಚನ ಎಂಬ ದೃಷ್ಟಿಕೋನದ ಕನ್ನಡಕದಿಂದ ಇಲ್ಲಿ ನೋಡಲಾಗಿದೆ. ಕೆಲವು ವಿಚಾರಸಂಕಿರಣಗಳಲ್ಲಿ ಕೆಲವು ನಿರ್ದಿಷ್ಟ ಕನ್ನಡಕಗಳನ್ನು ಇಟ್ಟುಕೊಳ್ಳುವುದರಿಂದ ಕೆಲವೊಮ್ಮೆ ಲಾಭವೂ ಕೆಲವೊಮ್ಮೆ ಮಿತಿಯೂ ಉಂಟಾಗಿದೆ. ಕನ್ನಡಕಗಳನ್ನು ಹಾಕಿಕೊಳ್ಳುವ ವಿಚಾರ ಬರಿ ವಿಚಾರಸಂಕಿರಣಗಳಿಗೆ ಸಂಬಂಧಿಸಿದ ಮಾತಷ್ಟೇ ಅಲ್ಲ. ಕೆಲವು ಸಾಮಾಜಿಕ, ಸಾಂಸ್ಕೃತಿಕ ಸಂದರ್ಭಗಳೂ ಕೂಡ ಕೆಲವೊಮ್ಮೆ ಕೆಲವು ಕನ್ನಡಕಗಳನ್ನು ವಿಮರ್ಶೆಯು ತೊಡಲು ಒತ್ತಡ ನಿರ್ಮಿಸಬಹುದು. ನಮ್ಮ ವಿಮರ್ಶೆಯಲ್ಲಿ ಹೀಗೆ ಎಷ್ಟೋ ವೇಳೆ ಆಗಿದೆ. ಯಾವುದಾದರೂ ವಿಚಾರಸಂಕಿರಣಕ್ಕೊ, ಅಭಿನಂದನಾ ಸಮಾರಂಭಕ್ಕೊ, ಶತಮಾನೋತ್ಸವಕ್ಕೊ, ಪುಸ್ತಕ ಬಿಡುಗಡೆ ಕಾರ್ಯಕ್ರಮಕ್ಕೊ, ಪ್ರಶಸ್ತಿ ವಿತರಣಾ ಸಮಾರಂಭಕ್ಕೊ, ಪತ್ರಿಕೆಗಾಗಿಯೋ, ಪುಸ್ತಕಕ್ಕಾಗಿಯೋ, ಭಾಷಣಕ್ಕಾಗಿಯೋ, ಯಾವುದಾದರೂ ಯೋಜನೆಗಾಗಿಯೋ, ಸಂಶೋಧನಾ ಅಧ್ಯಯನಕ್ಕಾಗಿಯೋ, ರೂಪಾಂತರಕ್ಕಾಗಿಯೋ, ಓದಿಗಾಗಿಯೋ, ಚರ್ಚೆಗಾಗಿಯೋ, ಸಾಂಸ್ಕೃತಿಕವಾದ ಅನುಸಂಧಾನಕ್ಕಾಗಿಯೋ ಹೀಗೆ ಯಾವುದಾದರೂ ಒಂದು ಕಾರಣಕ್ಕಾಗಿ ಅಥವಾ ಸಂದರ್ಭಕ್ಕಾಗಿ ನಮ್ಮಲ್ಲಿ ವಿಮರ್ಶೆ ಸೃಷ್ಟಿಯಾಗುತ್ತದೆಯೇ ವಿನಾ ವಿಮರ್ಶೆಗಾಗಿ ವಿಮರ್ಶೆ ಸೃಷ್ಟಿಯಾಗುವುದಿಲ್ಲ. ವಿಮರ್ಶೆಯನ್ನೇ ಉದ್ದೇಶವಾಗಿ ಇರಿಸಿಕೊಂಡ ವಿಮರ್ಶೆಯು ಸೃಷ್ಟಿಯಾಗುವುದು ತೀರಾ ಕಡಿಮೆ. ಪುಸ್ತಕ ಪ್ರಕಟಣೆಗಾಗಿ-ವಿದ್ಯಾರ್ಥಿಗಳು ಮುಂತಾದ ಓದುಗರ ಅವಶ್ಯಕತೆಗಾಗಿ ಕೆಲವೊಮ್ಮೆ ವಿಮರ್ಶೆ ಸೃಷ್ಟಿಯಾಗಬಹುದಾದರೂ ಅದು ಕೂಡ ಹಲವು ಒತ್ತಡಗಳಿಗಾಗಿಯೆ ಸೃಷ್ಟಿಯಾಗಿರುತ್ತದೆ. (ಇಷ್ಟಾಗಿಯೂ ಕೆಲವು ವಿನಾಯಿತಿಗಳು ಇರಬಹುದು.) ಇಂತಹ ಸಾಂದರ್ಭಿಕವಾದ ಒತ್ತಡಗಳಿಗು ಮತ್ತು ವಿಮರ್ಶೆಗೂ ನಡುವಿನ ಅಂತರ್‌ಪ್ರಭಾವ, ಪರಿಣಾಮಗಳನ್ನೆ ಸಾಂದರ್ಭಿಕತೆಯ ರಾಜಕಾರಣ ಎನ್ನಬಹುದು.

ಕುವೆಂಪು ಸಾಹಿತ್ಯ ಮತ್ತು ನವ್ಯವಿಮರ್ಶೆ ಲೇಖನವನ್ನು ಎನ್.ಬೋರಲಿಂಗಯ್ಯನವರು ಸಹ್ಯಾದ್ರಿ ಎಂಬ ಕುವೆಂಪು ಅಭಿನಂದನಾ ಗ್ರಂಥಕ್ಕಾಗಿ ಬರೆದಿದ್ದಾರೆ. ಇಲ್ಲಿ ಸಮಯ, ಸಂದರ್ಭ, ಸಂಬಂಧಗಳೆಲ್ಲ ವಿಮರ್ಶೆಯ ಸ್ವರೂಪವನ್ನು ನಿತಂತ್ರಿಸಿವೆ ಅಭಿನಂದನೆ ಮಾಡುವಾಗ ಯಾವ ಲೇಖಕರಿಂದ ಬರೆಸಬೇಕು, ಮತ್ತು ವಿಮರ್ಶಾ ಲೇಖನವು ಹೇಗಿರಬೇಕು ಎಂಬ ನಂಬಿಕೆಗಳು ನಮ್ಮಲ್ಲಿ ಇದ್ದೇ ಇವೆ. ಯಾರೂ ಅಭಿನಂದನೆಗಾಗಿ ಬರೆಯುವವರು ಕಟುವಾಗಿ, ವಸ್ತುನಿಷ್ಠವಾಗಿ ಬರೆಯಲಾರರು. ಅಷ್ಟೇ ಅಲ್ಲ ತಾವು ಕವಿಯನ್ನು ತುಂಬು ಗೌರವದಿಂದ ಕಾಣುವಾಗ, ಕವಿಯ ಆಪ್ತರ ಬಳಗದೊಂದಿಗೆ ಗುರ್ತಿಸಿಕೊಂಡಿದ್ದಾಗ, ತಮ್ಮ ಲೇಖನವನ್ನು ಕವಿಯ ಅಭಿನಂದನೆಗಾಗಿ ಅರ್ಪಿಸಲಾಗುತ್ತಿದೆ-ಲೇಖಕರೇ ಸ್ವತಃ ಅದನ್ನು ಓದಬಹುದು ಎಂಬ ಎಚ್ಚರ ಇದ್ದಾಗ ತಮಗೆ ಗೊತ್ತಿಲ್ಲದಂತೆಯೇ ಅಪ್ರಜ್ಞಾಪೂರ್ವಕವಾಗಿ ಬರವಣಿಗೆಯು ಪ್ರಶಂಸಾತ್ಮಕ ಆಗಬಹುದಾದ ಸಾಧ್ಯತೆ ಹೆಚ್ಚಾಗಿ ಇರುತ್ತದೆ. ಇಂತಹ ಸಾಧ್ಯತೆಗೆ ಸಾಂದರ್ಭಿಕತೆಯ ರಾಜಕಾರಣವೇ

ಕಾರಣವಾಗಿರುತ್ತದೆ. ವಿಚಾರಸಂಕಿರಣಗಳಲ್ಲಿ ಭಾಷಣ ರೂಪಿಯಾಗಿ ಸೃಷ್ಟಿಯಾಗುವ ವಿಮರ್ಶೆಯು ಖಂಡಿತಾ ನೆರೆದಿರುವ ಸಭಾಸದರಿಂದ ಸ್ವಲ್ಪಮಟ್ಟಿಗಾದರೂ ನಿಯಂತ್ರಿತಗೊಳ್ಳುತ್ತಿರುತ್ತದೆ. ಕುವೆಂಪು ಅಥವಾ ಕುವೆಂಪು ಆಪ್ತರು ಇಲ್ಲವೆ ವಿರೋಧಿಗಳು, ಸಂಬಂಧಿಕರು ಹೀಗೆ ಯಾರು ಯಾರು ಸಭೆಯಲ್ಲಿದ್ದಾರೆ ಎಂಬುದು ಕೆಲವೊಮ್ಮೆ ವಿಮರ್ಶೆಯ ಸ್ವರೂಪದ ಮೇಲೆ ತನ್ನದೇ ನಿಯಂತ್ರಣವನ್ನು ಹೇರಬಹುದು. ವಿಮರ್ಶಕ ತನಗೇ ಗೊತ್ತಿಲ್ಲದಂತೆ ತನ್ನ ಅಭಿಪ್ರಾಯ ಮಂಡನೆಯ ವಿಧಾನವನ್ನು ಬದಲಿಸಿಕೊಳ್ಳಬಹುದು. ಹೀಗೆ ನಿರ್ದಿಷ್ಟವಾದ ಸಂದರ್ಭಗಳು ವಿಮರ್ಶೆಯ ಸ್ವರೂಪದ ಮೇಲೆ ತಮ್ಮದೇ ಪರಿಣಾಮವನ್ನು ಬೀರಬಹುದು. ಇಂಥದ್ದನ್ನೆಲ್ಲ ಮೀರುವುದು ಕೆಲವರಿಂದ ಮಾತ್ರ ಸಾಧ್ಯ.

ಮಹಾಕವಿ, ಕರ್ನಾಟಕ ರತ್ನ ಎಂದೆಲ್ಲ ಹೆಸರು ಮಾಡಿದ, ಜ್ಞಾನಪೀಠ ಪ್ರಶಸ್ತಿ ಪಡೆದ ಸಾಹಿತಿಯೊಬ್ಬ ಮರಣಿಸಿದಾಗ ಸಂತಾಪಕ್ಕಾಗಿ ಸೃಷ್ಟಿಯಾಗುವ ವಿಮರ್ಶೆ ಹೇಗೆ ತಾನೆ ಸೃಷ್ಟಿಯಾಗಬಹುದು? ಸಾಂದರ್ಭಿಕ ರಾಜಕಾರಣವಿಲ್ಲದೆ ಅಲ್ಲಿ ವಿಮರ್ಶೆ ಸೃಷ್ಟಿಯಾಗಲಾರದು. ವಿಮರ್ಶೆಯ ಸಮಯ ಸಂದರ್ಭಗಳು ಇಂತಹ ಕಡೆ ವಿಮರ್ಶೆಯಲ್ಲಿ ತಮ್ಮದೇ ಪಾತ್ರವನ್ನು ವಹಿಸಿಯೇ ವಹಿಸುತ್ತವೆ. ವಿಮರ್ಶಕನು ಎಷ್ಟೇ ಎಚ್ಚರದಿಂದ ಇದ್ದರೂ ಸಂಬಂಧಿಕತೆ ಮತ್ತು ಸಾಂದರ್ಭಿಕತೆಗಳು ಅವನ ದೃಷ್ಟಿ-ವಿಧಾನಗಳ ಮೇಲೆ ಪ್ರಭಾವ ಬೀರಿಯೇ ಬೀರುತ್ತವೆ. ಈ ಹಿನ್ನೆಲೆಯಲ್ಲಿ ನಿರ್ದಿಷ್ಟವಾದ ಸಂದರ್ಭಗಳು ಹೇಗೆ ವಿಮರ್ಶೆಯನ್ನು ರೂಪಿಸಬಹುದು ಎಂಬುದಕ್ಕೆ ಇಲ್ಲೊಂದು ಉದಾಹರಣೆ ನೋಡಬಹುದು. ಚಂಪಾ ಅವರು ಕುವೆಂಪು ತೀರಿಕೊಂಡಾಗ ಸಂಕ್ರಮಣ ಪತ್ರಿಕೆಯ ಒಂದು ವಿಶೇಷಾಂಕ ತಂದಿದ್ದಾರೆ. ಇಲ್ಲಿ ಕುವೆಂಪು ನನ್ನ ನೆನಪಿನ ಡೋಣಿಯಲ್ಲಿ ಎಂದು ತಮ್ಮದೇ ನೆನಪಿನ ಒಂದು ಚಿಕ್ಕ ಬರಹವನ್ನು ಬರೆದಿದ್ದಾರೆ. ಈ ಬರಹವು ಕುವೆಂಪುವನ್ನು ಒಡನಾಟರೂಪಿ ವಿವರಗಳ ಮೂಲಕ ಒಬ್ಬ ದೊಡ್ಡ ಲೇಖಕನನ್ನಾಗಿ ಚಿತ್ರಿಸುತ್ತದೆ. ಗೌರವ ಸೂಚಿಸುತ್ತದೆ. ವಿವಿಮರ್ಶೆಯನ್ನೂ ಮಾಡುತ್ತ ಅನ್ಯ ಕಟುವಿಮರ್ಶಕರನ್ನು ತರಾಟೆಗೆ ತೆಗೆದುಕೊಳ್ಳುತ್ತದೆ. ಇಲ್ಲಿ ಲೇಖಕನ ಸಾಹಿತ್ಯದ ಮೇಲ್ಮೆಯ ಪ್ರತಿಪಾದನೆ ಸಾಹಿತ್ಯದ ಚರ್ಚೆಯ ಮೂಲಕ ನಡೆಯುವುದಿಲ್ಲ. ನೆನಪುಗಳ ಮೂಲಕ ನಡೆಯುತ್ತದೆ. ಕವಿಯ ಸಾವಿನ ಸ್ಮರಣೆಯು ಅಭಿಮಾನವಾಗಿ ಪ್ರಕಟಗೊಳ್ಳುವ ಬಗೆ ಇದು. ಶತಮಾನೋತ್ಸವ ಸಂದರ್ಭದ ಅನೇಕ ವಿಚಾರ ಸಂಕಿರಣಗಳು, ಹುಟ್ಟುಹಬ್ಬಗಳ ಸಂದರ್ಭಗಳ ಹಲವು ಸ್ಮರಣ ಸಂಚಿಕೆಗಳು, ಪ್ರಶಸ್ತಿ ಸಂದರ್ಭದ ಪ್ರಶಂಸೆ ಅಭಿನಂದನೆಗಾಗಿ ನಡೆದ ಸಮಾರಂಭಗಳ ಉತ್ಪನ್ನವಾಗಿ ಬಂದ ವಿಮರ್ಶೆಗಳು ಹೀಗೆ ಅನೇಕ ವಿಮರ್ಶೆಗಳಲ್ಲಿ ಒಂದಲ್ಲ ಒಂದು ರೀತಿಯ ಸಾಂದರ್ಭಿಕತೆಯ ರಾಜಕಾರಣಗಳು ಕೆಲಸ ಮಾಡಿವೆ.

ಇದಕ್ಕೆ ಇನ್ನೊಂದು ಉದಾಹರಣೆ ನೋಡುವುದಾದರೆ; ಬೇಂದ್ರೆಗು ಕುವೆಂಪುಗು ವಯುಕ್ತಿಕವಾಗಿ ಯಾವ ವೈರವು ಇರಲಿಲ್ಲವಾದರೂ ಇಬ್ಬರಿಗು ಅಷ್ಟಕ್ಕಷ್ಟೆ. ಆದರೆ ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ವಯುಕ್ತಿಕವಾಗಿ ಇರಬಹುದಾದ ಭಾವನೆಯನ್ನು ಕಾರಿಕೊಳ್ಳುವುದು ಸ್ವಲ್ಪ ಕಷ್ಟ. ಪ್ರಮಾಣಿಕವಾಗಿ ಮಾತನಾಡುವುದು ಸ್ವಲ್ಪ ಕಷ್ಟ. ರಾಷ್ಟ್ರಕವಿ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರದ ಆಗಿನ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪನವರು ಕುವೆಂಪು ಅವರಿಗೆ ಪ್ರದಾನ ಮಾಡುವಾಗ ಬೇಂದ್ರೆಯವರೂ ಆ ಸಭೆಯಲ್ಲಿ ಇರುತ್ತಾರೆ. ಆಗ ಬೇಂದ್ರೆ ಪ್ರತಿಕ್ರಿಯಿಸಿದ ಮಾತುಗಳು ಮಲೆನಾಡ ವಾರ್ತಾ ಪತ್ರಿಕೆಯಲ್ಲಿ ಉಲ್ಲೇಖಿತವಾಗಿವೆ. (1949-ಪುಟ: 182) ಅಲ್ಲಿ ಬೇಂದ್ರೆ ಕುವೆಂಪುವನ್ನು ನಾಳಿಗೆ ಸಲ್ಲುವ ಕವಿ, ಮಾನವ ಜಾತಿಗೆ ಸೇರಿದ ವಿಶ್ವಕವಿ ಎಂದು ಬಣ್ಣಿಸಿದ್ದಾರೆ. ಇವರಿಗೆ ರಾಷ್ಟ್ರಕವಿ ಪ್ರಶಸ್ತಿ ಕೊಡಲು ಇಷ್ಟೇಕೆ ತಡವಾಯಿತು ಎಂದು ಪ್ರಶ್ನಿಸಿದ್ದಾರೆ. ಅಭಿನಂದನಾ ಸಮಾರಂಭದಲ್ಲಿ ಮಾತುಗಳು ಅಭಿನಂದನಾ ರೂಪಿಯಾಗಿರದೆ ಇನ್ನು ಹೇಗಿರಲು ಸಾಧ್ಯ? ಅಲ್ಲಿ ವಿಮರ್ಶೆಯ ರೂಪವನ್ನು ನವ್ಯವಾಗಿ ಕಲ್ಪಿಸಿಕೊಳ್ಳಲು ಆಗುವುದಿಲ್ಲ. ಅದು ಸಾಧುವೂ ಅಲ್ಲ. ಅಲ್ಲದೆ ಸಾಂದರ್ಭಿಕತೆಯ ರಾಜಕಾರಣ ಎಂದರೆ ಬರಿ ವಿಮರ್ಶೆಯು ಹುಟ್ಟುವ ಸನ್ನಿವೇಶದ ನಿಯಂತ್ರಣ ಮಾತ್ರ ಅಲ್ಲ. ಕಾಲಮಾನ, ಯುಗಧರ್ಮ, ಪರಿಸರ ಕೂಡ ಒಟ್ಟಾರೆ ವಿಮರ್ಶೆಯ ಸಂದರ್ಭವೇ. ಸಾಹಿತ್ಯವು ಕಾಲದೇಶಗಳ ಉತ್ಪನ್ನ ಹೇಗೋ ಹಾಗೇ ವಿಮರ್ಶೆಯೂ ಕಾಲದೇಶಗಳ ಉತ್ಪನ್ನವೇ. ಯುಗಧರ್ಮ ಕೂಡ ವಿಮರ್ಶೆಯನ್ನು ರೂಪಿಸುತ್ತದೆ. ಹಾಗೆಯೆ ವಿಮರ್ಶೆಯಲ್ಲಿ ಯುಗಧರ್ಮವು ಪ್ರಕಟವಾಗುತ್ತದೆ ಕೂಡ.

**7.3. ಸಂಬಂಧಿಕತೆಯ ರಾಜಕಾರಣ**

ವಿಮರ್ಶಕನ ಜಾತಿ–ಪಂಗಡ, ಬಂಧು–ಬಳಗ, ಸ್ನೇಹ–ಸಂಬಂಧಗಳು, ಗುರು–ಶಿಷ್ಯಸಂಬಂಧ, ವರ್ಣ–ವರ್ಗ–ಸಂಬಂಧಗಳು ಅಥವಾ ಸಾಮುದಾಯಿಕವಾದ ಐಡೆಂಟಿಟಿಗಳು ವಿಮರ್ಶೆಯ ಮೇಲೆ ಮಾಡಬಹುದಾದ ಪರಿಣಾಮಗಳನ್ನು, ಬೀರಬಹುದಾದ ಪ್ರಭಾವಗಳನ್ನು, ಇವೆರಡರ ನಡುವಿನ ಸಾಧಕ ಬಾಧಕಗಳನ್ನು ಸಂಬಂಧಿಕತೆಯ ರಾಜಕಾರಣ ಎಂದು ಇಲ್ಲಿ ಕರೆದುಕೊಳ್ಳಲಾಗಿದೆ.

ತೇಜಸ್ವಿ ಅವರ ಅಣ್ಣನ ನೆನಪು, ಇಂದುಕಲಾ ಅವರ ಮಗಳು ಕಂಡ ಕುವೆಂಪು, ಕೆ.ವಿ.ಸುಬ್ಬಣ್ಣನವರ ಕುವೆಂಪುಗೆ ಪುಟ್ಟಕನ್ನಡಿ, ಎಸ್.ಎಂ.ವೃಷಭೇಂದ್ರಸ್ವಾಮಿ ಅವರ ತರಗತಿಗಳಲ್ಲಿ ಕುವೆಂಪು, ಪ್ರಭುಶಂಕರರ ಹೀಗಿದ್ದರು ಕುವೆಂಪು, ದೇಜಗೌ ಅವರ ಕುವೆಂಪು ಅವರ ಕೊನೆಯ ದಿನಗಳು ಇಂತಹ ರಚನೆಗಳು ಒಡನಾಟ ರೂಪಿ ವಿಮರ್ಶೆಗಳಾಗಿದ್ದು, ಇವೆಲ್ಲವೂ ಸಂಬಂಧಿಕತೆಯ ರಾಜಕಾರಣದಿಂದಲೇ ರೂಪಿತಗೊಂಡಿವೆ. ಲೇಖಕ ಮತ್ತು ವಿಮರ್ಶಕರ ಒಡನಾಟ, ಸ್ನೇಹ ಸಂಬಂಧ, ರಕ್ತಸಂಬಂಧ, ಲೇಖಕ ಮತ್ತು ಸಮಾಜದ ನಡುವಿನ ಸಂಬಂಧ, ಲೇಖಕ ಮತ್ತು ಮುಖ್ಯವಾದ ಸಾಮಾಜಿಕ ಘಟನೆಗಳ ನಡುವಿನ ಸಂಬಂಧಗಳೆಲ್ಲ ಇಲ್ಲಿ ವಿಮರ್ಶೆಯನ್ನು ರೂಪಿಸುತ್ತಿರುತ್ತವೆ. ಇಲ್ಲೆಲ್ಲ ವಿಮರ್ಶೆಯು ಬರಿ ಸಾಹಿತ್ಯ ವಿಮರ್ಶೆಯಾಗದೆ, ನಡಾವಳಿಯ ಜಿಜ್ಞಾಸೆಯಾಗಿ, ನೆನಪುಗಳ ನಿರೂಪಣೆಯಾಗಿ ಸೃಷ್ಟಿಯಾಗಿರುತ್ತದೆ. ಕುವೆಂಪು ಅವರ ದಲಿತ ಸಂವೇದನೆಯ ಬಗ್ಗೆ, ದೇವಯ್ಯ ಹರವೆ, ಬಿ.ಕೃಷ್ಣಪ್ಪ, ಮೊಗಳ್ಳಿ ಇಂತಹವರುಗಳೇ ಹೆಚ್ಚು ಸಂವಾದಕ್ಕೆ ಇಳಿದಿದ್ದಾರೆ. ಕುವೆಂಪು ಅವರ ಸಾಹಿತ್ಯ ವಿಮರ್ಶೆಯ ಬಗೆಗಿನ ಕಟುವಾದ ಮಾತುಗಳು ಮತ್ತು ಅಲಕ್ಷ್ಯಗಳಿಗೆ ದೇಜಗೌ, ಸುಧಾಕರ, ಸಿಪಿಕೆ, ಎನ್.ಬೋರಲಿಂಗಯ್ಯ, ರಾಮೇಗೌಡ ಇಂತಹವರೇ ಹೆಚ್ಚು ಪ್ರತಿದಾಳಿ ಮಾಡಿದ್ದಾರೆ. ಶೂದ್ರ–ಬ್ರಾಹ್ಮಣ ಎಂಬ ಜಾತಿವಾದಿ ಧೋರಣೆಯೊಂದು ನವ್ಯವಿಮರ್ಶೆಯಲ್ಲಿ ಅಂತರ್ಗತ ಶಕ್ತಿಯಾಗಿ ಕೆಲಸ ಮಾಡಿರುವುದನ್ನು ಗುರ್ತಿಸಿದ್ದಾರೆ. ವರ್ಣವರ್ಗದ ಸಂಘರ್ಷಗಳಾಗಿ ಕುವೆಂಪು ಸಾಹಿತ್ಯವನ್ನು ನಮ್ಮ ವಿಮರ್ಶೆಯು ಕಂಡಿರುವ ದೃಷ್ಟಿಯೂ ಇದೆ. 'ಸಂಭವಾಮಿ ಯುಗೇ ಯುಗೇ ಪ್ರತಿಧ್ವನಿ' ಇಂತಹ ಪುಸ್ತಕಗಳು ಕುವೆಂಪು ಬದುಕಿನಲ್ಲಿಯೂ ವರ್ಗ–ವರ್ಣ ಸಂಘರ್ಷಗಳು ಸಂಭವಿಸಿದ ಕತೆ ಹೇಳುತ್ತವೆ. ದೇಜಗೌ, ಕೇಶವಶರ್ಮ ಇಂತಹ ಒಬ್ಬಿಬ್ಬರನ್ನು ಬಿಟ್ಟರೆ ಕುವೆಂಪು ಅವರ ಸ್ತ್ರೀ ದೃಷ್ಟಿ ಬಗ್ಗೆ ಬಿ.ಎನ್.ಸುಮಿತ್ರಾಬಾಯಿ, ಎಚ್.ಬಿ.ಯಶೋಧರಾ, ರಾಜಾಮಣಿ, ಲಲಿತಾ ನಾಯಕ್, ಕಮಲಾ ಹಂಪನಾ, ಎನ್.ಬಿ.ಪರಿಮಳಾಬಾಯಿ, ವಿಜಯಾ ಸುಬ್ಬರಾಜ್, ವಿನಯಾ ಹೀಗೆ ಬರೀ ಹೆಂಗಸರೇ ಬರೆದಿದ್ದಾರೆ. ಅವರವರ ಲಿಂಗ–ವರ್ಣ–ವರ್ಗ–ಜಾತಿ–ಸಮುದಾಯ–ಸ್ನೇಹಸಂಬಂಧ–ರಕ್ತಸಂಬಂಧ–ಬಳಗ–ಇಸಂಮ್ಮುಗಳೊಂದಿಗಿನ ಐಡೆಂಟಿಟಿಗಳ ರಾಜಕಾರಣವು ನಮ್ಮ ವಿಮರ್ಶೆಯಲ್ಲಿ ಕೆಲಸ ಮಾಡಿರುವುದನ್ನು ಈ ಎಲ್ಲವೂ ಹೇಳುತ್ತವೆ. ವರ್ಗ, ಜಾತಿ, ಲಿಂಗಾಧಾರಿತ ವಿಮರ್ಶೆಗಳಲ್ಲಿ ಅವುಗಳೊಂದಿಗಿನ ಲೇಖಕನ ಅಥವಾ ವಿಮರ್ಶಕನ ಸಂಬಂಧಗಳು ವಿಮರ್ಶೆಯ ಸ್ವರೂಪ–ಕಾಣ್ಕೆಗಳನ್ನು ರೂಪಿಸಿವೆ. ಇದನ್ನೇ ಸಂಬಂಧಿಕತೆಯ ರಾಜಕಾರಣ ಎನ್ನುವುದು.

ಕುವೆಂಪು ದಲಿತರನ್ನು ದದ್ದು ನಾಯಿಗಳಿಗೆ ಕಾದಂಬರಿಗಳಲ್ಲಿ ಹೋಲಿಸುವುದನ್ನು ಬಿ.ಕೃಷ್ಣಪ್ಪನವರು ಗುರುತಿಸಿ ಅವರ ದಲಿತ ದೃಷ್ಟಿಯ ಬಗೆಗೆ ತಮ್ಮದೇ ವ್ಯಾಖ್ಯಾನ ಮಾಡಿದ್ದಾರೆ. ಈ ಬಗ್ಗೆ ಸಾಕಷ್ಟು ಪ್ರತಿಬಾಣಗಳ ಪ್ರಯೋಗವೂ ಆಗಿದೆ. ಇವುಗಳನ್ನು ಸಮಾಜಶಾಸ್ತ್ರೀಯ ಓದುಗಳು ಎನ್ನಬಹುದಾದರೂ ಇವುಗಳ ಸ್ವರೂಪವನ್ನು ನಿಯಂತ್ರಿಸಿರುವುದು ಸಂಬಂಧಿಕತೆಯ ರಾಜಕಾರಣವೇ. ವರ್ಗೀಯ–ಸಾಮುದಾಯಿಕ ಐಡೆಂಟಿಟಿಯ ರಾಜಕಾರಣ ಇದು. ಸಾಹಿತ್ಯದಲ್ಲಿ ಪ್ರಕಟವಾಗುವ ಲಿಂಗ, ವರ್ಗ, ಜಾತಿ, ಪಂಥಗಳ ಕುರಿತ ನಿಲುವುಗಳು–ದೃಷ್ಟಿಗಳನ್ನು ಕುರಿತು ತಮ್ಮದೇ ವಿರೋಧವನ್ನು ಸ್ತ್ರೀವಾದಿ ಮತ್ತು ದಲಿತವಾದಿ ವಿಮರ್ಶೆಗಳು ಪ್ರಕಟಿಸಿವೆ. ಅಭಿವ್ಯಕ್ತಿ ಕ್ರಮ ಅಥವಾ ಸಾಹಿತ್ಯದ ಸೌಂದರ್ಯಾನುಭವದ ಬಗ್ಗೆ ಸ್ತ್ರೀವಾದಿಗಳಾಗಲೀ ದಲಿತವಾದಿಗಳಾಗಲೀ ಅಷ್ಟಾಗಿ ತಲೆಕೆಡಿಸಿಕೊಳ್ಳುವುದಿಲ್ಲ. ಸಾಹಿತ್ಯದ ದೃಷ್ಟಿಗಳನ್ನೇ ಲೇಖಕನ ದೃಷ್ಟಿ–ಧೋರಣೆಗಳೆಂದು ಇಲ್ಲಿನ ಕೆಲ ವಿಮರ್ಶೆಗಳು ಭಾವಿಸಿ ತಮ್ಮ ಪ್ರತಿರೋಧವನ್ನು ಪ್ರಕಟಿಸಿವೆ. ಇವೆಲ್ಲವೂ ಸಂಬಂಧಿಕತೆಯ ರಾಜಕಾರಣದ–ಐಡೆಂಟಿಟಿ ರಾಜಕಾರಣದ ಪ್ರತಿಕ್ರಿಯೆಗಳೇ ಆಗಿವೆ.

ಅರವತ್ತರ ದಶಕದ ಅಂಚಿನಲ್ಲಿ ಎಂ.ಜಿ.ಕೆಯವರ ವಿಮರ್ಶೆಯ ಬಗ್ಗೆ ಮುಗಳಿ ಮತ್ತು ಎಂ.ವಿ.ಸೀ ಇವರು ಸಾಕಷ್ಟು ವಿರೋಧ ವ್ಯಕ್ತಪಡಿಸಿದ್ದಾರೆ. ಯಾರೋ ಒಬ್ಬರು (ಹೆಸರು ಉಲ್ಲೇಖಿತವಾಗಿಲ್ಲ) ಎಂ.ಜಿ.ಕೆಯವರ

ವಿಮರ್ಶೆಗಾಗಿ ಅವರನ್ನು ನೇಣಿಗೇರಿಸಬೇಕು ಎಂದರಂತೆ! ಬಿ.ಎಂ.ಶ್ರೀಯವರನ್ನು, ಎ.ಆರ್.ಕೃ ಅವರೊಂದಿಗೆ ತೌಲನಿಕವಾಗಿ ಹೋಲಿಸುತ್ತ ಬಿ.ಎಂ.ಶ್ರೀ ಒಳ್ಳೆಯ ವಿಮರ್ಶಕರಲ್ಲ ಎಂಬ ಮಾತುಗಳನ್ನು ಆಡಿದ್ದಕ್ಕೆ ಎಂ.ಜಿ.ಕೆ. ಮುಗಳಿ ಮತ್ತು ಎಂ.ವೀ.ಸೀಯವರಿಂದ ಇವರು ಖಾರವಾದ ಪ್ರತಿಕ್ರಿಯೆಗೆ ಗುರಿಯಾಗಿದ್ದಾರೆ. ಪತ್ರಿಕೆಗಳಲ್ಲಿ ಈ ಬಗ್ಗೆ ಪತ್ರ-ಪ್ರತಿ ಪತ್ರಗಳ ಜಗಳವೇ ನಡೆದಿದೆ. ತೌಲನಿಕ ದೃಷ್ಟಿಯ ತರತಮ ಶ್ರೇಣೀಕರಣ ವಿಮರ್ಶೆಯು ನಮ್ಮಲ್ಲಿ ಸಾಕಷ್ಟು ವಾದ ವಿವಾದಗಳನ್ನು ಸೃಷ್ಟಿಸಿದೆ. ಆರೋಪ-ಪ್ರತ್ಯಾರೋಪ, ಮಂಡನೆ-ಖಂಡನೆಗಳ ವಿಮರ್ಶೆಗೆ ಆಯಾ ವಿಮರ್ಶಕ ವಲಯಗಳ ಬಳಗಗಳು ಪರಸ್ಪರ ಹೊಂದಿರುವ ಸಂಬಂಧಿಕತೆಯ ರಾಜಕಾರಣವೆ ಇಂಥದ್ದಕ್ಕೆಲ್ಲ ಕಾರಣವಾಗಿದೆ. ಈ (ಸ್ಥಾನೀಕರಣ ಅಥವಾ ತರತಮ ಶ್ರೇಣೀಕರಣದ ಬಗ್ಗೆ ನಡೆದಿರುವ ನಿರಂತರ ಸಂಘರ್ಷ) ವಿವಾದಗಳಿಗೆ ನಮ್ಮ ವಿಮರ್ಶೆಯಲ್ಲಿ ಒಂದು ದೊಡ್ಡ ಚರಿತ್ರೆಯೇ ಇದೆ. ಇಲ್ಲಿ ವಿಮರ್ಶಕರ ಅಭಿರುಚಿ ನಂಬಿಕೆಗಳು ಎಷ್ಟು ಮುಖ್ಯವಾಗಿ ಕೆಲಸ ಮಾಡಿವೆಯೋ ಅಷ್ಟೇ ಮುಖ್ಯವಾಗಿ ಸಂಬಂಧಿಕತೆಯ ರಾಜಕಾರಣವೂ ಕೆಲಸಮಾಡಿದೆ. ಅವರವರು ಆಯಾ ಬಳಗದವರ ಬರವಣಿಗೆಯನ್ನು ಸಮರ್ಥಿಸುವ ಕೆಲಸವನ್ನು ಮಾಡಿದ್ದಾರೆ. ಪರಸ್ಪರ ಸ್ನೇಹ ಸಂಬಂಧಗಳು ನಮ್ಮ ಸ್ಥಾನೀಕರಣ-ಶ್ರೇಣೀಕರಣ ಕ್ರಿಯೆಯನ್ನು ಬಾಧಿಸಿವೆ.

ವಿಮರ್ಶಕ ಮತ್ತು ಕವಿಯ ನಡುವಣ ಸ್ನೇಹ ಸಂಬಂಧಗಳು ವಿಮರ್ಶೆಯ ಸ್ವರೂಪವನ್ನು ಖಂಡಿತಾ ನಿಯಂತ್ರಿಸುತ್ತಿರುತ್ತವೆ. ಪ್ರಭುಶಂಕರ, ದೇಜಗೌ, ವೃಷಭೇಂದ್ರಸ್ವಾಮಿ, ಇಂಥವರು ಕುವೆಂಪು ಜೊತೆಗೆ ಒಡನಾಟ ಇಟ್ಟುಕೊಂಡಿದ್ದವರು. ಆತ್ಮೀಯತೆ, ಗೌರವ, ಪ್ರೀತಿ, ಭಯ-ಭಕ್ತಿಗಳನ್ನು ಇಟ್ಟುಕೊಂಡಿದ್ದವರು. ಹೀಗಾಗಿ ಇವರ ನಡುವಿನ ಸಂಬಂಧಗಳು ಇವರ ವಿಮರ್ಶೆಯ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಕುವೆಂಪು ವಿಮರ್ಶೆಯಲ್ಲಿನ ಒಂದು ಮುಖ್ಯ ವಲಯ ಇವರ ಶಿಷ್ಯಕೋಟಿಯೇ ಆಗಿದೆ. ಯಾವುದೇ ಕವಿಯ ಜೊತೆಗೆ ಸ್ನೇಹ-ಪ್ರೀತಿ ಇದ್ದಾಗ ವಿಮರ್ಶೆಯ ಕಾರಣಕ್ಕೆ ಅದು ಕೆಡಬಾರದು ಎಂಬ ಎಚ್ಚರ ಸದಾ ಇರುತ್ತದೆ. ಇನ್ನು ಭಯಭಕ್ತಿ ಇದ್ದರಂತೂ ಕೇಳಲೇಬೇಕಿಲ್ಲ. ವಸ್ತುನಿಷ್ಠವಾದ ವಿಮರ್ಶೆ ಹುಟ್ಟುವುದು ಅಪುರೂಪ. ಆರಾಧಕ ವಿಮರ್ಶೆಯೇ ಹುಟ್ಟುತ್ತದೆ. ದೇಜಗೌ, ಎಸ್.ವಿ.ಪರಮೇಶ್ವರಭಟ್ಟ, ಸಿ.ಪಿ.ಕೆ, ಪ್ರಭುಶಂಕರರ ವಿಮರ್ಶೆ ಇದೇ ರೀತಿಯ ವಿಮರ್ಶೆಯಾಗಿದೆ. (ಎನ್.ಬೋರಲಿಂಗಯ್ಯ, ಸುಧಾಕರ, ಭಗವಾನ್, ಮಳಲಿ ಇವರ ವಿಮರ್ಶೆ ಕೂಡ ಪ್ರಶಂಸಾ ಧಾಟಿಯದ್ದೆ) ಕುವೆಂಪು ಮಗನಾದ ತೇಜಸ್ವಿ, ಕರಸಂಜಾತರಾದ ದೇಜಗೌ, ಭಕ್ತಿಪ್ರಿಯ ವೃಷಬೇಂದ್ರಸ್ವಾಮಿ, ಪ್ರಭುಶಂಕರ, ಶಿಷ್ಯರಾದ ಕೆ.ವಿ.ಸುಬ್ಬಣ್ಣ ಇಂಥವರ ಬಹುಪಾಲು ವಿಮರ್ಶೆಯು (ಅನೆಕ್ ಡೋಟಲ್ ನೆರೇಶನ್) ಒಡನಾಟ ಕಥನವಾಗಿದೆ. (ಒಡನಾಟರೂಪಿ ವಿಮರ್ಶೆಯನ್ನು ಬೇರೆಡೆ ಚರ್ಚಿಸಲಾಗಿದೆ.)

ಸಾಹಿತಿಯೊಂದಿಗಿನ ಆತ್ಮೀಯತೆ ಮತ್ತು ಒಡನಾಟಗಳು ಒಡನಾಡಿಗಳ ವಿಮರ್ಶೆಯನ್ನು ಒಂದು ಕಡೆ ಒಡನಾಟರೂಪಿಯಾಗಿ ಮಾಡಿದ್ದರೆ ಇನ್ನೊಂದು ಕಡೆ ಸಾಹಿತ್ಯದ ಸಮರ್ಥನೆ ಮತ್ತು ಸಾಹಿತಿಯ ಸಮರ್ಥನೆಗಳನ್ನಾಗಿ ಮಾಡಿವೆ. ಸಮರ್ಥನಾ ರೂಪಿ, ವಕೀಲಿ ವಿಮರ್ಶೆಯು ಎಲ್ಲಿಯವರೆಗೆ ಹೋಗಿದೆಯೆಂದರೆ; ಕವಿಯ ರಕ್ಷಣಾವೇದಿಕೆ, ಕವಿಸಮರ್ಥನಾ ಸೈನ್ಯದಂತೆ ಆಪ್ತ ವಲಯವು ವರ್ತಿಸುವ ಮಟ್ಟಕ್ಕೆ ಹೋಗಿದೆ. ಕವಿಯ ಜೊತೆಗಿನ ನೇರ ಒಡನಾಟ ಇಲ್ಲದ ಆದರೆ 'ಶಿಸುಮಗ' ದೇಜಗೌ ಅವರ ಒಡನಾಟ ಇದ್ದವರ ವಿಮರ್ಶೆಯನ್ನು ಕೂಡ ಸಂಬಂಧಿಕತೆಯ ರಾಜಕಾರಣವು ಬಾಧಿಸಿದೆ. ಈ ವಲಯದೊಂದಿಗೆ-ಬಳಗದೊಂದಿಗೆ ಸಂಬಂಧ ಪಡೆದವರೆಲ್ಲರೂ ಗಾಳಿ ಬೀಸಿದಂತೆ ಕವಿಸಮರ್ಥಕ-ಸಾಹಿತ್ಯ ಸಮರ್ಥಕ-ಪ್ರಶಂಸಾತ್ಮಕ-ಗುಣಗಾನರೂಪಿ ವಿಮರ್ಶೆಯನ್ನೇ ಮಾಡಿದ್ದಾರೆ. ಈ ಆಪ್ತರ ವಲಯದ ಆಚೆಗೂ ಕುವೆಂಪುವನ್ನು ಆರಾಧಿಸುವ ಜನವರ್ಗ-ವಿಮರ್ಶಕ ವರ್ಗ ಮತ್ತು ಓದದೇ ಆರಾಧಿಸುವ ವರ್ಗಗಳೂ ನಮ್ಮಲ್ಲಿವೆ. (ವಕೀಲಿ ವಿಮರ್ಶೆಯಿಂದ ಆಪ್ತ ವಲಯದವರಿಗೆ ಲೌಕಿಕ ಲಾಭಗಳು ಏನಾದರೂ ಆದುವೇ! ಎಂಬುದು ಸಂಶೋಧನಾರ್ಹ ವಿಚಾರ)

ಹಲವು ರೀತಿಯ ಸಂಬಂಧಿಕತೆಯ ರಾಜಕಾರಣಗಳು ನಮ್ಮ ವಿಮರ್ಶೆಯನ್ನು ಬಾಧಿಸಿವೆ. 1. ವಿಮರ್ಶಕ ಮತ್ತು ಅವನ ಜಾತಿ ವರ್ಗ ಸಂಬಂಧ, 2. ವಿಮರ್ಶಕ ಮತ್ತು ಅವನ ಬಳಗದ ಸಂಬಂಧ, 3. ವಿಮರ್ಶಕನು ಚಳುವಳಿಗಳೊಡನೆ ಪಡೆದಿರುವ ಸಂಬಂಧ, 4. ವಿಮರ್ಶಕ ಮತ್ತು ಕವಿಯ ನಡುವಣ (ಸ್ನೇಹ, ಆತ್ಮಿಯತೆ, ಗುರುಶಿಷ್ಯ, ಜಾತಿ, ವರ್ಗ, ವರ್ಣ, ಇತ್ಯಾದಿ ರೀತಿಯ) ಸಂಬಂಧ, ಹೀಗೆ ಹಲವು

ರೀತಿಯ ಸಂಬಂಧಿಕತೆಯ ರಾಜಕಾರಣಗಳು ನಮ್ಮ ವಿಮರ್ಶೆಯನ್ನು ಬಾಧಿಸಿವೆ. ಕುವೆಂಪು ಶೂದ್ರ ವರ್ಗಕ್ಕೆ ಸೇರಿದವರು ಎಂಬ ಕಾರಣದಿಂದ ವರ್ಗ ವರ್ಣ ಸಂಘರ್ಷದ ಹಿನ್ನೆಲೆಯಲ್ಲಿ ಕುವೆಂಪು ಸಾಹಿತ್ಯವನ್ನು ನಮ್ಮಲ್ಲಿ ನೋಡಲಾಗಿದೆ. ಪುರೋಹಿತ ಶಾಹಿಗೆ ಶೂದ್ರ ಸಂಸ್ಕೃತಿಯು ತೋರಿದ ಪ್ರತಿರೋಧ ಎಂಬ ನೆಲೆಯಲ್ಲಿ ಕುವೆಂಪು ಸಾಹಿತ್ಯವನ್ನು ಪರಿಶೀಲಿಸಲಾಗಿದೆ. ಅಂದರೆ ಕವಿ ಮತ್ತು ವಿಮರ್ಶಕ, ವಿಮರ್ಶಕ ಮತ್ತು ಅನ್ಯ ವಿಮರ್ಶಕರ ಸಂಬಂಧ ಮಾತ್ರವೆ ಅಲ್ಲದೆ ಕವಿ ಮತ್ತು ಸಮಾಜದ ನಡುವಿನ ಸಂಬಂಧಿಕತೆಯ ರಾಜಕಾರಣ ಕೂಡ ನಮ್ಮ ವಿಮರ್ಶೆಯನ್ನು ರೂಪಿಸಿದೆ.

ಕುವೆಂಪು ಬಳಗ-ಬೇಂದ್ರೆ ಬಳಗ; ಕುವೆಂಪು ಬಳಗ-ಅಡಿಗ ಬಳಗ ಹೀಗೆ ಎರಡು ಸ್ಪಷ್ಟವಾದ ಭಿನ್ನತೆ ಮತ್ತು ಆತ್ಮೀಯ ಶತೃತ್ವ ಇರುವ ಬಳಗಗಳು ನಮ್ಮ ವಿಮರ್ಶೆಯಲ್ಲಿ ಸೃಷ್ಟಿಯಾಗಿವೆ. ಈ ಎರಡೂ ಬಳಗಗಳಲ್ಲಿ ಪರಸ್ಪರ ವಾದ ಸಂವಾದಗಳು ನಿರಂತರವಾಗಿ ನಡೆದಿವೆ. ಜಾತಿ, ವರ್ಣ, ಸಂವೇದನೆ, ದೃಷ್ಟಿಕೋನ, ಮಾರುತ್ತರಗಳ ನೆಲೆಯಲ್ಲಿ ಈ ಎರಡೂ ವರ್ಗಗಳ ನಡುವೆ ವಾದ ಸಂವಾದಗಳು ಸಂಭವಿಸಿವೆ.

ಸಂಬಂಧಿಕತೆಯ ರಾಜಕಾರಣದಂತೆಯೆ ಸಮಕಾಲೀನತೆಯ ರಾಜಕಾರಣವೂ ಸಹ ನಮ್ಮ ವಿಮರ್ಶೆಯಲ್ಲಿ ಇದೆ. ಕುವೆಂಪು ಸಮಕಾಲೀನರು ಅನೇಕರು ಕುವೆಂಪು ಸಾಹಿತ್ಯದ ಬಗ್ಗೆ ವಿಮರ್ಶೆಯನ್ನೇ ಮಾಡಿಲ್ಲ. ಮಾಡಿರುವವರೂ ಕೂಡ ಅಲ್ಪ ಸ್ವಲ್ಪ ಮಾಡಿದ್ದಾರೆ. ಕುವೆಂಪು ಸಾಹಿತ್ಯದ ಬಗ್ಗೆ ವಿಮರ್ಶೆಯ ಮೌನ ವಹಿಸಿರುವ ವಲಯವನ್ನು ಮೊದಲ ಅಧ್ಯಾಯದಲ್ಲೇ ಚರ್ಚಿಸಿರುವುದರಿಂದ ಅದನ್ನಿಲ್ಲಿ ಲಂಬಿಸುವುದಿಲ್ಲ. ಸಮಕಾಲೀನತೆಯ ರಾಜಕಾರಣವು ನಮ್ಮ ವಿಮರ್ಶೆಯನ್ನು ಬಾಧಿಸಿರುವುದು ಮಾತ್ರ ನಿಜ. ಸಮಕಾಲೀನ ಸಾಹಿತ್ಯವನ್ನು ವಿಮರ್ಶೆಯು ವಸ್ತುನಿಷ್ಠವಾಗಿ ಪರಿಶೀಲಿಸಲಾರದು ಎಂಬ ನಂಬಿಕೆಯೇ ನಮ್ಮಲ್ಲಿ ಸೃಷ್ಟಿಯಾಗಿದೆ. ಇದನ್ನು ಸಮರ್ಥಿಸುವ ಹಲವಾರು ಉದಾಹರಣೆಗಳೂ ನಮ್ಮಲ್ಲಿ ಸಿಗುತ್ತದೆ.

ತಾವು ಬರೆದ ವಿಮರ್ಶೆಯನ್ನು ಕೃತಿಕಾರನಿಗೆ ತೋರಿಸುವ; ತೋರಿಸಿ ಶಹಬ್ಬಾಸ್‌ಗಿರಿ ಪಡೆಯುವ ಪ್ರವೃತ್ತಿಯೂ ನಮ್ಮಲ್ಲಿದೆ. ವಿಮರ್ಶಿಸುವ ಸಾಹಿತಿಗೆ ವಿಮರ್ಶೆಯನ್ನು ತೋರಿಸಬೇಕೆನ್ನುವ ಹಂಬಲ ಮತ್ತು ಎಚ್ಚರಗಳಿದ್ದಾಗ ವಿಮರ್ಶೆಯು ವಸ್ತುನಿಷ್ಠವಾಗಿ ರೂಪಗೊಳ್ಳಲು ಸಾಧ್ಯವಿಲ್ಲ. ಇದೂ ಕೂಡ ಸಂಬಂಧಿಕತೆಯ ರಾಜಕಾರಣವೆ. ಇದರಿಂದ ವಿಮರ್ಶೆಯು ಆಯ್ಕೆಯಲ್ಲಿ ಪಕ್ಷಪಾತಿಯಾಗುತ್ತದೆ. ಮತ್ತು ವಿಶ್ಲೇಷಣೆಯಲ್ಲಿ ಒಂದೋ ವಿವರಣಾತ್ಮಕವಾಗುತ್ತದೆ. ಇಲ್ಲವೆ ಗುಣಗ್ರಾಹಿಯಾಗುತ್ತದೆ ಅಥವಾ ಪ್ರಶಂಸನಾತ್ಮಕವಾಗುತ್ತದೆ. ಕುವೆಂಪು ಅವರ ಆಪ್ತ ವಲಯದವರ ವಿಮರ್ಶೆಯ ಸ್ವರೂಪ ಸರಿಸುಮಾರು ಇದೇ ಆಗಿದೆ.

ಎಲ್ಲ ವಿಮರ್ಶಕರ ಲೇಖನರೂಪಿ ಮತ್ತು ಅಧ್ಯಯನರೂಪಿ ವಿಮರ್ಶೆಗಳಲ್ಲಿ ಕೂಡ ಸಂಬಂಧಿಕತೆಯ ರಾಜಕಾರಣದ ಕುರುಹುಗಳು ಅಂತರ್ಗತವಾಗಿ ಅಡಗಿಕೊಂಡಿವೆ. ಆದರೆ ಈ ರಾಜಕಾರಣವು ವಿವಿಮರ್ಶೆಯಲ್ಲಿ ಮಾತ್ರ ಢಾಳಾಗಿ ಎದ್ದು ಕಾಣತ್ತದೆ. ಈ ವಿವಿಮರ್ಶೆಯು ಸರಿಸುಮಾರು 1. ಪ್ರತಿಕ್ರಿಯಾರೂಪಿ 2. ಸಮರ್ಥನಾರೂಪಿ ಹೀಗೆ ಎರಡು ಬಗೆಗಳಲ್ಲಿ ಸೃಷ್ಟಿಯಾಗಿದೆ. ಈ ರಾಜಕಾರಣವು ಬಳಗ-ಬಳಗಗಳ ನಡುವಣ ಆತ್ಮಪ್ರತಿಷ್ಠೆ-ಮಾನಮರ್ಯಾದೆಯ ಪ್ರಶ್ನೆ ಎಂಬಂತೆ ಕೂಡ ಪ್ರಕಟವಾಗಿದೆ. ಸುಧಾಕರ, ದೇಜಗೌ, ಎಸ್.ಬೋರಲಿಂಗಯ್ಯ ಇವರುಗಳ ವಿವಿಮರ್ಶೆಯನ್ನು ನೋಡಿದರೆ ಇದು ತಿಳಿಯುತ್ತದೆ.

ವಿಮರ್ಶೆಯ ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣ, ಆಯ್ಕೆ ಮತ್ತು ಸಂಯೋಜನಾ ವಿಧಾನಗಳಿಗೂ ಕೂಡ ಸಂಬಂಧಿಕತೆಯ ರಾಜಕಾರಣವು ತಲೆಹಾಕಿದೆ. ಗೋಕಾಕರ ಕೊಳಲಿನ ಅವಲೋಕನದ ಕೊನೆಗೆ ಸಂಪಾದಕರು ಜಯಕರ್ನಾಟದಲ್ಲಿ (1166-ಪುಟ: 595) ಬೇಂದ್ರೆ ಪದ್ಯ ಮುದ್ರಿಸಿದ್ದಾರೆ. ಕುವೆಂಪು ಕವಿತೆಗಳನ್ನು ಕಟುವಾಗಿ ವಿಮರ್ಶಿಸಿ ಕೊನೆಯಲ್ಲಿ ಬೇಂದ್ರೆ ಕವಿತೆಯನ್ನು ಮುದ್ರಿಸುವ ಉದ್ದೇಶವೇನು? ಸಂಬಂಧಿಕತೆಯ ರಾಜಕಾರಣ ಎಂದರೆ ಹೀಗೂ ಇರುತ್ತದೆ! (ಇದು ಉದ್ದೇಶಪೂರ್ವಕ ಅಲ್ಲದೆಯೂ ಇರಬಹುದು)

ಈ ಹಿನ್ನಲೆಯಲ್ಲಿ 'ಪ್ರತಿಧ್ವನಿ ಯುಗೇ ಯುಗೇ ಸಂಭವಾಮಿ' ಪುಸ್ತಕವು (2695) ನಮ್ಮ ವರ್ಗ ಸಂಘರ್ಷದ ಒಂದು ದಾಖಲೆಯಾಗಿದೆ. ಆಲನಹಳ್ಳಿ, ದೇವನೂರು, ತ.ಹ.ನಾಗರಾಜರಾವ್ ಇಂಥವರ ಪ್ರತಿಕ್ರಿಯೆಗಳು ಇಲ್ಲಿ ಸಾಂದರ್ಭಿಕತೆಯ ರಾಜಕಾರಣ ಮತ್ತು ಸಂಬಂಧಿಕತೆಯ ರಾಜಕಾರಣಗಳಿಂದ ಕೂಡಿದ ಪ್ರತಿಕ್ರಿಯೆಗಳಾಗಿವೆ. ಕೆಲವು ಸಂದರ್ಭಗಳು ನಮ್ಮಲ್ಲಿ ಭಿನ್ನ ಭಿನ್ನ ವರ್ಗೀಯ ಐಡೆಂಟಿಗಳು ರಚನೆಗೊಳ್ಳಲು ಮತ್ತು ನಿರಚನೆಗೊಳ್ಳಲು ಒತ್ತಡ ಹಾಕುತ್ತಿರುತ್ತವೆ. ಕುವೆಂಪು ಅವರ ಮೇಲೆ ನಡೆದ

ಬ್ರಾಹ್ಮಣ ವರ್ಗದ ಪ್ರತಿಭಟನೆಯನ್ನು ಇಡೀ ಶೂದ್ರವರ್ಗದ ವಿರುದ್ಧ ನಡೆದ ಪ್ರತಿಭಟನೆ ಎಂದು ನಮ್ಮ ನಾಡು ಭಾವಿಸಿದ ಘಟನೆ ಇದಕ್ಕೆ ಉದಾಹರಣೆ. ನಮ್ಮ ವಿಮರ್ಶಾ ಸಂಸ್ಕೃತಿಯ ಚರಿತ್ರೆಯಲ್ಲಿ ಕುವೆಂಪು ಕುರಿತ ಟೀಕೆಗೆ ಪ್ರಬಲವಾದ ಪ್ರತಿರೋಧ ಮತ್ತು ಅಸಹನೆ ಸದಾ ಪ್ರಕಟವಾಗುತ್ತಾ ಬಂದಿದೆ. ಸಂಭವಾಮಿ ಯುಗೇ ಯುಗೇ ಇಂತಹ ಒಂದು ದಾಖಲೆ.

ಕುವೆಂಪು ಸಾಹಿತ್ಯವಿಮರ್ಶೆಯ ಬಗ್ಗೆ ಪತ್ರರೂಪದಲ್ಲಿ ಕೂಡ ಸಾಕಷ್ಟು ವಿಮರ್ಶೆ ಪ್ರಕಟವಾಗಿದೆ. ಕುವೆಂಪು ಪತ್ರಗಳದ್ದೇ ಒಂದು ಪ್ರತ್ಯೇಕ ಲೋಕ. ಈ ಪತ್ರಗಳಲ್ಲಿ ಸಾಂದರ್ಭಿಕತೆಯ ರಾಜಕಾರಣ, ಸಮಕಾಲೀನತೆಯ ರಾಜಕಾರಣ, ಸಂಬಂಧಿಕತೆಯ ರಾಜಕಾರಣಗಳು ಮೂರೂ ಬಹು ಸ್ಪಷ್ಟವಾಗಿ, ಢಾಳಾಗಿ ಕಾಣಿಸಿಕೊಂಡಿವೆ. ಇವುಗಳ ಅಧ್ಯಯನವೇ ಒಂದು ಪ್ರತ್ಯೇಕ ಅಧ್ಯಯನ ಆದೀತು! ಇಂತಹ ಪತ್ರರೂಪಿ ಪ್ರತಿಕ್ರಿಯೆಗಳ ಎರಡು ಮಾದರಿಗಳನ್ನು ಇಲ್ಲಿ ನೋಡಬಹುದು; ಮಾದರಿ–1;

> ಜಯಕರ್ನಾಟಕದಲ್ಲಿನ ವಿಮರ್ಶೆಯನ್ನು ಓದಿದೇವೆ.(ನಾನು, ಚಿದಂಬರ, ಸೀತಾರಾಮ, ಶ್ರೀಹರಿ, ಜೋಯಿಷ, ಈಶ್ವರ) ವಿಮರ್ಶಕನ ವಿಷಯದಲ್ಲಿ ನಮಗೆ ಸಿಟ್ಟು ಬರಲಿಲ್ಲ. ಜಿಗುಪ್ಸೆಯೂ ಹುಟ್ಟಲಿಲ್ಲ. ಆದರೆ ನಗು ಬಂತು. ಬಹಳ ಗಟ್ಟಿಯಾಗಿಯೇ ನಕ್ಕುಬಿಟ್ಟೆವು. ದಿನವೂ ನಗುತ್ತಲಿದ್ದೇವೆ. ನೆನೆಸಿಕೊಂಡಾಗಲೆಲ್ಲಾ ನಗುತ್ತೇವೆ. ಯಿದಕ್ಕೆ ಇನ್ನೂ ಒಂದು ವಾರದ ಅವಧಿ ಯಿಟ್ಟುಕೊಂಡಿದ್ದೇವೆ. ಯಿನ್ನು ಈ ರೀತಿ ನಮ್ಮ ಹರ್ಷಕ್ಕವಕಾಶ (ಅರ್ಥಾತ್ ನಮ್ಮ ಆಯುಷ್ಯ ವೃದ್ಧಿಗೂ ಸಹ, ಯಾಕೆಂದರೆ ನಗುವಿನಿಂದ ಆಯುಷ್ಯ ಹೆಚ್ಚುತ್ತಂತೆ) ಕಲ್ಪಿಸಿಕೊಟ್ಟ ಆ (ಎಲ್ಲಿಸ್ ಪ್ರಿಯಮೆನ್) ವಿಖ್ಯಾತ ವಿಮರ್ಶಕವಿಗೆ ನಮ್ಮ ಅಂತಃಕರಣಪೂರ್ವಕವಾದ ಅಭಿನಂದನಗಳನ್ನು ಸಮರ್ಪಿಸದಿರಲಾರೆವು. ಎಲ್ಲಕ್ಕೂ ಮೇಲಾಗಿ 1. 'ಸೋದರಿಯರೇ ನೀವೆಲ್ಲರೂ ಬನ್ನಿ' ಎಂಬ ಕವನದ ಮೇಲಿನ ವಿಮರ್ಶೆಯಲ್ಲಿ 'ಈ ಸೋದರಿಯರು ಯಾರು?' ಹಕ್ಕಿಗಳಾಗುತ್ತಾರೆ, ಬಾಲಕರಾಗುತ್ತಾರೆ ವಗೈರೆ' ಮಾತುಗಳೂ 2. ರತಿ, ಗೆ, ಗುರಿ, ಈ ಕವನದ ಮೇಲಣ ವಿಮರ್ಶೆಯಲ್ಲಿ, 'ಮತ್ತು ಪುಟ್ಟಪ್ಪನವರಂತಹ ಯುವಕರು ಮುದುಕರಂತೆ.. ಸರಿಯಲ್ಲ' ಈ ಮಾತುಗಳೂ ನಮ್ಮನ್ನು ನಗುವಿನ ಸಮುದ್ರದಲ್ಲಿಯೇ ಮುಳುಗಿಸಿಬಿಟ್ಟವೆ.
>
> ಆ ದಿನದ ಬೇಟೆಯಲ್ಲಿ ಬೇರೆ ಯಾವ ಮೃಗ ಪಕ್ಷಿಯೂ ಸಿಗದಿದ್ದಲ್ಲಿ ತನ್ನನ್ನು ಹೀಯಾಳಿಸುತ್ತಿದ್ದ ವೃತ್ತಪತ್ರಿಕೆಗಳೆಲ್ಲವನ್ನೂ ಒಂದು ಮರಕ್ಕೆ ಕಟ್ಟಿ ಅದಕ್ಕೆ ಗುರಿಯಿಟ್ಟು ಹೊಡೆದೂ ಹೊಡೆದೂ ಅದೇ ಆ ದಿನದ ಬೇಟೆಯೆಂದು ಲೆನಿನ್ನನು ಮನೆಗೆ ಬರುತ್ತಿದ್ದನಂತೆ! ನಾವೂ ಸಹಾ ಆ ವಿಮರ್ಶೆ ಬಂದ ಜಯಕರ್ನಾಟಕದ ಪ್ರತಿಯೊಂದನ್ನು ಹತ್ತಿರದಲ್ಲೇ ಯಿಟ್ಟುಕೊಂಡು (ಗುಂಡು ಹೊಡೆಯುವುದಕ್ಕಲ್ಲ) ಸಾಯಂಕಾಲ ವಾಯುವಿಹಾರಾರ್ಥವಾಗಿ ಹೋದಾಗ ಬೇಜಾರಾಗಿ ನಗುವು ಜೀವನಕ್ಕೆ ಬೇಕೇಬೇಕಾದಾಗ, ದಿವ್ಯವಾದ ವಿಮರ್ಶೆಯನ್ನು ಓದಿ ಪುನಃ ಪುನಃ ವಿಮರ್ಶಕನನ್ನು ಅಭಿನಂದನೀಯನನ್ನಾಗಿ ಮಾಡಿಕೊಳ್ಳುವೆವು. ಏನೇ ಆದರೂ ನಮ್ಮದು 'ನಾನ್ ವೈಲೆನ್ಸ್' ತತ್ವ (ಭೂಪಾಳಂ ಚಂದ್ರಶೇಖರಯ್ಯನವರ ಪತ್ರ.–ನೆನಪಿನ ದೋಣಿಯಲ್ಲಿ–918)

ಮಾದರಿ–2;

> ಜಯಕರ್ನಾಟಕದಲ್ಲಿ ಕೊಳಲು ಮತ್ತು ತಳಿರು ಇವುಗಳ ಮೇಲೆ ಬಂದ ವಿಮರ್ಶೆಯನ್ನು ಓದಿದೆವು. ನನ್ನ ಸಲಹೆ ಏನೆಂದರೆ, ನೀವು ಬರೆದಿರುವ 'ವಿಮರ್ಶಕ' ಕವಿತೆಯನ್ನು ಆತನಿಗೆ ಕಳಿಸುವುದು! ವಿಮರ್ಶಕನಿಗೆ ಸ್ವಲ್ಪ ರುಚಿಪಲ್ಲಟವಾಗಿದೆ! ನನಗೆ ತೋರುವುದೇನೆಂದರೆ ಅವನು ಪುಸ್ತಕದ ವಿಮರ್ಶೆಗಿಂತ, ತನ್ನ ಪಾಂಡಿತ್ಯ ಪ್ರದರ್ಶನವನ್ನು ಹೆಚ್ಚಾಗಿ ಮಾಡಿಕೊಂಡಂತೆ ತೋರುತ್ತದೆ. ಅವನ ವಿಮರ್ಶೆಯನ್ನು ಓದುತ್ತಾ ಓದುತ್ತಾ ಅವನ ತಲೆಯಲ್ಲಿರುವುದು ಮೆದುಳೋ ಮಣ್ಣೋ ಎಂದು ಸಂದೇಹವಾಗುತ್ತದೆ. ನನ್ನ ಸಿದ್ಧಾಂತವು ಮಣ್ಣೇ ಎಂದು! ಆ ಮಣ್ಣು ಮೆದುಳಿನ ಆಕೃತಿಯಲ್ಲಾದರೂ ಇದ್ದಿದ್ದರೆ ಅವನ ವಿಮರ್ಶೆಯ ಸರಣಿ ಬೇರೆಯಾಗಿರುತ್ತಿತ್ತು. ಅಂತೂ ಆ ವಿಮರ್ಶಕನ ವಿವೇಕಶೂನ್ಯವಾದ ವಿಮರ್ಶೆಯನ್ನು ಓದಿ ನಾವೆಲ್ಲ ಪಟ್ಟಾಗಿ ನಕ್ಕೆವು! ಅವನಿಂದ ದೂರದಲ್ಲಿದ್ದೇವೆ!–ಇನ್ನೇನು ಮಾಡಲು ಸಾಧ್ಯ? ಅವನೊಬ್ಬ ಪ್ರಾಂತಿಕ ಭಾವನೆ(ಪ್ರಾವಿನ್ಸಿಯಲಿಸಂ)ಗೆ ಬಲಿಬಿದ್ದ ಅಂಧ ಪಶು. ನಿಮ್ಮ ಕವನಗಳಲ್ಲಿ ದೋಷವನ್ನು ಹುಡುಕಿದನೆಂದು ನನಗೆ ಅವನಲ್ಲಿ ಆಗ್ರಹವಿಲ್ಲ. ಏಕೆಂದರೆ ಅಲ್ಲಲ್ಲಿ ದೋಷವಿರಬಹುದು–ಇದೆ–

ಎಂಬ ಭಾವನೆಯನ್ನು 'ಕವಿತೆಗೆ' ಎಂಬ ಕವನದಲ್ಲಿ ನೀವೇ ನುಡಿದಿದ್ದೀರ. ವಿಮರ್ಶಕನ ಕಣ್ಣಿಗೆ ಆ ಸುಂದರವಾದ ಕವನವು ಬಿದ್ದಂತೆ ತೋರುವುದಿಲ್ಲ. ಅವನಿಗೆ ಪಂಚೇಂದ್ರಿಯಗಳ ಶಕ್ತಿಯು ಪಲ್ಲಟವಾದಂತಿದೆ. ಅಂತೂ ಅವನ ವಿಮರ್ಶೆಯಿಂದ ಒಂದು ಉಪಯೋಗವು ಕಾಣಬರುತ್ತದೆ. ಮುಂದೆ ಒಂದು ಕಾಲದಲ್ಲಿ ಕಾವ್ಯವಿಮರ್ಶೆಗಳ ಚರ್ಚೆ ಬಂದಾಗ ಈ ಹೀನ ವಿಮರ್ಶೆ ಎಂದರೇನು ಅನ್ನುವುದಕ್ಕೆ ನಮ್ಮ ಧಾರವಾಡದ ವಿಮರ್ಶಕನ ವಿಮರ್ಶೆಯನ್ನು ಉತ್ತಮವಾದ ಉದಾಹರಣೆಯಾಗಿ ಹೇಳಬಹುದು. ಅದು ಬಿಟ್ಟು, ಅವನ ವಿಮರ್ಶೆಗಳಿಂದ ಇನ್ನು ಯಾವ ಉಪಯೋಗವೂ ಕಾಣಬರುವುದಿಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ ಅವನು ಕಾವ್ಯ ರಸಾನುಭವ ಮಾಡಲಾರದ 'ಷಂಡ'ನೆನ್ನಬಹುದು!. ಸಾಕು-ಅವನ ಮಾತು. (ಸೀತಾರಾಮ್ ಅವರ ಪತ್ರ, ನೆನಪಿನ ದೋಣಿಯಲ್ಲಿ -916)

ಇಲ್ಲಿ ಭೂಪಾಳಂ ಮತ್ತು ಸೀತಾರಾಮ್ ಇವರು ಕುವೆಂಪುಗೆ ಆತ್ಮೀಯ ಸ್ನೇಹಿತರಾಗಿರುವುದರಿಂದ; ಅವರ ಬಗ್ಗೆ ಗೌರವ ಮತ್ತು ಪ್ರೀತಿ ಇರುವುದರಿಂದ ಸಹಜವಾಗಿಯೆ ಇವರ ಪ್ರತಿಕ್ರಿಯೆಯಲ್ಲಿ ಪ್ರೀತಿ-ಗೌರವಗಳಿವೆ. ಸ್ನೇಹಿತನ ಕಾವ್ಯದ ಕುರಿತ ಕಟು ವಿಮರ್ಶೆಯನ್ನು ಇವರು ಸಹಿಸಿಕೊಳ್ಳಲಾರರು. ಯಾಕೆಂದರೆ ಇವರು ಸ್ನೇಹಿತರು. ಪ್ರೀತಿ ಮತ್ತು ಕಾವ್ಯ ಪ್ರೀತಿಗಳಲ್ಲಿ ಇಲ್ಲಿ ಭೇದಭಾವ ಇಲ್ಲ. ಇಂಥ ಅನೇಕ ಪ್ರತಿಕ್ರಿಯೆಗಳು ನಮ್ಮ ವಿಮರ್ಶೆಯಲ್ಲಿ ಸಂಭವಿಸಿವೆ. ಸ್ನೇಹ ಇಲ್ಲದಿದ್ದರೂ ಕವಿಯ ಬಗ್ಗೆ ಗೌರವ-ಪ್ರೀತಿ-ಭಕ್ತಿ ಇರುವವರ ವಿಮರ್ಶೆಯೂ ಗೌರವ-ಪ್ರೀತಿ-ಭಕ್ತಿಗಳಿಂದ ಕೂಡಿವೆ. ಆಶ್ಚರ್ಯವೆಂದರೆ ವ್ಯಕ್ತಿಯ ಬಗೆಗಿನ ಗೌರವವು ನಮ್ಮಲ್ಲಿ ಸಾಹಿತ್ಯದ ಬಗೆಗಿನ ಭಕ್ತಿಯಾಗಿ, ಸಾಹಿತ್ಯದ ಬಗೆಗಿನ ಪ್ರೀತಿಯು ವ್ಯಕ್ತಿ ಗೌರವವಾಗಿ ಅದಲು ಬದಲಾಗುವುದು. ಇದೂ ಕೂಡ ಸಂಬಂಧಿಕತೆಯ ರಾಜಕಾರಣವೇ! ಸ್ನೇಹ, ಪ್ರೀತಿ, ಗೌರವಗಳನ್ನು ವ್ಯಕ್ತಿಯ ಬಗ್ಗೆ ಇಟ್ಟುಕೊಂಡೂ ಆತನ ಸಾಹಿತ್ಯವನ್ನು ವಸ್ತುನಿಷ್ಠವಾಗಿ ವಿಮರ್ಶಿಸುವಂತೆ ಆಗುತ್ತದೆಂಬುದೇ ವಿಮರ್ಶಾ ಸಂಸ್ಕೃತಿಯ ಉನ್ನತಿಯ ಲಕ್ಷಣ. ಇಂಥ ಕಡೆಗೆ ನಮ್ಮ ಸಾಹಿತ್ಯವು ಸಾಗಲು ಸಮಕಾಲೀನತೆಯನ್ನು ದಾಟಬೇಕೇನೋ ಅನ್ನಿಸುತ್ತದೆ. ಅಲ್ಲದೆ ಸಂಪೂರ್ಣ ವಸ್ತುನಿಷ್ಠತೆ ಎಂಬುದು ಆದರ್ಶವೇ ಸರಿ.

ಸಂಬಂಧಿಕತೆಯ ರಾಜಕಾರಣವು ವಿಮರ್ಶಕನ ವಿಮರ್ಶೆಯ ದೃಷ್ಟಿಕೋನ, ವಿನ್ಯಾಸ, ಸ್ವರೂಪಗಳನ್ನು ಮಾತ್ರ ನಿಯಂತ್ರಿಸುವುದಿಲ್ಲ. ಇವೆಲ್ಲವುಗಳ ವಾಹಕವಾದ ವಿಮರ್ಶೆಯ ಭಾಷೆ ಮತ್ತು ಪರಿಭಾಷೆಯನ್ನೂ ಪ್ರಭಾವಿಸುತ್ತದೆ. ಇದಕ್ಕೆ ದೇ.ಜ.ಗೌ.ರವರ ಒಂದು ಮಾದರಿಯನ್ನು ಗಮನಿಸಬಹುದು.

ಗಾದೆಗಳು ಒಂದು ಭಾಷೆಯ ಅಮೂಲ್ಯ ಆಸ್ತಿ; ಶೈಲಿ ಪಾಯಸದ ದ್ರಾಕ್ಷಿ ಕೇಸರಿಗಳು. ಒಂದು ಸಮಾಜದ ಭಾವಾನುಭಾವಗಳ ಅಂತಸ್ಸತ್ವದ ರಸಗುಳಿಗೆಗಳಂತಿರುವ ಗಾದೆಗಳು ಒಂದು ಪ್ರಬಂಧ ಸಾಧಿಸಲಾರದ ಪರಿಣಾಮವನ್ನು ನಿರ್ವಹಿಸುತ್ತವೆ. ಇವು ಭಾಷೆಗೆ ವಿಟಮೀನು ಮಾತ್ರೆಗಳಂತಿರುತ್ತವೆ. ಅವು ಕತೆ ಅಥವಾ ಸಂಭಾಷಣೆಯ ನಡುವೆ ಬಂದಾಗ ಮನಸ್ಸಿನ ಗಗನದಲ್ಲಿ ಮಾತ್ರವಲ್ಲ, ಭಾಷೆಯ ಶರೀರದಲ್ಲಿ ಮಿಂಚು ಹರಿದಂತಾಗುತ್ತದೆ. 'ಆಯುಸ್ಸು ಕಾಡಿದೋರ ಸಂಗಡ ದೋಣಿ ಹತ್ತಿದ್ರೆ ಆಳಿಗೊಂದು ಗುಟುಕು ನೀರು', 'ಬೇಲಿಗೆ ಓತಿಕ್ಯಾತ ಸಾಕ್ಷಿ', 'ಹಸಿಗಾಯದ ಮೇಲೆ ಬಿಸಿನೀರು ಹುಯ್ಯು', 'ಸಲುಗೆ ಕೊಟ್ಟ ನಾಯಿ ಸಟ್ಟುಗ ನೆಕ್ಕಿತಂತೆ' ಪಾತ್ರಗಳ ಗುಣಾವಗುಣ ದರ್ಶನಕ್ಕೆ ಇವು ನಿರ್ಮಲ ಮಣಿದರ್ಪಣಗಳು.

ಉಪಮೆ ರೂಪಕಗಳು ಭಾಷೆಯ ಸೌಂದರ್ಯದ ತೋರುಗನ್ನಡಿಗಳು. ಅವು ಬರಿಯ ಬಾಹ್ಯ ಭೂಷಣಗಳು ಮಾತ್ರವಲ್ಲ, ಅಂತಸ್ಸೌಂದರ್ಯದ ನೆಲೆಗಳೂ ಹೌದು. ದಾರಿಯೆಡೆ ಅಲ್ಲಲ್ಲಿ ದೇವಾಲಯಗಳನ್ನೋ ತಟಾಕ ತರುನಿಬಿಡ ನದಿಗಳನ್ನೋ, ಉದ್ಯಾನಗಳನ್ನೋ ಹಕ್ಕಿಯಿಂಚರ ಚೆಲ್ಲಿದ ಕೊಳಗಳನ್ನೋ ಸಂಧಿಸಿದಾಗ ಮಾರ್ಗ ಶ್ರಮ ಬಯಲಾಗಿ, ಪ್ರವಾಸಸುಖ ಅಧಿಕವಾಗುವಂತೆ ಉಪಮಾ ರೂಪಕಗಳು ಗದ್ಯವಾಚಕನ ಆಹ್ಲಾದವನ್ನು ಉಕ್ಕಿಸುತ್ತವೆ. ಭಾಷಾ ಸಾಮ್ರಾಜ್ಯದ ಶ್ರೀಮಂತಿಕೆಯನ್ನು ಹೆಚ್ಚಿಸುವ ವಜ್ರದ ಗಣಿಗಳವು.. ಭಾವ ಕಾವೇರಿದಷ್ಟು ಲೋಕಾನುಭವಗಳು ಸಾಂದ್ರವಾದಷ್ಟೂ ಉಪಮಾ ರೂಪಕಗಳ ಫಸಲು ವರ್ಧಿಸುತ್ತದೆ. ಉರಗಾಭರಣ ಶಿವನಿಗೆ ಮಾತ್ರ

ಭೂಷಣ, ಸಾವಿರ ಹೆಡೆಗಳ ಆದಿಶೇಷನಿಗಲ್ಲದೆ ಭೂಭಾರವನ್ನು ಹೊರಬಲ್ಲ ಸಾಮರ್ಥ್ಯ ಅನ್ಯರಿಗೆ ಸಾಧ್ಯವಿಲ್ಲ. ಶ್ರೀ ಕೃಷ್ಣನಿಗೆ ಪೀತಾಂಬರಾದಿ ವಸ್ತ್ರ ಭೂಷಣಗಳೇ ಸೊಗಸು. ಗೊಮ್ಮಟನಿಗೆ ನಗ್ನತೆಯೆ ಒಚ್ಚತ. ಪದ್ಯಕಾವ್ಯ ಉಪಮಾ ರೂಪಕಗಳೆಷ್ಟಿದ್ದರೂ ಜೀರ್ಣಿಸಿಕೊಳ್ಳಬಲ್ಲದು. ಗದ್ಯದಲ್ಲಿ ಅವು ಮಿತಿಮೀರಿದರೆ ಅಜೀರ್ಣಕಾರಿ. (2575-ಪುಟ: 152)

ಈ ವಿಮರ್ಶೆಯ ಶೈಲಿ, ಭಾಷಾ ಪ್ರಯೋಗ, ಪರಿಭಾಷೆಗಳನ್ನು ನೋಡಿದರೆ ಕುವೆಂಪು ಸಾಹಿತ್ಯ ಭಾಷೆಯನ್ನು ಕುರಿತ ವಿಮರ್ಶೆಯು ಕುವೆಂಪು ಸಾಹಿತ್ಯ ಭಾಷೆ ಮತ್ತು ಶೈಲಿಗಳನ್ನು ತಾನೇ ಅಳವಡಿಸಿಕೊಂಡು ಆಸ್ವಾದನಾ ಮತ್ತು ಆರಾಧನಾ ಧಾಟಿಯಿಂದ ವಿವರಣಾತ್ಮಕ ನೆಲೆಗೆ ಚಲಿಸುತ್ತದೆ ಎನ್ನಿಸುತ್ತದೆ. ಸಂಬಂಧಿಕತೆಯ ರಾಜಕಾರಣದ ಪ್ರಭಾವ ಇದು. ವಿಮರ್ಶೆಯ ಸ್ವರೂಪವು ಹೀಗೆ ಆಗಲು ಕವಿಯ ಬಗೆಗೆ ತಾನು ಇರಿಸಿಕೊಂಡಿರುವ ವಿಮರ್ಶಕನ ನಂಬಿಕೆ-ಭಾವನೆಗಳು ಕೂಡ ಕಾರಣವಾಗಿವೆ.

ವಿವಿಮರ್ಶೆಯ ಚರ್ಚೆಯಲ್ಲಿ ಈಗಾಗಲೇ ವಲಯ ಮತ್ತು ಬಳಗಗಳನ್ನು ಆಪ್ತವಲಯ, ನವ್ಯ ವಲಯ, ಮೌನಿಗಳ ವಲಯ, ಆಲಿಪ್ತ ವಲಯ ಎಂದು ಗುರ್ತಿಸಲಾಗಿದೆ. ಮೇಲಿನ ನಾಲ್ಕೈದು ರೀತಿಯ ಸಂಬಂಧಗಳು ಮುಖ್ಯವಾಗಿ ತಮ್ಮ ರಾಜಕಾರಣ ನಡೆಸಿರುವುದು ಆಪ್ತವಲಯ ಮತ್ತು ನವ್ಯ ವಲಯಗಳಲ್ಲಿ ಮಾತ್ರ. ಮೌನಿಗಳ ವಲಯದ ಮೌನವು ನಿಜಕ್ಕೂ ಸಮಸ್ಯಾತ್ಮಕವಾದುದಾಗಿದೆ. ಇನ್ನು ಅಲಿಪ್ತ ವಲಯವು ಕುವೆಂಪುವನ್ನು ಮುಖಾಮುಖಿ ಆಗಿರುವ ರೀತಿಯು ಭಿನ್ನವಾಗಿದೆ. ನವ್ಯ ವಲಯದವರ ವಿಮರ್ಶೆಯ ಕಾಳಜಿಗಳು ಮತ್ತು ಅಲಿಪ್ತರ ಕಾಳಜಿಗಳ ನಡುವೆ ಸಾಕಷ್ಟು ವ್ಯತ್ಯಾಸ ಇದೆ. ಆಧುನಿಕತೆ ಮತ್ತು ಸಾಹಿತ್ಯದ ನಡುವಣ ಸಂಬಂಧ, ನಮ್ಮ ಸಮಾಜವು ಜಾಗತೀಕರಣ-ವ್ಯಾಪಾರೀಕರಣ ಉದಾರೀಕರಣ-ಭಯೋತ್ಪಾದನೆ-ನಿರ್ವಸಾಹತೀಕರಣಗಳ ಹಿನ್ನಲೆಯಲ್ಲಿ ಅಲಿಪ್ತರ ವಿಮರ್ಶೆಯು ಸಾಹಿತ್ಯವನ್ನು ಮುಖಾಮುಖಿಯಾಗಲು ಪ್ರಯತ್ನಿಸಿದೆ. ಆದರೆ ನವ್ಯ ವಲಯ ಸಾಹಿತ್ಯದ ಅಭಿವ್ಯಕ್ತಿಕ್ರಮ, ಕಲಾವಂತಿಕೆ, ಪದ್ಯವು ಪದ್ಯವಾಗಿದೆಯೋ ಇಲ್ಲವೋ? ಕಾದಂಬರಿಯ ಬಂಧ, ಕಥನ, ಕೇಂದ್ರ ಪ್ರಜ್ಞೆ ಹೀಗೆ ಸಾಹಿತ್ಯವನ್ನು ಸಾಹಿತ್ಯವನ್ನಾಗಿ ಮಾತ್ರ ನೋಡಿದೆ. ಈ ವಲಯದ ವಿಮರ್ಶೆಯು ಸಾಂಸ್ಕೃತಿಕ ಪ್ರಶ್ನೆಗಳನ್ನು ಎದುರಾಗಲೇ ಇಲ್ಲ. ಆದರೆ ಅಲಿಪ್ತ ವಲಯವು ವರ್ಗಹೋರಾಟ, ನಿರ್ವಸಾಹತೀಕರಣ, ಆಧುನಿಕತೆ, ತಳಸಾಂಸ್ಕೃತಿಕ ನೆಲೆ, ಪ್ರತಿರೋಧದ ನೆಲೆ, ಜ್ಞಾನ ಶಾಸ್ತ್ರೀಯ ನೆಲೆ, ಪರಿಸರ ಬಿಕ್ಕಟ್ಟುಗಳ ನೆಲೆ, ಹೀಗೆ ಹಲವು ನೆಲೆಗಳಿಂದ ಪಠ್ಯಗಳನ್ನು ಮುಖಾಮುಖಿಯಾಗಿದೆ. ನವ್ಯ ವಲಯವು ಪಠ್ಯವನ್ನು ಪಠ್ಯಕೇಂದ್ರಿತವಾಗಿ ನೋಡಿದ್ದರೆ ಅಲಿಪ್ತ ವಲಯವು ಪಠ್ಯವನ್ನು ಸಮಾಜಕೇಂದ್ರಿತವಾಗಿ, ಸಂಸ್ಕೃತಿಕೇಂದ್ರಿತವಾಗಿ ನೋಡಿದೆ. ಇವರ ಕಾಲಕ್ಕೆ ಬರುವ ಹೊತ್ತಿಗೆ ವಿಮರ್ಶೆಯ ಪ್ರಿಯಾರಿಟಿಗಳು ಬದಲಾಗಿವೆ. ವಿಧಾನಗಳು ಬದಲಾಗಿವೆ. ವಿಮರ್ಶೆಯೂ ಬೆಳೆದಿದೆ. ಸಾಹಿತ್ಯ ವಿಮರ್ಶೆಯು ಸಾಹಿತ್ಯ ವಿಮರ್ಶೆಯಾಗಿ ಉಳಿಯದೆ ಸಂಸ್ಕೃತಿ ಕಥನವಾಗಿ ಬೆಳೆದಿದೆ. ಬೆಳೆಯುತ್ತಿದೆ. ಹಾಗಾಗಿ ನವ್ಯ ವಲಯದ ವಿಮರ್ಶೆಗೂ ಅಲಿಪ್ತ ವಲಯದ ವಿಮರ್ಶೆಗೂ ಅಂತರ ಸಾಕಷ್ಟು ಇದೆ. ಆಪ್ತ ವಲಯವು ವಕೀಲಿ ವಿಮರ್ಶೆ ಆಗಿದ್ದಾಗ್ಯೂ, ಗುಣಗ್ರಹಣ, ಸಮರ್ಥನಾ ಧಾಟಿಗಳು ಇಲ್ಲಿ ಇದ್ದಾಗ್ಯೂ ಸಾಹಿತ್ಯವನ್ನು ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯಿಂದ ನೋಡುವ ಯತ್ನಗಳನ್ನು ಈ ವಿಮರ್ಶೆಯು ಮಾಡಿದೆ. ಆದರೆ ಇದು ಹೆಚ್ಚು ಜಾತಿ-ವರ್ಗದ ವಾದಗಳಿಗೆ ಅಂಟಿಕೊಂಡಿದೆ. ತಾತ್ವಿಕ ಮತ್ತು ಸಾಂಸ್ಕೃತಿಕ ಪ್ರಶ್ನೆಗಳಿಗೆ ದಾಟಿಕೊಂಡಿಲ್ಲ.

ಅಧ್ಯಾಯ–ಎಂಟು

# ವಿಮರ್ಶಾ ಸಂಸ್ಕೃತಿ: ಚಹರೆಗಳು

8.1. ವಿಮರ್ಶೆಯ ಚಹರೆಗಳು, ಲಕ್ಷಣಗಳು

8.2. ಕೊನೆಗೆ ಮೊದಲು

8.3. ನಮ್ಮ ವಿಮರ್ಶೆಯಲ್ಲಿ ಮಾರ್ಗಗಳು ರೂಪಗೊಂಡಿವೆಯೇ?

## ವಿಮರ್ಶಾ ಸಂಸ್ಕೃತಿ: ಚಹರೆಗಳು

ನಮ್ಮ ಆಚರಣೆಯಲ್ಲಿ ವಿಮರ್ಶೆಯ ಸ್ವರೂಪ ಅಥವಾ ವಿಮರ್ಶೆಯ ಪರಿಕಲ್ಪನೆಯ ಬಗ್ಗೆ ಯಾವ ಯಾವ ತತ್ವಗಳು ಪ್ರಕಟವಾಗಿವೆ; ವಿಮರ್ಶೆಯ ಕಾರ್ಯ ಅಥವಾ ಜವಾಬ್ದಾರಿ ಬಗ್ಗೆ ಯಾವ ತತ್ವಗಳು ಪ್ರಕಟವಾಗಿವೆ; ವಿಮರ್ಶೆಯ ವಿಧಾನಗಳು ಹೇಗಿರಬೇಕು, ಯಾವಾಗಿರಬೇಕು ಎಂಬ ಬಗ್ಗೆ ಯಾವ ನಿಲುವುಗಳು ಪ್ರಕಟವಾಗಿವೆ; ಯಾವ ವಿಧಾನಗಳನ್ನು ಅನುಸರಿಸಲಾಗಿದೆ; ಯಾವ ಯಾವ ರೂಪ–ಪಂಥ–ಮಾರ್ಗಗಳನ್ನು ಬಳಸಿ ವಿಮರ್ಶೆ ಮಾಡಲಾಗಿದೆ; ಯಾವ ಪ್ರವೃತ್ತಿಗಳನ್ನು ತೋರಲಾಗಿದೆ; ಯಾವ ಯಾವ ನೆಲೆಗಳಲ್ಲಿ ಸಾಂಸ್ಕೃತಿಕ ಅನುಸಂಧಾನಗಳನ್ನು ಸಾಹಿತ್ಯದೊಂದಿಗೆ ನಡೆಸಲಾಗಿದೆ; ಸಾಹಿತ್ಯ ತತ್ವ–ಸಾಹಿತ್ಯ ಸ್ವರೂಪ–ಪ್ರಕಾರ ಮೀಮಾಂಸೆಗಳ ಬಗ್ಗೆ ಯಾವ ತತ್ವಗಳು ಪ್ರಕಟವಾಗಿವೆ; ವಿಮರ್ಶೆಯ ಆಚರಣೆಯಲ್ಲಿ ಕಂಡುಬರುವ ಗುಣಲಕ್ಷಣಗಳು, ಚಹರೆಗಳು ಯಾವುವು; ಇವನ್ನೆಲ್ಲ ಆಚರಣೆಯ ಅಧ್ಯಯನದ ಮೂಲಕ ಕಂಡುಕೊಳ್ಳಲು ಈ ಅಧ್ಯಯನದಲ್ಲಿ ಯತ್ನಿಸಲಾಗಿದೆ. ಇವೆಲ್ಲವುಗಳನ್ನೆ ಇಲ್ಲಿ ಒಟ್ಟಾರೆಯಾಗಿ ವಿಮರ್ಶಾ ಸಂಸ್ಕೃತಿಯ ವಿನ್ಯಾಸ ಮತ್ತು ತಾತ್ವಿಕತೆ ಎಂದು ಕರೆಯಲಾಗಿದೆ. ಇವೆಲ್ಲವನ್ನು ಅಲ್ಲಲ್ಲಿ ಚದುರಿದಂತೆ ಮತ್ತು ನಿರ್ಧಿಷ್ಟ ರೂಪ, ಪಂಥ, ದೃಷ್ಟಿ, ವಿಧಾನಗಳನ್ನು ವಿವರಿಸುವಾಗ ಪರಿಕಲ್ಪಿಸುತ್ತ, ತಾತ್ವೀಕರಿಸುತ್ತ, ಕ್ರೋಢೀಕರಿಸುತ್ತ, ವ್ಯಾಖ್ಯಾನಿಸುತ್ತ ಬರಲಾಗಿದೆ.

ವಿಮರ್ಶೆಯ ಪರಿಕಲ್ಪನೆ, ಕಾರ್ಯ, ವಿಧಾನಗಳ ಬಗ್ಗೆ ಸೂಕ್ತಿರೂಪಿ ವಿಮರ್ಶೆಯು ತನ್ನದೇ ತತ್ವವನ್ನು ಮಂಡಿಸಿದರೆ, ಸರಳ ರೂಪಿ ವಿಮರ್ಶೆಯು ತನ್ನದೇ ತತ್ವಗಳನ್ನು ಮಂಡಿಸುತ್ತದೆ. ಸಾಹಿತ್ಯದಲ್ಲಿರುವ ಸೂಕ್ತಿಗಳನ್ನು ಆಯ್ದು ಸಂಯೋಜಿಸಿ ನೀಡುವುದು, ವ್ಯಾಖ್ಯಾನಿಸುವುದು, ನೀತಿತತ್ವಗಳನ್ನು ಅಪೇಕ್ಷಿಸುವ ಓದುಗರಿಗೆಂದೇ ಪ್ರತಿಪಠ್ಯಗಳನ್ನು ಒದಗಿಸುವುದು ಸೂಕ್ತಿ ರೂಪಿ ವಿಮರ್ಶೆಯಲ್ಲಿ ವಿಮರ್ಶೆಯ ಕಾರ್ಯವೂ ವಿಮರ್ಶೆಯ ಸ್ವರೂಪವೂ ಆಗಿದೆ. ಹಾಗೇ ಕುವೆಂಪು ಸಾಹಿತ್ಯವನ್ನು ನೇರವಾಗಿ ಗ್ರಹಿಸಿ ಓದಿ ಆಸ್ವಾದಿಸಲಾರದ ಶ್ರೀ ಸಾಮಾನ್ಯರಿಗೆ, ವಿದ್ಯಾರ್ಥಿಗಳಿಗೆ ಸಾಹಿತ್ಯವನ್ನು ತಲುಪಿಸುವ ಕೆಲಸವನ್ನು ವಿಮರ್ಶೆ ಮಾಡಬೇಕು ಎಂದು ಸರಳರೂಪಿ ವಿಮರ್ಶೆಯು ಹೇಳುತ್ತದೆ.

ಸಾಹಿತ್ಯ ಕೃತಿಯನ್ನು ಸಾಮಾಜಿಕ ಹಿನ್ನೆಲೆಯಿಂದ ನೋಡಬೇಕು, ರೂಪನಿಷ್ಠ, ಸೌಂದರ್ಯಾನುಭವ ನೆಲೆಯಲ್ಲಿ ನೋಡುವುದು ಸೂಕ್ತವಲ್ಲ ಎಂಬ ನಿಲುವನ್ನು ಮುಖ್ಯವಾಗಿ ಮಾರ್ಕ್ಸ್‌ವಾದಿ ವಿಮರ್ಶೆಯು ಮಂಡಿಸಿದರೆ; ಸಮಾಜದ ಲಿಂಗಾಧಾರಿತ ಶೋಷಣೆಯ ಪ್ರತಿನಿಧೀಕರಣವಾಗಿ ಮತ್ತು ಪರಿಹಾರ ಮಾರ್ಗಗಳ ಆಕರವನ್ನಾಗಿ ಸಾಹಿತ್ಯವನ್ನು ನೋಡಬೇಕು ಎಂದು ಸ್ತ್ರೀವಾದಿ ವಿಮರ್ಶೆಯು ಹೇಳುತ್ತದೆ. ಸಾಹಿತ್ಯವನ್ನು ಆಸ್ವಾದಿಸುವ–ಅರ್ಥೈಸುವ ಕೆಲಸವನ್ನು ವಿಮರ್ಶೆಯು ಮಾಡಬೇಕು. ವಿಮರ್ಶೆಯ ಸ್ವರೂಪವೇ ಆಸ್ವಾದನಾ ರೂಪದ್ದಾಗಿರಬೇಕು. ಸಾಹಿತ್ಯವನ್ನು ಮೌಲ್ಯಮಾಪನ ಮಾಡುವುದಕ್ಕಿಂತ ಗುಣಗ್ರಹಣವನ್ನು ಮಾಡಬೇಕು ಎಂಬ ತತ್ವವನ್ನು ವಿವರಣಾತ್ಮಕ ದೃಷ್ಟಿಯು ಮಂಡಿಸಿದರೆ; ಲೇಖಕನ ವ್ಯಕ್ತಿತ್ವ ಮತ್ತು ಸಾಹಿತ್ಯ ಎರಡನ್ನೂ ಒಟ್ಟಿಗೆ ಅಖಂಡವಾಗಿ ಗಮನಿಸಬೇಕು ಎಂಬ ತತ್ವವನ್ನು ಒಡನಾಟ ಕಥನವು ಮಂಡಿಸುತ್ತದೆ. ಅನ್ಯದೊಂದಿಗೆ ಮತ್ತು ಆಂತರಿಕವಾಗಿ ಸಾಹಿತ್ಯವನ್ನು ತೌಲನಿಕವಾಗಿ ಹೋಲಿಸಿ ಪ್ರೇರಣೆ–ಪ್ರಭಾವಗಳನ್ನು ಚರ್ಚಿಸಿ ಸಾಹಿತ್ಯವನ್ನು ಬೆಲೆಕಟ್ಟುವ ಕೆಲಸವನ್ನು ವಿಮರ್ಶೆಯು ಮಾಡಬೇಕು; ಹಾಗೆಯೆ ಸಾಹಿತಿಯ ಸ್ವಂತಿಕೆ–ವಿಶಿಷ್ಟತೆ–ವಿಭಿನ್ನತೆ–ಶ್ರೇಷ್ಠತೆಗಳನ್ನು ತಿಳಿಸುವ ಕೆಲಸವನ್ನು ವಿಮರ್ಶೆಯು ಮಾಡಬೇಕು ಎಂದು ತೌಲನಿಕ ದೃಷ್ಟಿಯು ಭಾವಿಸಿದರೆ; ಸಾಹಿತ್ಯ ಮತ್ತು ಸಾಹಿತಿಯನ್ನು ಸಾಹಿತ್ಯ ರೂಪದ ಮೂಲಕವೇ ವ್ಯಾಖ್ಯಾನಿಸುವ–ಕಥಿಸುವ ಕೆಲಸವನ್ನು ಮಾಡಬೇಕೆಂದು ಸಾಹಿತ್ಯ ರೂಪಿ ವಿಮರ್ಶೆಯು ಭಾವಿಸುತ್ತದೆ. ಹೀಗೆ ನಮ್ಮಲ್ಲಿನ ಒಂದೊಂದು ವಿಮರ್ಶೆಯ ದೃಷ್ಟಿಗಳು, ರೂಪಗಳು, ಪಂಥಗಳು ಹಲವು ತತ್ವಗಳನ್ನು ವಿನ್ಯಾಸಗಳನ್ನು ತಮ್ಮ ಆಚರಣೆಯಲ್ಲಿ ಮಂಡಿಸಿವೆ. ಆ ತತ್ವಗಳನ್ನೆಲ್ಲ ಮತ್ತೊಮ್ಮೆ ಇಲ್ಲಿ ಕ್ರೋಢೀಕರಿಸಲು ಹೋಗುವುದಿಲ್ಲ. ಆದರೆ ಈ ಹಿನ್ನೆಲೆಯಲ್ಲಿ ಭಿನ್ನ ದೃಷ್ಟಿ, ರೂಪ, ಪಂಥ, ವಿಧಾನಗಳಲ್ಲಿ ಕಂಡುಬಂದಿರುವ ಕೆಲವು ವಿಮರ್ಶಾ ಲಕ್ಷಣ, ಚಹರೆಗಳನ್ನು ಕ್ರೋಢೀರಿಸಿ, ಮರುನಿರೂಪಿಸಲು ಇಲ್ಲಿ ಯತ್ನಿಸಲಾಗುವುದು.

### 8.1. ವಿಮರ್ಶೆಯ ಚಹರೆಗಳು, ಲಕ್ಷಣಗಳು

ಕುವೆಂಪು ಸಾಹಿತ್ಯ ರಚನೆಗೆ ತೊಡಗಿದ ಕೂಡಲೇ ಅವರ ವಿಮರ್ಶೆಯು ನಡೆದಿಲ್ಲ. ಸಂಭವಕಾಲದಲ್ಲಿನ ಆಚರಣೆಯಂತೆ ಇವರ ಕೃತಿಗಳ ವಿಮರ್ಶೆಯು ಮೊದಲಿಗೆ ಮುನ್ನುಡಿ ರೂಪದಲ್ಲಿ ಸಂಭವಿಸಿದೆ. ಕುವೆಂಪು ಗರುಗಳಾದ ಟಿ.ಎಸ್.ವೆಂಕಣ್ಣಯ್ಯನವರು ಬಿರುಗಾಳಿ ನಾಟಕಕ್ಕೆ (ಕ್ರಿ.ಶ.1930) ಮತ್ತು ಬಿ.ಎಂ.ಶ್ರೀಕಂಠಯ್ಯನವರು

ಕೊಳಲು ಸಂಕಲನಕ್ಕೆ (ಕ್ರಿ.ಶ.1930) ಹಾಗೂ ಎ.ಆರ್.ಕೃಷ್ಣಶಾಸ್ತ್ರಿಗಳು (ಕ್ರಿ.ಶ.1932) ರಕ್ತಾಕ್ಷಿಗೆ ಹೀಗೆ ಹಲವರು ಇವರಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಈ ಎಲ್ಲ ಮುನ್ನುಡಿಗಳಲ್ಲಿ ಕುವೆಂಪುವನ್ನು ಹರಸಿ, ಅಭಿನಂದಿಸಿ, ಪ್ರೋತ್ಸಾಹಿಸಲಾಗಿದೆ. ಕುವೆಂಪು ಅವರ ಕಾವ್ಯಶಕ್ತಿ, ಹೊಸ ಭಾಷೆ–ಛಂದಸ್ಸಿನ ಪ್ರಯೋಗಗಳನ್ನು ಮೆಚ್ಚಲಾಗಿದೆ. ಬಿರುಗಾಳಿ ಮುನ್ನುಡಿಯಲ್ಲಿ ಟಿ.ಎಸ್.ವೆಂಕಣ್ಣಯ್ಯನವರು; "ಜೀವನದ ಪಥವು ಬದಲಾಯಿಸುತ್ತಿರುವ ಈ ಕಾಲದಲ್ಲಿ ಸಾಹಿತ್ಯದ ಪಥವೂ ಮಾರ್ಪಾಟನ್ನು ಹೊಂದುವುದು ಅನಿವಾರ್ಯ. ಕಾಲವೆಂಬ ಗಾಳಿ ತಾನಾಗಿ ತಾನೇ ಜಳ್ಳನ್ನು ತೂರುತ್ತದೆ; ಕಾಳು ಉಳಿಯುತ್ತದೆ. ಇದರಲ್ಲಿ ಕಾಳು ಯಾವುದು, ಜಳ್ಳು ಯಾವುದು ಎಂಬುದನ್ನು ಈಗ ಗ್ರಹಿಸಬೇಕಾದರೆ ವಿಶಾಲಭೂತಿಯು ಬೇಕು. ಈ ತೆರನ ಮನೋಧರ್ಮವು ಕನ್ನಡಿಗರಿಗೆ ಸ್ವಾಭಾವಿಕವಾದದ್ದೆಂಬುದನ್ನು ಕನ್ನಡ ಸಾಹಿತ್ಯ ಚರಿತ್ರೆಯನ್ನು ಓದಿದವರು ಅರಿಯದೆ ಇರಲಾರರು" (ಬಿರುಗಾಳಿ ಮುನ್ನುಡಿ: ಟಿ.ಎಸ್.ವೆಂಕಣ್ಣಯ್ಯ ಕ್ರಿ.ಶ.1930) ಎಂದು ಹೇಳುತ್ತಾ ತಾವೇ ತೀರ್ಪುನೀಡದೆ ಅದನ್ನು ಕಾಲದ ತೀರ್ಮಾನಕ್ಕೆ ಬಿಟ್ಟು ಬಿಡುತ್ತಾರೆ. 'ಕನ್ನಡಿಗರ ಸ್ವಾಭಾವಿಕವಾದ' ಮನೋಧರ್ಮವು ಈಗಾಗಲೇ ಕುವೆಂಪು ಸಾಹಿತ್ಯವನ್ನು ತನ್ನದೇ ತೀರ್ಪಿಗೆ ಗುರಿಪಡಿಸಿದೆ. ವಿಮರ್ಶಕರ ಮನೋಧರ್ಮಗಳನ್ನೇ ಬದಲಿಸುವಷ್ಟರ ಮಟ್ಟಿಗೆ ಇದು ಸಾಹಿತ್ಯದ ಅನುಸಂಧಾನಗಳನ್ನು ನಡೆಸಿದೆ.

ಮೊದಲಿಗೆ ಮುನ್ನುಡಿ ರೂಪದಲ್ಲಿ ಸಂಭವಿಸಿದ ವಿಮರ್ಶೆಯು ನಂತರ ಪತ್ರಿಕೆಗಳಲ್ಲಿ ಗ್ರಂಥವಿಮರ್ಶೆಯಾಗಿ ಸಂಭವಿಸಿದೆ. ಜಯಕರ್ನಾಟಕ, ಜೀವನ, ಪ್ರಬುದ್ಧ ಕರ್ನಾಟಕ, ಕನ್ನಡ ನುಡಿ (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ) ಮೊದಲಾದ ಪತ್ರಿಕೆಗಳಲ್ಲಿ ಗೋಕಾಕ್, ಮಾಸ್ತಿ, ಅ.ನ.ಕೃ, ಅರ್ಚಿಕ ವೆಂಕಟೇಶ ಮೊದಲಾದವರು ಕುವೆಂಪು ಕೃತಿಗಳ ವಿಮರ್ಶೆಯನ್ನು ಮಾಡಿದ್ದಾರೆ. ಆನಂತರದಲ್ಲಿ ಇಂದಿನ ಕನ್ನಡ ಕಾವ್ಯದ ಗೊತ್ತು ಗುರಿಗಳು ಎಂಬ ಗೋಕಾಕರ ಪುಸ್ತಕ, ಜಿ.ಪಿ.ರಾಜರತ್ನಂ ಅವರ ಚಿತ್ರಾಂಗದಾ ಚಿತ್ರಕೂಟ ಎಂಬ ಪುಸ್ತಕ ಹಾಗೂ ಹುಬ್ಬಳ್ಳಿಯ ಎಚ್.ಬಿ.ಕುಲಕರ್ಣಿ ಸಂಪಾದಿಸಿರುವ ಸಾಹಿತ್ಯಾಂಕ ಪುಸ್ತಕಗಳಲ್ಲಿ (ಕ್ರಿ.ಶ.1946 ರಿಂದ 1950 ನಡುವೆ) ಹಲವಾರು ಲೇಖನಗಳ ರೂಪದಲ್ಲಿ ವಿಮರ್ಶೆಯು ಸಂಭವಿಸಿದೆ. ಈ ಎಲ್ಲ ಪುಸ್ತಕಗಳಲ್ಲು ಬಹುಪಾಲು ವಿಮರ್ಶೆಯು ತೌಲನಿಕ ರೂಪದಲ್ಲೇ ಸಂಭವಿಸಿದೆ. ಹೀಗಾಗಿ ಮುನ್ನುಡಿರೂಪ, ಗ್ರಂಥ ವಿಮರ್ಶೆ(ಪುಸ್ತಕ ವಿಮರ್ಶೆ), ತೌಲನಿಕ ರೂಪಗಳು ಕುವೆಂಪು ಕುರಿತ ವಿಮರ್ಶೆಯ ಆರಂಭಿಕ ರೂಪಗಳಾಗಿವೆ.

ನಂತರದಲ್ಲಿ ಕುವೆಂಪುಗೆ ಅಭಿನಂದನರೂಪಿ ವಿಮರ್ಶೆಗಳು ಆರಂಭವಾಗಿವೆ. 'ಕವಿದರ್ಶನ' ಅಭಿನಂದನ ರೂಪಿ ವಿಮರ್ಶೆಯ ಮೊದಲ ಗ್ರಂಥ (ಕ್ರಿ.ಶ.1952–ಸಂ.ದೇಜಗೌ) ಇಲ್ಲಿಂದಲೇ ದೇಜಗೌ ಶಿಷ್ಯವೃತ್ತಿ ಆರಂಭವಾಗುತ್ತದೆ. 50ರ ದಶಕದಲ್ಲೇ ಬೇಂದ್ರೆ ಮತ್ತು ಅಡಿಗರ ಬಳಗಗಳು ಹಾಗೂ ಕುವೆಂಪು ಬಳಗಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯ (ವೈರಗಳು) ತಲೆದೋರುತ್ತವೆ. ಕವಿದರ್ಶನದ ನಂತರ ಒಂದು ಕಡೆ ಅಭಿನಂದನಾರೂಪಿ ವಿಮರ್ಶೆಯೂ ಇನ್ನೊಂದು ಕಡೆ ಕೃತಿನಿಷ್ಠ–ರೂಪನಿಷ್ಠ ಕಟು ವಿಮರ್ಶೆಯೂ ಜೈ ಮತ್ತು ಬೈ ರೂಪಗಳಲ್ಲಿ ಈ ಕಾಲದಿಂದ ಪ್ರಕಟವಾಗತೊಡಗಿವೆ. ಇದಾದ ನಾಲ್ಕುವರ್ಷಕ್ಕೆ 1956ರಲ್ಲಿ ಉಡುಗೊರೆ ಎಂಬ ಮತ್ತೊಂದು ಅಭಿನಂದನಾಗ್ರಂಥ ಚಿಕ್ಕಮಗಳೂರಿನಲ್ಲಿ ಅಮ್ಡೂರಿ ಸಮಾರಂಭದಲ್ಲಿ ಅರ್ಪಿತವಾಗಿದೆ. 1965 ರಿಂದ 1969ರವರೆಗೆ ಈ ನಾಲ್ಕು ವರ್ಷಗಳಲ್ಲಿ ಕವಿಶೈಲ, ಗಂಗೋತ್ರಿ, ಅವಲೋಕನ, ಉಪಾಯನ ಕೃತಿಕರಂಡ ಹೀಗೆ ನಾಲ್ಕು ಅಭಿನಂದನ ಗ್ರಂಥಗಳು ಪ್ರಕಟಗೊಂಡಿವೆ. ಈ ವರ್ಷಗಳಲ್ಲಿ ಸಾವಿರಾರು ಪುಟಗಳಷ್ಟು ಕುವೆಂಪು ಮೇಲೆ ವಿಮರ್ಶೆ ಸಂಭವಿಸಿದೆ. 70ರ ನಂತರದಲ್ಲಿ ಒಂದೊಂದು ದಶಕಕ್ಕೂ ಕುವೆಂಪು ಕುರಿತ ವಿಮರ್ಶೆ–ಅನುಸಂಧಾನಗಳು ಹೆಚ್ಚುತ್ತಲೇ ಹೋಗಿವೆ. 2004ನೇ ಇಸವಿಯಲ್ಲಿ ಕುವೆಂಪು ಜನ್ಮಶತಮಾನೋತ್ಸವವನ್ನು ಸರ್ಕಾರವೇ ಘೋಷಿಸಿದ್ದರಿಂದ ಆ ಸಾಲಿನಲ್ಲಿ ಅನೇಕ ಕಾರ್ಯಕ್ರಮಗಳು ಜರುಗಿವೆ. ಇದೊಂದೇ ವರ್ಷದಲ್ಲಿ 50ಕ್ಕೂ ಹೆಚ್ಚು ಪುಸ್ತಕಗಳು ಕುವೆಂಪು ಕುರಿತು ನಾಡಿನಾದ್ಯಂತ ಪ್ರಕಟವಾಗಿವೆ. ಬಹುಶಃ ಕನ್ನಡದ ಬೇರಾವ ಲೇಖಕನಿಗೂ ಇಷ್ಟು ಪ್ರಮಾಣದ ವಿಮರ್ಶಾಕೃತಿಗಳು ಒಂದೇ ವರ್ಷ ಪ್ರಕಟವಾಗಿಲ್ಲ. ಇದೊಂದು ದಾಖಲೆಯೂ ಹೌದು.

ಸರಿಸುಮಾರು 1980ರವರೆಗೆ ಬಂದಿರುವ ಕುವೆಂಪು ಕುರಿತ ವಿಮರ್ಶೆಯು (ಅಭಿನಂದನ ರೂಪಿ, ಅಧ್ಯಯನ ರೂಪಿ, ಒಡನಾಟ ರೂಪಿ, ತೌಲನಿಕ ರೂಪಿ, ಕೃತಿನಿಷ್ಠ ಧಾಟಿ ಹೀಗೆ ಹಲವು ರೂಪಗಳಲ್ಲಿ ಸಂಭವಿಸಿದ್ದರೂ) ಅದೆಲ್ಲವೂ ಸರಿಸುಮಾರು ವರ್ಣನಾತ್ಮಕ ಮತ್ತು ಪ್ರಾಯೋಗಿಕ ರೂಪದಲ್ಲೆ ಪ್ರಕಟವಾಗಿದೆ. ಈ ಕಾಲದಲ್ಲಿ ಕಾವ್ಯದ ಬಗೆಗೆ ಹೆಚ್ಚಾಗಿ ಚರ್ಚೆ ನಡೆದಿದೆ. ಇತರ ಪ್ರಕಾರಗಳ ಬಗ್ಗೆ ಅಷ್ಟಾಗಿ ಚರ್ಚೆ ನಡೆದಿಲ್ಲ. ಆದರೆ 1980ರ ನಂತರದಲ್ಲಿ ವಿಮರ್ಶೆಗೆ ಹೊಸ ತಿರುವು ಲಭಿಸಿದೆ. ಜಿ.ಎಸ್.ಎಸ್,

ಡಿ.ಆರ್.ನಾಗರಾಜ್, ಬಿ.ಕೃಷ್ಣಪ್ಪ, ಪ್ರಸನ್ನ, ತೇಜಸ್ವಿ ಮುಂತಾದ ಹೊಸ ಪೀಳಿಗೆಯ ಜನ ಕುವೆಂಪು ಮೇಲೆ ಬರೆಯಲಾರಂಭಿಸಿದ್ದಾರೆ. ಇದೆಲ್ಲವನ್ನೂ ಅಲಿಪ್ತ ವಿಮರ್ಶೆಯೆಂದು ಈಗಾಗಲೇ ಗುರ್ತಿಸಲಾಗಿದೆ. 90ರ ದಶಕದಲ್ಲಿ ಅಲಿಪ್ತ ವಿಮರ್ಶೆಯು ಇನ್ನಷ್ಟು ಬೆಳೆದಿದೆ. ರಹಮತ್ ತರೀಕೆರೆ, ಎಚ್.ಎಸ್.ರಾಘವೇಂದ್ರರಾವ್, ಕೆ.ವಿ.ನಾರಾಯಣ, ಕಲ್ಗುಡಿ, ಬರಗೂರು, ರಾಜಾರಾಮ ಹೆಗಡೆ, ಎಸ್.ಚಂದ್ರಶೇಖರ್, ಆರ್.ವಿ.ಭಂಡಾರಿ, ಕೇಶವಶರ್ಮ, ಲತಾರಾಜಶೇಖರ್, ಟಿ.ಎಸ್.ಸತ್ಯನಾಥ್, ಮುರಾರಿ ಬಲ್ಲಾಳ, ರಾಜೇಂದ್ರ ಚೆನ್ನಿ, ಗಿರಡ್ಡಿ ಆಮೂರ, ಶಿವರಾಮಯ್ಯ ಮೊದಲಾದವರು ಕುವೆಂಪು ಮೇಲೆ ಈ ದಶಕದಿಂದ ಬರೆಯತೊಡಗಿದ್ದಾರೆ.

ಜೈ ಮತ್ತು ಬೈ ವಿಮರ್ಶೆಗಳಿಂದ ಭಿನ್ನವಾದ ಲೇಖಕರ ಮೌಲ್ಯಮಾಪನ ಈ ದಶಕದಿಂದ ಹೆಚ್ಚಾಗಿ ಆರಂಭವಾಗಿದೆ. ಮಾರ್ಕ್ಸ್‌ವಾದಿ ದೃಷ್ಟಿ, ಸ್ತ್ರೀವಾದಿ ದೃಷ್ಟಿ, ಪ್ರತಿಸಂಸ್ಕೃತಿ-ತಳಸಂಸ್ಕೃತಿ ದೃಷ್ಟಿಗಳು ಹೆಚ್ಚು ಇಲ್ಲಿಂದ ಬಳಕೆಗೊಂಡಿವೆ. ಈ ದಶಕದಲ್ಲಿ ಕುವೆಂಪುವನ್ನು ವಿಮರ್ಶಿಸುವ ಬಳಗ ವಿಸ್ತಾರವಾಗಿದೆ. ಪುನರ್ ಅನ್ವೇಷಣೆ, ಪುನರ್ಮೌಲ್ಯಮಾಪನ ಪ್ರಜ್ಞೆಗಳು, ಲೇಖಕನನ್ನು ಯುಗದ ಪ್ರತಿನಿಧಿಯಾಗಿ ತೂಗಿ ನೋಡುವ ಯತ್ನಗಳು, ಪರಿಣಾಮ ಮೀಮಾಂಸೆ, ಕಾರಣ ಮೀಮಾಂಸೆಗಳು ಬೆಳೆದಿವೆ. ವರ್ಣ-ವರ್ಗ ದೃಷ್ಟಿಯು ಸಾಂಸ್ಕೃತಿಕ ದೃಷ್ಟಿಯಾಗಿ ಹೊರಳಿಕೊಂಡಿದೆ. 80ರ ದಶಕದ ಕೊನೆಯಲ್ಲಿ ಆರಂಭವಾಗಿರುವ ಸ್ತ್ರೀವಾದಿ ದೃಷ್ಟಿಯು 90ರ ದಶಕದಲ್ಲಿ ಮತ್ತು ಸಹಸ್ರಮಾನದಲ್ಲಿ ಬಲಕಾಯಿಸಿಕೊಂಡಿದೆ. 90ರ ದಶಕ ಮತ್ತು ಸಹಸ್ರಮಾನದಲ್ಲಿ ಸಿ.ನಾಗಣ್ಣ, ನಂಗಲಿ, ಎಲ್.ಸಿ.ಸುಮಿತ್ರ, ಸುಮಿತ್ರಾ ಬಾಯಿ, ಪರಿಮಳಾಬಾಯಿ, ಬಾನುಮತಿ, ಬೈರಮಂಗಲ ರಾಮೇಗೌಡ, ಲಲಿತಾನಾಯಕ, ಕಮಲಾ ಹಂಪನಾ, ವಿಜಯ ಸುಬ್ಬರಾಜ್, ಮಲ್ಲಿಕಾಘಂಟಿ, ಗುರುಪಾದ ಮರಿಗುದ್ದಿ, ವಿ.ಬಿ.ತಾರಕೇಶ್ವರ, ಕೆ.ಸಿ.ಶಿವಾರೆಡ್ಡಿ, ಎಸ್.ಜಿ.ಸಿದ್ಧರಾಮಯ್ಯ, ಜಿ.ಬಿ.ಹರೀಶ್, ಮೊಗಳ್ಳಿ ಗಣೇಶ್, ಬಿ.ಎಂ.ಪುಟ್ಟಯ್ಯ, ವಿನಯಾ, ವಿಠ್ಠಲರಾವ್ ಹೀಗೆ ಅನೇಕರು ಕುವೆಂಪು ವಿಮರ್ಶೆಗೆ ಪ್ರವೇಶ ಮಾಡಿದ್ದಾರೆ. (ಇತ್ತೀಚಿನ ಇಪ್ಪತ್ತು ವರ್ಷಗಳಲ್ಲಿ ಪಿಎಚ್.ಡಿ ಪದವಿ ಅಧ್ಯಯನಗಳೂ ಹೆಚ್ಚಾಗಿವೆ.) ಕುವೆಂಪು ಸಾಹಿತ್ಯ ಮತ್ತು ವಿಚಾರದ ಸಮಕಾಲೀನತೆ, ಪ್ರಸ್ತುತತೆಯ ಪ್ರಶ್ನೆಗಳು ಇಲ್ಲಿ ಪ್ರಧಾನವಾಗಿ ಚರ್ಚಿತವಾಗಿವೆ. ಮೌಲ್ಯಾತ್ಮಕ ಅಧ್ಯಯನಗಳು, ಅಂತಃಸಂಬಂಧಗಳ ಅಧ್ಯಯನಗಳು, ವೈಚಾರಿಕತೆ-ಸೈದ್ಧಾಂತಿಕತೆಯ ನಿರ್ವಚನಗಳು ಹೆಚ್ಚಾಗಿ ನಡೆದಿವೆ. ಕೃತಿದೃಷ್ಟಿಯು ಪ್ರಕಾರಗಳ ಅಭ್ಯಾಸವಾಗಿ, ಪ್ರಕಾರಗಳ ಚರ್ಚೆಯು-ಒಟ್ಟಾರೆ ಕುವೆಂಪು ಸಾಹಿತ್ಯದ ಅಖಂಡ ಚರ್ಚೆಯಾಗಿ ಬೆಳೆದಿದೆ. ಈ ಕಾಲಮಾನದಲ್ಲಿ ಜಾಗತೀಕರಣ, ಆಧುನಿಕೋತ್ತರವಾದಗಳ ಹಿನ್ನೆಲೆಯಲ್ಲಿ; ಅನನ್ಯತೆ-ಪ್ರಸ್ತುತತೆಗಳ ಹಿನ್ನೆಲೆಯಲ್ಲಿ ವಿಮರ್ಶೆಯು ಹೆಚ್ಚಾಗಿ ಬೆಳೆದಿದೆ. ಕುವೆಂಪು ದೃಷ್ಟಿ ಧೋರಣೆಗಳನ್ನು ಪರಿಶೀಲಿಸುವ, ನಿರ್ವಚಿಸುವ, ಪರೀಕ್ಷಿಸುವ ಮತ್ತು ಅವುಗಳ ಎದುರು ತಮ್ಮದೇ ತಕರಾರುಗಳನ್ನು ಹೂಡುವ ಪ್ರವೃತ್ತಿಯೂ ಬೆಳೆದಿದೆ. 50-60ರ ದಶಕದ ಜೀವನ, ಜಯಕರ್ನಾಟಕ, ಕನ್ನಡ ನುಡಿ, ಪ್ರಬುದ್ಧ ಕರ್ನಾಟಕ ಮೊದಲಾದ ಪತ್ರಿಕೆಗಳು ಕುವೆಂಪುವನ್ನು ನೋಡುತ್ತಿದ್ದ ಕ್ರಮಕ್ಕೂ 80-90ರ ದಶಕದ ಶೂದ್ರ, ಸಂಕ್ರಮಣ, ಲಂಕೇಶ್, ಸಂವಾದ, ಅನ್ವೇಷಣೆಗಳು ಕುವೆಂಪುವನ್ನು ನೋಡಿರುವ ಕ್ರಮಕ್ಕೂ ಬಹಳ ವ್ಯತ್ಯಾಸವಿದೆ. ವಿಮರ್ಶೆಯ ಆದ್ಯತೆಗಳು, ದೃಷ್ಟಿಗಳು, ಬಳಗಗಳು ಬದಲಾಗಿವೆ. ಪೀಳಿಗೆಯೇ ಬದಲಾಗಿದೆ. ಹಾಗಾಗಿ ವಿಮರ್ಶೆಯ ಸ್ವರೂಪದಲ್ಲೂ ಬದಲಾವಣೆಗಳು ಸಂಭವಿಸಿವೆ.

ಈ ಕಾಲಮಾನದಲ್ಲಿ ಪ್ರಕಟವಾದ 'ಶ್ರೀ ಕುವೆಂಪು', 'ಕುವೆಂಪು ಒಂದು ಪುನರನ್ವೇಷಣೆ', 'ಕುವೆಂಪು ಕೃತಿ ವಿಮರ್ಶೆ', 'ಕುವೆಂಪು ಕಾದಂಬರಿಗಳು', 'ಕುವೆಂಪು ವಿಚಾರಧಾರೆಯ ಪ್ರಸ್ತುತತೆ', 'ರಾಷ್ಟ್ರ ನಿರ್ವಚನ ಮತ್ತು ಕುವೆಂಪು ವಾಙ್ಞಯ', 'ಕುವೆಂಪು ಕನಾಟಕ', 'ಕನ್ನಡ ಸಾಹಿತ್ಯ ಕುವೆಂಪು ಸಂಸ್ಕೃತಿ ಚಿಂತನೆ' ಇಂತಹ ಸಂಪಾದಿತ ಕೃತಿಗಳು (ಇವುಗಳಲ್ಲಿ ಒಂದರೆಡನ್ನು ಬಿಟ್ಟರೆ ಮಿಕ್ಕವು ವಿಚಾರಸಂಕಿರಣಗಳ ಉತ್ಪನ್ನಗಳು) ಕುವೆಂಪು ಸಾಹಿತ್ಯ ಮತ್ತು ಸತ್ವಗಳನ್ನು ಬಹು ಚೆನ್ನಾಗಿ ವಿಮರ್ಶಿಸಿವೆ. ಜೈ-ಬೈ-ಅಲಿಪ್ತಗಳೆಲ್ಲವನ್ನು ಮೀರಿದ ಕನ್ನಡ ವಿಮರ್ಶೆ ಅಥವಾ ಇವೆಲ್ಲವುಗಳನ್ನು ಒಳಗೊಂಡ ಕನ್ನಡ ವಿಮರ್ಶೆ ಈ ಕೃತಿಗಳಲ್ಲಿದೆ. ಆಧುನಿಕೋತ್ತರ ಚಿಂತನೆಗಳು ಇಲ್ಲಿ ಪ್ರಧಾವಾಗಿವೆ. ಆದರೆ ಹಳೆ ಪ್ರಾಯೋಗಿಕ ವಿಮರ್ಶೆ, ವರ್ಣನಾತ್ಮಕ ವಿಮರ್ಶೆ, ಕೃತಿನಿಷ್ಠ, ಪ್ರಕಾರನಿಷ್ಠ, ರೂಪನಿಷ್ಠ ದೃಷ್ಟಿಗಳು ನಷ್ಟವಾಗದೆ ಒಳಸೇರಿಹೋಗಿವೆ.

ವಿಮರ್ಶಕರ ದೃಷ್ಟಿಯಿಂದ ನೋಡಿದರೆ ಕುವೆಂಪು ಕುರಿತಂತೆ ಅತಿ ಹೆಚ್ಚು (ಗಾತ್ರದಲ್ಲಿ) ವಿಮರ್ಶೆ ಬರೆದಿರುವವರು ದೇಜಗೌ. ಕುವೆಂಪು ಬಗ್ಗೆ ಇವರಷ್ಟು ಇನ್ನಾರೂ ಬರೆದಿಲ್ಲ. ಇನ್ನೂರಕ್ಕೂ ಹೆಚ್ಚು ಲೇಖನಗಳನ್ನು ಇವರು ಬರೆದಿದ್ದಾರೆ. ಹಲವಾರು ಕೃತಿಗಳನ್ನು ಸಂಪಾದಿಸಿದ್ದಾರೆ. ಇವರ ನಂತರದಲ್ಲಿ ಕ್ರಮವಾಗಿ (ಗಾತ್ರದಲ್ಲಿ) ಸಿ.ಪಿ.ಕೆ, ಎಸ್.ವಿ.ಪರಮೇಶ್ವರ ಭಟ್ಟ, ಎಚ್.ಜೆ.ಲಕ್ಕಪ್ಪಗೌಡ, ಕೊ.ಚೆನ್ನಬಸಪ್ಪ, ಎಚ್.ತಿಪ್ಪೇರುದ್ರಸ್ವಾಮಿ ಇವರುಗಳು ಬರುತ್ತಾರೆ. ಲಕ್ಕಪ್ಪಗೌಡರೊಬ್ಬರನ್ನು ಬಿಟ್ಟರೆ ಮಿಕ್ಕವರ ವಿಮರ್ಶೆಗಳು ಪ್ರಾಯೋಗಿಕ, ಅನ್ವಯಿಕ, ವರ್ಣನಾತ್ಮಕ

ಧಾಟಿಯಲ್ಲೇ ಇವೆ. ಲೇಖಕರ ಬಗೆಗಿನ ಪ್ರೀತಿ, ಅಭಿಮಾನಗಳೇ ಇವರೆಲ್ಲರ ವಿಮರ್ಶೆಯಲ್ಲೂ ಪ್ರಧಾನವಾಗಿ ವ್ಯಕ್ತವಾಗಿವೆ. ಆಲನಹಳ್ಳಿ, ಡಿ.ಕೆ.ರಾಜೇಂದ್ರ, ಹ.ಕ.ರಾಜೇಗೌಡ, ಜೀಶಂಪ, ಸುಧಾಕರ, ಎನ್.ಬೋರಲಿಂಗಯ್ಯ, ಸುಜನಾ, ಭಗವಾನ್ ಇವರುಗಳೆಲ್ಲ ಮೈಸೂರಿನ ಬಳಗದವರೇ ಆಗಿದ್ದು ಕುವೆಂಪು ಬಗೆಗೆ ಇವರುಗಳು ಸಾಕಷ್ಟು ಕೆಲಸ ಮಾಡಿದ್ದಾರೆ. ಎನ್.ಬೋರಲಿಂಗಯ್ಯ, ಸುಜನಾ, ಭಗವಾನ್, ಆಲನಹಳ್ಳಿ ಇಂತಹವರು ಮೈಸೂರು ಬಳಗದಲ್ಲಿದ್ದೂ ಸ್ವಲ್ಪ ವಸ್ತುನಿಷ್ಠವಾಗಿ ಕಾಣುವ ವಿಮರ್ಶಕರಾಗಿದ್ದಾರೆ.

ಮೀಮಾಂಸೆಯು ನಮ್ಮಲ್ಲಿ ಸಾಹಿತ್ಯ ರಚನೆಯ ಪರಿಕರಗಳನ್ನು ಒದಗಿಸುವ ಮತ್ತು ಅಧ್ಯಯನ ಪರಿಕರಗಳನ್ನು ಒದಗಿಸುವ ಹಾಗೂ ಸಾಂಸ್ಕೃತಿಕ ಅನುಸಂಧಾನಗಳ ಪರಿಕರವೇ ಆಗುವ ಒಂದು ಶಿಸ್ತು. ಆದರೆ ವಿಮರ್ಶೆಗೆ ಈ ವ್ಯಾಪ್ತಿ ಆಧುನಿಕ ಸಂದರ್ಭದಲ್ಲಿ ಹೆಚ್ಚಾಗಿ ಪ್ರಾಪ್ತವಾಗಿಲ್ಲ. ಇದು ಸಾಹಿತ್ಯ ಅಧ್ಯಯನ–ಮೌಲ್ಯಮಾಪನಗಳ ವಲಯದ ಶಿಸ್ತಾಗಿಯೆ ಹೆಚ್ಚಾಗಿ ರೂಪಗೊಂಡಿದೆ. ಈ ಅಧ್ಯಯನ–ಮೌಲ್ಯಮಾಪನಗಳ ವಲಯಕ್ಕೆ ಹೋಲಿಸಿದರೆ ಪರಿಕರ ನಿರ್ಮಾಣ ಮತ್ತು ಸಾಂಸ್ಕೃತಿಕ ಅನುಸಂಧಾನಗಳ ವಲಯ ತುಂಬಾ ಕಿರಿದಾಗಿದೆ. ಸಾಹಿತ್ಯವನ್ನು ಬಾಳುವ ಆಚರಣೆಗಳು ಕಡಿಮೆ. ಇದು ವಿಮರ್ಶೆಯ ಬಿಕ್ಕಟ್ಟಾಗಲೀ, ಸಾಹಿತ್ಯದ ಸತ್ವಹೀನತೆಯ ಪ್ರಶ್ನೆಯಾಗಲೀ ಅಲ್ಲ. ಆಧುನಿಕತೆಯ ಬಿಕ್ಕಟ್ಟಿದು. ಸಾಹಿತ್ಯವು ಅಪ್ರಶಸ್ತವಾಗುತ್ತಿರುವ–ಅಪ್ರಮುಖವಾಗುತ್ತಿರುವ ಕಾಲ ಇದು. ಸಾಹಿತ್ಯಕ್ಕಿಂತ ಇತರ ಎಲೆಕ್ಟ್ರಾನಿಕ್ ಮೀಡಿಯಾಗಳು ಪ್ರಾಶಸ್ತ್ಯ ಪಡೆದುಕೊಳ್ಳುತ್ತಿರುವ; ಸಾಹಿತ್ಯದ ಅನುಸಂಧಾನಗಳೇ ಅಪ್ರಮುಖವೂ, ಅನಗತ್ಯವೂ ಆಗುತ್ತಿರುವ ಕಾಲವಿದು. ಹೀಗಾಗಿ ವಿಮರ್ಶೆಗೆ ಇದ್ದ ಸಾಂಸ್ಕೃತಿಕ ಅನುಸಂಧಾನಗಳ ವಲಯಗಳು ಬೌದ್ಧಿಕ ಚಟುವಟಿಕೆ ಮತ್ತು ಶೈಕ್ಷಣಿಕ ಚಟುವಟಿಕೆಗಳಾಗಿ ರೂಪಾಂತರವಾಗುತ್ತಿವೆ. ಅಥವಾ ಅವುಗಳು ಕಡಿಮೆ ಪ್ರಮಾಣದಲ್ಲು ಇವು ಹೆಚ್ಚಿನ ಪ್ರಮಾಣದಲ್ಲೂ ನಡೆಯುತ್ತಿವೆ. ಒಟ್ಟಾರೆ ಯುಗಧರ್ಮವೇ ಸಾಕಷ್ಟು ಬದಲಾಗಿದೆ. ಹಾಗಾಗಿಯೇ ವಿಮರ್ಶೆಯು ಪರಿಕಲ್ಪನೆಯಲ್ಲೂ ನಮ್ಮಲ್ಲಿ ಸಾಂಸ್ಕೃತಿಕ ಅನುಸಂಧಾನಗಳ ಆಯಾಮವು ಗೈರುಹಾಜರಾಗಿರಬಹುದು.

ಇಂದು ತೌಲನಿಕ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ಹೀಗೆ ಹತ್ತು ಹಲವು ವಿಮರ್ಶಾ ಮಾರ್ಗಗಳು ನಮ್ಮಲ್ಲಿವೆ. ಈ ಯಾವ ಮಾರ್ಗಗಳನ್ನೂ ಪ್ರತ್ಯೇಕವಾಗಿ ಅಥವಾ ಏಕಾಂಗವಾಗಿ ಆಶ್ರಯಿಸಿದ ವಿಮರ್ಶಾ ಪ್ರಾಕ್ಟೀಸುಗಳು ನಮ್ಮಲ್ಲಿ ಜರುಗಿಲ್ಲ. ಇವೆಲ್ಲವನ್ನು ಕೂಡ ಅಪ್ರೋಚುಗಳಂತೆ, ಮೆತೆಡ್ಡುಗಳಂತೆ, ವಿಮರ್ಶೆಯ ದೃಷ್ಟಿಕೋನಗಳಂತೆ ಬಳಸಿರುವುದುಂಟು. ದೃಷ್ಟಿಗಳ ಒಳಗೆ ದೃಷ್ಟಿಗಳು, ಮಾರ್ಗದ ಒಳಗೆ ಮಾರ್ಗಗಳು, ಒಂದು ವಿಮರ್ಶಾ ವಿಧಾನದ ಒಳಗೆ ಹಲವು ವಿಮರ್ಶಾ ವಿಧಾನಗಳು ಬೆರೆತು ಪ್ರಯೋಗವಾಗುವ ವಿಮರ್ಶಾ ಸಂಸ್ಕೃತಿ ನಮ್ಮದು. ಅಂದರೆ ಸ್ತ್ರೀವಾದಿ ದೃಷ್ಟಿಯಿಂದ ವಿಮರ್ಶೆ ಮಾಡುವಾಗ ಚಾರಿತ್ರಿಕವಾದ ದೃಷ್ಟಿಯೂ, ತೌಲನಿಕವಾದ ದೃಷ್ಟಿಯೂ, ಪರಿಕಲ್ಪನೀಕರಣ ವಿಧಾನವೂ, ಆಶಯದ ಅನ್ವೇಷಣೆಯೂ ಎಲ್ಲವೂ ಪ್ರಯೋಗ ಆಗುತ್ತಿರುತ್ತವೆ. ಹೀಗಾಗಿ ಒಂದು ದೃಷ್ಟಿಯಲ್ಲಿ ಹಲವು ದೃಷ್ಟಿಗಳು, ಒಂದು ಮಾರ್ಗದಲ್ಲಿ ಹಲವು ವಿಧಾನಗಳು ಅಂತರ್ಗತ ಆಗಿರುವುದೇ ನಮ್ಮ ವಿಮರ್ಶೆಯ ವಿನ್ಯಾಸವಾಗಿದೆ. ಹೀಗಾಗಿ ಒಂದು ದೃಷ್ಟಿಯಲ್ಲಿ ಬಹು ದೃಷ್ಟಿಗಳು, ಒಂದು ವಿಧಾನದಲ್ಲಿ ಬಹು ವಿಧಾನಗಳು, ಒಂದು ರೂಪದಲ್ಲಿ ಬಹುರೂಪಗಳು ಮೇಳಗೊಂಡು, ಯಾವಾಗ ಯಾವುದು ಬೇಕಾದರೂ ಬಳಕೆಗೊಳ್ಳಬಹುದಾದ, ಯಾವುದಾದರೂ ಮುಖ್ಯವಾಗಬಹುದಾದ, ಅಮುಖ್ಯವಾಗಬಹುದಾದ ಒಂದು ತೆರನ ಏಕಾನೇಕತೆ ನಮ್ಮ ವಿಮರ್ಶೆಯ ಲಕ್ಷಣವಾಗಿದೆ. ಇಲ್ಲಿ ಏಕ ಮತ್ತು ಅನೇಕ ಈ ಎರಡೂ ತೆರನ ಸ್ಥಿತಿಗಳು ನಮ್ಮ ವಿಮರ್ಶೆಗೆ ಇರುತ್ತವೆ. ಸಮಾಜಶಾಸ್ತ್ರೀಯ ದೃಷ್ಟಿಯಿಂದ ವಿವಿಧತೆಯಲ್ಲಿ ಏಕತೆ ಎಂದು ಹೇಳಿ ಹೇಳಿ ಸಾಕಾಗಿರುವ ಕ್ಲೀಶೆಯ ಅರ್ಥದಲ್ಲಿ ಈ ಲಕ್ಷಣವನ್ನು ಇಲ್ಲಿ ಹೇಳುತ್ತಿಲ್ಲ. ಏಕ ಮತ್ತು ಅನೇಕಗಳು ಏಕಕಾಲದಲ್ಲಿ ಇರುವ ಏಕಾನೇಕತೆ. ಅಂದರೆ ಇಲ್ಲಿ ನಮ್ಮ ವಿಮರ್ಶಾ ಲೇಖನಗಳು ತೌಲನಿಕ ದೃಷ್ಟಿಯಿಂದ ಹೊರಟರೆ ಅಲ್ಲಿ ಸಾಂಸ್ಕೃತಿಕ ದೃಷ್ಟಿಯನ್ನೂ ಬಳಸುತ್ತವೆ. ಪ್ರೇರಣಾ ಸಿದ್ಧಾಂತಗಳನ್ನೂ ಅನ್ವಯಿಸುತ್ತವೆ. ಪ್ರಾಯೋಗಿಕ ವಿಧಾನಗಳನ್ನೂ ಬಳಸುತ್ತವೆ. ಬೈನರಿ ಮೆತೆಡ್ಡನ್ನೂ ಬಳಸಬಹುದು. ಪರಿಸರ ದೃಷ್ಟಿಯನ್ನೂ ಬಳಸಬಹುದು. ಹೀಗೆ ಒಂದರಿಂದ ಇನ್ನೊಂದು ಇನ್ನೊಂದರಿಂದ ಮತ್ತೊಂದಕ್ಕೆ ಜಿಗಿಯುತ್ತ ಒಟ್ಟಾರೆಯಾಗಿ ಹೊಳೆದ ಒಳನೋಟಗಳೆಲ್ಲವನ್ನೂ, ಅನ್ನಿಸಿದ ಸಂಗತಿಗಳೆಲ್ಲವನ್ನೂ ತಮ್ಮದೇ ಚೌಕಟ್ಟು ಇಟ್ಟುಕೊಂಡು ಮಂಡಿಸುತ್ತಾ ಹೋಗುವುದೇ ನಮ್ಮ ಲಕ್ಷಣವಾಗಿದೆ. ಪ್ರಾಯೋಗಿಕ ವಿಮರ್ಶೆಯಲ್ಲಿ ತೌಲನಿಕ ವಿಮರ್ಶೆಯೂ, ಇವೆರಡೂ ಇರುವ ಕಡೆ ವಿವರಣಾತ್ಮಕ ವಿಮರ್ಶೆಯೂ, ಅಲ್ಲೇ ಹೊಳೆದಾಗ ಧ್ವನಿ–ರೂಪಕಗಳ ಚರ್ಚೆಯೂ, ವೈಚಾರಿಕತೆ–ದಾರ್ಶನಿಕತೆಗಳ ದೃಷ್ಟಿಯೂ ಯಾವುದು ಬೇಕೋ ಅದನ್ನು

ವಿಮರ್ಶೆ ಬಳಸಬಹುದು. ಹೀಗಾಗಿ ನಮ್ಮಲ್ಲಿ ಒಂದು ಸಿದ್ಧಾಂತಕ್ಕೆ ಕಟ್ಟು ಬಿದ್ದ ವಿಮರ್ಶೆ ಅಥವಾ ಒಂದು ದೃಷ್ಟಿಯನ್ನು ಅನ್ವಯಿಸಿದ ವಿಮರ್ಶೆ ಎಂಬುದು ಇಲ್ಲ. ಇಲ್ಲಿ ಇರುವುದೆಲ್ಲ ಏಕಾನೇಕತೆ. ಒಂದರಿಂದ ಇನ್ನೊಂದಕ್ಕೆ, ಇನ್ನೊಂದರಿಂದ ಹಲವಕ್ಕೆ, ಹಲವುಗಳಿಂದ ಮತ್ತಾವುದಕ್ಕೋ ಬರುವ ಹಾಗೆಯೇ ಬರುತ್ತಾ ಅವುಗಳಲ್ಲೆಲ್ಲ ಒಂದು ಸಂಬಂಧ ಕಲ್ಪಿಸುತ್ತ ರಚನೆಯಾಗುವ ವಿಮರ್ಶೆ. ಇದು ನಮ್ಮ ವಿಮರ್ಶೆಯ ದೌರ್ಬಲ್ಯವಲ್ಲ, ಲಕ್ಷಣ. ಸಂಭವಕಾಲೀನ ವಿಮರ್ಶೆಯನ್ನು ವಿವೇಚಿಸುವಾಗ ಈಗಾಗಲೇ ಹರಿದ ಬಲೆಯ ರೂಪಕವನ್ನು ನೀಡಲಾಗಿದೆ. ಸಾಗರ ದಡದಲ್ಲಿನ ಮೀನುಗಾರನೊಬ್ಬನ ಹರಿದ ಬಲೆಯಂತೆ ಇದು ರಚಿತಗೊಂಡಿದೆ. ಅಲ್ಲಲ್ಲಿ ಹರಕಲು, ತೂತುಗಳು ಇದ್ದರೂ ಎಳೆಗಳಲ್ಲಿ ಸಂಬಂಧ ಇರುವಂತೆಯೂ, ಯಾವು ಯಾವುವೋ ಎಳೆಗಳು ಎಲ್ಲೆಲ್ಲೋ ಕೂಡಿಕೊಳ್ಳುವಂತೆಯೂ, ಯಾವ ಎಳೆಯೂ ಎಲ್ಲೂ ಕೊನೆಯಾಗದಂತೆಯೂ ಇರುವ ಒಂದು ಹರಕಲು ಬಲೆಯಂತಿದೆ ನಮ್ಮ ಆಧುನಿಕ ವಿಮರ್ಶೆ.

ಸಾಹಿತ್ಯದಲ್ಲಿ ಏನೇನನ್ನು ವಿಮರ್ಶೆಯು ಗುರ್ತಿಸುತ್ತದೋ ಆ ಪ್ರವೃತ್ತಿಗಳು ಬಹುಪಾಲು ನಮ್ಮ ವಿಮರ್ಶೆಯಲ್ಲೂ ಇವೆ. ಸಾಹಿತ್ಯದಲ್ಲಿ ವೈರುಧ್ಯಗಳಿವೆ ಎಂದು ವಿಮರ್ಶೆ ವಾದಿಸುತ್ತದೆ. ಆದರೆ ಇದರಲ್ಲೂ ವೈರುಧ್ಯಗಳಿವೆ. ಸಾಹಿತ್ಯದಲ್ಲಿ ಪ್ರಭಾವ ಪ್ರೇರಣೆಗಳು ಸಾಕಷ್ಟಿವೆ ಎಂದು ವಿಮರ್ಶೆ ಹೇಳುತ್ತದೆ. ಆದರೆ ಸ್ವಯಂ ವಿಮರ್ಶೆಯೂ ಅನೇಕ ಪ್ರಭಾವಗಳಿಗೆ ಗುರಿಯಾಗಿದೆ. ಸಾಹಿತ್ಯವು ಸಮಾಜ ವಿಮರ್ಶೆ, ಜ್ಞಾನವ್ಯವಸ್ಥೆ, ಪರಿಸರವ್ಯವಸ್ಥೆ, ಭಾಷಾವ್ಯವಸ್ಥೆ ಎಂದು ಇತ್ಯಾದಿಯಾಗಿ ವಿಮರ್ಶೆಯು ನಂಬುತ್ತದೆ. ಹಾಗೇ ವಿಮರ್ಶೆಯೂ ಇವೆಲ್ಲ ಆಗಿದೆ. ಕವಿಯಿಂದ ಕೃತಿಯನ್ನು ಬೇರ್ಪಡಿಸಿ–ಪಠ್ಯವೆಂಬಂತೆ–ನೋಡುವ ದೃಷ್ಟಿ ನಮ್ಮ ವಿಮರ್ಶೆಯಲ್ಲಿ ತೀರಾ ಕಡಿಮೆ. ಕವಿ ಮತ್ತು ಕೃತಿ ಅಭಿನ್ನವೆಂಬ ದೃಷ್ಟಿಯೇ ಇಲ್ಲಿ ಪ್ರಧಾನ. ವ್ಯಕ್ತಿಯಾಗಿ ಲೇಖಕ ಮರಣಿಸಬಹುದು. ಆದರೆ ಲೇಖಕನಾಗಿ ಆತ ಸದಾ ತನ್ನ ಕೃತಿಗಳ ಮೂಲಕ ಜೀವಿಸುತ್ತಿರುತ್ತಾನೆ.

ಪ್ರಾಚೀನ ಕಾಲದಿಂದಲೂ ಕಾವ್ಯ ಎಂಬುದು ನಮ್ಮಲ್ಲಿ ಒಂದು ಸಾಹಿತ್ಯದ ರೂಪ ಮಾತ್ರ ಅಲ್ಲ. ಇದೊಂದು ಸಾಹಿತ್ಯ ಶೈಲಿಯಾಗಿ ನಮ್ಮಲ್ಲಿ ಜಾರಿಯಾಗಿದೆ. ಅಲ್ಲದೆ ಕಾವ್ಯ ಎಂಬುದು ಒಂದು ಭಾಷೆ. ರಾಮಾಯಣ, ಮಹಾಭಾರತಗಳು ಹೇಗೆ ನಮ್ಮಲ್ಲಿ ಎಲ್ಲವನ್ನೂ ಅಭಿವ್ಯಕ್ತಿಸಬಲ್ಲ ಭಾಷೆಗಳೋ ಹಾಗೆ ಕಾವ್ಯ ಕೂಡ ಎಲ್ಲವನ್ನೂ ಅಭಿವ್ಯಕ್ತಿಸಬಲ್ಲ ಒಂದು ಭಾಷೆ. ಅಮೂರ್ತವಾದ ಬಹುರೂಪವಾದ ಒಂದು ಭಾಷೆ. ಇಂಥ ಕಾವ್ಯವೆಂಬ ಭಾಷೆಯಲ್ಲಿ ನಮ್ಮ ಎಲ್ಲ ಪ್ರಾಚೀನ ಸಾಹಿತ್ಯವೂ ಸಂಭವಿಸಿದೆ. ವಿಮರ್ಶೆ ಕೂಡ.

ನಮ್ಮ ಲಾಕ್ಷಣಿಕರು ಕಾವ್ಯ ಎಂದರೆ ಏನು? ಎಂಬ ಪ್ರಶ್ನೆಯನ್ನು ಚರ್ಚಿಸುತ್ತ ಕಾವ್ಯನಿರ್ವಚನಕ್ಕೆ ಯತ್ನಿಸಿದ್ದರೆ ನಮ್ಮ ಕವಿಗಳು ಈ ಮೇಲಿನ ಕೆಲವು ಪ್ರಶ್ನೆಗಳನ್ನು ಎತ್ತಿಕೊಂಡು ಕಾವ್ಯ ಸ್ವರೂಪ, ಕಾವ್ಯ ಕಾರಣ, ಕಾವ್ಯ ಪರಿಣಾಮಗಳನ್ನೆಲ್ಲ ಚರ್ಚಿಸಿದ್ದಾರೆ. ಕಾವ್ಯವು ಒಟ್ಟಾರೆ ಸುಲಕ್ಷಣವಾಗಿರಬೇಕು. ಕಾವ್ಯ ಸ್ವರೂಪ, ಕಾವ್ಯ ಕಾರಣ, ಕಾವ್ಯ ಪರಿಣಾಮಗಳನ್ನು ಕುರಿತು ತಮ್ಮದೇ ತತ್ವಗಳನ್ನು ಮಂಡಿಸುವ ಕೆಲಸವನ್ನು ನಮ್ಮ ಪ್ರಾಚೀನ ವಿಮರ್ಶೆಯು ಮಾಡಿದೆ. ಆ ಮೂಲಕ ವಿಮರ್ಶೆಯ ಕಾರ್ಯಗಳಲ್ಲಿ ಕಾವ್ಯತತ್ವ ಮತ್ತು ಕಾವ್ಯನಿರ್ವಚನಗಳು ಮುಖ್ಯವಾದುವು ಎಂಬ ತತ್ವವನ್ನು ಮಂಡಿಸಿದೆ. ನಮ್ಮ ಪ್ರಾಚೀನರ ಸ್ವಕಾವ್ಯ ಸ್ವರೂಪ ನಿರ್ವಚನ, ಪೂರ್ವಕವಿ ಸ್ಮರಣೆ, ಕವಿ–ಸಹೃದಯ ಮೀಮಾಂಸೆ, ಓದು–ವಿಮರ್ಶೆ–ಕಾವ್ಯ ಪರೀಕ್ಷೆಗಳ ಚಿಂತನೆ ಹೀಗೆ ಕಾವ್ಯಕ್ಕೆ ಸಂಬಂಧಿಸಿದ ಎಲ್ಲ ರೀತಿಯ ಚಿಂತನೆಗಳಲ್ಲೂ ಕಾವ್ಯತತ್ವವೇ ಪರೋಕ್ಷವಾಗಿ ಬಿಂಬಿತವಾಗಿದೆ. ತಮ್ಮ ಕಾವ್ಯಗಳ ಪೀಠಿಕಾ ಸಂಧಿಯಲ್ಲಿ ಈ ಎಲ್ಲಾ ವಿಚಾರಗಳನ್ನು ಕಾವ್ಯ ರೂಪಿಯಾಗಿಯೇ ಚಿಂತಿಸುವುದನ್ನು ಒಂದು ಸಂಪ್ರದಾಯವೆಂಬಂತೆ ನಮ್ಮ ಎಲ್ಲ ಕವಿಗಳು ಪಾಲಿಸುತ್ತ ಬಂದಿದ್ದಾರೆ. ಕಾವ್ಯ ಲಕ್ಷಣಗಳ ಬಗೆಗೆ, ಅಷ್ಟಾದಶವರ್ಣನೆಗಳ ಬಗೆಗೆ ಏನೇ ಹೇಳಲಿ ಪೀಠಿಕಾ ಸಂಧಿಗಳ ಕಾವ್ಯತತ್ವ–ಕಾವ್ಯ ಸಮರ್ಥನೆಯ ತತ್ವ ಮಂಡನೆಯು ನಮ್ಮ ಪ್ರಾಚೀನ ಕಾವ್ಯರೂಪಿ ವಿಮರ್ಶೆಯ ಒಂದು ಸಾಮಾನ್ಯ ಲಕ್ಷಣವಾಗಿದೆ.

'ವಚಶ್ರೀ ನರ್ತಕಿ ನೃತ್ಯವೇದಿಕೆ' ಮತ್ತು 'ವಿದ್ಯಾನಟಿ ನಾಟಕ' ಎಂಬ ಎರಡು ರೂಪಕಗಳ ಮೂಲಕ ನಾಗಚಂದ್ರ ವಾಕ್‌ಲಕ್ಷ್ಮಿಯು ನರ್ತನ ಮಾಡುವ ನೃತ್ಯವೇದಿಕೆಯೆ ಕಾವ್ಯ; ಹಾಗೇ ವಿದ್ಯೆ ಎಂಬ ನಟಿ ನಟಿಸುವ ನಾಟಕವೆ ಕಾವ್ಯ; ಎಂದು ಕಾವ್ಯತತ್ವವನ್ನು ಸ್ತ್ರೀ ರೂಪಕದ ಮೂಲಕ ಮಂಡಿಸಿದ್ದಾನೆ. ಹೀಗೆ ನಮ್ಮ ಪ್ರಾಚೀನ ವಿಮರ್ಶಾ ಮಾರ್ಗಗಳಲ್ಲಿ ರೂಪಕ ಮಾರ್ಗವು ಸಾಕಷ್ಟು ಜನಪ್ರಿಯವಾದ ಮಾರ್ಗವಾಗಿದೆ. ವಿಮರ್ಶೆಯು ಕಾವ್ಯರೂಪದಲ್ಲೆ ಪ್ರಕಟವಾಗಿರುವುದರಿಂದ ಉಪಮಾ ರೂಪಕ ಮಾರ್ಗದಲ್ಲಿ ತಮ್ಮ ನಿಲುವುಗಳನ್ನು ಮಂಡಿಸುವುದು ಆಗಿನ ವಿಮರ್ಶೆಯ ಒಂದು ಪ್ರಧಾನವಾದ ವಿಧಾನವೂ, ಲಕ್ಷಣವೂ ಆಗಿದೆ.

ಸ್ವಕಾವ್ಯ ಸ್ವರೂಪ ನಿರ್ವಚನವು ಏಕಕಾಲಕ್ಕೆ ತನ್ನ ಕಾವ್ಯದ ಸ್ವರೂಪವು ಏನೆಂದು ವಿವರಿಸುವ ಕೆಲಸವನ್ನು ಹಾಗೆಯೇ ಒಂದು ಒಳ್ಳೆಯ ಕಾವ್ಯವೆಂದರೆ ಹೇಗಿರಬೇಕು ಎಂಬ ತನ್ನದೇ ಕಾವ್ಯತತ್ತ್ವ ಮಂಡನೆಯ ಕೆಲಸವನ್ನು ಮಾಡುತ್ತಿರುತ್ತದೆ. ಕಾವ್ಯ ವಿಮರ್ಶೆಯ ಮಾನದಂಡಗಳು ಯಾವುವು ಆಗಿರಬೇಕು, ಕಾವ್ಯ ನಿಕಷದ ವಿಧಾನಗಳು ಯಾವುವು ಆಗಿರಬೇಕು ಎಂಬ ಬಗ್ಗೆ ತಮ್ಮದೇ ನಿಲುವುಗಳನ್ನು ಈ ಸ್ವಕಾವ್ಯ ಸ್ವರೂಪ ನಿರ್ವಚನದ ಮಾತುಗಳು ಮಂಡಿಸುತ್ತವೆ. ಅಲ್ಲದೆ ಸ್ವಕಾವ್ಯ ಸ್ವರೂಪವನ್ನು ನಿರ್ವಚಿಸುವಾಗ ಕವಿಗಳ ಆತ್ಮಸ್ತುತಿಯ ಮಾತುಗಳೂ, ತಮ್ಮ ಕಾವ್ಯದ ಅಗ್ಗಳಿಕೆಯನ್ನು ಸ್ವಾಭಿಮಾನದಿಂದ ಹೇಳಿಕೊಳ್ಳುವ ಮಾತುಗಳೂ ಬರುತ್ತವೆ. ವಿನಯದ ಮಾತುಗಳೂ, ಅಹಂಕಾರದಿಂದ ತಮ್ಮನ್ನೆ ಕೊಚ್ಚಿಕೊಳ್ಳುವ ಮಾತುಗಳೂ ಬರುತ್ತವೆ. ಈ ಪ್ರವೃತ್ತಿಯು ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ಚಹರೆಯೂ ಆಗಿದೆ.

'ಸಹಜ ಕವಿ, ಚತುರ ಕವಿ, ನಿಸ್ಸಹಾಯಕ ಕವಿ, ಸುಕವಿ, ಸುಕರ ಕವಿ, ಮಿಥ್ಯಾತ್ವ ಪ್ರಹರ ಕವಿ, ಸುಭಗ ಕವಿ, ನುತಮಹಾಕವೀಂದ್ರ...' (ಸು.ಚ. 1–52). ಹೀಗೆ ಕವಿಗಳನ್ನು ವರ್ಗೀಕರಿಸಿ ನಿರ್ವಚಿಸುವ ಮತ್ತು ವಸ್ತುಕ, ವರ್ಣಕ, ಆಗಮಿಕ, ಲೌಕಿಕ, ಪುರಾಣ, ಚರಿತ್ರೆ ಇತ್ಯಾದಿಯಾಗಿ ಕಾವ್ಯಗಳನ್ನು ವರ್ಗೀಕರಿಸಿ ನೋಡುವ ಮತ್ತು ಬೇರೆ ಬೇರೆ ರೂಪಗಳಲ್ಲಿ ಕಾವ್ಯಗಳನ್ನು ಪರಿಕಲ್ಪಿಸಿ ವ್ಯಾಖ್ಯಾನಿಸುವ ಕೆಲಸವನ್ನು ನಮ್ಮ ವಿಮರ್ಶೆಯು ಮಾಡಿದೆ. ಹೀಗೆ ವರ್ಗೀಕರಣ ಮತ್ತು ವ್ಯಾಖ್ಯಾನ ವಿಧಾನವನ್ನು ನಮ್ಮ ಪ್ರಾಚೀನ ವಿಮರ್ಶೆಯು ಆಚರಿಸಿದೆ. ಹಾಗೆಯೇ ಆಚರಣೆಯಲ್ಲಿನ ಕಾವ್ಯರೂಪಗಳನ್ನು ತಾತ್ವೀಕರಿಸುವ ಕೆಲಸವನ್ನೂ ಮಾಡಿದೆ. ಆ ಮೂಲಕ ವಿಮರ್ಶೆಯು ಆಚರಣೆಯನ್ನೇ ಆಧರಿಸಿ ತತ್ವಗಳನ್ನು ಮಂಡಿಸಬೇಕು ಎಂಬ ವಿಮರ್ಶಾ ತತ್ವವನ್ನೂ ಮಂಡಿಸಿದೆ. ಕೇಳು ಕಾವ್ಯ ತತ್ವ, ಓದು ಕಾವ್ಯ ತತ್ವ, ಸ್ವಂತಿಕೆಯ ತತ್ವಗಳನ್ನು ಕುರಿತು ವಿಶ್ಲೇಷಿಸುವುದೆಲ್ಲವೂ ವಿಮರ್ಶೆಯ ಕಾರ್ಯವೇ. ಓದುಗ, ಕೇಳುಗ, ವಿಮರ್ಶಕ, ಗಮಕಿ, ವಾದಿ, ಹೀಗೆ ಹಲವು ಸಹೃದಯರ ಬಗೆಗೆ ವಿಶ್ಲೇಷಿಸುವುದು ವಿಮರ್ಶೆಯ ಕಾರ್ಯ. ಅಲ್ಲದೆ ಒಂದೊಂದೇ ಮಾತುಗಳಿಂದ ಪೂರ್ವಕವಿಗಳ ಗುಣ ಲಕ್ಷಣ ನಿರ್ವಚನ ಮಾಡುವುದು ಕೂಡ ನಮ್ಮ ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ಚಹರೆಯಾಗಿದೆ.

ಶ್ರೀವಿಜಯ ಸರಿಯಾದ ಮಾರ್ಗದರ್ಶನವಿಲ್ಲದೆ, ಮಾರ್ಗದರ್ಶಕರೂ ಇಲ್ಲದೆ ಕನ್ನಡದಲ್ಲಿ ಅಡ್ಡಾದಿಡ್ಡಿಯಾಗಿ ಕಾವ್ಯ ಪದ್ಧತಿಗಳು ಬೆಳೆದಿವೆ ಎಂದು ಹೇಳುತ್ತಾನೆ. ಸಾಕಷ್ಟು ಜನ ತಮತಮಗೆ ತೋಚಿದಂತೆ ಕಾವ್ಯ ಬರೆದಿದ್ದಾರೆ. ಅವರಿಗೆಲ್ಲ ಒಂದು ಕವಿಮಾರ್ಗವನ್ನು ನಿರ್ಮಿಸಿಕೊಡುವ ಅಗತ್ಯ ಇದೆ ಎಂದು ಹೇಳಿ ಇದಕ್ಕಾಗಿ ಕವಿರಾಜಮಾರ್ಗ ಬರೆದಿದ್ದೇನೆ ಎಂದು ಹೇಳಿದ್ದಾನೆ. ತನ್ನ ಕಾವ್ಯದುದ್ದಕ್ಕೂ ಕವಿಗಳಿಗೆ ಗುಣ, ದೋಷ, ಯತಿ, ಛಂದೋಭಂಗ, ವಿಸಂಧಿ, ವಿಭಕ್ತಿ, ಪ್ರಾಸ, ಶಬ್ದಾಲಂಕಾರ, ಅರ್ಥಾಲಂಕಾರಾದಿಗಳ ಬಗ್ಗೆ ಕವಿಗಳಿಗೆ ಮಾರ್ಗದರ್ಶನ ಮಾಡಿದ್ದಾನೆ. ಶ್ರೀವಿಜಯನು ತನ್ನ ಕೃತಿಗೆ ಕವಿರಾಜಮಾರ್ಗವೆಂದು ಹೆಸರಿಟ್ಟಿರುವುದರಿಂದಲೆ ತನ್ನದು ಮಾರ್ಗದರ್ಶನ ಎಂದು ಸೂಚಿಸುತ್ತಿದ್ದಾನೆ. ಹೆಸರಿಗೆ ತಕ್ಕಂತೆ ಕಾವ್ಯದಲ್ಲಿ ನಡೆದಿದ್ದಾನೆ ಕೂಡ. ಕಾವ್ಯ ಬರೆಯುವುದು ಹೇಗೆ ಮತ್ತು ಹೇಗೆ ಬರೆಯಬಾರದು, ಶ್ರೀವಿಜಯನನ್ನು ಅನುಸರಿಸಿ ಎಲ್ಲೆಲ್ಲಿ ಏನೇನು ನಿಷೇಧ ಎಂದೆಲ್ಲ ನಮ್ಮ ಶಾಸ್ತ್ರಕಾರರೂ ಮಾರ್ಗದರ್ಶನ ಮಾಡಿದ್ದಾರೆ. ಹೀಗೆ ಮಾರ್ಗದರ್ಶನ ಮಾಡುವುದು ನಮ್ಮ ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ಕಾರ್ಯವೂ ಲಕ್ಷಣವೂ ಆಗಿದೆ.

ಕಾವ್ಯದ ಒಳ್ಳೆಯ ಗುಣಗಳು ಮತ್ತು ಕಾವ್ಯದ ದುಷ್ಟಲಕ್ಷಣ ಅಥವಾ ದೋಷಗಳ ಬಗ್ಗೆ ಸಾಮಾನ್ಯವೆಂಬಂತೆ–ಯಾವುದೇ ಸಿದ್ಧಾಂತಗಳ ಗೊಡವೆ ಇಲ್ಲದೆ; ಲಕ್ಷ್ಯಗಳ ಗೊಡವೆ ಇಲ್ಲದೆ ನಮ್ಮ ಪ್ರಾಚೀನ ಕವಿಗಳು ಚರ್ಚೆಮಾಡಿದ್ದಾರೆ. ಈ ಗುಣದೋಷ ಚರ್ಚೆ ನಮ್ಮ ವಿಮರ್ಶೆಯ ಒಂದು ಮುಖ್ಯ ಕಾರ್ಯವಾಗಿದೆ. ಕಾವ್ಯದ ಗುಣದೋಷಗಳನ್ನು ಕುರಿತು ಹೇಳುವಾಗ ಕಾವ್ಯದ ಒಳ್ಳೆಯ ಗುಣಲಕ್ಷಣಗಳು ಯಾವುವು ಎಂದು ಹೇಳುವ ಪರಿಪಾಠವು ನಮ್ಮಲ್ಲಿದೆ. ಹಾಗೇ ಹೇಳುವಾಗ ತಮ್ಮ ಇಡೀ ಕಾವ್ಯದಲ್ಲಿನ ಒಟ್ಟಾರೆ ಲಕ್ಷಣಗಳು ಯಾವುವು ಎಂದು ಪಟ್ಟಿ ಮಾಡುವ ಮತ್ತು ಆ ಮೂಲಕ ಸಾಮಾನ್ಯವಾಗಿ ಒಂದು ಒಳ್ಳೆಯ ಕಾವ್ಯದ ಲಕ್ಷಣಗಳು ಯಾವುವು ಎಂದು ತಾತ್ವೀಕರಿಸುವ ಎರಡೂ ಕೆಲಸಗಳನ್ನು ನಮ್ಮವರು ಮಾಡುತ್ತ ಬಂದಿದ್ದಾರೆ. ಹೀಗಾಗಿ ಕಾವ್ಯದ 'ಒಳ್ಳೆಯ' ಲಕ್ಷಣಗಳನ್ನು ವಿವರಿಸುವ ವ್ಯಾಖ್ಯಾನಿಸುವ ಕೆಲಸವನ್ನು ವಿಮರ್ಶೆಯು ಮಾಡಬೇಕು ಎಂಬ ನಂಬಿಕೆ ಮತ್ತು ಆಚರಣೆ ನಮ್ಮ ಪೂರ್ವಿಕರಲ್ಲಿ ಇದೆ.

ಸರಿಸುಮಾರು ನಮ್ಮ ಎಲ್ಲ ಕವಿಗಳೂ ಫಲಶೃತಿಗಳನ್ನು ಹೇಳಿದ್ದಾರೆ. ಫಲಶೃತಿಯು ನಮ್ಮ ಕಾವ್ಯಲಕ್ಷಣಗಳ ಒಂದು ಸಾಮಾನ್ಯ ಅಂಗ. ಫಲಶೃತಿಯನ್ನು ಹೇಳುವುದು ಒಂದು ಸಂಪ್ರದಾಯ ಎಂಬಂತೆ ನಮ್ಮ ಕವಿಗಳೆಲ್ಲ ಪಾಲಿಸುತ್ತ ಬಂದಿದ್ದಾರೆ. ಕಾವ್ಯ ಫಲಶೃತಿಯ ಒಂದು ಪ್ರಮುಖವಾದ ತತ್ವವು ಮುಕ್ತಿಪ್ರಾಪ್ತಿಯ ತತ್ವವೇ ಆಗಿದೆ. ಹೀಗಾಗಿ ಈ ಫಲಶೃತಿಯ ತತ್ವ ಅಥವಾ ಪ್ರಯೋಜನ ಮೀಮಾಂಸೆಯು ನಮ್ಮ ಪ್ರಾಚೀನ ವಿಮರ್ಶೆಯ ಒಂದು ಮುಖ್ಯ ಕಾರ್ಯವೂ ಲಕ್ಷಣವೂ ಆಗಿದೆ.

ಹರಿಹರನ, ರಾಘವಪಂಡಿತನ ಕೃತಿಗಳು ವಚನಕಾರರನ್ನು ಕುರಿತ ವಿಮರ್ಶೆಗಳೇ ಆಗಿವೆ. ಇವೆಲ್ಲ ಸಾಹಿತ್ಯರೂಪಿ ವಿಮರ್ಶೆಗಳು. ಈ ವಿಮರ್ಶೆಗಳಿಗೆ ವಚನಕಾರರನ್ನು ಮೌಲ್ಯಮಾಪನ ಮಾಡುವ ಅಹಂಕಾರವಿಲ್ಲ. ಬದಲಿಗೆ ತಮ್ಮ ಜನಸಮುದಾಯಗಳಿಗೆ ಬೇಕಾಗಬಹುದಾದ ರೀತಿಯಲ್ಲಿ ಅವರನ್ನು ಮರುಕಥಿಸುವ ಪ್ರಜ್ಞೆ ಇದೆ. ಪಂಪ, ರನ್ನ, ಲಕ್ಷ್ಮೀಶ, ಕುಮಾರವ್ಯಾಸ ಮುಂತಾದವರ ಕೃತಿಗಳು ಭಿನ್ನ ಭಿನ್ನ ರೀತಿಯ ಮರುಕಥನಗಳು. ನಾಗವರ್ಮನ ಕಾವ್ಯಾವಲೋಕನ, ಶ್ರೀವಿಜಯನ ಕವಿರಾಜಮಾರ್ಗ, ಜಾಯೇಂದ್ರನ ಕನ್ನಡ ಕುವಲಯಾನಂದ ಇಂಥ ಕೃತಿಗಳು ಪುನರ್ಲೇಖನಗಳು. ನಮ್ಮ ಸಾಹಿತ್ಯ ಪರಂಪರೆಯಲ್ಲಿ ಪುನರ್ಲೇಖನ ಮರುಕಥನಗಳ ಒಂದು ಪರಂಪರೆ ಇರುವುದನ್ನು ಕಾಣಬಹುದು. ಈ ರೀತಿಯ ರಚನೆಗಳು ಬರಿ ಸಂಸ್ಕೃತಕ್ಕೆ ಮಾತ್ರವೆ ನಿಷ್ಠವಾಗೇನೂ ಇಲ್ಲ. ಚರಿತ್ರೆ, ವರ್ತಮಾನ, ಜಾನಪದಗಳೆಲ್ಲವನ್ನು ಒಳಗೊಂಡಂತೆ ಸಂಸ್ಕೃತ ಪಠ್ಯಗಳನ್ನು ಅರಗಿಸಿಕೊಂಡು ಪುನರ್ಕಟ್ಟಿರುವ ರಚನೆಗಳೂ ಇವೆ. ಶ್ರೀವಿಜಯ, ನಾಗವರ್ಮ, ಪಂಪ, ಕುಮಾರವ್ಯಾಸ, ಲಕ್ಷ್ಮೀಶಾದಿಗಳ ಪರಂಪರೆ ಮತ್ತು ವ್ಯಕ್ತಿಪ್ರತಿಭೆಯ ಪರಿಕಲ್ಪನೆಯೇ ಬೇರೆ. ನಮ್ಮ ಇಂಗ್ಲಿಷ್ ಶಿಕ್ಷಿತ ಆಧುನಿಕರ ಪರಂಪರೆ ಮತ್ತು ವ್ಯಕ್ತಿ ಪ್ರತಿಭೆಯ ಪರಿಕಲ್ಪನೆಯೇ ಬೇರೆ. ಕಾಪಿರೈಟನ್ನು ನಂಬುವ, ರಚನೆಗಳನ್ನು ವ್ಯಕ್ತಿಗಳ ಖಾಸಗಿ ಆಸ್ತಿಗಳೆಂದು ಭಾವಿಸುವ ಧೋರಣೆ ಆಧುನಿಕರಲ್ಲಿ ಹುಟ್ಟಿರಬಹುದು. ಆದರೆ ಪ್ರಾಚೀನರಲ್ಲಿ ಈ ಧೋರಣೆ ಇಲ್ಲ. ಸ್ಥಳೀಯ ಭಾಷೆಯ ಮೂಲಕ ಪರಂಪರೆಯ ಪರಿಶೀಲನೆ, ಪರಿಷ್ಕರಣೆ ಮತ್ತು ಪುನರ್ ಕಟ್ಟುವಿಕೆಗಳು ಪಂಪ ಕುಮಾರವ್ಯಾಸಾದಿಗಳ ರಚನೆಗಳಲ್ಲಿ ಸಂಭವಿಸಿವೆ. ಹೀಗಾಗಿ ಸಂಸ್ಕೃತ ಕೃತಿಲೋಕ, ಚರಿತ್ರೆ, ವರ್ತಮಾನ, ಜಾನಪದಗಳ ವಿಮರ್ಶೆಗಳಾಗಿಯೂ ಇವರ ರಚನೆಗಳು ಸಂಭವಿಸಿವೆ. ಇಂಥ ಉದಾಹರಣೆಗಳನ್ನು ನೋಡಿದರೆ ಸಾಹಿತ್ಯ ಮತ್ತು ವಿಮರ್ಶೆ ಎಂಬ ಎರಡು ಭೇದಗಳು ಬೆರೆತು ಹೋಗುತ್ತವೆ. ಸಾಹಿತ್ಯ ರೂಪದಲ್ಲಿಯೇ ಸಾಹಿತ್ಯ ವಿಮರ್ಶೆಯೂ ಪ್ರಕಟವಾಗುವ ಬಗೆ ಇದು. ಕಾವ್ಯದಲ್ಲಿ, ಕಾವ್ಯದ ವೇಷದಲ್ಲಿ ಪ್ರಕಟವಾಗುವ ವಿಮರ್ಶೆ ಮತ್ತು ಸಾಹಿತ್ಯವಾಗಿಯೇ ಪ್ರಕಟವಾಗುವ ವಿಮರ್ಶೆ ಎರಡೂ ನಮ್ಮಲ್ಲಿವೆ. ವಿಮರ್ಶೆಯು ಸೃಜನಶೀಲವೋ ಸೃಜನೇತರವೋ ಎಂಬ ಪ್ರಶ್ನೆ ಇಲ್ಲಿ ಹುಟ್ಟುವುದಿಲ್ಲ. ಸಾಹಿತ್ಯಕ್ಕೆ ಸಾಹಿತ್ಯರೂಪದಲ್ಲಿಯೇ ವಿಮರ್ಶೆಯು ಹುಟ್ಟುತ್ತ ಬಂದಿರುವುದೂ ಕೂಡ ನಮ್ಮ ಪರಂಪರೆಯಲ್ಲಿದೆ. ಸಾಹಿತ್ಯರೂಪವು ನಮ್ಮ ವಿಮರ್ಶೆಯ ಒಂದು ಲಕ್ಷಣವೂ, ವಿಮರ್ಶೆಯ ಒಂದು ಮಾರ್ಗವೂ ಆಗಿದೆ.

ಕಾವ್ಯಗಳಿಗೆ ಹೆಸರಿಡುವ ಬಗ್ಗೆ ನಮ್ಮ ಮೀಮಾಂಸಾ ಗ್ರಂಥಗಳಲ್ಲಿ ಎಲ್ಲೂ ಚರ್ಚೆ ನಡೆದಿಲ್ಲ. ಆದರೆ ಬರೆಯಲ್ಪಟ್ಟಿರುವ ಕಾವ್ಯಗಳಲ್ಲಿ ಕಾವ್ಯದ ನಾಮಕರಣದ ಬಗೆಗೆ ಸಾಕಷ್ಟು ಮಾದರಿಗಳ ಮಂಡನೆಯಿದೆ. ಹೀಗಾಗಿ ನಾಮಕರಣ ವಿನ್ಯಾಸವು ನಮ್ಮ ಆಚರಣೆಯಲ್ಲಿ ಇರುವ ಒಂದು ವಿಮರ್ಶಾ ವಿನ್ಯಾಸವಾಗಿದೆ.

ಹಳಗನ್ನಡ ಕಾವ್ಯಗಳನ್ನು ಓದಲು ಅಗತ್ಯವಾಗಿ ಬೇಕಾದ ಒಂದು ತಿಳುವಳಿಕೆಯೆಂದರೆ ಶಬ್ದಾರ್ಥಗಳ ತಿಳುವಳಿಕೆ. ನಿಘಂಟುಗಳು ಈ ತಿಳುವಳಿಕೆ ಇಲ್ಲದವರಿಗೆ ಸಹಾಯ ಮಾಡುತ್ತವೆ. ಆದರೆ ನಿಘಂಟುಗಳ ಅರ್ಥಕ್ಕೂ ಕಾವ್ಯಪ್ರಯೋಗದ ಅರ್ಥಕ್ಕೂ ಸದಾ ಸಾಮ್ಯ ಇರುತ್ತದೆ ಎಂದೇನೂ ಅಲ್ಲ. ಅಂಥ ಸಂದರ್ಭಗಳಲ್ಲಿ ಪ್ರಯೋಗಾರ್ಥ ಕೋಶಗಳು ನೆರವಿಗೆ ಬರುತ್ತವೆ. ನಮ್ಮ ಪ್ರಾಚೀನ ಶಾಸ್ತ್ರಕಾರರು ಇಂಥ ನೆರವನ್ನು ತಮ್ಮ ಗ್ರಂಥಗಳಲ್ಲಿ ಸೃಷ್ಟಿಸಿದ್ದಾರೆ. ಅಂಥವರಲ್ಲಿ ಕೇಶೀರಾಜನೂ ಒಬ್ಬ. ಹೀಗೆ ಕಾವ್ಯಪ್ರಯೋಗ ಕೋಶ ನಿರ್ಮಾಣ ಮಾಡುವುದು ಅಥವಾ ಕಾವ್ಯದ ಅಧ್ಯಯಯನಕ್ಕೆ ಬೇಕಾದ ಮತ್ತು ಕಾವ್ಯದ ರಚನೆಗೆ ಬೇಕಾದ ಪರಿಕರಗಳನ್ನು ನಿರ್ಮಾಣ ಮಾಡುವುದು ನಮ್ಮ ವಿಮರ್ಶೆಯ ಒಂದು ಮುಖ್ಯ ಕಾರ್ಯವಾಗಿದೆ.

ಸಂಗ್ರಹಗಳು, ಸಂಕಲನಗಳು, ಸಂಪಾದನೆಗಳು ನಮ್ಮ ಸಾಹಿತ್ಯವನ್ನು ರಕ್ಷಿಸುವ, ಪೋಷಿಸುವ, ವಿಮರ್ಶಿಸುವ, ತಲುಪಿಸುವ ಕೆಲಸವನ್ನು ಮಾಡುತ್ತ ಬಂದಿವೆ. ಇಂಥ ಯತ್ನಗಳಲ್ಲಿ ಸಾರಸಂಗ್ರಹ ಒಂದು ಕವಲಾದರೆ, ವಚನ ಸಂಪಾದನೆ ಇನ್ನೊಂದು ಕವಲು. ಸಂಪಾದನೆ ಮತ್ತು ವ್ಯಾಖ್ಯಾನ (ಟೀಕು) ನಮ್ಮ ವಿಮರ್ಶೆಯ ಒಂದು ಕಾರ್ಯವೂ, ಲಕ್ಷಣವೂ, ಪಂಥವೂ ಆಗಿ ಆದಿಯಿಂದ ಚಾಲ್ತಿಯಲ್ಲಿದೆ.

ಪೂರ್ವಕವಿ ಸ್ಮರಣೆಯಲ್ಲಿ ಬರುವ ವಿಮರ್ಶೆಯು ಕಾವ್ಯರೂಪಿ ವಿಮರ್ಶೆಯೇ ಆಗಿದ್ದು ಇದು ಈಗಾಗಲೇ ಗುರ್ತಿಸಿರುವಂತೆ ಸ್ತುತಿ-ಅಭಿನಂದನೆ ಮತ್ತು ಮೆಚ್ಚುಗೆಯ ಧಾಟಿಯಲ್ಲಿಯೇ ಇರುತ್ತದೆ. ನಮ್ಮವರ ಸತ್ಕವಿ ಪ್ರಶಂಸೆ ಮತ್ತು ಕುಕವಿ ನಿಂದೆಗಳು ಪೂರ್ವಕವಿಸ್ಮರಣೆಯ ಒಂದು ಅಂಗವೇ ಆಗಿವೆ. ತಾವು ಮೆಚ್ಚುವ ಪೂರ್ವಕವಿಗಳನ್ನು ಸತ್ಕವಿಗಳೆಂದು, ಕಾವ್ಯಗಳನ್ನು ಸತ್ಕಾವ್ಯಗಳೆಂದು ಗುಣವಿವೇಚನೆ ಮಾಡುತ್ತ, ಗುಣನಿರ್ಣಯ ಮಾಡುತ್ತ ಅಂತಿಮವಾಗಿ ಗುಣಗಾನವನ್ನೇ ಮಾಡುತ್ತ ಸ್ತುತಿರೂಪಿ ವಿಮರ್ಶೆಯೊಂದನ್ನು ಸೃಷ್ಟಿಸುವುದು ವಿಮರ್ಶೆಯ ಒಂದು ಚಹರೆಯಾಗಿದೆ.

ಪಂಪನ ಕಾವ್ಯಗಳಷ್ಟೇ ಅಲ್ಲ ನಮ್ಮ ಬಹುಪಾಲು ಪ್ರಾಚೀನ ಮಹಾಕಾವ್ಯಗಳೆಲ್ಲವೂ ಕಥನ ಮತ್ತು ವರ್ಣನ ಶೈಲಿಗಳೆರಡನ್ನೂ ಬಳಸಿವೆ. ಅಥವಾ ವರ್ಣನದ ಮೂಲಕವೇ ಕಥನವಾಗಿವೆ. ವರ್ಣಕದ ಎಳೆಗಳು ಕೂಡಿ ಬೆಳೆದ ವಸ್ತುಕಗಳಾಗಿವೆ. ಹೀಗಾಗಿ ನಮ್ಮವರ ವಸ್ತುಕ ವರ್ಣಕ ಬಗೆಗಿನ ಜಿಜ್ಞಾಸೆಯು ಕಾವ್ಯತತ್ವದ ಜಿಜ್ಞಾಸೆಯಾಗಿ, ಕಾವ್ಯಪ್ರಕಾರದ ಜಿಜ್ಞಾಸೆಯಾಗಿ, ಕಾವ್ಯಶೈಲಿಯ ಜಿಜ್ಞಾಸೆಯಾಗಿ ಬೆಳೆದು ಬಂದಿದೆ. ಹಾಗಾಗಿ ಕಾವ್ಯಗಳಲ್ಲಿ ಅಂತರ್ಗತವಾಗಿರುವ ಈ ವಿಮರ್ಶಾ ವಿವೇಕಕ್ಕೆ ತತ್ವಜಿಜ್ಞಾಸೆಯೇ ತಾನು ಪ್ರಕಾರ ಜಿಜ್ಞಾಸೆಯೂ, ಶೈಲಿ ಜಿಜ್ಞಾಸೆಯೂ ಆಗುವ ಒಂದು ಚಹರೆ ಇದೆ.

ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ, ಮಲ್ಲಕವಿ ಮತ್ತು ಅಭಿನವ ವಾದಿ ವಿದ್ಯಾನಂದರ ಕಾವ್ಯಸಾರಗಳಲ್ಲಿ ಸಂಗ್ರಹಿಸಿರುವ ಸಾವಿರಾರು ಪದ್ಯಗಳಿಗೆ ಸಂದರ್ಭಾತೀತವಾದ ಸ್ವತಂತ್ರ ಬಿಡಿ ಪದ್ಯಗಳಾಗಿ ವರ್ತಿಸುವ ಗುಣ ಕೂಡ ಪ್ರಾಪ್ತವಾಗಿದೆ. ಮಹಾಕಥನಗಳಲ್ಲಿ ಇರುವಾಗ ಅವುಗಳ ಎಲ್ಲ ಒಂದೊಂದೂ ವೃತ್ತ, ಕಂದಗಳಿಗು ಈ ಗುಣ ಇರದಿರಬಹುದು. ಆದರೆ ಅನೇಕ ಪದ್ಯಗಳಿಗೆ ಸ್ವತಂತ್ರ, ಸಂದರ್ಭಾತೀತವಾಗಿ ವರ್ತಿಸುವ ಗುಣ ತಂತಾನೆ ಇರುತ್ತದೆ. ಮಲ್ಲಿಕಾರ್ಜುನ, ಮಲ್ಲಕವಿ, ಅಭಿನವ ವಾದಿವಿದ್ಯಾನಂದರು ತಮ್ಮ ಕಾವ್ಯ ಸಂಗ್ರಹಗಳಲ್ಲಿ ಬಿಡಿ ಪದ್ಯಗಳಿಗೆ ಇಂಥ ಸಂದರ್ಭಾತೀತವಾದ ಅಪಸಾಂದರ್ಭೀಕೃತ ಓದನ್ನು ಸೃಷ್ಟಿಸಿದ್ದಾರೆ. ನಮ್ಮ ಶೂನ್ಯಸಂಪಾದನಕಾರರು ಇದಕ್ಕೆ ಭಿನ್ನವೆಂಬಂತೆ ವಚನಗಳಿಗೆ ಒಂದು ಮಹಾಕಥನ ಸಂದರ್ಭವನ್ನು ಸೃಷ್ಟಿಸಿದ್ದಾರೆ. ಸಂವಾದ ರೂಪಿ ನಾಟ್ಯಮಯತೆಯ ಸೃಷ್ಟಿಯನ್ನು ಮಾಡಿರುವ ಶೂನ್ಯಸಂಪಾದನೆಕಾರರು ಆಯಾ ಸಂವಾದಗಳನ್ನಾಗಿ ವಚನಗಳನ್ನು ಕಟ್ಟುವಾಗ ಅವುಗಳಿಗೊಂದು ಸಂದರ್ಭವನ್ನು ಸೃಷ್ಟಿಸಿದ್ದಾರೆ. ಬಿಡಿ ಬಿಡಿಯಾದ ವಚನ ರಚನೆಗೆ ಕಾರಣ ಮತ್ತು ಸಂದರ್ಭಗಳು ಏನೇನಿದ್ದವೋ ಅವೆಲ್ಲವೂ ನಗಣ್ಯವಾಗಿ ಶೂನ್ಯಸಂಪಾದನೆಗಳಲ್ಲಿ ಸಂಪಾದಿತವಾಗಿರುವ ಎಲ್ಲ ವಚನಗಳಿಗೆ ಒಂದು ಮಹಾಕಥನ ಸಂದರ್ಭ ಸೃಷ್ಟಿಯಾಗಿದೆ. ಈ ಕ್ರಿಯೆಗಳನ್ನು ಸಾಹಿತ್ಯದ ಸಾಂದರ್ಭೀಕರಣ ಮತ್ತು ಅಪಸಾಂದರ್ಭೀಕರಣ ಕ್ರಿಯೆಗಳೆಂದು ಕರೆಯಬಹುದು. ಇವು ನಮ್ಮ ವಿಮರ್ಶೆಯ ಕಾರ್ಯ ಮತ್ತು ಸ್ವರೂಪಗಳನ್ನು ಹಾಗೂ ವಿಧಾನಗಳನ್ನು ಹೇಳುವ ಆಚರಣೆಗಳಾಗಿವೆ.

ಏಕೋತ್ತರ ಶತಸ್ಥಲದ ಸಂಗ್ರಹಕಾರರಿಗೆ ವೀರಶೈವ ಧರ್ಮದ ಆಚಾರ, ತತ್ವಗಳಿಗಾಗಿ ಪದ್ಯಗಳನ್ನು ರೂಪಿಸುವುದೇ ಪ್ರಮುಖ ಉದ್ದೇಶವಿದ್ದಂತೆ ಕಾಣುತ್ತದೆ. ಹಾಗಾಗಿ ವೀರಶೈವ ಧರ್ಮದ ತತ್ವ-ಸಿದ್ಧಾಂತ-ಸ್ಥಲಗಳಿಗೆ ಹೊಂದುವ ವಚನಗಳನ್ನು ಇವರು ಆಯ್ಕೆ ಮಾಡಿ ಸಂಯೋಜಿಸಿದ್ದಾರೆ. ಮಿಕ್ಕವನ್ನು ಅಲಕ್ಷ್ಯ ಮಾಡಿದ್ದಾರೆ. ಈ ಆಯ್ಕೆ ಮತ್ತು ಅಲಕ್ಷ್ಯಗಳ ಹಿಂದಿನ ರಾಜಕಾರಣಗಳು ಏನೇ ಇರಲಿ, ಕಾಲಾನುಕಾಲಕ್ಕೆ ಆಯ್ಕೆ ಮತ್ತು ಸಂಯೋಜನೆಗಳ ಮಾನದಂಡಗಳಲ್ಲಿ ಏನೇ ವ್ಯತ್ಯಾಸಗಳಾಗುತ್ತ ಬಂದಿರಲಿ ಈ ಕ್ರಿಯೆ ಮಾತ್ರ ವಿಮರ್ಶೆಯಲ್ಲದೆ ಬೇರೆಯಲ್ಲ. ನಮ್ಮ ಸಂಪಾದನಾ ರೂಪಿ ವಿಮರ್ಶೆಯ ಪ್ರಾಗ್ರೂಪಗಳ ಒಂದು ಸಾಮಾನ್ಯ ಚಹರೆಯಾಗಿ ಆಯ್ಕೆ ಮತ್ತು ಅಲಕ್ಷ್ಯವು ಎದ್ದು ಕಾಣುತ್ತದೆ. ಕಾಲದ ಪರೀಕ್ಷೆಯಲ್ಲಿ ಗೆದ್ದು ಬರುವುದು ಯಾವುದೆ ಕೃತಿಗೆ ಒಂದು ಬಹುದೊಡ್ಡ ಸವಾಲು. ಕಾಲದ ಪರೀಕ್ಷೆಯಲ್ಲಿ ಗೆಲ್ಲುವುದು ಎಂದರೆ ಜನಬಳಕೆಗೆ ತಕ್ಕುದಾಗಿ ಇರುವುದು. ಇಲ್ಲವಾದರೆ ಕಾಲನ ಎದುರಿಗೆ ತಾನಾಗಿ ಇಲ್ಲವಾಗುವುದು. ಕಾವ್ಯದ ಅಸ್ತಿತ್ವದ ಪ್ರಶ್ನೆಗು, ಬಳಕೆಯ ಪ್ರಶ್ನೆಗು, ಕಾವ್ಯದ ಸತ್ವದ ಪ್ರಶ್ನೆಗು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಬಹು ಮುಖ್ಯವಾದ

ಸಂಬಂಧ ಇದೆ. ಹೀಗಾಗಿ ಪಾರಾಯಣ, ವಾಚನ, ಕೀರ್ತನ, ಗಾಯನ, ಪಠಣ, ಭಜನೆ ಅಥವಾ ನೋಂಪಿ ಇಂತಹ ಯಾವುದೆ ಬಳಕೆಗೆ ಕೃತಿಯೊಂದು ಸ್ವೀಕೃತವಾಗುವುದೆ ಆಯಾ ಕೃತಿಗಳ ವಿಮರ್ಶೆಯೂ ಆಗಿರುತ್ತದೆ. ಎತ್ತಿಕೊಳ್ಳುವುದು ಇಲ್ಲವೆ ಬಿಸಾಡುವುದು ಅಥವಾ ಬಳಸುವುದು ಇಲ್ಲವೆ ಅಸಡ್ಡೆಗೆ ಗುರಿ ಮಾಡುವುದು ನಮ್ಮ ಪರಂಪರೆಯಲ್ಲಿ ರೂಡಿಗತವಾಗಿ ಬಂದಿರುವ ವಿಮರ್ಶೆಯ ಬಹು ಮುಖ್ಯ ಚಹರೆ.

ಆಧುನಿಕ ಸಂದರ್ಭದಲ್ಲಿ ಒಟ್ಟಾರೆ ಕುವೆಂಪು ವಿಮರ್ಶೆಯನ್ನು ನೋಡಿದಾಗ ಅಲ್ಲಿ ಹಲವು ದೃಷ್ಟಿಗಳು ಸಂಭವಿಸಿವೆ. 1. ಪ್ರಕಾರ ದೃಷ್ಟಿ 2. ಪರಿಸರ ದೃಷ್ಟಿ 3. ತೌಲನಿಕ ದೃಷ್ಟಿ 4. ಪರಿಕರ ದೃಷ್ಟಿ 5. ವಿಚಾರದೃಷ್ಟಿ 6. ಸ್ತ್ರೀವಾದಿ ದೃಷ್ಟಿ 7. ನಾಡು ನುಡಿ ಚಿಂತನಾ ದೃಷ್ಟಿ 8. ಅಧ್ಯಯನ ದೃಷ್ಟಿ 9. ಕೃತಿ ದೃಷ್ಟಿ 10. ಚಳುವಳಿ ದೃಷ್ಟಿ 11. ಪರಂಪರೆಯ ದೃಷ್ಟಿ 12. ಪ್ರಾದೇಶಿಕ ದೃಷ್ಟಿ 13. ಸಂಸ್ಕೃತಿ ಅಧ್ಯಯನ ದೃಷ್ಟಿ 14. ಪ್ರಶಸ್ತಿ ದೃಷ್ಟಿ....ಇತ್ಯಾದಿ. ಇವುಗಳು ಕುವೆಂಪು ಸಾಹಿತ್ಯ ಕುರಿತ ವಿಮರ್ಶೆಯಲ್ಲಿ ಸ್ಥೂಲವಾಗಿ ಪ್ರಕಟವಾಗಿರುವ ವಿಮರ್ಶಾ ದೃಷ್ಟಿಗಳು.

ಇನ್ನು ವಿಮರ್ಶಾ ರೂಪಗಳಿಗೆ ಬಂದರೆ ಇಲ್ಲಿ; 1. ಅಭಿನಂದನ ರೂಪಿ ವಿಮರ್ಶೆ, 2. ಸಂಪಾದನ ರೂಪಿ ವಿಮರ್ಶೆ, 3. ಸೂಕ್ತಿ ರೂಪಿ ವಿಮರ್ಶೆ, 4. ಸಾಹಿತ್ಯ ರೂಪಿ ವಿಮರ್ಶೆ, 5. ಸರಳ ರೂಪಿ ವಿಮರ್ಶೆ, 6. ಒಡನಾಟ ರೂಪಿ ವಿಮರ್ಶೆ, 7. ಪತ್ರ ರೂಪಿ ವಿಮರ್ಶೆ, 8. ಸಂಶೋಧನಾ ಅಧ್ಯಯನ ರೂಪಿ ವಿಮರ್ಶೆ, 9. ವಿಮರ್ಶೆಯ ವಿಮರ್ಶೆ, 10. ನಿಘಂಟು ರಚನೆ......ಇತ್ಯಾದಿ ರೂಪಗಳಿವೆ.

ನಮ್ಮ ಆಧುನಿಕ ವಿಮರ್ಶೆಯಲ್ಲಿ; ಪ್ರಾಯೋಗಿಕ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ರೂಪನಿಷ್ಠ ವಿಮರ್ಶೆ, ನೈತಿಕ ವಿಮರ್ಶೆ, ರಮ್ಯವಾದಿ ವಿಮರ್ಶೆ, ಪರಿಸರವಾದಿ ವಿಮರ್ಶೆ, ತೌಲನಿಕ ವಿಮರ್ಶೆ, ಅಭಿಜಾತ ವಿಮರ್ಶೆ, ವಾಸ್ತವವಾದಿ ವಿಮರ್ಶೆ, ರಸನಿಷ್ಠ ವಿಮರ್ಶೆ, ಸಮಾಜವಾದಿ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ, ಆಂತರಿಕ/ಬಾಹ್ಯ ವಿಮರ್ಶೆ, ಚಾರಿತ್ರಿಕ ವಿಮರ್ಶೆ, ನವೋದಯ ವಿಮರ್ಶೆ. ನವ್ಯ ವಿಮರ್ಶೆ, ಬಂಡಾಯ ವಿಮರ್ಶೆ, ಮನಶ್ಶಾಸ್ತ್ರೀಯ ವಿಮರ್ಶೆ, ಸಮಾಜಶಾಸ್ತ್ರೀಯ ವಿಮರ್ಶೆ, ನಿರಚನವಾದಿ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಸಂಸ್ಕೃತಿ ಅಧ್ಯಯನ ವಿಮರ್ಶೆ.... ಇವೆಲ್ಲ ಸಿದ್ಧಾಂತ/ಮಾರ್ಗ/ಪಂಥಗಳು ಇದ್ದರೂ ಇವೆಲ್ಲವೂ ಕುವೆಂಪು ಸಾಹಿತ್ಯದ ವಿಮರ್ಶೆಯಲ್ಲಿ (ಕನ್ನಡ ವಿಮರ್ಶೆಯಲ್ಲಿ?) ಪ್ರಾಕ್ಟೀಸಿಗೆ ಗುರಿಯಾಗಿಲ್ಲ. ಕೆಲವು ಮಾತ್ರವೇ ಪ್ರಯೋಗಕ್ಕೆ ಗುರಿಯಾಗಿವೆ. ಸ್ತ್ರೀವಾದಿ ಸ್ವರೂಪದ ವಿಮರ್ಶೆ, ವಸಾಹತು ನೆಲೆಯ ವಿಮರ್ಶೆ, ಸಂಸ್ಕೃತಿ ಅಧ್ಯಯನ ಸ್ವರೂಪದ ವಿಮರ್ಶೆ, ಪ್ರಾಯೋಗಿಕ ಸ್ವರೂಪದ ವಿಮರ್ಶೆ, ಇತ್ಯಾದಿ.. ಕುವೆಂಪು ಕುರಿತ ವಿಮರ್ಶೆಯಲ್ಲಿ ಪ್ರಯೋಗವಾಗಿರುವ ಈ ಎಲ್ಲ ಪಂಥವಾದಿ ರೂಪಗಳಲ್ಲಿ ಯಾವೂ ಕೂಡ ಕಟ್ಟುನಿಟ್ಟಾಗಿ ಪಂಥ ಸಿದ್ಧಾಂತಗಳಿಗೆ ಬದ್ಧವಾದ ವಿಮರ್ಶೆಗಳಲ್ಲ. ಆಯಾ ಪಂಥಗಳ ಸ್ವರೂಪವನ್ನು ಪ್ರಧಾನವಾಗಿ ಒಳಗೊಂಡಿರುವ ಪ್ರಾಕ್ಟೀಸುಗಳಷ್ಟೆ. ಇವಲ್ಲದೆ ಕುವೆಂಪು ಸಂದರ್ಭದಲ್ಲಿ ತೌಲನಿಕ, ರೂಪನಿಷ್ಠ, ರಸನಿಷ್ಠ, ಅಭಿಜಾತ, ರಮ್ಯವಾದಿ, ಪರಿಸರವಾದಿ, ಮಾರ್ಕ್ಸ್‌ವಾದಿ, ಮನಶ್ಶಾಸ್ತ್ರೀಯವಾದಿ, ವಿಮರ್ಶೆಗಳೂ ಪ್ರಾಕ್ಟೀಸಿಗೆ ಒಳಗಾಗಿವೆ. ಅಥವಾ ಈ ಕೆಟಗರಿಗಳಿಗೆ ಸೇರಿಸಬಹುದಾದ ಲಕ್ಷಣಗಳುಳ್ಳ ವಿಮರ್ಶೆಗಳೂ ಇವೆ. ಆದರೆ ಖಚಿತವಾಗಿ ಪಂಥಕ್ಕೆ ಕಟ್ಟುಬೀಳುವ ವಿಮರ್ಶೆಗಳು ಇವಲ್ಲ.

ಇಲ್ಲಿನ ಸಾಕಷ್ಟು ವಿವಿಮರ್ಶೆಗಳು ವಿಚಾರ ಸಂಕಿರಣ ಹುಟ್ಟುಹಬ್ಬ, ಅಭಿನಂದನಾ ಸಮಾರಂಭ ಇತ್ಯಾದಿಗಳ ಸಾಂದರ್ಭಿಕತೆಯ ರಾಜಕಾರಣ ಮತ್ತು ಜಾತಿ, ವರ್ಣ, ಬಳಗ ಇತ್ಯಾದಿಗಳ ಸಂಬಂಧಿಕತೆಯ ರಾಜಕಾರಣಗಳಿಂದ ರೂಪಗೊಂಡಿವೆ ಮತ್ತು ಆಳಲ್ಪಟ್ಟಿವೆ. ಸಾಂದರ್ಭಿಕತೆಯ ರಾಜಕಾರಣ ಮತ್ತು ಸಂಬಂಧಿಕತೆಯ ರಾಜಕಾರಣಗಳು ನಮ್ಮ ವಿಮರ್ಶೆಯ ಮುಖ್ಯವಾದ ಲಕ್ಷಣಗಳಾಗಿವೆ. ಇದಲ್ಲದೆ ನಮ್ಮ ವಿಮರ್ಶೆಯ ಆಂತರ್ಯದಲ್ಲಿ ಬೆರೆತು ಹೋಗಿರುವ ಒಂದು ಪ್ರವೃತ್ತಿ ಎಂದರೆ ವಿವಿಮರ್ಶೆ. ಇದು ನಮ್ಮ ವಿಮರ್ಶೆಯ ವಿನ್ಯಾಸವನ್ನು ನಿರಂತರವಾಗಿ ಕಾಡುವ ಪ್ರವೃತ್ತಿಯೂ ಮತ್ತು ಅಂತರ್ಗತವಾಗಿ ಸದಾ ಇರುವ ಒಂದು ವಿನ್ಯಾಸವೂ ಆಗಿದೆ. ತೌಲನಿಕತೆ ಹೇಗೆ ಒಂದು ಸ್ವತಂತ್ರ ಮಾರ್ಗ, ದೃಷ್ಟಿ, ಅಂತರ್ಗತ ಮನೋಧರ್ಮ ಮತ್ತು ವಿನ್ಯಾಸ ಆಗಿದೆಯೋ ಹಾಗೆ ಈ ವಿವಿಮರ್ಶೆಯೂ ಒಂದು ಸ್ವತಂತ್ರ ವಲಯವೂ, ದೃಷ್ಟಿಯೂ, ಅಂತರ್ಗತ ಮನೋಧರ್ಮವೂ, ವಿನ್ಯಾಸವೂ ಆಗಿದೆ. ವಿವಿಮರ್ಶೆಯ ಒಳಸಂಬಂಧಗಳು ಕೆಲವೊಮ್ಮೆ ವಿಮರ್ಶೆಯಂತೆಯೇ ವೇಷ ಮರೆಸಿಕೊಂಡು ಪ್ರಕಟವಾಗುತ್ತವೆ. ಅಂದರೆ ವಿಮರ್ಶಕ ಇನ್ನಾವುದೋ ವಿಮರ್ಶಕನ ನಿಲುವುಗಳಿಗೆ ಅಪ್ರಜ್ಞಾಪೂರ್ವಕವಾಗಿ ಉತ್ತರಿಸುತ್ತಿರಬಹುದು. ಆದರೆ ಅದು ಉದ್ದೇಶಪೂರ್ವಕ ಅಲ್ಲದಿರಬಹುದು. ವಿಮರ್ಶೆಯಲ್ಲಿ ಒಂದೇ ಕಾಲದಲ್ಲಿನ ಭಿನ್ನ ವಿಮರ್ಶಕರಲ್ಲಿ ಮತ್ತು ಬೇರೆ ಬೇರೆ ಕಾಲದ ವಿಮರ್ಶೆಗಳಲ್ಲಿ ಅಂತರ್ಗತವಾಗಿರುವ ಸಂವಾದ ಗುಣವು ಈ ವಿವಿಮರ್ಶೆಯ ರಾಜಕಾರಣವೇ ಆಗಿದೆ.

ಉದಾಹರಣೆಗೆ ಗಿರಡ್ಡಿಯವರ ಕಾದಂಬರಿಯಲ್ಲಿ ವೈಚಾರಿಕತೆ ಮತ್ತು ಕುವೆಂಪು ವೈರುಧ್ಯಗಳ ಹಾದಿಯ ಪಯಣಿಗನಾಗಿ ಲೇಖನಗಳನ್ನು ಅಕ್ಕಪಕ್ಕ ಇಟ್ಟು ನೋಡಬಹುದು.

ಇಲ್ಲಿನ ಇನ್ನೊಂದು ಲಕ್ಷಣವೆಂದರೆ ಭಿನ್ನ ವಿಮರ್ಶಕರ ಭಿನ್ನ ತಾತ್ವಿಕತೆ, ಭಿನ್ನ ನಂಬುಗೆಗಳ ತಾಕಲಾಟ. ಒಬ್ಬೊಬ್ಬರೂ ತಾವು ನಂಬುವ ತಾತ್ವಿಕತೆಗಳನ್ನು ತರ್ಕದ ಮೂಲಕ ಇಲ್ಲವೇ ನಿದರ್ಶನಗಳ ಮೂಲಕ ಮಂಡಿಸುತ್ತಾ ಅನ್ಯರ ನಿಲುವುಗಳ ಬಗ್ಗೆ ತಮ್ಮದೇ ಟಿಪ್ಪಣಿಗಳನ್ನು ನೀಡುತ್ತಿರುತ್ತಾರೆ. ಒಂದೇ ವಿಚಾರಕ್ಕೆ ಒಬ್ಬೊಬ್ಬರು ಭಿನ್ನ ದೃಷ್ಟಿಕೋನಗಳಿಂದ ಭಿನ್ನ ನಿಲುವುಗಳಿಗೆ ತಲುಪುತ್ತಿರುತ್ತಾರೆ. ಅನ್ಯ ವಿಮರ್ಶೆಯ ಖಂಡನೆ ಮತ್ತು ಸ್ವಯದ ಮಂಡನೆ ನಮ್ಮ ಕನ್ನಡ ವಿಮರ್ಶೆಯ ಒಂದು ಪ್ರಧಾನ ವ್ಯಾಪಾರ. ಕೆಲವೊಮ್ಮೆ ವಿರೋಧಪಕ್ಷ ಇಲ್ಲದಿದ್ದಾಗಲೂ ಕಲ್ಪಿತವೈರಿಗಳನ್ನು ಇಟ್ಟುಕೊಂಡು ಕಾದಾಡುವ ವಿಮರ್ಶೆ ನಮ್ಮಲ್ಲಿ ಸೃಷ್ಠಿಯಾಗಿದೆ.

ಛಂದಸ್ಸಿನ ಬಗೆಗಾಗಲೀ, ಭಾಷೆಯ ಬಗೆಗಾಗಲೀ, ಇನ್ನಾವುದೇ ವಿಮರ್ಶೆಯ ನಿಲುವುಗಳ ಬಗೆಗಾಗಲೀ, ಭಿನ್ನಾಭಿಪ್ರಾಯಗಳು (ಭಿನ್ನಾಭಿನ್ನತೆಯೆ) ಇರುವುದೇ ನಮ್ಮ ವಿಮರ್ಶೆಯ ಲಕ್ಷಣ. ಕುವೆಂಪು ಕಾವ್ಯ ಶೈಲಿಯನ್ನು 'ದೃಶ್ಯ ಪ್ರತಿಮಾ ಶಿಲ್ಪ', ಮಾಲೋಪಮಾ ವಿಧಾನ, ಪ್ರಸನ್ನ ಶೈಲಿ ಸಾಲಂಕೃತ ಶೈಲಿ, ಶಕ್ತ ಶೈಲಿ, ದರ್ಶನ ಧ್ವನಿಯ ಧಾಟಿ, ಇತ್ಯಾದಿಯಾಗಿ ನಿರ್ವಚಿಸಲಾಗಿದೆ. ಕುವೆಂಪು ಕಥನವನ್ನು ಚರ್ಚಿಸುವಾಗ ನಮ್ಮ ವಿಮರ್ಶೆಯು ಬಂಧ, ಶಿಲ್ಪ, ಆಶಯ, ಕೇಂದ್ರ ಪ್ರಜ್ಞೆ, ವಸ್ತು, ಸಂವಿಧಾನ, ತಂತ್ರ, ಭಾಷೆ, ಶೈಲಿ, ನಿರೂಪಣೆ, ವಿನ್ಯಾಸ, ಧ್ವನಿ ಶಕ್ತಿ ಇತ್ಯಾದಿ ವಲಯಗಳು ಮತ್ತು ಪರಿಭಾಷೆಗಳು ಚರ್ಚಿತವಾಗಿವೆ. ಇವೆಲ್ಲವೂ ಚರ್ಚೆಯ ವಲಯಗಳೂ ಪರಿಭಾಷೆಗಳೂ ಆಗಿರುವುದೇ ಈ ವಿಮರ್ಶೆಯ ಲಕ್ಷಣ. ನವ್ಯರು, ಆಪ್ತರು ಮತ್ತು ಅಲಿಪ್ತರಲ್ಲಿ ಕುವೆಂಪು ಕಾದಂಬರಿಗಳನ್ನು ಕೇಂದ್ರ ಪ್ರಜ್ಞೆ, ಶೈಲಿ, ಸಂವಿಧಾನ, ಬಂಧ, ಆಶಯ, ಭಾಷೆಗಳ ನೆಲೆಯಲ್ಲಿ ಟೀಕಿಸುವ ಮತ್ತು ಸಮರ್ಥಿಸುವ ಎರಡೂ ಕಾರ್ಯಗಳು ನಡೆದಿವೆ. ಈ ಹಿನ್ನೆಲೆಯಲ್ಲಿ ಲೇಖಕನ ಸೋಲು ಗೆಲುವುಗಳನ್ನು ನಮ್ಮ ವಿಮರ್ಶೆಯು ಚರ್ಚಿಸುತ್ತ ಬಂದಿದೆ. ಈ ಚರ್ಚೆಯಲ್ಲಿ ಭಿನ್ನ ತತ್ವಗಳ ಸಂಘರ್ಷವು ದಾಖಲಾಗಿದೆ. ಈ ವಿಮರ್ಶೆಯ ವಲಯಗಳ ನಡುವಿನ ಸಂವಾದದಲ್ಲಿ ಪ್ರಕಾರ ಮೀಮಾಂಸೆಯೊಂದರ ಹುಡುಕಾಟವು ನಿರಂತರವಾಗಿ ನಡೆದಿದೆ.

ಸಾಹಿತ್ಯ ವಿಮರ್ಶೆಯೇ ಕೆಲವೊಮ್ಮೆ ನಮ್ಮಲ್ಲಿ ಹಿನ್ನೆಲೆಗೆ ಸರಿದು ಸಾಹಿತ್ಯವೆಂಬ ಸಾಧನದ ಮೂಲಕ ಜಾಗತಿಕ ಜಿಜ್ಞಾಸೆಯೊಂದು ಜರುಗುತ್ತಿರುತ್ತದೆ. ಇಂತಹ ಕಡೆ ವಿಮರ್ಶಕ ತನ್ನದೇ ಆದ ಸಾಹಿತ್ಯ ಜಗತ್ತಿನ ಸೃಷ್ಟಿ ಮಾಡುತ್ತಿರುತ್ತಾನೆ. ಇಂತಹ ಸೃಷ್ಟಿಯಲ್ಲಿ ಜಿಗಿಯುವುದು ಮತ್ತು (ನೆನಪಿಗೆ ಹೊಳೆಯುವ) ಜಾಗತಿಕ ಉದಾಹರಣೆಗಳ ಮೂಲಕ ಸಾಹಿತ್ಯವನ್ನು ಜಿಜ್ಞಾಸೆಗೆ ಗುರಿಪಡಿಸುವುದು ಇಲ್ಲಿ ವಿಮರ್ಶೆಯ ಲಕ್ಷಣ ಮತ್ತು ದೃಷ್ಟಿ ಆಗಿದೆ. ಸಾಮ್ಯ ಸಾದೃಶ್ಯಗಳ ಸಂಯೋಜನೆಯೆ ಪ್ರಧಾನವಾದ ವಿಮರ್ಶೆಯೂ ಇಲ್ಲಿದೆ. ಹಾಗಾಗಿ ಅನ್ಯ ಕಣ್ಣುಗಳ ಮೂಲಕ ನೋಡುವುದು ಮತ್ತು ಪ್ರಭಾವ-ಪ್ರೇರಣೆಗಳ ಮೂಲಕ ಸಾಹಿತ್ಯವನ್ನು ಪರಿಶೀಲಿಸುವುದು ನಮ್ಮ ವಿಮರ್ಶೆಯ ಒಂದು ಸಾಮಾನ್ಯವಾದ ಲಕ್ಷಣವಾಗಿದೆ.

ಕಾರಣ ಮೀಮಾಂಸೆಯು ನಮ್ಮ ವಿಮರ್ಶೆಯಲ್ಲಿ ಅಂತರ್ಗತವಾಗಿ ಬೆರೆತುಕೊಂಡಿರುವ ಒಂದು ಗುಣಲಕ್ಷಣ ಮತ್ತು ಇದಕ್ಕೆ ಒಂದು ಸ್ವತಂತ್ರ ಮಾರ್ಗವಾಗುವ ಸಾಧ್ಯತೆಯೂ ಇದೆ. ಹಾಗೇ ಸಾಹಿತ್ಯವನ್ನು ಸೃಜನ ಮತ್ತು ಸೃಜನೇತರವೆಂದು ವಿಭಜಿಸಿ ನೋಡುವ ಕಲ್ಪನೆಯು ನಮ್ಮ ವಿಮರ್ಶೆಯ ಯಾವತ್ತಿನ ಒಂದು ಲಕ್ಷಣವಾಗಿದೆ. ತಕರಾರುಗಳನ್ನು ಎತ್ತುವುದು ಈ ವಿಮರ್ಶೆಯಲ್ಲಿನ ಇನ್ನೊಂದು ಮುಖ್ಯವಾದ ಲಕ್ಷಣ ಮತ್ತು ವಿನ್ಯಾಸ. ಕುವೆಂಪು ಅವರ ವೈಚಾರಿಕತೆಯ ಅಭಿವ್ಯಕ್ತಿ ಕ್ರಮದ ಬಗೆಗೆ, ತತ್ವ-ದರ್ಶನಗಳ ಪ್ರಸ್ತುತತೆಯ ಬಗೆಗೆ-ಅನುಸರಣೆಯ ಬಗೆಗೆ, ಕುವೆಂಪು ಅವರ ಜೀವನವಿಧಾನ-ವರ್ತನೆಗಳ ಬಗೆಗೆ ಹೀಗೆ ಹಲವು ನೆಲೆಗಳಲ್ಲಿ ಇಲ್ಲಿ ತಕರಾರುಗಳನ್ನು ಎತ್ತಲಾಗಿದೆ. ಅಲ್ಲದೆ ಅರೆಬರೆ ಓದಿನ ಮೂಲಕ ತಮ್ಮದೇ ನಿಲುವಿಗೆ ಬರುವುದು ನಮ್ಮ ವಿಮರ್ಶೆಯ ಎಲ್ಲ ವಿನ್ಯಾಸಗಳಲ್ಲು ಅಲ್ಲಲ್ಲಿ ಕಾಣಬರುವ ಲಕ್ಷಣವಾಗಿದೆ. (ನೋಡಿ; 980-ಪುಟ: 22) ನ್ಯಾಯಾಧೀಶರಂತೆ ತಮ್ಮದೇ ತೀರ್ಪುಗಳನ್ನು ನೀಡುವ ಕೆಲಸ ಮಾಡದೆ ವಿಮರ್ಶೆಯನ್ನು ಮುಕ್ತವಾಗಿ ಇರಿಸುವ ಸಮಸ್ಯೀಕರಣ ವಿಧಾನವನ್ನೂ ನಮ್ಮಲ್ಲಿ ಅನುಸರಿಸಲಾಗಿದೆ, ಹೀಗಾಗಿ ಸಮಸ್ಯೀಕರಣ ವಿಧಾನವು ನಮ್ಮ ಹಲವು ವಿಮರ್ಶಾ ಲಕ್ಷಣಗಳಲ್ಲಿ ಒಂದು ಮುಖ್ಯವಾದ ಲಕ್ಷಣವಾಗಿದೆ.

ತುಲನೆಯ ನೆಲೆಯಿಂದ ನಿಲುವುಗಳಿಗೆ ತಲುಪುವ ಮಾರ್ಗ ನಮ್ಮ ವಿಮರ್ಶೆಯ ಯಾವತ್ತಿನ ಒಂದು ಚಹರೆಯಾಗಿದೆ. ಪರಸ್ಪರ ಅಭಿಪ್ರಾಯಭೇದ, ತದ್ವಿರುದ್ಧ ನಿಲುವುಗಳನ್ನು ಪ್ರಕಟಿಸುವುದೂ ಕೂಡ ನಮ್ಮ ವಿಮರ್ಶೆಯ ಯಾವತ್ತಿನ ಚಹರೆಯಾಗಿದೆ. ಕುವೆಂಪು ಬೇಂದ್ರೆ ಕಾರಂತ ಹೀಗೆ ಆಧುನಿಕ ಸಾಹಿತ್ಯದ

ಆಯ್ದು ಲೇಖಕರ ಸ್ತ್ರೀಪರ ಕಾಳಜಿಗಳನ್ನು ತೌಲನಿಕವಾಗಿ ಹೋಲಿಸಿ ನೋಡುವುದು ಈ ವಿಮರ್ಶೆಯ ಒಂದು ಸಾಮಾನ್ಯವಾದ ಚಹರೆಯಾಗಿದೆ. ಇದರ ಜೊತೆಗೆ ಇರುವ ಇನ್ನೊಂದು ಸಾಮಾನ್ಯವಾದ ಚಹರೆ ಕುವೆಂಪು ಅವರ ಸ್ತ್ರೀ ದೃಷ್ಟಿಯು ರೂಪಗೊಂಡ ಕಾರಣ ಪ್ರೇರಣೆಗಳನ್ನು ಅನ್ವೇಷಿಸುವುದು. ಈ ಅನ್ವೇಷಣೆಯಲ್ಲಿ ಲೇಖಕನ ಗ್ರಹಿಕೆ ಮತ್ತು ವ್ಯಕ್ತಿತ್ವದ ಮೇಲಿನ ಪ್ರಭಾವಗಳೆರಡೂ ಚರ್ಚಿತವಾಗಿವೆ.

ಕವಿತೆಗಳನ್ನು ಯಾವ ಯಾವ ರೀತಿಗಳಲ್ಲಿ ಬರೆಯಲಾಗಿದೆ/ಬರೆಯಬಹುದು ಎಂಬ ಪ್ಯಾಟರ್ನ್‌ಗಳ ಹುಡುಕಾಟವೆ ಮಾದರಿಗಳ ಹುಡುಕಾಟ. ಈ ಮಾದರಿಗಳ ಹುಡುಕಾಟವು ನಮ್ಮ ವಿಮರ್ಶೆಯ ಲಕ್ಷಣವೂ ಕಾರ್ಯವೂ ಆಗಿದೆ. ಹಾಗೆಯೇ ಸಾಹಿತ್ಯ ವಿಮರ್ಶೆ ಮಾಡುವಾಗ ತಮ್ಮ ನಿಲುವುಗಳ ಸಮರ್ಥನೆಗಾಗಿ ಅನ್ಯ ವಿಮರ್ಶಕರ ಅಭಿಪ್ರಾಯಗಳನ್ನು ಕೃತಿಭಾಗಗಳನ್ನು ಎತ್ತಿ ಕೊಡುವುದು ನಮ್ಮಲ್ಲಿನ ಒಂದು ಜನಪ್ರಿಯ ಪ್ರವೃತ್ತಿ. ಸಾಹಿತ್ಯ ಕೃತಿಭಾಗಗಳನ್ನು ಆಯ್ದು ಉದ್ಧರಿಸುವುದೂ ಕೂಡ ನಮ್ಮಲ್ಲಿ ರೂಢಿಗೆ ಬಂದಿದೆ. ಸಮರ್ಥನೆಗಲ್ಲದೆ ಪರಿಚಯ, ಖಂಡನೆ, ಮರುಪರಿಶೀಲನೆ ಇತ್ಯಾದಿ ಉದ್ದೇಶಗಳಿಗೆ ಕೂಡ ಉದ್ಧರಣೆಗಳನ್ನು ನೀಡುವುದುಂಟು. ನಮ್ಮ ಎಲ್ಲಾ ವಿಮರ್ಶಾ ಮಾರ್ಗಗಳಲ್ಲಿಯೂ ಸಾಮಾನ್ಯವಾಗಿ ಕಂಡುಬರುವ ಒಂದು ಲಕ್ಷಣ ಇದು. ಹೀಗಾಗಿ ಸಾಹಿತ್ಯದಲ್ಲಿನ ಪ್ರವೃತ್ತಿಗಳನ್ನು, ವರಸೆಗಳನ್ನು, ಚಿಂತನಾಧಾರೆಗಳನ್ನು, ನಿರ್ದಿಷ್ಟ ಮಾದರಿಗಳನ್ನು, ವಿನ್ಯಾಸಗಳನ್ನು, ತತ್ವ-ದರ್ಶನಗಳನ್ನು ತಮ್ಮದೇ ಪರಿಕಲ್ಪನೆಗಳ ಮೂಲಕ ಗುರ್ತಿಸಿ ಹೇಳುವ ಪರಿಕಲ್ಪನೀಕರಣ ವಿನ್ಯಾಸವು ನಮ್ಮ ವಿಮರ್ಶೆಯ ಒಂದು ಪ್ರಧಾನ ಲಕ್ಷಣವಾಗಿದೆ.

ನಮ್ಮ ಪ್ರಾಚೀನರಲ್ಲಿಯಂತೆ ಇಂದಿನ ವಿಮರ್ಶೆಯ ತಂತ್ರಗಾರಿಕೆಗಳಲ್ಲಿ ರೂಪಕ ಮಾರ್ಗವೂ ಒಂದು. ತಮ್ಮ ಅಭಿಪ್ರಾಯ ಅನುಭವಗಳನ್ನು ಅಭಿವ್ಯಕ್ತಿಸಲು ಕವಿಗಳು ರೂಪಕ ಮಾರ್ಗವನ್ನು ಅನುಸರಿಸುವಂತೆ ವಿಮರ್ಶಕರೂ ಕೂಡ ರೂಪಕ ಮಾರ್ಗವನ್ನು ಅನುಸರಿಸುತ್ತಾರೆ. ಈ ರೂಪಕ ಮಾರ್ಗಗಳು ವಿಮರ್ಶಕರ ಅಭಿಪ್ರಾಯಗಳನ್ನು ಸ್ಪಷ್ಟಗೊಳಿಸುವ ಸಾಧನಗಳಾಗಿ ಕೆಲಸ ಮಾಡುತ್ತವೆ. ಕೆಲವೊಮ್ಮೆ ಅಪಾರ್ಥಗಳಿಗೂ ಅಮೂರ್ತತೆಗಳಿಗೂ ಇವು ವಿಮರ್ಶೆಯನ್ನು ಈಡು ಮಾಡಬಹುದು. ಬಿಡಿ ನೆಲೆಯ ವಿಶ್ಲೇಷಣೆಗಳಿಂದ ಹೊರಟು ಇಡಿ ನೆಲೆಯ ತೀರ್ಮಾನಗಳಿಗೆ ತಲುಪುವ ಪ್ರವೃತ್ತಿಯು ನಮ್ಮ ವಿಮರ್ಶೆಯಲ್ಲಿ ಇದೆ. ಇದು ಆಧುನಿಕ ವಿಮರ್ಶೆಯ ಒಂದು ಪ್ರಧಾನ ವಿಧಾನ. ಇದು ನಮ್ಮ ವಿಮರ್ಶೆಯ ಗುಣವೂ ಹೌದು. ದೌರ್ಬಲ್ಯವೂ ಹೌದು. ಅಂಗಾಂಶದ ಲಕ್ಷಣವನ್ನು ಅಂಗಕ್ಕೆ ಮತ್ತು ಆ ಮೂಲಕ ಒಟ್ಟು ಸೃಜನಶೀಲ ಅಖಂಡತೆಗೆ ಅನ್ವಯಿಸಿ ಹೇಳುವ ಬೀಸುತನ ಇದು. ಬೀಸು ಹೇಳಿಕೆಗಳನ್ನು ನೀಡುವ ಅನ್ವಯೀಕರಣ ಪ್ರವೃತ್ತಿಯು ನಮ್ಮ ವಿಮರ್ಶೆಯ ಒಂದು ಮಾಮೂಲು ಲಕ್ಷಣವಾಗಿದೆ.

ಕುವೆಂಪು ವಿಚಾರವನ್ನು ದರ್ಶನಗಳ ಹಿನ್ನೆಲೆಯಲ್ಲಿ ಗುರ್ತಿಸುವಾಗ ಕುವೆಂಪುವನ್ನು ದಾರ್ಶನಿಕ, ತತ್ವಜ್ಞಾನಿ, ದಾರ್ಶನಿಕ ಕವಿ, ಸಂತ, ಸೌಂದರ್ಯಯೋಗಿ ಎಂದೆಲ್ಲ ಕರೆದಿರುವ ನಮ್ಮ ವಿಮರ್ಶೆಯು ಅವರ ಚಿಂತನೆಯನ್ನು ಭಾರತೀಯ, ಜಾಗತಿಕ, ಕನ್ನಡ ಸಾಹಿತ್ಯಕ, ಪ್ರಾದೇಶಿಕ, ಪುನರುಜ್ಜೀವನಕಾಲೀನ, ಸ್ವಾತಂತ್ರ್ಯ ಹೋರಾಟ ಮತ್ತು ಸುಧಾರಣಾವಾದಿ ಚಳುವಳಿಗಳ ಬಿತ್ತಿಗಳಲ್ಲಿ ಇಟ್ಟು ಪರಿಶೀಲಿಸಿದೆ. (2763) ಹೀಗೆ ಭಿನ್ನ ಬಿತ್ತಿಗಳಲ್ಲಿ ಇಟ್ಟು ಸಾಹಿತ್ಯವನ್ನು (ಲೇಖಕನನ್ನು) ಪರಿಶೀಲಿಸುವುದು ನಮ್ಮ ವಿಮರ್ಶೆಯ ಒಂದು ವಿಧಾನ ಮತ್ತು ಲಕ್ಷಣವಾಗಿದೆ. ಚಳುವಳಿ ದೃಷ್ಟಿ, ಪ್ರಾದೇಶಿಕ ದೃಷ್ಟಿ, ಪರಿಸರ ದೃಷ್ಟಿ, ಪ್ರಕಾರ ದೃಷ್ಟಿ, ಹೀಗೆ ಹಲವು ದೃಷ್ಟಿಯ ವಿಮರ್ಶೆಗಳಲ್ಲಿ ಬೇರೆ ಬೇರೆ ಭಾಷೆ, ಪ್ರದೇಶ, ಸಂಸ್ಕೃತಿ, ಪರಂಪರೆಗಳ ಜೊತೆಗೆ ಇಟ್ಟು ಕುವೆಂಪುವನ್ನು ತುಲನೆ ಮಾಡುವುದು ನಮ್ಮ ಒಂದು ಸಾಮಾನ್ಯವಾದ ವಿಮರ್ಶಾ ವ್ಯಾಪಾರವಾಗಿದೆ. ಇಲ್ಲಿ ಹಲವು ತೆರನ ತೌಲನಿಕತೆಗಳಿವೆ. ಅಲ್ಲದೆ ಇಂಗ್ಲಿಷ್ ಶಿಕ್ಷಣ ಪಡೆದ ಸಂಭವಕಾಲೀನರಲ್ಲಿ ಇಂಗ್ಲಿಷಿನ ಜ್ಞಾನಲೋಕದಿಂದ (ಕೆಲವೊಮ್ಮೆ ಸಂಸ್ಕೃತಕ್ಕೆ ಪರ್ಯಾಯವೆಂಬಂತೆ) ಉದ್ಧರಣೆಗಳನ್ನು ನೀಡುವುದು; ಇಂಗ್ಲಿಷಿನಲ್ಲಿ ಚಾಲ್ತಿಯಾಗಿರುವ ತತ್ವ ವಿಚಾರಗಳನ್ನು ಅರಗಿಸಿಕೊಂಡು ಅವುಗಳನ್ನು ಕನ್ನಡದಲ್ಲಿ ಚಾಲ್ತಿಗೆ ತರುವುದು; ಸಾಧ್ಯವಾದೆಡೆ ಅನುವಾದಿಸುವುದು, ಅನುಸರಿಸುವುದು ಇಂಥವೆಲ್ಲ ನಮ್ಮ ವಿಮರ್ಶೆಯಲ್ಲಿ ಸಾಮಾನ್ಯ ಆಗಿಬಿಟ್ಟಿವೆ.

ಕಾವ್ಯದ ಆಶಯವೇನು? ಕಾದಂಬರಿಯ ಆಶಯವೇನು? ಕತೆಯ ಆಶಯವೇನು ಎಂಬಂತೆ ಸಾಹಿತ್ಯ ಘಟಕಗಳ ಆಶಯವನ್ನು/ಗಳನ್ನು ಕಂಡುಕೊಳ್ಳುವ ಮತ್ತು ಇದನ್ನೆ ಲೇಖಕ ಕೇಂದ್ರಿತವಾಗಿ ಕುವೆಂಪು ಅವರ ಆಶಯಗಳೇನು ಎಂದು ಚರ್ಚಿಸುವ ವಿಮರ್ಶಾ ವಿನ್ಯಾಸವೊಂದು ಕೂಡ ನಮ್ಮಲ್ಲಿದೆ. ಸಾಹಿತ್ಯರೂಪಿ ವಿಮರ್ಶೆಯಲ್ಲಿ ಮತ್ತು ಅನೇಕ ಲೇಖನಗಳಲ್ಲಿ ಕವಿಕೇಂದ್ರಿತವಾಗಿ ಚರ್ಚಿಸುವುದು ನಮ್ಮ ವಿಮರ್ಶೆಯ ಒಂದು ಬಹು ವ್ಯಾಪಕವಾದ ಲಕ್ಷಣವಾಗಿದೆ. ಇಂತಹ ಕಡೆ ಸಾಹಿತ್ಯದ ಗುಣ ಲಕ್ಷಣಗಳನ್ನು ನಿರ್ವಚಿಸುವ ಜೊತೆಗೆ ಕವಿಯನ್ನು ನಿರ್ವಚಿಸುವ ಕೆಲಸವನ್ನು ನಮ್ಮ ವಿಮರ್ಶೆಯು ಮಾಡಿದೆ. ಇಲ್ಲೆಲ್ಲ ಕುವೆಂಪುವನ್ನು

ಆರಾಧನಾ ಭಾವದಿಂದ, ಪ್ರೀತಿ–ಗೌರವಗಳಿಂದ ನಿರ್ವಚಿಸಿರುವುದೇ ಹೆಚ್ಚು. ಕುವೆಂಪು ವ್ಯಕ್ತಿತ್ವ–ವೈಚಾರಿಕ ನಿಲುವುಗಳನ್ನು ಪ್ರಶ್ನೆ ಮಾಡಿರುವ ಉದಾಹರಣೆಗಳು ಬೆರಳೆಣಿಕೆಯಷ್ಟು ಇದ್ದರೆ; ಇಲ್ಲಿ ಹೊಗಳಿ ಅಟ್ಟಕ್ಕೇರಿಸಿರುವ ನಿದರ್ಶನಗಳು ನೂರಾರಿವೆ.

ಸಮಾಜವು ಪ್ರಜಾಪ್ರಭುತ್ವ–ಜಾಗತೀಕರಣಗಳಿಗೆ ತೆರೆದುಕೊಂಡಂತೆಲ್ಲ; ಆಧುನಿಕ, ಆಧುನಿಕೋತ್ತರ ಪರಿಸ್ಥಿತಿಗಳಿಗೆ ತೆರೆದುಕೊಂಡಂತೆಲ್ಲ ತನ್ನ ಸಾಂಸ್ಕೃತಿಕ ಅನನ್ಯತೆ ಮತ್ತು ಅಸ್ತಿತ್ವಗಳ ಪ್ರಶ್ನೆಗಳನ್ನು ಎದುರಿಸತೊಡಗಿದೆ. ಹೊಸ ಹೊಸ ಬಿಕ್ಕಟ್ಟುಗಳನ್ನೂ ಎದುರಿಸತೊಡಗಿದೆ. ರಸ, ಧ್ವನಿ, ಅರ್ಥ, ಕಲಾವಂತಿಕೆಗಳನ್ನೇ ಹಿಡಿದು ವಿಮರ್ಶೆಯು ಇವತ್ತೂ ಕೂರಬೇಕೆ ಎಂಬ ಪ್ರಶ್ನೆಯನ್ನು ಗಂಭೀರವಾಗಿ ನಮ್ಮ ವಿಮರ್ಶೆ ಕೇಳಿಕೊಳ್ಳುತ್ತಲೇ ಬಂದಿದೆ. ಧರ್ಮ, ಶಿಕ್ಷಣ, ಭಾಷೆ, ಮಾಧ್ಯಮ, ಚರಿತ್ರೆ, ಜೀವನವಿಧಾನ, ಸಂಸ್ಕೃತಿ ಹೀಗೆ ಹಲವು ನೆಲೆಗಳಿಂದ ಸಾಹಿತ್ಯವನ್ನು ಚರ್ಚಿಸುವ ಕೆಲಸವನ್ನು ವಿಮರ್ಶೆಯು ಕೈಗೆ ಎತ್ತಿಕೊಂಡಿದೆ. ವಿಮರ್ಶೆಯ ಕಾರ್ಯ ಮತ್ತು ಸ್ವರೂಪಗಳಿಗೆ ಇದರಿಂದ ಹೊಸ ಚಹರೆಗಳು ಮೂಡಿವೆ. ವಿಮರ್ಶೆಯಲ್ಲಿ ಪ್ರಸ್ತುತತೆಯ ಪ್ರಶ್ನೆಗಳು ಮತ್ತೆ ಮತ್ತೆ ಎದುರಾಗಿವೆ. ಪ್ರಸ್ತುತತೆಯ ಚರ್ಚೆ ನಮ್ಮ ವಿಮರ್ಶೆಯ ಒಂದು ಮುಖ್ಯ ಲಕ್ಷಣ. ಅಪಸಾಂದರ್ಭೀಕರಣ ಮಾರ್ಗ ಕೂಡ ನಮ್ಮ ವಿಮರ್ಶೆಯ ಒಂದು ಮೆತೆಡ್ಡು ಹೇಗೋ ಹಾಗೇ ಒಂದು ಲಕ್ಷಣವೂ ಹೌದು. ಹಾಗೆಯೇ ಆಯ್ಕೆ ಮತ್ತು ಅಲಕ್ಷತೆಯ ರಾಜಕಾರಣವು ನಮ್ಮ ವಿಮರ್ಶೆಯನ್ನು ಬಾಧಿಸಿರುವ ಒಂದು ವಿದ್ಯಮಾನವೂ, ವಿಮರ್ಶೆಯ ಆಚರಣೆಯಲ್ಲಿ ಅಂತರ್ಗತವಾಗಿರುವ ಒಂದು ಮನೋಧರ್ಮವೂ, ವಿಮರ್ಶೆಯ ಒಂದು ವಿನ್ಯಾಸವೂ, ಲಕ್ಷಣವೂ ಆಗಿದೆ. ಹಾಗೆಯೇ ಕುವೆಂಪು ಸಾಹಿತ್ಯವನ್ನು ಅಲಕ್ಷಿತ ಸಂಸ್ಕೃತಿಯ ನೆಲೆಯಿಂದ ನೋಡುವುದು ನಮ್ಮ ವಿಮರ್ಶೆಯ ಒಂದು ಕಾರ್ಯವೂ, ವಿಧಾನವೂ ಆಗಿದೆ.

ಕವಿಯ ಬಗ್ಗೆ ಗೌರವ–ಭಕ್ತಿ ಇರುವವರ ವಿಮರ್ಶೆಯೂ ಗೌರವ–ಭಕ್ತಿಗಳಿಂದ ಕೂಡಿವೆ. ವ್ಯಕ್ತಿಯ ಬಗೆಗಿನ ಗೌರವವು ನಮ್ಮಲ್ಲಿ ಸಾಹಿತ್ಯದ ಬಗೆಗಿನ ಭಕ್ತಿಯಾಗಿ, ಸಾಹಿತ್ಯದ ಬಗೆಗಿನ ಪ್ರೀತಿಯು ವ್ಯಕ್ತಿ ಗೌರವವಾಗಿ ಅದಲು ಬದಲಾಗುವುದು ಸಹಜವೆಂಬಂತೆ ನಮ್ಮಲ್ಲಿ ನಡೆದಿದೆ. ಇದು ನಮ್ಮ ವಿಮರ್ಶೆಯ ಒಂದು ಪ್ರಧಾನ ಪ್ರವೃತ್ತಿ. ಬೇರೆ ಬೇರೆ ಕೃತಿಗಳ ಬಗ್ಗೆ ಬಂದಿರುವ ವಿಮರ್ಶೆಗೆ ಹೋಲಿಸಿದರೆ ನಮ್ಮಲ್ಲಿ ಕುವೆಂಪು ಅವರ ಕತೆಗಳು ಮತ್ತು ಪ್ರಬಂಧಗಳ ಬಗ್ಗೆ ಬಂದಿರುವ ವಿಮರ್ಶೆ ತೀರಾ ಕಡಿಮೆ. ಯಾಕೆ ಹೀಗಾಗಿರಬಹುದು? ಕೆಲವು ಪ್ರಕಾರಗಳನ್ನು ಗಂಭೀರವಾಗಿ ಚರ್ಚಿಸಿ, ಕೆಲವು ಪ್ರಕಾರಗಳನ್ನು ನಮ್ಮ ವಿಮರ್ಶಾ ಸಂಸ್ಕೃತಿಯು ಅಲಕ್ಷಿಸಲು ಕಾರಣವೇನು? ಇದರ ಹಿಂದೆಯೂ ಶ್ರೇಷ್ಠತೆಯ ರಾಜಕಾರಣವೇ ಕೆಲಸಮಾಡಿದೆ. ಆಯ್ಕೆ ಮತ್ತು ಅಲಕ್ಷ್ಯತೆಯ ರಾಜಕಾರಣಕ್ಕು ಶ್ರೇಷ್ಠತೆಯ ಕಲ್ಪನೆಗೂ ಒಂದು ಅನ್ಯೋನ್ಯ ಸಂಬಂಧ ಇದೆ. ಅಲ್ಲದೆ ನಮ್ಮಲ್ಲಿ ಪ್ರಕಾರಗಳ ಬಗ್ಗೆ ಕೂಡ ಒಂದು ತರತಮ ಶ್ರೇಣೀಕರಣ ಇದೆ. ಈ ತರತಮ ಶ್ರೇಣೀಕರಣದ ರಾಜಕಾರಣದಿಂದ ಪ್ರಬಂಧಗಳು ವಿಮರ್ಶೆಯಲ್ಲಿ ಮುನ್ನೆಲೆಗೆ ಬರದೆ ಹೋಗಿವೆ.

ಹೀಗೆ ಒಬ್ಬ ಲೇಖಕನನ್ನೇ ವಿಮರ್ಶೆಗೆ ಎತ್ತಿಕೊಳ್ಳದೆ ಅಲಕ್ಷಿಸುವ ಪ್ರವೃತ್ತಿಯೂ ನಮ್ಮ ವಿಮರ್ಶೆಯಲ್ಲಿ ಇದೆ. ಈ ಅಲಕ್ಷ್ಯದ ಹಿಂದೆ ಕೇವಲ ಸಾಹಿತ್ಯಕವಾದ ಮಾನದಂಡಗಳು ಮಾತ್ರ ಇವೆಯೋ? ಖಂಡಿತಾ ಇರಲಾರವು. ವಿಮರ್ಶಕನ ಅಭಿರುಚಿ, ಸಾಹಿತ್ಯದ ಕುರಿತ ಕಲ್ಪನೆಗಳು, ಜಾತಿ ರಾಜಕಾರಣ, ತಾನು ಗುರುತಿಸಿಕೊಂಡಿರುವ ಬಳಗ ಅಥವಾ ಗುಂಪಿನ ಜೊತೆಗಿನ ಒಡನಾಟದ ರಾಜಕಾರಣಗಳೆಲ್ಲ ಇಲ್ಲಿ ಆಯ್ಕೆ ಮತ್ತು ಅಲಕ್ಷ್ಯದ ರಾಜಕಾರಣವನ್ನು ಪ್ರಭಾವಿಸುತ್ತವೆ. ಆದರೆ ಈಗೀಗ ನಮ್ಮಲ್ಲಿ ಸಾಹಿತ್ಯ ವಿಮರ್ಶೆಯು ಸಾಹಿತ್ಯ ವಿಮರ್ಶೆಯಾಗಿ ಉಳಿಯದೆ ಸಂಸ್ಕೃತಿ ಕಥನವಾಗಿ ಬೆಳೆದಿದೆ.

### 8.2. ಕೊನೆಗೆ ಮೊದಲು

ವಿಮರ್ಶೆಯ ಬಗೆಗೆ ನಮ್ಮಲ್ಲಿ ಇದೊಂದು ಸಾಹಿತ್ಯ ಪ್ರಕಾರ ಎಂಬ ನಂಬಿಕೆ ಇದೆ. ಇದೊಂದು ಆಧುನಿಕ ಕಾಲದಲ್ಲಿ ಸಂಭವಿಸಿದ ಪ್ರಕಾರ; ನಮ್ಮ ಪ್ರಾಚೀನರಲ್ಲಿ ವಿಮರ್ಶೆ ಇರಲಿಲ್ಲ; ಕಾವ್ಯ ಮೀಮಾಂಸೆಯೂ ವಿಮರ್ಶೆಯೂ ಪ್ರತ್ಯೇಕವಾದ ಪ್ರಕಾರಗಳು ಎಂಬ ನಂಬಿಕೆಗಳಿವೆ. ಈ ಎಲ್ಲ ನಂಬಿಕೆಗಳೂ ಸ್ವಯಂಪೂರ್ಣವಾದ ನಂಬಿಕೆಗಳಲ್ಲ. ಊನವಾದ ನಂಬಿಕೆಗಳು, ಭಾಗಶಃ ಸತ್ಯಗಳು. ನಮ್ಮ ಪ್ರಾಚೀನರಲ್ಲು ವಿಮರ್ಶೆ ಇತ್ತು. ಆದರೆ ಅದು ಆಧುನಿಕರು ಭಾವಿಸಿದ ರೂಪದಲ್ಲಿ ಇರಲಿಲ್ಲ. ಟೀಕು ರೂಪಿಯಾಗಿ, ಸಂಪಾದನಾ ರೂಪಿಯಾಗಿ, ಸಾರಸಂಗ್ರಹ ರೂಪಿಯಾಗಿ, ಮೀಮಾಂಸಾ ರೂಪಿಯಾಗಿ, ಪಾರಾಯಣ ರೂಪಿಯಾಗಿ, ಕಾವ್ಯರೂಪಿ–ಪುನರ್ಕಥನ ರೂಪಿಯಾಗಿ ಹೀಗೆ ಹಲವು ರೂಪಗಳಲ್ಲಿ ಇತ್ತು. ಆದರೆ ಅದನ್ನು ವಿಮರ್ಶೆಯೆಂದು

ಪರಿಗ್ರಹಿಸುವ ದೃಷ್ಟಿ ಆಧುನಿಕರಲ್ಲಿ ಇರಲಿಲ್ಲ ಅಷ್ಟೆ. ಅಷ್ಟೆ ಅಲ್ಲ ಆಧುನಿಕರು ಭಾವಿಸಿದಂತೆ ವಿಮರ್ಶೆ ಮತ್ತು ಮೀಮಾಂಸೆಗಳು ಅವಳಿ ವೈರುಧ್ಯಗಳಲ್ಲ. ಪರಸ್ಪರ ಬೇರೆ ಬೇರೆ ಪ್ರಕಾರಗಳಲ್ಲ. ನಮ್ಮ ವಿಮರ್ಶೆಯು ಮೀಮಾಂಸೆಯ ಆಧುನಿಕ ರೂಪ ಅಷ್ಟೆ. ಹಾಗೆಯೆ ಮೀಮಾಂಸೆಯು ನಮ್ಮ ವಿಮರ್ಶೆಯ ಒಂದು ಪ್ರಾಗ್ರೂಪವೇ ಹೌದು. ಇದು ನಮ್ಮ ಪರಂಪರೆಯನ್ನು ಅವಲೋಕಿಸಿದರೆ ತಿಳಿಯುತ್ತದೆ. ಅಷ್ಟೇ ಅಲ್ಲ ತತ್ವರೂಪದಲ್ಲಿ ಪ್ರಕಟವಾಗಿರುವ ವಿಮರ್ಶೆಯ ರೂಪಗಳನ್ನು, ದೃಷ್ಟಿಗಳನ್ನು ಕ್ರೋಡೀಕರಿಸಿಕೊಂಡರೆ ನಮ್ಮ ವಿಮರ್ಶೆಯ ಭಾಗಶಃ ಪರಿಚಯ ಮಾತ್ರ ಮಾಡಿಕೊಂಡಂತೆ ಆಗುತ್ತದೆ. ಅದರ ಬದಲಿಗೆ ನಮ್ಮಲ್ಲಿನ ಸಾಹಿತ್ಯದ ಆಚರಣೆಯನ್ನು ಮತ್ತು ವಿಮರ್ಶೆಯ ಆಚರಣೆಯನ್ನು ಪರಿಕಲ್ಪಿಸಿ–ತಾತ್ವೀಕರಿಸಿಕೊಳ್ಳುವುದರಿಂದ ನಮ್ಮ ವಿಮರ್ಶೆಯ ಅಜಮಾಸು ವಿನ್ಯಾಸಗಳನ್ನು ತಿಳಿಯಬಹುದಾಗಿದೆ. ಈ ಅಧ್ಯಯನದಲ್ಲಿ ಈ ನಿಟ್ಟಿನಲ್ಲಿ ಯತ್ನಗಳನ್ನು ಮಾಡಲಾಗಿದೆ.

ನಮ್ಮ ವಿಮರ್ಶೆಯು ಕೇವಲ ವಿಮರ್ಶೆ ಅಲ್ಲ. ಇದು ವಿಮರ್ಶಾ ಸಂಸ್ಕೃತಿ. ಆಧುನಿಕ ಕಾಲದಲ್ಲಾಗಲೀ, ಸಂಭವ ಕಾಲದಲ್ಲಾಗಲೀ, ಪ್ರಾಚೀನ ಕಾಲದಲ್ಲಾಗಲೀ ವಿಮರ್ಶೆ ಎಂದರೆ ಪಂಡಿತವರ್ಗದ ಬರವಣಿಗೆ ಮಾತ್ರ ಎಂಬ ಧೋರಣೆ ನಮ್ಮ ಆಚರಣೆಯಲ್ಲಿ ಇಲ್ಲ. ವಿಮರ್ಶೆ ಎಂಬುದು ಬರಹ ರೂಪದ ಪ್ರತಿಕ್ರಿಯೆ; ಮೌಲ್ಯಮಾಪನ–ನ್ಯಾಯನಿರ್ಣಯ ಸ್ಥಾನನಿರ್ಣಯ–ಭಿನ್ನಾರ್ಥವ್ಯಾಖ್ಯಾನ–ಪ್ರತಿಪಠ್ಯ ನಿರ್ಮಾಣ ಇತ್ಯಾದಿ ಸಾಧ್ಯತೆಗಳ ಲಿಪಿಕ ದಾಖಲೆ ಮಾತ್ರ ಅಲ್ಲ. ಸಾರಸಂಗ್ರಹ, ಗಮಕ, ಪ್ರಕಾರಾಂತರ, ಸಾಹಿತ್ಯರಚನೆ ಹೀಗೆ ಹಲವು ತೆರನ ಸಾಂಸ್ಕೃತಿಕ ಆಚಾರಗಳ ಮೂಲಕ ಪ್ರಕಟವಾಗುವ ಬಹುರೂಪಿ ಅನುಸಂಧಾನ. ಇದೊಂದು ಸಾಂಸ್ಕೃತಿಕ ಸಂಕಥನ. ಇದು ಸಾಹಿತ್ಯವನ್ನು ಆಧರಿಸಿದ ಸಮಾಜ ವಿಮರ್ಶೆಯೇ; ಬದುಕಿನ ಮೀಮಾಂಸೆಯೇ ಹೌದು. ವಿಮರ್ಶೆ ಎನ್ನುವುದು ಸಾಹಿತ್ಯದ ಒಂದು ಪ್ರಕಾರ ಮಾತ್ರ ಅಲ್ಲ. ಇದೊಂದು ಶಿಸ್ತು. ಸಾಹಿತ್ಯ, ಸಂಗೀತ, ಹರಿಕತೆ, ಗಮಕ, ಕೇಳಿಕೆ, ಪಾರಾಯಣ, ಅಧ್ಯಯನ, ಟೀಕು–ವ್ಯಾಖ್ಯಾನ, ಉತ್ಸವ, ಸ್ಪರ್ಧೆಗಳು, ಬಾಳಿಗೆ ಅಳವಡಿಸಿಕೊಳ್ಳುವ (ಉದಾ: ಮಂತ್ರ ಮಾಂಗಲ್ಯ) ಆಚಾರಗಳೆಲ್ಲ ಸೇರಿದ ಸಾಹಿತ್ಯದ ಸಾಂಸ್ಕೃತಿಕ ಅನುಸಂಧಾನಗಳ ಆಚಾರ. ಹಾಗೇ ಇದೊಂದು ಹಲವು ಪ್ರಕಾರಗಳು, ಮಾರ್ಗಗಳು, ವಲಯಗಳನ್ನು ಒಳಗೊಂಡಿರುವ ಒಂದು ಶಿಸ್ತು. ಮಹಿಳಾ ಅಧ್ಯಯನ, ಭಾಷಾಂತರ ಅಧ್ಯಯನ, ತೌಲನಿಕ ಅಧ್ಯಯನ, ಮಾರ್ಕ್ಸ್‌ವಾದಿ ಅಧ್ಯಯನ, ಸಂಸ್ಕೃತಿ ಅಧ್ಯಯನ ಇಂತಹ ಅಧ್ಯಯನ ಶಿಸ್ತುಗಳ ರೀತಿಯಲ್ಲೆ ಸಾಗಬಹುದಾದ ಮತ್ತು ಇವನ್ನೆಲ್ಲ ಒಳಗೊಳ್ಳಬಹುದಾದ ಒಂದು ಸ್ವತಂತ್ರ ಶಿಸ್ತು: ವಿಮರ್ಶಾ ಸಂಸ್ಕೃತಿ.

ವಿಮರ್ಶೆಯು ಸೃಜನಶೀಲವೋ ಸೃಜನೇತರವೋ ಎಂಬ ಸಲ್ಲದ ಸಂದಿಗ್ಧವೊಂದು ಕೂಡ ನಮ್ಮಲ್ಲಿ ಚಲಾವಣೆಯಲ್ಲಿದೆ. ಇದೊಂದು ಅಪ್ರಸ್ತುತವಾದ ಸಂದಿಗ್ಧತೆ. ನಮ್ಮ ಆಧುನಿಕ ಕಾಲದಲ್ಲಿ ಸೃಷ್ಟಿಯಾದ ವಿಮರ್ಶೆ ಎಂದರೆ ಏನು? ಎಂಬುದರ ಕುರಿತ ವಿಮರ್ಶೆಯ ಪರಿಕಲ್ಪನೆಯ ಬಗೆಗಿನ ಅಪಕಲ್ಪನೆಗಳೇ ಈ ಸಂಧಿಗ್ದತೆ ಉಂಟಾಗಲು ಕಾರಣವಾಗಿವೆ. ಪ್ರಾಥಮಿಕವಾಗಿ ಸೃಜನಶೀಲ ಮತ್ತು ಸೃಜನೇತರ ಎಂಬ ಕಲ್ಪನೆಗಳನ್ನೆ ಒಪ್ಪಲಾಗುವುದಿಲ್ಲ. ಹಾಗೊಂದು ವೇಳೆ ಒಪ್ಪಿದರೂ ವಿಮರ್ಶೆಯು ಸೃಜನಶೀಲವೂ ಹೌದು, ಸೃಜನೇತರವೂ ಹೌದು ಎಂದೇ ಹೇಳಬೇಕಾಗುತ್ತದೆ. ವಿಮರ್ಶೆ ಎಂದರೆ ಕೇವಲ ಬರವಣಿಗೆ ರೂಪದ; ಅಕಾಡೆಮಿಕ್ಕಾದ ಸಾಹಿತ್ಯದ ಕುರಿತ ಪ್ರತಿಕ್ರಿಯೆ ಅಲ್ಲ; ಟೀಕು, ಪಾರಾಯಣ, ಕೇಳಿಕೆ, ಇತ್ಯಾದಿಗಳೆಲ್ಲ ಇದರ ಕಕ್ಷೆಯಲ್ಲೇ ಬರುತ್ತವೆ. ವಿಮರ್ಶೆಯು ಸಂಸ್ಕೃತಿ; ಶಿಸ್ತು; ಸಾಂಸ್ಕೃತಿಕ ಆಚಾರ ಎಂದೆಲ್ಲ ತಿಳಿದಾಗ ಅದು ಸೃಜನಶೀಲವೋ, ಸೃಜನೇತರವೋ ಎಂಬ ಸಂದಿಗ್ಧವೇ ಉದ್ಭವಿಸುವುದಿಲ್ಲ.

ವಿಮರ್ಶೆಯು ಅಕಾಡೆಮಿಕ್ಕಾಗಿ ಮಾತ್ರ ಉಪಯುಕ್ತವಾದುದು. ಅದು ಸಾಮಾಜಿಕವಾಗಿ ಉಪಯುಕ್ತವಾದುದಲ್ಲ ಎಂಬ ನಂಬಿಕೆಯೊಂದು ನಮ್ಮಲ್ಲಿದೆ. ವಿಮರ್ಶೆಯ ಸೃಷ್ಟಿ ಮತ್ತು ಅದರ ಕುರಿತಾದ ಅಧ್ಯಯನ ಕೂಡ ಸಾಮಾಜಿಕವಾಗಿ ಉಪಯುಕ್ತವಲ್ಲ ಎಂಬ ನಂಬಿಕೆ ನಮ್ಮಲ್ಲಿದೆ. ಅಷ್ಟೇ ಅಲ್ಲ, ವಿಜ್ಞಾನ ಮತ್ತು ಅನ್ವಯಿಕ ಶಾಸ್ತ್ರಗಳ ಅಧ್ಯಯನಗಳಿಗೆ ಇರುವಷ್ಟು ಉಪಯುಕ್ತತೆ ಸಾಹಿತ್ಯ ಸಂಬಂಧಿ ಸಂಶೋಧನೆ/ ಮಾನವಿಕ ಸಂಶೋದನೆಗಳಿಗೆ ಇರುವುದಿಲ್ಲ ಎಂಬ ನಂಬಿಕೆಯೂ ನಮ್ಮಲ್ಲಿದೆ. ಸಮಾಜವನ್ನು ಕುರಿತಾದ ಯಾವುದೇ ಅಧ್ಯಯನವೂ ಅನುಪಯುಕ್ತ ಆಗಲಾರದು. ಜ್ಞಾನವ್ಯವಸ್ಥೆಗಳ ವೈವಿಧ್ಯತೆಯನ್ನು ಕಾಪಾಡಿಕೊಳ್ಳುವುದು ಜೀವವೈವಿಧ್ಯತೆಗಳನ್ನು ಕಾಪಾಡಿಕೊಳ್ಳುವಷ್ಟೇ ಮುಖ್ಯವಾದುದು. ಜ್ಞಾನಮೀಮಾಂಸೆಗಳ ಕುರಿತಾದ ಅಧ್ಯಯನ–ಜಿಜ್ಞಾಸೆಯು ಅನುಪಯುಕ್ತ ಎಂದು ಭಾವಿಸಲಾಗದು. ಪ್ರಸ್ತುತ ಅಧ್ಯಯನವು ವಿಮರ್ಶೆಯ ವಿನ್ಯಾಸ ಮತ್ತು ತಾತ್ವಿಕತೆಗಳನ್ನು ಸೋಸಿಕೊಳ್ಳುವ ಯತ್ನವಾಗಿರುವುದರಿಂದ ಇದರ ಸಾಮಾಜಿಕವಾದ ಉಪಯುಕ್ತತೆ ಕಡಿಮೆ

ಪ್ರಮಾಣದ್ದೆಂದು ಭಾವಿಸಬೇಕಿಲ್ಲ. ಜ್ಞಾನ ಮೀಮಾಂಸೆಯ ವಿಧಾನ–ವಿನ್ಯಾಸಗಳ ಅಧ್ಯಯನವು ಸಾಮಾಜಿಕವಾಗಿ ಖಂಡಿತಾ ಉಪಯುಕ್ತವಾದುದು. ಅಲ್ಲದೆ, ಇಲ್ಲಿ ಹರಿಕತೆ, ಟೀಕು–ವ್ಯಾಖ್ಯಾನ, ದಂತಕತೆ, ಪ್ರಕ್ಷಿಪ್ತ, ಸಂಗ್ರಹ, ಸಂಪಾದನೆ, ಅಧ್ಯಯನ–ಪಾರಾಯಣ, ಅಭಿನಂದನ, ಉತ್ಸವ–ವಿಚಾರಗೋಷ್ಠಿ–ಗಾಯನ–ಗಮಕಾದಿಗಳನ್ನು ವಿಮರ್ಶೆಯ ಕಕ್ಷೆಯಲ್ಲಿ ತಂದಿರುವುದರಿಂದ; ವಿಮರ್ಶೆಯನ್ನು ವಿಮರ್ಶಾ ಸಂಸ್ಕೃತಿ ಎಂದು ಗ್ರಹಿಸಿರುವುದರಿಂದ ಇದಕ್ಕೊಂದು ಸಾಮಾಜಿಕತೆ ಇದ್ದೇ ಇದೆ. ಅಲ್ಲದೆ ಇದು ಕೇವಲ ಸಾಹಿತ್ಯ ವಿಮರ್ಶೆಯ ಅಧ್ಯಯನ ಅಲ್ಲ. ವಿಮರ್ಶಾ ಸಂಸ್ಕೃತಿಯ ಅಧ್ಯಯನ.

ಆಧುನಿಕ ಸಂದರ್ಭದಲ್ಲಿ ನವೋದಯ ವಿಮರ್ಶೆ, ನವ್ಯ ವಿಮರ್ಶೆ, ಬಂಡಾಯ ವಿಮರ್ಶೆ ಎಂಬಂತೆ ವಿಮರ್ಶೆಯನ್ನು ಸಾಹಿತ್ಯ ಸಂವೇದನೆಗಳಿಗೆ ಅನುಸಾರವಾಗಿ ವರ್ಗೀಕರಿಸಿಕೊಂಡು ನೋಡುವ ಪ್ರವೃತ್ತಿ ಇದೆ. ನವೋದಯ, ನವ್ಯ, ಬಂಡಾಯದಂತಹ ವರ್ಗೀಕರಣಗಳು ನಮ್ಮ ವಿಮರ್ಶೆಯ ಪರಂಪರೆಯನ್ನು ಸರಿಯಾಗಿ ವ್ಯಾಖ್ಯಾನಿಸಲಾರವು. ಈ ರೀತಿಯಲ್ಲಿ ಸಾಹಿತ್ಯ ಚರಿತ್ರೆಯನ್ನು ವರ್ಗೀಕರಿಸಿ–ನಾಮಾಂಕಿಸಿ ನೋಡುವುದೇ ಊನವಾದ ದೃಷ್ಟಿ. ನವೋದಯದ ಲಕ್ಷಣ–ಸಂವೇದನೆಗಳು ನವ್ಯದಲ್ಲಿಯೂ ಬಂಡಾಯದಲ್ಲಿಯೂ ಇಲ್ಲವೋ? ಬಂಡಾಯದ ಸಂವೇದನೆಗಳು ನವ್ಯದಲ್ಲಿಯೂ ನವೋದಯದಲ್ಲಿಯೂ ಇಲ್ಲವೋ? ಇವೆ. ನವೋದಯ–ನವ್ಯ–ಪ್ರಗತಿಶೀಲ–ಬಂಡಾಯಗಳನ್ನು ಕಾಲಘಟ್ಟಗಳನ್ನಾಗಿಯೂ ನಿರ್ಧರಿಸಲು ಸಾಧ್ಯವಿಲ್ಲ. 1960ರ ದಶಕದಲ್ಲಿ ಕುವೆಂಪು ಕಾದಂಬರಿ ಪ್ರಕಟಿಸಿದರೆ ಬಹುಪಾಲು ನಮ್ಮ ವಿಮರ್ಶೆಯು ಈ ದಶಕದ ನಂತರದಲ್ಲೆ ಪ್ರಕಟವಾಗಿದೆ. ಅಡಿಗ, ಸಿದ್ಧಲಿಂಗಯ್ಯ, ಕುವೆಂಪು ಇವರೆಲ್ಲರ ನಡುವೆ ವಯಸ್ಸಿನ ಅಂತರ ಇದ್ದರೂ ಇವರನ್ನು ಸಂವೇದನೆ, ಕಾಲಘಟ್ಟ, ಚಳುವಳಿ, ಪಂಥ ಇತ್ಯಾದಿ ಯಾವ ದೃಷ್ಟಿಗಳಿಂದಲೂ ನವೋದಯ, ನವ್ಯ, ಬಂಡಾಯ ಮಾತ್ರವೆಂದು ವರ್ಗೀಕರಿಸಿ ಹೇಳಲಾಗುವುದಿಲ್ಲ. ಎಲ್ಲ ಸಂವೇದನೆಗಳೂ ಇವರೆಲ್ಲರಲ್ಲು ಇವೆ. ಹಾಗೇ ಒಂದೇ ಕಾಲಮಾನದಲ್ಲಿ ಮತ್ತು ಕಾಲಾತೀತವಾಗಿ ಇವರೆಲ್ಲ ಬರೆದಿದ್ದಾರೆ. ಹೀಗಿರುವಾಗ ನವೋದಯ, ನವ್ಯ, ಬಂಡಾಯವೆಂಬ ವರ್ಗೀಕರಣ ಯಾವ ರೀತಿಯಲ್ಲಿ ಖಚಿತ? ಸಮರ್ಥನೀಯ? ವಿಮರ್ಶೆಯ ವಿಚಾರದಲ್ಲು ಈ ಎಲ್ಲ ಮಾತುಗಳು ಅನ್ವಯವಾಗುತ್ತವೆ. ಖಚಿತವಾಗಿ ಲಕ್ಷಣೀಕರಿಸಬಹುದಾದ–ಸಿದ್ಧಾಂತೀಕರಿಸಬಹುದಾದ ನವೋದಯವೆಂಬ, ನವ್ಯವೆಂಬ, ಬಂಡಾಯವೆಂಬ, ವಿಮರ್ಶೆ ನಮ್ಮಲ್ಲಿ ಇಲ್ಲ. ಒಂದೇ ಕಾಲಘಟ್ಟ, ಸಾಹಿತಿ, ವಿಮರ್ಶಕರಲ್ಲಿ ಇರಬಹುದಾದ ಸಂವೇದನೆಗಳಿವು ಅಷ್ಟೆ. ಕೆಲವರಲ್ಲಿ ಕೆಲವು ಸಂವೇದನೆಗಳು ಪ್ರಧಾನವಾಗಿಯೂ ಕೆಲವರಲ್ಲಿ ಕಡಿಮೆಯಾಗಿಯೂ ಇರಬಹುದಷ್ಟೆ. ಆ ಕಾರಣಕ್ಕಾಗಿ ಲೇಖಕರನ್ನಾಗಲೀ, ವಿಮರ್ಶಕರನ್ನಾಗಲೀ ನವೋದಯ, ನವ್ಯ, ಬಂಡಾಯವೆಂದು ಬ್ರಾಂಡು ಮಾಡಲು ಆಗುವುದಿಲ್ಲ.

ಹಾಗೆ ವಿಮರ್ಶೆಯನ್ನು ವರ್ಗೀಕರಿಸುವುದಾದರೆ ಅಭಿನಂದನ ರೂಪಿ ವಿಮರ್ಶೆ, ಸಾಹಿತ್ಯ ರೂಪಿ ವಿಮರ್ಶೆ, ಸೂಕ್ತಿ ರೂಪಿ ವಿಮರ್ಶೆ, ಸರಳರೂಪಿ ವಿಮರ್ಶೆ(ಟೀಕು) ಇತ್ಯಾದಿಯಾಗಿ ವರ್ಗೀಕರಿಸಿಕೊಳ್ಳಬಹುದೇ ವಿನಾ ನವೋದಯ–ನವ್ಯ–ಬಂಡಾಯ ಮುಂತಾಗಿ ಅಲ್ಲ. ಅಭಿನಂದನ ರೂಪಿ ವಿಮರ್ಶೆಯನ್ನು ತೆಗೆದು ಕೊಂಡರೆ ಬಿ.ಎಂ.ಶ್ರೀಗೆ ಬಂದ 'ಸಂಭಾವನೆ'ಯಿಂದ ಹಿಡಿದುಕೊಂಡು ಇತ್ತೀಚೆಗೆ ಜಿ.ಎಸ್.ಆಮೂರರಿಗೆ ಬಂದಿರುವ 'ಸಹೃದಯ ಸಂವಾದ'ದವರೆಗೆ ಯಾವ ಅಭಿನಂದನ ಗ್ರಂಥವನ್ನು ಗಮನಿಸಿದರೂ ಅವನ್ನು ನವೋದಯ, ಬಂಡಾಯ, ನವ್ಯ ಅಭಿನಂದನೆಗಳೆಂದು ವರ್ಗೀಕರಿಸಲಾಗುವುದಿಲ್ಲ. ಅಲ್ಲದೆ ಅವುಗಳ ಲಕ್ಷಣ, ಗುಣ, ಭಿನ್ನ ವಿನ್ಯಾಸಗಳನ್ನು ಬೇರೆ ನೆಲೆಗಳಿಂದಲೇ ನೋಡಬೇಕಾಗುತ್ತದೆ. ಅಲ್ಲಮನ ಬಗೆಗೆ, ಬಸವಣ್ಣನ ಬಗೆಗೆ ಬಂದಿರುವ ಆಧುನಿಕ ಕಾಲದ ನಾಟಕಗಳು, ಪ್ರಾಚೀನ ಕಾಲದ ತಾರಾವಳಿ, ಪುರಾಣ, ಚರಿತೆಗಳ ಚರಿತ್ರೆಯನ್ನು ನೋಡಿದರೆ ನಮ್ಮ ಸಾಹಿತ್ಯ ರೂಪಿ ವಿಮರ್ಶೆಗೆ ಅಪಾರವಾದ ಪರಂಪರೆಯೇ ಇರುವುದು ಕಾಣುತ್ತದೆ. ಇಂಥದ್ದನ್ನು ಕೂಡ ಈ ಆಧುನಿಕ ಪಂಥೀಯ ಪರಿಭಾಷೆಯಾದ ನವೋದಯ, ಬಂಡಾಯಗಳಿಂದ ನೋಡಲಾಗುವುದಿಲ್ಲ. ವಿಮರ್ಶೆಯ ಅಖಂಡ ಪರಂಪರೆಯ ಪರಿಕಲ್ಪನೆ ನಮ್ಮವರಿಗೆ ಇಲ್ಲದುದರಿಂದಲೆ ಇಂತಹ ಸೀಮಿತ ದೃಷ್ಟಿಯ ನಂಬಿಕೆಗಳು ಸೃಷ್ಟಿಯಾಗಿವೆ.

ಕಾಲಘಟ್ಟಗಳ ಚರಿತ್ರೆಗಳು, ಪ್ರಕಾರರೂಪಿ ಚರಿತ್ರೆಗಳು, ಆಧುನಿಕ–ಪ್ರಾಚೀನ ಎಂಬ ವಿಂಗಡಿತ ಚರಿತ್ರೆಗಳು ಇತ್ಯಾದಿಯಾಗಿ ಹಲವು ರೀತಿಯ ಸಾಹಿತ್ಯ ಚರಿತ್ರೆಗಳು ನಮ್ಮಲ್ಲಿ ರಚನೆಯಾಗಿವೆ. ಈ ಎಲ್ಲ ಚರಿತ್ರೆಗಳಲ್ಲಿ ವಿಮರ್ಶೆಯೇ ಚರಿತ್ರೆ ರೂಪಿಯಾಗಿ ಪ್ರಕಟವಾಗಿದೆ. ಅಲ್ಲದೆ ಅಲ್ಲಲ್ಲಿ ಆಧುನಿಕ ಚರಿತ್ರೆಯ

ಬರವಣಿಗೆಯಲ್ಲಿ ವಿಮರ್ಶೆಯ ಬಗೆಗೂ ಸಮೀಕ್ಷಾ ರೂಪದ ಕೆಲವು ಮಾತುಗಳು ಬಂದಿವೆ. ಲೇಖಕ ಕೇಂದ್ರಿತವಾಗಿ; ರೇಖಾತ್ಮಕ ರೂಪಿ ವಿಕಾಸವಾದಿ ನೆಲೆಯಲ್ಲಿ ಇಲ್ಲೆಲ್ಲ ವಿಮರ್ಶೆಯು ಚರ್ಚೆಗೆ ಗುರಿಯಾಗಿದೆ. ಆದರೆ ವಿಮರ್ಶೆಯ ಚರಿತ್ರೆಯು/ಗಳು ನಮ್ಮಲ್ಲಿ ರಚಿತವಾಗಿಲ್ಲ. ಆಧುನಿಕ ಕಾಲದಲ್ಲಿ ಮಾತ್ರ ವಿಮರ್ಶೆ ಸಂಭವಿಸಿದೆ ಎಂಬ ನಂಬಿಕೆಯಿಂದಲೆ ನಮ್ಮ ಪ್ರಾಚೀನರಲ್ಲಿ ವಿಮರ್ಶೆಯು ಇಲ್ಲದಿರಲು ಕಾರಣಗಳೇನು ಎಂದು ಅನ್ವೇಷಿಸಲೂ ಯತ್ನಿಸಲಾಗಿದೆ. ಇದಲ್ಲದೆ; ವಿಮರ್ಶೆಯ ಕುರಿತ ಅಧ್ಯಯನಗಳು ಮತ್ತು ವಿಚಾರಸಂಕಿರಣಗಳಲ್ಲಿ ನವೋದಯ ವಿಮರ್ಶೆ, ನವ್ಯ ವಿಮರ್ಶೆ, ಬಂಡಾಯ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ, ತೌಲನಿಕ ವಿಮರ್ಶೆ ಇತ್ಯಾದಿ ಇಂತಹ ಮಾರ್ಗಗಳಲ್ಲಿ ಮಾತ್ರವೆ ವಿಮರ್ಶೆಯ ಚರಿತ್ರೆಯನ್ನು ವರ್ಗೀಕರಿಸಿ ಚರ್ಚಿಸಲು ಯತ್ನಿಸಲಾಗಿದೆ. ಸಾಹಿತ್ಯ ಚರಿತ್ರೆಯನ್ನು ಕಟ್ಟುವ ದೃಷ್ಟಿಗಳಿಂದಲೇ ವಿಮರ್ಶೆಯ ಚರಿತ್ರೆಯನ್ನು ನಮ್ಮವರು ಕಟ್ಟಿಕೊಳ್ಳಲು ಯತ್ನಿಸುತ್ತಿದ್ದಾರೆ. ವಿಮರ್ಶೆಯು ಒಂದು ಸಾಹಿತ್ಯ ಪ್ರಕಾರ ಮಾತ್ರ ಎಂದು ತಿಳಿದಾಗ ಇಂತಹ ದೃಷ್ಟಿಗಳು ಚಾಲ್ತಿಯಾಗುತ್ತವೆ. ದೋಷಪೂರ್ಣ ಸಾಹಿತ್ಯ ಚರಿತ್ರೆ ಕಟ್ಟಾಣಿಕೆ ಮಾರ್ಗವನ್ನೆ ವಿಮರ್ಶಾ ಚರಿತ್ರೆ ಕಟ್ಟಾಣಿಕೆಯ ಮಾರ್ಗವನ್ನಾಗಿ ಬಳಸುವುದು ಸರಿಯೋ? ನಮ್ಮ ವಿಮರ್ಶಾ ಚರಿತ್ರೆ ರಚನಾಶಾಸ್ತ್ರ ಸಾಹಿತ್ಯ ಚರಿತ್ರೆ ರಚನಾ ಶಾಸ್ತ್ರಕ್ಕಿಂತ ಭಿನ್ನವಾಗಿ ರೂಪಗೊಳ್ಳಬೇಕಾಗಿದೆ.

ರೂಪ, ಪಂಥ, ದೃಷ್ಟಿ ಹೀಗೆ ಭಿನ್ನ ನೆಲೆಗಳಲ್ಲಿ ವಿಮರ್ಶೆಯ ಚರಿತ್ರೆಯನ್ನು ಕಟ್ಟಿಕೊಳ್ಳಬಹುದಾದ ಸಾಧ್ಯತೆಗಳಿವೆ. ಆಚರಣೆ ಮತ್ತು ತತ್ವ ಎಂದು ಎರಡು ಮುಖ್ಯ ಕವಲಾಗಿ ನಮ್ಮ ವಿಮರ್ಶಾ ಚರಿತ್ರೆಯನ್ನು ಕಟ್ಟುವ ಸಾಧ್ಯತೆಗಳಿವೆ. ಆಚರಣೆಯನ್ನು ತಾತ್ವೀಕರಿಸುವ ಮೂಲಕ, ತತ್ವಗಳನ್ನು ಪರಿಕಲ್ಪಿಸುವ-ಕ್ರೋಡೀಕರಿಸುವ ಮೂಲಕ ಚರಿತ್ರೆ ಕಟ್ಟಿಕೊಳ್ಳುವ ಸಾಧ್ಯತೆಗಳಿವೆ. ಈ ಸಾಧ್ಯತೆಗಳ ಅನುಸರಣೆಯ ಮೂಲಕ ಈ ಅಧ್ಯಯನದಲ್ಲಿ ವಿಮರ್ಶಾ ಚರಿತ್ರೆ ಕಟ್ಟಾಣಿಕೆಯ ಒಂದು ಪ್ರಾತ್ಯಕ್ಷಿಕೆಯನ್ನು ನಿರ್ಮಿಸಲು ಯತ್ನಿಸಲಾಗಿದೆ.

ಕನ್ನಡ ಸಾಹಿತ್ಯ ಸಂಸ್ಕೃತಿಯು ಪ್ರಾಚೀನ ಕಾಲದಲ್ಲಿ ಸಂಸ್ಕೃತದಿಂದಲೂ, ಆಧುನಿಕ ಕಾಲದಲ್ಲಿ ಇಂಗ್ಲಿಷಿನಿಂದಲೂ ಪ್ರೇರಣೆ-ಪ್ರಭಾವಗಳನ್ನು ಪಡೆದು; ಹೊಸತನಗಳನ್ನು ಸ್ವೀಕರಿಸಿ ಬೆಳೆದಿದೆ ಎಂಬ ಸ್ಥಾಪಿತ ನಂಬಿಕೆಯೊಂದು ನಮ್ಮಲ್ಲಿದೆ. ಹಾಗೆ ನೊಡಿದರೆ ನಮ್ಮಲ್ಲಿ ಸ್ವಂತಿಕೆಯ ಸಿದ್ಧಾಂತಗಳು ಮತ್ತು ಸ್ವೀಕರಣಾ ಸಿದ್ಧಾಂತಗಳು ಚರ್ಚೆಗೆ ಗುರಿಯಾಗೇ ಇಲ್ಲ. ಈ ನೆಲೆಯಲ್ಲಿ ಸಿದ್ಧಾಂತಗಳನ್ನು ರೂಪಿಸುವ ಯತ್ನಗಳೂ ನಡೆದಿಲ್ಲ. ಕೀಳರಿಮೆಯ ಪ್ರಜ್ಞೆ, ಪರಕೀಯ ಪ್ರಜ್ಞೆ, ಐಡೆಂಟಿಟಿಯ(ಸ್ವಂತಿಕೆಯ) ಬಿಕ್ಕಟ್ಟುಗಳಿಂದ ನಮ್ಮ ಚರಿತ್ರೆ ರಚನೆಯು ನರಳಿದೆ. ಈಗೀಗ ಕನ್ನಡದ್ದೆ ವ್ಯಾಕರಣ, ಕನ್ನಡದ್ದೆ ಛಂದಸ್ಸು, ಕನ್ನಡದ್ದೆ ಮಿಮಾಂಸೆಗಳ ನಿರ್ಮಾಣಗಳೂ ನಡೆಯುತ್ತಿವೆ. ಇದು ಶುದ್ಧಾಂಗವಾಗಿ ನಮ್ಮದು. ಇದು ಶುದ್ಧಾಂಗವಾಗಿ ಅನ್ಯರದು ಎಂದು ಯಾವುದನ್ನಾದರೂ ನಿರ್ಣಯಿಸಲು ಬರುತ್ತದೆಯೇ? ಅದರಲ್ಲೂ ಚರಿತ್ರೆಯನ್ನು ಹೀಗೆ ವಿಂಗಡಿಸಲು ಬರುವುದಿಲ್ಲ. ಕನ್ನಡದಲ್ಲಿ ಏನೇನು ಸಂಭವಿಸಿದೆಯೋ ಅದೆಲ್ಲವೂ ಕನ್ನಡದ್ದೆ ಅಲ್ಲವೇ? ಸಂಕರವಾಗಲಿ-ಅನ್ಯವಾಗಲಿ ನಮ್ಮಲ್ಲಿ ಸಂಭವಿಸಿದ ಮೇಲೆ ಅದು ನಮ್ಮದಾಗಿಯೇ ಸಂಭವಿಸಬೇಕು. ಮೂಲವನ್ನು ಅನ್ವೇಷಿಸುವ-ವಿಂಗಡಿಸಿ ಬೇರ್ಪಡಿಸುವ ಅಗತ್ಯವಿಲ್ಲ. ಅನಗತ್ಯವಾದುದನ್ನು-ಅನುಪಯುಕ್ತವಾದುದನ್ನು ವಿಂಗಡಿಸಬೇಕೋ-ಅನ್ಯ ಮತ್ತು ಸ್ವಗಳನ್ನು ವಿಂಗಡಿಸಬೇಕೋ? ನಮ್ಮಲ್ಲಿ ಏನೇನು ಸಂಭವಿಸಿದೆಯೋ ಅದೆಲ್ಲವೂ ನಮ್ಮದೇ ಎಂಬ ಗ್ರಹೀತವನ್ನು ಈ ಅಧ್ಯಯನದಲ್ಲಿ ಇರಿಸಿಕೊಳ್ಳಲಾಗಿದೆ. ಅನ್ಯ ಮತ್ತು ಸ್ವ ಎಂಬುವು ಹುಸಿ ಕಲ್ಪನೆಗಳೆಂದೂ ಈ ಅಧ್ಯಯನದಲ್ಲಿ ಭಾವಿಸಲಾಗಿದೆ.

ಇಲ್ಲೆ ಇನ್ನೊಂದು ಸ್ಪಷ್ಟೀಕರಣ ಅಗತ್ಯ. ಇಂಗ್ಲಿಷಾಗಲೀ, ಸಂಸ್ಕೃತವಾಗಲಿ ಕನ್ನಡಕ್ಕೆ ನೀಡುವ ಲೋಕಗಳು: ಕನ್ನಡವು ಕಡ ಪಡೆಯಲೆಂದೇ ಸದಾ ಹಪಾಹಪಿಸುವ, ಪಡೆಯುವ ಜಗತ್ತು ಎಂದೇನೂ ನಾವು ಭಾವಿಸಬೇಕಿಲ್ಲ. ಅಲ್ಲದೆ ಯಾವ ಸಂಸ್ಕೃತಿಗಳೂ ಮೇಲಲ್ಲ-ಕೀಳಲ್ಲ. ಭಿನ್ನಗಳು ಅಷ್ಟೆ. ಇಂತಹ ಭಿನ್ನತೆಗಳ ನಡುವೆ ತುಲನೆ ಮಾಡುವಾಗ ತರತಮ ಶ್ರೇಣೀಕರಣ ದೃಷ್ಟಿಯಿಂದ ತುಲನೆ ಮಾಡುವುದು ಯುಕ್ತವಲ್ಲ. ಆದರೆ ನಮ್ಮಲ್ಲಿ 'ಮೀಮಾಂಸೆಯ' ಕಾರಣಕ್ಕೆ ಸಂಸ್ಕೃತವನ್ನು 'ವಿಮರ್ಶೆಯ' ಕಾರಣಕ್ಕೆ ಇಂಗ್ಲಿಷನ್ನು ಹೋಲಿಕೆಗೆ ಎಳೆದು ತರುವ ಪ್ರವೃತ್ತಿ ಸಾಮಾನ್ಯವಾಗಿದೆ. ತೌಲನಿಕ ಕಾವ್ಯ ಮೀಮಾಂಸೆಯ ಮುಂದುವರಿದ ಬೆಳೆಯಾಗಿ ತೌಲನಿಕ ವಿಮರ್ಶೆಯು ನಮ್ಮಲ್ಲಿ ಸಂಭವಿಸುತ್ತಿದೆ. ಐಡಿಯಾಲಜಿಗಳ; ಸಿದ್ಧಾಂತಗಳ ಅನ್ವಯೀಕರಣ;

ಅಲ್ಲಿರುವುದು ಇಲ್ಲಿಯೂ ಇದೆಯೆಂದು ನೋಡುವ ಅನ್ವಯೀಕರಣ ಪ್ರವೃತ್ತಿ ಬೆಳೆಯುತ್ತಿದೆ. ಆದರೆ ಇದು ಅಗತ್ಯವೇ? ಭಿನ್ನ ಓದಿನ ದಾರಿಗಳನ್ನು ಭಾಷಾತೀತವಾಗಿ, ದೇಶಾತೀತವಾಗಿ ಪ್ರಯೋಗಿಸಿ ನೋಡುವ; ಬಳಸಿನೋಡುವ ವ್ಯಾಯಾಮ ಮಾಡುವುದರಲ್ಲಿ ದೋಷವಿಲ್ಲ. ಆದರೆ ನಾವು 'ಅನ್ಯ' ವೆಂದು ಭಾವಿಸುವ ಅನ್ಯ ಸಿದ್ಧಾಂತಗಳನ್ನು ನಮ್ಮಲ್ಲಿನ ಸಿದ್ಧಾಂತಗಳಿಗೆ ತಾಳೆ ನೋಡುತ್ತ ನಮ್ಮಲ್ಲಿಯೂ ಇದು ಇತ್ತೆಂದು ಸಮರ್ಥಿಸಿಕೊಳ್ಳುವ ಅಗತ್ಯವಿಲ್ಲ. ಆಧುನಿಕವನ್ನು ಪ್ರಾಚೀನರಲ್ಲಿ ಹುಡುಕುವ; ಅನ್ಯವನ್ನು ಸ್ವದಲ್ಲಿ ಹುಡುಕುವ ಯತ್ನಗಳಿಗಿಂತ ಪುನರ್ಕಥನ-ಪುನಸ್ಸೃಷ್ಟಿಗಳೇ ಯುಕ್ತ ಮಾರ್ಗಗಳೆಂದೂ ಈ ಅಧ್ಯಯನದಲ್ಲಿ ಭಾವಿಸಲಾಗಿದೆ. ಹಾಗಾಗಿ ಇಲ್ಲಿ ಸಂಸ್ಕೃತ-ಇಂಗ್ಲಿಷುಗಳ ತುಲನೆಗಳಿಗೆ ಹೋಗಿಲ್ಲ.

ಆಧುನಿಕ ಸಂದರ್ಭದಲ್ಲಿ ವಿಮರ್ಶೆಯ ಪರಿಭಾಷೆಗಳ ಮತ್ತು ಸಿದ್ಧಾಂತಗಳ ಕಗ್ಗಾಡೇ ಸೃಷ್ಟಿಯಾಗಿದೆ. ಈ ಕಗ್ಗಾಡಿನ ವಿಚಾರವನ್ನು ವಿಸ್ತೃತವಾಗಿ ವಿಮರ್ಶಾ ಪಂಥಗಳು ಎಂಬ ವಿಭಾಗದಲ್ಲಿ ಚರ್ಚಿಸಲಾಗಿದೆ. ಈ ಪರಿಭಾಷೆಯ ಕಗ್ಗಾಡಿನಲ್ಲಿ ತೌಲನಿಕ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಪ್ರಾಯೋಗಿಕ ವಿಮರ್ಶೆ, ರೂಪನಿಷ್ಠ ವಿಮರ್ಶೆ, ಅನ್ವಯಿಕ ವಿಮರ್ಶೆ, ವರ್ಣನಾತ್ಮಕ ವಿಮರ್ಶೆ ಇಂತಹ ಕೆಲವೊಂದು ಮಾರ್ಗಗಳು ಮಾತ್ರವೇ ನಮ್ಮಲ್ಲಿ ತಕ್ಕಮಟ್ಟಿಗೆ ಪ್ರಯೋಗವಾಗಿವೆ. ಮಿಕ್ಕಂತೆ ನಮ್ಮಲ್ಲಿ ಬಹುತೇಕ ಮಾರ್ಗ-ಪಂಥ-ಸಿದ್ಧಾಂತಗಳು ತತ್ವ-ಸಿದ್ಧಾಂತಗಳ ಮಟ್ಟದಲ್ಲೇ ಉಳಿದು ಹೋಗಿವೆ. ಕೆಲವು ಪ್ರಯೋಗಕ್ಕಾಗಿ ಪ್ರಯೋಗವಾಗಿದ್ದರೆ; ಕೆಲವು ನಾಮಮಾತ್ರಕ್ಕೆ ಇವೆ. ಆದರೆ ನಮ್ಮಲ್ಲಿನ ವಿಮರ್ಶೆಯ ರೂಪಗಳು ಕನ್ನಡದಲ್ಲಿ ಸಾಕಷ್ಟು ಬೇರೂರಿದ ಪ್ರಯೋಗಗಳಾಗಿವೆ. ಅಭಿನಂದನ ರೂಪಿ, ಸೂಕ್ತಿ ರೂಪಿ, ಚರಿತ್ರೆ ರೂಪಿ, ಸರಳ ರೂಪಿ, ಸಾಹಿತ್ಯ ರೂಪಿ, ಒಡನಾಟ ರೂಪಿ, ಅಧ್ಯಯನ ರೂಪಿ, ವಿವಿಮರ್ಶಾರೂಪಿ, ಸಮೀಕ್ಷಾ ರೂಪಿ, ಮುನ್ನುಡಿ ರೂಪಿ ಹೀಗೆ ಹತ್ತು ಹಲವು ರೂಪಗಳು ಸ್ಥಾಪಿತ ವಿಮರ್ಶಾ ಮಾರ್ಗಗಳಾಗಿ ಸ್ಥಾಪಿತವಾಗುತ್ತಿವೆ. ಇವುಗಳ ಜೊತೆಗೆ ಪುಸ್ತಕ ವಿಮರ್ಶೆ, ಪುನರಾಲೋಕನ-ಪುನರ್ಮೌಲ್ಯೀಕರಣ, ಪುನರ್ಕಥನ, ಟೀಕು-ವ್ಯಾಖ್ಯಾನ, ಸಾಂಸ್ಕೃತಿಕ ಅನುಸಂಧಾನಾದಿ ಹಲವು ಮಾರ್ಗಗಳು ಚಾಲ್ತಿಯಲ್ಲಿವೆ. ಇವೆಲ್ಲವನ್ನು ಕನ್ನಡ ವಿಮರ್ಶೆಯ ಪಂಥ ವಿನ್ಯಾಸಗಳೆಂದು ನಾವು ಮಾನ್ಯ ಮಾಡಬೇಕಿದೆ. ತತ್ವ ಸಿದ್ಧಾಂತಗಳನ್ನು ನೋಡಿ ಅವು ನಮ್ಮಲ್ಲಿ ಇದೆಯೇ ಎಂದು ಪರೀಕ್ಷಿಸುತ್ತ, ಇಲ್ಲವೆಂದು ಕೊರಗುತ್ತ, ಪ್ರಯೋಗಿಸಿ ಬಸವಳಿಯುವುದಕ್ಕಿಂತ ನಮ್ಮ ಆಚರಣೆಯನ್ನೆ ತಾತ್ವೀಕರಿಸಿಕೊಳ್ಳಬೇಕಿದೆ. ಆಚರಣೆಯ ತಾತ್ವೀಕರಣವೊಂದೇ ನಮ್ಮನ್ನು ಆತ್ಮಗೌರವಯುತವಾಗಿ-ನಮ್ಮನ್ನು ನಾವಾಗಿ-ಕಂಡುಕೊಳ್ಳುವ ಮಾರ್ಗವಾಗಿದೆ.

### 8.3. ನಮ್ಮ ವಿಮರ್ಶೆಯಲ್ಲಿ ಮಾರ್ಗಗಳು ರೂಪಗೊಂಡಿವೆಯೇ?

ಹೌದು ರೂಪಗೊಂಡಿವೆ. ಹತ್ತು ಹಲವು ಪಂಥಗಳು-ದಾರಿಗಳು ನಮ್ಮಲ್ಲಿ ರೂಪಗೊಂಡಿವೆ. ಕುವೆಂಪು ಕುರಿತ ವಿಮರ್ಶೆಯಲ್ಲಿ ಇವುಗಳಲ್ಲಿ ಬಹಳಷ್ಟು ಮಾರ್ಗಗಳು ಪ್ರಯೋಗವಾಗಿವೆ. ಅವುಗಳನ್ನು ಸ್ಥೂಲವಾಗಿ ಈ ಕೆಳಕಂಡಂತೆ ಗುರ್ತಿಸಿಕೊಳ್ಳಬಹುದು. ನಮ್ಮಲ್ಲಿ ಆಚರಣೆಯಲ್ಲಿರುವ ಕೆಲವು ಮುಖ್ಯ ಪಂಥಗಳನ್ನಷ್ಟೆ ಇಲ್ಲಿ ಗುರ್ತಿಸಲಾಗುವುದು. ಸಾದ್ಯಂತವಾಗಿ ಲಕ್ಷಣ ಸಮೇತ ಎಲ್ಲವನ್ನು ಸೈದ್ಧಾಂತೀಕರಿಸಲು ಇಲ್ಲಿ ಯತ್ನಿಸಿಲ್ಲ. ಅದು ಪ್ರಸ್ತುತ ಅಧ್ಯಯನದ ವ್ಯಾಪ್ತಿಯೂ ಅಲ್ಲ. ನಮ್ಮಲ್ಲಿ ಆಚರಣೆಯಾಗಿರುವ ಮಾರ್ಗಗಳು ಯಾವುವು ಎಂಬುದನ್ನು ಕೇವಲ ಪರಿಚಯಾತ್ಮಕವಾಗಿ ಉಲ್ಲೇಖಿಸಲು ಮತ್ತು ಮಂಡಿಸಲು ಮಾತ್ರ ಇಲ್ಲಿ ಯತ್ನಿಸಲಾಗುವುದು. (ಇಲ್ಲಿ ಉಲ್ಲೇಖಿಸಿ ಗುರ್ತಿಸಿಕೊಂಡಿರುವ ಕೆಲವು ಮಾರ್ಗಗಳನ್ನು ಈಗಾಗಲೇ ಪ್ರಸ್ತುತ ಅಧ್ಯಯನದಲ್ಲಿ ಕುವೆಂಪು ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಇಲ್ಲೂ ಕುವೆಂಪು ಕುರಿತ ವಿಮರ್ಶೆಯನ್ನು ಅಂಗಾಂಶವಾಗಿ ಗಣಿಸಿಯೇ ಈ ಮಾರ್ಗಗಳನ್ನು ಕಟ್ಟಿಕೊಳ್ಳಲಾಗಿದೆ.)

#### 1. ಅಭಿನಂದನಾ ಮಾರ್ಗ

ಆಧುನಿಕ ಸಂದರ್ಭದಲ್ಲಿ ಲೇಖಕ ಕೇಂದ್ರಿತವಾದ ಹಲವು ತೆರನ ವಿಮರ್ಶಾ ಮಾರ್ಗಗಳಲ್ಲಿ ಅಭಿನಂದನಾ ಮಾರ್ಗವೂ ಒಂದು. ಬಿ.ಎಂ.ಶ್ರೀ ಅವರಿಗೆ ಅವರ ಶಿಷ್ಯರು ಅರ್ಪಿಸಿದ 'ಸಂಭಾವನಾ' ಗ್ರಂಥದಿಂದ ಇದರ ಆರಂಭವನ್ನು ಗುರ್ತಿಸಬಹುದು. ಅಲ್ಲಿಂದ ಇಲ್ಲಿಯವರೆಗೆ ನೂರಾರು ಸಂಭಾವನಾ ಗ್ರಂಥಗಳು ಕನ್ನಡದಲ್ಲಿ ಪ್ರಕಟವಾಗುತ್ತ ಬಂದಿವೆ. ತಾವು ಅಭಿನಂದಿಸಬೇಕೆಂದು ಉದ್ದೇಶಿಸಿದ ಲೇಖಕರ-ವ್ಯಕ್ತಿಗಳ ಬರವಣಿಗೆ-ಬದುಕು, ವ್ಯಕ್ತಿತ್ವ, ಸಾಧನೆಗಳನ್ನು ಪರಿಚಯಿಸುವುದು ಆಮೂಲಕ ಪ್ರೀತಿ ಪಾತ್ರರಿಗೆ

ಗೌರವ ತೋರುವುದು ಇಂತಹ ಗ್ರಂಥಗಳ ಪ್ರಧಾನ ಉದ್ದೇಶ. ಇದರ ಜೊತೆಗೆ ಅಭಿನಂದಿತರ ಬದುಕು ಬರಹಗಳಲ್ಲದೆ ಯಾವುದಾದರೂ ಕ್ಷೇತ್ರ-ವಲಯಗಳ ಕುರಿತಂತೆ ಅಭಿನಂದನ ಗ್ರಂಥವನ್ನು ಒಂದು ಆಕರ ಗ್ರಂಥವನ್ನಾಗಿ ಸಿದ್ಧಪಡಿಸುವ ಯತ್ನಗಳೂ ನಮ್ಮಲ್ಲಿ ಸಾಕಷ್ಟು ನಡೆದಿವೆ. ಅಭಿನಂದನಾ ಸಮಾರಂಭ ಏರ್ಪಡಿಸಿ, ಅಭಿನಂದಿತರ ಬದುಕು-ಬರಹಗಳನ್ನು ಚರ್ಚಿಸಿ, ಗೌರವಾರ್ಪಿಸುವ ಸಾಂಸ್ಕೃತಿಕ ಆಚರಣೆಗಳೂ ಇದರೊಟ್ಟಿಗೆ ಕಲೆತಿರುತ್ತವೆ. ಹಾಗಾಗಿ ವಿಮರ್ಶೆಯೆಂಬುದು ಇಂತಹ ಕಡೆ ಮತ್ತೆ ಮತ್ತೆ ಸಾಂಸ್ಕೃತಿಕ ಆಚಾರವಾಗಿ ಅಭಿನಯಗೊಳ್ಳುತ್ತಿರುತ್ತದೆ.

ಪ್ರಾಚೀನ ಸಂದರ್ಭದಲ್ಲು ಸತ್ಕವಿವಂದನೆ, ಕುಕವಿ ನಿಂದೆಗಳು, ಪೂರ್ವಕವಿ ಸ್ಮರಣೆ-ಪ್ರಶಂಸೆಗಳು ಸಾಕಷ್ಟು ಸಂಭವಿಸಿವೆ. ನಿಂದನಾ ಮತ್ತು ಅಭಿನಂದನಾ ಧಾಟಿಯ ವಿಮರ್ಶೆ ಇಲ್ಲೆಲ್ಲ ಪ್ರಕಟವಾಗಿದೆ. ಹಾಗಾಗಿ ಅಭಿನಂದನಾ ಮಾರ್ಗದ ಬೇರುಗಳು ನಮ್ಮ ಪ್ರಾಗ್ವಿಮರ್ಶೆಯಲ್ಲು ಕೂಡ ಇವೆ.

**2. ತತ್ವ-ಪರಿಕರ ಮಾರ್ಗ**

ಕಾವ್ಯ ಮೀಮಾಂಸೆಯ ಹೆಸರಿನಲ್ಲಿ, ಅಲಂಕಾರಶಾಸ್ತ್ರ, ಛಂದಸ್‌ಶಾಸ್ತ್ರ, ಭಾಷಾಮೀಮಾಂಸೆಗಳ ಹೆಸರಿನಲ್ಲಿ, ಕಾವ್ಯತತ್ವ-ವಿಮರ್ಶೆಯ ತತ್ವ, ಪರಿಭಾಷಾ ಕೋಶ ನಿರ್ಮಾಣಗಳ ರೂಪದಲ್ಲಿ ನಡೆದಿರುವ ಎಲ್ಲ ಕಾರ್ಯವೂ ಈ ಮಾರ್ಗದ ಅಡಿಯಲ್ಲಿಯೇ ಬರುತ್ತದೆ. ನಮ್ಮ ಪ್ರಾಚೀನರ ಕಾವ್ಯಾವಲೋಕನ, ಕವಿರಾಜಮಾರ್ಗ, ಶಬ್ದಮಣಿದರ್ಪಣ, ಛಂದೋಂಬುಧಿ, ಅಭಿದಾನ ವಸ್ತುಕೋಶ ಇತ್ಯಾದಿ ಶಾಸ್ತ್ರಗಳೆಲ್ಲವೂ 1) ಸಾಹಿತ್ಯದ ಕಟ್ಟಾಣಿಕೆಗೆ ಬೇಕಾದ ಮತ್ತು 2) ಸಾಹಿತ್ಯದ ಅಧ್ಯಯನಕ್ಕೆ ಬೇಕಾದ ಪರಿಕರಗಳನ್ನು ನಿರ್ಮಾಣಮಾಡುವ ಕಡೆಗೆ ಸಾಕಷ್ಟು ದುಡಿದಿವೆ. ಸಾಹಿತ್ಯದ ತತ್ವ, ಮೀಮಾಂಸೆಯ ತತ್ವ, ಕಾವ್ಯ ಪ್ರಯೋಜನ, ಓದುಗನ ರಸಾನುಭವ ಇತ್ಯಾದಿ ವಿಚಾರಗಳನ್ನು ಸಾಕಷ್ಟು ತಾತ್ವೀಕರಿಸಿವೆ. ಹಾಗಾಗಿ ಇವನ್ನೆಲ್ಲ ತತ್ವ-ಪರಿಕರ ಮಾರ್ಗ ಎನ್ನಬಹುದು. ಸಂಭವಕಾಲೀನ ವಿಮರ್ಶೆಯಲ್ಲಂತೂ ಈ ತತ್ವ-ಪರಿಕರ ಮಾರ್ಗದಲ್ಲಿ ಅನೇಕ ಕೃತಿಗಳು ರಚನೆಯಾಗಿವೆ. ತೀ.ನಂ.ಶ್ರೀಯವರ ಭಾರತೀಯ ಕಾವ್ಯ ಮೀಮಾಂಸೆ, ಎ.ಆರ್.ಕೃ ಮತ್ತು ಕುವೆಂಪು ಅವರ ಕನ್ನಡ ಕೈಪಿಡಿಗಳು, ಡಾ.ಎಲ್.ಬಸವರಾಜು ಅವರ ಛಂದಸ್ಸಂಪುಟ, ಎಚ್.ತಿಪ್ಪೇರುದ್ರಸ್ವಾಮಿಯವರ ತೌಲನಿಕ ಕಾವ್ಯ ಮೀಮಾಂಸೆ, ಎಂ.ಎ.ರಾಮಾನುಜ ಅಯ್ಯಂಗಾರರ ಕನ್ನಡ ಕವಿತಾಪದ್ಧತಿ ಹೀಗೆ ಮೀಮಾಂಸೆಗೆ ಒಂದು ಧಾರೆಯೇ ಇದೆ. ಇದರ ಮುಂದುವರಿದ ಯತ್ನವಾಗಿ ಕಾರ್ಲೊಸ್ ಅವರ ತಮಿಳು ಕಾವ್ಯ ಮೀಮಾಂಸೆ, ರಹಮತರ ಕನ್ನಡ ಸಾಹಿತ್ಯ ಮೀಮಾಂಸೆ 1, 2; ಎಸ್.ಎಂ.ಹಿರೇಮಠರ ಕನ್ನಡ ಕಾವ್ಯ ಮೀಮಾಂಸೆ, ವೀರಣ್ಣ ದಂಡೆಯವರ ಕನ್ನಡ ಕಾವ್ಯ ಮೀಮಾಂಸೆ ಮತ್ತು ಜಾನಪದ ಕಾವ್ಯ ಮೀಮಾಂಸೆ, ಜಿ.ಎಸ್.ಎಸ್ ಮತ್ತು ಕೆ.ವಿ.ನಾರಾಯಣ ಅವರ ಕಾವ್ಯಾರ್ಥ ಚಿಂತನ, ಕಾವ್ಯಾರ್ಥ ಪದಕೊಶ, ಓ.ಎಲ್.ನಾಗಭೂಷಣ ಸ್ವಾಮಿಯವರ ವಿಮರ್ಶೆಯ ಪರಿಭಾಷೆ ಹೀಗೆ ಇದಕ್ಕೊಂದು ಧಾರೆಯೇ ನಿರ್ಮಾಣವಾಗಿದೆ.

ಇದಲ್ಲದೆ ಜಿ.ಎಸ್.ಎಸ್, ಕೆ.ಕೃಷ್ಣಮೂರ್ತಿ, ಕಡೆಂಗೋಡ್ಲು ಶಂಕರಭಟ್ಟ, ವೀಸೀ ಇವರ ಕನ್ನಡ ಕವಿಗಳ ಕಾವ್ಯತತ್ವ ಜಿಜ್ಞಾಸೆಗಳನ್ನು ಕ್ರೋಡೀಕರಿಸಿ, ವ್ಯಾಖ್ಯಾನಿಸಿರುವ ಯತ್ನಗಳಿವೆ. ವಿಮರ್ಶೆಯ ತತ್ವ, ಆಧುನಿಕ ಸಾಹಿತ್ಯ ಪ್ರಕಾರ ತತ್ವಗಳ ಸಾಹಿತ್ಯ ಮೀಮಾಂಸೆ ಕುರಿತ ಬರಹಗಳೂ ಅಷ್ಟಿಷ್ಟು ಬಂದಿವೆ. ಆತ್ಮಾರಾಮ ಶಾಸ್ತ್ರಿ ಒಡ್ಲಮನೆ ಅವರ ನಾಟಕ ಕಲೆ, ಆಮೂರರ ಕನ್ನಡ ಕಥನ ಸಾಹಿತ್ಯ ಕಾದಂಬರಿ, ಜಿ.ಎಸ್.ನಾಯಕರ ಸಣ್ಣ ಕತೆಯ ಹೊಸ ಒಲವುಗಳು, ಎ.ಆರ್.ಕೃಷ್ಣಶಾಸ್ತ್ರಿಗಳ ಕನ್ನಡ ಐತಿಹಾಸಿಕ ಕಾದಂಬರಿಗಳು, ಮಾಸ್ತಿಯವರ ವಿಮರ್ಶೆಯ ಕಾರ್ಯ, ಡಿವಿಜಿಯವರ ಸಾಹಿತ್ಯ ಶಕ್ತಿ, ಬೇಂದ್ರೆಯವರ ಬಡತನವು ಸಾಹಿತ್ಯದ ವಸ್ತುವೇಕಾಗಿದೆ?, ಕುವೆಂಪು ಅವರ ದರ್ಶನ ವಿಮರ್ಶೆ, ಪ್ರತಿಮಾ-ಪ್ರತಿಕೃತಿ ಮಾರ್ಗ; ಮುಗಳಿಯವರ ವಿಮರ್ಶೆಯ ವ್ರತ, ಗೋಕಾಕರ ವಿಮರ್ಶಾ ತತ್ವ ಮತ್ತು ಪ್ರಾಯೋಗಿಕ ವಿಮರ್ಶೆ, ಸಿ.ಎನ್.ರಾಮಚಂದ್ರನ್ ಅವರ ಕನ್ನಡ ಸಾಹಿತ್ಯ ವಿಮರ್ಶೆ, ಕೇಶವಶರ್ಮರ ಮಾರ್ಕ್ಸ್‌ವಾದಿ ಸಾಹಿತ್ಯವಿಮರ್ಶೆ ಹೀಗೆ ಇದಕ್ಕೊಂದು ಧಾರೆಯೇ ಇದೆ. ವಿಮರ್ಶೆಯ ತತ್ವದ ಬಗ್ಗೆ, ಪ್ರಕಾರತತ್ವದ ಬಗ್ಗೆ, ಸಾಹಿತ್ಯದ ವಸ್ತು-ಅಭಿವ್ಯಕ್ತಿ ಕ್ರಮಗಳ ಬಗ್ಗೆ ಅಪಾರವಾದ ಜಿಜ್ಞಾಸೆ ನಡೆದಿದೆ. ಲೇಖಕ ಕೇಂದ್ರಿತವಾಗಿ ಮತ್ತು ತತ್ವ-ಸಿದ್ಧಾಂತ-ವಸ್ತು-ಪ್ರಕಾರ ಕೇಂದ್ರಿತವಾಗಿಯೂ ಈ ಚರ್ಚೆ ನಡೆದಿದೆ.

### 3. ಸಾಹಿತ್ಯ ಮಾರ್ಗ

ಪೂರ್ವದಲ್ಲಿ ಈಗಾಗಲೇ ಆಗಿಹೋದ ಲೇಖಕರ ಬಗ್ಗೆ ಅವರ ಸಾಹಿತ್ಯಕೃತಿಗಳ ಬಗ್ಗೆ, ಜೀವನಚಿತ್ರ, ಕವನ, ಕತೆ, ನಾಟಕ, ಕಾದಂಬರಿ, ಕಾವ್ಯ ಹೀಗೆ ಹಲವು ರೀತಿಯ ಸಾಹಿತ್ಯ ಪ್ರಕಾರಗಳ ರೂಪದಲ್ಲಿ ಪ್ರತಿಕ್ರಿಯೆಗಳು ಆದಿ ಕಾಲದಿಂದಲೂ ನಮ್ಮಲ್ಲಿ ಹುಟ್ಟುತ್ತ ಬಂದಿವೆ. ಅದಾಗಲೇ ರಚಿತವಾಗಿರುವ ಕಥನಗಳನ್ನು ಆಧರಿಸಿ ಅಥವಾ ಕಥನಗಳ ಪಾತ್ರಗಳನ್ನು ಆಧರಿಸಿ ತಮ್ಮದೇ ನಾಟಕ, ಕತೆ, ಕಾವ್ಯಗಳನ್ನು ರಚಿಸುವ ಯತ್ನಗಳೂ ನಮ್ಮಲ್ಲಿ ಸಾಕಷ್ಟು ನಡೆದಿವೆ. ಪಂಪ, ಅಕ್ಕ, ಅಲ್ಲಮ, ಬಸವಣ್ಣ ಮೊದಲಾದವರ ಬಗ್ಗೆ ಪ್ರಾಚೀನ ಕಾಲದಿಂದಲೂ ಸಾಹಿತ್ಯ ರೂಪದಲ್ಲಿ ಪ್ರತಿಕ್ರಿಯೆಗಳು ಹುಟ್ಟುತ್ತಲೇ ಬಂದಿವೆ. ಆಧುನಿಕ ಸಂದರ್ಭದಲ್ಲೂ ಕೂಡ ಈ ಬೆಳೆ ಕಡಿಮೆಯಾಗಿಲ್ಲ. ಬಸವಣ್ಣನ ಬಗೆಗೇ ಹತ್ತಾರು ನಾಟಕಗಳು ಬಂದಿವೆ. ಕುವೆಂಪು ಬಗೆಗೆ 30ಕ್ಕೂ ಹೆಚ್ಚು ಜೀವನಚಿತ್ರಗಳು, ಸಾಹಿತ್ಯ ಆಧರಿಸಿದ ನಾಲ್ಕಾರು ನಾಟಕಗಳೂ ನಾನೂರಕ್ಕೂ ಹೆಚ್ಚು ಬಿಡಿ ಕವಿತೆಗಳೂ ಬಂದಿವೆ. ಇವೆಲ್ಲವೂ ಕೂಡ ವಿಮರ್ಶೆಗಳೇ. ವಿಮರ್ಶೆ ಎಂದರೆ ಬರಿ ಸಾಹಿತ್ಯದ ಪರಿಶೀಲನೆ. ವಿಮರ್ಶೆ ಎಂದರೆ ಗದ್ಯರೂಪದ ವಿಶ್ಲೇಷಣಾತ್ಮಕ ಬರವಣಿಗೆ ಎಂದು ಮಾತ್ರ ನಾವು ತಿಳಿಯಬೇಕಿಲ್ಲ. ಕವಿಯ ಸಾಹಿತ್ಯ, ವ್ಯಕ್ತಿತ್ವ, ಬದುಕು ಎಲ್ಲವುಗಳ ಬಗೆಗಿನ ಸಾಹಿತ್ಯರೂಪಿ ಪ್ರತಿಕ್ರಿಯೆ ಕೂಡ ವಿಮರ್ಶೆಯೇ. ಈ ದೃಷ್ಟಿಯಿಂದ ಸಾಹಿತ್ಯ ಮಾರ್ಗದ ವಿಮರ್ಶೆಯು ನಮ್ಮಲ್ಲಿ ಬೃಹದಾಕಾರವಾಗಿ ಬೆಳೆದು ನಿಂತಿದೆ.

### 4. ಒಡನಾಟ ಕಥನ ಮಾರ್ಗ

ಆಧುನಿಕ ಸಂದರ್ಭದಲ್ಲಿ ಸೃಷ್ಟಿಯಾಗಿರುವ ಒಂದು ಮುಖ್ಯ ವಿಮರ್ಶಾ ಮಾರ್ಗ ಇದು. ಲೇಖಕರೊಂದಿಗೆ ಸಂಪರ್ಕಕ್ಕೆ ಬಂದ, ಹತ್ತಿರದಿಂದ ಕಂಡ, ಒಡನಾಡಿದ ಅನುಭವಗಳನ್ನು ಇಲ್ಲಿ ನಿರೂಪಿಸಲಾಗುತ್ತದೆ. ಲೇಖಕನ ಖಾಸಗಿ ಬದುಕಿನ ವಿಚಾರಗಳು, ಅಭಿರುಚಿಗಳು, ಸಾಹಿತ್ಯದ ಹಿನ್ನೆಲೆ, ಪ್ರೇರಣೆ-ಪ್ರಭಾವಗಳೆಲ್ಲ ಇಲ್ಲಿ ಕಥನಗೊಳ್ಳುತ್ತವೆ. ಕುವೆಂಪು ಬಗೆಗೆ ಈ ರೀತಿಯ ಒಡನಾಟ ರೂಪಿ ವಿಮರ್ಶೆಯ ಲೇಖನಗಳು ಮತ್ತು ಕೃತಿಗಳು ಹಲವಾರು ರಚನೆಯಾಗಿವೆ. ಮಗಳು ಕಂಡ ಕುವೆಂಪು, ಕುವೆಂಪುಗೆ ಪುಟ್ಟ ಕನ್ನಡಿ, ಅಣ್ಣನ ನೆನಪು, ಹೀಗಿದ್ದರು ಕುವೆಂಪು, ಕುವೆಂಪು ಅವರ ಕೊನೆಯ ದಿನಗಳು, ಮಲೆನಾಡಿನ ವಾಲ್ಮೀಕಿ ಇಂತಹ ಹಲವಾರು ಕೃತಿಗಳು ಒಡನಾಟ ರೂಪಿಯಾಗಿ ರಚನೆಯಾಗಿವೆ. ಇವುಗಳಲ್ಲಿ ಸಾಹಿತ್ಯದ ಪರಿಶೀಲನೆ, ವ್ಯಕ್ತಿತ್ವದ ಪರಿಶೀಲನೆ, ಸಾಮಾಜಿಕ ಚರಿತ್ರೆ, ಆತ್ಮ ಚರಿತ್ರೆ, ಲೇಖಕನ ಬದುಕಿನ ಅಪರೂಪದ ವಿವರಗಳು ಹೀಗೆ ಹಲವಾರು ಸಂಗತಿಗಳು ಚರ್ಚೆಗೆ ಒಳಗಾಗಿವೆ. ಒಂದು ತೆರನ ಅಪ್ರಕಾರ ಮಾದರಿ ಅಥವಾ ಮಿಶ್ರ ಮಾದರಿ ರಚನೆಗಳೂ ಇವೆ. ಇಲ್ಲಿ ಲೇಖಕ-ಸಮಾಜ-ಸಾಹಿತ್ಯ-ಖಾಸಗಿ ಬದುಕು-ಮಾನವ ಪರಿಸರ ಹೀಗೆ ಹತ್ತು ಹಲವುಗಳ ಅಂತಃ ಸಂಬಂಧಗಳು ಅನಾವರಣ ಆಗುತ್ತಿರುತ್ತವೆ. ಜ್ಞಾಪಕ ಚಿತ್ರಶಾಲೆ, ಚಿತ್ರಗಳು-ಪತ್ರಗಳು, ಸಾಹಿತಿಗಳ ಸಂಗದಲ್ಲಿ, ಇಂತಹ ಹಲವಾರು, ಒಡನಾಟ ಕೃತಿಗಳಲ್ಲಿ ವ್ಯಕ್ತಿ ಚಿತ್ರಗಳೇ ಹೆಚ್ಚು ಪ್ರಧಾವಾಗಿವೆ. ಅಪ್ಪಟ ವ್ಯಕ್ತಿಚಿತ್ರಗಳನ್ನು ಒಡನಾಟ ರೂಪಿ ವಿಮರ್ಶೆಗಳೆಂದು ಕರೆಯಲು ಆಗುವುದಿಲ್ಲವಾದರೂ, ಲೇಖಕರ ಕುರಿತ ಒಡನಾಟ ಕಥನಗಳನ್ನೆಲ್ಲ ವಿಮರ್ಶೆಗಳೆಂದು ಕರೆಯಲು ಅಡ್ಡಿಯಿಲ್ಲ.

### 5. ಮುನ್ನುಡಿ-ಬೆನ್ನುಡಿ-ಪೀಠಿಕಾ ಮಾರ್ಗ

ನಮ್ಮ ಪ್ರಾಚೀನರಲ್ಲಿ ವಿಮರ್ಶೆಯ ರೂಪಗಳು ಮತ್ತು ದೃಷ್ಟಿಗಳು ಹೆಚ್ಚು ಪ್ರಕಟವಾಗಿರುವುದೇ ಕಾವ್ಯಗಳ ಪೀಠಿಕಾ ಸಂಧಿಗಳಲ್ಲಿ ಆದರೆ ನಮ್ಮ ಪ್ರಾಚೀನರ ಪೀಠಿಕಾ ಸಂಧಿಗಳಿಗೂ ಆಧುನಿಕರ ಮುನ್ನುಡಿ, ಬೆನ್ನುಡಿ, ಪೀಠಿಕೆ, ಪ್ರಸ್ತಾವನೆಗಳಿಗೂ ಸಾಕಷ್ಟು ವ್ಯತ್ಯಾಸವಿದೆ. ಪ್ರಾಚೀನರು ತಮ್ಮ ಕಾವ್ಯಗಳಲ್ಲಿ ತಾವೇ ಪೀಠಿಕೆಗಳನ್ನು ಬರೆದುಕೊಂಡರೆ ಆಧುನಿಕರಲ್ಲಿ ಅನ್ಯರಿಂದ ಬರೆಸುವ ಸಂಪ್ರದಾಯವಿದೆ. ಆಧುನಿಕ ಸಂದರ್ಭದಲ್ಲಿ ಲೇಖಕರೇ ತಮ್ಮ ಕೃತಿಗಳಿಗೆ ಪ್ರಸ್ತಾವನೆ-ಲೇಖಕರ ಮಾತುಗಳನ್ನು ಬರೆದಿರುವುದೂ ಉಂಟು. ಆದರೆ ಅನ್ಯರಿಂದ ಬರೆಯಲ್ಪಟ್ಟಿರುವ ಮುನ್ನುಡಿ, ಬೆನ್ನುಡಿ, ಪೀಠಿಕೆ, ಪ್ರಸ್ತಾವನೆ, ಉಪೋದ್ಘಾತಗಳದ್ದೇ ನಮ್ಮಲ್ಲಿ ಒಂದು ವಿಮರ್ಶಾ ಪಂಥವಾಗುವಷ್ಟು ವ್ಯಾಪ್ತಿ ಇದೆ. ಸಂಭವ ಕಾಲದಲ್ಲಂತು ಗ್ರಂಥಸಂಪಾದನೆಗಳಲ್ಲಿ ವಿಮರ್ಶೆಯು ಮುನ್ನುಡಿ-ಪೀಠಿಕೆ-ಪ್ರಸ್ತಾವನೆಗಳ ರೂಪದಲ್ಲೇ ಹೆಚ್ಚಾಗಿ ಪ್ರಕಟವಾಗಿದೆ. ಈಗೀಗ ಹಿರಿಯರಿಂದ ಕಿರಿಯರು ಪ್ರೋತ್ಸಾಹದಾಯಕ-ಹಾರೈಕೆ ರೂಪಿ ಮುನ್ನುಡಿ-ಬೆನ್ನುಡಿಗಳನ್ನು ಬರೆಸಿ ತಮ್ಮ ಕೃತಿಗಳನ್ನು ಪ್ರಕಟಿಸುವುದನ್ನು ಆಚಾರವೆಂಬಂತೆ ಪಾಲಿಸುತ್ತಿದ್ದಾರೆ.

ಕುವೆಂಪು ಕೃತಿಗಳಿಗೆ ಎ.ಆರ್.ಕೃ, ಮಾಸ್ತಿ, ದೇಜಗೌ ಮೊದಲಾದವರು ಮುನ್ನುಡಿಗಳನ್ನು ಬರೆದಿದ್ದಾರೆ. ಸಂಪಾದಿತ ಕೃತಿಗಳಿಗೆ, ಸಮಗ್ರಗಳಿಗೆ, ಕುವೆಂಪು ಮೇಲಿನ ವಿಮರ್ಶಾ ಲೇಖನಗಳ ಸಂಪಾದಿತ ಕೃತಿಗಳಿಗೆ ಕೂಡ ಹಲವರು ಮುನ್ನುಡಿ ಪೀಠಿಕೆಗಳನ್ನು ಬರೆದಿದ್ದಾರೆ. ಇವೆಲ್ಲವೂ ವೈವಿಧ್ಯಪೂರ್ಣವಾಗಿವೆ.

**6. ಸಂಗ್ರಹ–ಸಂಪಾದನೆ–ಸೂಕ್ತಿ ಪಂಥ**

ಪ್ರಾಚೀನರಲ್ಲಿ ಕಾವ್ಯಸಾರ ಸಂಗ್ರಹಗಳು, ವಚನಗಳ ಶೂನ್ಯ ಸಂಪಾದನೆಗಳು, ಜೈನರ ಹಾಡುಗಳ ಸಂಕಲನಗಳು, ಕೀರ್ತನಗಳ ಸಂಗ್ರಹ–ಸಂಪಾದನೆಗಳು, ಸ್ವರವಚನ ಸಂಪಾದನೆಗಳು–ಏಕೋತ್ತರ ಶತಸ್ಥಲಗಳು ಈ ಪಂಥದಲ್ಲಿ ಬರುತ್ತವೆ. ಹಾಗೇ ಸಂಭವಕಾಲೀನ ವಿಮರ್ಶೆಯಲ್ಲಿನ ಬಹುತೇಕ ಶಿಕ್ಷಣಪಠ್ಯ ಸಂಗ್ರಹಗಳು, ಆಯ್ದ ಪ್ರಾಚೀನ ಕಾವ್ಯಭಾಗಗಳ ಸಂಗ್ರಹಗಳು, ಗ್ರಂಥಸಂಪಾದನೆಗಳು ಕೂಡ ಈ ಪಂಥದಲ್ಲಿ ಬರುತ್ತವೆ. ಆಧುನಿಕ ಕಾಲದಲ್ಲಿಯೂ ಸಾಹಿತ್ಯ ಭಾಗಗಳ, ಆಯ್ದ ಕವನಗಳ, ಲೇಖನಗಳ ಸಂಪಾದನೆಗಳೆಲ್ಲವು ಈ ಪಂಥದಲ್ಲೆ ಬರುತ್ತವೆ. ಇಲ್ಲೆಲ್ಲ ಸಂಗ್ರಹ–ಸಂಪಾದನೆಗಳ ಕತಾಸಾರಾಂಶೀಕರಣ, ಪ್ರಕಾರಾಂತರ ಮಾದರಿ ಹೀಗೆ ಹತ್ತು ಹಲವು ರೂಪಗಳಲ್ಲಿ ವಿಮರ್ಶೆಯು ಪ್ರಕಟವಾಗಿದೆ. ಆಯ್ಕೆ ಮತ್ತು ಸಂಯೋಜನೆ, ಆಯ್ಕೆ ಮತ್ತು ಅಲಕ್ಷ್ಯಗಳ ಮಾನದಂಡಗಳ ಮೂಲಕವೂ ಇಲ್ಲಿ ವಿಮರ್ಶೆಯು ವ್ಯಕ್ತವಾಗಿದೆ. ಆಧುನಿಕ ಸಂದರ್ಭದಲ್ಲಿ ಆಯ್ದ ಕವಿತೆಗಳ ಸಂಪಾದನೆ, ಆಯ್ದ ವಿಮರ್ಶಾ ಲೇಖನಗಳ, ಪ್ರಬಂಧಗಳ, ಕತೆಗಳ ಸಂಪಾದನೆಗಳು, ಸಮಗ್ರಗಳ ಸಂಪಾದನೆಗಳು ಸರಿಸುಮಾರು ಎಲ್ಲ ಮುಖ್ಯ ಲೇಖಕರಿಗೆ ಸಂಬಂಧಿಸಿದಂತೆ ಬಂದಿವೆ, ಬರುತ್ತಿವೆ. ಆಯ್ದ ಲೇಖನ–ಕವನ ಸಂಕಲನಗಳು ಬದುಕಿರುವ ಲೇಖಕರಿಗೆ ಸಂಬಂಧಿಸಿದಂತೆ; ಸಮಗ್ರಗಳ ಸಂಪಾದನೆಗಳು ಮರಣಿಸಿದ ಲೇಕಕರಿಗೆ ಸಂಬಂಧಿಸಿದಂತೆ ಬರುವುದು ನಮ್ಮಲ್ಲಿ ಮಾಮೂಲೆಂಬಂತೆ ಆಗುತ್ತಿದೆ. ಕುವೆಂಪುಗೆ ಸಂಬಂಧಿಸಿದಂತೆ ಸಂಗ್ರಹ, ಸಂಪಾದನೆಗಳ ಜೊತೆಗೆ ಸೂಕ್ತಿರೂಪಿ ಸಂಕಲನಗಳು ಕೂಡ ಬಂದಿವೆ. ವಾಕ್ಯ ಮಾಣಿಕ್ಯ ಕೋಶ, ಸಂಸ್ಕೃತಿ ಸಂದರ್ಭ ಕೋಶದಂತಹ ಕೃತಿಗಳು, ಡಿವಿಜಿ ಅವರ ಕಗ್ಗದ ಸಾರರೂಪಿ ಕೃತಿಗಳು, ಸೋಮೇಶ್ವರ ಶತಕದ ಆಯ್ದ ಪದ್ಯಗಳ ಸಂಗ್ರಹಗಳು, ಕಾರಂತಚಿಂತನ, ಸರ್ವಜ್ಞ ವಚನಗಳ ಸಂಗ್ರಹಗಳು ಹೀಗೆ ಸುಭಾಷಿತ–ಸೂಕ್ತಿ ರೂಪಿ ಸಂಕಲನಗಳಿಗೆ ನಮ್ಮಲ್ಲಿ ಒಂದು ಪರಂಪರೆಯೇ ಇದೆ. ಸಂಪಾದನಾರೂಪಿ ಮತ್ತು ಸೂಕ್ತಿರೂಪಿ ವಿಮರ್ಶೆಗಳು ನಮ್ಮಲ್ಲಿ ಪ್ರತ್ಯೇಕವಾದ ಎರಡು ಪಂಥಗಳೇ ಆಗುವಷ್ಟು ವ್ಯಾಪ್ತಿ ಪಡೆದಿವೆ. ಆದರೂ ಸೂಕ್ತಿರೂಪಿ ಸಂಗ್ರಹಗಳು ಸಂಪಾದನೆಯ ಕವಲೇ ಆದುದರಿಂದ ಇಲ್ಲಿ ಇವನ್ನು ಪಂಥದ ಅಡಿಯಲ್ಲಿ ಪರಿಗಣಿಸಲಾಗಿದೆ.

**7. ಟೀಕು–ವ್ಯಾಖ್ಯಾನ–ಸರಳ ಮಾರ್ಗ**

ಟೀಕು, ಟಿಪ್ಪಣಿ, ಭಾಷ್ಯ, ಪ್ರಕಾರಾಂತರ, ಟುಪ್ಪೀಕು/ವಿಸ್ತಾರಟೀಕು ವ್ಯಾಖ್ಯಾನ ಇತ್ಯಾದಿಗಳು ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿವೆ. ನಮ್ಮಲ್ಲಿನ ಬಹು ಹಳೆಯ ವಿಮರ್ಶಾ ಮಾರ್ಗವಿದು. ದರ್ಪಣ ದೀಪಿಕೆ, ಪಂಪಭಾರತ ದೀಪಿಕೆ, ಸರಳಪಂಪ ಭಾರತ, ಸರಳ ಸಿದ್ಧರಾಮ ಚಾರಿತ್ರ ಹೀಗೆ ಕಾವ್ಯಗಳಿಗೆ ಗದ್ಯರೂಪಿ ಅರ್ಥಗಾರಿಕೆ ಒದಗಿಸುವ ಪ್ರಯತ್ನಗಳು ಸಂಭವಕಾಲದಿಂದಲೇ ಆರಂಭವಾಗಿ ಇನ್ನೂ ಜರುಗುತ್ತಿವೆ. ಹಳಗನ್ನಡ ಪಠ್ಯಗಳಿಗೆ, ಕಠಿಣವೆಂಬ ಹೊಸ ಪಠ್ಯಗಳಿಗೆ ಸರಳರೂಪ ನೀಡುವ, ಗದ್ಯ ಕಥನರೂಪ ನೀಡುವ, ಅರ್ಥಾನ್ವಯ ಮಾಡಿ ಮರು ನಿರೂಪಿಸುವ ಕೆಲಸಗಳು ಈ ವಿಮರ್ಶೆಯಲ್ಲಿ ಜರುಗುತ್ತವೆ. ಸಾಹಿತ್ಯ ಕಥನವನ್ನು ಛಂದಸ್ಸಿನಿಂದ, ಪ್ರತಿಮೆ–ರೂಪಕಗಳಿಂದ, ಕಾವ್ಯ ರೂಪದಿಂದ ಬಿಡುಗಡೆಗೊಳಿಸುವ ಕಾರ್ಯಗಳಿವು. ಸಾಹಿತ್ಯಕ್ಕೆ ಇರಬಹುದಾದ ಭಿನ್ನಾರ್ಥ ಸಾಧ್ಯತೆ–ಧ್ವನ್ಯರ್ಥ ಸಾಧ್ಯತೆಗಳನ್ನು ಅನಾವರಣ ಮಾಡುವ; ಆರೋಪಣ ಮಾಡುವ; ಅನ್ವಯೀಕರಣಮಾಡುವ ವ್ಯಾಯಾಮಗಳಿವು. ಜನಗಳಿಗೆ ಸಾಹಿತ್ಯವನ್ನು ತಲುಪಿಸ ಬೇಕೆಂಬ ಆಶಯವೇ ಇಂಥಲ್ಲಿ ಪ್ರಧಾನವಾಗಿ ಇರುತ್ತದೆ. ಕುವೆಂಪುಗೆ ಸಂಬಂಧಿಸಿದಂತೆ ಅವರ ಸಾಹಿತ್ಯವನ್ನು ಪ್ರಕಾರಾಂತರಿಸುವ, ಗದ್ಯಾನುವಾದ ಮಾಡುವ, ಸಾರಾಂಶೀಕರಿಸುವ, ಸೂಕ್ತಿ ಸಂಗ್ರಹಮಾಡಿ ಅದಕ್ಕೆ ವ್ಯಾಖ್ಯಾನ ಬರೆಯುವ, ಮರುನಿರೂಪಿಸುವ ಹೀಗೆ ಹಲವು ಯತ್ನಗಳು ನಡೆದಿವೆ. ವಿಶೇಷವಾಗಿ ರಾಮಾಯಣದರ್ಶನದ ಸಾರಸಂಗ್ರಹರೂಪಿ ಸರಳೀಕರಣ, ನಾಟಕಗಳ ರಂಗಪಠ್ಯ–ಸರಳಪಠ್ಯ ನಿರ್ಮಾಣ, ಮಕ್ಕಳಿಗಾಗಿ ಕುವೆಂಪು ವಿಚಾರ–ನಾಟಕಗಳನ್ನು ಸರಳವಾಗಿ ಕಥಿಸುವ–ನಿರೂಪಿಸುವ ಯತ್ನಗಳು ಸಾಕಷ್ಟು ನಡೆದಿವೆ. ಹಳಗನ್ನಡ ಪಠ್ಯಗಳಿಗೆ ಸಂಬಂಧಿಸಿದಂತೆ ಡಾ.ಎಲ್.ಬಸವರಾಜು ಅವರು ತಯಾರು ಮಾಡಿರುವ

